# ಇತಿಹಾಸ ದರ್ಶನ

## ಸಂಪುಟ ೨೪/೨೦೦೯

**೨೦೦೮ರ ಸೆಪ್ಟೆಂಬರ್ ೧೮ ರಿಂದ ೨೧ರವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಶ್ರೀ ಕ್ಷೇತ್ರ ಧರ್ಮಸ್ಥಳದ ಮಹೋತ್ಸವ ಭವನದಲ್ಲಿ ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾದೆಮಿಯ ಇಪ್ಪತ್ತೆರಡನೆಯ ವಾರ್ಷಿಕ ಸಮ್ಮೇಳನದಲ್ಲಿ ಅಕಾದೆಮಿಯ ಸದಸ್ಯರು ಮಂಡಿಸಿದ ವಿದ್ವತ್ ಪ್ರಬಂಧಗಳ ಸಂಪುಟ**

ಸಂಪಾದಕರು

**ಡಾ|| ಎಂ.ಜಿ. ನಾಗರಾಜ್**

**ಡಾ|| ಪಿ.ವಿ. ಕೃಷ್ಣಮೂರ್ತಿ**

**ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು**

# ITIHĀSA DARŚANA

The Volume of the Scholarly papers presented and the General body Proceedings of the 22nd Annual Conference of

**The Karnataka Ithihasa Academy** (Regd.,)
held at Sri Kshetra Darmasthala, S.K.
on 18th, 19th , 20th & 21th September 2008

**Volume 24 / 2009**

Pages : **432 + xLiv**

ಬೆಲೆ : ರೂ. ೪೦೦

**ಪುಟಗಳು : ೪೩೨ + xLiv**





Edited by : **Dr. M. G. Nagaraj**
**Dr. P. V. Krishna murthy**

Published by : Karnataka Itihasa Academy (Regd.)
B.M. Shri Kalabhavana premises
3rd Main, Narasimharaja Colony
Bangalore - 560 019

Price : **Rs. 400/-**


## *ಪ್ರಬಂಧಕಾರರ ಗಮನಕ್ಕೆ*

*೧. ಈ ಸಂಪುಟದ ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ **ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆ**. ಅವು ಅಕಾದೆಮಿಯ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲ.*

*೨. ಕರ್ನಾಟಕ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲುವ ಬರಹಗಳಿಗೆ 'ಇತಿಹಾಸ ದರ್ಶನ' ಮೀಸಲಾಗಿದೆ.*

*೩. ಲೇಖನಗಳು **ಹಸ್ತಲಿಖಿತ ೧೦ ಪುಟಗಳ** ಪರಿಮಿತಿಯಲ್ಲಿ ಇರುವುದು ಸೂಕ್ತ. ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಬೆರಳಚ್ಚು ಮಾಡಿಸಿದ್ದರೆ ಅಗತ್ಯವಿರುವ ತಿದ್ದುಪಡಿ ಮಾಡಿರಬೇಕು. ಅಡಿಟಿಪ್ಪಣಿಗಳನ್ನು, ಗ್ರಂಥಲೇಖನಾಧಾರ ವಿವರಗಳನ್ನು **ಈಗಾಗಲೇ ಸಂಶೋಧನ ಬರಹಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮದಲ್ಲಿ ನೀಡುವುದು ಉತ್ತಮ.***

*೪. ಲೇಖನಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಕಳುಹಿಸುವಲ್ಲಿ, ಚಿತ್ರದ ಹಿಂಬದಿಯಲ್ಲಿ ಚಿತ್ರದ ಶೀರ್ಷಿಕೆ ಮತ್ತು ಲೇಖಕರ ಹೆಸರನ್ನು ಬರೆಯಬೇಕು. ಬರೆಯದೆ ಹೋದರೆ ಚಿತ್ರಗಳ ಪ್ರಕಟಣೆ ಕಷ್ಟವಾಗುತ್ತದೆ.*

*೫. ಈಗಿನ ೨೦ನೇ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳನ್ನು ಅನಿವಾರ್ಯ ಕಾರಣಗಳಿಂದ ಅಲ್ಲಿಯೇ ಕೊಡಲಾಗದಿರುವ ಅಕಾದೆಮಿಯ ಸದಸ್ಯ ಲೇಖಕರು, ದಯಮಾಡಿ ತಮ್ಮ **ಪೂರ್ಣ ವಿಳಾಸದೊಡನೆ** ಸಮ್ಮೇಳನದೊಡನೆ ಸಮ್ಮೆಳನ ಮುಗಿದ ಎರಡು ತಿಂಗಳ ಒಳಗಾಗಿ, ಸಂಪಾದಕರು, ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾದೆಮಿ, ಬಿ.ಎಂ.ಶ್ರೀ. ಕಲಾಭವನ ಆವರಣ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦ ೦೧೯, ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ.*

*೬. ಪ್ರಬಂಧದ ಲೇಖನದ ನಕಲು ಅಥವಾ ಜೆರಾಕ್ಸ್ ಪ್ರತಿಯ ಬದಲು ಲೇಖನದ ಪ್ರತಿಯನ್ನೆ ದುವಿಟ್ಟು ಕಳುಹಿಸಿ. ಹಾಗೆಯೇ ಲೇಖನಗಳಲ್ಲಿ **ಲೇಖಕರು ತಮ್ಮ ಈಚಿನ ಸರಿಯಾದ ವಿಳಾಸವನ್ನು ದಾಖಲಿಸಲು ದಯವಿಟ್ಟು ಮರೆಯಬಾರದೆಂದು ಪ್ರಾರ್ಥಿಸಿದೆ.***

*೭. ಸಮ್ಮೇಳನದಲ್ಲಿ ಮಂಡಿಸಿದ ಲೇಖನಗಳನ್ನು ಬೇರೆಡೆ ಪ್ರಕಟ ಮಾಡಿದ್ದರೆ ಅಥವಾ ಬೇರೆಡೆ ಪ್ರಕಟನೆಗೆ ಕಳುಹಿಸಿದ್ದರೆ ದಯವಿಟ್ಟು ತಿಳಿಸಬೇಕೆಂದು ವಿನಂತಿ. ಮಂಡಿತ ಪ್ರಬಂಧಗಳು ಮೊದಲಿಗೆ ಅಕಾದೆಮಿಗೆ ಮೀಸಲು ಕಾಣಿಕೆ ಅಲ್ಲವೆ !*


ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨



## ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಸಂಸ್ಥಾನ ಪೀಠ

ಬಾಳೇಹೊನ್ನೂರು–೫೭೭ ೧೧೨ ಚಿಕ್ಕಮಗಳೂರು ಜಿಲ್ಲೆ

**ಶ್ರೀಮದ್ ರಂಭಾಪುರಿ ವೀರಸಿಂಹಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು**

ದಿನಾಂಕ : ೨೦೦೯ ವಾಸ್ತವ್ಯ : ಬಾಳೆಹೊನ್ನೂರು

## ಶುಭಾಶೀರ್ವಾದ ಸಂದೇಶ

ಭಾರತೀಯ ಸಂಸ್ಕೃತಿ ಮತ್ತು ಪರಂಪರೆ ವಿಶಿಷ್ಟ. ಬದುಕಿ ಬಾಳುವ ಜನಾಂಕ್ಕೆ ಇತಿಹಾಸದ ಅರಿವು ಅಗತ್ಯ. ಹೊಸ ಚಿಗುರು–ಹಳೇಬೇರು ಕೂಡಿದರೆ ಮರ ಸೊಬಗು. ಹೊಸ ಯುಕ್ತಿ ಶಕ್ತಿಗೆ ಹಳೇ ತತ್ವದ ಅವಶ್ಯಕತೆಯಿದೆ. ಬುದ್ಧಿ ವಿಕಾಸಗೊಂಡಂತೆ ಮನುಷ್ಯನಲ್ಲಿ ವಿನಯ, ಶ್ರದ್ಧೆ ಮಾಯವಾಗುತ್ತಿದೆ. ಸಮೃದ್ಧಿ ಬಂದು ಸಂಸ್ಕೃತಿಯ ಅರಿವು ಇಲ್ಲದಂತಾಗಿದೆ. ವೈಜ್ಞಾನಿಕತೆ ಬೆಳೆದಂತೆಲ್ಲ ಮನುಷ್ಯನಿಗೆ ಮಾನಸಿಕ ಶಾಂತಿ ಇಲ್ಲದಂತಾಗಿದೆ. ಬೋಧನೆ ಮಾಡುವ ಜನರಲ್ಲಿ ಸಾಧನೆ ಸಿದ್ಧಿ ಇಲ್ಲದಂತಾಗಿದೆ. ಮಾತು ಹೆಚ್ಚಾಗಿ ಕಾರ್ಯಶೈಲಿ ಕುಂಠಿತವಾಗುತ್ತಿದೆ. ಜಾತಿ ಬೆಳೆದು ಪ್ರೀತಿ ವಿಶ್ವಾಸ ಮತ್ತು ಸೌಜನ್ಯ ಕಣ್ಮರೆಯಾಗುತ್ತಿದೆ.

ಸತ್ಯಾನ್ವೇಷಣೆಯ ಹಾದಿಯಲ್ಲಿ ನೂರಾರು ಕಲ್ಲು ಮುಳ್ಳು. ಸತ್ಯ ಸಂರಕ್ಷಣೆಯ ಹೋರಾಟ ಮಾಡದೇ ಹೋದರೆ ಬದುಕಿಗೆ ಯಾವುದೇ ಬೆಲೆಯಿಲ್ಲ. ಗಾಳಿ ಬೀಸಿದತ್ತ ಹರಿಗೋಲಿಗೆ ಹುಟ್ಟು ಹಾಕಿದರೆ ದಾರಿ ಸಾಗಬಹುದೇ ವಿನಾ ಗುರಿ ತಲುಪಲಾಗದು. ದಾರಿ ಚೆನ್ನಾಗಿದೆ ಎಂದು ತಪ್ಪು ದಾರಿ ತುಳಿದರೆ ದಾರಿ ಸರಿಯಾಗಿರಬಹುದೇ ವಿನಃ ಊರು ಸೇರಲಾಗದು. ಇತಿಹಾಸದ ಪ್ರಜ್ಞೆಯಿಲ್ಲದೇ ಹೋದರೆ ಭವಿಷ್ಯತ್ತಿನ ದಾರಿ ಕಷ್ಟಕರ. ಬಾಳ ಬಾಂದಳದಲ್ಲಿ ಕಟ್ಟಿದಂತೆ ಬುತ್ತಿ; ಬಯಸಿದಂತೆ ಬಾಳು; ಬಿತ್ತಿದಂತೆ ಬೆಳೆ – ಸಾಧನೆಯಂತೆ ಸಿದ್ಧಿ ದೊರಕುವುದರಲ್ಲಿ ಯಾವ ಸಂಶಯವೂ ಇಲ್ಲ.

ಗಾಳಿ ಗುದ್ದಿದರೆ ಮೈ ನೋಯುವುದೊಂದೆ ಸಿಗುವ ಪ್ರತಿಫಲ. ಮೂಲ ಸತ್ವ–ಇತಿಹಾಸ ಮರೆತ ಸಾಹಸಗಳು ಕೂಡಾ ಹಾಗೆ. ಮನುಷ್ಯನಲ್ಲಿ ವೈಚಾರಿಕತೆಯಿರಲಿ. ಆದರೆ ಸಂಸ್ಕೃತಿ ಮತ್ತು ಇತಿಹಾಸದ ಬಗೆಗೆ ನಾಸ್ತಿಕತೆ – ಉದಾಸೀನತೆ ಬೇಡ. ಶಾಸ್ತ್ರ ಮತ್ತು ಶಸ್ತ್ರ ಇವೆರಡರಲ್ಲಿ ಒಂದರ ಭೀತಿ ಇಲ್ಲದಿದ್ದರೆ ಸಾಮಾಜಿಕ ಸ್ವಾಸ್ಥ್ಯ ಹಾಳಾಗುವುದರಲ್ಲಿ ಯಾವ ಅನುಮಾನವೂ ಇಲ್ಲ. ಸಂಸ್ಕಾರ ಮತ್ತು ಸದ್ವಿಚಾರಗಳ ಪೆಟ್ಟು ಮಾನವ ಜೀವನದ ಉತ್ಕರ್ಷತೆಗೆ ಹೆದ್ದಾರಿ.

ಕರ್ನಾಟಕ ಇತಿಹಾಸ ಅಕಾದೆಮಿ ಉತ್ತಮ ಕಾರ್ಯ ಮಾಡುತ್ತಿದೆ. ಅನಾದರಕ್ಕೆ ಒಳಗಾದ ಕನ್ನಡ ನಾಡಿನ ಇತಿಹಾಸದ ಬಗ್ಗೆ ಹೊಸ ಬೆಳಕು ಮೂಡಿಸುವ ಕಾರ್ಯ ಮಾಡುತ್ತಿದೆ. '**ಇತಿಹಾಸ ದರ್ಶನ**' ಸಂಚಿಕೆಗಳನ್ನು ಹೊರ ತರುವ ಮೂಲಕ ಈ ನಾಡಿನ ಇತಿಹಾಸಕ್ಕೆ ಮೆರಗು ನೀಡುತ್ತಿದೆ. ಕಳೆದ ೨೦೦೫ನೇ ವರ್ಷದಿಂದ 'ಇತಿಹಾಸ ದರ್ಶನ' ಸಂಚಿಕೆಗೆ ಬಾಳೆಹೊನ್ನೂರಿನ ಧರ್ಮ ಪೀಠ ಇಪ್ಪತ್ತೈದು ಸಾವಿರ ರೂಪಾಯಿ ಆಶೀರ್ವದಿಸುತ್ತ ಬಂದಿದೆ. ಈ ವರ್ಷವೂ ಸಹ ೨೪ನೆಯ ಸಂಚಿಕೆಗೆ ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಪೀಠ ೨೫೦೦೦/– (ಇಪ್ಪತ್ತೈದು ಸಾವಿರ) ರೂಪಾಯಿ ಆಶಿರ್ವದಿಸಿದೆ.

ಬಾಳೆಹೊನ್ನೂರು ಧರ್ಮ ಪೀಠದ ಪುಣ್ಯ ನೆಲದಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ '೨೩ನೆಯ ವಾರ್ಷಿಕ ಇತಿಹಾಸ ಅಕಾದೆಮಿ ಸಮ್ಮೇಳನ' ಅಕ್ಟೋಬರ್ ೨ನೇ ವಾರದಲ್ಲಿ ನಿಯೋಜಿತಗೊಂಡಿರುವುದು ಸಂತಸ ತಂದಿದೆ. ಇದು ಹೊಸ ಇತಿಹಾಸವನ್ನು ಸೃಷ್ಟಿಸುತ್ತಿದೆ ಎಂಬುದರಲ್ಲಿ ಎರಡು ಮಾತಿಲ್ಲ.

ಈ ಸಂಚಿಕೆಯ ಸಂಪಾದಕರಾದ ಡಾ. ಎಂ.ಜಿ. ನಾಗರಾಜ್ ಮತ್ತು ಡಾ. ಪಿ.ವಿ. ಕೃಷ್ಣಮೂರ್ತಿ ಅವರ ಸಾರ್ಥಕ ಪರಿಶ್ರಮದಿಂದ ಹೊರತಂದ ಈ '**ಇತಿಹಾಸ ದರ್ಶನ**' ನಾಡಿನ ಜನತೆಗೆ ಕೈಗನ್ನಡಿಯಾಗಿ ಕಂಗೊಳಿಸುವುದರಲ್ಲಿ ಯಾವ ಅನುಮಾನವೂ ಇಲ್ಲ. ಈ ದಿಸೆಯಲ್ಲಿ ಅಕಾದೆಮಿಯ ಅಧ್ಯಕ್ಷ ಡಾ. ಸೂರ್ಯನಾಥ ಕಾಮತ್, ಪ್ರಧಾನ ಕಾರ್ಯದರ್ಶಿ ಡಾ. ಎಚ್.ಎಸ್. ಗೋಪಾಲರಾವ್ ಅವರ ತಂಡವು ಅಕಾದೆಮಿಯ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವುದು ಸ್ವಾಗತಾರ್ಹ. ಪರಮ ದಯಾಳು ಶ್ರೀ ಪಾರ್ವತಿ ಪರಮೇಶ್ವರರು ಹಾಗು ಶ್ರೀ ಜಗದ್ಗುರು ರೇಣುಕಾಚಾರ್ಯರು ಸರ್ವರಿಗೂ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

**ಇತ್ಯನಂತಶಿವಾಶಿಷಃ**

**'ಇತಿಹಾಸದರ್ಶನ' ಪ್ರಕಟಣೆಗೆ ಆಶೀರ್ವದಿತ ಪ್ರಪ್ರಥಮ ನಿರಂತರ ವಾರ್ಷಿಕ ನಿಧಿ ಕೊಡುಗೆ ರೂ. ೨೫,೦೦೦**

★ **ಪ್ರತಿ ವಾರ್ಷಿಕನಿಧಿ ಕೊಡುಗೆ ಆರಂಭಿಸಿದ ವರ್ಷ : ೨೦೦೫** ★

ಕರ್ನಾಟಕ ಇತಿಹಾಸ ಅಕಾದೆಮಿಯ

ಇಪ್ಪತ್ತೆರಡನೆಯ ವಾರ್ಷಿಕ ಸಮ್ಮೇಳನದ

ಪ್ರಾಯೋಜಕರು



ರಾಜರ್ಷಿ ಡಾ. ವೀರೇಂದ್ರ ಹೆಗ್ಗಡೆ ಅವರು

ದಕ್ಷಿಣ ಕನ್ನಡ ಜಿಲ್ಲೆ ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ ನಡೆದ
ಇಪ್ಪತ್ತೆರಡನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು



ಡಾ. ವಸುಂಧರಾ ಫಿಲಿಯೋಜಾ



ಪ್ರೊ|| ಕೆ. ಅಭಿಶಂಕರ್ ಅವರ ಸ್ಮರಣಾರ್ಥ ಸಮ್ಮೇಳನಾಧ್ಯಕ್ಷರಿಗೆ ನೀಡುವ ನೆನಪಿನ ಶಿಲ್ಪ ಕಾಣಿಕೆ. ಪ್ರತಿವರ್ಷ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನಾಧ್ಯಕ್ಷರಿಗೆ ಈ ಕಾಣಿಕೆ ನೀಡಲು ಶ್ರೀಮತಿ ವಿಶಾಲಾಕ್ಷಿ ಆಭಿಶಂಕರ್ ಅವರು ಪುದುವಟ್ಟು ಇಟ್ಟಿದ್ದಾರೆ. (ಶಿಲ್ಪ ಕಲಾವಿದೆ : ಶ್ರೀಮತಿ ಕನಕಮೂರ್ತಿ)



ಶ್ರೀಕ್ಷೇತ್ರ ಧರ್ಮಸ್ಥಳದ ರಾಜರ್ಷಿ ಡಾ. ವೀರೇಂದ್ರ ಹೆಗ್ಗಡೆ ಅವರಿಂದ ಕರ್ನಾಟಕ ಇತಿಹಾಸ ಅಕಾದೆಮಿಯ
ಇಪ್ಪತ್ತೆರಡನೆಯ ವಾರ್ಷಿಕ ಸಮ್ಮೇಳನದ ಉದ್ಘಾಟನೆ. ಚಿತ್ರದಲ್ಲಿ: ಸಮ್ಮೇಳನದ ಅಧ್ಯಕ್ಷೆ ಡಾ. ವಸುಂಧರಾ ಫಿಲಿಯೋಜಾ
ಡಾ. ಸೂರ್ಯನಾಥ ಕಾಮತ್, ನಿಕಟಪೂರ್ವ ಸಮ್ಮೇಳನಾಧ್ಯಕ್ಷ ಪ್ರೊ॥ ಲಕ್ಷ್ಮಣ್ ತೆಲಗಾವಿ ಮುಂತಾದವರು



ಕರ್ನಾಟಕ ಇತಿಹಾಸ ಅಕಾದೆಮಿಯ ಇಪ್ಪತ್ತೆರಡನೆಯ ಸಮ್ಮೇಳನದ ಅಧ್ಯಕ್ಷೆ
ಡಾ. ವಸುಂಧರಾ ಫಿಲಿಯೋಜಾ ಅವರಿಂದ ಅಧ್ಯಕ್ಷ ಭಾಷಣ



ಇಪ್ಪತ್ತೆರಡನೆಯ ವಾರ್ಷಿಕ ಸಮ್ಮೇಳನದಲ್ಲಿ ಪ್ರೊ॥ ಲಕ್ಷ್ಮಣ್ ತೆಲಗಾವಿ ಅವರಿಂದ 'ಇತಿಹಾಸ ದರ್ಶನ'ದ ಇಪ್ಪತ್ಮೂರನೆ ಸಂಪುಟ ಬಿಡುಗಡೆ. ಚಿತ್ರದಲ್ಲಿ: ರಾಜರ್ಷಿ ಡಾ. ವೀರೇಂದ್ರ ಹೆಗ್ಗಡೆ, ಡಾ. ವಸುಂಧರಾ ಫಿಲಿಯೋಜಾ ಡಾ. ಸೂರ್ಯನಾಥ ಕಾಮತ್, ಸಂಪಾದಕದ್ವಯರಾದ ಡಾ. ಎಂ.ಜಿ. ನಾಗರಾಜ್, ಡಾ. ಪಿ.ವಿ. ಕೃಷ್ಣಮೂರ್ತಿ ಮುಂತಾದವರು



ಕರ್ನಾಟಕ ಇತಿಹಾಸ ಅಕಾದೆಮಿಯ ಇಪ್ಪತ್ತೆರಡನೆಯ ವಾರ್ಷಿಕ ಸಮ್ಮೇಳನದಲ್ಲಿ ಸಭಿಕರು

## ಇತಿಹಾಸ ಪರಂಪರೆ ಉಳಿಸಿ ಕಾರ್ಯಕ್ರಮಗಳು



ಫ.ಚ.ಮ ಸರಕಾರಿ ಪ.ಪೂ.ಕಾಲೇಜು ಗುಡಗೇರಿ. ಇತಿಹಾಸ ಪರಂಪರೆ ಉಳಿಸಿ ಉದ್ಘಾಟನೆ
ಚಿತ್ರದಲ್ಲಿ: ಶ್ರೀ ಪಕ್ಕೀರ ಗೌಡ್ರ ರಂಗನಗೌಡ್ರ, ಆರ್.ಕೆ. ಅಂಬೋರೆ, ಎಂ.ಪಿ. ಕುಂಬಾರ, ಶ್ರೀಮತಿ ಕವಿತಾ ಕತ್ತಿ
ಶ್ರೀ ಎಫ್. ಎಸ್. ತಿಮ್ಮನ ಗೌಡ್ರ, ಎಂ.ಆಯ್. ಹುಂಡೇಕಾರ, ಬಿ.ಡಿ. ಕಲಾರಿ



ಬಸವೇಶ್ವರ ಕಲಾ ಮಹಾವಿದ್ಯಾಲಯ ಬಾಗಲಕೋಟೆ
ಚಿತ್ರದಲ್ಲಿ: ಶ್ರೀ ಶಿವಪ್ಪ ಸೀರಲಗಿ, ಪ್ರೊ॥ ವ್ಹಿ.ಕೆ. ಮೊರಬದ ಮುಂತಾದವರು



ಹುಲಕೋಟಿಯ ಜಿ.ಸಿ.ಟಿ.ಎಂ. ಮಹಾವಿದ್ಯಾಲಯ ಮತ್ತು ಎಸ್.ಆರ್.ಎ.ಜಿ.ಎ. ಪ್ರೌಢಶಾಲೆ
ಚಿತ್ರದಲ್ಲಿ: ಡಾ. ಎಂ.ಎಸ್. ನರೆಗಲ್, ಡಾ. ಬಿ.ಎಸ್. ಗೊರವರ, ಪ್ರಾ.ವ್ಹಿ.ವಾಯ್. ಹರ್ಲಾಪುರ
ಶ್ರೀ ಜಿ.ಆರ್. ಪಾಟೀಲ ಪ್ರೊ॥ ಕೆ.ಎಂ. ಗರಗ



ಕಲ್ಮಠ ಶ್ರೀಚನ್ನಬಸವಸ್ವಾಮಿ ಮಹಿಳಾ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ ಗಂಗಾವತಿ
ಚಿತ್ರದಲ್ಲಿ: ಡಾ.ಶರಣಬಸಪ್ಪ ಕೋಲ್ಕಾರ, ಸರ್ವಶ್ರೀ ವಾಸುದೇವ ಬಡಿಗೇರ, ಎಚ್. ಪ್ರಭಾಕರ್
ಅಕ್ಕಿ ಚನ್ನಪ್ಪ ಸಿ.ಎಚ್. ನಾಗರಾಳ ಎನ್. ಬಸವರಾಜ ಮುಂತಾದವರು



ಗಂಗಾವತಿ ಕಾಲೇಜಿನಲ್ಲಿ ನಡೆದ ಚಿತ್ರಕಲಾ ಪ್ರದರ್ಶನದಲ್ಲಿ ವೀಕ್ಷಕರು



ಗಂಗಾವತಿ ಕಾಲೇಜಿನಲ್ಲಿ ನಡೆದ ಚಿತ್ರಕಲಾ ಪ್ರದರ್ಶನದಲ್ಲಿ ವೀಕ್ಷಕರು

# ಅಧ್ಯಕ್ಷರ ನುಡಿ

ಇದು 'ಇತಿಹಾಸ ದರ್ಶನ' ೨೪ನೆಯ ಅಂಕ. ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ ನಡೆದ ೨೨ನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನ. ನಾಡಿನ ಮೂಲೆ ಮೂಲೆಗಳಿಂದ ತರುಣ ಸಂಶೋಧಕರು ಹೊಸದಾಗಿ ಪತ್ತೆಹಚ್ಚಿದ ಇತಿಹಾಸ ಪೂರ್ವ ಕಾಲದ ವಸ್ತುಗಳ ಹಾಗೂ ಶಾಸನಗಳ ಪರಿಚಯ ಇಲ್ಲಿ ಪ್ರಕಟವಾಗಿದೆ. ಹಲವು ಹಳೆಯ ವಾಸ್ತುಗಳ ವೈಶಿಷ್ಟ್ಯಗಳನ್ನು ಬೆಳಕಿಗೆ ತಂದಿದೆ. ಅನೇಕ ಐತಿಹಾಸಿಕ ವ್ಯಕ್ತಿಗಳ ಪರಿಚಯ ಇಲ್ಲವೇ ಅವರ ಜೀವನದ ವಿವರಗಳನ್ನು ಸಂಕಲಿಸಿದೆ. ಕರ್ನಾಟಕ ಇತಿಹಾಸದ ವಿಶಾಲ ಭಿತ್ತಿಯಲ್ಲಿ ಖಾಲಿಯಿರುವ ಜಾಗಗಳನ್ನು ತುಂಬಲು ಚುಕ್ಕೆಗಳಂತೆ ಇಂತಹ ಪ್ರಬಂಧಗಳು ಬೆಳಕಿಗೆ ತಂದ ವಿಷಯಗಳು ಮಹತ್ವವನ್ನು ಒತ್ತಿ ಹೇಳಬೇಕಾಗಿಲ್ಲ. ಪ್ರತಿ ವರ್ಷ ಹೊಸ ಸಂಶೋಧಕರು, ಅನೇಕರು ಕ್ಷೇತ್ರಕಾರ್ಯ ಮಾಡಿ ಪರಿಚಯಿಸಿದ ಸಂಗತಿಗಳು ಗಮನಾರ್ಹವಾಗಿವೆ.

ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ ರಾಜರ್ಷಿ ಡಾ॥ ವೀರೇಂದ್ರ ಹೆಗ್ಗಡೆಯವರ ರಾಜಾಶ್ರಯದಲ್ಲಿ ನಡೆದ ಸಮ್ಮೇಳನದಲ್ಲಿ ಡಾ॥ ಉಮಾನಾಥಶೆಣೈ ಎಲ್ಲ ರೀತಿಯ ಓಡಾಟ ಮಾಡಿದರು. ಶ್ರೀಕ್ಷೇತ್ರದ ವಸ್ತುಸಂಗ್ರಹಾಲಯ 'ಮಂಜೂಷಾ' ನಮ್ಮ ಸಂಶೋಧಕರಿಗೆ ಎಷ್ಟೋ ಹೊಸ ವಿಷಯಗಳ ಪರಿಚಯ ಮಾಡಿ ಸ್ಫೂರ್ತಿ ನೀಡಿತು. ಒಂದು ಅಪೂರ್ವ ಸಂಗ್ರಹಾಲಯ ಅದು.

ಪ್ರತಿ ವರ್ಷ ಅಕಾದೆಮಿಯ ಸದಸ್ಯ ಬಲ ಬೆಳೆಯುತ್ತಿದೆ. ಇತಿಹಾಸ ಅಧ್ಯಾಪಕರು ಸದಸ್ಯರಾಗುತ್ತಿದ್ದಾರೆ. ಕರ್ನಾಟಕ ಇತಿಹಾಸ ಪ್ರೇಮಿಗಳ ಒಂದು ಕೂಟ ಇದರಿಂದ ಸಿದ್ಧವಾಗಿದೆ. ಇವರಲ್ಲಿ ಸುಮಾರು ೪೦ ಶಾಸನ ತಜ್ಞರೂ ಹಾಗೂ ವಿದ್ವಾಂಸರ ಉದಯೋನ್ಮುಖ ಶಾಸನಗಳ ಅಧ್ಯಯನದಲ್ಲಿ ಪರಿಣತಿ ಪಡೆಯಲು ಶ್ರಮಿಸುವವರು ಇದ್ದಾರೆ.

ಹಂಪಿ ಕನ್ನಡ ವಿಶ್ವವಿದ್ಯಾಲಯ ಹೊರತರುತ್ತಿರುವ ಶಾಸನಗಳ ಸಂಪುಟ ಈ ಕ್ಷೇತ್ರದಲ್ಲಿ ಇದ್ದ ದೊಡ್ಡ ಕೊರತೆ ತುಂಬಿ ಸಂಶೋಧಕರಿಗೆ ಉಪಕಾರ ಮಾಡುತ್ತಿದೆ.

'ಇತಿಹಾಸ ದರ್ಶನ'ದ ಸಂಪಾದಕರಲ್ಲಿ ಡಾ॥ ಎಂ.ಜಿ. ನಾಗರಾಜ್ ಅವರು ಈ ಬಾರಿ ಸಮ್ಮೇಳನದ ಅಧ್ಯಕ್ಷರು. ಅವರು ಆರಂಭದಿಂದಲೂ ಅಕಾದೆಮಿಯನ್ನು ಪೋಷಿಸಿದರು.

ಈ ಬಾರಿ ಡಾ॥ ಬಾ.ರಾ. ಗೋಪಾಲ್ ಪ್ರಶಸ್ತಿ ಪಡೆಯುತ್ತಿರುವ ಶ್ರೀಮತಿ ಹನುಮಾಕ್ಷಿ ಗೋಗಿ ಸರಕಾರದ ಅಧಿಕಾರಿಣಿ, ಅಧ್ಯಾಪಕಿಯಲ್ಲ. ಆದರೆ ಶಾಸನಗಳ ಪತ್ತೆ ಹಚ್ಚುವ, ಅವುಗಳನ್ನು ಓದುವ ಮತ್ತು ಪ್ರಕಟಿಸುವ ಯತ್ನಗಳಲ್ಲಿ ಅಗ್ರಗಣ್ಯೆ. ಸಹಕಾರಿ ಇಲಾಖೆಯಲ್ಲಿ ಅಧಿಕಾರಿಣಿ ಆಗಿರುವ ಅವರು ತಮ್ಮ ಶಾಸನಗಳ ಜ್ಞಾನವನ್ನು ವೃದ್ಧಿಸಿ ವಿದ್ವಾಂಸರಿಗೆ ನೆರವಾಗುತ್ತಿದ್ದಾರೆ. ಬ್ರಾಹ್ಮೀ ಶಾಸನಗಳನ್ನೂ ಅವರು ಪ್ರಕಟಿಸಿದ್ದಾರೆ.

ಅಕಾದೆಮಿಯ ಬಗ್ಗೆ ಸದಾ ಪ್ರೀತಿ ಹೊಂದಿರುವ ಶ್ರೀ ಮದ್ರಾಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಜ॥ ಪ್ರಸನ್ನ ರೇಣುಕ ವೀರ ಸೋಮೇಶ್ವರರಾಜ ದೇಶಿಕೇಂದ್ರ ಶಿವಾಚಾರ್ಯ ಭಗವಾತ್ಪಾದರ ಪುಣ್ಯ ಆಶ್ರಯದಲ್ಲಿ ಈ ಸಮ್ಮೇಳನ ನಡೆಯುತ್ತಿದೆ. ದೂರದ ಮಲೆನಾಡಿನಲ್ಲಿ ನಾಡ ಇತಿಹಾಸದ ಧ್ವನಿ ಕೇಳಿತ್ತಿದೆ. ಇದೊಂದು ಪುಣ್ಯ ವಿಶೇಷ.

**ಸೂರ್ಯನಾಥ ಕಾಮತ್**

# ಸಂಪಾದಕೀಯ

ಬಾಳೆಹಳ್ಳಿ ಮತ್ತು ಹೊನ್ನೂರು, ಉಭಯ ಸ್ಥಳನಾಮಗಳು ಶುಭದ ಸುವರ್ಣ ನಿಧಿಯ ನೆಲೆಗಳು, ಸಂಯುಕ್ತಗೊಂಡು ಬಾಳೆಹೊನ್ನೂರು ಎನ್ನಿಸಿತು. ಬಾಳೆಹಳ್ಳಿ ಎಂಬುದಕ್ಕೆ ನಂಜನಗೂಡು ನಂದಿಗುಂದ ಪ್ರೋಷಕವಾಗಿ ವೀರಗಲ್ ಶಿಲ್ಪವೂ ಇದೆ. ಶಾಸನೋಕ್ತ ಆಂಧ್ರನಾಡಿನ 'ಕೊಲ್ಲಿಪಾಕೆಯಿಂದ' ಪೀಠವು ಬಾಳೆಹಳ್ಳಿಗೆ ಬಂದ ಕಾರಣ ಬಾಳೆಹಳ್ಳಿ ಮಠವೆನಿಸಿತ್ತು. ಇದು ಬಹುಶಃ ೧೨ನೇ ಶತಮಾನದ ಘಟನೆ ಆರಂಭದ ವಿಜಯನಗರ ಕಾಲೀನ ಶಾಸನಗಳಲ್ಲಿ 'ಬಾಳೆಹಳ್ಳಿ' ಎಂದೇ ಇದೆ. ಹೊನ್ನೂರಿನಲ್ಲಿ ವೀರಶೈವರ ಸಂಖ್ಯೆ ಹೆಚ್ಚಿತ್ತು. ಅದಾಗಿ ಉಭಯ ಊರುಗಳ ಹೆಸರು ಸೇರಿಬಾಳೆ+ಹೊನ್ನೂರು ಬಾಳೆಹೊನ್ನೂರು ಸಂಸ್ಥಾನ ಎಂದು ರೂಢಿಗೆ ನಿಂತಿತು. ಇದಕ್ಕೆ ಪೂರಕವಾದ ಬಾಳೆಗಿಡದ ಶಿಲ್ಪವಿರುವ ವೀರಗಲ್ಲೂ ಬಾಳೆಹೊನ್ನೂರಿನಲ್ಲಿದೆ. ಆದಿ ಶಿಲಾಯುಗದಿಂದ ನವಶಿಲಾಯುಗ, ಬೃಹತ್ ಶಿಲಾಯುಗ ದಾಟಿ ಇತಿಹಾಸ ಕಾಲದವರೆಗೆ ಅಸ್ತಿತ್ವವನ್ನು ಚಾಚಿಕೊಂಡು ಬಂದಿರುವ ಚಿಕ್ಕಮಗಳೂರು ಜಿಲ್ಲೆ ಹೇಳಿಕೆ ಹೊಯ್ಸಳರಿಗೆ ಉಗಮ ಪ್ರದೇಶ. ಸಾಂತರರ ಅಸ್ತಿತ್ವವನ್ನು ಪೋಷಿಸಿದ ನೆಲೆ.

ಶೃಂಗೇರಿಯು ಆದಿಶಂಕರರ ದಕ್ಷಿಣಾಮ್ನಾಯದ ಶ್ರೀ ಶಾರದಾ ಪೀಠವನ್ನು ಸ್ಥಾಪಿಸಿದ ತುಂಗೆಯ ತಟದ ನಿಸರ್ಗ ಮೋಹಕ ನೆಲೆ, ವಿಶಿಷ್ಟ ಶಿಲ್ಪಕಲೆಯ ಗುರುನೆಲೆಯ ಬೀಡು. ಬಾಳೆಹೊನ್ನೂರು ಭದ್ರಾ ತಟದಲ್ಲಿ ಆದಿರೇಣುಕ ಪ್ರತಿಷ್ಠಾಪಿತ ಜಃ ಶ್ರೀ ವೀರಸಿಂಹಾಸನ ಪೀಠ ಸ್ಥಾಯಿಗೊಂಡಿರುವ ನೆಲೆ. ಶೃಂಗೇರಿ ಶಾರದಾ ಪೀಠ ಕಡತಗಳಿಗೆ ಪ್ರಸಿದ್ಧಿಯಾದರೆ, ಬಾಳೆಹೊನ್ನೂರು ಪೀಠ ಹಸ್ತಪ್ರತಿಗಳ ಸಂಗ್ರಹಕ್ಕೆ ಪ್ರಸಿದ್ಧಿಯಾಗಿದೆ. ಸನಿಹದ ಕಿಗ್ಗ, ಮಾರ್ಕಂಡೇಶ್ವರನ ಖಾಂಡ್ಯ, ಉಜ್ಜನಿ ಬಯಲು, ವೀರಭದ್ರದೇಶ್ವರ, ಕೊಪ್ಪದ ಪವಿತ್ರಜಲ ಸ್ನಾನದ ಜಲನೆಲೆಯಾದ ೧೧ನೇ ಶತಮಾನಕ್ಕೆ ಮುಂಚೆಯೆ ಶಾಸನೋಕ್ತವಾಗಿ ಪ್ರಸಿದ್ಧಿಗೊಂಡ ಕಲ್ಲತ್ತಗಿರಿಯ ಪ್ರಾಕೃತಿ ಸೌಂದರ್ಯ ಜಲಧಾರೆ ಹಾಗೂ ಅದರಲ್ಲಿಯೂ ಮಿಂದಿರುವ ಪ್ರಾಚೀನ ಶಿಲ್ಪಗಳು ಮತ್ತು ಅಲ್ಲಿಯ ಗವಿ ವೀರಭದ್ರ, ಇತ್ಯಾದಿ ಸದ್ಯ ಕೆಲವಾರು ಗಮನಾರ್ಹ ಇತಿಹಾಸಿಕ ಶಿಲ್ಪಗಳ ಚೇತೋಹಾರಿ ತಾಣಗಳಾಗಿವೆ. 'ಬಾಳೆಹೊನ್ನೂರು' ಇತಿಹಾಸದತ್ತ ಏಕೋ ಇತಿಹಾಸಕಾರರ ಗಮನ ಹೋಗಿರಲಿಲ್ಲ. ಅಲ್ಲಿನ ವೀರೇಶ್ವರ ದೇವರಿಗೆ ವಿಜಯನಗರದ ಬುಕ್ಕನ ಕಾಲದಲ್ಲಿ ಕ್ರಿ.ಶ. ೧೩೭೯ರಲ್ಲಿ ಶಾಸನೋಕ್ತ ದಾನಗಳು ಒದಗಿವೆ. ಹೀಗಾಗಿ ವಿಜಯನಗರದ ಸಾಮ್ರಾಜ್ಯೋತ್ಸವಕ್ಕೆ ಸಂಗಮಸೋದರರು ಶೃಂಗೇರಿ ಗುರುಗಳ ದರ್ಶನಕ್ಕೆ ಹೋದಂತೆ ಬಾಳೆಹೊನ್ನೂರು ಪೀಠದ ಗುರುಗಳ ದರ್ಶನಕ್ಕೂ ಬಂದು ಆಶೀರ್ವಾದ ಪಡೆದು ಹೋದ ಸಂದರ್ಭವೂ ಆಗಿರಬೇಕು.

ಇಂಥ ಸಾಹಿತ್ಯಕ, ಸಾಂಸ್ಕೃತಿಕ, ಐತಿಹಾಸಿಕ ಹಿನ್ನೆಲೆಗಳ ಬಾಳೆಹೊನ್ನೂರಿನ ಶ್ರೀ ಮದ್ವೀರಶೈವ ಸದ್ಬೋಧನಾ ಸಂಸ್ಥೆಯ ಆಶ್ರಯದಲ್ಲಿ ಶ್ರೀ ಜಃ ಶ್ರೀ ಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಪ್ರಸನ್ನರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಮಹಾಸನ್ನಿಧಿಯವರ ಆಶೀರ್ವಾದ ಹೊತ್ತು ಕರ್ನಾಟಕ ಇತಿಹಾಸ ಅಕಾದೆಮಿಯ ೨೩ನೇ ವಾರ್ಷಿಕ ಸಮ್ಮೇಳನವು ಅಕ್ಟೋಬರ್ ೧೦,೧೧,೧೨ ನೇ ಶನಿವಾರ, ಭಾನುವಾರ, ಸೋಮವಾರ ಬಾಳೆಹೊನ್ನೂರು ಮಹಾಸಂಸ್ಥಾನ ಪೀಠದಲ್ಲಿ ನಡೆಯುತ್ತಿದೆ.

ಇಂಥ ಪರಂಪರಾ ಗುರುಸಾನ್ನಿಧ್ಯ, ಸಾಂಸ್ಕೃತಿಕ ಸಾನ್ನಿಧ್ಯದಲ್ಲಿ ನಡೆಯುವ ಅಕಾದೆಮಿಯ ೨೩ನೇ ವಾರ್ಷಿಕ ಸಮ್ಮೇಳನಾಧ್ಯಕ್ಷತೆ ಹಿರಿಯ ವಿದ್ವಾಂಸ ಡಾ. ಎಂ.ಜಿ. ನಾಗರಾಜ್ ಅವರದಾಗಿದೆ. ಸರ್ಕಾರಿ ಅಧಿಕಾರಿಯಾಗಿ ಹೊಣೆಯ ಜೊತೆಗೆ ಶಾಸನ ಶೋಧ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿರುವ, ವಿಪುಲ ಶಾಸನಗಳನ್ನು ಕಂಡುಹಿಡಿದು ಶಾಸನ ಕ್ಷೇತ್ರದಲ್ಲಿ ಹೆಸರು ಮಾಡಿ ಡಾ. ಬಾ.ರಾ. ಗೋಪಾಲ್ ಶಾಸನ ಪ್ರಶಸ್ತಿಗೆ ಭಾಜನರಾಗಿರುವ ಶ್ರೀಮತಿ ಹನುಮಾಕ್ಷಿ ಗೋಗಿ ಅವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

ಕಳೆದ ವರ್ಷ ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ ನಡೆದ ಅಕಾಡೆಮಿಯ ೨೨ನೆಯ ವಾರ್ಷಿಕ ಸಮ್ಮೇಳನದಲ್ಲಿ ೨೦೦೮ರ ಸೆಪ್ಟೆಂಬರ್ ೧೮ ರಿಂದ ೨೧ರವರೆಗೆ ಮಂಡಿತವಾದ ಪ್ರಬಂಧಗಳ ಪೈಕಿ (೮ + ೨) ಪ್ರಬಂಧಗಳನ್ನು ಸದ್ಯ ಇತಿಹಾಸ ದರ್ಶನದ ೨೪ನೇ ಸಂಪುಟದಲ್ಲಿ ಪ್ರಕಟಿಸಲಾಗಿದೆ.

'ಇತಿಹಾಸ ದರ್ಶನ'ದ ನಮ್ಮ ಪ್ರೀತಿಯ ಸದಸ್ಯ ಪ್ರಬಂಧಕಾರರು ವರ್ಷದಿಂದ ವರ್ಷಕ್ಕೆ ಹೊಸ, ಶೋಧ, ಹೊಸ ಚಿಂತನೆಗಳೊಡನೆ, ಸಮ್ಮೇಳನದಲ್ಲಿ ನಿಷ್ಠೆಯಿಂದ ಪಾಲ್ಗೊಳ್ಳುತ್ತಿದ್ದಾರೆ. ಅವರಲ್ಲಿ ವಿನಂತಿ ಎಂದರೆ ದಯವಿಟ್ಟು ಪೂರ್ಣ ಮಾಹಿತಿಯೊಡನೆ ಸಂಶೋಧನಾ ಪ್ರಬಂಧ ಕ್ರಮದ ಆಧಾರಸೂಚಿಯ ನಮೂದನ್ನು ಮಾಡಬೇಕೆಂಬುದಾಗಿದೆ.

'ಇತಿಹಾಸ ದರ್ಶನ'ದ ಮುದ್ರಣಕ್ಕೆ ಕಳೆದ ೨೦೦೫ನೇ ಸಾಲಿನಿಂದ ೨೫ ಸಾವಿರ ರೂ.ಗಳ ನಿಧಿ ನೆರವನ್ನು ಸತತವಾಗಿ ಅದರ ಸಾಂಸ್ಕೃತಿಕ ಹೆಚ್ಚಳಿಕೆಗೆ ಆಶೀರ್ವದಿಸುತ್ತಿರುವ ಶ್ರೀಮದ್ರಂಭಾಪುರಿ ಜಗದ್ಗುರು ಮಹಾಸನ್ನಿಧಿಯವರಲ್ಲಿ ನಮ್ಮ ವಿನಮ್ರ ಭಕ್ತಿಯ ಪ್ರಣಾಮಗಳಿವೆ. ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ನಿರ್ದೇಶಕರಾದ ಡಾ. ಆರ್. ಗೋಪಾಲ್ ಅವರು, ಇಲಾಖೆಯ ವತಿಯಿಂದ 'ಇತಿಹಾಸ ಪರಂಪರೆ ಉಳಿಸಿ' ಕಾರ್ಯಕ್ರಮ ಹಾಗೂ 'ಇತಿಹಾಸ ದರ್ಶನ' ಸಂಪುಟದ ಪ್ರಕಟನೆಗೆ ಇಲಾಖಾ ಕೊಡುಗೆ ನಿಧಿಯನ್ನು ನೀಡುತ್ತಿರುವುದಕ್ಕೆ ನಾವು ಆಭಾರಿ. ಹಾಗೂ ಅಕಾದೆಮಿಯ ಈ ಕಾರ್ಯಕ್ಕೆ ಅವರೊಡನೆ ಸಹಕರಿಸುತ್ತಿರುವ ಉಪನಿರ್ದೇಶಕ ಶ್ರೀ ಟಿ.ಎಸ್. ಗಂಗಾಧರ ಮತ್ತು ಇಲಾಖೆಯ ಸಿಬ್ಬಂದಿ ವರ್ಗದವರಿಗೆ ನಮ್ಮ ಅಭಿಮಾನಗಳು.

ಈವರೆಗೆ ನಡೆದು ಬಂದಿರುವ ನಮ್ಮ ಸಂಪಾದನ ಕಾರ್ಯದಲ್ಲಿ ಸಹಕಾರ ನೀಡಿರುವ ಅಕಾದೆಮಿಯ ಅಧ್ಯಕ್ಷರಾದಿಯಾಗಿ ಕಾರ್ಯಕಾರಿ ಸಮಿತಿ ಹಾಗೂ ಸರ್ವ ಸದಸ್ಯರಿಗೂ ನಮ್ಮ ಕೃತಜ್ಞತೆಗಳು. ಈ ಸದ್ಯದ ಸಂಪುಟದ ಕೆಲವು ಪ್ರಬಂಧಗಳನ್ನು ಪರಿಶೀಲಿಸಿ ಕರಡು ತಿದ್ದಿಕೊಟ್ಟು 'ಕರ್ನಾಟಕ ಗ್ಯಾಸೆಟಿಯರ್'ನ ಸಂಪಾದಕರಲ್ಲೊಬ್ಬರಾದ ಶ್ರೀ ಎಸ್. ರಾಜೇಂದ್ರಪ್ಪ ಅವರಿಗೆ ನಮ್ಮ ಅಭಿಮಾನಗಳು ಸಲ್ಲುತ್ತವೆ.

ಸಂಪುಟವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಕೆ.ಎಸ್. ಮಂಜುನಾಥ್, ವ್ಯವಸ್ಥಾಪಕ ಶ್ರೀ ಕಾವೇರಿಗೌಡ, ಡಿಟಿಪಿ ಸಿಬ್ಬಂದಿ ವರ್ಗದ ಪಿ.ಎಸ್. ಸುಬ್ರಮಣಿ, ಎ.ಎನ್. ಪ್ರಸನ್ನಕುಮಾರ್, ಶ್ರೀಧರ್, ಪಿ.ಎ. ಅಬ್ದುಲ್ ಹಕೀಂ, ವಿ. ರಘುನಾಥ್, ಶ್ರೀಮತಿ ಗೀತಾ ಅವರಿಗೆ ನಮ್ಮ ಅಭಿಮಾನಗಳಿವೆ.

ಮೊದಲಿನಿಂದಲೂ ನಮ್ಮ 'ಇತಿಹಾಸ ದರ್ಶನ'ದ ಮುದ್ರಣ ಕಾರ್ಯಕ್ಕೆ ನೆರವಾಗಿ ಬಂದಿರುವ ಶ್ರೀ ಅಶೋಕ್‌ಕುಮಾರ್ ಅವರಿಗೂ ನಮ್ಮ ಕೃತಜ್ಞತೆಗಳಿವೆ.

ಬೆಂಗಳೂರು : ೦೭.೧೦.೨೦೦೯; ಶ್ರೀ ವಿರೋಧಿ ಸಂವತ್ಸರ<br>ಅಶ್ವಯುಜ ಭರಣಿ ಬುಧವಾರ

**ಡಾ|| ಎಂ.ಜಿ. ನಾಗರಾಜ್**<br>**ಡಾ|| ಪಿ.ವಿ. ಕೃಷ್ಣಮೂರ್ತಿ**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

ಬೆಂಗಳೂರು

**ಕಾರ್ಯಕಾರಿ ಸಮಿತಿ**

(೦೯.೦೯.೨೦೦೮ರಲ್ಲಿ ಆಯ್ಕೆಯಾದವರು)

**ಅಧ್ಯಕ್ಷರು**

ಡಾ॥ ಸೂರ್ಯನಾಥ ಕಾಮತ್

**ಉಪಾಧ್ಯಕ್ಷರು**

ಡಾ॥ ಬಿ. ರಾಜಶೇಖರಪ್ಪ

ಡಾ॥ ದೇವರಕೊಂಡಾರೆಡ್ಡಿ

**ಪ್ರಧಾನ ಕಾರ್ಯದರ್ಶಿ**

ಡಾ॥ ಎಚ್.ಎಸ್. ಗೋಪಾಲರಾವ್

**ಕಾರ್ಯದರ್ಶಿಗಳು**

ಡಾ॥ ಪಿ.ವಿ. ಕೃಷ್ಣಮೂರ್ತಿ

ಡಾ॥ ಕೆ.ಬಿ. ಸುದರ್ಶನ್

**ಕೋಶಾಧ್ಯಕ್ಷರು**

ಶ್ರೀ ಎಂ.ಬಿ. ಪಾಟೀಲ್, ಬೆಂಗಳೂರು

**ಸದಸ್ಯರು**

*ಡಾ॥ ಹೆಚ್. ಚಂದ್ರಶೇಖರ್,* ಬೆಂಗಳೂರು*

*ಡಾ॥ ಎಸ್.ಕೆ. ಜೋಶಿ, ಧಾರವಾಡ*

*ಡಾ॥ ಶ್ರೀಮತಿ ಸ್ಮಿತಾ ಸುರೇಬಾನಕರ, ಬೆಳಗಾವಿ*

*ಡಾ॥ ಡಿ.ಎನ್. ಯೋಗೀಶ್ವರಪ್ಪ, ತುಮಕೂರು*

*ಡಾ॥ ಪಿ.ಎನ್. ನರಸಿಂಹಮೂರ್ತಿ, ಮಂಡ್ಯ*

*ಶ್ರೀ ಕುಂ.ಬಾ. ಸದಾಶಿವಪ್ಪ, ಹರಪನಹಳ್ಳಿ*

*ಡಾ. ಎಚ್.ಎಸ್. ಉಷಾರಾಣಿ, ಮೈಸೂರು*

*ಡಾ॥ ಎಫ್.ಟಿ. ಹಳ್ಳಿಕೇರಿ, ಹಂಪಿ*

*ಶ್ರೀ ಶಿವಪ್ಪ ನೀರಲಗಿ, ಬಾಗಲಕೋಟೆ*

*ಡಾ॥ ಶೀಲಾಕಾಂತ ಪತ್ತಾರ್, ಬಾದಾಮಿ*

*ಶ್ರೀ ಜಯದೇವಪ್ಪ ಜೈನಕೇರಿ, ಶಿವಮೊಗ್ಗ*

*ಡಾ॥ ಎಸ್.ಎಂ. ನಾಗಭೂಷಣ, ಧಾರವಾಡ*

*ಡಾ॥ ವೈ. ಉಮಾನಾಥಶೆಣೈ, ಉಜಿರೆ*

*ಡಾ॥ ಬೆಂ.ಶಾ. ಶ್ಯಾಮಲಾರತ್ನಕುಮಾರಿ, ಬೆಂಗಳೂರು*

*ಡಾ॥ ತುಳಸಿರಾಮನಾಯಕ್, ಬೆಂಗಳೂರು*

**[೨೦೦೬–೦೮ನೇ ಸಾಲಿನಲ್ಲಿಯೂ ಇವರು ಕಾರ್ಯಕಾರಿ ಸಮಿತಿಯಲ್ಲಿದ್ದರು, ತಪ್ಪಿನಿಂದ ಹಿಂದಿನ ಸಂಚಿಕೆಗಳಲ್ಲಿ ಹೆಸರು ಬಿಟ್ಟುಹೋಗಿತ್ತು.]*

# ಪರಿವಿಡಿ

# ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಹಾಗೂ ಇತರ ವಿವರಗಳು

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು | |
|---|---|---|---|---|---|
| ೧. | ೧೫-೧೭ ಮೇ ೧೯೮೭ | ಬೆಂಗಳೂರು | *ಕರ್ನಾಟಕ ಇತಿಹಾಸ ಅಕಾದೆಮಿ* | ಡಾ॥ ಎಂ. ಚಿದಾನಂದಮೂರ್ತಿ |  |
| ೨. | ೨೩-೨೪ ಅಕ್ಟೋಬರ್ ೧೯೮೮ | ತುಮಕೂರು | *ಸಿದ್ಧಗಂಗಾಕ್ಷೇತ್ರ : ಡಾ। ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು* | ಡಾ॥ ಜಿ. ಎಸ್. ಗಾಯಿ |  |
| ೩. | ೧೦-೧೧ ಜೂನ್ ೧೯೮೯ | ಗದಗ | *ಶ್ರೀ ಮ. ನಿ. ಪ್ರ. ಜ॥ ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಗದಗ* | ಡಾ॥ ಶ್ರೀನಿವಾಸ ರಿತ್ತಿ |  |
| ೪. | ೨೧-೨೨ ಜುಲೈ ೧೯೯೦ | ದಾವಣಗೆರೆ | *ಡಾ॥ ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ, ದಾವಣಗೆರೆ* | ಡಾ॥ ಎಸ್. ಆರ್. ರಾವ್ |  |
| ೫. | ೧೨-೧೪ ಜುಲೈ ೧೯೯೧ | ಚಿತ್ರದುರ್ಗ | *ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ, ಚಿತ್ರದುರ್ಗ* | ಡಾ॥ ಬಾ. ರಾ. ಗೋಪಾಲ್ |  |
| ೬. | ೧೧-೧೩ ಜುಲೈ ೧೯೯೨ | ರಾಯಚೂರು | *ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ ರಾಯಚೂರು* | ಡಾ॥ ಕೆ. ವಿ. ರಮೇಶ್ |  |
| ೭. | ೨೩-೨೫ ಜುಲೈ ೧೯೯೩ | ಮೈಸೂರು | *ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ, ಮೈಸೂರು* | ಡಾ॥ ಅ. ಸುಂದರ |  |
| ೮. | ೯-೧೦ ಜುಲೈ ೧೯೯೪ | ಸೊಂಡೂರು | *ಶ್ರೀ ಎಂ. ವೈ. ಘೋರ್ಪಡೆ ಕರ್ನಾಟಕ ಸೇವಾ ಸಂಘ, ಸೊಂಡೂರು* | ಡಾ॥ ಎಂ. ಎಂ. ಕಲಬುರ್ಗಿ |  |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು | |
|---|---|---|---|---|---|
| ೯. | ೯-೧೧ ಸೆಪ್ಟೆಂಬರ್ ೧೯೯೫ | ಬೆಳಗಾವಿ | ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ, ಬೆಳಗಾವಿ | ಡಾ\|\| ಎ.ವಿ. ನರಸಿಂಹಮೂರ್ತಿ |  |
| ೧೦. | ೭-೯ ಜೂನ್ ೧೯೯೬ | ಧಾರವಾಡ | ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ ಧಾರವಾಡ | ಡಾ\|\| ಜಿ. ಎಸ್. ದೀಕ್ಷಿತ್ |  |
| ೧೧. | ೨೫-೨೭ ಅಕ್ಟೋಬರ್ ೧೯೯೭ | | ಸಿರಸಿ ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ಸಿರಸಿ | ಪ್ರೊ\|\| ಕೆ. ಅಭಿಶಂಕರ್ |  |
| ೧೨. | ೧೪-೧೬ ನವೆಂಬರ್ ೧೯೯೮ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ\|\| ಎಸ್. ನಾಗರಾಜು |  |
| ೧೩. | ೧೧-೧೩ ಜೂನ್ ೧೯೯೯ | ಹರಪನಹಳ್ಳಿ | ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ. ಬಾ. ಸದಾಶಿವಪ್ಪ, ಸ್ವಾಗತ ಸಮಿತಿ, ಹರಪನಹಳ್ಳಿ | ಡಾ\|\| ಶ್ರೀನಿವಾಸ ಹಾವನೂರ |  |
| ೧೪. | ೮-೧೦ ಜುಲೈ ೨೦೦೦ | ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ | ಶ್ರೀ ಸಿ. ಟಿ. ಎಂ. ಕೊಟ್ರಯ್ಯ |  |
| ೧೫. | ೧೩-೧೫ ಅಕ್ಟೋಬರ್ ೨೦೦೧ | ಉಡುಪಿ | ಪೂಜ್ಯ ಶ್ರೀ ವಿಶ್ವೇಶ್ವರ ತೀರ್ಥ ಪಾದಂಗಳು ಪೇಜಾವರ ಮಠಾಧೀಶರು, ಉಡುಪಿ | ಡಾ\|\| ಜೋತ್ಸ್ನಾ ಕಾಮತ್ |  |
| ೧೬. | ೨೨-೨೪ ಸೆಪ್ಟೆಂಬರ್ ೨೦೦೨ | ಹೊಸನಗರ | ಪೂಜ್ಯಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳು ಶ್ರೀ ರಾಮಚಂದ್ರಾಪುರ ಮಠ | ಡಾ. ಎ.ಕೆ. ಶಾಸ್ತ್ರಿ |  |
| ೧೭. | ೧೩-೧೫ ಸೆಪ್ಟೆಂಬರ್ ೨೦೦೩ | | ಬಾದಾಮಿ ವಿಶ್ವಚೇತನ ಸಂಸ್ಥೆ ಬಾದಾಮಿ | ಡಾ. ಎಸ್. ರಾಜಶೇಖರ್ |  |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು | |
|---|---|---|---|---|---|
| ೧೮. | ೨೪-೨೬ ಸೆಪ್ಟೆಂಬರ್ ೨೦೦೪ | | ಹೊನ್ನಾಳಿ, ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ ಚನ್ನ-ಚೇತನ ಪ್ರಕಾಶನ ಮತ್ತು ಹಿರೇಕಲ್ಮಠ | ಶ್ರೀ ಕೆಳದಿ ಗುಂಡಾ ಜೋಯಿಸ್ |  |
| ೧೯. | ೧೧-೧೩ ಸೆಪ್ಟೆಂಬರ್ ೨೦೦೫ | ಸೇಡಂ | ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಂಸ್ಥೆ | ಡಾ. ಜಿ.ವ್ಹಿ. ಶಿರೂರ |  |
| ೨೦. | ೯-೧೧ ಸೆಪ್ಟೆಂಬರ್ ೨೦೦೬ | ನಂಜನಗೂಡು | ಶ್ರೀ ರಾಘವೇಂದ್ರ ಸ್ವಾಮಿಗಳ ಮಠ | ಡಾ. ಸೂರ್ಯನಾಥ ಕಾಮತ್ |  |
| ೨೧. | ೮-೧೦ ಸೆಪ್ಟೆಂಬರ್ ೨೦೦೭ | ರಾಮನಗರ | ಹಗರಿಬೊಮ್ಮನಹಳ್ಳಿಯ ಶ್ರೀರಾಮ ಯುವಕ ಸಂಘ | ಪ್ರೊ. ಲಕ್ಷ್ಮಣ್ ತೆಲಗಾವಿ |  |

| ಕ್ರ.ಸಂ. | ದಿನಾಂಕ-ವರ್ಷ | ಸ್ಥಳ | ಸನ್ಮಾನಿತರು | |
|---|---|---|---|---|
| ೧ | ೧೫ನೇ ವಾರ್ಷಿಕ ಸಮ್ಮೇಳನ<br>ಅಕ್ಟೋಬರ್ ೨೦೦೧ | ಉಡುಪಿ | ಡಾ. ಕೆ.ವಿ. ರಮೇಶ |  |
| ೨ | ೧೬ನೇ ವಾರ್ಷಿಕ ಸಮ್ಮೇಳನ<br>ಸೆಪ್ಟಂಬರ್ ೨೦೦೨ | ಹೊಸನಗರ | ಡಾ. ಶ್ರೀನಿವಾಸ ರಿತ್ತಿ |  |
| ೩ | ೧೭ನೇ ಸಮ್ಮೇಳನದ<br>ಸೆಪ್ಟಂಬರ್ ೨೦೦೩ | ಬಾದಾಮಿ | ಡಾ. ದೇವರಕೊಂಡಾರೆಡ್ಡಿ |  |
| ೪ | ೧೮ನೇ ಸಮ್ಮೇಳನ<br>ಸೆಪ್ಟಂಬರ್ ೨೦೦೪ | ಹೊನ್ನಾಳಿ | ಡಾ. ಬಿ. ರಾಜಶೇಖರಪ್ಪ |  |
| ೫ | ೧೯ನೇ ಸಮ್ಮೇಳನ<br>ಸೆಪ್ಟಂಬರ್ ೨೦೦೫ | ಸೇಡಂ | ಡಾ. ಕೆ.ಆರ್. ಗಣೇಶ್ |  |
| ೬ | ೨೦ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೬ | ನಂಜನಗೂಡು | ಡಾ. ಎಂ.ಜಿ. ನಾಗರಾಜ್ |  |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಸನ್ಮಾನಿತರು | |
|---|---|---|---|---|
| | ೨೧ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೭ | ಹಗರಿಬೊಮ್ಮನಹಳ್ಳಿ | **ಡಾ. ಎಚ್.ಎಸ್. ಗೋಪಾಲರಾವ್** |  |
| | ೨೨ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೮ | ಧರ್ಮಸ್ಥಳ | **ಡಾ. ಪಿ.ಎನ್. ನರಸಿಂಹಮೂರ್ತಿ** |  |
| | ೨೩ನೇ ಸಮ್ಮೇಳನ<br>ಅಕ್ಟೋಬರ್ ೨೦೦೯ | ಬಾಳೇಹೊನ್ನೂರು | **ಶ್ರೀಮತಿ ಹನುಮಾಕ್ಷಿ ಗೋಗಿ** |  |

# ಕರ್ನಾಟಕ ಇತಿಹಾಸ ಅಕಾದೆಮಿ ೨೨ನೆಯ ವಾರ್ಷಿಕ ಸಮ್ಮೇಳನ

## ಶ್ರೀ ಕ್ಷೇತ್ರ ಧರ್ಮಸ್ಥಳ : ದಿನಾಂಕ ೧೮ ಸೆಪ್ಟೆಂಬರ್ ೨೦೦೮

ಸಮ್ಮೇಳನಾಧ್ಯಕ್ಷರು : ಡಾ॥ ವಸುಂಧರಾ ಫಿಲಿಯೋಜಾ*

### ಅಧ್ಯಕ್ಷ ಭಾಷಣ

ಭಾನುವಾರ, ಸೆಪ್ಟೆಂಬರ್ ೭, ೨೦೦೮ರ 'ವಿಜಯ ಕರ್ನಾಟಕ'ದಲ್ಲಿ ದೇಶಭಕ್ತಿಯನ್ನು ಉಜ್ವಲಗೊಳಿಸುವ ಕೃತಿ ಎಂಬ ಲೇಖನ ಓದಿದೆ. ಅದು ಮಾಜಿ ನ್ಯಾಯಮೂರ್ತಿ ಎಂ. ರಾಮಜೋಯಿಸರ ಮೇರುಕೃತಿ National Reconciliation for Harmonious Living ಎಂಬುದರ ಡಾ॥ ಚಿದಾನಂದಮೂರ್ತಿಯವರ ವಿಮರ್ಶೆ. ಡಾ॥ ಮೂರ್ತಿಯವರು ತಮ್ಮ ಲೇಖನ ಮುಗಿಸುವ ಮುನ್ನ ಕೊನೆಯ ಅಧ್ಯಾಯದ ಬಗೆಗೆ ಹೀಗೆ ಹೇಳುತ್ತಾರೆ : ಈ ಕೃತಿಯ ಕೊನೆಯ ಅಧ್ಯಾಯನವಂತೂ ಅತ್ಯಂತ ಉಜ್ವಲ. ರಾಷ್ಟ್ರಪ್ರೇಮವು ಎಲ್ಲ ಭಾರತೀಯರ ಧರ್ಮವಾಗಬೇಕೆಂದು ಘೋಷಿಸುತ್ತ ಅನ್ಯದೇಶದ ಕುರುಡು ಅನುಕರಣೆಗೆ ಮುಕ್ತಾಯ ಹಾಡಿ, ರಾಮಾಯಣದ ರಾಮನ ಬಯಕೆ ಎಲ್ಲರದಾಗಲಿ. ಲಂಕೆಯನ್ನು ಗೆದ್ದಿರುವ ರಾಮನಿಗೆ ಅಲ್ಲಿಯೇ ರಾಜ್ಯಭಾರ ಮಾಡಲು ಲಕ್ಷ್ಮಣ ಸೂಚಿಸಿದಾಗ ರಾಮ ಹೇಳಿದ ಮಾತಿವು:

**"ಅಪಿ ಸ್ವರ್ಣಮಯೀ ಲಂಕಾ ನ ಮೇ ಲಕ್ಷ್ಮಣ ರೋಚತೇ ।
ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ॥**

ಎಷ್ಟು ಸುಂದರ ಹಾಗೂ ಅರ್ಥಪೂರ್ಣ ವಚನಗಳಿವು. ಪ್ರತಿಯೊಬ್ಬರೂ ತಮ್ಮ ಮನೆ, ತಮ್ಮ ಊರು, ತಮ್ಮ ದೇಶದ ಬಗೆಗೆ ಅಭಿಮಾನವಿಟ್ಟುಕೊಂಡಿರಲೇಬೇಕು. ಅದನ್ನು ಪ್ರೀತಿಸಿ, ಬೆಳೆಸಿ ಉಳಿಸಬೇಕು. ನನ್ನ ಈ ಅಧ್ಯಕ್ಷ ಭಾಷಣದಲ್ಲಿ ಜಕ್ಕಣಾಚಾರಿ ಗುಡಿಗಳು, ಅಲ್ಲಿಯ ಶಿಲಾಶಾಸನಗಳ ಅಧ್ಯಯನ ಹಾಗೂ ಕೆರೆಕಟ್ಟೆಗಳ ಜೀರ್ಣೋದ್ಧಾರದ ಬಗೆಗೆ ಹೇಳುವೆ. ಭಾರತ ಬಿಟ್ಟು ಹೋದ ಬ್ರಿಟಿಷರ ಭೂತ ಬಡಿದುಕೊಂಡು, ನಾವು ಪರದೇಶದ ಅಂಧಾನುಕರಣೆ ಮಾಡುತ್ತಿದ್ದೇವೆ. ಆದರೆ ಇದು ನಮಗೆ ಅಗತ್ಯವಾಗೇನಿಲ್ಲ. ನಮ್ಮ ಕರ್ನಾಟಕದೇಶ ಸಂಪತ್ತಿನಿಂದ ಸಮೃದ್ಧವಾದ ರಾಜ್ಯ. ಇಲ್ಲಿಯ ಸಂಪತ್ತಿನ ಬಗೆಗೆ ಹೇಳಬೇಕೆಂದರೆ ಒಂದೇ, ಎರಡೇ ಅನೇಕ ವಿಷಯ ಗಳಿವೆ. ಉದಾಹರಣೆಗೆ ದೇವಸ್ಥಾನ, ಶಾಸನ ಸಂಪದವನ್ನೇ ತೆಗೆದುಕೊಳ್ಳೋಣ. ತಮಿಳು ದೇಶದ ಕವಯಿತ್ರೀ ಅವ್ವೆಯ್ಯಾರ ಹೇಳಿದಂತೆ ಊರಿಗೊಂದು ದೇವಸ್ಥಾನವಿರಬೇಕು. ದೇವಸ್ಥಾನಕ್ಕೊಂದು ಕೆರೆ ಇರಬೇಕು. ದೇವಾಲಯಗಳಿಲ್ಲದ ಊರು ಹಾಳು ಕೊಂಪೆ. ಅಲ್ಲಿ ಒಂದು ನಿಮಿಷ ಸಹ ಇರಕೂಡದು ಎಂದು ಹೇಳಿದ್ದಾರೆ. ಆದರೆ ನಮ್ಮ ಕರ್ನಾಟಕದ ಪಾಶುಪತ, ಕಾಳಾಮುಖಿಯತಿಗಳು ಅದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಊರಿಗೆ ಅನೇಕ ದೇವಾಲಯ ಅವಕ್ಕೆ ಕೆರೆ, ಕಟ್ಟೆಗಳಲ್ಲದೇ ಶಾಸನಗಳನ್ನೂ ನಿಲ್ಲಿಸಿದ್ದಾರೆ. ಕಾಳಾಮುಖ, ಪಾಶುಪತರ ಶಾಸನಗಳೆಂದರೆ ಅವು ಅಂತಿಂಥ ಶಾಸನಗಳಲ್ಲ. ಅಷ್ಟಾದಶ ವರ್ಣನೆ, ಅಷ್ಟರಸಯುಕ್ತವಾಗಿದ್ದು ಜನರಲ್ಲಿ ದೇಶಪ್ರೇಮ, ಭಕ್ತಿ ಹುಟ್ಟಿಸುವಂತಹವಾಗಿದ್ದವು.

ನನ್ನ ಅಲ್ಪಮತಿಗೆ ಹೊಳೆದಂತೆ ಹೇಳಬೇಕಾದರೆ ದೇವಾಲಯಗಳು, ಅದರಲ್ಲಿ ಸ್ವಯಂಭೂಲಿಂಗವುಳ್ಳ ಶಿವಾಲಯಗಳು ಕರ್ನಾಟಕದಲ್ಲಿದ್ದಷ್ಟು ಭಾರತದ ಮತ್ತಾವ ಭಾಗದಲ್ಲೂ ಇಲ್ಲ ಎಂದರೆ ಅತಿಶಯೋಕ್ತಿ ಎನಿಸಲಾರದು. ನನ್ನ ಅಭಿಪ್ರಾಯ ತಪ್ಪಾಗಿದ್ದರೆ ಸಹೃದಯೀ ಕೇಳುಗರು ನನ್ನ ತಪ್ಪನ್ನು ತಿದ್ದಬೇಕೆಂದು ಕೇಳಿಕೊಳ್ಳುವೆ. ಮೇಗುಟಿ ದೇವಾಲಯ ನಿರ್ಮಾಣವಾಗುವುದಕ್ಕೆ ಮೊದಲು ಗುಹೆಗಳನ್ನು ಕೊರೆದು, ಮೂರ್ತಿ ಪ್ರತಿಷ್ಠಾಪಿಸಿ ಪೂಜಿಸುವ ಪದ್ಧತಿ ಇತ್ತು. ಐಹೊಳೆ ದೇವಾಲಯ ಕಟ್ಟಡ ಸಂಪ್ರದಾಯದ ತೊಟ್ಟಿಲು ಎಂದು ಎಲ್ಲರೂ ಹೇಳುತ್ತಾರೆ. ಕಲ್ಲು ಮುಂತಾದ ವಿವಿಧ ಮೂಲಗಳನ್ನುಪಯೋಗಿಸಿ ದೇವಾಲಯ ಕಟ್ಟುವ ಕಲೆ ಐಹೊಳೆಯಿಂದಲೇ ಆರಂಭವಾಯಿತು ಎಂದು ಹೇಳಿದರೆ ತಪ್ಪೇನಿಲ್ಲ. ಈ ಶಾಸನದ ಕಾಲ ಸುಮಾರು ಕ್ರಿ.ಶ. ೬೩೪-೬೩೫. ಇಲ್ಲಿಂದ ಆಲಯ ಕಟ್ಟುವ ಕಲೆ ಆರಂಭವಾದ್ದು ಕಲ್ಯಾಣಚಾಲುಕ್ಯ, ಹೊಯ್ಸಳರ ಕಾಲಕ್ಕೆ ಅತ್ಯುನ್ನತ ಶಿಖರಕ್ಕೇರಿತು.

ಮೊಟ್ಟಮೊದಲು ಹಿಂದೂ ದೇವಾಲಯಗಳಲ್ಲಿ ಶೈವ ದೇವಾಲಯಗಳು ಹೆಚ್ಚಿನ ಮಹತ್ವ ಗಳಿಸಿದವು. ಕಾರಣವಿಷ್ಟೇ, ಕಾಳಾಮುಖ, ಪಾಶುಪತರು ಶಿವಾರಾಧಕರಾಗಿದ್ದರಿಂದ ಶಿವನಿಗೇ ಪ್ರಾಮುಖ್ಯತೆ ಕೊಡುತ್ತಿದ್ದರು.

ಲಕುಲೀಶನ ಭಕ್ತರಾದ ಕಾಳಾಮುಖ, ಪಾಶುಪತರು ಕರ್ನಾಟಕಕ್ಕೆ ಬಾದಾಮಿ ಚಾಲುಕ್ಯರ ಕಾಲಕ್ಕೇನೇ ಬಂದರು

*೧೨೫, ವಿವೇಕಾನಂದ ರಸ್ತೆ ತಿರುವು, ಯಾದವಗಿರಿ, ಮೈಸೂರು - ೫೭೦ ೦೨೦.

ಎಂದು ಶಾಸನಗಳ ಆಧಾರದ ಮೇಲಿಂದ ಹೇಳಬಹುದು. ಲಕುಲೀಶ ಪಂಥಿಗಳಲ್ಲಿ ಕಾಳಾಮುಖ, ಪಾಶುಪತ, ಕಾಪಾಲಿಕ ಹಾಗೂ ಕೌಲ ಎಂದು ನಾಲ್ಕು ಬಗೆ ಎಂದು ಕೆಲ ದಾಖಲೆಗಳು ಹೇಳುತ್ತವೆ. ಅಲ್ಲದೇ ಇವರ ಶಾಸನಗಳಲ್ಲಿ ಅನೇಕ ಸಲ ಲಕುಲೀಶನ ಬಗೆಗೆ ಉಲ್ಲೇಖ ಬರುತ್ತದಲ್ಲದೇ ಕೆಲ ಯತಿಗಳ ಹೆಸರುಗಳ ಸಹ ಲಕುಲೀಶ ಎಂದಿದೆ. ಇದರ ಮೇಲಿಂದ ಇವರು ಲಕುಲೀಶನ ಭಕ್ತರು, ಲಕುಲೀಶ ಪಂಥವರು ಎಂದು ಹೇಳಲಡ್ಡಿಯಿಲ್ಲ.

ಈ ಲಕುಲೀಶ ಪಂಥಗಳಲ್ಲಿ ಕರ್ನಾಟಕಕ್ಕೆ ಬಂದವರು ಕಾಳಾಮುಖ, ಪಾಶುಪತರೆಂಬುದು ಅವರ ಶಾಸನಗಳೇ ಸಾರುತ್ತವೆ. ಎಲ್ಲಿಯೂ ನಮಗೆ ಕೌಲ, ಕಾಪಾಲಿಕರ ಹೆಸರು ಹೇಳಿಕೊಳ್ಳುವ ಶಾಸನ ಸಿಗುವುದಿಲ್ಲ. ಈ ಲಕುಲೀಶ ಪಾಶುಪತ ಕಾಳಾಮುಖರು ಎಂಥ ಶೈವರಿದ್ದರೆಂಬುದನ್ನು ತಿಳಿದುಕೊಳ್ಳಲು ನಮಗೆ ಲಭ್ಯವಿರುವ ಸಾಹಿತ್ಯವೆಂದರೆ ಅವರು ಕಟ್ಟಿಸಿರುವ ದೇವಾಲಯಗಳು ಹಾಗೂ ಶಾಸನ. ಇವೆರಡರ ಸಹಾಯದಿಂದ ಈ ಶೈವರ ಬಗೆಗೆ ನಮಗೆ ಹೇಗೆ ಅನೇಕ ವಿಷಯಗಳು ತಿಳಿಯುತ್ತವೆ. ಆ ವಿಚಾರ ನೋಡೋಣ.

ಕಾಳಾಮುಖರು ದೀಕ್ಷಾಸಮಯಕ್ಕೆ ಗುರು ಹೇಳಿದ ಬೇರೆಬೇರೆ ದೇಹದ ಭಾಗಗಳಿಗೆ ಕಪ್ಪು ಚುಕ್ಕೆ ಇಟ್ಟುಕೊಳ್ಳುತ್ತಿದ್ದರೇ ವಿನಾಃ ಅವರು ಮುಖಕ್ಕೆ ಬಣ್ಣ ಬಳಿದುಕೊಳ್ಳುತ್ತಿರಲಿಲ್ಲ. ಅಲ್ಲದೇ ಈ ಕಾಳಾಮುಖ ಶಬ್ದದ ವ್ಯುತ್ಪತ್ತಿಯನ್ನು ಹೀಗೆ ಹೇಳುತ್ತಾರೆ. ಶಿವ, ಸದಾಶಿವನಾದಾಗ ಅವನಿಗೆ ಐದು ಮುಖಗಳು. ಈ ಐದು ಮುಖಗಳಲ್ಲಿ ಪ್ರತಿಯೊಂದು ಮುಖಕ್ಕೂ ಒಬ್ಬೊಬ್ಬ ಶಕ್ತಿ. ಆ ಶಕ್ತಿದೇವತೆಯ ಪರ್ಯಾಯ ಹೆಸರುಗಳು ಕಲೆಯಿಂದೊಡಗೂಡಿವೆ. ಉದಾ:–ಶಾಂತಿ, ಶಾಂತ್ಯತೀತ, ವಿದ್ಯಾ, ನಿವೃತ್ತಿ ಹಾಗೂ ಪ್ರತಿಷ್ಠಾ ಕಲೆ.

ಕಾಳಾಮುಖ, ಪಾಶುಪತರು ಕಟ್ಟಿಸಿದ ಅನೇಕ ದೇವಾಲಯಗಳು ತ್ರಿಕೂಟ ಮಾಟಗಳಾಗಿದ್ದು, ಮೂರು ಗರ್ಭಗೃಹದಲ್ಲಿ ಮಧ್ಯಕ್ಕೆ ಶಿವ ಇನ್ನುಳಿದೆರಡರಲ್ಲಿ ವಿಷ್ಣು ಹಾಗೂ ಬ್ರಹ್ಮ ಇಲ್ಲವೇ ಸೂರ್ಯನ ಮೂರ್ತಿ ಇರುತ್ತವೆ. ಇದಲ್ಲದೇ ಅಲ್ಲಿ ಗಣೇಶ, ದುರ್ಗೆಯರ ಮೂರ್ತಿ, ರಂಗಮಂಟಪದ ದಕ್ಷಿಣೋತ್ತರಮಾಡುಗಳಲ್ಲಿ ಹಾಗೂ ದಕ್ಷಿಣದ ಇನ್ನೊಂದು ಮಾಡಿನಲ್ಲಿ ಸಪ್ತಮಾತೃಕೆಯರ ಫಲಕ ಇರುತ್ತವಲ್ಲದೇ ಸರಸ್ವತಿಯ ಮೂರ್ತಿ ಅಥವಾ ಆ ದೇವಿಗೆಂದೇ ನಿರ್ಮಿಸಿದ ಒಂದು ಚಿಕ್ಕ ದೇವಾಲಯ ಸಹ ಇರುತ್ತದೆ. ಇಷ್ಟೆಲ್ಲ ಮೂರ್ತಿಗಳೇಕೆ ಇವರ ದೇವಾಲಯಗಳಲ್ಲಿ, ಇವರೆಂತಹ ಶೈವರು ಎಂದು ತಿಳಿದುಕೊಳ್ಳಬೇಕೆಂದರೆ ನಾವು ಪುರಾಣ, ಆಗಮಗಳತ್ತ ದೃಷ್ಟಿ ಹರಿಸಬೇಕಾಗುತ್ತದೆ. ವಾತುಳ ಶುದ್ಧಾಗಮದ ೧೧ನೆಯ ಪಟಲದಲ್ಲಿ ಬೇರೆಬೇರೆ ಶೈವರ ಬಗೆಗೆ ಹೀಗೆ ಬರುತ್ತದೆ.

**ಶೈವಂ ಚತುರ್ವಿಧಂ ಜ್ಞೇಯಂ ಸಮಾಸಾತ್ ಶೃಣು ಷಣ್ಮುಖ ।**
**ಸಾಮಾನ್ಯಂ ಮಿಶ್ರಕಂ ಚೈವ ಶುದ್ಧಂ ವೀರಂ ಯಥಾಕ್ರಮಮ್ ।**
(ಪದ್ಯ ೧೦, ಪು. ೩೨೭)

ಮುಂದೆ ಮಿಶ್ರದ ಲಕ್ಷಣ ಹೇಳುತ್ತ ;

**ವಕ್ಷ್ಯೇ ಮಿಶ್ರಸ್ಯ ಲಕ್ಷಣಮ್**
**ಶೈವಂ ಚ ವೈಷ್ಣವಂ ಶಾಕ್ತಂ ಕೌಮಾರಂ ಗಾಣಪತ್ಯಕಂ।**
**ಸೌರಂ ಚಾಖಿಲದೈವತ್ಯಂ ಪೂಜನಂ ಚ ಸಮಾಚರೇತ್ ॥ ೧೫ ॥**
**ಏತೇಷೂಕ್ತೇಷು ಸರ್ವೇಷು ತತ್ತನ್ಮಂತ್ರೇಷು ಮಿಶ್ರಕಾ(ಗಾ)ತ್ ।**
**ಸಮಭಕ್ತಿ ಸಮಾಯುಕ್ತಃ ಸರ್ವಾನ್ ಲಿಂಗೇನ ಭಾವಯೇತ್**
**॥ ೧೬ ॥**

**ಮಿಶ್ರಶೈವಮಿತಿ ಪ್ರೋಕ್ತಂ** (ಪದ್ಯ ೧೭, ಪು. ೩೨೯)

ಇದಕ್ಕೆ ಪುಷ್ಟಿ ಕೊಡುವಂತೆ ನಮಗೆ ಚಂದ್ರಜ್ಞಾನಾಗಮದಲ್ಲಿ ಇದೇ ವಿಷಯ ಸಿಗುತ್ತದೆ. ಈ ಆಗಮಗಳ ಆಧಾರದ ಮೇಲಿಂದ ಪಾಶುಪತ, ಕಾಳಾಮುಖರು ದೇವಾಲಯಗಳಲ್ಲಿ ನಮಗೆ ಆಗಮೋದಿತ ಮೂರ್ತಿಗಳು ನೋಡಲು ಸಿಗುವುದರಿಂದ ಇವರೇ ಮಿಶ್ರಶೈವರಾಗಿದ್ದರೆಂದರು ಹೇಳಲಡ್ಡಿಯಿಲ್ಲ. ಇವರು ವಿಷ್ಣು, ಶಿವ ಎಂಬ ಭೇದಭಾವ ಮಾಡುತ್ತಿರಲಿಲ್ಲ ಎಂಬುದಕ್ಕೆ ವಾಮನ ಪುರಾಣದಲ್ಲಿ ಈ ಸನ್ನಿವೇಶವಿದೆ.

ಮುನ್ನೊಮ್ಮೆ ಶಿವ ತನ್ನ ಗಣಾಧಿಪನಾದ ನಂದೀಶ್ವರನಿಗೆ ಹೀಗೆ ಹೇಳಿದ : ನಿನ್ನ ಅಧೀನದಲ್ಲಿರುವವರನ್ನೆಲ್ಲ ಇಲ್ಲಿಗೆ ಆಮಂತ್ರಿಸು ಎಂದು. ಅದೇ ಪ್ರಕಾರ ನಂದೀಶ್ವರ ಎಲ್ಲರನ್ನೂ ಕರೆತಂದಾಗ, ಬಂದ ಸಮೂಹದಲ್ಲಿ ಕಾಳಾಮುಖರು, ಜಟಾಧಾರಿಗಳಾಗಿದ್ದು ಕೈಯಲ್ಲಿ ಪಿನಾಕ ಧರಿಸಿದ್ದಾರೆ ಹಾಗೂ ಪಾಶುಪತರೆಂಬುವರು–

**ಮಹಾಪಾಶುಪತ ನಾಮ ಚಕ್ರಶೂಲಧರಸ್ತಥಾ ।**
**ಭೈರವೋ ವಿಷ್ಣುನಾ ಸಾರ್ಧಮಭೇದೇನಾರ್ಚಿತೋ ಹಿ ತೈಃ ॥**

ಇವರಿಗೆ ಪಾಶುಪತರೆಂದು ಹೆಸರು– ಇವರು ಚಕ್ರಶೂಲಧಾರಿಗಳಾಗಿದ್ದು ಭೈರವನ (ಶಿವ) ಜೊತೆ ವಿಷ್ಣುವನ್ನೂ ಅರ್ಚಿಸುತ್ತಾರೆ ಎಂದು ನಂದಿ ಹೇಳಿದ. (ವಾಮನ ಪುರಾಣ, ಅಧ್ಯಾಯ ೬೧ ಶ್ಲೋಕ ೧೨).

ನಂದೀಶ್ವರನ ಈ ಮಾತನ್ನು ಕೇಳಿದ ಶಿವ, ಪೀಠದಿಂದೆದ್ದು ಬಂದು ಮಹಾಪಾಶುಪತರನ್ನಾಲಿಂಗಿಸಲು 'ಇದೇನು ದೇವಾಧಿದೇವಾ, ತಮ್ಮ ಲೀಲೆ ?' ಎಂದು ಆಶ್ಚರ್ಯಚಕಿತರೂ ಭಯಭೀತರೂ ಆದ ಗಣಗಳು ಶಿವನನ್ನು ಪ್ರಶ್ನಿಸಿದರು. ಅದಕ್ಕೆ ಶಿವನ ಉತ್ತರ ಇಂತಿದೆ : "ತಮ್ಮಂತಹ ಗರ್ವಿಷ್ಠರು ಬರಿಯ ಶಿವನನ್ನು ಪೂಜಿಸಿ, ವಿಷ್ಣುವನ್ನು ಅಲ್ಲಗಳೆದಿರುವಿ ರಲ್ಲದೇ ಅವನ ಬಗೆಗೆ ಹೀನಾಯವಾಗಿ ಮಾತನಾಡುವಿರಿ. ಆದರೆ ಮಹಾಪಾಶುಪತರು ಹಾಗಲ್ಲ.

ಅವರು ಶಿವನನ್ನೂ, ವಿಷ್ಣುವನ್ನೂ ಏಕದೃಷ್ಟಿಯಿಂದ ನೋಡುತ್ತಾರೆ" ಎಂದು ಹೇಳಿದ. ಅವರಿಗೆ ಮನದಟ್ಟು ಮಾಡಿಕೊಡಲು ಒಂದು ಕ್ಷಣ ಶಿವ ವಿಷ್ಣುವಿನಂತೆ ರೂಪ ತೋರಿಸಿದರೆ ಮತ್ತೊಂದು ಕ್ಷಣ ಶಿವನಾಗಿರುತ್ತಿದ್ದ.

ಈ ಪುರಾಣ ಹಾಗೂ ಆಗಮಗಳಿಂದ ನಮಗೆ ವಿದಿತವಾಗುವುದೇನೆಂದರೆ ಕಾಳಾಮುಖ, ಪಾಶುಪತರು ಮಿಶ್ರಶೈವರಾಗಿದ್ದು ಶಿವ, ವಿಷ್ಣು ಮುಂತಾದ ಎಲ್ಲ ದೇವತೆಗಳನ್ನು ಸಮಭಕ್ತಿಯಿಂದ ಆರಾಧಿಸುತ್ತಿದ್ದರು ಎಂದು. ಈ ಕಾರಣದಿಂದಲೇ ಇವರ ದೇವಸ್ಥಾನಗಳಲ್ಲಿ ಶಿವ, ವಿಷ್ಣು, ಸೂರ್ಯ, ಶಕ್ತಿ ಮುಂತಾದ ಎಲ್ಲ ವಿಗ್ರಹಗಳು ನೋಡಲು ಸಿಗುತ್ತವೆ. ಈ ಎಲ್ಲ ದೇವವಿಗ್ರಹಗಳನ್ನು ಲಿಂಗಸಮಾನವಾಗಿ ಕಾಣಬೇಕು ಎಂಬ ವಾತುಲಶುದ್ಧಲ್ಲಿ ಹೇಳಿದ್ದನ್ನೇ ಇವರು ಮುಂದುವರಿಸಿಕೊಂಡು ಹೋಗಿ, ಕಾಲಕ್ರಮೇಣ ಎಲ್ಲ ಮೂರ್ತಿಗಳಿಗೆ ಲಿಂಗರೂಪ ಕೊಟ್ಟರು. ಆದರೆ ಸ್ತ್ರೀಮೂರ್ತಿಗಳನ್ನು ಮಾತ್ರ ಅವರವರ ಮೂಲರೂಪದಲ್ಲೇ ಆರಾಧಿಸುತ್ತಿದ್ದರು. ಇದಕ್ಕೆ ಕಾರಣ ಅವರಿಗೆ ಶಿವಶಕ್ತಿಯರು ಪ್ರಧಾನರು. ನಮ್ಮ ಕರ್ನಾಟಕದಲ್ಲಿಯ ಕಾಳಾಮುಖ, ಪಾಶುಪತರ ದೇವಾಲಯ ನೋಡಿದಾಗ ಈ ಮಾತು ನಿಚ್ಚಳವಾಗಿ ಕಂಡುಬರುತ್ತದೆ.

ಕಾಳಾಮುಖ, ಪಾಶುಪತರು ವೇದ, ಉಪನಿಷತ್ತು, ವ್ಯಾಕರಣ, ಯೋಗ ಮುಂತಾದವುಗಳಿಗೆ ಮಹತ್ವಕೊಟ್ಟು ಅವನ್ನು ಅಭ್ಯಸಿಸುತ್ತಿದ್ದರಲ್ಲದೇ ತಾವೂ ಸ್ವಾಧ್ಯಾಯದಲ್ಲಿ ತೊಡಗಿರುತ್ತಿದ್ದರು. ಕನ್ನಡ ಶಿಕ್ಷಣ ಹಾಗೂ ಕೌಮಾರ ವ್ಯಾಕರಣ ಕಲಿಸುವವರಿಗೆ ವಿಶೇಷ ವರಮಾನವಿರುತ್ತಿದ್ದು, ಶಾಸನದಲ್ಲಿ ಇವುಗಳ ಉಲ್ಲೇಖ ಬರುತ್ತದೆ. ಆದ್ದರಿಂದ ಇವರು ಕನ್ನಡದ ಶಿಕ್ಷಣಕ್ಕೆ ಬಹು ಮಹತ್ವ ಕೊಡುತ್ತಿದ್ದರೆಂಬುದಕ್ಕೆ ಅವರು ಬಿಟ್ಟುಹೋಗಿರುವ ಶಾಸನಗಳೇ ಸಾಕ್ಷಿ. ಈ ಶಾಸನಕವಿಗಳೇ ಹೇಳುವಂತೆ ಅವು ಕಿರು ಕಾವ್ಯಗಳಾಗಿದ್ದು ಅಷ್ಟಾದಶ ವರ್ಣನೆ ಹಾಗೂ ಅಷ್ಟರಸಗಳಿಂದ ತುಂಬಿ ತುಳುಕುತ್ತವೆ. ಆ ಶಾಸನಗಳನ್ನು ಓದಿ ಅರ್ಥಮಾಡಿಕೊಳ್ಳಬೇಕಾದರೆ ಸಂಸ್ಕೃತ, ಸಾಹಿತ್ಯ, ಪುರಾಣಗಳಲ್ಲದೇ ಓದುಗರಿಗೆ ಹಳಗನ್ನಡ ಭಾಷಾಪರಿಜ್ಞಾನ ಸಾಕಷ್ಟಿರಬೇಕು. ಅವರ ಶಾಸನ ಓದಿ ಅರ್ಥಮಾಡಿಕೊಡುವಾಗ ಅವರ ದೇವಸ್ಥಾನದ ಜಟಿಲ ಶಿಲ್ಪಶೈಲಿಯು ನಿಚ್ಚಳವಾಗಿ ತಿಳಿದುಬರುತ್ತದೆ. ಕೆಲವೊಮ್ಮೆ ಶಾಸನಗಳಲ್ಲಿ ಅವರ ಪೂಜಾಪದ್ಧತಿಯ ವಿಷಯ, ಆಗಮಪುರಾಣಗಳಲ್ಲಿ ಬರುವ ವಿಷಯ ಇತ್ಯಾದಿ ತಿಳಿಯುವುದರಿಂದ ಅವರು ಯಾವ ಪುರಾಣ, ಆಗಮ ಉಪಯೋಗಿಸಿ ಈ ದೇವಸ್ಥಾನ ಕಟ್ಟಿಸಿ ಊರ್ಜಿತಗೊಳಿಸಿದ್ದರೆಂಬುದೂ ನಮಗರ್ಥವಾಗುತ್ತದೆ. ಶಾಸನ ಸಾಹಿತ್ಯವು ಕರ್ನಾಟಕಕ್ಕೆ ಇವರ ದೊಡ್ಡ ಕೊಡುಗೆ.

ಅಂದಿನ ದೇವಾಲಯಗಳ ಅವಶೇಷಗಳು ನೋಡಲು ಸಿಗುತ್ತವೆ. ಕಾಳಾಮುಖ, ಪಾಶುಪತರು ಪ್ರತಿನಿತ್ಯ ಸಾವಿರದೊಂದು ತಾವರೆಗಳಿಂದ ಲಿಂಗವನ್ನರ್ಚಿಸುತ್ತಿದ್ದರು ಎಂದು ಶಾಸನಗಳು ಹೇಳುತ್ತವೆ. ಅದಕ್ಕಾಗಿ ದೇವಾಲಯದ ಪಕ್ಕದಲ್ಲಿ ದೊಡ್ಡದೊಂದು ಕೊಳವಿರುವುದನ್ನು ನಾವು ಈಗಲೂ ನೋಡಬಹುದು.

ಪಾಶುಪತರು, ಕಾಳಾಮುಖರು ಶಿವವಿಷ್ಣುವಿನಲ್ಲಿ ಭೇದಗೈಯ್ಯದೇ ಎಲ್ಲ ದೇವರನ್ನೂ ಲಿಂಗವೆಂದು ತಿಳಿದು ಪೂಜಿಸುತ್ತಿದ್ದರು. ಕಾಲಕ್ರಮೇಣ ಎಂದರೆ ಆರನೆಯ ವಿಕ್ರಮನ ಕಾಲದ ಕೊನೆಕೊನೆಗೆ ಹಾಗೂ ತದನಂತರ ಕಟ್ಟಿದ ದೇವಾಲಯಗಳಲ್ಲಿ 'ಸರ್ವಂ ಲಿಂಗಮಯಂ' ಎಲ್ಲವೂ ಲಿಂಗವೇ ಎಂಬ ಭಾವನೆ ಹೆಚ್ಚು ಹೆಚ್ಚು ದೃಢವಾಗತೊಡಗಿದಂತೆ ಗರ್ಭಗೃಹಗಳಲ್ಲಿ ಲಿಂಗಗಳನ್ನು ಸ್ಥಾಪಿಸುವುದು ವಾಡಿಕೆಯಾಯಿತು. ಅದು ವಿಜಯನಗರದಿಂದಾಳಿದ ಕರ್ನಾಟಕದರಸರ (ಎಂದರೆ ವಿಜಯನಗರದರಸರ) ಕೊನೆಯವರೆಗೂ ನಡೆದುಬಂದಿತು. ಮೂರ್ತಿಗಳನ್ನೇ ಸ್ಥಾಪಿಸಲಿ ಅಥವಾ ಲಿಂಗವನ್ನೆ ಸ್ಥಾಪಿಸಿರಲಿ ಆದರೆ ಉದ್ದುದ್ದದ ಶಾಸನಗಳನ್ನು ಬರೆದಿರಿಸಲು ಮಾತ್ರ ಅವರು ಹಿಂದುಮುಂದು ನೋಡುತ್ತಿರಲಿಲ್ಲ.

ಪ್ರತಿಯೊಂದು ದೇವಸ್ಥಾನದಲ್ಲೂ ದೊಡ್ಡ ದೊಡ್ಡ ಶಾಸನಗಳನ್ನು ನಿಲ್ಲಿಸುತ್ತಿದ್ದರು. ಅವು ಚಿಕ್ಕ ಕಾವ್ಯಗಳಾಗಿದ್ದವು. ಆಗಿನ ಬಹುಜನರು ಕವಿಗಳಾಗಿದ್ದರು. ಎಲ್ಲರಿಗೂ ರಾಜಾಶ್ರಯ ಸಿಗುವ ಸೌಭಾಗ್ಯ ಇರಲಿಲ್ಲ. ಅಂತಹವರು ಸ್ಥಳೀಯ ಮಾಂಡಲೀಕರ ಅಥವಾ ಆಳುವ ಅಧಿಕಾರಿಗಳ ಆಸ್ಥಾನದಲ್ಲಿದ್ದುಕೊಂಡು ಒಂದೋ ಎರಡೋ ಶಾಸನ ಬರೆದು ತಮ್ಮ ಪಾಂಡಿತ್ಯ, ಕಾವ್ಯಚಾತುರ್ಯ ಪ್ರದರ್ಶಿಸುತ್ತಿದ್ದರು. ಅವು ಕಾವ್ಯಮಯವಾಗಿದ್ದರಿಂದ ಅವನ್ನು ಹಾಡುವವರೂ ಅದೇ ಆಸ್ಥಾನದಲ್ಲಿರುತ್ತಿದ್ದರು. ಓದುವವರು, ಹೇಳುವವರು ಕೆಲವೊಮ್ಮೆ ಹಾಡುವವರು ಎಂದೂ ಅವರನ್ನು ಕರೆಯುತ್ತಿದ್ದರು. ಓದುವವರು, ಹೇಳುವವರು ಮುಂತಾದ ನಿರ್ದಿಷ್ಟ ಪದಗಳ ಬಳಕೆಯಿಂದಾಗಿ ಆಗ ಈ ಶಾಸನ ಕಾವ್ಯ ಹಾಡುವುದು ಬಹು ಪ್ರಚಲಿತವಾದ ಕಲೆಯಾಗಿತ್ತು ಎಂದರೇನಡ್ಡಿಯಿಲ್ಲ. ಈಗ ಅದು ಹೇಳಹೆಸರಿಲ್ಲದಂತೆ ಮರೆತುಹೋಗಿದೆ.

ಈ ಶಾಸನಕವಿಗಳಿಗೆ ತಮ್ಮ ದೇಶ, ಊರು, ನದಿ, ಕೆರೆ, ಅಲ್ಲಿಯ ವೇಶ್ಯಾವಾಟಿಕೆ ಇವೆಲ್ಲವೂ ಬಹು ಮೆಚ್ಚಿನ ವಿಷಯಗಳಾಗಿದ್ದವೆಂದು ಹೇಳಬಹುದು. ಅವುಗಳ ಬಗೆಗೆ ಅವರಿಗೆ ತುಂಬ ಅಭಿಮಾನವಿರುತ್ತಿತ್ತು. ಇದನ್ನು ಸ್ಪಷ್ಟೀಕರಿಸಲು ನಾವು ರಟ್ಟೆಹಳ್ಳಿ ಹಾಗೂ ಹರಳಹಳ್ಳಿ ಶಾಸನದಿಂದ ಆಯ್ದ ಕೆಲ ಪದ್ಯಗಳನ್ನು ಉದಾಹರಿಸುತ್ತೇವೆ.

ಹರಳಹಳ್ಳಿ ರಾಣೆಬೆನ್ನೂರ ತಾಲೂಕಿನ ಗುತ್ತಲದ ಸಮೀಪದ ಊರು. ಗುತ್ತಲ ಈಗ ಅದು ಒಂದು ಚಿಕ್ಕ ಪಾಕಶ್ಚಿತ್ ಊರಾಗಿದ್ದರೂ ಕಲ್ಯಾಣ ಚಾಲುಕ್ಯ ಅರಸನೆಯ ವಿಕ್ರಮಾದಿತ್ಯನ ಕಾಲಕ್ಕೆ ಗುತ್ತಲದ ಮಾಂಡಲಿಕರ ರಾಜಧಾನಿಯಾಗಿತ್ತು. ಹರಳಹಳ್ಳಿ ತುಂಗಭದ್ರಾ ತೀರದಲ್ಲಿದೆ ಹಾಗೂ ಅದು ರಾಜಧಾನಿಯಾಗಿತ್ತು. ಹರಳಹಳ್ಳಿ ತುಂಗಭದ್ರಾ ತೀರದಲ್ಲಿದೆ ಹಾಗೂ ಅದು ರಾಜಧಾನಿ ಗುತ್ತಲದ ಒಂದು ಭಾಗವಾಗಿತ್ತು. ತುಂಗಭದ್ರೆಯ ಹಿರಿಮೆಯನ್ನು ಕವಿ ಹೀಗೆ ಹೇಳುತ್ತಾನೆ.

**ಕುಡಿಯ ಜಳಮೆ ಗೊಟ್ಟಂ**<br>
**ಗಡಿಯನೆ ಪಾಪಾಪಹಾರಮಂ ಮಾಳ್ಕುಮೆನಲ್ ।**<br>
**ಪಡಿಯುಂಟೆ ಪೇಳ್ಗೊಟ್ಟಂ**<br>
**ಗಡಿಯೆ ಪೆಸರಿಂತಡಿಯೊಳಿರ್ಪುದಲ್ತೆ ಗ್ರಾಮಂ ॥**

**(SII ಪು. ೨೯೬ ಪದ್ಯ ೭೫)**

ಒಂದು ಗುಟುಕು ನೀರು ಕುಡಿಯಲೆಂದು ನೀರಿನಲ್ಲಿ ಅಡಿ ಇಟ್ಟರೆ, ಆ ತುಂಗಭದ್ರೆ ನಿಮ್ಮ ಪಾಪಗಳನ್ನೆಲ್ಲ ಅಪಹರಿಸಿ ಬಿಡುವಳು ಎಂಬುದು ಇಲ್ಲಿರುವ ಅರ್ಥ. ಆದರೆ ಇದರಲ್ಲಡಗಿರುವ ಧ್ವನಿ ಬೇರೆ. ಗಂಗೆಯಲ್ಲಿ ಮಿಂದರೆ ಪಾಪಗಳೆಲ್ಲ ಪರಿಹಾರವಾಗುವವು ಎಂಬುದು ಲೋಕವಿದಿತ. ಉದ್ದೇಶಪೂರ್ವಕವಾಗಿ ನೀವು ಕಾಶಿಗೆ ಹೋಗಿ ಗಂಗೆಯಲ್ಲಿ ಮಿಂದಾಗ ಮಾತ್ರ ನಿಮ್ಮ ಪಾಪ ಪರಿಹಾರವಾಗುತ್ತದೆ. ಆದರೆ ತುಂಗಭದ್ರೆಯ ಮಾತು ಹಾಗಲ್ಲ. ಬಾಯಾರಿಕೆ ತೀರಿಸಿಕೊಳ್ಳಲು ಒಂದು ಗುಟುಕು ನೀರಿಗಾಗಿ ನದಿಯಲ್ಲಿಳಿದರೆ ಅವಳು ಬಾಯಾರಿಕೆ ಹಿಂಗಿಸುವುದಲ್ಲದೇ ಪಾಪಗಳನ್ನೂ ಅಪಹರಿಸಿ ಕೊಂಡು ಹೋಗುವವಳು, ಎಂದ ಬಳಿಕ ತುಂಗಭದ್ರೆ ಗಂಗೆಗಿಂತ ಮೇಲು ಅಲ್ಲವೇ ಎಂಬುದೇ ಇಲ್ಲಿಯ ಧ್ವನಿ.

ಇನ್ನೊಂದು ಪದ್ಯ ತೆಗೆದುಕೊಂಡರೆ,

**ಶ್ರೀವರನೊಲ್ದು ರಂಗಬಲಿಯಂ ಪದರಂಗದೊಳಾಗುಮಾಡೆ ನೇ-**<br>
**ತ್ರಾವೃತರೋಚಿಯಿಂ ಪದನಖಪ್ರತಿಬಿಂಬಿತ ರೂಪಶೋಭೆಸ- ।**<br>
**ದ್ಭಾವದೆ ವಾಮನಂಬೋಲಿರೆ ಭೂವಧುವೆತ್ತನದಾವನಿಂದವೆಂ-**<br>
**ದಾ ವಿಭು ವಿಕ್ರಮೇಶನೊಲವಿಂ ಪರಿಪಾಳಿಕೆ ವಿಕ್ರಮಾರ್ಕನಂ ॥ ೩ ॥**

ಶ್ರೀವರ ಎಂದರೆ ವಿಷ್ಣು ಸ್ವಸಂತೋಷದಿಂದ ತನ್ನ ರಂಗುರಂಗಿನ ಪಾದಗಳಿಗೆ ಮಾಡಿಕೊಂಡು, ಆತನ ನೇತ್ರದ ಸುತ್ತಣ ಹೊಳಪಿನಿಂದ ಆತನ ಪದನಖಗಳಲ್ಲಿ ಕಂಡುಬಂದ ಆ ರೂಪ ವಾಮನನಂತಿರಲು ಈ ಭೂವಧುವನ್ನು ಆದಾವನಿಂದ ಉದ್ಧರಿಸುವುದು ಸಾಧ್ಯ ಎಂದು ಚಿಂತಿಸಿ ಈ ತ್ರಿಲೋಕದ ವಿಭು ವಿಕ್ರಮೇಶ ವಿಕ್ರಮಾರ್ಕನನ್ನು ರಕ್ಷಿಸಲಿ ಎಂಬುದು ಮೇಲಿನರ್ಥ. ಆದರೆ ಒಳಧ್ವನಿ ಬೇರೆಯೇ ಉಂಟು. ಈ ಒಂದು ಚಿಕ್ಕ ಪದ್ಯದಲ್ಲಿ :

೧) ಶಿವನು ಹೇಗೆ ಅಪಸ್ಮಾರಪುರುಷನ ಮೇಲೆ ತಾಂಡವ ನೃತ್ಯ ಮಾಡುವನೋ ಅದೇ ರೀತಿ ವಿಷ್ಣು ಇಲ್ಲಿ ಬಲಿಯ ತಲೆಯನ್ನು ರಂಗಸ್ಥಳವನ್ನಾಗಿ ಮಾಡಿಕೊಂಡು ನಾಟ್ಯವಾಡಿದ. ಆಗ ಆತನ ಕಣ್ಣಿನ ಹೊಳಪು ಆತನ ಪಾದದ ನಖಗಳಲ್ಲಿ ವಾಮನನ ರೂಪವನ್ನು ಪ್ರತಿಬಿಂಬಿಸಿತು. ವಾಮನನ ಮತ್ತೊಂದು ಹೆಸರು ವಿಕ್ರಮ ಎಂದು. ಅಂಥಹ ವಿಕ್ರಮೇಶ ವಿಕ್ರಮನನ್ನು ಪರಿಪಾಲಿಸಲಿ.

೨) ವಿಕ್ರಮೇಶ ಎಂಬುದು ಸೋಮನಾಥೇಶ್ವರ ದೇವಾಲಯದ ಒಂದು ಗರ್ಭಗೃಹದಲ್ಲಿ ಗುತ್ತಲದ ದೊರೆ ತನ್ನ ತಂದೆ ಹೆಸರಿನಲ್ಲಿ ಸ್ಥಾಪಿಸಿದ ಲಿಂಗದ ಹೆಸರು. ವಿಕ್ರಮೇಶ ಶಿವ ವಿಕ್ರಮಾರ್ಕನೆಂಬರಸನನ್ನು ಪರಿಪಾಲಿಸಲಿ ಎಂಬುದು ಎರಡನೆಯ ಅರ್ಥ.

೩) ಹರಳಹಳ್ಳಿಯ ಸೋಮನಾಥ ದೇವಸ್ಥಾನ ಏಕಗರ್ಭಗೃಹ ವುಳ್ಳದ್ದಾಗಿತ್ತು. ಮುಂದೆ ಗುತ್ತಲದ ಮಾಂಡಲಿಕರಿಗೆ ಕಾಳಾಮುಖಯತಿಗಳು ರಾಜಗುರುಗಳಾದಾಗ, ಕಲ್ಯಾಣ ಶಕ್ತಿಯ ಉಪದೇಶದ ಮೇರೆಗೆ ಅರಸು ದೇವಾಲಯವನ್ನು ತ್ರಿಕೂಟಾಚಲವಾಗಿ ಮಾಡಿಸಿ ಗುತ್ತೇಶ್ವರ, ವಿಕ್ರಮೇಶ್ವರ ಎಂದು ಎರಡು ಲಿಂಗಗಳನ್ನು ಸೋಮೇಶ್ವರನ ಉತ್ತರ ಹಾಗೂ ದಕ್ಷಿಣಕ್ಕೆ ಸ್ಥಾಪಿಸಿದ. ವಿಕ್ರಮೇಶ ವಿಕ್ರಮನನ್ನು ಕಾಪಾಡಲಿ ಎಂದರೆ ವಿಕ್ರಮೇಶ ಎಂಬ ಹೆಸರುಳ್ಳ ಶಿವ ವಿಕ್ರಮಾರ್ಕನೆಂಬ ಹೆಸರುಳ್ಳ ವಿಷ್ಣುವನ್ನು ಕಾಪಾಡಲಿ ಎಂಬರ್ಥವೂ ಬರಲು ಸಾಧ್ಯವಿದೆ. ಯಾಕೆಂದರೆ ಕಾಳಾಮುಖರಿಗೆ ಶಿವನೇ ಮುಖ್ಯ. ಉಳಿದ ದೇವತೆಗಳು ಆತನ ಅಂಶಗಳು. ಆದ್ದರಿಂದ ಶಿವನೇ ಎಲ್ಲರನ್ನೂ ರಕ್ಷಿಸಲಿ ಎಂದೂ ಹೇಳುವ ಅರ್ಥ ಬರುತ್ತದೆ.

ಮತ್ತೊಂದು ಶಾಸನ :

**ಲೋಳುವಿಲೋಚನಂ ಕುಸುಮಬಾಣನ ಶಾತಶರಾಳಿ ವಕ್ರಿತ**<br>
**ಭ್ರೂಲಲಿತಾಸಿತೇಕ್ಷು ಕೃತಚಾಪನ ಕುಂಡಳಿತೋರ್ಧ್ವಕಾರ್ಮುಕಂ ।**<br>
**ಬಾಳಮೃಣಾಲದೋರ್ಲ್ಲತೆ ರತೀಶನ ಪಾಶವೆನಲ್ಕನೋಜನ**<br>
**ಸ್ತ್ರಾಲಯ ಲೀಲೆಯಂ ಗೆಲೆ ವಿಡಂಬಿಪುದಲ್ಲಿಯ**

**ಕಾಮಿನೀಜನಂ ॥ (ರಟ್ಟಿಹಳ್ಳಿ ೩೨, ಪದ್ಯ ೧೮)**

ರಟ್ಟಿಹಳ್ಳಿಯ ಈ ಶಾಸನದಲ್ಲಿ ವನಿತಾವೃಂದದ ವರ್ಣನೆ ಈ ರೀತಿ ಕೊಟ್ಟಿದ್ದಾನೆ ಕವಿ. ರಟ್ಟಿಹಳ್ಳಿ ಕದಂಬರ ರಾಜಧಾನಿ ಯಾಗಿತ್ತು. ಅವರು ಗುತ್ತಲದ ಗುತ್ತರ ಸಮಕಾಲೀನರಾಗಿದ್ದರು. ಅಲ್ಲದೇ ಎರಡೂ ಮನೆತನದವರಿಗೆ ಕಿಟ್ಟಗಾವಿ ಸಂತತಿಯ ಕಾಳಾಮುಖಯತಿಗಳೇ ರಾಜಗುರುಗಳಾಗಿದ್ದರು. ರಟ್ಟಿಹಳ್ಳಿಯ ಕಾಮಿನೀಜನರ ಚಂಚಲನೋಟವು ಕುಸುಮಬಾಣ ಎಂದರೆ ಕಾಮನ ಬಾಣದಂತಿದ್ದು, ಅವರ ವಕ್ರ ಹುಬ್ಬುಗಳು ಕಪ್ಪು ಕಬ್ಬಿನ ಬಿಲ್ಲು ; ಅವರ ಮೃದು ನೀಳವಾದ ಲತೆಯಂತಿರುವ ತೋಳುಗಳು ಕಾಮನ ಪಾಶ ; ಈ ರೀತಿ ಅಲ್ಲಿಯ ಸ್ತ್ರೀಯರು

ಕಾಮನ ಅಸ್ತ್ರಾಲಯವನ್ನೂ ಮೀರಿದವರಾಗಿದ್ದು ಆತನನ್ನು ವಿಡಂಬಿಸುತ್ತಿದ್ದರು.

ಈ ಒಂದು ಪದ್ಯದಲ್ಲಿ ರಟ್ಟಿಹಳ್ಳಿಯ ಕಾಮಿನೀಜನರ ವರ್ಣನೆಯಲ್ಲಿ ಎರಡು ತರಹದ ರಸ ಹೊಮ್ಮಿ ಹರಿಯುತ್ತಿದೆ. ಅದರಲ್ಲೂ ಶೃಂಗಾರ, ಅದಕ್ಕೆ ಗೌಣವಾಗಿ ಬರುವ ನವಿರಾದ ಹಾಸ್ಯವನ್ನು ಕವಿ ಚಮತ್ಕಾರಿಕವಾಗಿ ಕೂಡಿಸಿದ್ದಾನೆ.

ಈ ರೀತಿ ಶಾಸನಗಳನ್ನು ನೋಡುತ್ತಿರಲಾಗಿ ಅವುಗಳ ಅಭ್ಯಸನ ಎಷ್ಟು ಮುಖ್ಯ, ಸ್ವಾರಸ್ಯಕರ ಹಾಗೂ ಮನೋರಂಜನ ಕರವಾದದ್ದೆಂದು ಮನವರಿಕೆಯಾಗುವುದು. ಶಾಸನಗಳ ನ್ನೋದುವವರಿಗೆ ಓದುತ್ತ ಹೋದಂತೆ ಶಾಸನಕವಿಗಳು ತಮ್ಮ ರಾಜ್ಯ, ಊರು, ರಾಜ್ಯಾಧಿಕಾರಿ, ಅರಸರು, ಅವರ ಪತ್ನಿಯರು ಇತ್ಯಾದಿ ಎಲ್ಲದರ ಬಗೆಗೆ ಎಷ್ಟೊಂದು ಅಭಿಮಾನದಿಂದ ಬರೆಯುತ್ತಿದ್ದರೆಂದರೆ ಅದು ಓದುಗರಲ್ಲಿಯೂ ದೇಶ, ಭಾಷಾಭಿಮಾನ ಮೂಡಿಸುತ್ತವಲ್ಲದೇ ತಾವೂ ಅದೇ ರೀತಿ ಬರೆಯಬೇಕು ಎಂಬ ಅಭಿಲಾಷೆಯನ್ನೂ ಹುಟ್ಟಿಸುತ್ತದೆ. ಈ ಶಾಸನಗಳನ್ನು ಓದುತ್ತ ಹೋದರೆ ನಮ್ಮ ಕನ್ನಡ ಭಾಷೆ, ಸಾಹಿತ್ಯ ಎಷ್ಟು ಸಮೃದ್ಧವಾಗಿದೆ ಎಂಬುದು ಮನವರಿಕೆ ಯಾಗುತ್ತದೆ.

ಜೂನ್ ತಿಂಗಳಿನಲ್ಲಿ ಪ್ಯಾರಿಸ್ಸಿನ ಸಾರ್ಬಾನ್ ವಿದ್ಯಾಲಯದ (Epigraphic Indienne) ವಿಭಾಗದಲ್ಲಿ ತಮಿಳು ಶಾಸನದ ಪ್ರಾಧ್ಯಾಪಕರಾಗಿ ಕೆಲಸ ಮಾಡುವ ಪ್ರೊ. ಮುರುಗಯ್ಯನ್ ಅವರು ನನಗೆ ಕನ್ನಡ ಶಾಸನಗಳ ಬಗೆಗೆ ಮಾತನಾಡಲು ಕರೆಸಿದ್ದರು. ನನ್ನ ಭಾಷಣದ ಕೊನೆಗೆ ಅವರು ಹೇಳಿದ್ದೇನೆಂದರೆ 'ನಮ್ಮ ತಮಿಳು ಶಾಸನಗಳು ನಿಮ್ಮ ಕನ್ನಡ ಶಾಸನಗಳಷ್ಟು ಕಾವ್ಯಮಯ ಹಾಗೂ ಸಂಗೀತ ಮಯವಾಗಿಲ್ಲ. ಕನ್ನಡ ಶಾಸನಕ್ಕೆ ಹೋಲಿಸಿ ನೋಡಿದರೆ ತಮಿಳು ಶಾಸನಗಳು ತುಂಬ ನೀರಸ' ಎಂದು ಹೇಳಿದ್ದನ್ನು ಕೇಳಿದಾಗ ನನ್ನ ಸಂತೋಷಕ್ಕೆ ಎಲ್ಲೆ ಇಲ್ಲದಂತಾ ಯಿತು. ಅದರಲ್ಲೂ ತಮಿಳರ ಬಾಯಿಂದ ಈ ಮಾತು ಬರಬೇಕಾದರೆ ನಿಜವಾಗಿಯೂ ನಮ್ಮ ಕನ್ನಡ ಶಾಸನ ಸಂಪದ ತುಂಬ ಶ್ರೀಮಂತವಾದದ್ದು ಎಂದು ತಲೆಯೆತ್ತಿ ಹೇಳುವಂತಾಯಿತು.

ಎದ್ದೇಳಿ ಕನ್ನಡಿಗರೇ ಶಾಸನ ಓದಿರಿ, ತಿರುಳನ್ನು ಭಾರತಕ್ಕಷ್ಟೇ ಅಲ್ಲ ಸಂಪೂರ್ಣ ವಿಶ್ವಕ್ಕೇ ಮನದಟ್ಟು ಮಾಡಿಕೊಡಿರಿ. ಈ ಶಾಸನದ ಅಧ್ಯಯನದ ಜೊತೆ ಶಾಸನಕ್ಕೆ ಸಂಬಂಧಿಸಿದ ದೇವಾಲಯಗಳನ್ನು ಜೀರ್ಣೋದ್ಧಾರ ಗೊಳಿಸಿರಿ. ಇತಿಹಾಸವೆಂದರೆ ಉಳಿಸುವ ಕಾರ್ಯ 'oneday ಮಾತ್ರಂ' ಆಗದೇ ವಂದೇ ಮಾತರಂ ಎಂದು ಜನನೀ, ಜನ್ಮಭೂಮಿಯನ್ನು ನಮಿಸಿ ದೇವಾಲಯಗಳನ್ನು ಮತ್ತೆ ಮೊದಲಿನಂತೆ ಉಜ್ವಲಗೊಳಿಸಿರಿ.

ಹಿಂದೆ ಬ್ರಿಟಿಷರ ದಬ್ಬಾಳಿಕೆಯ ಕಾಲದಲ್ಲಿ ಅವರು ಭಾರತದಲ್ಲಿ ಸ್ಥಿರವಾಗಿ ಕಾಲೂರಿ ನಿಲ್ಲಬೇಕೆಂದು ಬಯಸುತ್ತಿದ್ದರು. ಆದರೆ ಆಗಿನ ಭಾರತೀಯ ಪೀಳಿಗೆ ಬ್ರಿಟಿಷರ ಸಂಸ್ಕಾರ, ಸಂಸ್ಕೃತಿಗೆ ಮಾರುಳಾಗದೇ, ಅವರಿಗೆ ತಲೆಬಾಗದೇ ತಮ್ಮ ಭಾರತೀಯತ್ವದ ಬಗೆಗೆ ಅತ್ಯಂತ ಹೆಮ್ಮೆಯಿಂದ ತಲೆಯೆತ್ತಿ ಓಡಾಡುತ್ತಿದ್ದರು. ಇದು ಬ್ರಿಟಿಷರಿಗೆ ತಲೆನೋವಾಯಿತು. ಇವರು ಇಷ್ಟೊಂದು ಅಭಿಮಾನದಿಂದ, ತಲೆಬಾಗಿಸದೇ ಇರುವುದರ ಮೂಲಕಾರಣವೇನು ಎಂದು ಕೆದಕಿ ನೋಡಲು ತಮ್ಮ ಕೆಲ ಅಧಿಕಾರಿಗಳನ್ನು ವೀಕ್ಷಣೆಗೆ ಕಳಿಸಿದರು– ಭಾರತದ ಬೇರೆಬೇರೆ ದಿಕ್ಕುಗಳಿಗೆ. ಆದರೆ ಅವರೆಲ್ಲ ಬರೆದು ಕೊಟ್ಟ ವರದಿಯ ಧಾಟಿ ಮಾತ್ರ ಒಂದೇ ಇದ್ದಿತು. ಪ್ರತಿ ಇಪ್ಪತ್ತು ಮೂವತ್ತು ಮೈಲಿಗೊಂದರಂತೆ ಪಾಠಶಾಲೆಗಳಿವೆ. ಅಲ್ಲಿ ಸಂಸ್ಕೃತ, ಕನ್ನಡ ಹೇಳುವ ಪಂಡಿತರಿದ್ದಾರೆ. ಅವರಿಗೆ ಪಾಠಶಾಲೆ ಕೊಡುವ ಸಂಬಳ ಚಿಕ್ಕದಾಗಿದ್ದರೂ ಮಕ್ಕಳಿಗೆ ಮಾತ್ರ ತಮ್ಮ ದೇಶ, ಸಂಸ್ಕೃತಿಯ ಬಗೆಗೆ ಅಭಿಮಾನ ತುಂಬಿ, ಉಕ್ಕೇರಿಬರುವಂತೆ ಪಾಠ ಮಾಡುತ್ತಾರೆ. ನಾವಿಲ್ಲಿ ಸ್ಥಿರವಾಗಿ ಕಾಲೂರಿ ನಿಲ್ಲಬೇಕೆಂದರೆ ಈ ಪಾಠಶಾಲೆಗಳನ್ನು ಮುಚ್ಚಿಸಬೇಕು, ಎಂದು. ಇದು ನಡೆದದ್ದು ೧೯೦೦ರ ಸುಮಾರಿಗೆ.

ಸುಮಾರು ೧೯೦೦ರ ಸುಮಾರಿಗೆ ಸಂಸ್ಕೃತ ಹಾಗೂ ಭಾರತೀಯ ಸಾಹಿತ್ಯ ಸಂಸ್ಕೃತಿಗೆ ಬಿದ್ದ ಈ ಕೊಡಲಿ ಏಟಿನಿಂದ ನಾವು ಚೇತರಿಸಿಕೊಳ್ಳಲಾಗುತ್ತಿಲ್ಲ. ಅದರ ಬದಲು ಆ ಕೊಡಲಿ ಏಟಿನ ಗಾಯವನ್ನು ಇನ್ನೂ ಬೆಳೆಸಿ ಅದು ಸತ್ತು, ಕೊಳೆತುಹೋಗುವಂತೆ ಮಾಡುತ್ತಿದ್ದೇವೆ.

ಈ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಿ ಅವಕ್ಕೆ ಸಂಬಂಧಿಸಿ ಮಠ ಎಂದರೆ ಶಾಲೆಗಳನ್ನು ಪುನರುಜ್ಜೀವನಗೊಳಿಸಬೇಕು. ಅಲ್ಲದೇ ಗ್ರೀಕ್, ಲ್ಯಾಟಿನ್ ಭಾಷೆಗಳ ಸೋದರಿಯಾದ ಸಂಸ್ಕೃತ ಹಾಗೂ ನಮ್ಮ ಮಾತೃಭಾಷೆಯಾದ ಕನ್ನಡ ಕಲಿಸುವಂತೆ ಮಾಡಬೇಕೆಂಬುದು ಶಾಸನಗಳನ್ನು ಓದಿ ಸಂಸ್ಕೃತಿಯ ಬಗೆಗೆ ಜನಕ್ಕೆ ಮನದಟ್ಟಾಗುವಂತೆ ಹೇಳಬೇಕು. ಇತಿಹಾಸಕಾರರು ಕಾರ್ಯಕ್ಕಿಳಿದಾಗಲೇ ನಮ್ಮ ಭಾರತದ ಭವಿತವ್ಯ ಮತ್ತೆ ಉನ್ನತವಾಗುವುದೆಂಬುದರಲ್ಲಿ ಸಂಶಯವಿಲ್ಲ.

ಈ ಎಲ್ಲ ಕೆಲಸದ ಜೊತೆ ಇನ್ನೂ ಒಂದು ವಿಷಯದ ಬಗೆಗೆ ಮರೆಯದೇ ಗಮನಹರಿಸಬೇಕು. ಅದೆಂದರೆ ಪ್ರತಿಯೊಂದು ದೇವಸ್ಥಾನಕ್ಕೆ, ಊರಿಗೆ ಸಂಬಂಧಿಸಿದ ಕೆರೆಗಳ ಹೂಳು ತೆಗೆಸಿ, ಮತ್ತೆ ಊರಿಗೆ ನೀರಿನ ಸರಬರಾಜು ಆಗುವಂತೆ ಮಾಡುವ ಉದ್ದೇಶವೂ ಇರಲಿ. ಇತ್ತೀಚೆಗೆ ಅಲ್ಲಲ್ಲಿ dam ಕಟ್ಟುವ ಪಿಡುಗು ಬಡಿದಿದೆ ನಮ್ಮ ಜನಕ್ಕೆ. ಆದರೆ ಈ

ಆಣೆಕಟ್ಟು ಕಟ್ಟುವದರಿಂದ ಲಾಭಕ್ಕಿಂತ ಅನಾಹುತಗಳು ಜಾಸ್ತಿಯಾಗುತ್ತಿವೆ. ಕೆರೆ ಬತ್ತಲು ಬಿಟ್ಟು, ನದಿನೀರಿಗೆ ಅಡ್ಡಿ ಹಾಕುವುದರಿಂದ ಭೂಮಿಯ ಸಮತೋಲ ಹಾಳಾಗುತ್ತದಲ್ಲದೇ ಅತಿ ಭಯಂಕರದ ಭೂಕಂಪಗಳಿಗೆ ಅನುವು ಮಾಡಿಕೊಡುತ್ತದೆ. ಹೇಗೆಂದರೆ ಆಣೆಕಟ್ಟಿನ ನೀರು ಗುಪ್ತಗಾಮಿನಿಯಾಗಿ ಭೂಮಿಯ ಒಳಗೆ ಎಲ್ಲೆಲ್ಲಿ ಅದಕ್ಕೆ ಸ್ಥಳ ಸಿಗುವುದೋ ಅಲ್ಲಿಗೆ ಹರಿದು ಹೋಗುವುದು. ಭೂಗತವಾಗಿ ಅನೇಕ ವಾಯು, ಸ್ಫೋಟಾನಿಲಗಳು ಇರುತ್ತವೆ. ಅವಕ್ಕೆಲ್ಲಿಯಾದರೂ ನೀರಿನ ಜೊತೆ ಸಂಪರ್ಕ ಬಂದರೆ ಭೂಕಂಪವಾಗುವ ಸಂಭವ ಇರುತ್ತವೆ. ಅಲ್ಲಲ್ಲಿ ಕೆರೆಗಳಿದ್ದರೆ ವಾಯುವಿನ ಚಲನವಲನಕ್ಕೆ ಅಷ್ಟೊಂದು ಎಡೆ ಇರುವುದಿಲ್ಲ ಹಾಗೂ ಭೂಮಿಯ ಮೇಲೆ ಕೆರೆ, ನದಿಗಳ ನೀರಿನಿಂದಾಗಿ ಸಮತೋಲನವಿರುತ್ತದೆ. ಕೆರೆ ಬತ್ತಿಸಿ, ಅಲ್ಲೇ ಮನೆ, ಮಾರುಕಟ್ಟೆ ಕಟ್ಟಿ ಬೇರೆಡೆ ಹರಿಯುವ ಭೂಮಿಯ ಸಮತೋಲ ತಪ್ಪಿ ಅತ್ಯಂತ ಭೀಕರ ಭೂಕಂಪಗಳು ಆಗುವ ಸಂಭವವಿದೆ. ಹಿಂದಿನ ವಿಜ್ಞಾನಿಗಳು ಎಲ್ಲಿ ಭೂಕಂಪವಾಗುವುದಿಲ್ಲ ಎಂದು ಹೇಳುತ್ತಿದ್ದರೋ ಅಲ್ಲೆಲ್ಲ– ಅದರಲ್ಲೂ ಸಮಪಾತಳಿ ಪ್ರದೇಶದಲ್ಲಿ – ಅತಿ ಭಯಂಕರವಾದ ಭೂಕಂಪಗಳು ಸಂಭವಿಸುತ್ತವೆ. ಈಗಾಗಲೇ ನಾವು ನೋಡಿದ್ದೇವೆ–ಕೊಯನಾ, ಲಾತೂರ್ ಮುಂತಾದ ಉದಾಹರಣೆಗಳನ್ನು.

ಈಗ ನಾವು ಈ ಅಣೆಕಟ್ಟು (dam) ಕಟ್ಟುವುದನ್ನು ಬಿಟ್ಟು ಕೆರೆ, ಬಾವಿಗಳನ್ನು (ಕೊಳವೆ ಬಾವಿಗಳಲ್ಲ) ಊರ್ಜಿತಗೊಳಿಸದಿದ್ದರೆ ಮುಂಬೈ ಕರ್ನಾಟಕದ ಧಾರವಾಡ, ಹಾವೇರಿ, ಗದಗ ಜಿಲ್ಲೆಗಳು ಭೀಕರ ಭೂಕಂಪಕ್ಕೆ ಅತ್ಯಲ್ಪ ಕಾಲದಲ್ಲಿಯೇ ತುತ್ತಾಗಬಹುದು. ಆ ಜಿಲ್ಲೆಗಳ ಹೆಸರನ್ನೇ ನಾನುದ್ಧರಿಸಲು ಕಾರಣವೆಂದರೆ ಇಲ್ಲಿ ಭೂಮಿ ಸಮಪಾತಳಿಯದಾಗಿದ್ದು ಈಗಾಗಲೇ ಅನೇಕ ಕೆರೆಗಳು ಬತ್ತಿ ಹೋಗಿವೆ.

ಇನ್ನು ಕೆಲವೇ ವರುಷಗಳಲ್ಲಿ ಅಲ್ಲಿ ದೊಡ್ಡ ಭೂಕಂಪವಾದರೆ ಆಶ್ಚರ್ಯವೇನಿಲ್ಲ. ಅದು ಹಾಗಾಗುವ ಮೊದಲೇ ಕೆರೆ, ಕಟ್ಟೆಗಳನ್ನು ಊರ್ಜಿತಗೊಳಿಸಿ ಭೂಗತ ಜಲಮಟ್ಟವನ್ನು ಮೇಲಕ್ಕೇರುವಂಥೆ ಮಾಡಿದರೆ ನಮಗೆಲ್ಲ ಉಳಿಗಾಲವಿರುತ್ತದೆ.

**ಮುಗಿಸುವ ಮುನ್ನ :**

ಕರ್ನಾಟಕ ಅದರಲ್ಲೂ ತುಂಗಭದ್ರೆಯಿಂದುತ್ತರಕ್ಕೆ ಕಾಳಾಮುಖ ಪಾಶುಪತರ ದೇವಾಲಯಗಳು ಹೇರಳವಾಗಿವೆ. ಈ ಎಲ್ಲ ದೇವಾಲಯಗಳೂ ಶಾಸನ, ಮಠ, ಶಾಲೆ ಹಾಗೂ ಕೆರೆ ಕಟ್ಟೆಗಳಿಂದೊಡಗೂಡಿದ್ದವು. ಅಲ್ಲದೇ ಇವರು ವೇದೋಪನಿಷತ್ತುಗಳ ಅಧ್ಯಯನಕ್ಕೆ ಪ್ರಾಮುಖ್ಯತೆ ಕೊಟ್ಟಿದ್ದರಿಂದ ಇವರದು ಸೌಮ್ಯಪಥ, ದಕ್ಷಿಣಾಚಾರಿ ಪಥ ಎಂದು ಕರೆಯುವ ವಾಡಿಕೆ ಬಂದಿತು. ಈ ಶೈವರ ಒಂದು ವಿಶಿಷ್ಟ ಶೈಲಿಯಲ್ಲಿ ತ್ರಿಕೂಟ ಪ್ರಾಸಾದಗಳನ್ನು ಕಟ್ಟಿಸಿ ಅದರಲ್ಲಿ ಶಿವ ಮತ್ತು ಬೇರೆ ಬೇರೆ ದೇವತೆಗಳನ್ನು ಪೂಜಿಸುತ್ತಿದ್ದರು. ಅವರ ಶೈಲಿಯು ಜನ ಹಾಗೂ ರಾಜರ ಮೆಚ್ಚುಗೆ ಎಷ್ಟು ಮಟ್ಟಿಗೆ ಪಡೆಯಿತೆಂದರೆ ಹೊಯ್ಸಳರಸರೂ ತಮ್ಮ ವೈಷ್ಣವ ದೇವಾಲಯ ನಿರ್ಮಾಣಕ್ಕೂ ಈ ಶೈಲಿಯನ್ನೇ ಅನುಕರಿಸಿದ್ದಾರೇನೋ ಎನಿಸುತ್ತದೆ (ಅವರ ಗುಡಿಗಳನ್ನು ನೋಡಿದಾಗ). ಏಕೆಂದರೆ ಅವರ ಅನೇಕ ವೈಷ್ಣವ ದೇವಾಲಯಗಳು ಮೂರು ಗರ್ಭಗೃಹಗಳಿಂದ ಕೂಡಿವೆ. ಈ ದಕ್ಷಿಣಾಚಾರಿಗಳು ಕಟ್ಟಿಸಿದ ಗುಡಿಗಳೇ ಕಾಲಕ್ರಮೇಣ ಜಕ್ಕಣಾಚಾರಿ ಗುಡಿ ಎಂಬ ಹೆಸರು ಪಡೆದು, ಮುಂದೆ ಅದಕ್ಕೊಬ್ಬ ಶಿಲ್ಪಿಯನ್ನೂ ಸೃಷ್ಟಿಸಿ ಅವನಿಂದ ಒಬ್ಬ ಮನುಷ್ಯರಿಂದಾಗಬಾರದಂತಹ ಕೆಲಸ ಮಾಡಿಸಿಬಿಟ್ಟಿದ್ದಾರೆ ಜನ. ಇಂತಹ ದಂತ ಕಥೆಗಳಿಗೆ ಬ್ರಿಟಿಷರಿಂದ ಬಹಳೇ ಪ್ರೋತ್ಸಾಹ ಸಿಗುತ್ತಿತ್ತು. ಈ ದಂತಕಥೆಯಿಂದಾಗಿ ನಿಜವಾದ ಇತಿಹಾಸ ಕತ್ತಲೆಯಲ್ಲಿ ಕೊಳೆಯುವಂತಾಗಿದೆ.

ಈ ಲಾಕುಳ ಶೈವರ ಪ್ರಾದರಿಯುಲ್ಲಿಯೇ ಹದಿನಾರನೆಯ ಶತಮಾನದವರೆಗೂ ದೇವಾಲಯ, ದೊಡ್ಡ ದೊಡ್ಡ ಕೆರೆ ಕಟ್ಟಲ್ಪಟ್ಟವೆಂಬುದು ನಮಗೆ ಶಾಸನಗಳಿಂದ ತಿಳಿದುಬರುವುದು. ಹದಿನಾಲ್ಕನೇ ಶತಮಾನದ ಕೊನೆಯರ್ಧದಿಂದ ಹದಿನಾರನೆಯ ಶತಮಾನದ ಕೊನೆಯವರೆಗೆ ವಿಜಯನಗರದಿಂದಾಳಿದ (ವಿಜಯನಗರದರಸರು ಎಂದು ತಪ್ಪು ಹೆಸರಿನಿಂದ ಪ್ರಸಿದ್ಧವಾಗಿರುವ) ಕರ್ನಾಟಕದ ರಾಜರು ಸಹ ಅನೇಕ ಕೆರೆ ಕಟ್ಟೆಗಳನ್ನು ಕಟ್ಟಿಸಿದ್ದರಲ್ಲದೇ ಅವಕ್ಕೆ ಸಮುದ್ರ ಎಂದು ಕರೆಯುತ್ತಿದ್ದರು. ಈಗ ಅವೇ ಸಂದ್ರ ಎಂದು ಕರೆಯಲ್ಪಡುತ್ತಿವೆ. ಅವನ್ನು ಸಂದ್ರ ಎಂದು ಕರೆಯುತ್ತಿದ್ದರೂ ಅವುಗಳ ನಿಮ್ನತೆ ಈಗ ಕೈಯಿಂದಳೆಯುವಷ್ಟಿದೆ. ವಾಗ್ಗೇಯಕಾರ ಬಯಕ್ಕಾರ ರಾಮಪ್ಪ ಹದಿನಾರು ಕೆರೆ ಕಟ್ಟಿಸಿ ಅವುಗಳ ಸುತ್ತೆಲ್ಲ ನೆಟ್ಟು, ಅವು ಅನ್ಯರ ಕೊಡಲಿ ಏಟಿಗೆ ತುತ್ತಾಗದಿರಲೆಂದು ಅವಕ್ಕೆ ಮುಂಜಿವೆ ಮಾಡಿಸಿದ. ಅಲ್ಲದೇ ಅಲ್ಲಲ್ಲಿ ಉಪವನಗಳನ್ನು ಸಹ ಮಾಡಿಸಿದನೆಂದು ನಾವು ಆತನ ಶಾಸನಗಳಲ್ಲಿ ಓದುತ್ತೇವೆ.

ಈಗಿನ ಶಾಲೆ, ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ವಿದ್ಯೆ ಲಯವಾಗುತ್ತ ಹೋಗುತ್ತಿರುವುದು ಅತೀವ ಖೇದಕರ ವಿಷಯವಾಗಿದೆ. ಇದು ಬರಿಯ ನಮ್ಮ ಕರ್ನಾಟಕ, ಭಾರತಕ್ಕೆ ಸಂಬಂಧಿಸಿದ್ದಲ್ಲ, ಜಗತ್ತಿನಾದ್ಯಂತ ಈ ಪಿಡುಗು ಹಬ್ಬಿದೆ. ಆದ್ದರಿಂದ ನಾನು ಈಗಿನ ಮಠಾಧೀಶರಿಗೆ ಕೇಳಿಕೊಳ್ಳುವದೇನೆಂದರೆ ಅವರು ಹಾಳಾಗುತ್ತಿರುವ ದೇವಸ್ಥಾನಗಳನ್ನು ಕೈಯ್ಯಲ್ಲಿ ತೆಗೆದುಕೊಂಡು, ಇತಿಹಾಸದ ಕಾಲಕ್ಕಿದ್ದಂತೆ ಅವಕ್ಕೆ ರೂಪಕೊಟ್ಟು, ಮತ್ತೆ ಹಿಂದಿನ ಕಾಲದಂತೆ ಪಂಡಿತರನ್ನು

ಕರೆಸಿ, ಆಗಿನಂತೆಯೇ ಪಾಠಶಾಲೆಗಳಿಗೆ ಮತ್ತೆ ಜೀವದುಂಬಿಸಿ ಸಂಸ್ಕೃತ, ಕನ್ನಡ ಭಾಷೆ ಅವಕ್ಕೆ ಸಂಬಂಧಿಸಿದ ಬೇರೆ ಬೇರೆ ವಿಷಯಗಳನ್ನು ಕಲಿಸಲು ಪ್ರಾರಂಭಿಸಿದರೆ ಬ್ರಿಟಿಷರು ಕೊಟ್ಟ ಕೊಡಲಿ ಏಟಿನಿಂದ ನಾವು ಮತ್ತೆ ಚೇತರಿಸಿಕೊಳ್ಳುವೆವು ; ಇದು ನಿಸ್ಸಂಶಯ. ಇವೆಲ್ಲವುದರ ಜೊತೆ ಶಾಸನ ಹಾಗೂ ಈಗಿನ ಜಗತ್ತಿಗೆ ಬೇಕಾಗಿರುವ ಇಂಗ್ಲಿಷನ್ನು ಕಲಿಸಿದರೆ ಚಿನ್ನಕ್ಕೆ ಪುಟವಿಟ್ಟಂತಾಗುತ್ತದೆ. ಅಲ್ಲದೇ ಸರಕಾರದ ಸಹಾಯದ ದಾರಿ ಕಾಯದೇ ಜನ ತಮ್ಮತಮ್ಮೊಳಗೆ ಒಟ್ಟಾಗಿ ಕೆರೆ, ಕಟ್ಟೆಗಳ ಹೂಳು ತೆಗೆಸಿ ಮತ್ತೆ ಅವುಗಳಲ್ಲಿ ನೀರು ತುಂಬಿ ಹರಿಯುವಂತೆ ಮಾಡಿದರೆ ಭೂಗತ ಜಲಮಟ್ಟ ಮೇಲೇರಿ, ನೀರಿನ ತಾಪತ್ರಯ ತಪ್ಪುವಂತಾಗುವುದು. ಶಿವಮೊಗ್ಗೆಯ ಸಮೀಪದ ಮತ್ತೂರಜನ ತಮ್ಮೂರ ಕೆರೆ ಸ್ವಚ್ಛ ಮಾಡಿದ ರೀತಿ ನಮಗೆ ಸ್ವಾವಲಂಬನದ ಬಗೆಗೆ ಒಳ್ಳೆ ಉದಾಹರಣೆಯಾಗಿದೆ.

ಕರ್ನಾಟಕ ಇತಿಹಾಸ ಅಕಾದೆಮಿಯ ಇತಿಹಾಸ ಪರಂಪರೆ ಉಳಿಸಿದರೆಂದು ಮಾಡುವ ಸಪ್ತಾಹ ಬರಿಯ ಒಂದು ವಾರಕ್ಕೆ ಮೀಸಲಾಗಿರದೇ ನಿರಂತರವಾಗಿ ನಡೆಯಲಿ.

ಈ ರೀತಿ ನಾವು ನಮ್ಮ ರೀತಿ ನೀತಿಗಳನ್ನು ಬದಲಾಯಿಸಿಕೊಂಡರೆ ಗಾಂಧೀಜಿಯವರು ಕಂಡ ರಾಮರಾಜ್ಯದ ಕನಸು ನನಸಾಗುವದರಲ್ಲಿ ಸಂದೇಹವಿಲ್ಲ. ಆದರೆ ಆ ರಾಮರಾಜ್ಯದ ಅರ್ಥ ಮಾಡಿಕೊಳ್ಳಬೇಕು. ಅನೇಕರು ರಾಮರಾಜ್ಯವೆಂದರೆ ಕಣ್ಣು ಮುಚ್ಚಿ ಬಾಯಿ ತೆರೆದರೆ ತುತ್ತು ತಾನಾಗಿ ಬಾಯಲ್ಲಿ ಬೀಳುವದೆಂದು ತಿಳಿದು ಕೊಂಡಿದ್ದಾರೆ, ಆದರೆ ಅದು ಹಾಗಲ್ಲ.

ರಾಮನ ಕಾಲದಲ್ಲಿ ಜನ ಶ್ರಮ ಪಟ್ಟು ದುಡಿದು, ಅದರ ಫಲ ಉಣ್ಣುತ್ತಿದ್ದರು. ಅದರ ಫಲವನ್ನು ಮುಂದೆ ಬ್ರಿಟಿಷರ ಕಾಲದಲ್ಲಿ ಬಂಡವಾಳಶಾಹಿಗಳು ಸುರಿಸುರಿದು ಕೊಂಡು ತಿನ್ನುತ್ತಿದ್ದರು. ಆಗ ಮಹಾತ್ಮಾಜಿಯವರು ಹೇಳಿದ್ದೇನೆಂದರೆ ಸ್ವಾತಂತ್ರ್ಯ ಬಂದನಂತರ ನಿಮ್ಮ ನಿಮ್ಮ ಶ್ರಮದ ಫಲ ನೀವೇ ಉಣ್ಣುವಿರಿ. ಅದನ್ನೇ ಅವರು ರಾಮರಾಜ್ಯ ಎಂದು ಕರೆದರು. ನಾವೀಗ ಶ್ರಮ ಪಟ್ಟು ಓದಿ, ದುಡಿದು ಅದರ ಫಲ ಸವಿಯುತ್ತ ಮತ್ತೆ ರಾಮರಾಜ್ಯ ಕಟ್ಟೋಣ. ಇಂಗ್ಲಿಷ್ ಎಷ್ಟು ಬೇಕೋ ಅಷ್ಟು ಕಲಿತು, ಇಂಗ್ಲೀಷ್‌ನ ವ್ಯಾಮೋಹ ತೊರೆದು ಎಲ್ಲರೂ ಒಟ್ಟಾಗಿ ಕಲೆತು ಕೆಲಸ ಮಾಡೋಣ.

ನಮ್ಮ ಪರಂಪರೆಯನ್ನು ಉಳಿಸಿ, ಬೆಳೆಸಿ, ಉಜ್ವಲ ಗೊಳಿಸಲು ಸಹಾಯ ಮಾಡೆಂದು ಕರ್ನಾಟಕ ಮಾತೆ ಭುವನೇಶ್ವರಿಯಲ್ಲಿ ಬೇಡುತ್ತ, ನನಗೆ ಅಧ್ಯಕ್ಷ ಸ್ಥಾನ ಕೊಟ್ಟು ಸನ್ಮಾನಿಸಿದಂತಹ ಕರ್ನಾಟಕ ಇತಿಹಾಸ ಅಕಾದೆಮಿಯವರಿಗೂ ನನ್ನ ವಂದನೆ ಸಲ್ಲಿಸುತ್ತ, ಇದುವರೆಗೂ ಶಾಂತಚಿತ್ತದಿಂದ ನನ್ನ ನಾಲ್ಕು ಮಾತುಗಳನ್ನಾಲಿಸಿದ ಸಭಿಕರಿಗೂ ನಮಸ್ಕರಿಸುತ್ತ ನನ್ನ ಈ ಭಾಷಣ ಮುಗಿಸುವೆ. ಜೈ ಭುವನೇಶ್ವರೀ, ಜೈ ಕರ್ನಾಟಕ ಮಾತೆ, ಜೈಹಿಂದ್.

## Biodata

| | | |
|---|---|---|
| Name | : | FILLIOZAT |
| First name | : | Vasundhara |
| Maiden name | : | KAVALI |
| Date and place of birth | : | 1-01-1940 at Haveri (India) |

*Missions and Participation in Seminars.*

1. Received a Grant from UNESCO for research work on Hampi-Vijayanagar in 1980-81.
2. In 1985 received a grant form India Government to hold an exhibition on the ruins of Vijayanagara during the Festival of India in France. It was inaugurated by His Excellency Shri Latif, Indian Ambassador to France, on 10th April 1986 in the precincts of the International Council for Monuments and Sites (ICOMOS) Paris. ICOMOS consulted us for the determination of Hampi zones for its inclusion on the World Heritage List.
3. In 1987, began the study of temples in Haveri, Ranebennur and Hirekerur talukas in North Karnataka built between 10th and 14th centuries.
4. In 1988-90, for two consecutive years received grant was from the French Government to proceed with the studies of these temples.
5. In the year 1988, the exhibition on Hampi was received by the CESMEO in Turin, Italy. In 1989, the same exhibition was held at Musee Guimet in Paris at the time of the Seminar on South Asian Archaeology. Then in India it was displayed at the Museum in Pondichery, Mythic Society in Bangalore and Anantacarya Indological Institute in Bombay. and at Koppal at the time Kannada Sahitya Sammelan in 1993.
6. Invited by the Central University of Pondichery, delivered a series of lectures on South Indian "Art, Architecture and Epigraphy" in the first semester of the year 19989-90.
7. 1994 : Invited by Laval University in Canada for delivering lectures.
8. In the same year invited by CESMEO for a series of lectures.
9. 199t : Invited by CESMEO for a series of lectures. Lectures at Kuppuswami Sastri Research Institute, Madras. Conducted a workshop on temple art and architecture at the Indira Gandhi National Centre for the Arts in Delhi.
10. From July 1995 undertaken a project of work for a "Database on Temples of Karnataka" in collaboration with the Indira Gandhi National Centre for the Arts (IGNCA) in Delhi, for a period of ten years and plus, to Prepare books and CD Roms on these temples. In the year 2000 a CD Rom on Mukteshvara temple at Caudadanapura temple at Caudadanapura was prepared by me in collaboration with Prof. Pierre-Sylvain Filliozat. It is the first its kind on Indian temples in the world of indologists and is published by the I GNCA in Delhi.
11. December 2001, invited by the Centre for Khmer Studies went to Cambodia and delivered a series of lectures on Indian art, architecture and civilisation, in the Faculty of Archaeology in Phnom Penh.

**HONOURS RECEIVED**

1. December 2002, by the Rotary Club, Mysore for the works on History, Epigraphy and spe cially on the history of Karnataka Empire (alias Vijayanagara Empire.)
2. In 2003 November 1st, on the Karnataka Rajyotsava day, Rajyotsava award by the Govern ment of Karnataka for my services abroad in history and culture of India, specialy of Karnataka.

3. 2004 by the Vasundhara Perforforming Arts Centre, Mysore during the Pallavotsava celebrations of the centre, for outstandng contribution in the history, literature and arts.

**Books**

1. L'Epigraphie de Vijayanagar du debut a 1377, EFEO, Paris, 1973.
2. Le Temple de Tirumankai Alvar a Hampi, IFI, Pondicherry, 1976.
3. Le Ramayana a Vijayanagar, POF, Paris, 1983.
4. L'Inde, a brochure on Indian dance and music, Festival d'automne, Paris, 1985.
5. Les Jeux de Siva, Alternative, Paris, 1997.
6. Elements de Grammaire Sanskrit-Girvanabhasa : agamat, Paris, 1998. 2nd edn 2002.
7. Hampi-Vijayanagara, Histoire et Legendes, agamat, Paris, Octobre 2004.
8. Hampe, Karnataka University, Dharwar 1975, 2nd edn 1979.
9. Vijayanagara samrajyasthapane, Sahitya parishat, Bangalore, 1980, 2nd edn 1999.
10. Alidulida Harpe, Manasollasa prakasana, Bangalore, 1982, 2nd edn. 1992.
11. Karnatakadalli Lakulasaiva Jakkanacharyarau, Kannada Research Institute, Dharwar, 2003.
12. The Vijayanagara Empire, Chronicles of Paes and Nuniz, NBT, New-Delhi, 1977.
13. A copper plate Inscription of Sriraragaraya I,The Pondichery Museum, Pondicher, 1986.
14. Harpi-Vijayanagar, The temple of Vithala, (a monograph), New-Delhi, 1988.
15. The Temple of Muktesvara at Caud'adanapura, IGNCA, Delhi, 1995.
16. Vijayanagar Chronicles from 1520 to 1880; National Book Trust, Delhi, 1999 & 2001.
17. Kalamukha and Pasupata Temples in Dharwar, KSRI, Chennai, 2001.
18. CD Rom on Muktesvara Temple in Caud'adanapura, IGNCA, New Delhi, 2000.

More than hundred articles in Kannada, English and French have seen the light of the day.

# ೨೦೦೮ರ ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ಸ್ವೀಕರಿಸಿದ ಸಂದರ್ಭದಲ್ಲಿ ಮಾಡಿದ ಭಾಷಣ

ಡಾ. ಪಿ.ಎನ್. ನರಸಿಂಹಮೂರ್ತಿ*

## ಶಾಸನ ಅಧ್ಯಯನದಲ್ಲಿ ನನ್ನ ನಡೆ

ಹಿರಿಯ ವಿದ್ವಾಂಸರು ಮತ್ತು ಹೆಸರಾಂತ ಶಾಸನತಜ್ಞರೂ ಆಗಿದ್ದ ಡಾ. ಬಾ.ರಾ. ಗೋಪಾಲ್ ಅವರ ಸ್ಮರಣಾರ್ಥ ಇಟ್ಟಿರುವ ಈ ಪ್ರಶಸ್ತಿಗೆ ಈ ವರ್ಷ ನನ್ನನ್ನು ಆಯ್ಕೆ ಮಾಡಿ ಪುರಸ್ಕರಿಸಿದ್ದೀರಿ. ಇದಕ್ಕಾಗಿ ಕರ್ನಾಟಕ ಇತಿಹಾಸ ಅಕಾದೆಮಿಯ ಕಾರ್ಯಕಾರಿ ಸಮಿತಿಗೆ. ಪ್ರಶಸ್ತಿಯನ್ನು ಸ್ಥಾಪಿಸಿರುವ ಡಾ. ಬಾ.ರಾ. ಗೋಪಾಲ್ ಅವರ ಕುಟುಂಬಕ್ಕೆ ಮತ್ತು ನಿಮ್ಮೆಲ್ಲರಿಗೂ ನನ್ನ ವಿನಯಪೂರ್ವಕ ನಮನಗಳು. ಕಲಿಕಾವಸ್ಥೆಯಲ್ಲೇ ನನ್ನನ್ನು ಶಾಸನ ಅಧ್ಯಯನ ಮತ್ತು ಸಂಶೋಧನೆಗೆ ಹಚ್ಚಿದವರು ಬಹುಭಾಷಾ ಪಂಡಿತರೂ, ಖ್ಯಾತ ಸಂಶೋಧಕರೂ ಹಾಗೂ ನಾಡಿನ ಹೆಸರಾಂತ ಇತಿಹಾಸ ಪ್ರಾಧ್ಯಾಪಕರಾದ ಡಾ. ಎಸ್. ಶ್ರೀಕಂಠಶಾಸ್ತ್ರಿಗಳು. ಅದೇ ಸಮಯದಲ್ಲಿ ನನ್ನ ತಿರುಗಾಟಕ್ಕೆ ಇಂಬು ಕೊಟ್ಟು ಹಳ್ಳಿ, ಕಾಡು, ಬೆಟ್ಟ, ಮೋಡ ಎನ್ನದೆ ಎಲ್ಲ ಕಡೆ ನನ್ನನ್ನು ಸುತ್ತಿಸಿ ತಾವೂ ಅಲೆದು ನನ್ನಲ್ಲಿ ಕ್ಷೇತ್ರಾಧ್ಯಯನದ ಮಹತ್ವದ ಅರಿವು ಮೂಡಿಸಿ ಇಂದಿಗೂ ಅದನ್ನು ಮುಂದುವರೆಸಿಕೊಂಡು ಹೋಗುವಂತಹ ಆಸಕ್ತಿ ಹುಟ್ಟಿಸಿದವರು ನನ್ನ ಪ್ರಾಥಮಿಕ ಶಾಲಾ ಗುರುಗಳಾದ ಸಾ.ತಿ. ದಕ್ಷಿಣಾಮೂರ್ತಿಯವರು. ನನ್ನ ಸಂಶೋಧನಾ ಕಾರ್ಯ ಚಿಗುರೊಡೆದಾಗ ಕೇಂದ್ರ ಶಾಸನ ಇಲಾಖೆ ಊಟಿಯಿಂದ ಮೈಸೂರಿಗೇ ಬಂತು. ಆಗ ಮೊದಲಿಗೆ ಪರಿಚಯವಾದವರು ಹೆಸರಾಂತ ಶಾಸನತಜ್ಞ ಡಾ. ಕೆ.ವಿ. ರಮೇಶ ಅವರು. ಇವರಿಂದ ನನ್ನ ಶಾಸನ ಅಧ್ಯಯನಕ್ಕೊಂದು ಹೊಸ ಆಯಾಮ ದೊರೆಯಿತು. ನನ್ನ ಪಿಹೆಚ್.ಡಿ. ಸಂಶೋಧನೆಯನ್ನು ಖ್ಯಾತ ಜೈನ ಸಂಶೋಧಕ ಮತ್ತು ವಿದ್ವಾಂಸರಾದ ಡಾ. ಆ.ನೇ. ಉಪಾಧ್ಯೆಯವರ ಮಾರ್ಗದರ್ಶನದಲ್ಲಿ ಮಾಡಬೇಕೆಂಬ ಹಂಬಲ ನನ್ನದಾಯಿತು. ಡಾ. ಕೆ.ವಿ. ರಮೇಶರು ನನ್ನನ್ನು ಕೂಡಲೇ ಉಪಾಧ್ಯೆಯವರಲ್ಲಿಗೆ ಕರೆದುಕೊಂಡು ಹೋಗಿ ಅವರಿಗೆ ನನ್ನ ಪರಿಚಯ ಮಾಡಿಕೊಟ್ಟರು. ನಾನು ಎಲ್ಲಿ ಉದ್ಯೋಗ ದಲ್ಲಿದ್ದೇನೆ, ಯಾವ ವಿಷಯ ಕುರಿತಾಗಿ ಸಂಶೋಧನೆ ಮಾಡಬೇಕೆಂದಿದ್ದೇನೆ ಎಂಬಿತ್ಯಾದಿ ಪ್ರಶ್ನೆಗಳನ್ನು ಹಾಕಿದರು ಅವರು. ಅವರ ಪ್ರಶ್ನೆಗಳಿಗೆ ಉತ್ತರಿಸುತ್ತಾ ಆ ವೇಳೆಗಾಗಲೇ ಸಿದ್ಧಪಡಿಸಿದ್ದ ವಿಷಯ ನಿರೂಪಣಾ ಪಟ್ಟಿಯನ್ನು ಅವರ ಕೈಗಿತ್ತೆ. ಅದನ್ನು ಜಾಗರೂಕತೆಯಿಂದ ನೋಡಿದ ಅವರು "ಚಲೋ ಆಯ್ತು. ನೋಡಿ ನಾನು ಸಂಶೋಧನೆ ಮಾಡ್ತೀನಿ, ಯಾವುದಾದರೂ ವಿಷಯ ಕೊಡಿ ಎಂದು ಕೇಳಿ ಇಷ್ಟರವರೆಗೆ ನನ್ನ ತಲೆ ತಿನ್ನುತ್ತಿದ್ದರು. ಅಲ್ಲಾ ನನಗ್ಹ್ಯಾಗೆ ಗೊತ್ತಾಗಬೇಕು ಅವರಲ್ಲಿ ಯಾವ ವಿಷಯ ಕುರಿತಾದ ಸಂಶೋಧನೆ ಮಾಡೋದಕ್ಕೆ ಸಾಮರ್ಥ್ಯ ಇದೆ ಅಂತಾ ! ನಿಮ್ಮ ವಿಷಯ ನನಗೆ ಹಿಡಿಸಿದೆ. ಆಗಲೇ ಅರ್ಧ ಕೆಲಸ ಮಾಡಿದ್ದೀರಿ. ಉಳಿದ ಅರ್ಧ ಬೆಟ್ಟದಷ್ಟಿದೆ. ಹೇಗೂ ಇವರ (ರಮೇಶ ಅವರ) ಸಹಕಾರ ನಿಮಗೆ ಇದೆ. ಬೇಗ ಮಾಡಿ ಮುಗಿಸಿ" ಎಂದು ಹೇಳಿ ಆಶೀರ್ವದಿಸಿದರು. ಇವರುಗಳನ್ನು ಅತಿ ಭಕ್ತಿಯಿಂದ ಸ್ಮರಿಸುತ್ತಾ ಅವರಿಗೆ ನನ್ನ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಅನಂತರ ೫೦-೬೦ರ ದಶಕದ ಹಲವಾರು ಮಂದಿ ಖ್ಯಾತ ವಿದ್ವಾಂಸರ ಪರಿಚಯ ನನಗಾಯಿತು. ಇದರ ಲಾಭವನ್ನು ನನ್ನ ಸಂಶೋಧನೆ ಮೂಲಕ ಪಡೆದುಕೊಂಡೆ.

ನನ್ನ ಸಂಶೋಧನೆಯ ಕಾರ್ಯಕ್ಷೇತ್ರ ಅಂದಿನ ದಕ್ಷಿಣ ಕನ್ನಡ. ವಿಶಾಲವಾಗಿದ್ದ ಈ ಪ್ರದೇಶ ಇಂದು ಉಡುಪಿ ಮತ್ತು ದಕ್ಷಿಣ ಕನ್ನಡ ಎಂಬ ಎರಡು ಜಿಲ್ಲೆಗಳಾಗಿದೆ. ಈಗ ಕೆಲಸದ ಕೇಂದ್ರ ಕಾರ್ಕಳವಾದರೂ ಸುತ್ತಾಟದಿಂದ ಎಲ್ಲ ಊರುಗಳೂ ನನ್ನ ವಿಷಯದ ಕೇಂದ್ರ ಸ್ಥಾನಗಳಾದವು. ನನ್ನ ಸಾಧನೆಗೆ ಇವು ಮೆಟ್ಟಿಲುಗಳಾದವು. ಹಲವು ರೀತಿಯ ಜನ ಸ್ಪಂದಿಸಿದರು ನನ್ನೊಡನೆ ಸಹಕರಿಸಿದರು. ಅವರಲ್ಲಿ ಇಂದು ಇಲ್ಲಿ ಉಪಸ್ಥಿತರಿರುವ ಧರ್ಮಾಧಿಕಾರಿ ಡಾ. ಡಿ. ವೀರೇಂದ್ರ ಹೆಗ್ಗಡೆ ಅವರನ್ನು ಮತ್ತು ಅಂದು ಉಜಿರೆಯ ಧ.ಮ. ಕಾಲೇಜಿನ ಪ್ರಾಂಶುಪಾಲರಾಗಿದ್ದ ಪ್ರೊ. ಪ್ರಭಾಕರ್ ಅವರನ್ನು ಕೃತಜ್ಞತಾ ಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇನೆ. ಪೂಜ್ಯ ಹೆಗ್ಗಡೆಯವರ ಸಹಕಾರದಿಂದ ಧರ್ಮಸ್ಥಳದ ಬಸದಿಯ ಚಂದ್ರನಾಥ ಸ್ವಾಮಿಯ ಪೀಠದಲ್ಲಿರುವ ಒಂದು ಸಾಲಿನ ನಾಗರೀ ಲಿಪಿಯ ಶಾಸನವನ್ನು ಪ್ರತಿ ಮಾಡಿ ಓದಿದೆ. ಬಹಳ ಮಾಸಿರುವ ಈ ಪಟ್ಟಿ ಶಾಸನದಲ್ಲಿ ಬರಮ ಎಂಬ

* 'ಗುರುಕೃಪ', ನಂ. ೨೦೩೧, ೧೧ನೇ ಕ್ರಾಸ್, ಕಲ್ಲಹಳ್ಳಿ, ವಿ.ವಿ. ನಗರ, ಮಂಡ್ಯ - ೫೭೧ ೪೦೧

ಹೆಸರನ್ನು ಮಾತ್ರ ಓದಲು ಸಾಧ್ಯವಾಯಿತು. ಕ್ರಿ.ಶ. ೧೩-೧೪ ನೆಯ ಶತಮಾನದ ಲಿಪಿಯಲ್ಲಿರುವ ಈ ಬರಹ ಪ್ರಾಯಶಃ ಧರ್ಮಸ್ಥಳದ ಹೆಗ್ಗಡೆಗಳ ವಂಶದಲ್ಲಿ ಬರುವ ಹಿರಿಯರಾದ **ಬರಮ ಹೆಗ್ಗಡೆಯನ್ನು** ಇದು ಉಲ್ಲೇಖಿಸಿದೆ. ಬಹುಷಃ ಬಸದಿಯ ಪಂಚಕಲ್ಯಾಣವನ್ನು ಇವರು ನೆರವೇರಿಸಿದ್ದಾರೆ. ಹಾಗಾಗಿ ಸ್ವಾಮಿಯ ಪೀಠದಲ್ಲಿ ಇವರ ಹೆಸರಿದೆ.

ಇನ್ನು ಪ್ರೊ. ಪ್ರಭಾಕರ್ ಅವರೊಂದಿಗೆ ಮೂಲರು ಎಂಬ ಕಿರು ಜೈನರಾಜ ಮನೆತನದ ರಾಜಧಾನಿಯಾಗಿದ್ದ ಬೈಲಂಗಡಿಗೆ ಭೇಟಿ ಕೊಟ್ಟು ಅಲ್ಲಿ ಕ್ಷೇತ್ರ ಕಾರ್ಯ ನಡೆಸಿದೆ. ಅಲ್ಲಿನ ಶಿಲಾಮಯ ಬೃಹದ್ ಬಸದಿಯ ಸ್ತಂಭವೊಂದರಲ್ಲಿದ್ದ ಶಾಸನವನ್ನು ಪತ್ತೆಹಚ್ಚಿ ಅದರ ಪ್ರತಿ ಮತ್ತು ಪಾಠ ತಯಾರಿಸಿಕೊಂಡೆ.

ಹೀಗೆ ಬೆಳ್ತಂಗಡಿ ತಾಲೂಕಿನಲ್ಲಿ ನನ್ನ ಸಂಶೋಧನಾ ಕಾರ್ಯ ಪ್ರಗತಿಯ ಹಾದಿಯಲ್ಲಿ ಮುನ್ನಡೆಯಿತು. ಕದಂಬ ತ್ರಿಪರ್ವತ ಕುರಿತಾಗಿ ಜೆ.ಎಚ್. ಫ್ಲೀಟ್ ಅವರ ಅಭಿಪ್ರಾಯ ಮತ್ತು ತಾಳಗುಂದ ಶಾಸನದ ಆಧಾರದಲ್ಲಿ ಕೆ.ವಿ. ರಮೇಶ ಅವರು ವ್ಯಕ್ತಪಡಿಸಿರುವ ಅಭಿಪ್ರಾಯದ ಆಧಾರದಲ್ಲಿ ಶಿಶಿಲದ ಕಡೆ ಮುಖ ಮಾಡಿಹೋದೆ. ದಟ್ಟ ಕಾನನದ ನಡುವೆ ಪರ್ವತ ಶ್ರೇಣಿಗಳಿಂದ ಸುತ್ತುವರೆಯಲ್ಪಟ್ಟು ಕಪಿಲಾನದಿ ದಡದ ಮೇಲಿದೆ ಇಂದಿನ ಗ್ರಾಮ ಶಿಶಿಲ. ಮೂರು ಪರ್ವತ ಶ್ರೇಣಿಗಳಾದ ಚಾರ್ಮೂಡಿ, ಶಿರಾಡಿ ಮತ್ತು ಭೈರವ (ಶಿಶಿಲ) ಘಾಟ್‌ಗಳು ಇಲ್ಲಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಶಿಶಿಲದ ಬೆಟ್ಟ ಪ್ರದೇಶದಲ್ಲಿ ಕರಾವಳಿಯನ್ನು ಘಟ್ಟದ ಮೇಲಣ ಊರುಗಳೊಂದಿಗೆ ಸಂಪರ್ಕಿಸುವ ರಸ್ತೆ ಕುರುಹುಗಳನ್ನು ಈಗಲೂ ನೋಡಬಹುದು. ಕಟ್ಟೋಣಗಳು, ಕೋಟೆ ಕೊತ್ತಲಗಳ ಕುರುಹುಗಳು ಇಲ್ಲಿರುವುದನ್ನು ನೋಡಬಹುದು. ಆಶ್ಚರ್ಯವೆಂದರೆ ಶಿಶಿಲದ ಒಂದು ರಸ್ತೆ ಪ್ರಾಚೀನ ರಾಜಮಾರ್ಗದ ವೈಭವದ ಪಳೆಯುಳಿಕೆಯಂತಿದೆ. ಇಲ್ಲಿರುವ ಒಂದೇ ಒಂದು ಪ್ರಾಚೀನ ಕಟ್ಟಡ ಎಂದರೆ ಶಿಶಿಲೇಶ್ವರ ದೇವಸ್ಥಾನ. ಈ ಭಾಗವನ್ನೆಲ್ಲಾ ಸುತ್ತಾಡಿದ ಮೇಲೆ ಶ್ರೀಶೈಲವನ್ನು ಶಿಶಿಲದ ಕಡೆ ಬೊಟ್ಟು ಮಾಡಿದ ರಮೇಶ ಅವರ ಅಭಿಪ್ರಾಯ ಸರಿ ಎಂದು ಕಂಡಿತು. ಸ್ವತಂತ್ರವಾದ ರಾಜ್ಯವೊಂದನ್ನು ಕಟ್ಟಲು ಪಲ್ಲವರ ವಿರುದ್ಧ ಹೋರಾಟ ನಡೆಸಿದ ಕದಂಬ ಮಯೂರ ವರ್ಮನಿಗೆ ಬೆಳ್ತಂಗಡಿಯ ಜನ ಸಹಕಾರ ನೀಡಿದ್ದಿರಬಹುದು. ನನ್ನ ಅಭಿಪ್ರಾಯದಲ್ಲಿ **ಶಿಶಿಲವೇ** ಕದಂಬ ಶ್ರೀಪರ್ವತ (ತ್ರಿಪರ್ವತ). ಆದರೆ ಈ ಬಗ್ಗೆ ಹೆಚ್ಚಿನ ಶೋಧ ಆಗಬೇಕು.

ಶಿಶಿಲದ ಶೋಧ ಕಾರ್ಯದಲ್ಲಿ ನನಗೆ ನೆರವಾದವರು ಮಿತ್ರರಾದ ಚಂದ್ರಶೇಖರ ದಾಮ್ಲೆ. ಇವರ ಸಹಕಾರದಿಂದ ಸುತ್ತಮುತ್ತಲ ಪ್ರದೇಶದಲ್ಲಿ ಎರಡು ಬಸದಿಗಳನ್ನು ಪತ್ತೆ ಮಾಡಿ ಒಂದರಲ್ಲಿದ್ದ ಶಾಸನವನ್ನು ಪ್ರತಿ ಮಾಡಿದೆ. ಆದರೆ ಇನ್ನೊಂದರ ಬಳಿಗೆ ಹೋಗಲಾಗಲಿಲ್ಲ. ಕಾರಣ ಅದರ ಸುತ್ತ ಬೆಳೆದಿದ್ದ ದಟ್ಟ ಪೊದೆ. ಅಲ್ಲಿಂದ ಹಿಂದಿರುಗಿ ಬರುವಾಗ ವಳಾಲು ಗುಡ್ಡೆಯಲ್ಲಿದ್ದ ಈಶ್ವರ ದೇವಸ್ಥಾನದಲ್ಲಿ ಒಂದು ಶಾಸನ ಪತ್ತೆ ಹಚ್ಚಿ ಪ್ರತಿ ಮಾಡಿದೆ. ಸುಮಾರು ೧೫ನೆಯ ಶತಮಾನಕ್ಕೆ ಸೇರುವ ಸ್ವಲ್ಪ ಹಾಳಾಗಿರುವ ಈ ಶಾಸನ ಆಯಾಸ ಪರಿಹಾರ ಮಾಡಬಲ್ಲ ಒಂದು ಸಾಲನ್ನು ಹೊಂದಿತ್ತು. ಅದೇನೆಂದರೆ ಪ್ರಾಯಶಃ ಈ ಶಾಸನವನ್ನು ಬರೆದಾತ **'ಕವಿ ಚಕ್ರವರ್ತಿ'** ಎಂದು ಬಿರುದಾಂಕಿತನಾದವ. ದಕ್ಷಿಣ ಕನ್ನಡದ ಯಾವ ಶಾಸನದಲ್ಲೂ ಅವನ್ನು ಬರೆದ ಕವಿಗಳ ಹೆಸರಿಲ್ಲ. ಇಲ್ಲಿ ಸಾಮಾನ್ಯ ದರ್ಜೆಯ ಶಾಸನವನ್ನು **ಕವಿಚಕ್ರವರ್ತಿ**ಯೊಬ್ಬ ಬರೆದಿದ್ದಾನೆ ಎನ್ನುವುದು ನಿಜಕ್ಕೂ ಸೋಜಿಗದ ಸಂಗತಿ.

ಕಡಬದ ಅರಸರ ಬಗ್ಗೆ ಹೊಸ ಮಾಹಿತಿಗಳ ಶೋಧನೆಗಾಗಿ ಕಡಬ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಿಗೆ ಹೋದಾಗ ಮರ್ದಾಳದಲ್ಲೊಂದು ಶಾಸನ ಇರುವುದು ತಿಳಿಯಿತು. ಕೂಡಲೇ ಅಲ್ಲಿಗೆ ಹೋಗಿ ಶಾಸನವನ್ನು ಪ್ರತಿ ಮಾಡಿದೆ. ಒಂಭತ್ತನೆಯ ಶತಮಾನಕ್ಕೆ ಸೇರಿದ ಶಾಸನ ಇದಾದ್ದರಿಂದ ಕೂಡಲೇ ಇದರ ಪಾಠ ಸಿದ್ಧ ಮಾಡಿದೆ. ಮರ್ದಾಳ ಯಾವ ಗ್ರಾಮಕ್ಕೆ ಸೇರಿದ್ದು ಎಂಬುದನ್ನು ತಿಳಿಯಲು ಪ್ರಯತ್ನಿಸಿದಾಗ ದೊರಕಿದ ಉತ್ತರ ಬಂಟ್ರ ಗ್ರಾಮ. ಕೂಡಲೇ ನೆನಪಾಯಿತು ಡಾ. ಕೆ.ವಿ. ರಮೇಶ ಅವರು ಸಂಪಾದಿಸಿದ್ದ ಬಂಟ್ರ ಶಾಸನ. ಕುತೂಹಲದಿಂದ ನೋಡಿದಾಗ ನಾನು ಪ್ರತಿ ಮಾಡಿದ್ದ ಶಾಸನವೇ ರಮೇಶ ಅವರು ಸಂಪಾದಿಸಿದ್ದ ಬಂಟ್ರ ಶಾಸನ ಎಂದು ತಿಳಿಯಿತು. ನನ್ನ ಕಾರ್ಯ ಸ್ವಲ್ಪ ಬೇಸರ ಹುಟ್ಟಿಸಿತಾದರೂ ಅದರ ಅಧ್ಯಯನ ಬೇಸರವನ್ನು ದೂರ ಮಾಡಿತು. ರಮೇಶ ಅವರು ಶಾಸನದಲ್ಲಿ ಕದಂಬ ರಾಜನ್ಯೋರ್ವ ಉಲ್ಲೇಖಗೊಂಡಿದ್ದಾನೆ. ಆದರೆ ಅವನ ಹೆಸರಿಲ್ಲ ಎಂದೂ **"ಸಾದನೂರ ಮರುದಗಳದಾ"** ಎನ್ನುವುದನ್ನು **"ಸಾದನೂರ ವೈದ್ಯ"** ಎಂದು ಹೇಳಿದ್ದರು. ಶಾಸನ ಪಾಠವನ್ನು ಹಲವು ಬಾರಿ ಓದಿ ನನ್ನ ಅರ್ಥವನ್ನು ಗಟ್ಟಿ ಮಾಡಿಕೊಂಡ ನಂತರ ಹೊಳೆಯಿತು ಶಾಸನದಲ್ಲಿ ಕದಂಬ ರಾಜನ ಹೆಸರಿದೆ ಎನ್ನುವುದು. **'ಮರುದಗಳದಾ'** ಎನ್ನುವುದನ್ನು ಮರ್ದ್-ಮದ್ದು (ಔಷಧ) ಅದನ್ನು ಕೊಡುವಾತ ವೈದ್ಯ ಎಂದು ಅರ್ಥೈಸಿದ್ದರು. ಆದರೆ **ಮರುದಗಳ** ಎನ್ನುವುದು ಆ ಸ್ಥಳದ ಹೆಸರು ಮತ್ತು ಅಲ್ಲಿದ್ದ ದೇಗುಲವನ್ನು ಶಾಸನ ಉಲ್ಲೇಖಿಸಿದೆ ಎಂಬ ಅಂಶ ಅರ್ಥವಾದಾಗ ಈಗ ಅದು (ಆ ಸ್ಥಳ) **'ಮರ್ದಾಳ'** ಆಗಿದೆ

ಎಂಬುದೂ ಗೋಚರಕ್ಕೆ ಬಂತು. ರಮೇಶ ಅವರಲ್ಲಿ ಈ ಬಗ್ಗೆ ಕೂಡಲೆ ಚರ್ಚೆ ಮಾಡಿದಾಗ ನನ್ನ ನಿಲುವನ್ನು ಒಪ್ಪಿ ಇದು ಕ್ಷೇತ್ರ ಕಾರ್ಯದ ಫಲ ಎಂದು ಬೆನ್ನು ತಟ್ಟಿದರು.

ಶಿಶಿಲ ಪ್ರಾಚೀನ ಕದಂಬರ ಒಂದು ಪ್ರಮುಖ ಸ್ಥಳವಾಗಿದ್ದರೆ ಅದರ ಸಮೀಪದ ಸ್ಥಳದಲ್ಲಿ ಕದಂಬರಾಜ **ಶ್ರೀ ಪೃಥ್ವೀ** ಆಡಳಿತ ನಡೆಸಿದ್ದು ಶಾಸನದ ಮೂಲಕ ತಿಳಿಯುತ್ತದೆ. ಈ ವಿಚಾರ ನನ್ನ ಶೋಧನಾ ಕಾರ್ಯಕ್ಕೆ ಹೆಚ್ಚು ಬಲ ಮತ್ತು ಉತ್ಸಾಹವನ್ನು ತಂದುಕೊಟ್ಟಿತು.

ಇದರ ಎಡೆಯಲ್ಲಿ ಬೆಳ್ತಂಗಡಿ ತಾಲೂಕನ್ನು ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದ ಬಂಗ ಮತ್ತು ಅಜಿಲ ರಾಜ ವಂಶಗಳ ಬಗ್ಗೆ ನನ್ನ ಗಮನ ಹರಿದಿತ್ತು. ಇದಕ್ಕಾಗಿ ಬಂಗವಾಡಿ ಮತ್ತು ವೇಣೂರುಗಳಲ್ಲಿ ಕ್ಷೇತ್ರ ಕಾರ್ಯ ನಡೆಸಿದರೂ ಹೆಚ್ಚಿನ ಮಾಹಿತಿ ಲಭ್ಯವಾಗಲಿಲ್ಲ. ಅಳದಂಗಡಿ ಮತ್ತು ಗುರುವಾಯನಕೆರೆ ನಡುವಿನ ಸ್ಥಳಗಳಲ್ಲಿ ಕ್ಷೇತ್ರ ಕಾರ್ಯ ಕೈಗೊಂಡಾಗ ಡಾ. ಉಪಾಧ್ಯಾಯ ಎಂಬ ಮಿತ್ರರ ನೆರವಿನೊಂದಿಗೆ ತೆಂಕಕಾರಂದೂರು ಹಾಗು ಸುತ್ತಮುತ್ತಲ ಪ್ರದೇಶಗಳಲ್ಲಿ ಅಧ್ಯಯನ ಕಾರ್ಯ ನಡೆಸಿದಾಗ ಕಿಂಚಿತ್ ಯಶಸ್ಸು ದೊರೆಯಿತು. ತೆಂಕಕಾರಂದೂರಿನ ದೇವಾಲಯದ ಸಮೀಪ ಇದ್ದ ಅಶ್ವತ್ಥ ಕಟ್ಟೆಗೆ ಒರಗಿಸಿಟ್ಟಿದ್ದ ಶಿಲಾಸ್ತಂಭ ಗಮನ ಸೆಳೆಯಿತು. ತಿಕ್ಕಿ ತೊಳೆದಾಗ ಅದರಲ್ಲಿ ಬರಹ ಇದ್ದುದು ಕಂಡುಬಂತು. ಕೂಡಲೆ ಅದರ ಪ್ರತಿ ತೆಗೆದೆ. ಕಲ್ಲಿನ ನಾಲ್ಕು ಮುಖಗಳಲ್ಲಿ ಶಾಸನವನ್ನು ಕೆತ್ತಲಾಗಿತ್ತು. ಶಾಸನವನ್ನು ಓದಿ ಅವರ ಪಾಠವನ್ನು ಸಿದ್ಧ ಮಾಡಿದಾಗ ನನಗರಿವಿಲ್ಲದಂತೆ ಬಾಯಿಂದ **'ಯುರೇಕಾ'** ಶಬ್ದ ಹೊರಟಿತು.

ಶಾಸನ ಕ್ರಿ.ಶ. ೧೩೪೦ ಕ್ಕೆ ಸೇರಿದ ಹೊಯ್ಸಳ ಮೂರನೆಯ ಬಲ್ಲಾಳನದಾಗಿತ್ತು. ಈ ಭಾಗದಲ್ಲಿ ಸಿಕ್ಕಿರುವ ಹೊಯ್ಸಳ ಶಾಸನ ಇದೊಂದೆ. ದಕ್ಷಿಣ ಕನ್ನಡದ ಎಲ್ಲ ಭಾಗಗಳೂ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿದ್ದವು ಎನ್ನುವುದು ಇದರಿಂದ ದೃಢಪಟ್ಟಿತು.

ಶಾಸನದ ಮುಖ್ಯ ವಿಷಯ ಅಂದಿನ ತುಳುನಾಡಿನ ಎರಡು ರಾಜ ಮನೆತನಗಳ ಪುಂಡಾಟಿಕೆಯನ್ನು ಅಡಗಿಸಿ ಅವರನ್ನು ಶಿಕ್ಷಿಸಿ ತಪ್ಪಿಗೆ ದಂಡ ತೆರುವಂತೆ ಮಾಡಿದ್ದು. **"ಅಜಿಲಯ ಬಂಗನು ಕೋಟೆ ಗ್ರಾಮ ಕೆಡಸಿದ್ದಕೆ"** ಎಂದು ಶಾಸನ ಹೇಳುತ್ತದೆ. ಇಲ್ಲಿ **ಅಜಿಲ ಮತ್ತು ಬಂಗ** ಎರಡು ಜೈನರಾಜ ಮನೆತನಗಳು. ವೇಣೂರು ಮತ್ತು ಬಂಗವಾಡಿ ಕ್ರಮವಾಗಿ ಇವರ ರಾಜಧಾನಿಗಳು. ಈರ್ವರ ಇತಿಹಾಸ ಗಮನಿಸಿದಾಗ ಇವರ ಬಗ್ಗೆ ದೊರೆಯುವ ಅತ್ಯಂತ ಪ್ರಾಚೀನ ಮಾಹಿತಿ ಈ ಶಾಸನದಲ್ಲಿ ಎಂಬ ಅರಿವಾಯಿತು. ಈರ್ವರೂ ಕೂಡಿ ಕೋಟೆಗ್ರಾಮವನ್ನು ಏಕೆ ಕೆಡಸಿದರು (ಹಾಳು ಮಾಡಿದರು). ಇಬ್ಬರಲ್ಲೂ ಯಾವ ಸಂಬಂಧ ಇತ್ತು- ಇದಾವುದು ಶಾಸನದಿಂದ ತಿಳಿಯುವುದಿಲ್ಲ. ಆ ಕಾಲದಲ್ಲಿ ಕೋಟೆ ಗ್ರಾಮ ಪ್ರಾಯಶಃ ತನ್ನ ಪ್ರಾಮುಖ್ಯತೆಯನ್ನು ಹೆಚ್ಚಿಸಿಕೊಂಡು ಬಲಯುತವಾಗಿತ್ತೆಂದು ಕಾಣುತ್ತದೆ. ಅಲ್ಲದೆ ಚಕ್ರವರ್ತಿ ಬಲ್ಲಾಳನ ನೇರ ಆಡಳಿತಕ್ಕೂ ಒಳಪಟ್ಟಿದ್ದಿರ ಬಹುದು. ಅಜಿಲ ಮತ್ತು ಬಂಗ ಇದರ ಸಂಪತ್ತನ್ನು (?) ಲೂಟಿ ಮಾಡಲು ಜಂಟಿ ಕಾರ್ಯಾಚರಣೆ ಯೋಜನೆ ರೂಪಿಸಿ ಅದನ್ನು ಕಾರ್ಯಗತ ಮಾಡಿದರು. ಇದರಿಂದ ಚಕ್ರವರ್ತಿಯ ನೇರ ಕ್ರಮಕ್ಕೆ ತುತ್ತಾದರು. ಶಾಸನದಲ್ಲಿ ಈ ಅಜಿಲ ಮತ್ತು ಬಂಗರ ಹೆಸರನ್ನು ಕೊಟ್ಟಿಲ್ಲ. ಕೇವಲ ಅವರ ವಂಶದ ಹೆಸರಿನಿಂದ ಉಕ್ತವಾಗಿದ್ದಾರೆ. ಏನೇ. ಆಗಲಿ ಬೆಳ್ತಂಗಡಿ ತಾಲೂಕಿನಲ್ಲಿ ಆಳಿದ ಎರಡು ಪ್ರಮುಖ ಜೈನ ರಾಜಮನೆತನಗಳ ಬಗ್ಗೆ ಪ್ರಪ್ರಥಮ ಮಾಹಿತಿ ಬೆಳ್ತಂಗಡಿ ತಾಲೂಕಿನ ಈ ಶಾಸನದಲ್ಲಿ ದೊರೆತಿರುವುದು ಗಮನಿಸ ಬೇಕಾದ ವಿಷಯ.

ಈ ಶಿಕ್ಷೆ ಅನುಭವಿಸಿದ ನಂತರ ಅಜಿಲರು ಯಾವ ತಪ್ಪನ್ನು ಮಾಡಿದಂತೆ ಕಾಣುವುದಿಲ್ಲ. ಅಲ್ಲಿಂದ ಅವರ ಜೀವನ ಗತಿಯೇ ಬದಲಾಗಿ ಸಾಂಸ್ಕೃತಿಕ ರಂಗದಲ್ಲಿ ತಮ್ಮ ಕಾರ್ಯ ಚಟುವಟಿಕೆಗಳ ಮೂಲಕ ಗುರುತಿಸಿಕೊಂಡು ನಾಡಿಗೆ ಹೆಸರು ತರುವ ಮಹೋನ್ನತ ಕಲಾಕೃತಿಗಳನ್ನು ಸೃಷ್ಟಿಸಿಕೊಡುವಷ್ಟು ಎತ್ತರಕ್ಕೆ ಏರಿದರು.

ಆದರೆ ಬಂಗರ ಪರಿಸ್ಥಿತಿ ಹಾಗಾಗಲಿಲ್ಲ. ವಿಶಾಲವಾದ ರಾಜ್ಯ ಮತ್ತು ಅಪಾರ ಸಂಪತ್ತು ಅವರಲ್ಲಿತ್ತು. ಕೆಲವು ಕವಿಗಳು ಮತ್ತು ಸಾಹಿತಿಗಳನ್ನು ಬಂಗವಾಡಿಯ ಆಸ್ಥಾನದಲ್ಲಿ ಪೋಷಿಸಿದರೂ ಅಜಿಲರ ಕಲಾಪ್ರೌಢಿಮೆಯನ್ನು ಸರಿಗಟ್ಟಿ ನಿಲ್ಲಬಲ್ಲ ಯಾವುದೇ ಕಲಾಕೃತಿಯನ್ನೂ ಇವರು ನಿರ್ಮಾಣ ಮಾಡಲು ಸಾಧ್ಯವಾಗಲಿಲ್ಲ. ರಾಜಕೀಯವಾಗಿ ಶಕ್ತಿ ಪ್ರದರ್ಶನಕ್ಕೇ ಹೆಚ್ಚು ಒಲವು ತೋರಿದಂತೆ ಕಾಣುತ್ತದೆ. ಇವರ ಉಜಿರೆಯ ಶಾಸನ ಇದಕ್ಕೊಂದು ಸೂಕ್ತ ಉದಾಹರಣೆ ಯಾಗುತ್ತದೆ. ಅಂದು ಹೊಯ್ಸಳ ವೀರಬಲ್ಲಾಳನ ವಿರುದ್ಧ ಸೆಟೆದಿದ್ದರೆ ಈಗ ವಿಜಯನಗರ ಚಕ್ರವರ್ತಿಯ ವಿರುದ್ಧವೇ ಸೆಣಸಿದ್ದಾರೆ. ಇದಕ್ಕೆ ಪ್ರತಿಯಾಗಿ ಮಂಗಳೂರಿನ ರಾಜ್ಯಪಾಲ ವಿಠ್ಠರಸವೊಡೆಯನು (ಮಂಗಳೂರಿನ) ಕೊಡಿಯಾಲದಲ್ಲಿದ್ದ ಬಂಗರ ಅರಮನೆಯನ್ನು ಸುಟ್ಟು ಅವರಿಗೆ ಸೇರಿದ ನೀರು ಮಾರ್ಗ (ಗ್ರಾಮ)ವನ್ನು ಹಾಳುಗೆಡವಿದ. ಈ ಉಗ್ರ ಕ್ರಮದಿಂದ ಬಂಗರಾಜ ಅತಿಯಾದ ನಷ್ಟವನ್ನು ಅನುಭವಿಸಬೇಕಾಯಿತು. ಸ್ವಯಂಕೃತಾಪರಾಧಕ್ಕೆ ಯಾರು ಹೊಣೆ ? ಆದರೆ ರಾಜ್ಯಪಾಲ ವಿಠ್ಠರಸನು ಬಂಗರಾಜನನ್ನು ಸಂಪೂರ್ಣ ಹಾಳು ಮಾಡದೆ ಅವನಿಗಾದ ನಷ್ಟ ಭರಿಸುವ ಸಲುವಾಗಿ **ಉಜಿರೆ** ಗ್ರಾಮವನ್ನು

ಅವನಿಗೆ ಕೊಟ್ಟ. ಕ್ರಿ.ಶ. ೧೪೪೪ಕ್ಕೆ ಸೇರುವ ಉಜಿರೆಯ ಜನಾರ್ದನಸ್ವಾಮಿ ದೇವಾಲಯದ ಶಾಸನ ಈ ವಿಷಯ ತಿಳಿಸುತ್ತದೆ.

ಇಂದು ಶ್ರೀ ಮಂಜುನಾಥನ ಸಂನ್ನಿಧಿಯಲ್ಲಿ ಅವನ ಕೃಪಾಶೀರ್ವಾದದ ಶ್ರೀರಕ್ಷೆಯಲ್ಲಿ ಸೇರಿ ಇತಿಹಾಸದ ಬಗ್ಗೆ ಚಿಂತನೆ ನಡೆಸಿದ್ದೇವೆ. ಇದೊಂದು ನನಗೆ ಸಂಭ್ರಮದ ಸಮಯ. ಇದಕ್ಕೆ ಕಾರಣವಿಲ್ಲದಿಲ್ಲ. ಧರ್ಮಸ್ಥಳದಲ್ಲಿ **'ಬರಮ'** ಎಂಬ ಹೆಸರಿರುವ ಶಾಸನ ಪತ್ತೆ ಮಾಡಿರುವ ವಿಚಾರ ಮೇಲೆ ಹೇಳಿದೆ. ಇದು ಇಷ್ಟಕ್ಕೇ ನಿಲ್ಲದೆ ಕ್ಷೇತ್ರದ ಅಧಿದೇವನಾದ ಮಂಜುನಾಥನನ್ನೇ ಉಲ್ಲೇಖಿಸುವ ಶಾಸನವನ್ನು ಪತ್ತೆ ಮಾಡಬೇಕೆಂಬ ಹಂಬಲ ನನ್ನದಾಯಿತು. ಇದಕ್ಕಾಗಿ ಎಂದಿನಂತೆ ಹುಡುಕಾಟದ ಕಾರ್ಯ ಮುಂದುವರೆಸಿದೆ.

ಪಶ್ಚಿಮ ಘಟ್ಟಗಳ ಸೆರಗಿನಲ್ಲಿ ದಟ್ಟ ಕಾನನದೊಂದಿಗೆ ಕೂಡಿದ ಕಾರ್ಕಳ ತಾಲೂಕಿನ ಗ್ರಾಮ ಈದು. ಇದರ ನೆರೆಯ ಗ್ರಾಮ ಬೆಳ್ತಂಗಡಿ ತಾಲೂಕಿನ ನಾರಾವಿ (ಒಂದು ಕಾಲಕ್ಕೆ ಇದು ಕಾರ್ಕಳ ತಾಲೂಕಿನವೊಳಗೇ ಇತ್ತು). ಈ ಪ್ರದೇಶದಲ್ಲಿ ನನ್ನ ಕ್ಷೇತ್ರ ಕಾರ್ಯ ಆಗ ನಡೆದುಕೊಂಡೇ ಸಾಗಬೇಕಿತ್ತು. ಈದುವಿನ ಕಂಟಾವು ಎಂಬ ಸ್ಥಳ ಮತ್ತು ಮೂಜಲ್ನಾಯ ದೈವಸ್ಥಾನದ ಬಳಿ ಒಂದೊಂದು ಶಿಲಾಶಾಸನ ಪತ್ತೆ ಮಾಡಿ ಪ್ರತಿ ಮಾಡಿದೆ. ದೈವಸ್ಥಾನದ ಬಳಿಯ ಶಾಸನವನ್ನು ಕೇಂದ್ರ ಶಾಸನ ಇಲಾಖೆ ಪ್ರತಿ ಮಾಡಿ (೧೯೫೮-೫೯ರಲ್ಲಿ) ವರದಿ ಮಾಡಿದೆ ಎಂದು ನಂತರ ತಿಳಿಯಿತು. ಶಾಸನಗಳನ್ನು ಓದಿ ಅವುಗಳ ಪಾಠ ಸಿದ್ಧ ಮಾಡಿದಾಗ ನಾನು ಹುಡುಕುತ್ತಿದ್ದ ವಿಷಯದ ಬಗೆಗಿನ ಶಾಸನಗಳು ದೊರೆತ ಖುಷಿ ನನಗಾಯಿತು.

ಇದರಲ್ಲಿ ಕಂಟಾವು ಸ್ಥಳದ ಶಾಸನ ಕ್ರಿಸ. ೧೩೮೭ ಏಪ್ರಿಲ್ ಆದಿತ್ಯವಾರಕ್ಕೆ ಸೇರಿದ್ದು. ಬರ್ಮುಯ ಎಂಬ ವ್ಯಕ್ತಿ **ಕಂಟುಕ** ಎಂಬ ಭೂಮಿಯನ್ನು ಸೂರ್ಯ ದೇವರಿಗೆ ಸರ್ವಮಾನ್ಯವಾಗಿ ದಾನ ಮಾಡಿದ ವಿಚಾರ ಇದರಲ್ಲಿದೆ. ಇದರ ಉತ್ಪತ್ತಿಯ ಸ್ವಲ್ಪ ಭಾಗವನ್ನು ಪ್ರತಿವರ್ಷ **ಮಂಜಿನತ ದೇವರಿಗೆ** ಕೊಡಬೇಕೆಂಬ ಕಟ್ಟು ಮಾಡಿದೆ. ಶಾಸನದಲ್ಲಿ ಯಾವ ರಾಜರ ಉಲ್ಲೇಖವೂ ಇಲ್ಲ.

ಎರಡನೆಯದು ದೈವಸ್ಥಾನದ ಬಳಿ ಇರುವುದು. ಇದು ಕ್ರಿ.ಶ. ೧೪೨೦ ಡಿಸೆಂಬರ ೮ ಗುರುವಾರಕ್ಕೆ ಸೇರಿದ್ದು. ಚಕ್ರವರ್ತಿ ಇಮ್ಮಡಿ ಹರಿಹರ ಹಾಗು ಮಂಗಳೂರಿನ ರಾಜ್ಯಪಾಲ ಲಿಂಗರಸವೊಡೆಯರನ್ನು ಇದು ಉಲ್ಲೇಖಿಸಿವೆ. ರಾಜ್ಯಪಾಲ ಮಹಾಪ್ರಧಾನಿ ಲಿಂಗರಸವೊಡೆಯನ ಕುರಿತಾದ ಶಾಸನ ಸದ್ಯಕ್ಕೆ ಇದೊಂದೆ. ಯೀದಿನೊಳಗಣ ಕುಂಜತ ಬೆಟ್ಟನ್ನು ಮಂಜಿನತ ದೇವರಿಗೆ ದೇವಸ್ಯವಾಗಿ ರಂಗಮತೆಯರಿಗೆ ಧಾರಾಪೂರ್ವಕವಾಗಿ ಕೊಟ್ಟ ವಿಚಾರ ಈ ಶಾಸನದಲ್ಲಿದೆ. ಸರ್ವಮಾನ್ಯ ಮಾಡಿಕೊಟ್ಟ ಈ ಭೂಮಿಯ ಉತ್ಪತ್ತಿಯಿಂದ **ಮಂಜಿನತ ದೇವರಿಗೆ** ಪ್ರತಿ ವರ್ಷ ಎರಡು ಹಾನೆ ಎಣ್ಣೆಯನ್ನು, **ಹೆಗ್ಗಡೆಗೆ** ಎರಡು ಮೂಡೆ ಬತ್ತವನ್ನು ಕೊಡಬೇಕೆಂಬ ನಿಯಮವನ್ನು ಮಾಡಲಾಯಿತು. ಶಾಸನದಲ್ಲಿ ಭೂಮಿಯ ಗಡಿ ವಿವರ ಇದೆ ಮತ್ತು ಹೊಸಬು ಹೆಗ್ಗಡೆ ಎಂಬಾತ ಈ ದಾನ ಮಾಡಿದ.

ಎರಡೂ ಶಾಸನಗಳಲ್ಲಿ ಮಂಜುನಾಥ ದೇವರ ಉಲ್ಲೇಖ ಇದೆ ಮತ್ತು ಆ ದೇವರಿಗೆ ಭೂದಾನ ಮಾಡಲಾಗಿದೆ. ಎರಡನೆಯ ಶಾಸನದಲ್ಲಿ ಎಣ್ಣೆಯನ್ನು ದೇವರಿಗೆ ನೇರವಾಗಿ ಕೊಟ್ಟರೆ (ದೇವರ ಹೆಸರಿನಲ್ಲಿ) ಬತ್ತವನ್ನು ಸ್ವೀಕರಿಸಿದಾತ ಹೆಗ್ಗಡೆ. ಮೊದಲ ಶಾಸನದಲ್ಲಿ ಹೆಸರಿಸಿರುವ **ಸೂರ್ಯದೇವ** ನಾರಾವಿಯಲ್ಲಿರುವ ಸೂರ್ಯನಾರಾಯಣ ದೇವಸ್ಥಾನದ ಮೂಲದೇವರು. ದಾನ ಮಾಡಿದ ಸ್ಥಳ ಈದುವಿನಲ್ಲಿದ್ದರು ಅದು ನಾರಾವಿಗೆ ಸಮೀಪದಲ್ಲೇ ಇದೆ. ಹಾಗಾದರೆ ಇಲ್ಲಿ ಹೆಸರಿಸಿರುವ **ಮಂಜಿನತ ದೇವರು** ಯಾರು ಎಂಬ ಪ್ರಶ್ನೆ ಉದ್ಭವಿಸಿತು. ಮಂಗಳೂರು ಬಳಿಯ ಕದ್ರಿ ಮಂಜುನಾಥನಿಗೆ ಈ ದಾನ ಸೇರುತ್ತದೆಂಬುದು ಅಸಂಭವ ಎನಿಸಿತು. ಕಾರಣ ಮಂಗಳೂರಿಗೂ ಇಲ್ಲಿಗೂ ಇರುವ ದೂರ ಮತ್ತು ದಾನದ ಉತ್ಪತ್ತಿಯ ಪ್ರಮಾಣ. ದಾನದ ಸ್ಥಳ ಮತ್ತು ಭೂಮಿಗಳು ಬೆಳ್ತಂಗಡಿಯ ಧರ್ಮಸ್ಥಳಕ್ಕೆ ತೀರ ಸಮೀಪದಲ್ಲಿದ್ದು, ದೇವರ ಹೆಸರಿನಲ್ಲಿ ಹೆಗ್ಗಡೆ ಅದರ ಉತ್ಪತ್ತಿಯನ್ನು ಸ್ವೀಕರಿಸಿರುವುದನ್ನು ನೋಡಿದಾಗ ಎರಡೂ ಶಾಸನಗಳಲ್ಲಿ ಉಕ್ತವಾಗಿರುವ **ಮಂಜಿನತ** (ಮಂಜುನಾಥ) ದೇವರು ಧರ್ಮಸ್ಥಳದ ದೇವರಲ್ಲದೇ ಬೇರೆ ಆಗಿರಲು ಸಾಧ್ಯವಿಲ್ಲ ಎಂಬ ಅಭಿಪ್ರಾಯ ನನ್ನದಾಯಿತು. ನಾರಾವಿಯ ಸುತ್ತಮುತ್ತ ಬೇರಾವುದೇ ಮಂಜುನಾಥ ದೇವರು ಇಲ್ಲದಿರುವುದು ನನ್ನ ಅಭಿಪ್ರಾಯಕ್ಕೆ ಪುಷ್ಟಿ ನೀಡಿತು.

ಇದರಿಂದ ಬೆಳಕಿಗೆ ಬಂದ ಒಂದು ಮುಖ್ಯ ವಿಷಯವೆಂದರೆ ಕ್ರಿ.ಶ. ೧೩೮೭ರ ವೇಳೆಗೇ ಧರ್ಮಸ್ಥಳದಲ್ಲಿ ಮಂಜುನಾಥ ದೇವರು ಜನರಿಂದ ಸೇವೆ ಸ್ವೀಕರಿಸಿ ಪೂಜಿಸಲ್ಪಟ್ಟಿತ್ತು ಎಂಬುದು ಎರಡನೆಯದಾಗಿ ಈ ದೇವಾಲಯದ ವ್ಯವಸ್ಥಾಪನಾ ಕಾರ್ಯಗಳ ಜವಾಬ್ದಾರಿಯನ್ನು ಆಗಲೇ ಹೊತ್ತಿದ್ದವರು ಹೆಗ್ಗಡೆಗಳು ಎಂಬ ಅಂಶವೂ ಬಹಳ ಮುಖ್ಯವಾದುದು.

ಈ ಅಂಶಗಳು ಬೆಳಕಿಗೆ ಬಂದ ನಂತರ ವಾದಿರಾಜರ ಕಾಲದ ಘಟನೆಯ ಬಗ್ಗೆ ನನ್ನ ಗಮನಹರಿಯಿತು. ಇತಿಹಾಸದ ಮುಖ್ಯ ಆಧಾರಗಳಾದ ಶಾಸನಗಳು ಕೊಡುವ ಮಾಹಿತಿಯ ಹಿನ್ನೆಲೆಯಲ್ಲಿ ವಾದಿರಾಜರ ಕಾಲದ ಘಟನೆ (ಒಂದು

ಜನಜನಿತವಾದ ನಂಬಿಕೆ)ಯನ್ನು ತುಲನೆ ಮಾಡಿದೆ. ಆಗ ನನಗೆ ಹೊಳೆದದ್ದು ಪ್ರಾಯಶಃ ಈ ದೇವಾಲಯದ ಜೀರ್ಣೋದ್ಧಾರ ಕಾರ್ಯ ಆಗ ನಡೆದಿದ್ದು ಅದರ ಬ್ರಹ್ಮ ಕಲಾಶಾಭಿಷೇಕ ಮಹೋತ್ಸವದಲ್ಲಿ ವಾದಿರಾಜರು ಭಾಗಿಗಳಾಗಿ ಅದರ ವೈಭವಕ್ಕೆ ಮಾರುಹೋಗಿ ಕುಡುಮ – ಧರ್ಮಸ್ಥಳ ಎಂದಿರಬೇಕು. ಹೀಗೆ ವಾದಿರಾಜರಿಗೂ ಸುಮಾರು ಇನ್ನೂರು ವರ್ಷಗಳಿಗೂ ಹಿಂದೆ ಧರ್ಮಸ್ಥಳದಲ್ಲಿ ಮಂಜುನಾಥ ಪೂಜೆಗೊಂಡಿದ್ದ ಹಾಗು ಅವನ ಸೇವಾಕಾರ್ಯ ನಡೆಸಿದ್ದ ಹೆಗ್ಗಡೆಗಳ ವಂಶ ಆರುನೂರಕ್ಕೂ ಅಧಿಕ ವರ್ಷಗಳಿಂದ ನಿರಂತರವಾಗಿ ಈ ಕಾರ್ಯ ನಡೆಸುತ್ತಾ ಬಂದಿದೆ.

ಇಷ್ಟು ಪ್ರಾಚೀನ ಕಾಲಕ್ಕೆ ಧರ್ಮಸ್ಥಳದ ಇತಿಹಾಸವನ್ನು ಕೊಂಡೊಯ್ಯಲು ಈ ಶಾಸನಗಳಿಂದ ನನಗೆ ಸಾಧ್ಯವಾಯಿತು ಎಂಬ ಅರಿವಾದಾಗ ಯಾವುದೋ ಧನ್ಯತಾ ಭಾವ ನನ್ನಲ್ಲಿ ಮೂಡಿತು. ಆದರೆ ಮನಸ್ಸಿನಲ್ಲಿದ್ದ ತವಕ ನಿಲ್ಲಲಿಲ್ಲ. ಮತ್ತೂ ಕಾರ್ಯ ಮುಂದುವರೆಸುವುದಕ್ಕೆ ಪ್ರಚೋದನೆ ನೀಡಿತು. ಇದರ ಫಲ ನನಗೆ ಮತ್ತೊಂದು ಶಾಸನ ದೊರೆಯಿತು. ಇದೂ ಸಹ ಈದು ಗ್ರಾಮದ್ದೆ. ಹೊಳೆಯ ಆಚೆ ಬದಿಗಿದ್ದ ಈ ಶಾಸನವನ್ನು ಹೊಳೆಯ ಈಚೆಯ ಬದಿಯಲ್ಲಿದ್ದ ಬಸದಿಗೆ ಕ್ಷೇತ್ರ ಪಾಲನ ಕಲ್ಲಾಗಿ ತಂದು ನಿಲ್ಲಿಸಿದ್ದರು. ಕ್ರಿ.ಶ. ೧೨೦೦ಕ್ಕೆ ಸೇರುವ ಈ ಶಾಸನ ಆಳುಪರಾಜ ಒಂದನೆಯ ಕುಲಶೇಖರನದ್ದು. ಬೆಳ್ತಂಗಡಿ ತಾಲೂಕಿನಲ್ಲಿ ಆಳುಪರಿಗೆ ಸೇರಿದಂತೆ ದೊರೆತಿರುವ ಎರಡನೆಯ ಶಾಸನ ಇದು. ರಾಜ [ಮಂಗಲಾಪುರದ] ಹಿರಿಯರಮನೆಯ ಓಲಗದಲ್ಲಿದ್ದಾಗ ಪ್ರಧಾನಿ ಮುಖ್ಯರಾದ ಎಲ್ಲರು ಇದ್ದಾಗ ಅವರೊಂದಿಗೆ **ನಖರಹಂಜಮಾನದವರೂ** ಇದ್ದರು ಎಂದು ಶಾಸನ ತಿಳಿಸುತ್ತದೆ. **ನಖರ ಹಂಜಮಾನದವರ** ಕುರಿತಾದ ಈ ಮಾಹಿತಿ ತುಳುನಾಡಿಗೆ ಪ್ರಥಮದ್ದು. ಅವರು ಬೆಳ್ತಂಗಡಿ ಮುಂತಾದ ಸ್ಥಳಗಳವರೆಗೂ ತಮ್ಮ ಕಾರ್ಯಚಟುವಟಿಕೆಯನ್ನು ವಿಸ್ತರಿಸಿದ್ದರು.

ಎಲ್ಲಕ್ಕಿಂತ ಮುಖ್ಯವಾದ ವಿಚಾರವೆಂದರೆ **'ಮಂಜಿನತ ದೇವರಿಗೆ'** ಕೊಟ್ಟ ಭೂದಾನ (ಯೀದಿನ ಭಾಗದಲ್ಲಿ) ವನ್ನು ದೇವರ ಪರವಾಗಿ ಸ್ವೀಕರಿಸಿದವರು **'ಹೆಗ್ಗಡೆ'** ಎಂದು ಉಲ್ಲೇಖವಾಗಿರುವುದು. ಇಲ್ಲಿ ಉಕ್ತವಾಗಿರುವ **ದೇವರು ಮತ್ತು 'ಹೆಗ್ಗಡೆ'** ಧರ್ಮಸ್ಥಳದ್ದೇ ಎಂದು ಬೇರೆ ಹೇಳಬೇಕಾದ್ದಿಲ್ಲ. ಈ ಶಾಸನವನ್ನು ಓದಿ ಸಿದ್ಧಪಡಿಸಿದ ಪಾಠವನ್ನು ಅರ್ಥೈಸಿಕೊಂಡಾಗ ನಾನು ನಿಜಕ್ಕೂ ಸಂಭ್ರಮಿಸಿದೆ. ಕಾರಣ ತುಳುನಾಡಿನ ಮಹಾನ್ ಕ್ಷೇತ್ರವೊಂದರ ಇತಿಹಾಸದ ಪ್ರಾಚೀನತೆಯನ್ನು ಕ್ರಿ.ಶ. ೧೨೦೦ಕ್ಕೆ ಕೊಂಡೊಯ್ಯಲು ಸಾಧ್ಯ ಮಾಡಿದ ಈ ಶಾಸನ ಶೋಧನೆ.

ಈ ಶಾಸನದ ಆಧಾರದಲ್ಲಿ ಹೇಳಬಹುದಾದುದೆಂದರೆ ಪ್ರಾಯಃ ಈ ದೇವಾಲಯ ೧೨ನೆಯ ಶತಮಾನಕ್ಕೂ ಮೊದಲಿನಿಂದ ಇತ್ತು. ದೇವಸ್ಥಾನದಷ್ಟೇ ಪ್ರಾಚೀನವಾಗುತ್ತದೆ ಇದರ ಹೆಗ್ಗಡೆಗಳ ವಂಶ. ಎಂಟು ಶತಮಾನಗಳಿಗೂ ಹೆಚ್ಚು ಕಾಲದಿಂದ ಒಂದು ಮನೆತನ ಅವಿಚ್ಛಿನ್ನವಾಗಿ ನಡೆದು ಬಂದಿದೆ ಎನ್ನುವುದು ಇತಿಹಾಸದ ಚೋದ್ಯ. ಧರ್ಮಸ್ಥಳ ಇಂತಹ ಅಪೂರ್ವ ಸಂಗತಿಗೆ ನಿದರ್ಶನವಾಗಿದೆ.

ನನ್ನೆಲ್ಲಾ ಸಂಶೋಧನೆಯ ಕೇಂದ್ರಸ್ಥಾನ ಅವಿಭಜಿತ ದಕ್ಷಿಣ ಕನ್ನಡ. ಇದರ ಉದ್ದಗಲಕ್ಕೆ ಸುತ್ತಿದ್ದೇನೆ. ಈ ಸುತ್ತಾಟದಲ್ಲಿ ಹಲವಾರು ಮಂದಿ ಹಿತೈಷಿಗಳನ್ನು, ಸ್ನೇಹಿತರನ್ನು ಸಂಪಾದಿಸಿದ್ದೇನೆ. ಅದೆಷ್ಟೋ ಮಂದಿಯಿಂದ ಸಹಕಾರ ಪಡೆದು ಉಪಕೃತನಾಗಿದ್ದೇನೆ. ಅವರೆಲ್ಲರನ್ನೂ ನನ್ನ ಮನಸ್ಸು ನೆನೆಯುತ್ತಿದ್ದರೂ ಇಲ್ಲಿ ಅನಾಮಿಕರಾಗಿ ಉಳಿದಿದ್ದಾರೆ.

ನನ್ನ ಕಾರ್ಯಕ್ಷೇತ್ರದ ಒಂದು ಅತ್ಯಂತ ಪವಿತ್ರ ಕ್ಷೇತ್ರ ಧರ್ಮಸ್ಥಳ. ಇಲ್ಲಿ ನನಗೆ ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ಪ್ರದಾನವಾಗಿದೆ. ಇದೊಂದು ಯೋಗಾಯೋಗ. ಇದು ಶ್ರೀ ಮಂಜುನಾಥನ ಕೃಪೆಯೊಂದಿಗೆ ನನ್ನ ಕಾರ್ಯದಲ್ಲಿ ಸಹಕರಿಸಿ ಪೋಷಿಸಿಕೊಂಡು ಬಂದ ಇಲ್ಲಿಯ ಜನತೆಗೆ ಸಂದ ಗೌರವ ಎಂದು ಭಾವಿಸುತ್ತೇನೆ. ಇನ್ನೂ ಹೆಚ್ಚಿನ ಸಾಧನೆ ಮಾಡಲು ನನ್ನಲ್ಲಿ ಶಕ್ತಿ ತುಂಬುವಂತೆ ದೇವರಲ್ಲಿ ಬೇಡುತ್ತಾ ಎಲ್ಲರಿಗೂ ವಂದಿಸಿ ವಿರಮಿಸುತ್ತೇನೆ.

## Biodata

Prof. P.N. Narasimha Murthy born in 1940 at Periyapatna where he had his early education, moved to Mysore for higher education, got his postgraduate degree from the Mysore University and then joined the faculty of Sri Bhuvanendra College, Karkala (1967). Here he served for three decades as Professor and HOD of History. Later on he was transferred to the MGM College, Udupi. Here he served and retired as Principal.

Prof. Murthy hnd his early training in historical and epigraphical research from Dr. S. Srikantha Sastry, a historian of great repute and a very famous Professor of History of the Mysore University, while working under him for the U.G.C. Project-"The Sources of Karnataka History" volumes II and III, a work mostly based on epigraphical sources. Later he worked for his Ph.D. under Dr. A.N. Upadhye, a scholar of international repute in Prakrti, Sanskrit and Jainalogy, and obtained his Ph.D. from the Mysore University for the Thesis "Jainism on the Kanara Coast". The Thesis (though unpublished) has been hailed as an important contribution to the field of Jaina Studies by the examiners.

Dr. Murthy's extensive Field Work in the former District of Dakshina Kannada now the districts of Dakshina Kannada and Udupi, with the peripheral districts Uttara Kannada, Shimoga, Chickamagalur, Hassan and Coorg with a big haul of new epigraphs brought him very close to Dr. K.V. Ramesh, an epigraphist of National and International fame. When the office of the Chief Epigraphist (now the Director of Epigraphy) was shifted from Ooty to Mysore (in 1966) young scholars got very good opportunity to stream line their studies with the help of original materials and senior scholars who were working there. Dr. Murthy was one of the earliest scholars to make use of this facility which is continued even to-day.

As a part of his Post-Doctoral Research Dr. Murthy has been able to publish a number of books and over 200 articles. A few of them have been listed below :

1. Hattiyangadi Omdu aitihasika adhyayana.
2. Basaruru as reflected in inscriptions.
3. Karkala an area study.
4. Kundeshwara - a study.
5. Kandavara Kartikeya.
6. Udupi Krishna Matha through inscriptions.
7. Paryaya Swamijis of Sri Krishna Matha from Inscriptions.
8. A historical survey of Mudabidure, a holy jaina centre.
9. Art and Architecture of South Kanara.
10. Art and architecture of Mudabidure.
11. Art and Architecture of Basaruru.
12. Jaina art and Architecture of South Kanara.
13. Contributions of the Royal Families of Karnataka to Jainism.
14. Religlous conditions in the Taluk of Kundapura.
15. The Kellas of Kella puttige.
16. The Ajilas of Venur.
17. The Alupas.
18. Hattiyangadi Sri Siddhivinayaka.

19. *Dakshina Kannadada Devalayagalu* (It contains 76+472 pages of writing. 12 maps and 112 photographs published in 2000 by the Managing Trustee of Sri Janardana and Mahakali tample, Ambalapadi, Udupi.)

20. *Kantavavara - A Study* (2003).

21. The latest in this field is KUNDANADINA SHASANAGALU-2007-a work on selected In scriptions of the taluk of Kundapura (Udupi district) with Text and commentaries.

22. At present working on three improtant Projects;

(1) "Sources for the Study of the Socio-economic History of the ALUPAS"_A Major Research Project of the U.G.C., New Delhi.

(2) Sources for the History of Dakshina Kannada - I.C.H.R. New Delhi.

(3) Preparing Two Volumes of Inscriptions of Udupi and Dakshina Kannada Districts, along with Dr. K.V. Ramesh. The Udupi volume is almost under completion.

The extensive field work of Dr. Murthy has yielded to him more than 350 new epigraphs of varied interest and importance. They are seeing the light in the forth coming volumes. Dr. Murthy has travelled widely throughout the country and has atteneded numerous conferences and Seminars - many of them being sponsored by the UGC and ICHR, New Delhi. He has also served as a Resource Person in several Faculty Training Programmes.

He is associated with the activities of (1) The Epigraphical Society of India, (2) The Place Names Society of India and (3) The Karnataka Itihasa Academy since their inception.

Dr. Narasimha Murthy has been Honoured and Felicitated for his research work on different occasions and at different places :

The Rotary Club of Karkala, Karkala.

Sri Bhuvanendra College, Karkala.

The First Taluk Sahitya Sammelana, Karkala.

Vidyaranya Yuvaka Sangha, Periyapatna.

"Dr. A.N. Upadhye Birth Centenary Celebration," felicitation for Jaina Research, a programme of the Bombay University organized by the Sahitya Sangha, Karkala Taluk.

'Polali Shenappa Heggade Prashati' for the contribution in the field of study and Research in Tulva History and Culture, Rashtrakavi Govinda pai Samshodhana Kendra, Udupi.

ಡಾ. ಎಸ್.ಜಿ. ರಾಮದಾಸರೆಡ್ಡಿ*

# ಲೋಕಪಾವನಿ ನದೀ ತೀರದಲ್ಲಿ ಪ್ರಾಗೈತಿಹಾಸಿಕ ಅವಶೇಷಗಳು

ಮಾನುಕುಲದ ಇತಿಹಾಸ ಹಾಗೂ ಸಂಸ್ಕೃತಿಯ ಅಧ್ಯಯನ ನಡೆಸುವವರಿಗೆ ಪರಿಸರದ ಪ್ರಾಮುಖ್ಯತೆಯ ಬಗ್ಗೆ ಹೆಚ್ಚಿನ ಅರಿವುಂಟಾಗುತ್ತದೆ. ಭೌಗೋಳಿಕವಾಗಿ ವಿವಿಧ ಪ್ರದೇಶಗಳಲ್ಲಿ ನೆಲೆಸಿರುವ ಮಾನವರು ತಮ್ಮದೇ ಆದ ವೈಶಿಷ್ಟತೆಯನ್ನು ಹೊಂದಿದ್ದು ಗೋಚರವಾಗುತ್ತದೆ. ನದಿಯ ತೀರಗಳಲ್ಲಿ ಲಭ್ಯವಿರುವ ಅವಶ್ಯಕವಾದ ಕಲ್ಲಿನ ಉಪಕರಣಗಳನ್ನು ಬಳಸಿಕೊಂಡು ನದಿಕಣಿವೆಗಳಲ್ಲಿ, ತೀರಗಳಲ್ಲಿ ಒಳಪ್ರದೇಶಗಳಲ್ಲಿ ವಾಸಿಸಲಾರಂಭಿಸಿದ ಬಗ್ಗೆ ಪ್ರಾಚೀನ ನೆಲೆಗಳು ಮಾಹಿತಿ ನೀಡುತ್ತಿವೆ.

ಪಂಚ ನದಿಗಳ ನಾಡೆಂಬ ಹೆಗ್ಗಳಿಕೆಗೆ ಪಾತ್ರವಾದ ಮಂಡ್ಯ ಜಿಲ್ಲೆಯಲ್ಲಿ ಕಾವೇರಿ, ಹೇಮಾವತಿ, ಶಿಂಷಾ, ವೀರವೈಷ್ಣವಿ, ಲೋಕಪಾವನಿ ನದಿಗಳು ಹರಿಯುತ್ತಿವೆ. ಪ್ರಸ್ತುತ "ಲೋಕಪಾವನಿ" ನದಿಯು ನಾಗಮಂಗಲ ತಾಲ್ಲೂಕಿನ ಹೊಣಕೆರೆ (ಹೊನ್ನುಕೆರೆ) ಹೋಬಳಿಯಲ್ಲಿ ಹುಟ್ಟುತ್ತದೆ. ಬೊಗಾದಿಯ ಸುತ್ತಮುತ್ತಲ ಪ್ರದೇಶದಿಂದ ಹರಿದು ಬರುವ ನೀರು ಹೊಣಕೆರೆ (ಹೊನ್ನುಕೆರೆ), ಚಿಣ್ಯ, ಮಾಚಘಟ್ಟ, ಕಾಳೇನಹಳ್ಳಿ, ಹುಲಿಕೆರೆ, ಸುಂಕ ತೊಣ್ಣೂರು, ಮೇಲುಕೋಟೆ, ನುಗ್ಗಿಹಳ್ಳಿ, ಕುಂತಿಬೆಟ್ಟ, ಚಿಕ್ಕಮರಳಿ ಇತರೆ ಗ್ರಾಮಗಳ ಮುಖಾಂತರ ಹರಿಯುವಾಗ ಮೋತಿತಲಾಬ್‌ನಿಂದ ಹರಿಯುವ ಹಳ್ಳವನ್ನು ಕೂಡಿಕೊಂಡು ಶ್ರೀರಂಗಪಟ್ಟಣ ತಾಲ್ಲೂಕು ಇತಿಹಾಸ ಪ್ರಸಿದ್ಧ ಕರಿಘಟ್ಟ ತಪ್ಪಲ ಬಳಿ "ಸಂಗಮ"ದಲ್ಲಿ ಕಾವೇರಿ ನದಿ ಜೊತೆ ಸೇರುತ್ತದೆ.

ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು ಪಶ್ಚಿಮ ದಿಕ್ಕಿನಲ್ಲಿ ಹರಿಯುವ ಲೋಕಪಾವನಿ ನದಿಗೆ ಹರಿದು ಹೋಗುವ ಹಳ್ಳದ ದಂಡೆಗಳಲ್ಲಿ ಹಾಗೂ ಸುತ್ತಮುತ್ತಲ ನೆಲೆಗಳಲ್ಲಿ ಅಂತ್ಯ ಹಳೇಶಿಲಾಯುಗ, ನವಶಿಲಾಯುಗ ಸಂಸ್ಕೃತಿ, ಬೃಹತ್ ಶಿಲಾಯುಗ ಸಂಸ್ಕೃತಿ ಮತ್ತು ಇತಿಹಾಸ ಆರಂಭ ಕಾಲದ ಅವಶೇಷಗಳು ದೊರಕಿವೆ.

ಇತಿಹಾಸ ಪ್ರಸಿದ್ಧ ಕುಂತಿಬೆಟ್ಟವು ಸಮುದ್ರಮಟ್ಟದಿಂದ ೨೮೮೨ ಅಡಿಗಳಷ್ಟು ಎತ್ತರದಲ್ಲಿದ್ದು ಲೋಕಪಾವನಿ ನದಿ ದಡದಲ್ಲಿದೆ. ಬೆಟ್ಟದಿಂದ ದಕ್ಷಿಣಕ್ಕೆ ಇಳಿಜಾರಾದ ಸಮತಟ್ಟಾದ ಭೂಭಾಗದಲ್ಲಿ ಚಿಕ್ಕಾಡೆ ಗ್ರಾಮದ ನೆಲೆ, ಉತ್ತರಕ್ಕೆ ಓರೇಮರಳಿ ಗ್ರಾಮದ ನೆಲೆ, ಕುಂತಿಬೆಟ್ಟ ಮತ್ತು ಒನಕೆ ಬೆಟ್ಟದ ಮಧ್ಯೆ ಜೀರ್ಣೋದ್ಧಾರಗೊಳ್ಳುತ್ತಿರುವ ಅನ್ನಪೂರ್ಣೇಶ್ವರಿ ದೇವಸ್ಥಾನದ ತಳಪಾಯದ ಭೂಭಾಗದ ನೆಲೆ ಹಾಗೂ ಕುಂತಿ ಬೆಟ್ಟದ ಮೇಲೆ ಭೀಮನ ಪಾದದ ಸುತ್ತಮುತ್ತ ಸುಮಾರು ೧೦೦೦ ಅಡಿ ಎತ್ತರದಲ್ಲಿ ಸಮತಟ್ಟಾದ ಒಂದು ಹೆಕ್ಟೇರು ಭೂಭಾಗದಲ್ಲಿ ಹಾಗೂ ನೈಸರ್ಗಿಕ ಗುಹೆಗಳಲ್ಲಿ, ಕಲ್ಲಾಸರೆಗಳಲ್ಲಿ ಭಾರಿ ಅವಶೇಷಗಳು ದೊರಕಿವೆ. ಈ ನೆಲೆಗಳು ಪೂರ್ವಕ್ಕೆ ಪಾಂಡವಪುರ ತಾಲ್ಲೂಕು, ಪಶ್ಚಿಮಕ್ಕೆ ಮಂಡ್ಯ ಜಿಲ್ಲೆ, ಉತ್ತರಕ್ಕೆ ನಾಗಮಂಗಲ, ದಕ್ಷಿಣಕ್ಕೆ ಶ್ರೀರಂಗಪಟ್ಟಣ ತಾಲ್ಲೂಕುಗಳಿಂದ ಸುತ್ತುವರಿದಿದ್ದು, ಪಾಂಡವಪುರದ ಪಶ್ಚಿಮಕ್ಕೆ ೨ ಕಿ.ಮೀ. ದೂರದಲ್ಲಿದೆ. ಕೆಂಪು, ಮರಳು ಮಿಶ್ರಿತ ಬೂದಿ ಮಣ್ಣಿನಿಂದ ಕೂಡಿದ ಭೂಭಾಗದಲ್ಲಿ ನೆಲೆಗಳಿವೆ.

ದಿನಾಂಕ ೨೭-೬-೨೦೦೮ರಂದು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಾಂಡವಪುರ, ಮಂಡ್ಯ ಜಿಲ್ಲೆಯ ಕಾಲೇಜಿನ ಪ್ರಾಧ್ಯಾಪಕರಾದ ಪ್ರೊ. ಬಿ.ಎಸ್. ಮಂಜುನಾಥ್, ವಿದ್ಯಾರ್ಥಿಗಳಾದ ಚನ್ನಮಾದೇಗೌಡ, ಸಿ.ಡಿ. ಪ್ರತಾಪ, ಚಿಕ್ಕಾಡೆ ಗ್ರಾಮದ ಹೆಚ್. ಗಿರಿರಾಜು ಅವರ ಸಹಕಾರದೊಂದಿಗೆ ಚಿಕ್ಕಾಡೆ ಗ್ರಾಮದಿಂದ ಕುಂತಿಬೆಟ್ಟಕ್ಕೆ ಹೋಗುವ ದಾರಿಯ ಪಕ್ಕದಲ್ಲಿ, ಬೆಟ್ಟದ ಇಳಿಜಾರಾದ ಭೂಭಾಗದಲ್ಲಿ ಕ್ಷೇತ್ರ ಕಾರ್ಯಕ್ಕೆ ಹೋದೆವು ಈ ನೆಲೆಯಲ್ಲಿ ರಾಬರ್ಟ್ ಬ್ರೂಸಿಫೂಟ್ ಅವರು ಪರಿವೀಕ್ಷಣಾ ಸಮಯದಲ್ಲಿ ನವಶಿಲಾಯುಗ ಸಂಸ್ಕೃತಿ, ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದ. ಇದೇ ನೆಲೆಯಲ್ಲಿ ಡಾ. ಎಂ.ಎಸ್. ಕೃಷ್ಣಮೂರ್ತಿ ಅವರು ಹಳೇಶಿಲಾಯುಗ, ಮಧ್ಯಹಳೇ ಶಿಲಾಯುಗ, ನವಶಿಲಾಯುಗ ಸಂಸ್ಕೃತಿ, ಬೃಹತ್ ಶಿಲಾಯುಗ ಸಂಸ್ಕೃತಿ ಮತ್ತು ಇತಿಹಾಸ ಆರಂಭ ಕಾಲದ ಅವಶೇಷಗಳನ್ನು ಸಂಗ್ರಹಿಸಿದ್ದಾರೆ. ಈ ನೆಲೆಯಲ್ಲಿ ರಾಬರ್ಟ್ ಬ್ರೂಸ್‌ಫೂಟ್ ಅವರಿಗೆ ನವಶಿಲಾಯುಗ ಸಂಸ್ಕೃತಿಯ ಉಪಕರಣಗಳು ದೊರಕಿದ್ದು ನನ್ನ ಕ್ಷೇತ್ರ ಕಾರ್ಯದ ಸಮಯದಲ್ಲಿ ಈ ಸಂಸ್ಕೃತಿಗೆ

*ಆಯ್ಕೆ ಶ್ರೇಣಿ ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುವೆಂಪುನಗರ, ಮೈಸೂರು.

ಸೇರಿದ ಒಂದು ಕಲ್ಲಿನ ಕೊಡಲಿಯು ದೊರೆಯಲಿಲ್ಲವೆಂದು ಡಾ. ಎಂ.ಎಸ್. ಕೃಷ್ಣಮೂರ್ತಿ ಅವರು ಅಭಿಪ್ರಾಯಪಟ್ಟಿದ್ದಾರೆ.

ಇದೇ ನೆಲೆಯಲ್ಲಿ ನಂತರ ನಾವು ಮಾಡಿದ ನಮ್ಮ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಹೊಳಪುಳ್ಳ ಮೊನೆಯುಳ್ಳ ಡಾಲೊರೈಟ್ ಡೈಕ್‌ಶಿಲೆಯ ಮುರಿದ ಕಲ್ಲಿನ ಕೊಡಲಿ, ಅರೆಯುವ ಕಲ್ಲು, ಕುಟ್ಟುವ ಕಲ್ಲುಗಳು. ಕಲ್ಲಿನ ಕೊಡಲಿಗಳನ್ನು ಮಾಡಿಕೊಳ್ಳಲು ಚಕ್ಕೆ ತೆಗೆದಿರುವ ೧೭ ಸೆಂ.ಮೀ. ಉದ್ದ, ೭ ಸೆಂ.ಮೀ. ಅಗಲ ಮತ್ತು ೨೦ ಸೆಂ.ಮೀ. ಉದ್ದದ ಎರಡು ಅಪೂರ್ಣಗೊಂಡ ಕಲ್ಲಿನ ಆಯುಧಗಳು ದೊರೆತಿವೆ, ಈ ಆಧಾರದಿಂದ ಈ ನೆಲೆ "ಆಯುಧ ತಯಾರಿಕಾ ನೆಲೆ"ಯಾಗಿತ್ತೆನ್ನಬಹುದು. ಈ ತರಹದ ಚಕ್ಕೆ ತೆಗೆದ ಕಲ್ಲಿನಾಯುಧಗಳು ವೇದಾವತಿ ನದಿ ತೀರದ ಪಿ. ಮಹದೇವಪುರದ ನೆಲೆಯಲ್ಲಿ ದೊರಕಿವೆ ಹಾಗೂ ಇದೇ ನೆಲೆಯಲ್ಲಿ ಇಲ್ಲಿಯವರೆಗೂ ದೊರೆಯದೇ ಇರುವ ಅಂತ್ಯ ಹಳೇಶಿಲಾಯುಗದ ಚಿಣಚುಕಲ್ಲಿನ ಕಲ್ಲಿನಾಯುಧಗಳು ದೊರಕಿವೆ. (ಚಿತ್ರ ೧) ಜೊತೆಗೆ ಬೃಹತ್ ಶಿಲಾಯುಗ ಸಂಸ್ಕೃತಿಯ, ಅವಶೇಷಗಳು ಇತಿಹಾಸ ಆರಂಭ ಕಾಲದ ವಿವಿಧ ನಮೂನೆ ಅಲಂಕಾರದ ಮಡಿಕೆ ತುಂಡುಗಳು, ನಯವಾದ ಕಲ್ಲಿನ ಮುರಿದ ದುಂಡಾದ ಗುಂಡು ದೊರಕಿದ್ದು, ಇದನ್ನು ತೂಕದ ಗುಂಡಾಗಿ ಬಳಸಿರಬಹುದು. ಸುಟ್ಟಮಣ್ಣಿನ "ಹಳ್ಳು ಮಣೆ" (ಚಿತ್ರ ೨) ಸಿಕ್ಕಿದ್ದು ೧೩ ಸೆಂ.ಮೀ. ಅಗಲ, ೭ ಸೆಂ.ಮೀ. ಉದ್ದವಿದ್ದು (ಮುರಿದಿದೆ) ಮಣೆಯ ಒಂದೊಂದು ಕುಳಿ ೧ ಇಂಚು, ೧/೨ ಇಂಚು ಅಳತೆಯ ೨ ಮುರಿದ, ೨ ಚೆನ್ನಾಗಿರುವ ಕುಳಿಗಳಿವೆ. ಹಳ್ಳುಮಣೆ ವಿಶ್ಲೇಷವಾಗಿದ್ದು ಈ ನೆಲೆಯಲ್ಲಿ ಸಿಕ್ಕಿರುವುದರಿಂದ ವಿರಾಮದ ವೇಳೆ ಕಳೆಯಲು ಮನರಂಜನೆಗಾಗಿ ಬಳಸುತ್ತಿದ್ದಾರೆಂದು ಹೇಳಬಹುದು. ಹಾಗೂ ಎರಡು ಮುರಿದ ದುಂಡಾದ ನಯವಾದ ಕಲ್ಲಿನ ಪಾತ್ರೆಗಳು, ಇತರೆ ಅವಶೇಷಗಳು ದೊರಕಿವೆ.

ಅನ್ನಪೂರ್ಣೇಶ್ವರಿ ದೇವಾಲಯದ ತಳಪಾಯದ ನೆಲೆಯು ಕುಂತಿಬೆಟ್ಟ (ಚಿತ್ರ ೩) ಮತ್ತು ಒನಕೆಬೆಟ್ಟಗಳ ಮಧ್ಯದ ಸಮತಟ್ಟಾದ ಭೂಭಾಗದಲ್ಲಿ ಅಂದರೆ ಬಸವಣ್ಣ, ಗಣೇಶ ಮೂರ್ತಿ, ಮಲ್ಲಿಕಾರ್ಜುನ ದೇವಾಲಯ, ನೀರಿನ ಕೊಳ ಈ ಪ್ರಮುಖ ಅಂಶಗಳ ಮಧ್ಯ ಅನ್ನಪೂರ್ಣೇಶ್ವರಿ ದೇವಾಲಯವಿದೆ. ಸ್ಥಳೀಯರು ದೇವಾಲಯವನ್ನು ಜೀರ್ಣೋದ್ಧಾರ ಮಾಡಲು ದೇವಾಲಯವನ್ನು ಕಿತ್ತು ಬುನಾದಿ ಹಾಕಲು ಜೆ.ಸಿ.ಬಿ. ಯಂತ್ರದಿಂದ ಸುಮಾರು ೪ ಅಡಿ ಆಳದ ಪಾಯ ತೆಗೆದಿದ್ದಾರೆ. ಈ ಪಾಯದ ಸ್ಥಳದಲ್ಲಿ ನವಶಿಲಾಯುಗ ಸಂಸ್ಕೃತಿಯ ಬೂದು, ಬೂದು ಮಿಶ್ರಿತ ಕೆಂಪು, ಕಪ್ಪು ಬಣ್ಣದ ಮಡಿಕೆ ತುಣುಕುಗಳು, ಆಹಾರ ಧಾನ್ಯ ಅರೆಯಲು ಬಳಸಿರುವ ಅಡಿಗಲ್ಲು, (ಚಿತ್ರ ೪) ಉದ್ದ ೧ ೧/೨ ಅಡಿ, ಅಗಲ ೧ ಅಡಿ, ಮಧ್ಯದ ಆಳ ೫ ೧/೨ ಸೆಂ.ಮೀ. ಆಯುಧದ ಒಂದು ಭಾಗ ೯ ಸೆಂ.ಮೀ. ಉಳ್ಳ ಇದ್ದು ಇನ್ನೊಂದು ಭಾಗ ಸಂಪೂರ್ಣವಾಗಿ ಸವೆದು ಹೋಗಿರುವುದು ದೊರಕಿದ್ದು, ಆಹಾರ ಧಾನ್ಯ ಅರೆಯಲು, ದೈನಂದಿನ ಆಯುಧಗಳನ್ನು ಮೊನೆ ಮಾಡಲು ಬಳಸಿರಬಹುದು. ಈ ತರಹದ ಆಯುಧ ಅನಂತಪುರ ಜಿಲ್ಲೆಯ ಬೂದಿಹಾಳ್ ನೆಲೆಯಲ್ಲಿ ರಾಬರ್ಟ್ ಬ್ರೂಸ್‌ಫುಟ್ ಅವರು ಸಂಗ್ರಹಿಸಿ ಆಹಾರ ಧಾನ್ಯ ಅರೆಯಲು ಬಳಸಿದ್ದಾರೆಂದು ಅಭಿಪ್ರಾಯಪಟ್ಟಿದ್ದಾರೆ. ಜೊತೆಗೆ ಕವಣೆ ಕಲ್ಲುಗಳು, ಕುಟ್ಟುವ ಕಲ್ಲುಗಳು, ಅರೆಯುವ ಕಲ್ಲುಗಳು, ಕಲ್ಲಿನ ಒನಕೆಗಳು, ಉಳಿಗಳನ್ನು ತಯಾರಿಸಿಕೊಳ್ಳಲು ಹದ ಮಾಡಿಕೊಂಡ ಕಲ್ಲು, ಡಾಲೋರೈಟ್ ಕಲ್ಲಿನಿಂದ ತಯಾರಿಸಿದ ಹರಿತವಾದ ಮುರಿದ ಕಲ್ಲಿನ ಕೊಡಲಿ, ೫ ಸೆಂ.ಮೀ. ಉದ್ದ, ೪ ಸೆಂ.ಮೀ. ಅಗಲವಿದೆ ಹಾಗೂ ಅಪೂರ್ಣಗೊಂಡ ೩ ಕಲ್ಲಿನ ಕೊಡಲಿಗಳು, ಬೂದಿ ಮಣ್ಣು ಇನ್ನಿತರೆ ಅವಶೇಷಗಳು (ಚಿತ್ರ ೫) ದೊರಕಿವೆ. ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ಕೆಂಪು, ಕಪ್ಪು, ಕೆಂಪು ಮತ್ತು ಕಪ್ಪು ಬಣ್ಣದ ಮಡಿಕೆ ಭಾಗಗಳು, ಚಿಕ್ಕಮಧ್ಯಮ ಗಾತ್ರದ ಮಡಿಕೆಗಳ ತಳದ ಭಾಗಗಳು, ಸುಟ್ಟು ಮಣ್ಣಿನ ಚಿಕ್ಕ ಕುಡಿಕೆ, ಗ್ರಾಫಿಟಿ ಗುರುತುಗಳಿರುವ, ಗಾಜಿನಂತೆ ಹೊಳೆಯುವ ಕೆಂಪು, ಕಪ್ಪು ಬಣ್ಣದ ಮಡಿಕೆ ತುಣುಕುಗಳ ಮೇಲೆ ಗ್ರಾಫಿಟಿ ಗುರುತುಗಳಿರುವುವು ದೊರಕಿದ್ದು, ಈ ತರಹದ ಗ್ರಾಫಿಟಿ ಗುರುತುಗಳಿರುವ ಮಡಿಕೆ ಭಾಗಗಳು ತಲಕಾಡು, ಟಿ. ನರಸೀಪುರ, ವೇದಾವತಿ ನದಿ ತೀರದ ಸೂರನಹಳ್ಳಿ ನೆಲೆಯಲ್ಲಿ ದೊರಕಿವೆ. (ಚಿತ್ರ ೬) ಕಪ್ಪೆ ಚಿಪ್ಪಿನ ತುಂಡುಗಳು, ಸುಟ್ಟ ಮಣ್ಣಿನ ಮುರಿದ ಕೊಳವೆ ಭಾಗ ಸಿಕ್ಕಿದ್ದು ಈ ತರಹದ ಕೊಳವೆಗಳು ಹೇರಳವಾಗಿ ವೇದಾವತಿ ನದಿ ತೀರದ ಯಾದಲಗಟ್ಟೆ, ಇನ್ನಿತರೆ ನೆಲೆಗಳಲ್ಲಿ ದೊರಕಿವೆ. ಕಬ್ಬಿಣ ಕರಗಿಸಿದ ನಂತರ ಉಳಿಯುವ ಕಿಟ್ಟ, ಕಬ್ಬಿಣದ ಅದಿರು, ಕಬ್ಬಿಣದ ತುಂಡುಗಳು, ಮೂಳೆ ಭಾಗಗಳು, ಹಲ್ಲಿನ ಭಾಗಗಳು ಇನ್ನಿತರೆ ಅವಶೇಷಗಳು ದೊರಕಿವೆ. ಈ ನೆಲೆಯ ಪೂರ್ವ, ಪಶ್ಚಿಮಕ್ಕೆ ಗುಡ್ಡಗಳಿದ್ದು ನೆಲೆಯ ಪಕ್ಕದಲ್ಲೇ ಗುಹೆಗಳು, ಕಲ್ಲಾಸರೆಗಳು ವಾಸಸ್ಥಳಕ್ಕೆ ಯೋಗ್ಯವಾಗಿದ್ದು ನೆಲೆಯಲ್ಲಿ ಸಿಕ್ಕಿರುವ ಈ ಎಲ್ಲಾ ಅವಶೇಷಗಳ ಆಧಾರದ ಮೇಲೆ ವಾಸದ ನೆಲೆಯಾಗಿದೆಯೆಂದು ಹೇಳಬಹುದು. ಈ ನೆಲೆ ಪ್ರಥಮ ಶೋಧವಾಗಿದ್ದು ಈ ಸಮತಟ್ಟಾದ ಭೂಭಾಗವನ್ನು ಭೂಉತ್ಖನನ ಮಾಡಿದರೆ ನವಶಿಲಾಯುಗವು ಬೃಹತ್



ಅಂತ್ಯ ಹಳೇ ಶಿಲಾಯುಗದ ಕಲ್ಲಿನಾಯುಧಗಳು



ಅನ್ನಪೂರ್ಣೇಶ್ವರಿ ದೇವಾಲಯದ ತಳಪಾಯದ ಅವಶೇಷಗಳು



ಕಲ್ಲಿನ ಕೊಡಲಿ ಭಾಗಗಳು ಮತ್ತು ಇತರ ಅವಶೇಷಗಳು



ರಾಶಿಗಟ್ಟಲೆ ನೈಸರ್ಗಿಕವಾಗಿ ಕಾಣುತ್ತಿರುವ ಅವಶೇಷಗಳು



ಲೋಕಪಾವನಿ ನದಿ ತೀರದಲ್ಲಿ ದೊರೆತ
ಹಳ್ಳುಮನೆ ಅವಶೇಷ



ಲೋಕಪಾವನಿ ನದಿ ತೀರದ ಕುಂತಿಬೆಟ್ಟದ
ಅನ್ನಪೂರ್ಣೇಶ್ವರಿ ದೇವಾಲಯದ ನೆಲೆಯಲ್ಲಿ
ದೊರೆತಿರುವ ಆಹಾರಧಾನ್ಯ ಅರೆಯುವ ಆಯುಧ



ಗ್ರಾಪಿಟಿ ಗುರುತುಗಳಿರುವ ಮಡಿಕೆ ತುಂಡುಗಳು



ಲೋಕಪಾವನಿ ನದೀ ತೀರದ ಪರಿಸರದಲ್ಲಿ ದೊರೆತ
ಕುಂಬಾರ ಬಳಸುವ ತಟ್ಟೊತ್ತಿಗೆ (ಡ್ಯಾಬರ್)

ಶಿಲಾಯುಗ ಸಂಸ್ಕೃತಿಗಳ ಮೇಲೆ ಬೆಳಕು ಚೆಲ್ಲುವ ಮಹತ್ವಪೂರ್ಣ ಮಾಹಿತಿಗಳು ಹೊರಚೆಲ್ಲಬಹುದು.

ಇನ್ನೊಂದು ನೆಲೆಯು ಲೋಕಪಾವನಿ ನದಿಗೆ ಹರಿದು ಹೋಗುವ ಹಳ್ಳದ ಎಡದಂಡೆಯ ಮೇಲಿರುವ ಹಿರೇಮರಳಿ ಗ್ರಾಮದ ದಕ್ಷಿಣಕ್ಕೆ ಸಮತಟ್ಟಾದ ಭೂಭಾಗ ಮತ್ತು ಕುಂತಿಬೆಟ್ಟದ ಇಳಿಜಾರಾದ ಭೂ ಭಾಗದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕೆಂಪು, ಕಪ್ಪು, ಕೆಂಪು ಮತ್ತು ಕಪ್ಪು ಬಣ್ಣದ ಮಡಿಕೆ ಚೂರುಗಳು. ಅಲಂಕಾರಭರಿತ ಮಡಿಕೆ ತುಂಡುಗಳು, ದುಂಡಾದ ಕೆಂಪು ಬಿಲ್ಲೆಗಳು, ಕಬ್ಬಿಣ ಕರಗಿಸಿದ ನಂತರ ಉಳಿಯುವ ಕಿಟ್ಟ, ಅರೆಯುವ ಕಲ್ಲುಗಳು, ಕುಟ್ಟುವ ಕಲ್ಲುಗಳು, ಕವಣೆ ಕಲ್ಲುಗಳು, ತೆಳ್ಳಗೆ ಗಾಜಿನಂತೆ ಹೊಳೆಯುವ ಮಡಿಕೆ ತುಂಡುಗಳು, ಮಡಿಕೆಗಳನ್ನು ತಯಾರಿಸಲು ಬಳಸುವ ಅಪರೂಪವಾದ ಮುರಿದ ಕಲ್ಲಿನ "ತಟ್ಟೊತ್ತಿಗೆ" ದೊರಕಿದೆ. (ಚಿತ್ರ ೭) ಈ ಆಯುಧವನ್ನು ನೋಡಿದ ಡಾ. ಅ. ಸುಂದರ ಅವರು ಇದೊಂದು ಅಪರೂಪವಾದ ತಟ್ಟೊತ್ತಿಗೆಯಾಗಿದೆ ಎಂದು ಅಭಿಪ್ರಾಯಪಟ್ಟರು ಈ ಅಂಶದ ಆಧಾರದ ಮೇಲೆ ನೆಲೆಯ ಮಾನವನು ಮಣ್ಣಿನ ಮಡಿಕೆಗಳನ್ನು ಈ ನೆಲೆಯಲ್ಲೇ ತಯಾರಿಸಿಕೊಳ್ಳುತ್ತಿದ್ದ ಎಂದು ಹೇಳಬಹುದು. ಇದೇ ದಿನ ಈ ನೆಲೆಯಿಂದ ಗುಡ್ಡದ ಮಣ್ಣಿನ ಮಡಿಕೆಗಳನ್ನು, ಈ ನೆಲೆಯಲ್ಲೇ ತಯಾರಿಸಿಕೊಳ್ಳುತ್ತಿದ್ದ ಎಂದು ಹೇಳಬಹುದು. ಇದೇ ದಿನ ಈ ನೆಲೆಯಿಂದ ಗುಡ್ಡದ ಮೇಲಿರುವ ಭೀಮನ ಪಾದ, ಸೀತೆಯ ಸೆರಗು ಎಂದು ಕರೆಯುವ ಸ್ಥಳದ ಕಡೆ ವಿದ್ಯಾರ್ಥಿಗಳ ಸಮೂಹದೊಂದಿಗೆ ಹಿರೇಮರಳಿ ಗ್ರಾಮದ ಕಡೆಯಿಂದ ಹೆಬ್ಬಂಡೆಗಳ ಮಧ್ಯಭಾಗದಲ್ಲಿ ನುಸುಳಿಕೊಂಡು ಸುಮಾರು ೫೦೦ ಅಡಿ ಎತ್ತರದ ಮೇಲೆ ಹೋಗುವ ದಾರಿಯ ಮಧ್ಯದಲ್ಲಿಯೇ ಕಪ್ಪು, ಕೆಂಪು, ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆ ತುಂಡುಗಳು ಕಾಣಲಾರಂಭಿಸಿದವು. ಎಲ್ಲ ಗುಹೆಗಳನ್ನು, ಕಲ್ಲಾಸರೆಗಳನ್ನು ವಿದ್ಯಾರ್ಥಿಗಳು, ನಾವು ನೋಡುತ್ತಾ ಮುಂದೆ ಸಾಗಿದರೆ, ಸುಮಾರು ೧/೨ ಎಕರೆಯ ಸಮತಟ್ಟಾದ ಭೂಭಾಗ ಸುತ್ತಲೂ ಹೆಬ್ಬಂಡೆಗಳಿಂದ ಆವೃತಗೊಂಡ ಗುಡ್ಡದ ಮಧ್ಯಭಾಗದಲ್ಲಿ ವಿವಿಧ ಬಣ್ಣಗಳ ಬೃಹತ್ ಶಿಲಾಯುಗ ಸಂಸ್ಕೃತಿಯ ಮಡಿಕೆ ಚೂರುಗಳು, ಮೂಳೆ ತುಂಡುಗಳು, ಹಾಳಾದ ಕುಲುಮೆಯಿದ್ದು ಕುಲುಮೆ ಸುತ್ತಮುತ್ತ, ಕುಲುಮೆಗೆ ಬಳಸುವ ಮುರಿದ ಸುಟ್ಟ ಮಣ್ಣಿನ ಕೊಳವೆಗಳು ಕಬ್ಬಿಣದ ಅದಿರು, ಕಬ್ಬಿಣದ ತುಂಡುಗಳು, ಕಬ್ಬಿಣ ಕರಗಿಸಿದ ನಂತರ ಉಳಿಯುವ ಕಿಟ್ಟ, ಕುಲುಮೆ ಸುತ್ತ ಸುಟ್ಟಮಣ್ಣಿನ ವುಂಡೆಗಳು, ಬೂದಿ ದೊರಕಿದ್ದು ಈ ಎಲ್ಲಾ ಅಂಶಗಳ ಆಧಾರದ ಮೇಲೆ ಕಬ್ಬಿಣ ಮತ್ತು ದೈನಂದಿನ ಬದುಕಿಗೆ ಬೇಕಾದ ವಸ್ತುಗಳನ್ನು ಇಲ್ಲೇ ತಯಾರಿಸುತ್ತಿದ್ದರೆಂದು ಹೇಳಬಹುದು. ಕಪ್ಪೆ ಚಿಪ್ಪಿನ ತುಂಡುಗಳು, ದುಂಡಾದ ಬಿಲ್ಲೆಗಳು, ಕಲ್ಲು ವೃತ್ತ ಸಮಾಧಿ ಇನ್ನಿತರೆ ಅವಶೇಷಗಳನ್ನು ನೋಡುತ್ತಾ ಮುಂದೆ ಸಾಗಿದರೆ ಮತ್ತೆ ೧/೨ ಎಕರೆ ವಿಸ್ತೀರ್ಣದ ಸಮತಟ್ಟಾದ ಭೂಭಾಗದಲ್ಲಿಯೂ ಅದೇ ತರಹದ ಅವಶೇಷಗಳು ಕಂಡುಬಂದವು. ಮುಂದೆ ಸಾಗಿದಾಗ ಮಾನವ ನಿರ್ಮಿತ ಕಲ್ಲಿನ ಕಟ್ಟಡವಿದ್ದು ಎರಡು ಗುಡ್ಡಗಳ ಮಧ್ಯೆ ಕಲ್ಲುಗಳನ್ನು ಜೋಡಿಸಿ ಕಟ್ಟಡ ಕಟ್ಟಿದ್ದಾರೆ. ಈ ಸ್ಥಳವನ್ನು ಸೂಕ್ಷ್ಮವಾಗಿ ಗಮನಿಸಿದರೆ ಗುಡ್ಡದ ಮೇಲಿಂದ ಹರಿದು ಬಂದ ನೀರನ್ನು ಇಲ್ಲಿ ಶೇಖರಿಸಿಕೊಂಡು ದೈನಂದಿನ ಕಾರ್ಯಕ್ಕೆ, ಕೃಷಿಗೆ ಬಳಸಲು ನಿರ್ಮಿಸಿಕೊಂಡಿರಬಹುದು. ಈ ಸ್ಥಳವನ್ನು ಉತ್ಖನನ ಮಾಡಿದರೆ ಸ್ಪಷ್ಟವಾದ ಮಾಹಿತಿ ತಿಳಿಯುತ್ತದೆ.

ಮುಂದೆ ಸಾಗಿದರೆ ಭೀಮನಪಾದ, ಸೀತೆ ಸೆರಗು ಎಂದು ಕರೆಯುವ ಸ್ಥಳವನ್ನು ನೋಡಿಕೊಂಡು ಗುಡ್ಡದ ಮೇಲೆ ನಿಂತು ನೋಡಿದರೆ ಪೂರ್ವಕ್ಕೆ ಪಾಂಡವಪುರ ಪಟ್ಟಣ ಕಾಣುತ್ತದೆ. ಗುಡ್ಡದ ಕೆಳಗೆ ಲೋಕಪಾವನಿ ನದಿಗೆ ಹರಿದು ಹೋಗುವ ಪಾಂಡವಪುರದ ಕೆರೆ ಕಾಣುತ್ತದೆ. ಸ್ವಲ್ಪ ಮುಂದೆ ಸಾಗಿದರೆ ಭೀಮನ ಕೊಳವಿದ್ದು ಕೊಳದ ಮೇಲೆ ಬೃಹತ್ ಗಾತ್ರದ ಗುಂಡು ಚಾಚಿ ಕೊಳವನ್ನು ಮುಚ್ಚಿದೆ. ಗುಂಡಿನ ಹಿಂದೆ ಮುಂದೆ ಜಾಗವಿದ್ದು ಪೂರ್ವ ಪಶ್ಚಿಮವಾಗಿ ಇಳಿಯಲು ಮಾನವನಿಂದ ಕತ್ತರಿಸಲ್ಪಟ್ಟ ದೊಡ್ಡ ಬಂಡೆಗಳನ್ನು ಅಗಲವಾಗಿ ಮೆಟ್ಟಿಲುಗಳ ಹಾಗೆ ಹಾಸಿದ್ದಾರೆ. ಕೊಳದ ಆಳ ಮೇಲ್ನೋಟಕ್ಕೆ ಸುಮಾರು ೧೦ ಅಡಿಗಿಂತ ಹೆಚ್ಚಿದೆ. ಅಲ್ಲಿಂದ ಕೊಳದ

ಹಿಂಭಾಗಕ್ಕೆ ಬಂದರೆ ಹುಟ್ಟು ಗುಂಡಿನ ಮಧ್ಯೆ ಇಕ್ಕಟ್ಟಾದ ಜಾಗದಲ್ಲಿ ಭೀಮನ ಕೊಳವೆನ್ನುವ ಇನ್ನೊಂದು ಕೊಳವಿದ್ದು ಈ ಕೊಳವೂ ಸಹ ಸುಮಾರು ೧೦ ಅಡಿಗೂ ಹೆಚ್ಚು ಆಳವಿದೆ. ಈ ಎರಡು ಕೊಳಗಳ ಆಳದ ನಿಖರತೆಯ ಬಗ್ಗೆ ಸಂಶೋಧನೆ ಆಗಬೇಕಿದೆ. ಈ ಕೊಳಗಳ ನೀರನ್ನು ನೆಲೆಗಳ ಮಾನವನು ದೈನಂದಿನ ಕಾರ್ಯಗಳಿಗೆ ಬಳಸಿರುವ ಸಾಧ್ಯತೆಯಿದೆ. ಈ ಕೊಳಗಳನ್ನು ಬಿಟ್ಟರೆನೆಲೆಗಳ ಸುತ್ತ ಮುತ್ತ ಯಾವುದೇ ರೀತಿಯ ನೀರಿನ ಸೌಕರ್ಯವಿಲ್ಲ.

ಈ ಕೊಳಗಳಿರುವ ಗುಡ್ಡದ ಕೆಳಗೆ ಇಳಿಜಾರಾದ ಜಾಗದಲ್ಲಿ ಕತ್ತರಿಸಿ ಹಾಕಲ್ಪಟ್ಟ ಬಂಡೆಗಳು ಅಲ್ಲಲ್ಲಿ ಬಿದ್ದಿವೆ. ಈ ಬಂಡೆಗಳನ್ನು ಈ ಸಂಸ್ಕೃತಿಯ ಮಾನವನು ಸಮಾಧಿಗಳನ್ನು ಮಾಡಲು ಬಳಸಿರುವ ಸಾಧ್ಯತೆಇದೆ. ಮುಂದೆ ಸುಮಾರು ೧೦೦ ಅಡಿ ಎತ್ತರದತ್ತ ಸಾಗಿದರೆ ಬೃಹದಾಕಾರದ ಗುಹೆ, ಕಲ್ಲಾಸರೆಗಳು ಗಿಡ ಬಳ್ಳಿಗಳಿಂದ ಆವರಿಸಲ್ಪಟ್ಟಿದ್ದು ಅವುಗಳನ್ನು ಕತ್ತರಿಸಿ ಒಳ ನಡೆದರೆ ರಾಶಿ ರಾಶಿ ಕೆಂಪು ಬಣ್ಣದ, ಕಪ್ಪು ಬಣ್ಣದ, ಕೆಂಪು ಮತ್ತು ಕಪ್ಪು ಬಣ್ಣದ ಮಡಿಕೆ ತುಂಡುಗಳು, ಮೂಳೆ ಭಾಗಗಳು, ತೆಳ್ಳನೆಯ ಮಡಿಕೆ ತುಂಡುಗಳು, ಅಲಂಕಾರಗೊಂಡ ಮಡಿಕೆ ಭಾಗಗಳು, ಮೂಳೆಗಳು, ದುಂಡಾದ ಮಣ್ಣಿನ ಬಿಲ್ಲೆಗಳು, ಕಬ್ಬಿಣ ಕರಗಿಸಿದ ನಂತರ ಉಳಿದ ಕಿಟ್ಟ, ಚಿಕ್ಕ ಮಡಿಕೆ ತಳದ ಭಾಗಗಳು, ಕಬ್ಬಿಣದ ಅದಿರು, ಕಬ್ಬಿಣದ ತುಂಡುಗಳು ಇತರೆ ಅವಶೇಷಗಳ ಹೇರಳವಾಗಿದ್ದು ಸಂಗ್ರಹಿಸಿಕೊಂಡು ಮುಂದೆ ನಡೆದೆವು. ಅಲ್ಲಿಂದ ಸುಮಾರು ೫೦ ಅಡಿ ಮೇಲೆ ಹೆಬ್ಬಂಡೆಯ ಕಲ್ಲಾಸರೆಯ ಪಕ್ಕದಲ್ಲಿ ಕತ್ತರಿಸಿ ಹಾಕಲ್ಪಟ್ಟ ಬಂಡೆಗಳು, ವಿವಿಧ ಬಣ್ಣಗಳ ಮಡಿಕೆ ತುಂಡುಗಳು, ಪಕ್ಕದಲ್ಲೇ ಒರಳುಕಲ್ಲು ಇರುವುದು ಕಂಡು ಬಂದಿತು. (ಅರೆದಿರುವುದು ಸ್ಪಷ್ಟವಾಗಿ ಕಾಣುತ್ತದೆ) ಇಲ್ಲಿಂದ ಮೇಲೆ ಗುಡ್ಡವೇರುತ್ತಾ ಸಾಗಿದರೆ ಬೆಳೆದ ಹುಲ್ಲಿನ ಮಧ್ಯಭಾಗದಲ್ಲಿ ಕೈಬೀಸಿ ಕರೆಯುವಂತಿದ್ದ ರಾಶಿಗಟ್ಟಲೆ ಅವಶೇಷಗಳು ನಮ್ಮನ್ನು ದಿಗ್ಭ್ರಮೆಗೊಳಿಸಿದವು. (ಚಿತ್ರ ೮) ಇಲ್ಲಿಯ ಸ್ವಲ್ಪ ಮಣ್ಣನ್ನು ಸಡಿಲಿಸಿದಾಗ ಪೂರ್ಣ ಪ್ರಮಾಣದ ಕೆಂಪು ಮತ್ತು ಕಪ್ಪು ಬಣ್ಣದ ಮಡಿಕೆ, ದೊಡ್ಡ ಮಡಿಕೆಗಳ ಭಾಗಗಳು, ತಳದ ಭಾಗಗಳು, ತೆಳ್ಳನೆಯ ಕೆಂಪು, ಕಪ್ಪು ಬಣ್ಣದ ಮಡಿಕೆ ಭಾಗಗಳು, ಗಾಜಿನಂತೆ ಹೊಳೆಯುವ ಮಡಿಕೆ ಭಾಗಗಳು, ಕಾಲಿನ ಉದ್ದನೆಯ ಮೂಳೆ, ಇತರೆ ಮೂಳೆ ಭಾಗಗಳು, ದುಂಡಾದ ಕೆಂಪು ಬಣ್ಣದ ಬಿಲ್ಲೆ, ದುಂಡಾದ ಕಲ್ಲಿನ ಬಿಲ್ಲೆ ಸಮಾಧಿಗಳಲ್ಲಿ ಬಳಸುವ ದಪ್ಪ ಮಡಿಕೆ ಭಾಗಗಳು, ನೀರಿನ ಹೂಜಿಗಳನ್ನು ಮುಚ್ಚಲು ಬಳಸುವ ಕಪ್ಪು ಬಣ್ಣದ ಮುಚ್ಚಳಗಳು, ಸಮಾಧಿಗಳಲ್ಲಿ ಬಳಸುವ ಕಲ್ಲುಗಳು ಸಮಾಧಿ ಮೇಲೆ ಇಡುವ ಉದ್ದನೆಯ ಕಲ್ಲು ಈ ಎಲ್ಲ ಅಂಶಗಳ ಆಧಾರದ ಮೇಲೆ ಈ ಸ್ಥಳ "ಹಾಳಾದ ಸಮಾಧಿಯೆಂದು" ಹೇಳಬಹುದು. ಮುಂದೆ ತುಟ್ಟತುದಿಯ ಏಕ ಶಿಲೆಯ ಗುಡ್ಡದ ಕಡೆಗೆ ನಡೆದಾಗ ಈ ಗುಡ್ಡವನ್ನು ಹತ್ತಲೂ ಅಸಾಧ್ಯವಾದಾಗ ಸುತ್ತಮುತ್ತಲ ಗುಹೆಗಳನ್ನು ಪರಿಶೀಲಿಸಿ ಪಶ್ಚಿಮಾಭಿಮುಖವಾಗಿ ಗುಡ್ಡದಿಂದ ಕೆಳಗೆ ಇಳಿಯಲಾರಂಭಿಸಿದೆವು ಮತ್ತೆ ಸ್ವಲ್ಪ ಸಮತಟ್ಟಾದ ಪ್ರದೇಶದ ಕಲ್ಲಾಸರೆಗಳಲ್ಲಿ ಮಡಿಕೆ ತುಣುಕುಗಳು, ಮೂಳೆ ಭಾಗಗಳು, ಸಮತಟ್ಟಾದ ಭೂಭಾಗದ ಮಧ್ಯದಲ್ಲಿರುವ ಬಂಡೆಗಳ ಮೇಲೆ ಎರಡು ಒರಳು ಕಲ್ಲುಗಳು ಕಂಡು ಬಂದವು. ಛಾಯಚಿತ್ರ ತೆಗೆದುಕೊಂಡು ಕಡಿದಾದ ಗುಡ್ಡ ಇಳಿಯುತ್ತಾ ಸಾಗುತ್ತಿರುವಾಗ ಮಡಿಕೆ ಚೂರುಗಳದೇ ದರ್ಬಾರು "ಒಟ್ಟಾರೆ ಇಡೀ ಗುಡ್ಡವೇ ಬೃಹತ್ ಶಿಲಾಯುಗ ಸಂಸ್ಕೃತಿಯ ಮಾನವನ ಅವಶೇಷಗಳಿಂದ ಆವರಿಸಿರುವುದು ಭೂ ಅನ್ವೇಷಣೆಯಿಂದ ತಿಳಿದು ಬಂದಿತು". ಇಷ್ಟೆಲ್ಲಾ ಗುಡ್ಡವನ್ನು ಪರಿಶೀಲಿಸಿದರೂ ಯಾವುದೇ ಶಾಸನವಾಗಲೀ, ಬಣ್ಣದ ಚಿತ್ರಗಳಾಗಲಿ ಕಂಡುಬರಲಿಲ್ಲ, ಆದರೆ ಕುಂತಿಬೆಟ್ಟ, ಒನಕೆ ಬೆಟ್ಟಗಳಲ್ಲಿ ತಲಾ ಒಂದು ಕುಟ್ಟಿ ತಯಾರಿಸಿದ ೨ ನವಿಲು ಚಿತ್ರಗಳು ಕಂಡುಬಂದವು.

ಸುಮಾರು ೧೦೦೦-೧೫೦೦ ಅಡಿ ಎತ್ತರದ ಈ ಗುಡ್ಡದ ಮೇಲೆ ಯಾವ ಭಾಗಕ್ಕೂ ಹೋದರೂ ಬೃಹತ್ ಶಿಲಾಯುಗದ ಅವಶೇಷಗಳೇ ಕಂಡು ಬರುತ್ತಿದ್ದು ಇಷ್ಟು ಪ್ರಮಾಣದಲ್ಲಿ ಯಾವ ಗುಡ್ಡದ ಮೇಲೆಯೋ ಕಂಡುಬಂದಿಲ್ಲವೇನೋ ಎಂದು ಭಾಸವಾಗುತ್ತದೆ. ಒಟ್ಟಾರೆ "ಭೀಮನ ಪಾದದ ಸುತ್ತಮುತ್ತಲ" ಭೂಭಾಗದಲ್ಲಿ ಈ ಸಂಸ್ಕೃತಿಯ ಮಡಿಕೆಗಳು ಹೇರಳವಾಗಿ ದಪ್ಪ, ಒರಟಾದ, ವಿವಿಧ ಬಣ್ಣಗಳ ಮಡಿಕೆಗಳು ಅಲ್ಪ ಪ್ರಮಾಣದಲ್ಲಿ ಗಾಜಿನಂತೆ ಹೊಳೆಯುವ ಮಡಿಕೆಯ ಭಾಗಗಳು, ಗ್ರಾಫಿಟಿ ಗುರುತು ಇಲ್ಲದಿರುವ ಮಡಿಕೆಯ ಭಾಗಗಳು ದೊರಕಿವೆ. ಅನ್ನಪೂರ್ಣೇಶ್ವರಿ ದೇವಾಲಯದ ನೆಲೆಯಲ್ಲಿ ಗಾಜಿನಂತೆ ಹೊಳೆಯುವ ಕಪ್ಪು, ಕೆಂಪು, ಕೆಂಪು ಮತ್ತು ಕಪ್ಪು ಬಣ್ಣದ ತುಣುಕುಗಳು, ಗ್ರಾಫಿಟಿ ಗುರುತುಗಳು ಇರುವ ಮಡಿಕೆ ಭಾಗಗಳು ಹೆಚ್ಚಿಗೆ ದೊರಕಿದ್ದು. ಕರ್ನಾಟಕದಲ್ಲಿ ಉತ್ಖನನಗೊಂಡ ಪ್ರಮುಖ ನೆಲೆಗಳಲ್ಲಿ ದೊರೆತ ಗ್ರಾಫಿಟಿ ಗುರುತುಗಳ ಹಾಗೆ ಹೋಲಿಕೆ ಇವೆ. ಗುಡ್ಡದ ಮೇಲಿನ ಮನುಷ್ಯ ಬಳಸುವ ಅವಶೇಷಗಳಿಗೂ, ಗುಡ್ಡದ ಕೆಳಗಿನ ಮನುಷ್ಯ ಬಳಸುವ ಅವಶೇಷಗಳಿಗೂ ವ್ಯತ್ಯಾಸವಿದ್ದು ಈ ನೆಲೆಗಳ ಮಾನವನ ಬಗ್ಗೆ ಸ್ಪಷ್ಟ ಮಾಹಿತಿ ತಿಳಿಯಲು. ಕಾಲಮಾನ ತಿಳಿಯಲು ಅಗತ್ಯವಾಗಿ ಈ ನೆಲೆಗಳಲ್ಲಿ ಉತ್ಖನನದ ಅಗತ್ಯತೆಯಿದೆ.

ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳಿರುವ ಗುಡ್ಡದ ಮೇಲಿನ ಈ ನೆಲೆ ಕರ್ನಾಟಕದ ಅಪರೂಪ ನೆಲೆಗಳಲ್ಲಿ ಒಂದಾಗಿದ್ದು, ಈ ನೆಲೆ ನೈಸರ್ಗಿಕವಾಗಿ ಅಲ್ಪಸ್ವಲ್ಪ ಹಾಳಾಗಿರುವುದು ಬಿಟ್ಟರೆ, ಉಳಿದ ಭಾಗ ಯಾವುದೇ ಹಾನಿಯಾಗದ ಯಥಾಸ್ಥಿತಿ ಉಳಿದುಬಂದಿದೆ. ಕಾರಣ ಇಷ್ಟು ಎತ್ತರದ ಕಡಿದಾದ ಬೆಟ್ಟದ, ಹೆಬ್ಬಂಡೆಗಳನ್ನು ದಾಟಿ ಬರಲು ಪ್ರಾಣಿಗಳಿಗೆ, ಸಾಮಾನ್ಯ ಮನುಷ್ಯರಿಗೆ ಅಸಾಧ್ಯವಾಗಿರುವುದರಿಂದ ನೆಲೆ ಯಥಾಸ್ಥಿತಿಯನ್ನು ಕಾಪಾಡಿಕೊಂಡು ಬಂದಿದೆ.

ಈ ನೆಲೆಯನ್ನು ಕಂಡು, ರಾಜ್ಯ ಪುರಾತತ್ವ ಇಲಾಖೆಗಳು ಇತ್ತ ಕಡೆ ಗಮನಹರಿಸಿ, ಇಡೀ ಕರ್ನಾಟಕದಲ್ಲಿ ಗುಡ್ಡದ ಮೇಲಿನ ನೆಲೆಗಳಲ್ಲಿ ಒಂದಾದ ಈ ನೆಲೆಯನ್ನು ಅತಿ ಜರೂರಾಗಿ ಉತ್ಖನನ ಮಾಡುವುದು ಅತಿ ಅಗತ್ಯವಾಗಿದೆ.

(ಈ ಲೇಖನವನ್ನು ತಯಾರಿಸಲು ಸಹಕರಿಸಿದ ಡಾ. ಅ. ಸುಂದರರವರಿಗೆ, ಗುರುಗಳಾದ ಡಾ. ಎಸ್.ಎಸ್. ರಂಗರಾಜು, ಡಾ. ಎಂ.ಎಸ್. ಕೃಷ್ಣಮೂರ್ತಿ ಅವರಿಗೂ ಕಾಲೇಜಿನ ವಿದ್ಯಾರ್ಥಿಗಳಿಗೂ ಅವಶೇಷಗಳನ್ನು ಸ್ವಚ್ಛಗೊಳಿಸಲು ಸಹಕರಿಸಿದ ನನ್ನ ಮಕ್ಕಳಾದ ಎ.ಆರ್. ಶ್ರೇಯಾಂಕ, ಎ.ಆರ್. ಪ್ರಿಯಾಂಕ, ಎ.ಆರ್. ವಿಕಾಸ್ ಅವರಿಗೂ ಹಾಗೂ ಜಿ.ಸಿ. ಸುರೇಶರವರಿಗೂ ಧನ್ಯವಾದಗಳು.)

## ಆಧಾರ ಸೂಚಿ


೧. **ಮಂಡ್ಯ ಜಿಲ್ಲೆ ಗ್ಯಾಸೆಟಿಯರ್**, ೨೦೦೩.
೨. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಭಾಗ – ೧, ೧೯೮೪.
೩. ಆರ್.ಬಿ. ಫೂಟ್, **ದಿ ಫೂಟ್ ಕಲೆಕ್ಷನ್ಸ್ ಆಫ್ ಪ್ರಿಹಿಸ್ಟಾರಿಕ್ ಅಂಡ್ ಪ್ರೊಟೋ ಹಿಸ್ಟಾರಿಕ್ ಆಂಟಿಕ್ವಿಟೀಸ್**, ಮದ್ರಾಸ್, ೧೯೧೬, ಪು. ೭೩–೭೫.
೪. ಎಂ.ಎಸ್. ಕೃಷ್ಣಮೂರ್ತಿ, 'ಕುಂತಿಬೆಟ್ಟದ ಪ್ರಾಕ್ತನಾನ್ವೇಷಣೆ', ಒಂದು ಟಿಪ್ಪಣಿ, **ಇತಿಹಾಸ ದರ್ಶನ**, ಸಂಚಿಕೆ ೧೯೮೯, ಪು. ೧ – ೩.
೫. **ಕರ್ನಾಟಕ ಪರಂಪರೆ**, ಭಾಗ–೧, ೧೯೭೦.
೬ **ಕನ್ನಡ ವಿಷಯ ವಿಶ್ವಕೋಶ**, ಕರ್ನಾಟಕ, ೧೯೭೯.
೭. ಅ. ಸುಂದರ ಅವರಿಂದ ಮಾಹಿತಿ.
೮. ಎ.ವಿ. ನರಸಿಂಹಮೂರ್ತಿ ಮತ್ತು ಡಿ.ವಿ. ದೇವರಾಜ ಮತ್ತು ಇತರರು, **ಎಕ್ಸಕವೇಷನ್ಸ್ ಅಟ್ ಬನವಾಸಿ**, ೧೯೯೭.
೯. ಡಿ.ವಿ. ದೇವರಾಜ್, ಹೆಚ್.ಟಿ. ತಳವಾರ್., **ಇನ್‌ಟ್ರಿಮ್ ರಿಪೋರ್ಟ್ ಅನ್ ದಿ ಎಕ್ಸಕವೇಶನ್ಸ್ ಅಟ್ ಸನ್ನತಿ**, ೧೯೯೮.
೧೦. ಡಿ.ವಿ. ದೇವರಾಜ್, ಜೋಶಿ ಮತ್ತು ಇತರರು., **ಹೆಗ್ಗಡೆಹಳ್ಳಿ, ಎ ರಿಪೋರ್ಟ್ ಮೆಗಲಿಥಿಕ್ ಎಕ್ಸಕವೇಶನ್**, ೧೯೯೫.
೧೧. ಎಂ.ಎಸ್. ನಾಗರಾಜರಾವ್ – **ಪ್ರೋಗ್ರೆಸ್ ಅಂಡ್ ಆರ್ಕ್ಯಾಲಾಜಿ ಇನ್ ಕರ್ನಾಟಕ** (೧೯೫೬–೧೯೭೨)–೧೯೭೮.
೧೨. ಎ.ವಿ. ನರಸಿಂಹಮೂರ್ತಿ – **ಆರ್ಕ್ಯಾಲಾಜಿ ಆಫ್ ಕರ್ನಾಟಕ** – ೧೯೭೮.
೧೩. ಬ್ರಿಡ್ಜೆಟ್ ಅಂಡ್ ರೈಮಂಡ್ ಆಲ್ಚಿನ್ – **ದಿ ರೈಸ್ ಆಫ್ ಸಿವಿಲೈಜೇಶನ್ ಇನ್ ಇಂಡಿಯಾ ಅಂಡ್ ಪಾಕಿಸ್ತಾನ** – ೧೯೯೬.
೧೪. ಆರ್. ಶೇಷಾದ್ರಿ – **ಎಕ್ಸ್‌ಕವೇಶನ್ಸ್ ಅಟ್ ಟಿ. ನರಸೀಪುರ** – ೧೯೭೨.
೧೫. ಡಿ.ವಿ. ದೇವರಾಜ್ ಮತ್ತು ಇತರರು – **ಎಕ್ಸಕವೇಷನ್ಸ್ ಅಟ್ ತಲಕಾಡು** – ೧೯೯೬.
೧೬. ಎಸ್.ಜಿ. ರಾಮದಾಸರೆಡ್ಡಿ – **ವೇದಾವತಿ ನದಿಯ ತೀರದ ಒಂದು ಸಾಂಸ್ಕೃತಿಕ ಅಧ್ಯಯನ** (ಅಪ್ರಕಟಿತ) ಪ್ರೌಢ ಪ್ರಬಂಧ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೨೦೦೬.
೧೭. ಎಸ್.ಜಿ. ರಾಮದಾಸರೆಡ್ಡಿ – ಕರ್ನಾಟಕ ಇತಿಹಾಸ ಕಾಂಗ್ರೆಸ್‌ನಲ್ಲಿ ಪ್ರಕಟಿಸಿದ ಲೇಖನ, ಯಾವಲಗಟ್ಟೆ ಮತ್ತು ಕ್ಯಾತಗೊಂಡನಹಳ್ಳಿಯ ಪ್ರಾಕ್ಚಾರಿತ್ರಿಕ ಕುರುಹುಗಳು.
೧೮. ಬಿ. ಸುಬ್ಬರಾವ್ – **ಎಕ್ಸಕವೇಶನ್ ಅಟ್ ಸಂಗನಕಲ್ಲು** – ೧೯೪೮.
೧೯. ರಾಮರೆಡ್ಡಿ. ವಿ., **ಎ ಸ್ಟಡೀಸ್ ಆಫ್ ದಿ ನಿಯೋಲಿಥಿಕ್ ಕಲ್ಚರ್ ಆಫ್ ಸೌತ್ ವೆಸ್ಟ್ರನ್, ಆಂಧ್ರಪ್ರದೇಶ** – ೧೯೭೮.
೨೦. ವೀಲ್ಹರ್. ಆರ್.ಇ.ಎಂ. **ಏನ್ಸಿಯಂಟ್ ಇಂಡಿಯಾ, ನಂ. ೪**, ೧೯೪೭, ೪೮.
೨೧. ಸುಂದರ. ಅ., **ದಿ ಅರ್ಲಿ ಛೇಂಬರ್ಸ್ ಟೂಲ್ಸ್ ಆಫ್ ಸೌತ್ ಇಂಡಿಯಾ** – ೧೯೭೫.
೨೨. ಬಿ.ಕೆ. ಗುರುರಾಜರಾವ್, **ಮೆಗಲಿಥಿಕ್ ಕಲ್ಚರ್ ಆಫ್ ಸೌತ್ ಇಂಡಿಯಾ** – ೧೯೭೨.
೨೩. ಎಸ್.ಜಿ. ರಾಮದಾಸರೆಡ್ಡಿ, **ಇತಿಹಾಸ ದರ್ಶನ**, ಸಂ. ೨೧, ಚಳ್ಳಕೆರೆ ತಾಲ್ಲೂಕು, ಶಿ. ಮಹದೇವಪುರ, ಪ್ರಾಕ್ಚಾರಿತ್ರಿಕ ಕುರುಹುಗಳು – ೨೦೦೬.
೨೪. ಶಿ. ಮಾರ್ಗಬಂಧು, **ಆರ್ಕಿಯಾಲಜಿ ಆಫ್ ದಿ ಶಾತವಾಹನ ಕಾಶ್ಯತ್ರಪ ಟೈಮ್ಸ್** – ೧೯೮೪.
೨೫. ಎಂ.ಎಂ. ಕಲಬುರ್ಗಿ., ೧೯೯೪, **ಕರ್ನಾಟಕದ ಕೈಫಿಯತ್ತುಗಳು**.
೨೬. ಎಂ.ಎಸ್. ಮುದ್ದೋಳ್, **ಎ ಟೆಕ್‌ನಿಕಲ್ ಸ್ಟಡಿ ಆಫ್ ಮೆಗಲಿಥಿಕ್ ಮೆಟಲ್ ಅಬ್‌ಜೆಕ್ಟ್ಸ್** – ೧೯೯೭.

ಬುರುಡೇಕಟ್ಟೆ ಮಂಜಪ್ಪ*

# ದೊಡ್ಡಬಾತಿಯ ಬೃಹತ್ ಶಿಲಾಯುಗದ ಕುಳಿಭರಿತ ಶಿಲಾಸಮಾಧಿಗಳು

ದಾವಣಗೆರೆ ಜಿಲ್ಲೆಯಲ್ಲಿ ಅನೇಕ ಪುರಾತತ್ವ ನೆಲೆಗಳಿದ್ದು ಹಳೆಶಿಲಾಯುಗ, ಸೂಕ್ಷ್ಮಶಿಲಾಯುಗ, ಬೃಹತ್ ಶಿಲಾಯುಗ ಹಾಗೂ ಇತಿಹಾಸ ಆರಂಭಕಾಲದ ನೆಲೆಗಳು ಈಗಾಗಲೇ ಪತ್ತೆಯಾಗಿವೆ. ಹೊನ್ನಾಳಿ ತಾಲ್ಲೂಕಿನ ಹರಗನಹಳ್ಳಿ, ಹನುಮನಹಳ್ಳಿ, ಸೌಳಂಗ, ಸಿದ್ದಾಪುರ, ಬೇಲಿಮಲ್ಲೂರು, ಕಮ್ಮಾರಗಟ್ಟೆ ಹಾಗೂ ಹರಿಹರ ತಾಲ್ಲೂಕಿನ ಕೊಮಾರನಹಳ್ಳಿ ಗಳಲ್ಲಿರುವ ಬೃಹತ್ ಶಿಲಾಯುಗದ ಶಿಲಾಸಮಾಧಿಗಳು ಜಿಲ್ಲೆಯ ಬೃಹತ್ ಶಿಲಾಯುಗದ ನೆಲೆಗಳಾಗಿವೆ.

ದಾವಣಗೆರೆ ತಾಲ್ಲೂಕಿನ ದೊಡ್ಡಬಾತಿ ಶ್ರೀ ಸಿದ್ದೇಶ್ವರ ಬೆಟ್ಟದ ತಪ್ಪಲಿನಲ್ಲಿ ಕುಳಿಭರಿತ ಶಿಲಾಸಮಾಧಿ ಪತ್ತೆಯಾಗಿದೆ. ದೊಡ್ಡಬಾತಿಯ ಸಿದ್ದೇಶ್ವರ ಗುಡ್ಡ ಹಾಗೂ ಕುಂದವಾಡ ಗ್ರಾಮದ ನಡುವೆ ಬರುವ ಈ ಶಿಲಾಸಮಾಧಿಯು ಬೃಹತ್ ಕೆರೆಏರಿಯ ಅವಶೇಷಗಳ ಹಿಂಭಾಗದಲ್ಲಿದೆ.

ದೊಣ್ಣೆ ಕೆಂಚಮ್ಮ, ಹೊನ್ನಮ್ಮ, ಲಕ್ಷ್ಮಮ್ಮ, ದೇವಿ ಎಂಬ ಹೆಸರುಗಳಿಂದ ಕರೆಯಲ್ಪಡುತ್ತಿರುವ ಈ ಸಮಾಧಿ ಇಂದಿಗೂ ಪೂಜೆಗೊಳ್ಳುತ್ತಿದೆ. ಪೂರ್ವಾಭಿಮುಖವಾಗಿರುವ ಈ ಸಮಾಧಿಗೆ ಕಂದುಬಣ್ಣದ ಹರಳುಕಲ್ಲು ಹಾಗೂ ಬಿಳಿ ಗ್ರಾನೈಟ್ ಶಿಲೆಯ ಬೃಹತ್ ಚಪ್ಪಡಿಗಳನ್ನು ಬಳಸಿ ನಿರ್ಮಿಸಿದ್ದಾರೆ. ಸ್ವಸ್ತಿಕ್ ಆಕಾರದಲ್ಲಿ ನಿಲ್ಲಿಸಿರುವ ಬೃಹತ್ ಚಪ್ಪಡಿಗಳು ಕಂದು ಹಾಗೂ ಬಿಳಿ ಬಣ್ಣದಿಂದ ಕೂಡಿದ್ದು ೬ ಇಂಚು ದಪ್ಪ ೫ ಅಡಿ ಎತ್ತರ ೬ ಅಡಿ ಉದ್ದವಾಗಿವೆ. ಅರ್ಧಚಂದ್ರಾಕಾರದ ತೂತಿರುವ ಮುಂದಿನ ಕಲ್ಲು ಚಪ್ಪಡಿ ಹೊಲವೊಂದರ ಬಾವಿಯ ಹತ್ತಿರ ಬಿದ್ದಿದೆ. ಪಶ್ಚಿಮ ದಿಕ್ಕಿನ ಗೋಡೆ ಕಲ್ಲಿನಲ್ಲಿ ಕುಳಿಗಳಿದ್ದು ಒಟ್ಟು ೨೧ ಕುಳಿಗಳಿವೆ. ೧ ಇಂಚು ಆಳ ೨ ಇಂಚು ಅಗಲದ ಕುಳಿಗಳಿದ್ದು ನಸುಗೆಂಪು ಹರಳು ಕಲ್ಲಿನ ಚಪ್ಪಡಿಯಲ್ಲಿ ಕೆತ್ತಿದ್ದಾರೆ. ಮೇಲ್ಹೊದಿಕೆಯ ಬೃಹತ್ ಚಪ್ಪಡಿ ೭ ಅಡಿ ಉದ್ದ ೬ ಅಡಿ ಅಗಲ ೯ ಇಂಚು ದಪ್ಪ ಇದೆ.

ಶಿಲಾಸಮಾಧಿಯ ಸುತ್ತ ಕಲ್ಲುಗುಪ್ಪೆಗಳಿದ್ದು ಗುಂಡು ಕಲ್ಲುಗಳನ್ನು ರಾಶಿ ಹಾಕಿದ್ದಾರೆ. ಬೂದು, ನಸುಗೆಂಪು ಬಣ್ಣದ ಮಡಕೆಯ ಚೂರುಗಳು, ಬಳೆಗಳು, ೩ ಅಡಿ ಆಳದ ಮಣ್ಣಿನ ಒಳಪದರಿನಲ್ಲಿ ದೊರೆತಿವೆ. ಮಣ್ಣಿನ ಕೇಲನ್ನು (ಕಳಸ) ಹೋಲುವಂತಹ ಕುಡಿಕೆಗಳ ಒಳಗಡೆ ಬಳೆಚೂರು ಹಾಗೂ ಬಿಳಿಬಣ್ಣದ ಬೂದಿ ದೊರಕಿದೆ. ಸಮಾಧಿಯ ಸುತ್ತ ೬ ಅಡಿ ಅಂತರದಲ್ಲಿ ತಲೆಬುರುಡೆ, ಮೂಳೆ ತುಂಬಿದ ಮಡಕೆಯ ಅವಶೇಷಗಳು ಕಂಡುಬಂದಿವೆ.

ಕುಳಿಭರಿತ ಕಲ್ಲು ಚಪ್ಪಡಿ, ಮಡಕೆಯೊಳಗಿನ ಬಳೆ ಚೂರುಗಳು ಹೊನ್ನಮ್ಮ, ದೊಣ್ಣೆ ಕೆಂಚಮ್ಮ, ದೇವಿ ಮುಂತಾದ ಹೆಸರುಗಳು ಕೇಲಿನಂತಹ ಕುಡಿಕೆಗಳು ಇವುಗಳನ್ನು ಗಮನಿಸಿದರೆ ಇದು ಮಹಿಳಾ ಶಿಲಾಸಮಾಧಿ ಇರಬಹುದೇ?

ದೊಡ್ಡಬಾತಿ ಗುಡ್ಡದ ಗವಿಸಿದ್ದಪ್ಪನ ಗವಿಯಲ್ಲಿರುವ ಬಂಡೆ ವಿಭೂತಿಯಂತೆ ಬದಲಾಗಿದ್ದು ಇದು ಭಸ್ಮದಂತೆ ಧರಿಸಲು ಬರುತ್ತದೆ. ಗಟ್ಟಿಕಲ್ಲು ಹೀಗಾಗಲು ತುಂಬಾ ಸಮಯ ಬೇಕು. ಈ ಗವಿಯಲ್ಲಿನ ಕಲ್ಲುಬಂಡೆಯನ್ನು ಕೊರೆದು ಅದರಿಂದ ಬರುವ ಬೂದಿಯಂಥ ಹಿಟ್ಟನ್ನು ಜನ ಭಸ್ಮವೆಂದು ಭಾವಿಸಿ ಸಾಗಿಸುತ್ತಿದ್ದಾರೆ. ಅತ್ಯಂತ ಪ್ರಾಚೀನ ಶಿಲಾರಚನೆ ಹೊಂದಿರುವ ಈ ಬೆಟ್ಟದಲ್ಲಿ ನೂತನ ಶಿಲಾಯುಗಕ್ಕೆ ಸೇರಿದ ಮಡಕೆ ಚೂರುಗಳು ಸಿಕ್ಕಿವೆ.



ಕುಂದವಾಡ ಸಮೀಪದ ಕುಳಿಭರಿತ ಶಿಲಾ ಸಮಾಧಿ

**ರಾಮಗಿರಿ ಬಳಿಯ ಮೂರು ಶಿಲಾಸಮಾಧಿಗಳು :** ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕಿನ ರಾಮಗಿರಿ ಬಳಿಯ ಬಿಳಿ ಗ್ರಾನೈಟ್ ಕಲ್ಲಿನ ಮರಟಿಯ ಹತ್ತಿರ ಹಾದಿಬದಿಯ

* 'ಕುಂಭಶ್ರೀ' ೭೮೯/೧೧, ಜಯನಗರ, 'ಎ' ಬ್ಲಾಕ್, ನಿಟುವಳ್ಳಿ ಬಡಾವಣೆ, ದಾವಣಗೆರೆ – ೪.



ರಾಮಗಿರಿ ಬಳಿಯ ಬೃಹತ್ ಶಿಲಾಯುಗದ ಸಮಾಧಿ

ತೂತು ಕೋಣೆಯ ಬೃಹತ್ ಶಿಲಾಸಮಾಧಿಗಳಿವೆ. ಉತ್ತರಾಭಿಮುಖರಸ್ತೆಯ ಪಕ್ಕದಲ್ಲಿ ಪೂರ್ವಾಭಿಮುಖವಾಗಿ ಸಾಲಾಗಿ ಮೂರು ಶಿಲಾಸಮಾಧಿಗಳನ್ನು ನಿರ್ಮಿಸಿದ್ದಾರೆ. ಇಲ್ಲಿ ಬಳಸಿರುವ ಗ್ರಾನೈಟ್ ಕಲ್ಲಿನ ಬೃಹತ್ ಚಪ್ಪಡಿಗಳು ಗಮನಸೆಳೆಯುತ್ತವೆ. ೯ ಇಂಚು ದಪ್ಪ ೧೨ ಅಡಿ ಉದ್ದ ೮ ಅಡಿ ಎತ್ತರದ ಚಪ್ಪಡಿಗಳನ್ನು ಬಳಸಿ ನಿರ್ಮಿಸಿದ್ದಾರೆ. ತೂತುಗಳು ಅರ್ಧಚಂದ್ರಾಕಾರದಲ್ಲಿದ್ದು ೧.೫ ಅಡಿ ಅಗಲ ೨ ಅಡಿ ಎತ್ತರವಾಗಿವೆ. ಮೇಲೆ ಮುಚ್ಚಿದ ಚಪ್ಪಡಿಗಳು ಕಾಣೆಯಾಗಿವೆ. ಇಲ್ಲಿ ಕೆಂಪು, ಕಂದು ಬಣ್ಣದ ಮಡಿಕೆ ಚೂರುಗಳು ಸಿಕ್ಕಿದ್ದು ಮೃದು ಕಲ್ಲಿನಿಂದ ನಿರ್ಮಿಸಿದ ದೀಪವೊಂದು ಮಣ್ಣಿನ ಪದರಿನಲ್ಲಿ ಸಿಕ್ಕಿದೆ. ಕಲ್ಲಿನ ಮಡಕೆಯ ಕಂಠದ ಭಾಗ ಸಿಕ್ಕಿದೆ. ಇಲ್ಲಿ ಒಂದೇ ಸಾಲಿನಲ್ಲಿ ೯ ಶಿಲಾಸಮಾಧಿಗಳಿದ್ದವೆಂದು ಹಿರಿಯರು ಹೇಳುತ್ತಾರೆ. ಇಂದು ಕೇವಲ ಮೂರು ಮಾತ್ರ ಉಳಿದಿವೆ.

ರಾಮಗಿರಿ ಶ್ರೀ ಕರಿಸಿದ್ದೇಶ್ವರ ಬೆಟ್ಟದ ಗವಿಗಳು ಆದಿಮಾನವನ ವಾಸಯೋಗ್ಯ ಸ್ಥಳವಾಗಿದ್ದು ಗವಿಗಳಲ್ಲಿ ರೇಖಾಚಿತ್ರಗಳಿವೆ. ಯತಿಯಂತೆ ಗಡ್ಡಧಾರೆಯನ್ನು ಸೂಚಿಸುವಂತಹ ರೇಖಾಚಿತ್ರಗಳಿವೆ. ಪೂರ್ವ ದಿಕ್ಕಿನ ಗವಿಯಲ್ಲಿ ನೂತನ ಶಿಲಾಯುಗದ ಕಾಲಕ್ಕೆ ಸೇರಿದ ಕೈಕೊಡಲಿ ಹಾಗೂ ನವಿಲಿನ ಕಾಲಿನ ಉಬ್ಬು ಚಿತ್ರವಿರುವ ನಸುಗೆಂಪು ಬಣ್ಣದ ಮಡಕೆ ಚೂರುಗಳು ಸಿಕ್ಕಿವೆ. ಈ ಮೇಲಿನ ಎರಡೂ ಬೆಟ್ಟಗಳ ತಪ್ಪಲಲ್ಲಿ ಬೃಹತ್ ಶಿಲಾಯುಗದ ನೆಲೆಗಳು ಕಂಡು ಬಂದಿರುವುದರಿಂದ ಆದಿಮಾನವ ಇಲ್ಲಿ ನೆಲಸಿದ್ದವೆಂದು ತಿಳಿಯುತ್ತದೆ.

(ಸಂಶೋಧನಾ ಕಾರ್ಯದಲ್ಲಿ ಮಾರ್ಗದರ್ಶನ ನೀಡಿದ ಗುರುಗಳಾದ ಖ್ಯಾತ ಶಾಸನ ತಜ್ಞರಾದ ಡಾ. ಬಿ. ರಾಜಶೇಖರಪ್ಪ, ಚಿತ್ರದುರ್ಗ ಹಾಗೂ ಖ್ಯಾತ ಸಂಶೋಧಕರಾದ ಪ್ರೊ. ಲಕ್ಷ್ಮಣ ತೆಲಗಾವಿಯವರಿಗೆ ಕೃತಜ್ಞತೆಗಳು).

## ಆಧಾರ ಸೂಚಿ

೧. ಇತಿಹಾಸ ದರ್ಶನ.
೨. ಕರ್ನಾಟಕದ ಪುರಾತತ್ವದ ನೆಲೆಗಳು.
೩. ಕರ್ನಾಟಕದ ಗ್ಯಾಸೆಟಿಯರ್ – ೧.

ಡಾ. ಹನುಮನಾಯಕ *

# ಅರಸೀಕೆರೆ ತಾಲ್ಲೂಕಿನ ಪ್ರಾಗೈತಿಹಾಸಿಕ ಬಂಡೆ ಚಿತ್ರಗಳು

ಪ್ರಾಗೈತಿಹಾಸಿಕ ಕಾಲದ ಬಂಡೆ ಚಿತ್ರಗಳನ್ನು ಕಂಡು ಹಿಡಿಯುವುದು ಮತ್ತು ಅವುಗಳ ವೈಜ್ಞಾನಿಕ ಅಧ್ಯಯನವು ಮಾನವ ಕುಲದ ಆರಂಭ ಮತ್ತು ಅವನ ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನು ಅರ್ಥ ಮಾಡಿಕೊಳ್ಳುವಲ್ಲಿ ತುಂಬಾ ಸಹಕಾರಿಯಾಗುತ್ತದೆ. ಭಾರತದ ಹಾಗೆ ಕರ್ನಾಟಕ ಅದರಲ್ಲೂ ಉತ್ತರದ ಜಿಲ್ಲೆಗಳಲ್ಲಿ ಕೆಲವು ವಿದ್ವಾಂಸರು ಪೂರ್ವೇತಿಹಾಸ ಕಾಲದ ಮತ್ತು ಇತಿಹಾಸ ಕಾಲದ ಬಂಡೆ ಚಿತ್ರಗಳಿರುವುದನ್ನು ಗುರುತಿಸಿದ್ದಾರೆ.[೧] ಕೆಲವು ವಿದ್ವಾಂಸರ ಪ್ರಕಾರ ಇಂತಹ ಬಂಡೆ ಚಿತ್ರಗಳು, ರೇಖಾಚಿತ್ರಗಳು ಕೇವಲ ಉತ್ತರ ಕರ್ನಾಟಕದ ಜಿಲ್ಲೆಗಳಿಗೆ ಸೀಮಿತಗೊಂಡಿದ್ದು, ಅವು ಕರ್ನಾಟಕದ ದಕ್ಷಿಣ ಭಾಗದಲ್ಲಿ ಕಂಡುಬರುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಅಭಿಪ್ರಾಯಕ್ಕೆ ವಿರುದ್ಧವಾಗಿ ನಾವು ದಕ್ಷಿಣ ಕರ್ನಾಟಕದ ಜಿಲ್ಲೆಗಳಲ್ಲಿ ಒಂದಾದ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನಲ್ಲಿ ಕೆಂಪು ಮತ್ತು ಬಿಳಿಯ ವರ್ಣಚಿತ್ರಗಳು ಕಲ್ಲಾಸರೆಗಳಲ್ಲಿ ಮತ್ತು ಬಂಡೆಗಳಲ್ಲಿರುವುದನ್ನು ಗಮನಿಸಿದ್ದೇವೆ. ತಾಲ್ಲೂಕಿನ ಬಾಣಾವರ ಹೋಬಳಿಯಲ್ಲೂ ಕಾಣಬರುತ್ತವೆ. ವರ್ಣಚಿತ್ರಗಳಿರುವ ಸ್ಥಳಗಳೆಂದರೆ : ಚಲುವನಹಳ್ಳಿ ಗವಿಮಠ, ಅದೇ ಗ್ರಾಮದ ಪಾತಕಲ್ಲು ಗುಡ್ಡ, ಬೈರಗೊಂಡನಹಳ್ಳಿ ಹಟ್ಟಿ ಮತ್ತು ಬೆಂಡೇಕೆರೆ ತಾಂಡ್ಯ.[೨]

ಈ ಎಲ್ಲಾ ವರ್ಣಚಿತ್ರಗಳು ಬಾಣಾವರದ ಬೆಟ್ಟ-ಗುಡ್ಡಗಳ ಸಾಲಿಗೆ ಸೇರಿದವುಗಳಾಗಿದ್ದು, ಈ ಗುಡ್ಡಗಳು ಧಾರವಾಡ ಗ್ರಾನೈಟ್ ಬಂಡೆಗಳ ಗುಂಪಿಗೆ ಸೇರಿವೆ. ಈ ಬೆಟ್ಟ-ಗುಡ್ಡಗಳ ಸಾಲಿನಲ್ಲಿ ನೂರಾರು ಗವಿಗಳು ಮತ್ತು ಕಲ್ಲಾಸರೆಗಳಿದ್ದು, ಆದಿಮಾನವನ ವಾಸ್ತವ್ಯಕ್ಕೆ ಬಹಳ ಸೂಕ್ತವಾಗಿದ್ದಂತೆ ಕಂಡುಬರುತ್ತದೆ. ಈ ಪ್ರದೇಶದಲ್ಲಿ ಹೆಚ್ಚಾಗಿ ಕರಡಿ, ಚಿರತೆ, ಕಾಡುಹಂದಿಗಳಿರುವುದರಿಂದ ಹೆಚ್ಚಿನ ಕ್ಷೇತ್ರ ಕಾರ್ಯ ಮಾಡಲು ಸಾಧ್ಯವಾಗಿಲ್ಲ. ಹೆಚ್ಚು ಕಾರ್ಯ ಕ್ಷೇತ್ರ ಮಾಡಿದರೆ ಇನ್ನೂ ಹಲವಾರು ಬಂಡೆ ಚಿತ್ರಗಳು ಬೆಳಕಿಗೆ ಬರಬಹುದು.

ಮೇಲೆ ತಿಳಿಸಿದ ಐದು ಸ್ಥಳಗಳ ಪೈಕಿ ಚಲುನವನಹಳ್ಳಿ ಗವಿಮಠದ ದಕ್ಷಿಣ ಭಾಗದಲ್ಲಿ ಕೆಂಪು ವರ್ಣಚಿತ್ರಗಳು, ಹಾಗೇ ಉಳಿದ ಸ್ಥಳಗಳಲ್ಲಿ ಬಿಳಿಯ ವರ್ಣಚಿತ್ರಗಳು ಕಂಡುಬಂದಿವೆ.[೩] ಉತ್ತರ ಕರ್ನಾಟಕದಲ್ಲಿ ವಿದ್ವಾಂಸರು ಕಂಡು ಹಿಡಿದಿರುವ ವರ್ಣಚಿತ್ರಗಳೆಲ್ಲವು ಬಿಳಿಯ ವರ್ಣಚಿತ್ರ ಗಳಾಗಿವೆ.[೪] ದಕ್ಷಿಣ ಕರ್ನಾಟಕದಲ್ಲೂ ಗವಿಗಳಲ್ಲಿ ಮತ್ತು ಕಲ್ಲಾಸರೆಗಳಲ್ಲಿ ಬಿಳಿಯ ವರ್ಣಚಿತ್ರಗಳು ಕಂಡುಬಂದಿವೆ. ಈ ವರ್ಣಚಿತ್ರಗಳ ಆಧಾರದ ಮೇಲೆ ಮಾನವನ ನೆಲೆಗಳನ್ನು ಗುರುತಿಸುವುದು ಹಾಗೆ ಅವನ ಸಂಸ್ಕೃತಿಯ ವಿಕಸನವನ್ನು ಈ ಲೇಖನದಲ್ಲಿ ಚರ್ಚಿಸಲಾಗುವುದು.

**ಬಂಡೆ ಚಿತ್ರಗಳು ವಿಷಯ / ವಸ್ತು :** ಚಲುವನಹಳ್ಳಿ ಗವಿಮಠದ ಕೆಂಪು ವರ್ಣಚಿತ್ರಗಳಲ್ಲಿ ನವಿಲುಗಳ ಗುಂಪನ್ನು ವೃತ್ತಾಕಾರದಲ್ಲಿ ಚಿತ್ರಿಸಲಾಗಿದೆ. ಅದೇ ಗ್ರಾಮದ ಪಾತಕಲ್ಲು ಗುಡ್ಡದ ಬಿಳಿಯ ವರ್ಣಚಿತ್ರಗಳು, ಬೈರಗೊಂಡನಹಳ್ಳಿ ಹಟ್ಟಿ ಮತ್ತು ಬೆಂಡೆಕೆರೆ ತಾಂಡ್ಯದ ವರ್ಣಚಿತ್ರಗಳು ವಿವಿಧ ಭಂಗಿಯಲ್ಲಿರುವ ಮಾನವರು, ಪ್ರಾಣಿ-ಪಕ್ಷಿಗಳಿಂದ ಕೂಡಿವೆ. ಅವುಗಳಲ್ಲಿ ಪ್ರಮುಖವಾದುವುಗಳೆಂದರೆ ಬೇಟೆಯ ದೃಶ್ಯ, ಬೇಟೆಯ ಆಯುಧಗಳಾದ ಬಿಲ್ಲು, ಬಾಣ, ಬಲೆ, ಈಟಿ, ಭರ್ಜಿ, ಏಣಿ ಹಾಗೆ ನಾಯಿ, ಎತ್ತು ಮತ್ತು ಪಕ್ಷಿಗಳು ಇವುಗಳಲ್ಲದೇ ಎತ್ತಿನ ಮೇಲೆ ಸವಾರಿ ಮಾಡುತ್ತಿರುವ ದೃಶ್ಯಗಳು ಸುಂದರವಾಗಿ ಚಿತ್ರಿಸಲ್ಪಟ್ಟಿವೆ. ಇಲ್ಲಿಯ ಕಲ್ಲಾಸರೆಗಳ ಬಿಳಿಯ ವರ್ಣಚಿತ್ರಗಳು ಒಂದರ ಮೇಲೆ ಇನ್ನೊಂದು ಇದ್ದಂತೆ ಕಂಡುಬರುತ್ತವೆ. ಇದರಿಂದ ಈ ಕಲ್ಲಾಸರೆಗಳು ಸ್ವಲ್ಪ ಸಮಯದವರೆಗೆ ಮಾನವ ಸಂಪರ್ಕ ಕಳೆದುಕೊಂಡು ನಂತರ ಪುನಃ ಅವುಗಳಲ್ಲೇ ತನ್ನ ಕಲೆಯನ್ನು ಮಾಡಿಸುವುದಕ್ಕೆ ಬಳಸಿರುವುದು ಕಂಡುಬರುತ್ತದೆ.

**ವರ್ಣಚಿತ್ರಗಳಿರುವ ಪ್ರದೇಶ / ಜಾಗ :** ವರ್ಣಚಿತ್ರಗಳಿರುವ ಎಲ್ಲಾ ಕಲ್ಲಾಸರೆಗಳು ಮತ್ತು ಗವಿಗಳು ಬೆಟ್ಟ-ಗುಡ್ಡಗಳ ತುದಿಯಲ್ಲಿ ಅಥವಾ ಮಧ್ಯಭಾಗದಲ್ಲಿ ಇರದೇ ಬೆಟ್ಟದ ಬುಡದಲ್ಲಿರುವುದು ಇಲ್ಲಿಯ ವಿಶೇಷವಾಗಿದೆ. ಇವುಗಳಲ್ಲಿ ಕೆಲವು ಬೆಟ್ಟಗುಡ್ಡಗಳ ಹತ್ತಿರವಿರದೆ ಸಮತಟ್ಟಾದ ಪ್ರದೇಶದಲ್ಲಿರುವ ಬಂಡೆಗಳ ಕಲ್ಲಾಸರೆಗಳಲ್ಲಿವೆ. ಈ ಕಲ್ಲಾಸರೆಗಳು ಸುಮಾರು ೧೫ ಅಡಿ ಅಗಲ ಮತ್ತು ಹತ್ತರಿಂದ ಹನ್ನೆರಡು ಅಡಿ ಎತ್ತರದಿಂದ ಕೂಡಿವೆ. ಇವುಗಳ ಪೈಕಿ

* ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ದಕ್ಷಿಣ ಕನ್ನಡ ಜಿಲ್ಲೆ.

ಎರಡು ಕಲ್ಲಾಸರೆಗಳು ದಕ್ಷಿಣಾಭಿಮುಖವಾಗಿಯೂ ಮತ್ತೆರಡು ಪಶ್ಚಿಮಾಭಿಮುಖವಾಗಿವೆ. ಇವುಗಳ ಸುತ್ತಮುತ್ತ ಬಹಳ ಫಲವತ್ತಾದ ಮಣ್ಣು, ನೀರು ಮತ್ತಿತರ ಅತ್ಯವಶ್ಯಕವಾದ ವಸ್ತುಗಳಾದ ಗ್ರಾನೈಟ್ ಬಂಡೆಗಳು ಹೇರಳವಾಗಿವೆ. ಈ ಬಂಡೆಗಳಿಂದ ಆದಿಮಾನವನು ವಿವಿಧ ರೀತಿಯ ಆಯುಧಗಳನ್ನು ಹಾಗೆ ಚಪ್ಪಡಿಗಳನ್ನು ತಯಾರಿಸುತ್ತಿದ್ದಂತೆ ಕಂಡುಬರುತ್ತದೆ. ಇಂತಹ ಭೌಗೋಳಿಕ ವಾತಾವರಣವು ಮಾನವ ಮೊದಲು ಪ್ರಾಣಿಗಳನ್ನು ಬೇಟೆಯಾಡುವುದಕ್ಕೆ ನಂತರ ಪ್ರಾಣಿಗಳನ್ನು ಪಳಗಿಸಿ ಅವುಗಳ ಸಹಾಯದಿಂದ ಕೃಷಿ ಚಟುವಟಿಕೆಗಳನ್ನು ನಡೆಸುವುದಕ್ಕೆ ಅನುಕೂಲವಾಯಿತು. ಚಲುವನಹಳ್ಳಿ ಗವಿಮಠದ ಉತ್ತರ ಭಾಗದಲ್ಲಿ ಸುಮಾರು ನಾಲ್ಕರಿಂದ ಆರು ಎಕರೆ ಭೂಮಿಯು ಬೂದಿಯಿಂದ ಕೂಡಿದ್ದು, ಕಬ್ಬಿಣದ ಚೂರುಗಳು (Iron slogs) ಹೇರಳವಾಗಿ ಕಂಡುಬರುತ್ತವೆ. ಇದಲ್ಲದೆ ಇದೇ ಪ್ರದೇಶದಲ್ಲಿ ಕೆಂಪು ಮಿಶ್ರಿತ ಕಪ್ಪು, ಕಪ್ಪು ಮತ್ತು ಹಳದಿ ಬಣ್ಣದ ಮಡಕೆ ಚೂರುಗಳು ಸಹ ಹೇರಳವಾಗಿ ಕಂಡುಬರುತ್ತವೆ. ಇವುಗಳಲ್ಲದೆ ಬೂದಿ ಬಣ್ಣದ ಭೂಮಿಯ ಮಧ್ಯಭಾಗದಲ್ಲಿ ದೊಡ್ಡ ಪ್ರಮಾಣದ ನಿಲುಗಲ್ಲು (menhirs)ಗಳಿವೆ. ಇವುಗಳಲ್ಲಿ ಕೆಲವನ್ನು ಕೃಷಿ ಚಟುವಟಿಕೆಗಳಿಗೆ ಅಡಚಣೆಯಾಗುತ್ತವೆಂದು ಒಡೆದು ಹಾಕಲಾಗಿದೆ. ಆದರೆ ಮತ್ತೆ ಕೆಲವು ಸುಸ್ಥಿತಿಯಲ್ಲಿವೆ.

**ಈ ವರ್ಣಚಿತ್ರಗಳ ಕಾಲಮಾನ :** ಪ್ರಾಗೈತಿಹಾಸಿಕ ಕಾಲದ ವರ್ಣಚಿತ್ರಗಳನ್ನು ಅಧ್ಯಯನ ಮಾಡಿರುವ ವಿದ್ವಾಂಸರ ಪ್ರಕಾರ ಕೆಂಪು ವರ್ಣಚಿತ್ರಗಳು, ಬಿಳಿಯ ವರ್ಣಚಿತ್ರಗಳಿಗಿಂತ ಪ್ರಾಚೀನವಾದವು.[೫] ಕೆಲವು ವಿದ್ವಾಂಸರ ಪ್ರಕಾರ ಕೆಂಪು ವರ್ಣಚಿತ್ರಗಳು ಹಳೇ ಶಿಲಾಯುಗದ ಅಂತ್ಯಕಾಲದವುಗಳಾಗಿದೆ. ಹೊಸ ಶಿಲಾಯುಗದ ಆರಂಭ ಕಾಲದವರೆಗೂ ಮುಂದುವರೆದಿದ್ದವು.[೬] ಬೃಹತ್ ಶಿಲಾಯುಗಕ್ಕೆ ಮುಂಚಿತವಾಗಿ ಬೆಟ್ಟಗುಡ್ಡಗಳ ಸಾಲಿನಲ್ಲಿರುವ ಕಲ್ಲಾಸರೆಗಳು ಮಾನವನ ವಾಸದ ನೆಲೆಗಳಾಗಿದ್ದವು. ಬಂಡೆ-ಚಿತ್ರಗಳ ಆಸುಪಾಸಿನಲ್ಲಿ ಬೃಹತ್ ಶಿಲಾಯುಗದ ನಿಲುಗಲ್ಲುಗಳಿರುವುದರಿಂದ ಕಲ್ಲಾಸರೆಗಳನ್ನು ಅಂದಿನ ಮಾನವ ಧಾರ್ಮಿಕ ಆಚರಣೆಯ ಸ್ಥಳಗಳಾಗಿ / ಕೇಂದ್ರಗಳಾಗಿ ಬಳಸಿಕೊಂಡಂತೆ ಕಂಡು ಬರುತ್ತದೆ. ನಿಲುಗಲ್ಲುಗಳು ಇಂತಹ ಕೇಂದ್ರಗಳ ಬಳಿಯಿರುವುದರಿಂದ ವರ್ಣಚಿತ್ರಗಳ ಕಾಲಮಾನವನ್ನು ಬೃಹತ್ ಶಿಲಾಯುಗದ ಕಾಲದವರೆಗೆ ವಿಸ್ತರಿಸಬಹುದು. ಆದರೆ ಕೆಲವರು ಇವುಗಳ ಪ್ರಾಚೀನತೆಯನ್ನು ಅನುಮಾನಿಸತೊಡಗಿದ್ದಾರೆ. ಈ ಸಮಸ್ಯೆಯು ಇಂದಿನದಲ್ಲ. ಬದಲಿಗೆ ಇದು ೧೯ನೇ ಶತಮಾನದಾಗಿದ್ದು, ಕ್ರಿ.ಶ. ೧೮೩೭ರಲ್ಲಿ ಪ್ರಥಮ ಬಾರಿಗೆ ಜಾರ್ಜ್ ಗ್ರೇಯವರು ಸಿಡ್ನಿಯಲ್ಲಿ ಮತ್ತು ಸೌಥ್ ಫೇಲಾರವರು ಅಲ್ಟಮಿರಾದಲ್ಲಿ ವರ್ಣಚಿತ್ರಗಳನ್ನು ಕಂಡುಹಿಡಿದಾಗ ಈ ಸಮಸ್ಯೆಯನ್ನು ಎದುರಿಸಿದ್ದರು. ಇದನ್ನು ನಿವಾರಿಸಲು ಹಲವಾರು ವರ್ಷಗಳನ್ನು ಕಳೆಯಬೇಕಾಯಿತು.[೭]

**ವರ್ಣಚಿತ್ರಗಳ ಉದ್ದೇಶ :** ಪ್ರಾಗೈತಿಹಾಸಿಕ ಕಾಲದ ವರ್ಣಚಿತ್ರಗಳ ಅಧ್ಯಯನವು ಪ್ರಾಕ್ತನ ಶಾಸ್ತ್ರಜ್ಞರಿಗೆ ಬಹಳ ಕುತೂಹಲ ಮತ್ತು ಆಸಕ್ತಿದಾಯಕವಾದದ್ದು. ವಿಜ್ಞಾನಿಗಳಿಗೆ ಇದೊಂದು ಮಾನವನ ಬೌದ್ಧಿಕ ಬೆಳವಣಿಗೆಯ ಹಂತವನ್ನು ತಿಳಿಯುವಲ್ಲಿ ಪ್ರಮುಖವಾದ ಹಂತವಾಗಿದೆ. ಸ್ಟೀವನ್ ಮಿತೆನ್ ತಮ್ಮ ಪುಸ್ತಕ 'ದಿ ಪ್ರಿ ಹಿಸ್ಟರಿ ಆಫ್ ದಿ ಮೈಂಡ್' ದಲ್ಲಿ ವರ್ಣಚಿತ್ರಗಳು ಮಾನವನ ಮೆದುಳು ಅಂತಿಮವಾಗಿ ಕೆಂಪುಗೊಂಡಿದ್ದನ್ನು ಅರ್ಥ ಮಾಡಿಕೊಳ್ಳುವಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತವೆಂದು ಅಭಿಪ್ರಾಯಪಟ್ಟಿದ್ದಾರೆ.[೮] ಯುರೋಪ್ ಖಂಡದ ಸಂದರ್ಭದಲ್ಲಿ ಇಂತಹ ಬೆಳವಣಿಗೆಗೆ ಮತ್ತು ಬದಲಾವಣೆಗಳಿಗೆ ಮೂರು ಕಾರಣಗಳನ್ನು ಅವರು ತಿಳಿಸಿದ್ದಾರೆ. ಅವುಗಳೆಂದರೆ :

೧) **ಹವಾಗುಣ :** ಹವಾಮಾನ ದಲ್ಲಿ ಶೀತದ ಪ್ರಮಾಣ ಹೆಚ್ಚಾಗಿ ನಂತರ ಕಡಿಮೆಯೆಂದಾಗ ಅಲ್ಲಿ ದೊರಕುತ್ತಿದ್ದ ಪ್ರಾಣಿಗಳ ಸಂಖ್ಯೆ ಮತ್ತು ವೈವಿಧ್ಯತೆಯು ಸಹ ಉಂಟಾಯಿತು. ಇದರಿಂದಾಗಿ ಅವುಗಳನ್ನು ಬೇಟೆಯಾಡುವ ಸಲಕರಣೆಗಳು ಸಹ ಮಾರ್ಪಾಟಾದವು. ಹಾಗಾಗಿ ಬದಲಾದ ಪ್ರಾಣಿಗಳ ಮಾಹಿತಿಯನ್ನು ಮತ್ತು ಅವುಗಳ ಚಲನವಲನಗಳನ್ನು ದಾಖಲಿಸುವುದು ಅತ್ಯವಶ್ಯಕವಾಗಿತ್ತು. ೨) ಮೌಂಟ್ ತೋಬಾ ಜ್ವಾಲಾಮುಖಿ ಯಿಂದಾಗಿ ಜಗತ್ತಿನಾದ್ಯಂತ ಜ್ವಾಲಾಮುಖಿಯ ಶೀತ ಹೆಚ್ಚಾಗಿ ಮಾನವನ ಮತ್ತು ಪ್ರಾಣಿಗಳ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಇಳಿಮುಖವಾಗಿ ಮಾನವ ತನ್ನ ಆಹಾರಕ್ಕಾಗಿ ತೀವ್ರ ಸ್ವರೂಪದ ಪೈಪೋಟಿಯನ್ನು ಎದುರಿಸಬೇಕಾಯಿತು. ೩) **ಸೃಜನಶೀಲತೆ :** ಕಲ್ಲಾಸರೆಗಳಲ್ಲಿ ಒಂದು ವರ್ಣಚಿತ್ರದ ಮೇಲೆ ಇನ್ನೊಂದು ವರ್ಣಚಿತ್ರಗಳು ಒತ್ತಿದಂತಿರುವುದು, ಕಲ್ಲಾಸರೆಗಳು ಸತತವಾಗಿ ಮಾನವನ ಚಟುವಟಿಕೆಗಳಿಂದ ಕೂಡಿರುವುದು ಕಂಡುಬರುತ್ತದೆ. ಈ ಮೇಲಿನ ಕಾರಣಗಳು ಭಾರತಕ್ಕಾಗಲಿ ಅಥವಾ ಕರ್ನಾಟಕದ ಸಂದರ್ಭಕ್ಕಾಗಲಿ ಅನ್ವಯಿಸದಿರಬಹುದು. ಆದರೆ ಅವುಗಳಲ್ಲಿ ಯಾವುದಾದರೂ ಒಂದು ಅಂಶವು ಈ ಭಾಗದಲ್ಲಿ ವರ್ಣಚಿತ್ರಗಳು ಹುಟ್ಟಿ ಬೆಳೆಯಲು ನೆರವಾಗಿರುವುದರಲ್ಲಿ ಯಾವುದೇ ಸಂಶಯವಿಲ್ಲ.

ಆದಿಮಾನವನು ತನ್ನ ಆಹಾರಕ್ಕಾಗಿ ಹೆಚ್ಚಾಗಿ ಪ್ರಾಣಿಗಳನ್ನು ಅವಲಂಬಿಸಿದ್ದರಿಂದ ಅವುಗಳನ್ನು ಚಿತ್ರಿಸುವ ಮೂಲಕ ಬರವಣಿಗೆಯ ಕಲೆಯು ಆರಂಭವಾಯಿತೆನ್ನಬಹುದು. ಇಂತಹ ಬರವಣಿಗೆಯು ಗುಟ್ಟಿನ ಹಾಗೇ

ಪಾವಿತ್ರ್ಯತೆಯ ಬರಹಗಳಾಗಿದ್ದವು. ಈ ಬರವಣಿಗೆಗಳು ಅಂದಿನ ಹಾಗೇ ಅಲ್ಲಿಯ ಪ್ರಾಣಿಗಳ ವಿವರಗಳು, ಅಂದರೆ; ಅವುಗಳ ಚಲನವಲನಗಳು, ಅವುಗಳ ಸಂಖ್ಯೆಗಳು, ಯಾವಾಗ ಯಾವ ಪ್ರಾಣಿಗಳು ಹೆಚ್ಚಾಗಿ ಕಂಡುಬರುತ್ತದೆ. ಹಾಗೆ ಯಾವ ಮಾರ್ಗಗಳಲ್ಲಿ ಚಲಿಸುತ್ತವೆ ಎಂಬುದರ ದಾಖಲಾತಿಗಳಾಗಿವೆ. ಇವಲ್ಲದೇ ಅಂತಹ ಪ್ರಾಣಿಗಳನ್ನು ಬೇಟೆಯಾಡಲು ಯಾವ ರೀತಿಯ ಆಯುಧಗಳನ್ನು ಬಳಸುತ್ತಿದ್ದರು ಎಂಬುದನ್ನು ಸಹ ಇವುಗಳಿಂದ ತಿಳಿಯಬಹುದು. ಇಂತಹ ದಾಖಲೆಗಳನ್ನು (ವರ್ಣಚಿತ್ರಗಳು) ದುರ್ಗಮ ಸ್ಥಳಗಳಲ್ಲಿ ಗೌಪ್ಯವಾಗಿ ಕಾಪಾಡುವುದು ಸಹ ಅಂದಿನ ಮಾನವನಿಗೆ ಅನಿವಾರ್ಯ ವಾಗಿದ್ದಂತೆ ಕಂಡುಬರುತ್ತದೆ. ಏಕೆಂದರೆ ಇಂತಹ ಮಾಹಿತಿಗಳು ತಮ್ಮ ವೈರಿಗಳಿಗೆ ಸುಲಭವಾಗಿ ಸಿಗಬಾರದು ಹಾಗೆ ಪ್ರಾಣಿಗಳ ಜ್ಞಾನ/ವಿವರ ತಮಗೆ ಮಾತ್ರ ಸೀಮಿತಗೊಂಡಿರಬೇಕೆಂಬುದು ಅವರ ಆಶಯವಾಗಿದ್ದಿರಬಹುದು. ಪ್ರಾಣಿಗಳ ಲಭ್ಯತೆ ಕಡಿಮೆಯಿದ್ದುದರಿಂದ ಇಂತಹ ಉಪಾಯಗಳು ಅನಿವಾರ್ಯ ವಾಗಿದ್ದುವೇನೋ ಮಾನವರ ಜೀವನ ಪ್ರಾಣಿಗಳ ಮೇಲೆ ಹೆಚ್ಚಾಗಿ ಅವಲಂಬಿಸಿದ್ದರಿಂದ ಕಾಲಕ್ರಮೇಣ ಅವುಗಳನ್ನು ಪೂಜಿಸಲಾರಂಭಿಸಿ, ನಂತರ ಅವುಗಳ ಚಿತ್ರವಿರುವ ಕಲ್ಲಾಸರೆಗಳು ಪೂಜನೀಯ ಸ್ಥಳ/ಕೇಂದ್ರಗಳಾಗಿ ಬೆಳೆಯ ಲಾರಂಭಿಸಿದವು.[೯] ಫ್ರಾನ್ಸಿನ ಪ್ರಾಗೈತಿಹಾಸಿಕ ತಜ್ಞ ಅಂದ್ರೆ ಲೆರಾಯ್ ಗೋರ್ಹನ್ ಪ್ರಕಾರ ಯೂರೋಪಿನ ಗುಹಾಂತರ ಕಲೆಯು 'ಒಂದು ವೈಚಾರಿಕತೆಯ ವ್ಯವಸ್ಥೆ' ಹಾಗೆ 'ಗುಹಾಂತರ ಧರ್ಮ' ವಾಗಿತ್ತೆಂದು ಅಭಿಪ್ರಾಯಪಟ್ಟಿದ್ದಾರೆ.[೧೦]

ಸ್ಟೀವನ ಮಿಥೇನ್‌ನ ಪ್ರಕಾರ ಆದಿಮಾನವನ ಮೆದುಳಿನಲ್ಲಿ ಮೂರು ರೀತಿಯ ಬುದ್ಧಿವಂತಿಕೆಯು ವಿಕಸನಗೊಂಡವು. ಅವುಗಳೆಂದರೆ : ೧) ತಂತ್ರಗಾರಿಕೆಯ ಬುದ್ಧಿವಂತಿಕೆ (ಕಲ್ಲಿನ ಆಯುಧಗಳನ್ನು ತಯಾರಿಸುವದು), ೨) ಸ್ವಾಭಾವಿಕ ಇತಿಹಾಸದ ಬುದ್ಧಿವಂತಿಕೆ (ಪ್ರಕೃತಿ ಮತ್ತು ಪ್ರಾಣಿ-ಪಕ್ಷಿಗಳನ್ನು ತಿಳಿಯುವುದು ಮತ್ತು ೩) ಸಾಮಾಜಿಕ ಬುದ್ಧಿವಂತಿಕೆ (ಸಮಾಜದಲ್ಲಿ / ಗುಂಪಿನಲ್ಲಿ ಬದುಕುವ ಕಲೆ)[೧೧] ರಿಚರ್ಡ್ ಕ್ಲೀನ್‌ರವರು ಈ ಹಂತದಲ್ಲಿ ಮಾನವನ ಸಾಂಸ್ಕೃತಿಕ ಕ್ರಾಂತಿಯು ಪ್ರಾರಂಭವಾಗಿ ಮಾನವ ತನ್ನ ಅಭಿಪ್ರಾಯಗಳನ್ನು ಮತ್ತು ತನಗೆ ತಿಳಿದಿದ್ದನ್ನು ಹಾಗೇ ನೋಡಿದ್ದನ್ನು ಬೇರೆಯವರಲ್ಲಿ ಹಂಚಿಕೊಳ್ಳಲು ಪ್ರಾರಂಭಿಸಿದನೆಂದು ತಿಳಿಸಿದ್ದಾರೆ.[೧೨] ಗುಹಾಂತರ ಕಲೆಯನ್ನು ವಿಶಾಲವಾಗಿ 'ಸಂಗ್ರಹಿಸಿದ ಮಾಹಿತಿ' ಎಂದು ಅರ್ಥೈಸಬಹುದು.[೧೩] ಜಾನ್ ಪೀಫರ್ ಈ ವರ್ಣಚಿತ್ರಗಳನ್ನು 'ಬುಡಕಟ್ಟಿನ / ಆದಿವಾಸಿಗಳ ಜ್ಞಾನಕೋಶ' ಎಂದು ಕರೆದಿದ್ದಾರೆ.[೧೪] ಹೆಚ್ಚಿನ ಹಳೇ ಶಿಲಾಯುಗದ ವರ್ಣಚಿತ್ರಗಳು ಕೊನೆಯ ಹಿಮಯುಗದಲ್ಲಿ ಹವಾಮಾನದ ವೈಪರೀತ್ಯದಿಂದಾಗಿ ಜೀವನ ದುಸ್ತರ ವಾದ್ದರಿಂದ ಅಸ್ತಿತ್ವಕ್ಕೆ ಬಂದವು.[೧೫] ಓಲ್ಲಾ ಶಾಪರ್ ಬಟ್ಟೆಯನ್ನು ತಯಾರಿಸುವ ಕಲೆ ನಂತರದಲ್ಲಿ ಪ್ರಾರಂಭವಾಗಿ, ಅದರಿಂದ ಬಲೆಯನ್ನು ಮಾಡಿ ಬೇಟೆಗಾಗಿ ಮಾನವ ಸುಮಾರು ಕ್ರಿಪೂ. ೬೦,೦೦೦ ವರ್ಷಗಳ ಹಿಂದೆ ಬಳಸಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ.[೧೬]

ಈ ಮೇಲಿನ ವಿವರಣೆಗಳು ದಕ್ಷಿಣ ಕರ್ನಾಟಕದ ಭಾಗವಾದ ಅರಸೀಕೆರೆ-ಬಾಣಾವರ ಪ್ರದೇಶವು ಪ್ರಾಗೈತಿಹಾಸಿಕ ಕಾಲದಲ್ಲಿಯೇ ಚಿತ್ರಕಲೆಯ ಉಗಮ ಮತ್ತು ಬೆಳವಣಿಗೆಗೆ ಪ್ರಸಿದ್ಧಿಯಾಗಿದ್ದು, ಮಾನವ ಈ ಪ್ರದೇಶದಲ್ಲಿ ನಿರಂತರವಾಗಿ ತನ್ನ ಚಟುವಟಿಕೆಗಳನ್ನು ಮುಂದುವರಿಸಿರುವುದನ್ನು ಸಾಬೀತುಪಡಿಸುತ್ತವೆ. ಈ ಪ್ರದೇಶವು ಸ್ವಾಭಾವಿಕ ಗುಡ್ಡಗಾಡು ಪ್ರದೇಶಗಳಿಂದ ಕೂಡಿದ್ದು, ಹಲವಾರು ಗವಿಗಳು, ಕಲ್ಲಾಸರೆ ಗಳು ಇರುವುದರಿಂದ ಮಾನವನ ವಾಸ್ತವ್ಯಕ್ಕೆ ಸೂಕ್ತವಾಗಿದ್ದವು. ಇಲ್ಲಿಯ ಹವಾಮಾನ, ಮಣ್ಣು ಮತ್ತು ಇತರ ಅಂಶಗಳಿಂದಾಗಿ ಆದಿಮಾನವನು ಪಶು ಸಂಗೋಪನೆ ಮತ್ತು ಕೃಷಿ ಚಟುವಟಿಕೆಗಳಿಗೆ ಹೆಚ್ಚು ಒತ್ತು ಕೊಟ್ಟಿರುವುದು ಸಹ ಇದರಿಂದ ಕಂಡುಬರುತ್ತದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕ್ರಿ.ಶ. ೧೯೪೦ರ ದಶಕದಲ್ಲಿ ಲಿಯೋನಾರ್ಡ್ ಮೆನ್ಸರ ಸಂಶೋಧನೆಯ ನಂತರ ಪ್ರಾಕ್ತನ ಮಾಪನ ಇಲಾಖೆ ಮತ್ತು ಹೈದರಾಬಾದ್‌ನ ಭೂವಿಜ್ಞಾನ ವಿಭಾಗವು ಗುಹೆಯ ವರ್ಣಚಿತ್ರಗಳನ್ನು ಹಾಗೂ ಬಂಡೆಯ ರೇಖಾಚಿತ್ರಗಳನ್ನು ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಕಲ್ಲೂರು ಹಾಗೂ ಗುಲ್ಬರ್ಗ ಜಿಲ್ಲೆಯ ಬಾಲಚಕ್ರ ಮತ್ತು ಅತನೂರುಗಳಲ್ಲಿ ಕಂಡುಹಿಡಿದು ಅವುಗಳನ್ನು ತಮ್ಮ ವಾರ್ಷಿಕ ವರದಿಗಳಲ್ಲಿ ಪ್ರಕಟಿಸಿದ್ದಾರೆ. ೧೯೫೧ರಲ್ಲಿ ಬಾಂಬೆ ಪ್ರಾಂತ್ಯದ ಕನ್ನಡ ಸಂಶೋಧನಾ ಸಂಸ್ಥೆಯು ಬಿಜಾಪುರ ಜಿಲ್ಲೆಯ ಕುಲ್ಲೋಳಿಯಲ್ಲಿ ಬಂಡೆಯ ಚಿತ್ರಗಳಿರುವುದನ್ನು ಬೆಳಕಿಗೆ ತಂದಿದೆ. ಇಂಗ್ಲೆಂಡಿನ ಡಾ. ಆಲ್ಚಿನ್ ದಂಪತಿಗಳು ರಾಯಚೂರು ಜಿಲ್ಲೆಯ ಪಿಕ್ಲಿಹಾಳದಲ್ಲಿ ವರ್ಣಚಿತ್ರಗಳು ಮತ್ತು ಬಂಡೆಯ ರೇಖಾಚಿತ್ರಗಳಿರುವುದನ್ನು ಕಂಡುಹಿಡಿದಿದ್ದಾರೆ. ಡಾ. ಎಂ.ಎಸ್. ನಾಗರಾಜರಾವ್ ಮತ್ತು ಡಾ. ರು.ಮ. ಷಡಕ್ಷರಯ್ಯರವರು ಬಳ್ಳಾರಿ ಜಿಲ್ಲೆಯ

ಶಿಲ್ಪಕೂಟ, ಬಿಂಗನಕಲ್ಲು, ಬೆಟಗಲ್ಲು, ಕುರುಗೋಡು ಮತ್ತು ಅಮ್ಮಂಬಿನಹಳ್ಳಿಯಲ್ಲಿ ಪ್ರಾಗೈತಿಹಾಸಿಕ ಕಾಲದ ವರ್ಣಚಿತ್ರಗಳಿರುವುದನ್ನು ವರದಿ ಮಾಡಿದ್ದಾರೆ. ಡಾ. ಅ. ಸುಂದರರವರು ಸಹ ಲಿಯೋನಾರ್ಡ್ ಮನ್ನರವರು ಪತ್ತೆಹಚ್ಚಿದ ಸ್ಥಳಗಳಲ್ಲಿ ಮತ್ತೆ ಹಿರೇಬೆನಕಲ್‌ನಲ್ಲಿ ಎರಡು ಸ್ಥಳಗಳಲ್ಲಿ ಪ್ರಾಗೈತಿಹಾಸಿಕ ವರ್ಣಚಿತ್ರಗಳಿರುವುದನ್ನು ಗುರುತಿಸಿದ್ದಾರೆ. ಅವರು ಮುಂದುವರಿದು ೧೯೭೪ರ ನಂತರ ಈಗಿನ ಬಾಗಲಕೋಟೆ ಜಿಲ್ಲೆಯ ರಾಮದುರ್ಗ, ಬಾದಾಮಿ, ಹೊಸ ಮಹಾಕೂಟ, ಐಹೊಳೆಯಲ್ಲಿ, ರಾಯಚೂರು ಜಿಲ್ಲೆಯ ಕೊಪ್ಪಳ, ಹಿರೇಬಾವಿ, ಮಲ್ಲಾಪುರ, ಆನೆಗೊಂದಿ, ತಿಮ್ಮಲಾಪುರ, ನಾರಾಯಣಪುರ, ಬಂಡಿಹರಳಾಪುರ, ಮಾಸ್ಕಿ, ಬೇತಮರ್ಚೆಡ್ ಮತ್ತು ತಾವರೆಗೆರೆಯಲ್ಲಿ, ಬಳ್ಳಾರಿ ಜಿಲ್ಲೆಯ ಕುರುಗೋಡು, ಹೋಳಕುಂದಿ ಮತ್ತು ಹಂಪೆಯಲ್ಲಿ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟಂಗರಾಮೇಶ್ವರ, ಚಿತ್ರದುರ್ಗ, ಚಂದವಳ್ಳಿ, ಉತ್ತರ ಕನ್ನಡ ಜಿಲ್ಲೆಯ ಜೋಳ ಮತ್ತು ಶಿವಮೊಗ್ಗ ಜಿಲ್ಲೆಯ ಹೊಳಲೂರಿನಲ್ಲಿ ವರ್ಣಚಿತ್ರಗಳಿರುವುದನ್ನು ಗುರುತಿಸಿದ್ದಾರೆ. ಹೆಚ್. ಶ್ರೀಶೈಲ ಆರಾಧ್ಯ ಚಿತ್ರದುರ್ಗ, ಚಂದವಳ್ಳಿ ಮತ್ತು ಬ್ರಹ್ಮಗಿರಿಯಲ್ಲಿ ಮೂವತ್ತಕ್ಕೂ ಹೆಚ್ಚು ವರ್ಣಚಿತ್ರಗಳಿರುವುದನ್ನು ಗುರುತಿಸಿದ್ದಾರೆ. ಪ್ರೊ. ಲಕ್ಷ್ಮಣ್ ತೆಲಗಾವಿಯವರು ಸಹ ಚಿತ್ರದುರ್ಗ ಪ್ರದೇಶದಲ್ಲಿ ಹಲವಾರು ಬಂಡೆಯಲ್ಲಿ ರೇಖಾಚಿತ್ರಗಳಿರುವುದನ್ನು ಗುರುತಿಸಿದ್ದಾರೆ. ವಸಂತಶೆಟ್ಟಿಯವರು ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರದ ಬಳಿಯಲ್ಲಿರುವ ಗಾವಳಿಯ ಬಂಡೆಯ ರೇಖಾಚಿತ್ರಗಳನ್ನು ಗಮನಿಸಿದ್ದಾರೆ. ರಘುನಾಥ ಭಟ್ಟರು ಸೋಂದೆಯ ಸ್ವರ್ಣವಲ್ಲಿ ಮಠದ ಆಸುಪಾಸಿನಲ್ಲಿ ಬಂಡೆಯ ಗೀರು ಚಿತ್ರಗಳನ್ನು ಹಾಗೇ ಎಸ್.ವಿ. ಪಾಡಿಗಾರ್‌ರವರು ಐಹೊಳೆ ಸಮೀಪದಲ್ಲಿರುವ ಸಿದ್ದನಕೊಳ್ಳದಲ್ಲಿ ಬಂಡೆಯ ಚಿತ್ರಗಳನ್ನು ಪತ್ತೆಹಚ್ಚಿದ್ದಾರೆ. ಹೆಚ್ಚಿನ ವಿವರಣೆಗೆ ನೋಡಿ ಅ. ಸುಂದರ, **ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಕಲೆ,** (ಬೆಂಗಳೂರು, ೧೯೯೪), ಪುಟಗಳು ೧೦–೧೫.

೨. ಇತಿಹಾಸದ ವಿದ್ಯಾರ್ಥಿಗಳಿಗೆ ಗವಿಮಠ ಬಹಳ ಪ್ರಸಿದ್ಧವಾದ ಹೆಸರು. ಅಲ್ಲಿ ಅಶೋಕನ ಶಾಸನವಿದೆ. ಚಲುವನಹಳ್ಳಿ ಪ್ರದೇಶವು ಹಲವಾರು ಬಂಡೆಗಳಿಂದ ಕೂಡಿದ್ದು, ನೂರಾರು ಗವಿಗಳು, ಕಲ್ಲಾಸರೆಗಳು ಇರುವುದರಿಂದ ಇಲ್ಲಿಯೂ ಸಹ ಒಂದು ವೀರಶೈವ ಮಠ ಇರುವುದರಿಂದ ಇದನ್ನು ಸಹ ಗವಿಮಠ ಎಂದು ಕರೆಯಲಾಗಿದೆ. ಈ ಗವಿಮಠವು ಚಾರಿತ್ರಿಕವಾಗಿ ಕೊಪ್ಪಳದ ಗವಿಮಠಕ್ಕಿಂತ ಪ್ರಾಚೀನವಾದುದು.

೩. ನಾನು ೧೯೯೦ರ ದಶಕದಲ್ಲಿ ಚಲುವನಹಳ್ಳಿ ಗವಿಮಠ ಮತ್ತು ಬೈರಗೊಂಡನಹಳ್ಳಿಯಲ್ಲಿ ಬಿಳಿ ಮತ್ತು ಕೆಂಪು ವರ್ಣಚಿತ್ರಗಳಿರುವುದನ್ನು ಕಂಡುಹಿಡಿದಿದ್ದೆ. ಹೆಚ್ಚಿನ ವಿವರಗಳಿಗೆ ನೋಡಿ **ಇತಿಹಾಸ ದರ್ಶನ, ಸಂಪುಟ ೯,** (ಬೆಂಗಳೂರು ೧೯೯೪), ಪುಟಗಳು ೬–೮. ಈ ಪ್ರಾಂತ್ಯದಲ್ಲಿ ಬಂಡೆಯನ್ನು ಒಡೆಯುವ ಕೆಲಸದಿಂದಾಗಿ ಬಿಳಿಯ ವರ್ಣಚಿತ್ರಗಳು ಈಗ ಕಾಣದಾಗಿವೆ. ಆದರೆ ಉಳಿದೆರಡು ನೆಲಗಳಾದ ಬೆಂಡೇಕೆರೆ ತಾಂಡ್ಯ ಮತ್ತು ಪಾತಕಲ್ಲು ಗುಡ್ಡದಲ್ಲಿರುವ ಬಿಳಿಯ ವರ್ಣಚಿತ್ರಗಳನ್ನು ನಮ್ಮ ಸಂಶೋಧನಾ ವಿದ್ಯಾರ್ಥಿ ಮಿತ್ರರಾದ ಸಂದೀಪ್‌ಕುಮಾರ್ ಶೆಟ್ಟಿ ಮತ್ತು ಪ್ರವೀಣ್ ಕಂಡುಹಿಡಿದಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು.

೪. ಅ. ಸುಂದರರವರು ಕೆಲವು ಬಿಳಿಯ ವರ್ಣಚಿತ್ರಗಳನ್ನು ಬ್ರಹ್ಮಗಿರಿ ಮತ್ತು ಚಿತ್ರದುರ್ಗದಲ್ಲಿ ಕಂಡುಹಿಡಿದಿದ್ದಾರೆ. ನೋಡಿ ಸುಂದರ, ಪೂರ್ವೋಕ್ತಿ, ಪುಟಗಳು ೧೬–೧೭.

೫. ಸುಂದರ., ಪೂರ್ವೋಕ್ತಿ, ಪುಟ ೭.

೬. ಅದೇ., ಪುಟಗಳು ೫೩–೫೫.

೭. ಅದೇ., ಪುಟ ೫೫ ಮತ್ತು ಪೀಟರ್ ವ್ಯಾಟಸನ್ ಐಡಿಯಾಸ್., **ಎ ಹಿಸ್ಟರಿ ಫ್ರಮ್ ಫೈಲ್ ಟು ಫ್ರೈಡ್** (ಲಂಡನ್ ೨೦೦೫), ಪುಟ ೩೩.

೮. ಸ್ಟೀವನ್ ಮಿಥೇನ್., **ದಿ ಪ್ರಿ ಹಿಸ್ಟರಿ ಆಫ್ ದಿ ಮೈಂಡ್** (ಲಂಡನ್, ೧೯೩೬) ಪುಟ ೧೭೪, ಸೈಟೆಡ್ ಇನ್ ಪೀಟರ್ ವ್ಯಾಟಸನ್, ಐಡಿಯಾಸ್, ಪೂರ್ವೋಕ್ತ, ಪುಟ ೩೩.

೯. ರಿಚರ್ಡ್ ರೊಡಗ್ಗ್ಲೇ., **ದಿ ಲಾಸ್ಟ್ ಸಿವಿಲೈಜೇಶನ್ ಆಫ್ ದಿ ಸ್ಟೋನ್ ಏಜ್,** (ನ್ಯೂಯಾರ್ಕ್, ೧೯೯೯), ಪುಟ ೧೪೩, ಸೈಟೆಕ್ ಇನ್ ಪೀಟರ್ ವ್ಯಾಟಸನ್, ಪೂರ್ವೋಕ್ತ, ಪುಟ ೩೪.

೧೦. ಅದೇ.,

೧೧. ಸ್ಟೀವನ್ ಮಿಥೇನ್., ಪೂರ್ವೋಕ್ತ, ಪುಟ ೧೨೬, ಸೈಟೆಕ್ ಇನ್ ಪೀಟರ್ ಪ್ಲಾಟಸನ್, ಪೂರ್ವೋಕ್ತ, ಪುಟ ೨೫.

೧೨. **ದಿ ಟೈಮ್ಸ್** (ಲಂಡನ್) ಫೆಬ್ರವರಿ ೧೭, ೨೦೦೩, ಪುಟ ೭, ಸೈಟೆಕ್ ಇನ್ ಪೀಟರ್ ವ್ಯಾಟಸನ್, ಪೂರ್ವೋಕ್ತ, ಪುಟ ೩೪.

೧೩. ಸ್ಟೀವನ್ ಮಿಥೇನ್., ಪೂರ್ವೋಕ್ತ, ಇನ್ ಪೀಟರ್ ವ್ಯಾಟಸನ್, ಪೂರ್ವೋಕ್ತ, ಪುಟ ೩೫.

೧೪. ಅದೇ.,

೧೫. ಅದೇ.,

೧೬. **ಸೈಂಟಿಫಿಕ್ ಅಮೇರಿಕನ್,** ನವೆಂಬರ್ ೨೦೦೦, ಪುಟಗಳು ೩೨–೩೪, ಇನ್ ಪೀಟರ್ ವ್ಯಾಟಸನ್, ಪೂರ್ವೋಕ್ತ, ಪು. ೩೬.

ಡಾ. ಎಂ.ಎಸ್. ಕೃಷ್ಣಮೂರ್ತಿ*

ಡಾ. ಆರ್. ಗೋಪಾಲ್** ಟಿ.ಎಸ್. ಗಂಗಾಧರ***

# ತಲಕಾಡಿನಲ್ಲಿ ಮುಂದುವರೆದ ಉತ್ಖನನ-ಒಂದು ಸಂಕ್ಷಿಪ್ತ ವರದಿ

ತಲಕಾಡು ಟಿ.ನರಸೀಪುರ ತಾಲ್ಲೂಕಿನಲ್ಲಿ ಕಾವೇರಿ ನದಿಯ ಉತ್ತರ ದಂಡೆಯ ಮೇಲಿನ ಸಾಂಸ್ಕೃತಿಕ ಹಾಗೂ ಚಾರಿತ್ರಿಕವಾಗಿ ಪ್ರಸಿದ್ಧವಾದ ಒಂದು ಊರು. ತಲಕಾಡಿನಲ್ಲಿ ೧೯೯೨-೯೩ ಸಾಲಿನಿಂದೀಚೆಗೆ ಪುರಾತತ್ವ ಉತ್ಖನನಗಳು ಸತತವಾಗಿ ನಡೆಯುತ್ತಲೇ ಬಂದಿವೆ. ೧೯೯೨-೯೩ನೇ ಸಾಲಿನಲ್ಲಿ ನಡೆದ ಸುದೀರ್ಘ ಉತ್ಖನನದ ವಿಸ್ತಾರವಾದ ವರದಿಯ ಸಂಪುಟ ೧೯೯೮ರಲ್ಲಿ ಬಿಡುಗಡೆಯಾಗಿ ವಿದ್ವಾಂಸರ ಮನ್ನಣೆ ಪಡೆದಿದೆ. ತದನಂತರದ ವರ್ಷಗಳಲ್ಲಿ ಅನೇಕ ಬಾರಿ ಅಲ್ಲಿ ಉತ್ಖನನಗಳು ನಡೆದವು. ಆದರೆ ಅವುಗಳ ವರದಿಗಳು ಮಾತ್ರ ಅಲ್ಲಲ್ಲಿ ವೃತ್ತ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆಯೇ ಹೊರತು, ವೈಜ್ಞಾನಿಕವಾಗಿ ಬರೆದ ಸಮಗ್ರ ವರದಿ ಮಾತ್ರ ತಯಾರಾಗಿಲ್ಲ. ರಾಜ್ಯ ಪುರಾತತ್ವ ಇಲಾಖೆ ೨೦೦೬-೦೭ನೇ ಸಾಲಿನಲ್ಲಿ ಮತ್ತೊಮ್ಮೆ ತಲಕಾಡಿನಲ್ಲಿ ಉತ್ಖನನ ನಡೆಸಲು ಹಾಗೂ ಈ ಹಿಂದೆ ಉತ್ಖನನ ನಡೆಸಿ ಅರ್ಧಂಬರ್ಧಕ್ಕೆ ಬಿಡಲಾಗಿದ್ದ ಉತ್ಖನನ ಕೆಲಸಗಳನ್ನು ಪೂರ್ತಿಗೊಳಿಸಿ ಸಮಗ್ರ ವರದಿ ತಯಾರಿಸಲು ತೀರ್ಮಾನಿಸಿತು. ಅದರಂತೆ ಮೇಲ್ಕಂಡ ಮೂರು ನಿರ್ದೇಶಕರ ನೇತೃತ್ವದಲ್ಲಿ ಪುರಾತತ್ವ ಉತ್ಖನನಗಳು ಪುನರಾರಂಭ ಗೊಂಡವು. ೨೦೦೬-೦೭ ಮತ್ತು ೨೦೦೭-೦೮ನೇ ಸಾಲಿನಲ್ಲಿ ನಡೆಸಿದ ಉತ್ಖನನಗಳ ಫಲಿತಾಂಶಗಳನ್ನು ಸಂಕ್ಷಿಪ್ತವಾಗಿ ಈ ಲೇಖನದಲ್ಲಿ ವಿದ್ವಾಂಸರ ಮುಂದಿಡಲಾಗಿದೆ.

೧೯೯೨-೯೩ನೇ ಸಾಲಿನಲ್ಲಿ ಉತ್ಖನನಗಳ ಫಲಿತಾಂಶಗಳು ಮೇಲೆ ಹೇಳಿದಂತೆ ಈಗಾಗಲೇ ಗ್ರಂಥ ರೂಪದಲ್ಲಿ ಪ್ರಕಟವಾಗಿವೆ. ಈ ಗ್ರಂಥವನ್ನು ರಚಿಸಿದಾಗ, ಉತ್ಖನನದ ಫಲಿತಾಂಶಗಳ ನಿರೂಪಣೆಯಲ್ಲಿ, ಅವುಗಳ ಅಧ್ಯಯನ, ವಿಶ್ಲೇಷಣೆ ಮತ್ತು ಅರ್ಥೈಸುವಿಕೆಯಲ್ಲಿ ಕೆಲವೊಂದು ಸಂದೇಹಗಳು ಇದ್ದವು. ಆದರೂ ಆ ಕಾಲಕ್ಕೆ ಮತ್ತು ಆಗಿನ ತಿಳುವಳಿಕೆಗೆ ಅದೇ ಸಮಂಜಸವೆಂದು ತೋರಿದ್ದರಿಂದ ಆ ವಿಶ್ಲೇಷಣೆಗಳನ್ನು ಮತ್ತು ಅವುಗಳ ಗ್ರಹಿಕೆಯನ್ನು ಅದೇ ರೀತಿ ಪ್ರಕಟಿಸಲಾಗಿತ್ತು. ಇತ್ತೀಚಿನ ಉತ್ಖನನಗಳಲ್ಲಿ ಕೆಲವು ಹೊಸ ಹೊಸ ಚಾರಿತ್ರಿಕ, ತಾಂತ್ರಿಕ, ವೈಜ್ಞಾನಿಕ ವಿಷಯಗಳು ತಿಳುವಳಿಕೆಗೆ ಲಭ್ಯವಾಗಿ, ಈ ಹಿಂದೆ ನಿವೇದಿಸಿದ್ದ ಕೆಲವು ವಿಶ್ಲೇಷಣೆಗಳನ್ನು ಬದಲಿಸಬೇಕಾದ ಪರಿಸ್ಥಿತಿಯೂ ಎದುರಾಯಿತು. ಇತಿಹಾಸದ ಪುನಾರಚನೆ ಕಾಲಕಾಲಕ್ಕೆ ಅತ್ಯವಶ್ಯಕ ಎಂಬ ಮಹತ್ತರ ಜನೋಕ್ತಿಯನ್ನು ನೆನಪಿಸಿಕೊಂಡು ಹಳೆಯ ಹಲವಾರು ವಿಚಾರಗಳನ್ನು ಹೊಸಹೊಸ ವಿಷಯಾನ್ವೇಷಣೆಗಳ ಬೆಳಕಿನಲ್ಲಿ ಸೂಕ್ತವಾಗಿ ಮಾರ್ಪಾಡು ಮಾಡಿ ವಿದ್ವಾಂಸರ ಮುಂದೆ ಪ್ರಸ್ತುತಪಡಿಸುತ್ತಿದ್ದೇವೆ.

ಮೊಟ್ಟ ಮೊದಲಿಗೆ ತಲಕಾಡಿನಲ್ಲಿ ತಲಕಾಡು VII ಎಂಬ ಉತ್ಖನನದ ಗುಂಡಿಗೆ ಬರೋಣ. ಈ ಉತ್ಖನನ ಗುಂಡಿ ಪ್ರದೇಶದಲ್ಲಿ ವಿಜಯನಗರ ಕಾಲದ ನೀರಾವರಿ ವ್ಯವಸ್ಥೆಯ ಬಗ್ಗೆ ಹಲವಾರು ಮಹತ್ತರ ಮಾಹಿತಿಗಳು ದೊರಕಿದವು. ಅವುಗಳಲ್ಲಿ ನದಿಯ ನೀರನ್ನು 'ಅರಮನೆ' ಪ್ರದೇಶಕ್ಕೆ ತರುವ ಇಟ್ಟಿಗೆ ನಿರ್ಮಿತ ನೆಲದೊಳಗಿನ ಕೊಳಾಯಿ, ಕೊಳಾಯಿಯಿಂದ ಬಂದ ನೀರು ತುಂಬುವುದಕ್ಕೆಂದು ನಿರ್ಮಿತವಾಗಿದ್ದ ಒಂದು ಆಳವಾದ ಬಾವಿ, ಬಳಿಯಲ್ಲಿಯೇ ಇದ್ದ ಒಂದು ಕೊಠಡಿಯೊಳಗಿನ ಒಂದು ಸ್ನಾನದ ಕೊಳ, ಇವಿಷ್ಟು (ಚಿತ್ರ-೧ ಅ) ೧೯೯೨-೯೩ನೇ ಸಾಲಿನ ಪುರಾತತ್ವ ಶೋಧನೆಗಳಲ್ಲಿ ಕೆಲವೊಂದು ಆಗಿದ್ದವು. ಈ ನೀರು ಸರಬರಾಜು ವ್ಯವಸ್ಥೆಯ ಕೆಲಸ ಕ್ರಮಗಳನ್ನು ಅರ್ಥೈಸುವಾಗ ಈ ರೀತಿಯ ತಿಳುವಳಿಕೆ ಮೂಡಿತ್ತು. ಅದೇನೆಂದರೆ ನೆಲದೊಳಗಿನ ಕೊಳಾಯಿಯಲ್ಲಿ ಬಂದ ನೀರು ಬಾವಿಯೊಳಕ್ಕೆ ಬೀಳುತ್ತಿತ್ತು. ಬಾವಿಯಲ್ಲಿನ ನೀರಿನ ಮಟ್ಟ ಏರಿದಾಗ ಆ ನೀರು ನೆಲದೊಳಗಿನ ಇನ್ನೊಂದು ಕೊಳಾಯಿಯ ಮೂಲಕ ಸ್ನಾನದ ಕೊಳಕ್ಕೆ ಪ್ರವೇಶಿಸುತ್ತಿತ್ತು. ಬಾವಿಯಲ್ಲಿ ನೀರಿನ ಮಟ್ಟ ಏರಿಳಿಸುವುದರ ಮೂಲಕ ಕೊಳದೊಳಗಿನ ನೀರಿನ ಮಟ್ಟವನ್ನು ನಿಯಂತ್ರಿಸಲಾಗುತ್ತಿತ್ತು. ಒಟ್ಟಿನಲ್ಲಿ ಅತಿ ಹೆಚ್ಚೆಂದರೆ ಕೊಳದೊಳಗೆ ಒಂದು ಮೀಟರ್‌ನಷ್ಟು ಮಾತ್ರ ನೀರನ್ನು ತುಂಬಲು ಸಾಧ್ಯವಾಗುತ್ತಿತ್ತು. ಅದೇ ಉತ್ಖನನದಲ್ಲಿ ಕೊಳದೊಳಗೆ ಗಾರೆಗಚ್ಚಿನ ಘಟಪ್ರನಾಳವನ್ನು ಹಿಡಿದಿದ್ದ

* (ನಿ) ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ವಿಭಾಗ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು - ೬.

** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು - ೧೦.

*** ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು - ೧೦.

ಕುಬ್ಜನ ವಿಗ್ರಹವೊಂದು ದೊರೆತಿತ್ತು. ಆದರೆ ಅಂದಿನ ಪರಿಸ್ಥಿತಿಯಲ್ಲಿ ಆ ವಿಗ್ರಹದ ಉಪಯೋಗದ ರೀತಿಯಾಗಲೀ ಸ್ನಾನದ ಕೊಳದಲ್ಲಿ ಅದನ್ನು ಕೂಡಿಸಿದ್ದ ಜಾಗದ ಬಗ್ಗೆಯಾಗಲೀ ನಿಖರ ಮಾಹಿತಿ ದೊರೆತಿರಲಿಲ್ಲವಾದ್ದರಿಂದ ಈ ವಿಷಯದ ಬಗ್ಗೆ ಹೆಚ್ಚಿನ ವಿವರಣೆಗಳನ್ನು ನೀಡಿರಲಿಲ್ಲ.

ಮೇಲೆ ಹೇಳಿದ ವಿಷಯಗಳ ವಿಶ್ಲೇಷಣೆ ತಾಂತ್ರಿಕವಾಗಿ ಅಷ್ಟು ಸಮಂಜಸವೆನಿಸುತ್ತಿರಲಿಲ್ಲ. ಆದಕಾರಣ ಈ ವಿಷಯಗಳ ಬಗ್ಗೆ ಇನ್ನೂ ಆಳವಾಗಿ, ಕೂಲಂಕಷವಾಗಿ ಅಧ್ಯಯನ ನಡೆಸುವ ದೃಷ್ಟಿಯಿಂದ ಮತ್ತೆ ಈ ಉತ್ಖನನ ಗುಂಡಿಗಳಲ್ಲಿ ತುಂಬಿದ್ದ ಮರಳನ್ನು ತೆಗೆಯಿಸಿ, ನೀರು ಸರಬರಾಜು ವ್ಯವಸ್ಥೆಗೆ ಸಂಬಂಧಿಸಿದ ಎಲ್ಲಾ ಗುಂಡಿಗಳನ್ನು ಪುನಃ ಪರಿಶೀಲನೆಗೆ ಒಳಪಡಿಸಲಾಯಿತು. ಹೀಗೆ ನಡೆಸಿದ ಪುನಃ ಪರಿಶೀಲನೆಯಿಂದ ಅಲ್ಲಿನ ನೀರು ಸರಬರಾಜು ವ್ಯವಸ್ಥೆಗೆ ಸಂಬಂಧಿಸಿದ ಅತಿ ರೋಮಾಂಚನಕಾರಿ ಹಾಗೂ ಆ ಕಾಲಕ್ಕೆ ಅತಿ ವಿಶಿಷ್ಟವಾದ ವೈಜ್ಞಾನಿಕ ತಂತ್ರಜ್ಞಾನಗಳು ಬೆಳಕಿಗೆ ಬಂದವು.

ಈ ಎಲ್ಲಾ ಮುಂದುವರೆದ ತಂತ್ರಜ್ಞಾನದ ವಿಶ್ಲೇಷಣೆ, ವಿವರಣೆ ಮತ್ತು ನಿರೂಪಣೆ ಮುಂಚೆ ತಿಳಿದಿದ್ದ ನೀರು ಸರಬರಾಜು ವ್ಯವಸ್ಥೆಯ ಅನೇಕ ಮುಖಗಳನ್ನು ಬದಲಾವಣೆ ಮಾಡುವುದಲ್ಲದೆ ಈ ತಂತ್ರಜ್ಞಾನಗಳು ಆಗಿನ ಕಾಲದ ನಮ್ಮ **ಪೂರ್ವಜರ ಹೆಮ್ಮೆಯ ಅನ್ವೇಷಣೆಗಳು** ಎಂಬುದನ್ನು ಪ್ರಚುರಪಡಿಸುತ್ತವೆ. ಈ ಬಗ್ಗೆ ಒಂದು ವಿವರವಾದ ಲೇಖನ ವಿಜಯನಗರ ವಿಚಾರ ಸಂಕಿರಣ ೨೦೦೭ರಲ್ಲಿ "ವಿಜಯನಗರಕಾಲದ ನೀರು ಸರಬರಾಜು ವ್ಯವಸ್ಥೆಯ ಮೇಲೆ ಹೊಸ ಬೆಳಕು" ಎಂಬ ಶೀರ್ಷಿಕೆಯಡಿಯಲ್ಲಿ[೧] ಪ್ರಕಟವಾಗಿದೆ. ವಿವರಗಳ ಪುನರಾವರ್ತನೆಯನ್ನು ತಡೆಯಲು ಆ ಲೇಖನದಲ್ಲಿನ ಮುಖ್ಯ ಸಾರಾಂಶಗಳನ್ನು ಮಾತ್ರ ಇಲ್ಲಿ ನಿವೇದಿಸಿದೆ. ಹೆಚ್ಚಿನ ವಿವರ ಬಯಸುವವರು ಮೇಲೆ ತಿಳಿಸಿದ ಲೇಖನವನ್ನು ಓದಬಹುದು. ಹೊಸ ಸಂಶೋಧನೆಗಳು ಬೆಳಕಿಗೆ ತಂದ ಮುಖ್ಯ ಅಂಶಗಳಾವುವೆಂದರೆ ಸ್ನಾನದ ಕೊಳಕ್ಕೆ ಎರಡು ಇಟ್ಟಿಗೆ ನಿರ್ಮಿತ ಕೊಳಾಯಿಗಳ ಮೂಲಕ ನೀರು ಸರಬರಾಜಾಗುತ್ತಿತ್ತು. (ನೋಡಿ ರೇಖಾಚಿತ್ರ–೧) ಒಂದನೆಯದು ಮೇಲ್ಮಟ್ಟದ ಕೊಳಾಯಿ ಎರಡನೆಯದು ಕೆಳಮಟ್ಟದ ಕೊಳಾಯಿ. ಎರಡು ಕೊಳಾಯಿಗಳನ್ನು ತಲಕಾಡಿಗೆ ನಿರಂತರ ನೀರು ಸರಬರಾಜು ಮಾಡುತ್ತಿದ್ದ ಕಾವೇರಿ ನದಿಯ ನಾಲೆಯೊಂದಕ್ಕೆ ಕೂಡಿಸಲಾಗಿತ್ತು. ಇವುಗಳಲ್ಲಿ ಮೇಲ್ಮಟ್ಟದ ಕೊಳಾಯಿ ಸ್ನಾನಗೃಹದ ಉತ್ತರ ಗೋಡೆಯಲ್ಲಿ ಎತ್ತರ ಭಾಗದಲ್ಲಿ ಕೂಡಿಸಲಾಗಿದ್ದ ಘಟ ಪ್ರನಾಳದ ಮೂಲಕ ಕೊಳದೊಳಕ್ಕೆ ನೀರು ಬೀಳುತ್ತಿತ್ತು. (ನೋಡಿ ಚಿತ್ರ – ೧) ಕೆಳಗಡೆಯ ಕೊಳಾಯಿ ಸ್ನಾನಗೃಹದ ಆಗ್ನೇಯ ಮೂಲೆಯಲ್ಲಿ ಗೋಡೆಯ ಒಳಗಡೆ ಅದೃಶ್ಯವಾಗಿದ್ದುಕೊಂಡು ಕೊಳಕ್ಕೆ ನೀರನ್ನು ತುಂಬುತ್ತಿತ್ತು. (ನೋಡಿ ಚಿತ್ರ–೧).

ಈ ರೀತಿಯಾಗಿ ಎರಡು ವಿವಿಧ ಮಟ್ಟಗಳ ಕೊಳಾಯಿಗಳ ಮೂಲಕ ಕೊಳಕ್ಕೆ ನೀರನ್ನು ತುಂಬುತ್ತಿದ್ದ ವಿಶೇಷತೆ ಪ್ರಶಂಸಾರ್ಹವಾದದ್ದು. ಮೇಲಿನ ಕೊಳಾಯಿಯ ಮೂಲಕ ಕೊಳದೊಳಕ್ಕೆ ಎತ್ತರದಿಂದ ಬೀಳುತ್ತಿದ್ದ ಜಲಧಾರೆಯು ಸ್ನಾನ ದೇಹಕ್ಕೆ ಆರಾಮ ಹಾಗೂ ಸುಖ ನೀಡುತ್ತಿತ್ತು. ಜೊತೆಗೆ ಪ್ರನಾಳದ ಘಟದ ಬಾಯಿಗೆ ಮುಚ್ಚಿದ್ದ ಜಾಲರಿಯಿಂದ ನೀರಿನ ತೇಲುವ ಕಲ್ಮಶ ಜರಡಿಯಾಗುತ್ತಿತ್ತು. ಇದು ಒಂದು ರೀತಿಯ ವಿಧಾನವಾದರೆ ಎರಡನೆಯ ರೀತಿ ಇನ್ನೂ ವಿಶಿಷ್ಟವಾದದ್ದು ಹಾಗೂ ಅನುಪಮವಾದದ್ದು. ಕೆಳಗಿನ ಕೊಳಾಯಿಯ ಮೂಲಕ ಬಂದ ನೀರು ಗೋಡೆಯ ಮಧ್ಯಭಾಗದಲ್ಲಿ ನಿರ್ಮಿತವಾಗಿದ್ದ ಕೊಳಾಯಿಯ ಮೂಲಕ ಆಗ್ನೇಯ ಮೂಲೆಯ ಕೊಳದ ತಳಕ್ಕೆ ಇಳಿಯುತ್ತಿತ್ತು. ಕೊಳದಲ್ಲಿ ನೀರಿನ ಮಟ್ಟ ಏರುತ್ತಿದ್ದಂತೆ ಈ ಕೊಳಾಯಿಯ ಒಳಭಾಗದಲ್ಲಿ ನೀರಿನ ಮಟ್ಟ ಸಮಾನಾಂತರವಾಗಿ ಏರುತ್ತಿತ್ತು. ಇದು ಎಲ್ಲರಿಗೂ ತಿಳಿದಿರುವ ನೀರಿನ ಭೌತಿಕ ಲಕ್ಷಣ. ಹೀಗಾಗಿ ನಾಲೆಯ ನೀರಿನಲ್ಲಿ ತೇಲಿಬರುವ ಎಲ್ಲಾ ಕಲ್ಮಶಗಳೂ ಈ ಇಳಿಕೊಳಾಯಿಯಲ್ಲಿ ನಿಂತಿರುವ ನೀರಿನ ಮೇಲ್ಮಟ್ಟದಲ್ಲೇ ನಿಲ್ಲುತ್ತಿತ್ತು. ನೀರಿನಲ್ಲಿನ ಬದಿ/ಕೆಸರು ನಿಧಾನವಾಗಿ ಕೆಳಗಿಳಿದು ಈ ಇಳಿಕೊಳಾಯಿಯ ತಳಭಾಗದಲ್ಲಿ ಶೇಖರವಾಗುತ್ತಿತ್ತು. ಹೀಗೆ ನಿರಂತರವಾಗಿ ಕಸವೆಲ್ಲವೂ ಕೊಳಾಯಿಯಲ್ಲಿಯೇ ಸೇರುತ್ತಾ ಬಂದರೂ ಶುದ್ಧ ನೀರು ಮಾತ್ರ ಸತತವಾಗಿ ಕೊಳದೊಳಕ್ಕೆ ಸೇರುತ್ತಿತ್ತು. ಈ ರೀತಿಯ ನಿರ್ವಹಣಾ ರಹಿತವೂ, ಸರಳವೂ ಆದ ವಿಧಾನ ಆ ಕಾಲದ ವಾಸ್ತು ಶಿಲ್ಪಿಗಳ ತೀಕ್ಷ್ಣ ಬುದ್ಧಿಯನ್ನು ಪ್ರತಿಬಿಂಬಿಸುತ್ತದೆ. ನಿರ್ಮಾಣ ವಿಧಾನ ಸುಲಭ, ಯಾವುದೇ ಹೆಚ್ಚಿನ ಖರ್ಚಿಲ್ಲ. ಕೊಳಾಯಿಯೂ ಅಗೋಚರ, ಇಲ್ಲಿ ನೀರೇ ನೀರನ್ನು, ತೇಲುವಕಸವೇ ಕಸವನ್ನು ಜರಡಿ ಹಿಡಿಯುತ್ತವೆ. ಜೊತೆಗೆ ನೀರಿನೊಳಗಿನ ಬದಿಯನ್ನು ಪ್ರತ್ಯೇಕಿಸುತ್ತದೆ.

ಕಸ ತುಂಬಿಕೊಂಡಷ್ಟು ಜರಡಿ ಕಾರ್ಯ ಹೆಚ್ಚು – ಹೆಚ್ಚು ಸಮರ್ಪಕವಾಗುತ್ತದೆ, ಎಷ್ಟು ಕಸ ತುಂಬಿದರೂ ಜರಡಿ ಕಟ್ಟಿಕೊಳ್ಳುವುದಿಲ್ಲ, ಪ್ರತಿದಿನ ಜರಡಿ ಬದಲಾವಣೆಯ, ಸ್ವಚ್ಛಮಾಡುವ ಕೆಲಸವೇ ಇರುವುದಿಲ್ಲ. ಇಂತಹ ನಿರ್ವಹಣಾ ರಹಿತ, ತೊಂದರೆರಹಿತವಾದ ನೀರನ್ನು ಶುದ್ಧೀಕರಿಸಿ ಕೊಳಕ್ಕೆ ತುಂಬಿಸುವ ಜರಡಿ ವಿಧಾನ ವಿಜಯನಗರ ಕಾಲದ ಶಿಲ್ಪಿಗಳು ವಿನ್ಯಾಸ ಮಾಡಿ ರಚಿಸಿರುವುದು ಆ ಕಾಲದ ವಾಸ್ತು ಶಿಲ್ಪಿಗಳ ಬುದ್ಧಿಮಟ್ಟವನ್ನು, ಚಾಕಚಕ್ಯತೆಯನ್ನು ಪ್ರತಿಬಿಂಬಿಸುತ್ತದೆ. ಇಂತಹ

ಒಂದು ವಿಧಾನ ಕೇವಲ ತಲಕಾಡಿನಲ್ಲಿ ಮಾತ್ರ ನಮಗೆ ಇದುವರೆಗೆ ತಿಳಿದು ಬಂದಿರುವುದು ಈ ನಾಡಿನ ಹೆಮ್ಮೆಯ ವಿಷಯ.

ಇನ್ನು ಕೊಳವನ್ನು ಸ್ವಚ್ಛಮಾಡುವ ವಿಧಾನಕ್ಕೆ ಬರೋಣ. ಈ ಕೆಲಸವೂ ಸಹ ಅತೀ ಸರಳ ಮತ್ತು ಸುಲಭ. ಯಾವ ಜಾಗದಲ್ಲಿ ಗೋಡೆಯ ಮಧ್ಯದಿಂದ ಗುಪ್ತವಾಗಿ, ಕೆಳಗಿನ ಕೊಳಾಯಿ, ಕೊಳದೊಳಕ್ಕೆ ಕೆಳಕ್ಕೆ ಇಳಿಯುತ್ತದೆಯೋ ಅದೇ ಸ್ಥಳದಲ್ಲಿ ದಕ್ಷಿಣಾಭಿಮುಖವಾಗಿ ಮತ್ತೊಂದು ಕಿಂಡಿಯನ್ನು ಕಲ್ಪಿಸಲಾಗಿದೆ. (ನೋಡಿ ಚಿತ್ರ-೨) ಈ ಕಿಂಡಿಯ ಮೂಲಕ ಹೊರಕ್ಕೆ ಬರುವ ನೀರು, ಅದೇ ದಿಕ್ಕಿನಲ್ಲಿ ಮುಂದುವರೆದು ಅನತಿ ದೂರದಲ್ಲಿರುವ ಬಾವಿ (ಇಂಗುಗುಂಡಿ) ಯೊಳಕ್ಕೆ ಬಂದು ಬೀಳುತ್ತದೆ. ನೀರನ್ನು ಹೊರಕ್ಕೆ ಕಳುಹಿಸುವ ಕಿಂಡಿ ಕೊಳದ ಆಗ್ನೇಯ ಮೂಲೆಯಲ್ಲಿದೆ. ಇದರ ಬಾಯಿ ಚೌಕಾಕಾರವಾಗಿ ಸವಿಸ್ತಾರವಾಗಿದೆ ಮತ್ತು ಆಳವೂ ಇದೆ. ಈ ಕಿಂಡಿಯ ಹಿಂಭಾಗದ ತುದಿಯಲ್ಲಿ ಮತ್ತೊಂದು ಚೌಕಾಕಾರದ ಸಣ್ಣ ಬಾಯಿಯ ಕಿಂಡಿ ಇದೆ. ಇದರ ಮೂಲಕ ನೀರು ಹೊರಕ್ಕೆ ಹರಿದು ಹೋಗುವಂತೆ ರಚಿಸಲಾಗಿದೆ. ನೀರು ಹೊರಕ್ಕೆ ಹೋಗುವ ಕಿಂಡಿಯ ಮುಂದಿನ ಹಾಗೂ ಹಿಂದಿನ ತುದಿಗಳ ಮಧ್ಯಂತರ ಸುಮಾರು ೩೦ ಸೆಂ.ಮೀ. ಈ ಅಂತರದಲ್ಲಿ ಕಿಂಡಿಯ ನೆತ್ತಿಯಲ್ಲಿ, ನೀರು ಸರಬರಾಜು ಮಾಡುವ ಗುಪ್ತ ಕೊಳಾಯಿಯ ಬಾಯಿಯನ್ನು ಕೂಡಿಸಲಾಗಿದೆ. ಹೀಗಾಗಿ ಮೇಲಿನಿಂದ ಇಳಿದ ನೀರು ಅಗೋಚರವಾಗಿಯೇ ಉಳಿದು, ಕೊಳದೊಳಕ್ಕೆ ಸೇರುತ್ತದೆ. ಕೊಳದಲ್ಲಿ ನೀರನ್ನು ಸಂಗ್ರಹಿಸಬೇಕಾದರೆ, ನೀರು ಹೊರ ಹೋಗುವ ಮಾರ್ಗವನ್ನು ಮುಚ್ಚಬೇಕು. ಇದಕ್ಕಾಗಿ ಹೊರಮಾರ್ಗದ ಹಿಂತುದಿಯ ಸಣ್ಣ ಕಿಂಡಿಯನ್ನು ಬೆಣೆಯಿಂದ ಮುಚ್ಚಿದರೆ ಕೊಳದಲ್ಲಿ ನೀರು ಸಂಗ್ರಹವಾಗುತ್ತದೆ. ಹೊರ ಮಾರ್ಗದ ಹಿಂತುದಿಯ ಕಿಂಡಿ, ಸಣ್ಣದಿರುವುದರಿಂದ ಅದಕ್ಕೆ ಸಿಕ್ಕಿಸುವ ಬೆಣೆಯೂ ಸಣ್ಣದಿರುತ್ತದೆ. ಇದರಿಂದಾಗಿ ಹೊರಮಾರ್ಗದಲ್ಲಿ, ಬೆಣೆಯ ಸುತ್ತಲೂ ಸಾಕಷ್ಟು ಜಾಗ ಖಾಲಿ ಇರುತ್ತದೆ. ಈ ಖಾಲಿ ಜಾಗದಿಂದ ಗುಪ್ತ ಕೊಳಾಯಿಯ ಮೂಲಕ ನೀರು ಇಳಿದು ಕೊಳ ಸೇರುತ್ತದೆ. ಕೊಳದ ನೀರನ್ನು ಖಾಲಿ ಮಾಡಬೇಕಾದ ಸಮಯದಲ್ಲಿ ಹೊರಮಾರ್ಗದ, ಹಿಂದಿನ ಬಾಯಿಯ ಬೆಣೆಯನ್ನು ಎಳೆದು ತೆಗೆದರೆ, ಕೊಳದೊಳಗಿನ ನೀರು ರಭಸದಿಂದ ಹೊರ ಮಾರ್ಗದ ಮುಖಾಂತರ ಬಾವಿಗೆ/ಗುಂಡಿಗೆ ಬಂದು ಸೇರುತ್ತದೆ. ಈ ರಭಸದಲ್ಲಿ ಗುಪ್ತ ಕೊಳಾಯಿಯಲ್ಲಿ ಶೇಖರವಾಗಿರುವ ಕಸ, ಕಡ್ಡಿ ಎಲ್ಲವೂ ಸಹ ಕೆಳಗಿಳಿದು ಹೊರದೂಡಲ್ಪಡುತ್ತವೆ. ಹೊರಮಾರ್ಗದ ಹಿಂದಿನ ಕಿಂಡಿಗೆ ಬೆಣೆಯನ್ನು ಸಿಕ್ಕಿಸಿದರೆ ಕೊಳಕ್ಕೆ ನೀರು ತುಂಬುವ ಜೊತೆಗೆ ನಿರಂತರ ಜರಡಿ ಕಾರ್ಯವೂ ಪುನರಾರಂಭವಾಗುತ್ತದೆ.

ಇನ್ನು ಬಾವಿ ಅಥವಾ ಇಂಗು ಗುಂಡಿಯ ವಿಚಾರಕ್ಕೆ ಬರೋಣ (ನೋಡಿ ಚಿತ್ರ-೧). ಈ ಬಾವಿಯು ಸುಮಾರು ೩೦ ಅಡಿ ಆಳವಿದೆ. ಮೇಲರ್ಧವನ್ನು ಇಟ್ಟಿಗೆಯ ಗೋಡೆಯಿಂದ ಭದ್ರಪಡಿಸಿದ್ದಾರೆ. ಕೆಳಾರ್ಧಕ್ಕೆ ಗಟ್ಟಿ ಮಣ್ಣಿನ ಸ್ವಾಭಾವಿಕ ಮಣ್ಣಿನ ರಚನೆ ಇದೆ. ಈ ಬಾವಿಯೂ ಸಹ ಸಂಪೂರ್ಣವಾಗಿ ಕುಸಿದ ಮಣ್ಣಿನಿಂದ ಮುಚ್ಚಿಹೋಗಿತ್ತು. ನಾಲೆಯಿಂದ ಬರುವ ಹೆಚ್ಚು ನೀರು ಈ ಬಾವಿಗೆ ಬಂದು ಬೀಳುತ್ತಿತ್ತು. ಸ್ನಾನದ ಕೊಳದಿಂದಲೂ ಆಗಾಗ್ಗೆ ನೀರನ್ನು ಇದಕ್ಕೆ ಬಿಡುತ್ತಿದ್ದರು. ಅಂದ ಮೇಲೆ ಇದು ಕುಡಿಯಲು ಯೋಗ್ಯವಾದ ನೀರಾಗಿರಲಿಲ್ಲ. ಬಾವಿಯ ನೀರನ್ನು ಕಪಿಲೆಯ ಮೂಲಕ ಮೇಲಕ್ಕೆ ಎತ್ತಿ ಪಕ್ಕದಲ್ಲೆ ಇದ್ದ ಇಟ್ಟಿಗೆ ನಿರ್ಮಿತ ಬಚ್ಚಲಿಗೆ ಸುರಿಯುತ್ತಿದ್ದರು. ಆ ನೀರು ಅರಮನೆಯ ಆವರಣದ ವಿವಿಧ ಸ್ಥಳಗಳಿಗೆ ಹರಿದು ಹೋಗುತ್ತಿತ್ತು. ಸ್ನಾನದ ಕೊಳಕ್ಕೆ ನೀರನ್ನು ಸರಬರಾಜು ಮಾಡುತ್ತಿದ್ದ ಕೆಳಮಟ್ಟದ ಇಟ್ಟಿಗೆ ಕೊಳಾಯಿಯು ಬಾವಿಯನ್ನು ಸೇರುವುದಕ್ಕೆ ಮುಂಚೆ ಬಲದಿಕ್ಕಿನಲ್ಲಿ (ದಕ್ಷಿಣ) ಒಂದು ಕವಲನ್ನು ಹೊಂದಿದ್ದುದಕ್ಕೆ ಸೂಚನೆಗಳು ಕಂಡು ಬಂದಿವೆ. ಈ ಕವಲಿನ ಮೂಲಕ ನದಿ ನೀರು ಅರಮನೆಯ ಆವರಣಕ್ಕೆ ಹೋಗುತ್ತಿತ್ತು. ಈ ಕವಲು ಕೊಳಾಯಿಯನ್ನು ಅಗೆದು ಗುರುತಿಸುವ ಕಾರ್ಯ ನಡೆಯಬೇಕಾಗಿದೆ.

ಈಗ ತಲಕಾಡಿನ ಉತ್ಖನನದ ಮತ್ತೊಂದು ಮುಖ್ಯ ಶೋಧನೆ ಎನಿಸಿರುವ ಗಾಳಿ ತಡೆಗೋಡೆಯ ವಿಚಾರಕ್ಕೆ ಬರೋಣ. ೧೯೯೨-೯೩ನೇ ಸಾಲಿನ ಉತ್ಖನನದಲ್ಲಿ ವಿಶ್ವದಲ್ಲೇ ಪ್ರಪ್ರಥಮವೆನಿಸಿರುವ ಹಾಗೂ ಪುರಾತತ್ವದ ಇತಿಹಾಸದಲ್ಲೇ ಮೊಟ್ಟಮೊದಲ ಶೋಧನೆ ಎನಿಸಿರುವ ಈ ಗಾಳಿತಡೆಗೋಡೆ, ಏಕೆ ಹೀಗೆ ನಿರ್ಮಾಣವಾಯಿತು ಎಂಬುದಕ್ಕೆ ಸಾಕಷ್ಟು ದೀರ್ಘ ವಿವರಣೆಯನ್ನು ಈಗ ಪ್ರಕಟವಾಗಿರುವ ವರದಿ ಸಂಪುಟದಲ್ಲಿ ನೀಡಿದೆ. ಈ ವರದಿಯನ್ನು ಪ್ರಕಟಿಸಿದಾಗ ಉತ್ಖನನ ಇನ್ನೂ ಅಪೂರ್ಣ ವಾಗಿಯೇ ಉಳಿದಿತ್ತು. ಗಾಳಿತಡೆ ಗೋಡೆಯನ್ನು xc3-xc4 ಗುಂಡಿಗಳವರೆಗೆ ಶೋಧಿಸಲಾಗಿತ್ತು. ಅಲ್ಲಿಂದ ಮುಂದಕ್ಕೆ ಇನ್ನು ಬಹಳ ದೂರ ದಕ್ಷಿಣ-ಆಗ್ನೇಯಾಭಿಮುಖವಾಗಿ ಇದು ಮುಂದುವರೆಯುವುದೆಂಬ ಅನುಮಾನವನ್ನು ಮುಂದಿಡಲಾಗಿತ್ತು. ಈ ಅನುಮಾನ ಪರಿಹಾರಕ್ಕಾಗಿ ೨೦೦೬-೦೭ನೇ ಸಾಲಿನಲ್ಲಿ ಉತ್ಖನನವನ್ನು ಮುಂದುವರೆಸ ಲಾಯಿತು. ಈ ಮಧ್ಯೆ ೧೯೯೫-೯೬, ೧೯೯೬-೯೭ ಸಾಲಿನಲ್ಲಿ ಇನ್ನಿತರ ಕೆಲವು ಸಂಶೋಧಕರು, ಪ್ರಾಚ್ಯವಸ್ತು

ಇಲಾಖೆಯ ವತಿಯಿಂದಲೇ ಹಳೆಯ ಅನುಮಾನಗಳ ಆಧಾರದ ಮೇಲೆ ಇದೇ ಸ್ಥಳದಲ್ಲಿ ಉತ್ಖನನ ನಡೆಸಿ ಸಂಶೋಧನೆಯನ್ನು ಅರ್ಧಂಬರ್ಧ ಮಾಡಿ ಕೆಲಸವನ್ನು ಅಲ್ಲಿಗೆ ನಿಲ್ಲಿಸಿ, ಒಂದೆರಡು ತೇಲಿಕೆಯ ವರದಿಗಳನ್ನು ಪತ್ರಿಕೆಗಳಿಗೆ ನೀಡಿ ಸಮಗ್ರ, ಸಂಪೂರ್ಣ ವರದಿಯನ್ನು ತಯಾರಿಸದೆಯೇ ನಿರ್ಗಮಿಸಿದ್ದರು. ೨೦೦೬-೦೭ನೇ ಸಾಲಿನಲ್ಲಿ ಪ್ರಸ್ತುತ ನಿರ್ದೇಶಕರ ತಂಡವು ಈ ಸ್ಥಳದಲ್ಲಿಯೇ ಉತ್ಖನನ ಕಾರ್ಯವನ್ನು ಪುನರಾರಂಭಿಸಿ, ಕೆಲವು ಹೊಸ ಗುಂಡಿಗಳನ್ನು ತೋಡಿಸಿ, ಹಳೆಯ ಉತ್ಖನನದ ಗುಂಡಿಗಳನ್ನು ಅಗತ್ಯವಿದ್ದೆಡೆ ವಿಸ್ತರಿಸಿ, ದಿಂಡುಗಳನ್ನು ತೆಗೆಯಿಸಿ, ಕೆಲವು ಕಡೆ ಗುಂಡಿಯ ಆಳವನ್ನು ಹೆಚ್ಚಿಸಿ ಹಿಂದೆ ಅರ್ಧಂಬರ್ಧವಾಗಿ ನಿಂತಿದ್ದ ಸಂಶೋಧನೆಯನ್ನು ಪೂರ್ಣ ಗೊಳಿಸಿ, ಅಲ್ಲಿ ಕಂಡು ಬಂದ ಎಲ್ಲಾ ನಿರ್ಮಾಣಗಳಿಗೂ ನಿಶ್ಚಿತವಾದ, ತರ್ಕಬದ್ಧವಾದ ವಿವರಣೆಗಳನ್ನು ನೀಡಿರುವುದಲ್ಲದೆ ಇನ್ನೂ ಅನೇಕ ಹೊಸ ಹೊಸ ವಿಚಾರಗಳನ್ನು ಬೆಳಕಿಗೆ ತರುವುದರಲ್ಲಿ ಯಶಸ್ವಿಯಾಗಿದೆ. ಈ ಹೊಸ ಹೊಸ ಸಂಶೋಧನೆಗಳ ಸಾರಾಂಶವನ್ನು ಮುಂದೆ ಕಾಣಬಹುದು.

ತಲಕಾಡಿನಲ್ಲಿ ಗಾಳಿತಡೆಗೋಡೆ ದೊರಕಿದ ಗುಂಡಿ ತಲಕಾಡು VII. ಈ ಸ್ಥಳದಲ್ಲಿ ಮೂವತ್ತು ಮೀಟರ್‌ಗಳಿಗೂ ಅಧಿಕ ಉದ್ದವಾದ ಗೋಡೆಯನ್ನು ಸಂಶೋಧಿಸಿ ಅದನ್ನು ಗಾಳಿತಡೆಗೋಡೆಯೆಂದು ಗುರುತಿಸಿ ಅದಕ್ಕೆ ಗೋಡೆ-I ಗೋಡೆ-II ಎಂದು ಹೆಸರಿಸಿ ಚಿತ್ರದಲ್ಲಿ ನೀಡಲಾಗಿತ್ತು. ಅದರಂತೆಯೇ ಅದರ ಪಾರ್ಶ್ವದಲ್ಲಿ ದೊರೆತ ಇತರ ಗೋಡೆಗಳಿಗೂ ಗೋಡೆ III, ಗೋಡೆ IV ಎಂದೂ ಹೆಸರಿಸಲಾಗಿತ್ತು. ಅಂತೆಯೇ ಗೋಡೆ-II ಇನ್ನೂ ದಕ್ಷಿಣಕ್ಕೆ ಮುಂದುವರೆಯುತ್ತಿದೆಯೆಂಬ ಅನುಮಾನವನ್ನು ಮುಂದಿಡಲಾಗಿತ್ತು. ಹೀಗಾಗಿ ಗೋಡೆ-II ರ ದಕ್ಷಿಣ ಮತ್ತು ಆಗ್ನೇಯ ದಿಕ್ಕುಗಳಲ್ಲಿ ನಡೆಸಿದ ಉತ್ಖನನದಲ್ಲಿ ಹಿಂದೆ ಕಂಡು ಬಂದಿದ್ದ ಗಾಳಿತಡೆ ಗೋಡೆಯ ಅವಶೇಷಗಳಿಗಿಂತ ಬಲಿಷ್ಠವಾದ, ಎತ್ತರವಾದ, ಗಾತ್ರವಾದ ಮತ್ತು ಉದ್ದವಾದ, ಒಂದು ಗೋಡೆ, ಗಾಳಿ ತಡೆಗೋಡೆಯ ಮಟ್ಟಕ್ಕಿಂತ ಕೆಳಮಟ್ಟದಿಂದ ನಿರ್ಮಾಣವಾಗಿರುವುದು ಕಂಡು ಬಂದಿತು. (ಚಿತ್ರ – ೩). ಈ ಗೋಡೆಯನ್ನು ಪ್ರಸ್ತುತ ವರದಿಯಲ್ಲಿ ಹಾಗೂ ಚಿತ್ರದಲ್ಲಿ ಗೋಡೆ -V ಎಂದು ಗುರುತಿಸಲಾಗಿದೆ. ಈ ಗೋಡೆ ಗಾಳಿತಡೆಗೋಡೆಯಿಂದ ಸ್ವಲ್ಪ ಅಂತರ ಬಿಟ್ಟು, ದಕ್ಷಿಣದಲ್ಲಿ ಪ್ರಾರಂಭವಾಗಿದೆ. ಇದರ ಕೆಳಮಟ್ಟಕ್ಕೂ, ಗಾಳಿತಡೆಗೋಡೆಯ ಕೆಳಮಟ್ಟಕ್ಕೂ ೩.೫೦ ಮೀಟರ್ ಅಂತರವಿದೆ. ಅಂದರೆ ಇದು ಕೆಳಮಟ್ಟದ ಗೋಡೆ. ಇದರ ಗಾತ್ರ ಮೂರು ಮೀಟರ್. ಅಂದರೆ ಇದು ಗಾಳಿತಡೆ ಗೋಡೆಯ ಕೆಳಮಟ್ಟಕ್ಕಿಂತ ಸುಮಾರು ೫೦ ಸೆಂ.ಮೀ. ಮಾತ್ರ ಎತ್ತರವಿತ್ತು. (ಚಿತ್ರ ೧)

ಈ ಗೋಡೆ-Vನ್ನು ಸುಟ್ಟ ಇಟ್ಟಿಗೆಗಳಿಂದ, ಜೇಡಿ ಮಣ್ಣನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಇಟ್ಟಿಗೆಯ ಗಾತ್ರಗಳು ವಿವಿಧವಾಗಿವೆ. ಅವುಗಳೆಂದರೆ ೩೬-೪೦ ಸೆಂ.ಮೀ. ಉದ್ದ, ೧೮-೨೦ ಸೆಂ.ಮೀ. ಅಗಲ ಮತ್ತು ೫-೭ಸೆಂ.ಮೀ. ದಪ್ಪ. ಇಟ್ಟಿಗೆಗಳನ್ನು ನಾಟು-ಪಾಟುಗಳಲ್ಲಿಟ್ಟು ವರಸೆಗಳನ್ನು ಕೂಡಿಸಿ ಕಟ್ಟಲಾಗಿದೆ. (ಚಿತ್ರ ೪) ಹೊರ ಮುಖದಲ್ಲಿ ಎರಡೆರಡು ವರಸೆಗಳನ್ನು ನೀಟಾಗಿ ವರಸೆಗಳಲ್ಲಿಟ್ಟು, ಮಧ್ಯ ಭಾಗವನ್ನು, ವರಸೆ-ವರಸೆಯಾಗಿಯೇ, ಎಲ್ಲಾ ರೀತಿಯ ಇಟ್ಟಿಗೆ, ಚೂರು, ಮಣ್ಣು ಮುಂತಾದುವುಗಳಿಂದ ತುಂಬಿ ಕಟ್ಟಲಾಗಿದೆ. ಗೋಡೆ Vರ ಉದ್ದ ೯.೫೦ ಮೀಟರ್‌ಗಳು. ಈ ಗೋಡೆಯನ್ನು ೬.೮೦ ಮೀಟರ್ ಮಧ್ಯಂತರ ಬಿಟ್ಟು ಮುಂದುವರೆಸಲಾಗಿತ್ತು. ಈ ಮುಂದುವರೆದ ಗೋಡೆಯನ್ನು ಗೋಡೆ-V (ಅ) ಎಂದು ಹೆಸರಿಸಲಾಗಿದೆ. ಗೋಡೆ-V(C) ದ ಉದ್ದ ೧೫ ಮೀಟರ್‌ಗಳು. ಈ ಗೋಡೆ ಇನ್ನೂ ಮುಂದುವರೆಯುತ್ತಿದೆ. (ಚಿತ್ರ-೫) ಆದರೆ ಉತ್ಖನನ ಕಾರ್ಯವನ್ನು ಅಲ್ಲಿಗೇ ನಿಲ್ಲಿಸಲಾಗಿದೆ.

ಇಷ್ಟು ಬೃಹತ್ತಾದ ಗೋಡೆಯನ್ನು ಈ ಸ್ಥಳದಲ್ಲಿ ನಿರ್ಮಾಣ ಮಾಡುವ ಅಗತ್ಯವೇನಿತ್ತು ಎಂಬ ಪ್ರಶ್ನೆ ಉದ್ಭವ ವಾಗುವುದು ಸಹಜ. ಇದಕ್ಕೆ ಕಾರಣವೆಂದರೆ ಈ ಸ್ಥಳದಲ್ಲಿ ನೆಲಮಟ್ಟ ಕೆಳಕ್ಕಿದ್ದು ಕಾವೇರೀ ಪ್ರವಾಹದ ನೀರು ಈ ಜಾಗದ ಮೂಲಕ ದಕ್ಷಿಣ ತಲಕಾಡಿನ ಅನೇಕ ಭಾಗಗಳನ್ನು ಆವರಿಸುತ್ತಿತ್ತು. ಪ್ರವಾಹವನ್ನು ತಡೆಯಲು ಈ ಗೋಡೆಯನ್ನು ಕಟ್ಟಿದರು. ಈ ಗೋಡೆಯನ್ನು ಕಟ್ಟುವಾಗ ಅದರ ಉತ್ತರ ತುದಿಯಲ್ಲಿದ್ದ ಸ್ವಾಭಾವಿಕ ಮಣ್ಣಿನ ದಿಬ್ಬವನ್ನು ಕೂಡಿಕೊಂಡಂತೆ ಕಟ್ಟಿದರು. ಇದರಿಂದ ಗೋಡೆಗೆ ಉತ್ತರದಲ್ಲಿ ಒಂದು ಬಲಿಷ್ಠವಾದ ಸ್ವಾಭಾವಿಕ ಆಧಾರಸಿಕ್ಕಿತ್ತು. ದಕ್ಷಿಣಕ್ಕೆ ಬರುತ್ತ ಸ್ವಾಭಾವಿಕ ದಿಬ್ಬ ಕೆಳಕ್ಕೆ ಇಳಿದಿದೆ. ಆ ಮೂಲಕ ಒಳನುಗ್ಗುತ್ತಿದ್ದ ಪ್ರವಾಹವನ್ನು ಈ ಗೋಡೆ ತಡೆ ಹಿಡಿಯುತ್ತಿತ್ತು. (ಚಿತ್ರ-೩)

ಗೋಡೆ-Vರ ಉದ್ದ ೯.೫೦ ಮೀಟರ್‌ಗಳು ಮತ್ತು ಗೋಡೆ-V(C)ದ-ಉದ್ದ ೧೫ ಮೀಟರ್‌ಗಳು (ಇದು ಇನ್ನೂ ಮುಂದುವರೆಯುತ್ತಿದೆ). (ಚಿತ್ರ-೫) ಇವುಗಳೆರಡರ ನಡುವೆ ಬಿಟ್ಟಿದ್ದ ಅಂತರ ೬.೮೦ ಮೀಟರ್‌ಗಳು. ಈ ಅಂತರವನ್ನು ಬಿಟ್ಟಿದ್ದ ನಿರ್ದಿಷ್ಟ ಉದ್ದೇಶ ಊರಿನ ಕಡೆಯಿಂದ ನದಿಗೆ ಸಂಪರ್ಕ ದಾರಿ(ವಾಟರ್ ಗೇಟ್)ಯನ್ನು ನೀಡುವುದೇ ಆಗಿತ್ತು. ಪ್ರವಾಹ ಸಮಯದಲ್ಲಿ ಈ ಸಂಪರ್ಕ ದಾರಿಯನ್ನು ಮರಳು ಮೂಟೆ ಅಥವಾ ಇನ್ನು ಯಾವುದಾದರೂ ತಡೆಗಳನ್ನಿಟ್ಟು ಮುಚ್ಚುತ್ತಿದ್ದಿರಬೇಕು. ಕಾಲಾನಂತರದಲ್ಲಿ ಪ್ರವಾಹ ಕಾಲದಲ್ಲಿ

ಈ ಅಂತರವನ್ನು ಮುಚ್ಚುವ ಕಾರ್ಯದಲ್ಲಿ ತೊಂದರೆ ಆಗಿರಬೇಕು ಅಥವಾ ಈ ವಿಧಾನ ಅಷ್ಟು ಸಮಂಜಸವಲ್ಲವೆನಿಸಿರಬೇಕು. ಏಕೆಂದರೆ ಅತೀ ಪ್ರವಾಹದ ಸಮಯದಲ್ಲಿ, ಅಕಾಲ ಪ್ರವಾಹ ಸಮಯಗಳಲ್ಲಿ ಇದ್ದಕ್ಕಿದ್ದಂತೆ ಈ ದಾರಿಯ ಮೂಲಕ ನೀರು ನುಗ್ಗಿ ತೊಂದರೆಯಾಗಿರಬೇಕು. ಹೀಗಾಗಿ ಈ ಸಂಪರ್ಕ ದಾರಿಯನ್ನೂ ಗೋಡೆಯೊಂದನ್ನು ಕಟ್ಟುವುದರ ಮೂಲಕ ಮುಚ್ಚಲಾಯಿತು. ಈ ಗೋಡೆಯನ್ನು ಗೋಡೆ VI ಎಂದು ಕರೆಯಲಾಗಿದೆ. ಈ ಮಧ್ಯದ ಗೋಡೆಯ ನಿರ್ಮಾಣ ಈ ಸನ್ನಿವೇಶದಲ್ಲಿಯೇ ನಡೆದಿದೆ ಎಂಬ ತೀರ್ಮಾನಕ್ಕೆ ಬರುವುದಕ್ಕೆ ಸಾಕಷ್ಟು ಆಧಾರಗಳಿವೆ. ಗೋಡೆ V ಮತ್ತು ಗೋಡೆ V (ಅ)ಗಳ ನಡುವಣ ಖಾಲಿ ಜಾಗ ಇದ್ದುದಕ್ಕೆ ಈ ಎರಡೂ ಗೋಡೆಗಳ ತುದಿಗಳೇ ಸಾಕ್ಷಿ. ಈ ಎರಡೂ ತುದಿಗಳು ಸಂಪೂರ್ಣವಾಗಿ ಮಟ್ಟವಾಗಿದೆ ಮತ್ತು ಗೋಡೆಯ ತುದಿಯ ಎಲ್ಲ ಲಕ್ಷಣಗಳನ್ನು ಹೊಂದಿವೆ. ಇವೆರಡರ ನಡುವಣ ಅಂತರದಲ್ಲಿ ನಿರ್ಮಿಸಿದ ಗೋಡೆ ಅದರ ಗಾತ್ರದಲ್ಲಿ ಸ್ವಲ್ಪ ಕಿರಿದಿದೆ. ಸುಮಾರು ೫೦ ಸೆಂ.ಮೀ.ನಷ್ಟು ಚಿಕ್ಕದಾಗಿ ಮತ್ತು ಕೆಳಗಿನಿಂದ ಕೆಲವು ವರಸೆಗಳನ್ನು ಬಿಟ್ಟು ಸ್ವಲ್ಪ ಮೇಲ್ಮಟ್ಟದಿಂದ ಗೋಡೆಯನ್ನು ನಿರ್ಮಿಸಲಾಗಿದೆ. ಗೋಡೆಯ ಎರಡೂ ತುದಿಗಳನ್ನು ಗೋಡೆ V ಮತ್ತು V (C)ಗಳ ತುದಿಗಳಿಗೆ ಸಮರ್ಪಕವಾಗಿ ಕೂಡಿಸಿಲ್ಲ. ಆದಕಾರಣ ಈ ಕೂಡಿಕೆ ಸ್ಥಳಗಳಲ್ಲಿ ಸಣ್ಣದಾದ ಬಿರುಕು ಸ್ಪಷ್ಟವಾಗಿ ಕಾಣಬರುತ್ತದೆ. ಗೋಡೆ, ತಳದಲ್ಲಿ ಸು. ೫೦ ಸೆಂ.ಮೀ. ನಷ್ಟು ಚಿಕ್ಕದಾಗಿದೆ ಎಂದು ಆಗಲೇ ಹೇಳಿದೆ. ಆದರೆ ಮೇಲ್ಮಟ್ಟದಲ್ಲಿ ಅದರ ಗಾತ್ರವನ್ನು ಮೂಲ ಗೋಡೆಗಳೊಂದಿಗೆ ಸರಿತೂಗಿಸಲು, ಸ್ವಲ್ಪಸ್ವಲ್ಪವಾಗಿ ಇಟ್ಟಿಗೆಯ ವರಸೆಗಳನ್ನು ಮುಂಚಾಚುತ್ತಾ ನಿರ್ಮಿಸಲಾಗಿದೆ. (ಚಿತ್ರ-೨) ಈ ರೀತಿಯ ನಿರ್ಮಾಣವನ್ನು ಗೋಡೆಯ ಮೇಲ್ಭಾಗದಲ್ಲಿ ಸ್ಪಷ್ಟವಾಗಿ ಕಾಣಬಹುದು. ಈ ಅಂತರ ಗೋಡೆಯ ನಿರ್ಮಾಣದ ಮೂಲಕ ಸಂಪೂರ್ಣವಾಗಿ ಪ್ರವಾಹವನ್ನು ನಿಯಂತ್ರಿಸಿದರು. ಆದರೆ ಈ ಮೂಲಕ ಇದ್ದ ಹೊಳೆಯ ಸಂಪರ್ಕ ಹಾದಿ ಮುಚ್ಚಿ ಹೋಯಿತು. ಹೀಗಾಗಿ ಇಡಿ ಗೋಡೆ ಅಂದರೆ ಗೋಡೆ V ಮತ್ತು V (ಅ) ಮತ್ತು VI ಇವು ಮೂರೂ ಒಟ್ಟಿಗೆ ಕೂಡಿಕೊಂಡು ತಲಕಾಡಿನ ನೆರೆತಡೆಗೋಡೆಯಾಗಿ ಕೆಲಸ ಮಾಡಿತು.

ಈ ನೆರೆತಡೆಗೋಡೆ ಸುಮಾರು ಒಂದೆರಡು ಶತಮಾನಗಳಷ್ಟು ಕಾಲ ಯಶಸ್ವಿಯಾಗಿ ಪ್ರವಾಹವನ್ನು ತಡೆಹಿಡಿದಿತ್ತು. ನದಿಯ ನೀರಿನ ಪ್ರವಾಹ ಈ ಗೋಡೆಯವರೆಗೆ ಬಂದು ಬಡಿಯುತ್ತಿದ್ದುದುದರಿಂದಾಗಿ ಆಗಾಗ್ಗೆ ಗೋಡೆಯ ಇಟ್ಟಿಗೆಗಳು ಬೀಳುತ್ತಿದ್ದುದು ಇವೆಲ್ಲವೂ ಸಾಮಾನ್ಯವಾಗಿತ್ತು. ಗೋಡೆಗೆ ಒತ್ತಿಕೊಂಡು ರಚನೆಯಾಗಿರುವ ಹೊಳೆ ಮರಳು, ಜೇಡಿಮಣ್ಣು, ಇಟ್ಟಿಗೆಪುಡಿ ಇವುಗಳ ಬಿಡಿ ಬಿಡಿ ಪದರಗಳೆ ಇದಕ್ಕೆ ಸಾಕ್ಷಿ. ಪ್ರವಾಹದ ಹೊಡೆತವನ್ನು ಸಾಕಷ್ಟು ದೀರ್ಘಕಾಲ ತಡೆದ ಗೋಡೆ VI ಕ್ರಮೇಣವಾಗಿ ನದಿಯತ್ತ ವಾಲತೊಡಗಿತು. ಈ ಗೋಡೆಗೂ, ಮೂಲಗೋಡೆಗೂ ನಡುವೆ ನಿರ್ಮಾಣದಲ್ಲಿ ಗಟ್ಟಿಯಾದ ಕೂಡಿಕೆ ಇರಲಿಲ್ಲವೆಂದು ಆಗಲೇ ಹೇಳಿದೆ. ಹೀಗಾಗಿ ಪ್ರವಾಹದ ಹೊಡೆತಕ್ಕೆ ಹಾಗೂ ಗೋಡೆಯ ಪೂರ್ವಭಾಗದಲ್ಲಿ ಬೆಳೆಯುತ್ತಿದ್ದ ವಸತಿ ದಿಬ್ಬದ ಒತ್ತಡದಿಂದಾಗಿ ಗೋಡೆ ಪಶ್ಚಿಮದ ಕಡೆ ವಾಲತೊಡಗಿತು. ಈ ರೀತಿ ವಾಲಿಕೆ ಉತ್ಖನನದಲ್ಲಿ ಸ್ಪಷ್ಟವಾಗಿ ಕಾಣುತ್ತದೆ. (ಚಿತ್ರ-೩) ಮೇಲ್ತುದಿಯಲ್ಲಿ ಸು. ೫೫ ಸೆಂ.ಮೀ. ನಷ್ಟು ಹೊರಕ್ಕೆ ಚಾಚಿಕೊಂಡು ಗೋಡೆಯ ಪಶ್ಚಿಮ ಮುಖ ಕುಸಿದು ಬೀಳುವ ಸ್ಥಿತಿ ಏರ್ಪಾಟಾಯಿತು.

ಈ ಮಧ್ಯಂತರ ಗೋಡೆ ವಾಲಿ ಹೊರಕ್ಕೆ ಬೀಳುವುದನ್ನು ತಡೆಯಲು ಈ ಗೋಡೆಯ ಹೊರ (ಪಶ್ಚಿಮ) ಮುಖದಲ್ಲಿ ಒಂದು ಒತ್ತು ಗೋಡೆಯನ್ನು ನಿರ್ಮಿಸಿದರು. ಚಿತ್ರ-೪) ಮಧ್ಯಂತರ ಗೋಡೆಯ ಎರಡೂ ತುದಿಗಳಲ್ಲಿ ೧.೪೦ ಮೀಟರ್‌ನಷ್ಟು ಬಿಟ್ಟು, ಒಟ್ಟು ನಾಲ್ಕು ಮೀಟರ್ ಅಗಲದ ಒದೆಗೋಡೆ ಮಧ್ಯದಲ್ಲಿ ನಿರ್ಮಾಣವಾಯಿತು. ಈ ಗೋಡೆ ೩.೫೦ ಮೀಟರ್‌ನಷ್ಟು ಮುಂದಕ್ಕೆ ಚಾಚಿದೆ. ಇದಕ್ಕೆ ಉಪಯೋಗಿಸಿರುವ ಇಟ್ಟಿಗೆಯ ಗಾತ್ರದಲ್ಲೂ ಹೆಚ್ಚು ಕಡಿಮೆ ಇದೆ. ಹಾಗೂ ಈ ಗೋಡೆಯನ್ನು ಹೊರಮುಖದಲ್ಲಿ ಗಾರೆಯಿಂದ ಗಿಲಾವ್ ಮಾಡಿರುವುದಲ್ಲದೆ. ಈ ಗಿಲಾವನ್ನು ಮೂಲ ನೆರೆತಡೆಗೋಡೆಯ ಸ್ವಲ್ಪ ಭಾಗಕ್ಕೂ ವಿಸ್ತರಿಸಲಾಗಿದೆ. ಪ್ರವಾಹದ ಹೊಡೆತ ವಿಪರೀತವಾಗಿದ್ದುದರಿಂದಲೋ ಏನೋ ಈ ಒದೆಗೋಡೆಯ ಪಶ್ಚಿಮ ಮುಖದಲ್ಲಿ ಬಂಡೆಗಲ್ಲುಗಳ ರಾಶಿಯನ್ನು ಪೇರಿಸಲಾಗಿದೆ.

ಈ ರೀತಿ ನಿರ್ಮಾಣವಾದ ನೆರೆತಡೆಗೋಡೆ ಮತ್ತು ಅದರ ಭದ್ರತೆಗಾಗಿ ನಿರ್ಮಾಣವಾದ ಒತ್ತುಗೋಡೆ ಇವುಗಳೂ ಸಹ ಕಾಲಕ್ರಮೇಣ ನಿರುಪಯುಕ್ತವಾಗುತ್ತಾ ಬಂದಿತು. ಪ್ರವಾಹದ ಒತ್ತಡ ಜಾಸ್ತಿಯಾಗಿ ಮೂಲ ನೆರೆತಡೆಗೋಡೆಯ ಹೊರಮುಖದ ಇಟ್ಟಿಗೆಯ ವರಸೆಗಳು ನೆಲಕ್ಕೆ ಉದುರಿದವು. ಪ್ರವಾಹದ ಮಣ್ಣು, ಮರಳು ಗೋಡೆಗೆ ಒತ್ತಿಕೊಂಡು ಶೇಖರವಾದುವು. ಗೋಡೆ ಕುಸಿಯುವ ಸಂಭವ ಹೆಚ್ಚಾಯಿತು. ಅದರಲ್ಲೂ ಈ ಅಪಾಯ ಗೋಡೆ V (ಅ) ಭಾಗದಲ್ಲಿ ಹೆಚ್ಚಾಗಿ ಕಾಣಿಸಿದೆ. ಆದ ಕಾರಣ ಪ್ರವಾಹ ನೀರು ಮೂಲ ನೆರೆತಡೆಗೋಡೆಗೆ ತಾಗದಿರುವಂತೆ ಮಾಡಲು ಗೋಡೆ V (ಅ) ಪಕ್ಕದಲ್ಲಿ ಮತ್ತೊಂದು ಇಟ್ಟಿಗೆಯ ಗೋಡೆ ನಿರ್ಮಾಣ ಮಾಡಿದರು. ಈ ಗೋಡೆಯನ್ನು ಗೋಡೆ VII ಎಂದು

ಕರೆಯಲಾಗಿದೆ (ಚಿತ್ರ – ೩). ಈ ಗೋಡೆಯ ಸಂಪೂರ್ಣ ಸ್ವರೂಪ ತಿಳಿಯಲು ಉತ್ಖನನವನ್ನು ಈ ಭಾಗದಲ್ಲಿ ಮುಂದುವರೆಸಬೇಕಾಗಿದೆ. ಆದರೆ ಈ ಗೋಡೆ ಪ್ರವಾಹದ ನೀರು ಮೂಲ ಗೋಡೆಗೆ ಬಡಿಯುದಿರುವಂತೆ ತಡೆದಿರುವುದೇನೋ ನಿಜ. ಗೋಡೆ VIIಕ್ಕಿಂತ ಸ್ವಲ್ಪ ಎತ್ತರ ಮಟ್ಟದಲ್ಲಿ ಇನ್ನೊಂದು ಗೋಡೆಯ ಅಂಚನ್ನು ಮಾತ್ರ ಉತ್ಖನನದಲ್ಲಿ ಗುರುತಿಸಲಾಗಿದೆ. ಈ ಗೋಡೆಯನ್ನು ಗೋಡೆ VIII ಎಂದು ಗುರುತಿಸಲಾಗಿದೆ. ಇದು ಕೇವಲ ಒಂದು ಮೀಟರ್ ಉದ್ದ ಮಾತ್ರ ಕಾಣುತ್ತದೆ ಮತ್ತು ಇದರಲ್ಲಿ ಕೇವಲ ಐದು ನೀಟಾಗಿ ಕಟ್ಟಿದ ಇಟ್ಟಿಗೆಯ ವರಸೆಗಳಿವೆ ಅಷ್ಟೇ.

ಇದುವರೆಗೆ ನೆರೆ ತಡೆಗೋಡೆಯ ನಿರ್ಮಾಣದ ವಿವಿಧ ಭಾಗಗಳು ನಿರ್ಮಾಣ ಹಂತಗಳು ಕಾಲಕಾಲಕ್ಕೆ ಆದ ದುರಸ್ತಿ, ಸೇರ್ಪಡೆ, ಅವುಗಳ ಉದ್ದೇಶ ಇತ್ಯಾದಿಗಳ ಬಗ್ಗೆ ವಿವರವಾದ ಚಿತ್ರಣವನ್ನು ನೀಡಲಾಯಿತು. ಇನ್ನು ಮುಂದೆ ಈ ಗೋಡೆಯ ನಿರ್ಮಾಣ ಕಾಲದ ಬಗೆಗಿನ ವಿವರಗಳಿಗೆ ಬರೋಣ. ತಲಕಾಡಿನಲ್ಲಿ ಜನವಸತಿ ಬೃಹತ್ ಶಿಲಾಯುಗದ ಕಾಲದಿಂದಲೇ ಇದ್ದ ಬಗ್ಗೆ ಈವರೆಗೆ ಸಾಕಷ್ಟು ಮಾಹಿತಿ ವರದಿಯ ಸಂಪುಟದಲ್ಲಿ ಪ್ರಕಟವಾಗಿದೆ. ಕ್ರಿ.ಶ.ದ ಪ್ರಾರಂಭದ ಶತಮಾನಗಳಲ್ಲಿ ತಲಕಾಡಿನಲ್ಲಿ ಅಕ್ಕಸಾಲಿಗನ ಕಾರ್ಯಾಗಾರ, ಅಲ್ಲಿ ರೋಮನ್ ನಾಣ್ಯದ ನಕಲುಗಳ ತಯಾರಿಕೆ, ಇತ್ಯಾದಿ, ಬಗ್ಗೆ ಸಾಕಷ್ಟು ದೀರ್ಘ ಚರ್ಚೆಗಳಾಗಿವೆ. ತದನಂತರದ ಪದರಗಳಲ್ಲಿ ಗಂಗರ ಕಾಲದ (೫–೭ನೇ ಶತಮಾನಗಳು) ಸಮಾಧಿಗಳ ಬಗ್ಗೆ ಅಲ್ಲಿ ದೊರತಿರುವ ಮೃಣ್ಪಾತ್ರೆಗಳು, ಇತರ ಪ್ರಾಪಂಚಿಕ ವಸ್ತುಗಳು ಇವೆಲ್ಲದರ ವಿವರಣೆಗಳೂ ಪ್ರಕಟವಾಗಿವೆ. ಈ ಎಲ್ಲಾ ವಿವರಣೆಗಳಿಂದ ಕ್ರಿ.ಪೂರ್ವದ ಶತಮಾನಗಳಿಂದ ತಲಕಾಡಿನಲ್ಲಿ ಸಂಪತ್ಸಮೃದ್ಧವಾದ ನಾಗರಿಕತೆ ನಿರಂತರವಾಗಿ ನೆಲೆಸಿತ್ತೆಂಬ ಅಂಶ ಸ್ಪಷ್ಟವಾಗುತ್ತದೆ. ನಗರೀಕರಣ ಬೆಳೆಯುತ್ತಾ ಬಂದಂತೆ ವಸತಿ ನಿರ್ಮಾಣಗಳಿಗೆ ಸ್ಥಳಾಭಾವ ಉಂಟಾಗುತ್ತಾ ಬರುವುದು ಸಹಜ. ಅದರಲ್ಲೂ ನೀರಿನ ಮೂಲಕ್ಕೆ ಹೆಚ್ಚು ಸಮೀಪವಾಗಿದ್ದಷ್ಟೂ ಆ ಭೂಮಿಯ ಬೇಡಿಕೆ ಮೌಲ್ಯ ಜಾಸ್ತಿಯಾಗುತ್ತಿರುತ್ತದೆ. ಹೀಗಾಗಿ ತಲಕಾಡಿನ ಜನರಿಗೆ ನದೀ ಸಮೀಪದ ಭೂಮಿಯ ಅವಶ್ಯಕತೆ ಹೆಚ್ಚಾಗುತ್ತಾ ಇತ್ತು. ಪ್ರಸಕ್ತ ತಲಕಾಡು ನಗರದ ದಕ್ಷಿಣ ತುದಿ, ಪ್ರವಾಹ ಕಾಲದಲ್ಲಿ ನೀರು ತುಂಬಿಕೊಂಡು ವಸತಿ ಯೋಗ್ಯವಾಗಿರಲಿಲ್ಲ. ಉಳಿದಂತೆ ಈ ಭೂಮಿ ಒಣ ಪ್ರದೇಶವಾಗಿಯೇ ಇರುತ್ತಿತ್ತು. ಉತ್ಖನನದಲ್ಲಿ, ಈಗಿನ ಪಾತಾಳೇಶ್ವರ ದೇವಾಲಯದ ಹಿಂಭಾಗ ಮತ್ತು ಸುತ್ತಮುತ್ತಲಿನ ಭಾಗದಲ್ಲಿ ಕೂಡ ಕೆಳಗಿನ ಸ್ತರಗಳಲ್ಲಿ ಪ್ರವಾಹದಿಂದ ಶೇಖರವಾದ ಜೇಡಿಮಣ್ಣಿನ ಪದರಗಳು ಅನೇಕ ಸಂಖ್ಯೆಯಲ್ಲಿ ಕಾಣಬಂದಿವೆ. ಇದರಿಂದಾಗಿ ಈಗಿನ ಅರಮನೆ ಪ್ರದೇಶ ವೆಂದು ಗುರುತಿಸಲಾಗಿರುವ ತಲಕಾಡು VII ಗುಂಡಿ ಪ್ರದೇಶ, ಪಾತಾಳೇಶ್ವರ ಗುಡಿಯ ಸುತ್ತಮುತ್ತಲ ಭಾಗವೆಲ್ಲವೂ ಕ್ರಿ.ಪೂರ್ವದ ಶತಮಾನ ಗಳಲ್ಲಿ ಪ್ರವಾಹ ಕಾಲದಲ್ಲಿನ ನೀರು ತುಂಬಿಕೊಳ್ಳುತ್ತಿದ್ದ ಪ್ರದೇಶವಾಗಿತ್ತು.

ಇಂತಹ ಪ್ರದೇಶವನ್ನು ವಾಸಯೋಗ್ಯವನ್ನಾಗಿ ಮಾಡಬೇಕಾದ ಒತ್ತಡ ಅಲ್ಲಿಯ ಜನಗಳಿಗೆ ಉಂಟಾದದ್ದು ಕ್ರಿ.ಶ.ದ ಪ್ರಾರಂಭದ ಶತಮಾನಗಳಲ್ಲಿ. ತಲಕಾಡು VII ಗುಂಡಿಯ ದಕ್ಷಿಣದ ಭಾಗದಲ್ಲಿ ಒಂದು ನೆರೆತಡೆಗೋಡೆಯನ್ನು ನಿರ್ಮಿಸಿದಲ್ಲಿ ಅದು ಪ್ರವಾಹದ ಹಾವಳಿಯನ್ನು ನಿವಾರಿಸುವುದಲ್ಲದೆ, ಈ ಮೇಲೆ ಹೇಳಿದ ಸ್ಥಳವನ್ನು ನದೀ ಸಮೀಪದ ವಾಸಯೋಗ್ಯ ಸ್ಥಳವನ್ನಾಗಿ ಮಾರ್ಪಾಟು ಮಾಡಬಹುದೆಂಬ ಆಲೋಚನೆ ಅವರಿಗೆ ಬಂದಿತು. ಈ ಸಮಯಕ್ಕೆ ಸರಿಯಾಗಿ ಗಂಗ ರಾಜವಂಶದ ಉದಯವೂ ಆಗಿ (ಕ್ರಿ.ಶ. ನಾಲ್ಕನೆಯ ಶತಮಾನ) ರಾಜ ಪೋಷಣೆ, ಸಮರ್ಥನಾಯಕತ್ವದ ಉದಯವಾಗಿ ಹಲವಾರು ಬೃಹತ್ ನಿರ್ಮಾಣ ಕಾರ್ಯಗಳು ಪ್ರಾರಂಭವಾಗಿರಬೇಕು. ನೆರೆತಡೆಗೋಡೆಯಲ್ಲಿ ಬಳಕೆಯಾಗಿರುವ ಬೃಹತ್ ಗಾತ್ರದ ಇಟ್ಟಿಗೆಗಳು ಈ ಕಾಲವನ್ನು ಸಮರ್ಥಿಸುತ್ತವೆ.

ಕ್ರಿ.ಶ.ದ ನಾಲ್ಕು ಐದನೆಯ ಶತಮಾನಗಳಲ್ಲಿ ನೆರೆತಡೆಗೋಡೆಯ ಗೋಡೆ V ಮತ್ತು V(ಅ) ನಿರ್ಮಾಣವಾಗಿರಬೇಕು. ಈ ಗೋಡೆ ನಿರ್ಮಾಣವಾದ ಹಲವಾರು ದಶಕಗಳಲ್ಲಿಯೇ ಮಧ್ಯಂತರಗೋಡೆ ಅಂದರೆ ಗೋಡೆ VI ನಿರ್ಮಾಣವಾಗಿರಬಹುದು. ಇದು ನಿರ್ಮಾಣವಾದುದಕ್ಕೆ ಕಾರಣಗಳನ್ನೂ ಸಹ ತಿಳಿಸಲಾಗಿದೆ. ಹೀಗಾಗಿ ಕ್ರಿ.ಶಕದ ಐದನೆಯ ಶತಮಾನದ ಹೊತ್ತಿಗೆ ತಲಕಾಡಿನಲ್ಲಿ ರಾಜವಂಶ ಸ್ಥಾಪನೆಯಾಗಿ ತಲಕಾಡು ದೊಡ್ಡ ಊರಾಗಿ ಬೆಳೆದು ಅದರ ವಿಸ್ತರಣೆಗೆ ಮತ್ತು ನೆರೆಯ ಹಾವಳಿಯಿಂದ ರಕ್ಷಣೆಗೆ ನೆರೆತಡೆಗೋಡೆಯೂ ನಿರ್ಮಾಣವಾಗಿತ್ತು.

ಈ ನೆರೆತಡೆಗೋಡೆ ಅನೇಕ ಶತಮಾನಗಳ ಕಾಲ ಯಶಸ್ವಿಯಾಗಿ ಕಾರ್ಯನಿರ್ವಹಿಸಿತಲ್ಲದೆ ಅದಕ್ಕೆ ಅನೇಕ ದುರಸ್ತಿ, ಸೇರ್ಪಡೆ ಕಾರ್ಯಗಳೂ ನಡೆದವು. ಕ್ರಿ.ಶ. ೧೦ನೇ ಶತಮಾನದ ನಿರ್ಮಾಣವೆಂದು ನಿರ್ಧರಿಸಲಾಗಿರುವ ಪಾತಾಳೇಶ್ವರ ಗುಡಿ, ದಕ್ಷಿಣ ತಲಕಾಡಿನಲ್ಲಿದ್ದು, ಆ ಕಾಲಕ್ಕೆ ಈ ಭಾಗ ಒಂದು ಸಂಪೂರ್ಣ ಸುರಕ್ಷಿತ ಭಾಗವಾಗಿತ್ತೆಂದು ಸ್ಪಷ್ಟವಾಗುತ್ತದೆ.

ನೆರೆತಡೆಗೋಡೆ ವಿಜಯನಗರದ ಕಾಲದವರೆಗೂ ಸಮರ್ಪಕವಾಗಿ ಕೆಲಸಮಾಡಿ ಅದರ ಸಾರ್ಥಕತೆಯನ್ನು ಸ್ಥಿರಪಡಿಸಿರುವುದಕ್ಕೆ ಅನೇಕ ನಿದರ್ಶನಗಳಿವೆ. ಈ ಗೋಡೆ

ಎಷ್ಟು ಬಲಶಾಲಿಯಾಗಿತ್ತೆಂದರೆ, ಇದರ ಪೂರ್ವ ದಿಕ್ಕಿನ ಭಾಗದಲ್ಲಿ ಇದ್ದ ಹಳ್ಳದ ನಿವೇಶನವೆಲ್ಲವೂ ಕ್ರಮೇಣ ವಸತಿ ತ್ಯಾಜ್ಯಗಳಿಂದಾಗಿ ತುಂಬಿತುಳಿಕಿ ಯಾವ ಮಟ್ಟಕ್ಕೆ ಏರಿತೆಂದರೆ, ವಿಜಯನಗರ ಕಾಲದ ಅರಮನೆ ನಿವೇಶನದ ನೀರು ಸರಬರಾಜು ವ್ಯವಸ್ಥೆಯ ಇಟ್ಟಿಗೆ ನಿರ್ಮಿತ ಕೊಳಾಯಿಗಳು, ಈ ನೆರೆತಡೆ ಗೋಡೆಯ ಮೇಲ್ತುದಿಯ ಮಟ್ಟದಲ್ಲೇ ನಿರ್ಮಾಣಗೊಂಡಿದೆ. ಈ ನಿದರ್ಶನದಿಂದ ನೆರೆತಡೆ ಗೋಡೆಯ ಪೂರ್ವದಿಕ್ಕಿನಲ್ಲಿ ಪಟ್ಟಣದ ಬೆಳವಣಿಗೆ ಎಷ್ಟರಮಟ್ಟಿಗೆ ಇತ್ತೆಂದು ತಿಳಿಯುವುದಲ್ಲದೆ, ನೆರೆತಡೆ ಗೋಡೆಯ ಸಾರ್ಥಕ್ಯವೂ ರುಜುವಾತಾಗುತ್ತದೆ. ನೆರೆತಡೆ ಗೋಡೆಯ ಮಟ್ಟಕ್ಕೆ ಪೂರ್ವಭಾಗದಲ್ಲಿ ಎತ್ತರವಾಗಿ ಬೆಳೆದ ವಸತಿ ದಿಬ್ಬ ಪ್ರದೇಶದಿಂದ ಸಲೀಸಾಗಿ ನೆರೆತಡೆಗೋಡೆಯನ್ನು ದಾಟಿ, ನದೀತೀರ ತಲುಪುವ ಮಾರ್ಗವೂ ನಿರ್ಮಾಣ ವಾಯಿತು. ನೆರೆತಡೆಗೋಡೆ, ಪೂರ್ವದಿಕ್ಕಿನಲ್ಲಿ ವಸತಿ ದಿಬ್ಬದಿಂದ, ಪಶ್ಚಿಮದಲ್ಲಿ ನದೀ ಪ್ರವಾಹದಿಂದುಂಟಾದ ಮರಳು, ಮಣ್ಣಿನ ಶೇಖರಣೆಯಿಂದ, ಸಂಪೂರ್ಣವಾಗಿ ಮುಚ್ಚಿ ಹೋಗುವ ಪರಿಸ್ಥಿತಿ ಉಂಟಾಗಿತ್ತು. ವಿಜಯನಗರ ಕಾಲದ ಹೊತ್ತಿಗೆ ನೆರೆತಡೆಗೋಡೆ ಒಂದು ಸಣ್ಣ ದಿಬ್ಬದಷ್ಟು ಮಾತ್ರ ಎತ್ತರವಾಗಿದ್ದುಕೊಂಡು ಪ್ರವಾಹ ನಿಯಂತ್ರಣ ಕಾರ್ಯಕ್ಕೆ ಒದಗಿತ್ತು.

ಕ್ರಿ.ಶ. ಹದಿನೇಳನೇ ಶತಮಾನದಲ್ಲಿ ತಲಕಾಡು ವಾಯುವ್ಯ ಮಾರುತದ ಪ್ರಭಾವದಿಂದ ಗಾಳಿಯಲ್ಲಿ ತೇಲಿ ಬಂದು ಶೇಖರವಾಗುವ ಮರಳಿನ ಅಪಾಯುಕ್ಕೆ ಗುರಿಯಾಯಿತು. ಈ ಬಗ್ಗೆ ವಿವರಗಳು ಆಗಲೇ ಪ್ರಕಟವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ನಿರ್ಮಾಣವಾದ ಗಾಳಿತಡೆ ಗೋಡೆಗೆ, ಪ್ರಸ್ತುತ ನೆರೆತಡೆಗೋಡೆಯನ್ನು ಭದ್ರ ಬುನಾದಿಯಾಗಿ ಬಳಸಲಾಯಿತು. ಗಾಳಿತಡೆಗೋಡೆಯ ಅವಶ್ಯಕತೆ ಉತ್ತರ ತುದಿಯಲ್ಲಿ ಇನ್ನೂ ಮುಂದುವರೆಯ ಬೇಕಾಗಿದ್ದರಿಂದ, ಆ ಸ್ಥಳದಲ್ಲೇ ಇದ್ದ ಸ್ವಾಭಾವಿಕ ಮಣ್ಣಿನ ದಿಣ್ಣೆಯ ಮೇಲೆ ಹೊಸದಾಗಿ ಗಾಳಿತಡೆ ಗೋಡೆಯನ್ನು ನಿರ್ಮಿಸಲಾಯಿತು. ಇದರಿಂದಾಗಿ ಗಾಳಿತಡೆಗೋಡೆಯ ಕೆಳಮಟ್ಟ ಮತ್ತು ನೆರೆತಡೆಗೋಡೆಯ ಮೇಲ್ಮಟ್ಟ ಹೆಚ್ಚು ಕಡಿಮೆ ಒಂದೇ ಅಂತರದಲ್ಲಿದೆ (ರೇಖಾಚಿತ್ರ-೩). ಗಾಳಿತಡೆಗೋಡೆಯನ್ನು ಅವಶ್ಯಕತೆಯಿದ್ದಷ್ಟು ದೂರ ಉತ್ತರದಲ್ಲಿ ಮುಂದುವರೆಸ ಲಾಯಿತು. ದಕ್ಷಿಣ ಮತ್ತು ಆಗ್ನೇಯದಲ್ಲಿ ಎಲ್ಲಿಯವರೆಗೆ ಈ ಗೋಡೆ ಮುಂದುವರೆಯಿತು ಎಂಬುದು ಸದ್ಯಕ್ಕೆ ತಿಳಿದಿಲ್ಲ. ಏನೇ ಆಗಲಿ ಇಷ್ಟು ಸುದೀರ್ಘವಾಗಿ ನಿರ್ಮಿತವಾಗಿದ್ದ ಗಾಳಿತಡೆಗೋಡೆಯೂ ಸಹ ಸಂಪೂರ್ಣವಾಗಿ ಮರಳಿ ನಿಂದಾವೃತವಾಗಿ, ಅಲ್ಲಿಂದ ಮುಂದೆ, ತಲಕಾಡು ನಗರವೂ ಸಹ ಮರಳಿನ ಕಣಗಳ ಪ್ರವಾಹವನ್ನು ಎದುರಿಸು ವಂತಾಯಿತು. ನಿರಂತರವಾಗಿ ಗಾಳಿಯಲ್ಲಿ ತೂರಿ ಬಂದು ವಸತಿ ಪ್ರದೇಶದ ಮೇಲೆ ಬೀಳುತ್ತಿದ್ದ ಮರಳಿನಿಂದಾಗಿ ಜನರ ಜೀವನ ದುರ್ಭರವಾಯಿತು. ಕ್ರಮೇಣವಾಗಿ ಜನರು ಈ ಪ್ರದೇಶವನ್ನು ತೊರೆದು ಹೊಸ ಹೊಸ ಸ್ಥಳಗಳಿಗೆ ವಲಸೆ ಹೋದರು. ತಲಕಾಡು ನಿರ್ಜನವಾಯಿತು. ವಲಸೆ ಹೋಗುವ ಮುಂಚೆ ಜನರು ತಮ್ಮ ಹೊಸವಸತಿಗೆ ಉಪಯೋಗವಾಗ ಬಹುದಾದ ಎಲ್ಲಾ ನಿರ್ಮಾಣ ವಸ್ತುಗಳನ್ನೂ ತೆಗೆದುಕೊಂಡು ಹೋದರು. ತದನಂತರ ದುರಾಸೆಯ ಜನರು ಮರಳಿನಲ್ಲಿ ಹೂತಿದ್ದ ಗಾಳಿಗೋಡೆಯ ಇಟ್ಟಿಗೆಗಳನ್ನು ಸಹ ಬಿಡದೆ ಸಾಗಿಸಿದರು. ಗೋಡೆಯಿದ್ದ ಸ್ಥಳದಲ್ಲಿ ಮರಳಿನ ದಿಬ್ಬಮಾತ್ರ ಉಳಿಯಿತು.

ಕ್ರಿ.ಶ. ೧೮೦೦ರಲ್ಲಿ ಮಾಲಂಗಿಯ ತೀರದಿಂದ ತಲಕಾಡನ್ನು ಕಂಡ ಬ್ರಿಟಿಷ್ ಪ್ರವಾಸಿಗ ಫ್ರಾನ್ಸಿಸ್ ಬುಕಾನನ್[೨] ಹೇಳುವಂತೆ "ನದಿಯಾಚೆ ಅದರ ಉತ್ತರ ತಡಿಯಲ್ಲಿ ಆ ಪ್ರಾಂತ್ಯದ ಮುಖ್ಯಪಟ್ಟಣವಾದ ತಲಕಾಡು ಇದೆ. ಇದರಲ್ಲಿ ಸುಮಾರು ೨೦೦ ಮನೆಗಳಿವೆ ಮತ್ತು ಒಂದು ಪ್ರಸಿದ್ಧ ಈಶ್ವರ ದೇವಾಲಯವೂ ಇದೆ. ಈ ಊರಿಗೂ ಮತ್ತು ನದಿಯ ದಂಡೆಗೂ ನಡುವೆ ಒಂದು ವಿಶಾಲವಾದ ಕೋಟೆ ಹಾಗೂ ಅದರೊಳಗೆ ಅನೇಕ ದೇವಾಲಯಗಳಿದ್ದವು. ಇವುಗಳೆಲ್ಲವೂ ಈಗ ಮರಳು ರಾಶಿಯಡಿಯಲ್ಲಿ ಹುದುಗಿ ಹೋಗಿವೆ. ಈ ಮರಳು ರಾಶಿ ದಿನೇ ದಿನೇ ಏರುತ್ತಿದೆಯೆಂದೂ ಹೇಳುತ್ತಾರೆ. ಅಲ್ಲದೆ ಈಗ ಕೆಲವು ದೇವಾಲಯದ ಶಿಖರಗಳ ತುದಿಗಳನ್ನೂ ಹಾಗೂ ಅಲ್ಲಲ್ಲಿ ಕಾಣುವ ಜನರನ್ನು ಬಿಟ್ಟರೆ, ಪಟ್ಟಣದ ಯಾವ ಕುರುಹೂ ಅಲ್ಲಿ ಉಳಿದಿಲ್ಲ". ಫ್ರಾನ್ಸಿಸ್ ಬುಕಾನನ್‌ನ ಈ ಹೇಳಿಕೆಯಿಂದ ಕ್ರಿ.ಶ. ೧೮೦೦ರ ಹೊತ್ತಿಗೆ ತಲಕಾಡು ಸಂಪೂರ್ಣವಾಗಿ ಮರಳು ರಾಶಿಯಿಂದಾ ವೃತವಾಗಿತ್ತು ಎಂದು ಸ್ಪಷ್ಟವಾಗುತ್ತದೆ ಹಾಗೂ ಬುಕಾನ್ನನನು ಮಾಲಂಗಿಯಿಂದ 'ಕಾಣುತ್ತದೆ' ಎಂದು ಹೇಳುವ ವಿಸ್ತಾರ ಕೋಟೆ ಎಂದರೆ ಮರಳು ರಾಶಿಯಡಿಯಲ್ಲಿ ಮುಚ್ಚಿಹೋಗಿದ್ದ ಗಾಳಿತಡೆಗೋಡೆ. ಆ ಗೋಡೆಯೂ ಸಹ ಕಾಲಕ್ರಮೇಣ ಇಟ್ಟಿಗೆ ಚೋರರಿಂದ ನಾಮಾವಶೇಷವಾಗಿ ಹೋಯಿತು.

**ತಲಕಾಡಿನ ಮರಳು ದಿಣ್ಣೆ – ಒಂದು ವಿವೇಚನೆ : –** ಪ್ರಸ್ತುತ ಸಾಲಿನ ಉತ್ಖನನದ ಸಮಯದಲ್ಲಿ ತಲಕಾಡಿನ ಮರಳು ದಿಬ್ಬದ ಲಕ್ಷಣಗಳು, ಅದು ಶೇಖರವಾದ ವಿಧಾನ, ತಲಕಾಡು ಗುಡ್ಡೆ ಮರಳಿನ ಮೂಲ ಇತ್ಯಾದಿಗಳ ಬಗ್ಗೆ ಹಲವಾರು ಕುತೂಹಲಕಾರೀ ವಸ್ತು-ವಿಷಯಗಳು ಬೆಳಕಿಗೆ ಬಂದವು. ಈ ಅಂಶಗಳ ಆಧಾರದ ಮೇಲೆ ತಲಕಾಡಿನ ಗುಡ್ಡೆ ಮರಳಿನ ಮೂಲ ಅದು ಶೇಖರವಾದ ವಿಧಾನ,

ಕಾಲ ಇತ್ಯಾದಿಗಳ ಬಗ್ಗೆ ಒಂದು ವಿವರಣೆಯನ್ನು ಇಲ್ಲಿ ನೀಡಲಾಗಿದೆ.

ಈಗ ತಲಕಾಡಿನಲ್ಲಿ ಅಗಾಧವಾದ ದಿಣ್ಣೆಯ ರೂಪದಲ್ಲಿ ಶೇಖರವಾಗಿರುವ ಮರಳಿನ ವಿಚಾರಕ್ಕೆ ಬರೋಣ. ಈ ಮರಳು ಪರಿಶುದ್ಧವಾದ ಧೂಳಿನ ರೂಪದ ಕಣಗಳನ್ನುಳ್ಳ ಮರಳು. ಇದರಲ್ಲಿ ಯಾವುದೇ ರೀತಿಯ ಕಲ್ಮಶಗಳಾವುವು ಇಲ್ಲ. ಶುದ್ಧ ಸಕ್ಕರೆಯ ರಾಶಿಯ ರೀತಿಯಲ್ಲಿ ಶೇಖರವಾಗಿದೆ ಈ ಮರಳು. ಬಣ್ಣ ಮಾತ್ರ ತಿಳಿ ಹಳದಿ, ಅಪರೂಪವಾಗಿ ಮಧ್ಯ-ಮಧ್ಯದಲ್ಲಿ ತಿಳಿ ಬೂದು ಅಥವಾ ಅತೀ ತಿಳಿಯಾದ ಕಪ್ಪು ಕಣಗಳು. ಕಪ್ಪುಬಣ್ಣವಿದ್ದ ಮಾತ್ರಕ್ಕೆ ಇದರಲ್ಲಿ ಮಲಿನ ವಸ್ತುಗಳಾವವೂ ಇಲ್ಲ. ಮರಳ ಕಣಗಳ ಬಣ್ಣವೆ ತಿಳಿ ಕಪ್ಪು ಬಣ್ಣ. ಈ ರೀತಿಯ ಮರಳು ಸ್ವಲ್ಪ ಜೋರಾಗಿ ಗಾಳಿ ಬೀಸಿದರೂ ಗಾಳಿಯಲ್ಲಿ ತೇಲಿಹೋಗುವಷ್ಟು ಲಘುವಾದದ್ದು. ಹೀಗಾಗಿ ಈಗಲೂ ಸಹ ತಲಕಾಡಿನ ಮರಳು ಗುಡ್ಡೆ ಕಾಡಲ್ಲಿ ಸ್ವಲ್ಪ ಜೋರಾಗಿ ಗಾಳಿ ಬೀಸಿದರೂ ಸಹ ಈ ಧೂಳಿನ ಕಣಗಳು ಕಣ್ಣಿಗೆ ಬೀಳುತ್ತವೆ. ಇಂತಹ ಮರಳು ಅಗಾಧ ಪ್ರಮಾಣದಲ್ಲಿ ನದಿ ಪಾತ್ರದಲ್ಲಿ ಒಂದು ಕಾಲದಲ್ಲಿ ಶೇಖರಗೊಂಡು ಆ ಮರಳು, ಗಾಳಿಯ ರಭಸದಿಂದಾಗಿ ಸ್ಥಳಪಲ್ಲಟಗೊಂಡು ತಲಕಾಡಿನಲ್ಲಿ ಶೇಖರವಾಗಿದೆ ಎಂಬುದಂತೂ ಸತ್ಯದ ಮಾತು.

ಪ್ರಸ್ತುತ ಕಾವೇರೀ ನದೀ ಪಾತ್ರದಲ್ಲಿ ಹಾಗೂ ದಂಡೆಗಳಲ್ಲಿ ದೊರಕುವ ಹಾಗೂ ಶೇಖರವಾಗುತ್ತಿರುವ ಮರಳು ಈ ರೀತಿ ಸಂಪೂರ್ಣ ಧೂಳುಕಣಗಳಿಂದ ಕೂಡಿರುವಂಥದ್ದಲ್ಲ. ಈಗ ಶೇಖರವಾಗುತ್ತಿರುವ ಮರಳು ದಪ್ಪದಪ್ಪ ಕಣಗಳಿಂದ ತುಂಬಿರುವಂಥದ್ದು. ಈ ಮರಳಿನಲ್ಲಿ ಧೂಳಿನ ಕಣದ ಮರಳು ಕೇವಲ ೧೦ ರಿಂದ ೨೦ ಪ್ರತಿಶತ ಇರಬಹುದು. ಇಂತಹ ಮರಳು ನದೀ ಪಾತ್ರದಲ್ಲಿ ಶೇಖರವಾಗಿದ್ದಾಗ ಅದರ ಮೇಲೆ ಎಷ್ಟು ಜೋರಾಗಿ ಗಾಳಿ ಬೀಸಿದರೂ ಆ ಮರಳು ಅಚಲವಾಗಿ ಬಿದ್ದಿರುತ್ತದೆ. ಎಲ್ಲೋ ಒಂದೆರಡು ಪ್ರತಿಶತ ಭಾಗ ಮರಳು, ಅದರಲ್ಲೂ ಮೇಲ್ಮೈನಲ್ಲಿರುವಂತಹ ಕಣಗಳು ಗಾಳಿಯ ರಭಸಕ್ಕೆ ಹಾರಿ, ತೂರಿ ಹೋಗಬಹುದು. ಉಳಿದಂತೆ ಮರಳು ರಾಶಿಯ ಒಳಭಾಗದ ಕಣಗಳು, ಅವು ಎಷ್ಟೇ ಸೂಕ್ಷ್ಮವಾಗಿದ್ದರೂ ಸಹ ಗರ್ಭದಲ್ಲೇ ಉಳಿಯುತ್ತವೆ. ಈ ಪರಿಸ್ಥಿತಿ ಇದ್ದಾಗ ತಲಕಾಡಿನ ಮರಳು ಗುಡ್ಡಗಳಷ್ಟು ಅಗಾಧವಾದ ಪ್ರಮಾಣದಲ್ಲಿ ಮರಳು ಶೇಖರಣೆ ಆಗುವುದಂತೂ ಅಸಾಧ್ಯ. ಹೀಗಾಗಿ ಈಗಿನ ಮರಳಿಗಿಂತ ವಿಭಿನ್ನವಾದ ಮರಳು ಶೇಖರಣೆ ನದೀ ಪಾತ್ರದಲ್ಲಿ ಆಗಿರಬೇಕು. ಅಂತಹ ಮರಳು, ಗಾಳಿಯ ಕ್ರಿಯೆಯಿಂದಾಗಿ ಸ್ಥಳಾಂತರವಾಗಿರಬೇಕು ಎಂಬ ವಿಷಯ ಮನದಟ್ಟಾಗುತ್ತದೆ.

ಹಾಗಾದರೆ ಆ ರೀತಿಯ ಧೂಳು ಕಣಾವೃತವಾದ ಮರಳು ನದೀ ಪಾತ್ರದಲ್ಲಿ ಹೇಗೆ ಶೇಖರ ವಾಯಿತು, ಯಾಕೆ ಶೇಖರವಾಯಿತು, ಅದರ ಮೂಲವೇನು ಎಂಬ ಪ್ರಶ್ನೆಗಳು ಉದ್ಭವವಾಗುತ್ತದೆ. ಈ ಎಲ್ಲಾ ಪ್ರಶ್ನೆಗಳಿಗೆ ಒಂದು ಸಮಂಜಸವಾದ ಉತ್ತರ ಪ್ರಸ್ತುತ ಸಾಲಿನ ತಲಕಾಡಿನ ಉತ್ಖನನದಿಂದ ದೊರೆಯಿತು. ತಲಕಾಡಿನ ಮರಳು ಗುಡ್ಡೆಗಳ ಉತ್ತರ ಭಾಗದಲ್ಲಿ (ತಲಕಾಡು-XI) ಉತ್ಖನನ ನಡೆಸುತ್ತಿದ್ದಾಗ ವಸತಿ ಪದರದ ಅಡಿ ಭಾಗದಲ್ಲಿ ಒಂದು ರೀತಿಯ ತಿಳಿ ಹಳದಿ ಅಥವಾ ತಿಳಿಕಪ್ಪು ಬಣ್ಣದ ಜೇಡಿ ಮಣ್ಣಿನ ಸ್ವಾಭಾವಿಕ ಪದರ ಪತ್ತೆಯಾಯಿತು. ಈ ಜೇಡಿಮಣ್ಣಿನ ಪದರ ಬಹಳ ಒತ್ತಾಗಿ, ಸೂಕ್ಷ್ಮ ಕಣಗಳಿಂದ ನಿರ್ಮಿತವಾದ ಪದರ. ಇದರಲ್ಲಿ ಅಶುದ್ಧತೆಯಾಗಲೀ, ಮಾಲಿನ್ಯವಾಗಲೀ ಕಾಣಬರುವುದಿಲ್ಲ. ಸೂಕ್ಷ್ಮಕಣಗಳಿಂದ ತಯಾರಾಗಿದ್ದರೂ ಇದು ಬಹಳ ಗಟ್ಟಿಯೇನಲ್ಲ. ಅಗೆಯುವುದೂ ಸುಲಭವೇ. ಈ ರೀತಿಯ ಹಳದಿ ಮಣ್ಣು ತಲಕಾಡಿನ ಮರಳು ಗುಡ್ಡೆಯ ಉತ್ತರ ಭಾಗದಲ್ಲಿ ಸ್ವಾಭಾವಿಕ ಪದರವಾಗಿ ಕಾಣಬರುತ್ತದೆ. ಕಪ್ಪುವರ್ಣದ ಜೇಡಿ ಮಣ್ಣು ತಲಕಾಡಿನ ಗುಡ್ಡೆಯ ದಕ್ಷಿಣ ಭಾಗದಲ್ಲಿ ಸ್ವಾಭಾವಿಕ ನೆಲವಾಗಿ ಕಾಣಬರುತ್ತದೆ. ಹಳದಿ ವರ್ಣದ ಮಣ್ಣು ತಲಕಾಡಿನ ಪಶ್ಚಿಮಕ್ಕೆ ಸುಮಾರು ೫-೬ ಕಿಲೋಮೀಟರ್ ದೂರದಲ್ಲಿ, ಕಾವೇರಿ ನದಿಯ ಉತ್ತರ ದಂಡೆಯಲ್ಲಿರುವ ಕಾವೇರಿಪುರದವರೆಗೂ ಕಾಣಬರುತ್ತದೆ. ಇದು ಅಲ್ಲಿಯ ರೈತಜನಾಂಗದವರು ಹೇಳುವ ಮಾತು. ಗದ್ದೆಗಳ ಮೇಲ್ಪದರವನ್ನು ಸುಮಾರು ೨-೩ ಅಡಿ ಆಳದವರೆಗೂ ತೆಗೆದರೆ ಕೆಳಭಾಗದಲ್ಲಿ ಸಂಪೂರ್ಣವಾಗಿ ಈ ರೀತಿಯ ತಿಳಿ ಹಳದಿ ಬಣ್ಣದ ಜೇಡಿ ಮಣ್ಣೇ ದೊರೆಯುತ್ತದೆ ಎಂಬುದು ಅವರ ಅನುಭವದ ಮಾತುಗಳು. ಅಂತೆಯೇ ದಕ್ಷಿಣ ತಲಕಾಡಿನಲ್ಲಿ ಉತ್ಖನನ ನಡೆಸಿದ ಗುಂಡಿಗಳಲ್ಲಿ ಅಂದರೆ ತಲಕಾಡು III, ತಲಕಾಡು IV, ತಲಕಾಡು V ಮತ್ತು ತಲಕಾಡು VII ಈ ಎಲ್ಲಾ ಗುಂಡಿಗಳಲ್ಲಿ ಕೆಳಸ್ತರದಲ್ಲಿ ಸ್ವಾಭಾವಿಕ ನೆಲವಾಗಿ ತಿಳಿಕಪ್ಪು ವರ್ಣದ ಜೇಡಿ ಮಣ್ಣೇ ದೊರಕಿದೆ. ತಿಳಿ ಹಳದಿ ಮತ್ತು ತಿಳಿ ಕಪ್ಪು ಬಣ್ಣದ ಜೇಡಿ ಮಣ್ಣುಗಳಲ್ಲಿ ಕೇವಲ ಬಣ್ಣದ ವ್ಯತ್ಯಾಸವಿದೆಯೇ ಹೊರತು ಇವುಗಳ ಗುಣ, ವಸ್ತುವಿನಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಈ ಎರಡೂ ಮಣ್ಣುಗಳ ಮಾದರಿಗಳನ್ನು ತೆಗೆದುಕೊಂಡು ಚೆನ್ನಾಗಿ ನೀರಿನಲ್ಲಿ ತೊಳೆದು, ಜಾಲಿಸಿ, ನೀರನ್ನು ಚೆಲ್ಲಿದರೆ, ಉಳಿಯುವುದು ಸುಮಾರು ೫೦ ಪ್ರತಿಶತ ಧೂಳುಮರಳು. ಈ ಧೂಳು ಮರಳು ಅದರ ರಚನೆಯಲ್ಲಿ ಬಣ್ಣದಲ್ಲಿ, ಗಾತ್ರದಲ್ಲಿ ನೂರಕ್ಕೆ ನೂರರಷ್ಟು ತಲಕಾಡಿನ ಗುಡ್ಡೆಯ ಮರಳಿನಂತೆಯೇ ಇರುವುದು ಆಶ್ಚರ್ಯದ ಸಂಗತಿ.

ಇದರಿಂದಾಗಿ ತಲಕಾಡಿನ ಗುಡ್ಡೆಯ ಮರಳಿಗೆ ಈ ರೀತಿಯ ಜೇಡಿಮಣ್ಣೇ ಮೂಲವಾಗಿದೆ ಎಂಬುದಂತೂ ಸತ್ಯ.

ಭೂಗರ್ಭಶಾಸ್ತ್ರಜ್ಞರು ಹಾಗೂ ಬಾಹ್ಯಾಕಾಶ ವಿಜ್ಞಾನಿಗಳ ಅಭಿಮತದಂತೆ, ಕಾವೇರಿ ನದಿಯು ಪ್ರಾಚೀನವಾಗಿ ಈಗಿನ ಹಳೆಯ ತಲಕಾಡಿನ ಉತ್ತರಭಾಗದಲ್ಲಿ ಹರಿಯುತ್ತಿತ್ತು. ಅಂದರೆ ಈಗ ಮಾಧವಮಂತ್ರಿ ನಾಲೆ ಹರಿಯುತ್ತಿರುವ ಭಾಗದಲ್ಲಿಯೇ ತಿರುಗಿ ಪಶ್ಚಿಮಾಭಿಮುಖವಾಗಿ ಹರಿಯುತ್ತಿತ್ತು. ಕ್ರಮೇಣ, ಅದರ ದಕ್ಷಿಣದಂಡೆ ಸತತ ಕೊರೆತದಿಂದಾಗಿ, ನದಿ ಸ್ವಲ್ಪ– ಸ್ವಲ್ಪವಾಗಿ ದಕ್ಷಿಣದತ್ತ ಚಲಿಸಿ, ಈಗ ಹರಿಯುತ್ತಿರುವ ಪಾತ್ರದ ಸ್ಥಳಕ್ಕೆ ಬದಲಾಗಿದೆ. ಇದು ಕಾಲಕ್ರಮೇಣ ಇನ್ನೂ ದಕ್ಷಿಣಕ್ಕೆ ಚಲಿಸುವ ಸಾಧ್ಯತೆ ಇಲ್ಲದಿಲ್ಲ. ಈ ಅಭಿಮತಕ್ಕೆ ಒಪ್ಪಬಹುದಾದ ವೈಜ್ಞಾನಿಕ ವಿವರಣೆಗಳೂ ಇದೆಯಲ್ಲದೆ, ಪುರಾತತ್ವ ಸಾಕ್ಷ್ಯಾಧಾರಗಳೂ ಉಂಟು. ಮಾಲಂಗಿ ಮಡುವಾಗಲೀ ಎಂಬ ಶಾಪದ ಸ್ಥಳೀಯ ನಂಬಿಕೆ ಸತ್ಯವೇ ಆಗಿದೆ. ಮುಂಚೆ ಇದ್ದ ಮಾಲಂಗಿ ಗ್ರಾಮದ ಉತ್ತರಭಾಗ ಕೊರೆದು ಹೋಗಿದೆ. ಪ್ರಾಚೀನ ಮಾಲಂಗಿಯ ಕೇಂದ್ರಭಾಗ ಈಗ ತಡಿ ಮಾಲಂಗಿಯಾಗಿದೆ. ಹಳೆ ಮಾಲಂಗಿಯ ದಕ್ಷಿಣಕ್ಕೆ ಹೊಸ ಮಾಲಂಗಿ ಸೃಷ್ಟಿಯಾಗಿದೆ. ಇವೆಲ್ಲವೂ ಭೌಗೋಳಿಕವಾದ ಸತ್ಯಗಳು.

ಈ ಎಲ್ಲಾ ಅಂಶಗಳಿಂದ ತಿಳಿದು ಬರುವ ಸತ್ಯಗಳೆಂದರೆ ಕಾವೇರಿ ನದೀ ಪಾತ್ರದಲ್ಲಿ ಈ ರೀತಿಯ ಹಳದಿ ಮತ್ತು ಕಪ್ಪು ಬಣ್ಣದ ಜೇಡಿ ಮಣ್ಣು ಇರುವ ಪ್ರದೇಶಗಳು ಅಲ್ಲಲ್ಲಿ ಇವೆ. ಈ ಮಣ್ಣು ರಚನೆ ಗಟ್ಟಿಯಾಗಿಲ್ಲದಿದ್ದುದರಿಂದ ಪ್ರವಾಹದ ತಿರುವಿನಲ್ಲಿನ ಪಾತ್ರ ಬೇಗಬೇಗ ಸವೆದು ನದೀಪಾತ್ರ ತಲಕಾಡಿನ ಬಳಿ ದಕ್ಷಿಣಾಭಿಮುಖವಾಗಿ ಬೆಳೆಯುತ್ತಾ ಬಂದಿದೆ. ಹಳೇ ತಲಕಾಡಿನ ಮತ್ತು ಅದಕ್ಕೆ ಸೇರಿದಂತಿರುವ ಕಾವೇರಿ ಪುರದವರೆಗಿನ ಭಾಗಗಳೆಲ್ಲವೂ ಈ ರೀತಿ ಜೇಡಿ ಮಣ್ಣಿನಿಂದಾವೃತವಾಗಿದೆ. ಹೀಗಾಗಿ ತಲಕಾಡಿನ ಮರಳು ಗುಡ್ಡೆಯ ಪ್ರದೇಶದ ಅಡಿ ಪದರದಲ್ಲಿ ಜೇಡಿ ಮಣ್ಣಿನ ಪದರವಿದೆ. ಪದರ ಉತ್ಖನನದಲ್ಲಿ ಸ್ವಾಭಾವಿಕ ನೆಲವಾಗಿ ಕಂಡುಬಂದಿದೆ.

ಈ ರೀತಿಯ ಜೇಡಿ ಮಣ್ಣಿನ ನೆಲ ಕಾವೇರಿ ನದಿಯ ಪಾತ್ರದಲ್ಲಿ, ತಲಕಾಡಿನ ಬಳಿಯಲ್ಲಿ ಮಾತ್ರವಲ್ಲದೆ, ಅದಕ್ಕೆ ಉತ್ತರದ ನದೀ ಪಾತ್ರದಲ್ಲೂ ಅಂದರೆ ತಿ. ನರಸೀಪುರದಿಂದಲೂ ಹಿಂದಕ್ಕೆ ಸಹ ಎಲ್ಲೋ ಇದ್ದಿರಬೇಕು. ಏಕೆಂದರೆ ತಿ. ನರಸೀಪುರದ ಗುಂಜಾನರಸಿಂಹಸ್ವಾಮಿ ದೇವಾಲಯದ ನಿರ್ಮಾಣ ಕಾರ್ಯದಲ್ಲೂ ತಲಕಾಡಿನ ಗುಡ್ಡೆಮರಳಿನ ರೀತಿಯ ಧೂಳು ಕಣದ ಮರಳು ಬಳಕೆಯಾಗಿರುವುದು ಕಂಡುಬಂದಿದೆ. ತಿ. ನರಸೀಪುರದಲ್ಲಿ ಕಾವೇರಿ ತೀರದ ದಕ್ಷಿಣ ತಟದಲ್ಲಿ ನಿರ್ಮಾಣವಾಗಿರುವ ಗುಂಜಾನರಸಿಂಹ ಸ್ವಾಮಿ ದೇವಾಲಯ ವಿಜಯನಗರ ಕಾಲದ ಪ್ರತಿಷ್ಠೆ. ಇದರ ಪ್ರಾಕಾರ ಮತ್ತು ಗೋಪುರಗಳು ಮೈಸೂರು ಅರಸರ ಕಾಲದ ನಿರ್ಮಾಣ. ಆಳವಾದ ಪಾಯದ ಗುಂಡಿಯಲ್ಲಿ ಭದ್ರತೆಗಾಗಿ ಮೊದಲು ಮರಳನ್ನು ತುಂಬಿ ಮೇಲೆ ಕಲ್ಲಿನ ಕಟ್ಟಡ ಕಟ್ಟುವುದೂ ಹಿಂದೂ ದೇವಾಲಯ ನಿರ್ಮಾಣ ಸಂಪ್ರದಾಯ. ಗುಂಜಾನರಸಿಂಹ ದೇವಾಲಯದ ಪ್ರಾಕಾರದ ಆಳವಾದ (ಸು–೧೦ ಅಡಿ) ಪಾಯದ ಗುಂಡಿಯ ತುಂಬ ತಲಕಾಡಿನ ಗುಡ್ಡೆಯ ಧೂಳು ಮರಳಿನ ರೀತಿಯ ಮರಳನ್ನೇ ತುಂಬಿದ್ದಾರೆ. ಈ ಮರಳು ಸ್ವಾಭಾವಿಕವಾಗಿ ಗುಡಿಯ ಎದುರಿಗೆ ಇರುವ ಕಾವೇರಿ ತೀರದಿಂದ ತುಂಬಿ ತಂದ ಮರಳೇ ಆಗಿರುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ. ಹೀಗಾಗಿ ನರಸೀಪುರದ ಬಳಿಯೂ ನದೀ ತೀರದಲ್ಲಿ ಮೈಸೂರು ಅರಸರ ಆಳ್ವಿಕೆಯ ಕಾಲದಲ್ಲಿ ಧೂಳು ಮರಳು ಶೇಖರವಾಗಿತ್ತೆಂಬುದಂತೂ ಸತ್ಯವೆನಿಸುತ್ತದೆ.

ಹೀಗೆಯೇ ತಿ. ನರಸೀಪುರದಿಂದ ಕಾವೇರಿ ಪಾತ್ರದಲ್ಲಿ ಸು. ೫ ಕಿ.ಮೀ. ಕೆಳಮುಖವಾಗಿ ಬಂದರೆ ಸಿಕ್ಕುವುದು ಕೃಷ್ಣಾಪುರ. ಕೃಷ್ಣಾಪುರ, ಕಾವೇರಿ ನದಿಯ ಉತ್ತರ ತೀರದ ಮೇಲಿರುವ ಒಂದು ಗ್ರಾಮ. ಇಲ್ಲಿ ಮೈಸೂರು ವಿಶ್ವವಿದ್ಯಾನಿಲಯ ೧೯೯೮ರಲ್ಲಿ ನಡೆಸಿದ ಪ್ರಾಚ್ಯ ಉತ್ಖನನದಲ್ಲಿ ಒಂದು ಮೀಟರ್ ದಪ್ಪದ ವಿಶಾಲವಾಗಿ ಹರಡಿರುವ ತಲಕಾಡಿನ ಗುಡ್ಡೆ ಮರಳು ರೀತಿಯ ಧೂಳು ಮರಳು ದೊರೆತಿದೆ. ಈ ಮರಳಿನ ಪದರವನ್ನು, ಸಾಂದರ್ಭಿಕ ಆಧಾರಗಳ ಮೇಲೆ ವಿಜಯನಗರೋತ್ತರ ಕಾಲದ್ದೆಂದು ಅಭಿಪ್ರಾಯಪಡಲಾಗಿದೆ.

ಈ ಎಲ್ಲಾ ವಿವರಗಳಿಂದ ತಿಳಿದು ಬರುವ ಅಂಶವೆಂದರೆ ಕಾವೇರಿ/ಕಪಿಲಾ ನದಿಗಳ ಮೇಲ್ಪಾತ್ರದಲ್ಲೂ ಸಹ ಎಲ್ಲೋ ಒಂದು ಕಡೆ, **ತಲಕಾಡಿನ ಮರಳು ದಿಣ್ಣೆಯಡಿಯಲ್ಲಿ ದೊರೆತಿರುವ ಜೇಡಿಮಣ್ಣಿನ ರೀತಿಯ ಸಮೃದ್ಧ ಪ್ರದೇಶವೊಂದು** ಇತ್ತು. ಆ ಜೇಡಿಮಣ್ಣಿನ ಪ್ರದೇಶವನ್ನು ನದಿ ಸರಾಗವಾಗಿ ಕೊರೆದು, ಆ ಮಣ್ಣಿನಲ್ಲಿದ್ದ ತಿಳಿಮಣ್ಣನ್ನು ಜಾಲಿಸಿ, ಕರಗಿಸಿ ನೀರಿನಲ್ಲಿ ಕೊಚ್ಚಿಕೊಂಡು ಹೋಗುವಂತೆ ಮಾಡಿತು. ಸೂಕ್ಷ್ಮ ಮರಳಿನ ಕಣಗಳನ್ನು ನದೀ ಪಾತ್ರದಲ್ಲಿ ಹಾಗೂ ತಟಗಳಲ್ಲಿ ಶೇಖರವಾಗುವಂತೆ ಮಾಡಿತು. ಇರಲಿ, ಈ ಮೇಲೆ ಹೇಳಿದ ವಿವರಗಳು ತರ್ಕಬದ್ಧ ವಾದ ವಿಚಾರಗಳಂತೆ ಕಾಣಬರುತ್ತದೆ. ಆದರೆ, ಮರಳು, ತಲಕಾಡಿನಲ್ಲಿ ದಿಣ್ಣೆಯ ರೂಪದಲ್ಲಿ ಏಕೆ ಕಾಣಬರುತ್ತದೆ. ಇದು ಈ ಮುಂಚೆ ಏಕೆ ಶೇಖರವಾಗಲಿಲ್ಲ, ಕೇವಲ ೧೭ನೇ ಶತಮಾನದಲ್ಲಿ ಮಾತ್ರ ಏಕೆ ಶೇಖರವಾಯಿತು. ಅದೂ ತಲಕಾಡಿನಲ್ಲಿ ಮಾತ್ರ ಶೇಖರವಾಯಿತು ಎಂಬ ಪ್ರಶ್ನೆಗಳು ಉದ್ಭವವಾಗುತ್ತದೆ. ಈ ಅನುಮಾನಗಳಿಗೆ ಈ

ರೀತಿಯಾಗಿ ಉತ್ತರಿಸಬಹುದು. ಕಾವೇರಿ/ಕಪಿಲೆಗಳಿಗೆ ಈ ರೀತಿಯ ಜೇಡಿ ಮಣ್ಣು ದೊರೆತಿರುವುದಂತೂ ಸತ್ಯದ ಸಂಗತಿ. ಅದು ಯಾವ ಸ್ಥಳದಲ್ಲಿ ದೊರೆತಿದೆ ಎಂಬ ಪ್ರಶ್ನೆಗೆ ಸ್ಪಷ್ಟ ಉತ್ತರ ಸದ್ಯಕ್ಕೆ ದೊರಕದಿದ್ದರೂ ಆ ಮಣ್ಣು ದೊರೆತ ಸ್ಥಳ ಮಾತ್ರ ತಿ. ನರಸೀಪುರದಿಂದ ಮೇಲಿರುವ ಕಾವೇರಿ/ಕಪಿಲಾ ನದಿ ಪಾತ್ರದವರೆಗೂ ವಿಸ್ತರಿಸಿರಬಹುದೆಂಬ ಅಂಶ ಮಾತ್ರ ಸ್ಪಷ್ಟ. ಏಕೆಂದರೆ ತಿ. ನರಸೀಪುರದಲ್ಲಿಯೂ ಸಹ ತಲಕಾಡಿನ ರೀತಿಯ ಧೂಳು ಮರಳು ವಿಜಯನಗರೋತ್ತರ ಕಾಲದ ವಾಸ್ತುಶಿಲ್ಪಗಳಿಗೆ, ಆ ಪ್ರದೇಶದಲ್ಲೇ ಹೇರಳವಾಗಿ ದೊರೆತಿದೆ. ಕಾವೇರಿ ನದೀಪಾತ್ರದಲ್ಲೇ ತಿ. ನರಸೀಪುರ ಕ್ಷೇತ್ರದಿಂದ ಕೆಳಕ್ಕಿರುವ ಕೃಷ್ಣಾಪುರ ಕ್ಷೇತ್ರದ ಬಳಿ ಉತ್ತರ ದಂಡೆಯ ಮೇಲೆ ಈ ರೀತಿಯ ಧೂಳು ಮರಳಿನ ಹರವಿದೆ. ಅದೇಕಾಲಕ್ಕೆ ಸೇರಿಸ ಬಹುದಾದ ಮರಳು ದಿಣ್ಣೆಗಳೇ ತಲಕಾಡಿನಲ್ಲಿ ಶೇಖರವಾಗಿದೆ. ಈ ಅಂಶಗಳಿಂದ ಕ್ರಿ.ಶ. ೧೭ನೇ ಶತಮಾನದ ಮಧ್ಯಭಾಗದಲ್ಲಿ (ತಲಕಾಡಿನ ಶಾಪದ ಅಂದಾಜು ಕಾಲ) ಈ ಎಲ್ಲಾ ಸ್ಥಳಗಳಲ್ಲಿ ಧೂಳು ಮರಳು ಶೇಖರವಾಯಿತು ಎಂಬುದು ಸ್ಪಷ್ಟವಾಗುತ್ತದೆ.

ಕ್ರಿ.ಶ. ಹದಿನೇಳನೆಯ ಶತಮಾನದ ಮೊದಲಾರ್ಧದಲ್ಲಿ ದಕ್ಷಿಣ ಭಾರತವು ಅದರ ಇತಿಹಾಸದಲ್ಲೇ ಅತ್ಯಂತ ತೀಕ್ಷ್ಣವಾದ ಬರಗಾಲವನ್ನು ಕಂಡಿತೆಂದು ಇತಿಹಾಸದ ಪುಟಗಳಿಂದ ತಿಳಿದು ಬರುತ್ತದೆ. ಅಬ್ದುಲ್ ಹಮೀದ್ ಲಹೋರಿ ಎಂಬ ಷಹಜಹಾನನ ಆಸ್ಥಾನ ಇತಿಹಾಸಕಾರನು ೧೬೩೦-೩೨ರ ಸಮಯದಲ್ಲಿ ಗುಜರಾತ್ ಮತ್ತು ದಕ್ಷಿಣ ಭಾರತ ಕಂಡ ಭೀಕರ ಕ್ಷಾಮವನ್ನು ಹೀಗೆ ವಿವರಿಸುತ್ತಾನೆ.[೩] "ಮನುಷ್ಯರು ಮನುಷ್ಯರನ್ನೇ ತಿನ್ನಲು ಪ್ರಾರಂಭಿಸಿದರು. ಮಗನ ಪ್ರೀತಿಗಿಂತಲೂ ಆತನ ಮಾಂಸವೇ ಹೆಚ್ಚು ಆಪ್ಯಾಯ ಮಾನವಾಗಿತ್ತು. ರಸ್ತೆಯ ಬದಿಯಲ್ಲಿ ಇನ್ನೂ ಸಾವು ಬದುಕಿನ ನಡುವೆ ಹೋರಾಡುತ್ತಾ ಬಿದ್ದಿದ್ದ ಜನರನ್ನು ಮಾಂಸಕ್ಕಾಗಿ ಜನ ಕೊಲ್ಲುತ್ತಿದ್ದರು. ಇದಕ್ಕಿಂತ ಹೆಚ್ಚಾಗಿ ರಸ್ತೆ ಸಂಚಾರದಲ್ಲಿ ಜನರಿಗೆ ಇದ್ದ ಭಯವೆಂದರೆ ಎಲ್ಲಿ ಬೇರೆಯವರು ತಮ್ಮನ್ನು ಕೊಂದು ತಿನ್ನುವರೋ ಎಂದು". ಸಾಮಾನ್ಯವಾಗಿ ಬರಗಾಲ ಪ್ರಾರಂಭವಾಯಿತೆಂದರೆ ಅದು ಸು. ೧೦-೧೨ ವರ್ಷಗಳ ಕಾಲ ವಿಸ್ತರಿಸಿರುತ್ತೆಂಬುದು ನಮ್ಮ ಪೂರ್ವಜರ ಅನುಭವದ ಮಾತುಗಳು. ಇಂತಹ ಬರಗಾಲದ ಸಮಯದಲ್ಲಿ, ದಕ್ಷಿಣ ಭಾರತದ ನದಿಗಳು, ಅಲ್ಪಸ್ವಲ್ಪ ಮಳೆ ಬೀಳುವ ಸಮಯ ಬಿಟ್ಟು, ಉಳಿದಂತೆ ಸಂಪೂರ್ಣ ಶುಷ್ಕವಾಗಿರುತ್ತದೆ. ಕಾವೇರಿ/ಕಪಿಲೆಗಳ ಅಲ್ಪಸ್ವಲ್ಪ ನೀರು ಅದರ ಪಾತ್ರದ ಮೇಲಿನ ಪ್ರದೇಶಗಳಲ್ಲೇ ತಡೆಹಿಡಿಯಲ್ಪಟ್ಟು, ಕೆಳಮಟ್ಟದ ಪ್ರದೇಶಗಳಾದ ತಿ. ನರಸೀಪುರ ತಲುಪುವ ವೇಳೆಗೆ ಖಾಲಿಯಾಗುತ್ತಿತ್ತು. ಅದರಲ್ಲೂ ಮಾಧವಮಂತ್ರಿ ಅಣೆಕಟ್ಟಿನ ಮುಂದಿನ ಪ್ರದೇಶವಾದ ತಲಕಾಡಿನ ಬಳಿ ನದಿ ಸಂಪೂರ್ಣ ಖಾಲಿಯಾಗಿರುತ್ತಿತ್ತು. ನೀರಿಲ್ಲದ ನದಿಪಾತ್ರ, ಅಲ್ಲಿ ತುಂಬಿರುವ ಧೂಳು ಮರಳು, ಬೀಸುವ ನೈರುತ್ಯಗಾಳಿ ಇವೆಲ್ಲವೂ ಮರಳಿನ ಸ್ಥಳಾಂತರಕ್ಕೆ ಸೂಕ್ತವಾದ ಸನ್ನಿವೇಶಗಳನ್ನು ಒದಗಿಸಿದವು. ಕೃಷ್ಣಾಪುರದ ಬಳಿಯಲ್ಲಿಯೂ ನದೀ ಪಾತ್ರ/ದಂಡೆಯಲ್ಲಿದ್ದ ಧೂಳು ಮರಳು ನೈರುತ್ಯಮಾರುತದಿಂದ ಸ್ಥಳಪಲ್ಲಟಗೊಂಡು ಉತ್ತರ ದಂಡೆಯ ಮೇಲೆ ಬೀಳಲು ಪ್ರಾರಂಭವಾಯಿತು. ಕೃಷ್ಣಾಪುರದ ಬಳಿ ಕಾವೇರಿ ಉತ್ತರದಂಡೆ ಖಾಲಿ ಬಯಲು ಪ್ರದೇಶವಾಗಿತ್ತು. ಅಲ್ಲಿ ಯಾವುದೇ ಎತ್ತರದ ಕಟ್ಟಡಗಳು ಇರಲಿಲ್ಲವಾದ್ದರಿಂದ ಗಾಳಿಯ ಬೀಸಿಗೆ ತಡೆಯಿರಲಿಲ್ಲ. ವಿಸ್ತಾರವಾದ ಬಯಲಿನಲ್ಲಿ ಸು. ೧ ಮೀಟರ್‌ಗೂ ಅಧಿಕವಾದ ಮರಳು ಶೇಖರಣೆಯಾಯಿತು.

ತಲಕಾಡಿನಲ್ಲಿಯಾದರೋ ಸನ್ನಿವೇಶ ಸಂಪೂರ್ಣ ವಿಭಿನ್ನವಾಗಿತ್ತು. ನದಿಯ ಉತ್ತರದದಂಡೆಯಲ್ಲಿ ಹೊಳೆಯಂಚಿನವರೆಗೆ ವಿಸ್ತರಿಸಿದ ಪಟ್ಟಣ, ಮಹಡಿ ಮನೆಗಳು, ಎತ್ತರದ ಗುಡಿಗೋಪುರಗಳು, ಗಿಡ ಮರಗಳಿಂದ ಸಂಮೃದ್ಧವಾಗಿದ್ದವು. ಧೂಳು ಮರಳು ತುಂಬಿದ್ದ ನೈರುತ್ಯ ಮಾರುತಕ್ಕೆ ಇವೆಲ್ಲವೂ ತಡೆಯೊಡ್ಡಿ ಮರಳು ಈ ಊರಿನ ಮೇಲೆ ಶೇಖರವಾಗುವಂತೆ ಮಾಡಿದವು. ಇದಲ್ಲದೆ ತಲಕಾಡಿನ ಬಳಿ ಹೆಚ್ಚಿನ ಮರಳು ಶೇಖರಣೆಯಾಗುವುದಕ್ಕೆ ಅಲ್ಲಿಯ ನದೀ ಪಾತ್ರದ ವಿಸ್ತೀರ್ಣವೂ ಕಾರಣವಾಗಿತ್ತು. ತಲಕಾಡಿನ ಬಳಿಯ ಪ್ರದೇಶದಲ್ಲಿ ಈ ಮೇಲೆ ಹೇಳಿದ ಜೇಡಿಮಣ್ಣಿನ ಸ್ವಾಭಾವಿಕ ನೆಲವಿದೆ ಎಂದು ಆಗಲೇ ಹೇಳಿದೆ. ಈ ರೀತಿಯ ನೆಲ ನದಿ ಹರಿವಿಗೆ ದೊರಕಿದಾಗ ಅದನ್ನು ನದಿ ಸರಾಗವಾಗಿ ಕೊರೆದು ಹಾಕಿದ್ದರಿಂದ ನದೀಪಾತ್ರ ಈ ಸ್ಥಳದಲ್ಲಿ ಸುಮಾರು ೧ ಕಿ.ಮೀ. ನಷ್ಟು ಅಗಲವಾಗಿದೆ. ಇಷ್ಟು ಅಗಲವಾದ ಆಳವಿಲ್ಲದ ನದೀಪಾತ್ರದ ತುಂಬ ಧೂಳು ಮರಳಿದ್ದು, ಅದು ಬರಗಾಲದಿಂದಾಗಿ ಅನೇಕವರ್ಷ ಶುಷ್ಕವಾಗಿ ಗಾಳಿಯ ಹೊಡೆತಕ್ಕೆ ತೆರವಾಗಿದ್ದು, ಅಗಾಧ ಪ್ರಮಾಣದಲ್ಲಿ ತಲಕಾಡಿನ ಮೇಲೆ ಮರಳು ಶೇಖರಣೆಯಾಗುವುದಕ್ಕೆ ಸಹಕಾರಿಯಾಯಿತು.

ನದಿಯ ಮೇಲ್ಭಾಗದಲ್ಲಿ ಜೇಡಿಮಣ್ಣಿನಿಂದಾವೃತವಾದ ಭೂಮಿಯ ಕೊರೆತ, ಅದರಿಂದುತ್ಪತ್ತಿಯಾದ ಧೂಳು ಮರಳು, ಮರಳನ್ನು ಮುಂದಕ್ಕೆ ಕೊಚ್ಚಿಕೊಂಡು ಹೋಗಲು ಸಾಲದಾದ ನೀರಿನ ಹರಿವು, ವಿಶಾಲವಾಗಿ ಮಟ್ಟವಾದ ನದಿಪಾತ್ರ, ಇವೆಲ್ಲವೂ ತಲಕಾಡಿನ ಬಳಿ ಹೆಚ್ಚಿನ ಧೂಳು ಮರಳು ಶೇಖರಣೆಯಾಗಲು ಸೂಕ್ತ ಸನ್ನಿವೇಶವನ್ನು ಒದಗಿಸಿದವು. ಬರಗಾಲದಿಂದಾಗಿ ತಲಕಾಡಿನ ಬಳಿ ಕಾವೇರಿ ನೀರಿನ ಹರಿವು

ಹೆಚ್ಚುಕಡಿಮೆ ಇಲ್ಲದಾಯಿತು. ಧೂಳಿನ ಮರಳೇ ತುಂಬಿದ್ದ ನದೀಪಾತ್ರ ಗಾಳಿಯ ಬೀಸಿಗೆ ನಿರಂತರವಾಗಿ ಮರಳನ್ನು ಒದಗಿಸಿತು. ಈ ಧೂಳು ಮರಳು ರಾಶಿಯ ಒಂದು ವೈಶಿಷ್ಟ್ಯವೆಂದರೆ, ಇದು ಸಂಪೂರ್ಣ ಧೂಳು ಮರಳಿನಿಂದ ನಿರ್ಮಿತವಾದದ್ದು. ಮೇಲಿನ ಮರಳು ಪದರ ಖಾಲಿ ಯಾದರೂ, ಒಳಗಿನ ಪದರಗಳೂ ಸಹ ಧೂಳು ಮರಳೇ. ಇದು ತೇವಾಂಶವಿದ್ದರೆ ಮಾತ್ರ ಒತ್ತಾಗಿ, ಘನವಾಗಿ ನಿಂತಿರುತ್ತದೆ. ಒಣಗಿದರೆ ಗಾಳಿಯ ಹೊಡೆತಕ್ಕೆ ಮೇಲೆ ಹಾರುತ್ತದೆ. ಗಾಳಿಯಲ್ಲಿ ತೂರಿಕೊಂಡು ಸ್ಥಳಪಲ್ಲಟಗೊಳ್ಳುತ್ತದೆ. ಹೀಗಾಗಿ ನಿರಂತರವಾಗಿ ತಲಕಾಡಿನ ಮೇಲೆ ಧೂಳುಮರಳಿನ ಮಳೆ ಸುರಿಯುತ್ತಲೇ ಇತ್ತು. ಜನರಿಗೆ ಜೀವನ ದುರ್ಭರ ವಾಯಿತು. ಊರು ಕ್ರಮೇಣ ನಿರ್ಜನವಾಯಿತು. ಊರಿದ್ದ ಸ್ಥಳದಲ್ಲಿ ಪದರಪದರವಾಗಿ ಮರಳು ಬೆಳೆದು ಮರಳು ರಾಶಿಯೇ ನಿರ್ಮಾಣವಾಯಿತು. ಕಾವೇರಿ/ಕಪಿಲಾ ನದಿಗಳಿಗೆ ತಲಕಾಡಿನ ಜೇಡಿ ಮಣ್ಣಿನ ರೀತಿಯ ವಿಶಿಷ್ಟ ಮಣ್ಣು ಅದರ ಹರಿವಿನಲ್ಲಿ ಕ್ರಿಶ. ೧೭ನೇ ಶತಮಾನದ ಮೊದಲಾರ್ಧದಲ್ಲಿ ದೊರೆಯಿತು. ಅದೇ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಬರಗಾಲವೂ ಪ್ರಾರಂಭವಾಯಿತು. ನದಿಯ ಕೊರೆತಕ್ಕೆ ಸಿಕ್ಕ ಜೇಡಿ ಮಣ್ಣಿನಿಂದುತ್ಪತ್ತಿಯಾದ ಧೂಳು ಮರಳು ತಲಕಾಡಿನ ಬಳಿಯ ವಿಶಾಲ ನದೀ ಪಾತ್ರದಲ್ಲಿ, ಮುಂದೆ ಚಲಿಸಲಾರದೆ ಶೇಖರವಾಯಿತು. ಆ ಧೂಳು ಮರಳು ನೈರುತ್ಯ ಮಾರುತದಿಂದಾಗಿ ಸ್ಥಳಪಲ್ಲಟಗೊಂಡು ತಲಕಾಡಿನ ಮೇಲೆ ಬಿದ್ದು ಅಲ್ಲಿ ಮರಳು ರಾಶಿಯೇ ಬೆಳೆಯಿತು.

ಮರಳು ರಾಶಿ ಬೆಳೆದ ರೀತಿಯೂ ಸಹ ಬಹಳ ಕುತೂಹಲಕಾರಿಯಾದ ವಿಷಯವಾಗಿದೆ. ತಲಕಾಡಿನ ಉತ್ಖನನದಲ್ಲಿ ಅನೇಕ ಸ್ಥಳಗಳಲ್ಲಿ ಅಲ್ಲಿ ಶೇಖರವಾಗಿದ್ದ ಮರಳನ್ನು ಖಾಲಿಮಾಡಿ, ಮರಳಿನಡಿಯಲ್ಲಿನ ಗಟ್ಟಿ ಭೂ ಪ್ರದೇಶದಲ್ಲಿ, ಉತ್ಖನನ ಗುಂಡಿಗಳನ್ನು ಗುರುತು ಮಾಡಿ, ಉತ್ಖನನ ಪ್ರಾರಂಭಿಸುವುದು ಈಗ ಅನುಸರಿಸುತ್ತಿರುವ ಪದ್ಧತಿ. ಈ ರೀತಿ ಮರಳನ್ನು ಖಾಲಿ ಮಾಡಿದ ಪ್ರದೇಶಗಳ ಪಾರ್ಶ್ವದ ಖಂಡ ನೋಟದಲ್ಲಿ ಮರಳು ಪದರ ಪದರವಾಗಿ ಶೇಖರ ವಾಗಿರುವ ವಿಚಾರ ಸ್ಪಷ್ಟವಾಗಿ ಕಾಣಬರುತ್ತದೆ. ಈ ಮರಳಿನ ಪದರಗಳು ಒಂದೇ ವರ್ಣದ್ದಾಗಿರಬಹುದು, ಅಥವಾ ಸ್ವಲ್ಪ ವಿಭಿನ್ನ ವರ್ಣದ್ದೇ ಆಗಿರಬಹುದು. ಆದರೆ ಪದರ ಪದರ ವಾಗಿ ಶೇಖರವಾಗಿರುವುದಂತೂ ಸ್ಪಷ್ಟವಾಗಿ ಗೋಚರ ವಾಗುತ್ತದೆ. ಈ ಪದರಗಳ ದಪ್ಪ ಕೆಲವೇ ಮಿಲಿ ಮೀಟರ್ ಗಳಿಂದ ಹಿಡಿದು ಕೆಲವೆ ಸೆಂಟಿಮೀಟರ್‌ಗಳವರೆಗೂ ವಿಸ್ತರಿಸಿರುತ್ತದೆ. ಪದರಗಳು ಕೆಲವೆಡೆ ಮಟ್ಟಸವಾಗಿ ಸಮಾನಾಂತರವಾಗಿದ್ದರೆ, ಕೆಲವೆಡೆ ಉಬ್ಬು ತಗ್ಗುಗಳ ರೀತಿಯಲ್ಲಿ, ಅಂಕುಡೊಂಕಾಗಿ ರಚನೆಯಾಗಿರುತ್ತದೆ. ಕೆಲವೆಡೆ ಶಿಖರದ ರೀತಿಯಲ್ಲಿ ಏರಿರುತ್ತದೆ. ಕೆಲವೆಡೆ ಇಳಿದಿರುತ್ತದೆ. ಈ ಎಲ್ಲಾ ಲಕ್ಷಣಗಳೂ ತೀಕ್ಷ್ಣ ಅಧ್ಯಯನ ಯೋಗ್ಯವಾದವು. ಏಕೆಂದರೆ ಇವುಗಳಿಂದ ಗಾಳಿ ಬೀಸಿದ ದಿಕ್ಕು, ಬೀಸಿನ ತೀಕ್ಷ್ಣತೆ, ಗಾಳಿ ಬೀಸಿದ ಅವಧಿ, ಮುಂತಾದುವುಗಳು ಗೋಚರವಾಗಬಹುದು. ಜೊತೆಗೆ ಕೆಲವು ಪದರಗಳ ವರ್ಣಛಾಯೆಗಳೂ ಸಹ ವಿಭಿನ್ನವಾಗಿದ್ದು ಮರಳಿನ ಮೂಲವೂ ಆಗಾಗ್ಗೆ ಬದಲಾಗುತ್ತಿತ್ತೆಂಬ ಅಂಶವೂ ಸ್ಪಷ್ಟವಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಎಲ್ಲ ಪದರಗಳ ಮರಳೂ ಅತೀ ಸೂಕ್ಷ್ಮ ಕಣಗಳಿಂದ ರಚನೆ ಯಾದಂಥವು. ಶುದ್ಧವಾದದ್ದು, ಮಾಲಿನ್ಯ ರಹಿತವಾದದ್ದು ಮತ್ತು ಗಾಳಿಯ ಪ್ರಕ್ರಿಯೆಯಿಂದಾಗಿ ಸ್ಥಳಪಲ್ಲಟವಾದದ್ದು.

**ಜೋಡಿಲಿಂಗ ದೇವಾಲಯ–ತಲಕಾಡು–X**

ಉತ್ತರ ತಲಕಾಡಿನಲ್ಲಿ ಈ ಹಿಂದೆ ಶೋಧಿಸಲಾಗಿದ್ದ ಜೈನ ಬಸದಿಯ ಅವಶೇಷಗಳಿಂದ ಸುಮಾರು ೧೩೫ ಮೀಟರ್ ಉತ್ತರಕ್ಕೆ ಜೋಡಿಲಿಂಗ ಎಂದು ಗುರುತಿಸಲಾಗುವ ಸ್ಥಳವಿದೆ. ಈ ಸ್ಥಳದಲ್ಲಿಯೂ ಸಹ ಹಿಂದಿನ ಕೆಲವು ಉತ್ಖನನಕಾರರು ಉತ್ಖನನ ನಡೆಸಿದ್ದರು. ಆದರೆ ಸೂಕ್ತ ವರದಿಯನ್ನು ಮಾತ್ರ ನೀಡಿರಲಿಲ್ಲ. ಪ್ರಸ್ತುತ ಸಾಲಿನಲ್ಲಿ ಮತ್ತೆ ಈ ಸ್ಥಳವನ್ನು ಸಮಗ್ರ ಶೋಧನೆಗೆ ಗುರಿಪಡಿಸಿ ಶೋಧಿಸಲಾಗಿ ಹಲವಾರು ಮಹತ್ವವಾದ ವಿವರಗಳು ಬೆಳಕಿಗೆ ಬಂದವು. ಈ ಉತ್ಖನನ ಗುಂಡಿಯನ್ನು ಪ್ರಸ್ತುತ ತಲಕಾಡು X ಎಂದು ಹೆಸರಿಸಲಾಗಿದೆ. ಜೋಡಿಲಿಂಗ ಎಂದು ಹೇಳಲಾಗುವ ಪ್ರದೇಶ. ನೀಲಗಿರಿ, ಹೊಂಗೆ ಹಾಗೂ ಇನ್ನಿತರ ಕಾಡು ಮರಗಳು, ಗಿಡ–ಗೆಂಟೆಗಳು ಬೆಳೆದಿರುವ ಪ್ರದೇಶ. ಈ ಸ್ಥಳದಲ್ಲಿ ಎರಡು ಲಿಂಗಗಳು, ಒಂದರ ಪಕ್ಕದಲ್ಲಿ ಒಂದು, ಸುಮಾರು ೧೫ ಮೀಟರ್ ಅಂತರ ಬಿಟ್ಟು ಕಾಣುತ್ತವೆ. ಇವೆರಡರಲ್ಲಿ ಉತ್ತರ ಭಾಗದ ಲಿಂಗದ ಸುತ್ತಲೂ ಉತ್ಖನನ ನಡೆಸಲಾಗಿತ್ತು. ದಕ್ಷಿಣ ಭಾಗದ ಲಿಂಗವನ್ನು ಮುಟ್ಟದೆ ಹಾಗೇ ಉಳಿಸಲಾಗಿದೆ. ಸುತ್ತಲೂ ಗಿಡಮರಗಳು ಹೆಚ್ಚಿಗೆ ಇರುವುದ ರಿಂದ ಈ ಪ್ರದೇಶವನ್ನು ಪ್ರಸ್ತುತ ಸಾಲಿನಲ್ಲಿಯೂ ಸಹ ಶೋಧನೆಗೆ ಒಳಪಡಿಸಲಾಗಲಿಲ್ಲ.

ಈ ಹಿಂದೆ ತೋಡಿದ್ದ ಉತ್ಖನನ ಗುಂಡಿಯನ್ನು ನೇರವಾಗಿ ಪೂರ್ವ–ಪಶ್ಚಿಮಾಭಿಮುಖವಾಗಿ ತೋಡಿರಲಿಲ್ಲ. ಬದಲಾಗಿ ಗುಡಿಯ ನೇರವನ್ನು ಅನುಸರಿಸಿ ಗುಂಡಿಯನ್ನು ರಚಿಸಲಾಗಿತ್ತು. ಆದ್ದರಿಂದ ದಿಕ್ಸೂಚಿಯ ನೇರಕ್ಕೂ ಗುಂಡಿಯ ನೇರಕ್ಕೂ ಸ್ವಲ್ಪ ವ್ಯತ್ಯಾಸವಿದೆ (ನೋಡಿ ರೇಖಾಚಿತ್ರ–೬). ದೇವಾಲಯ ಪೂರ್ವಾಭಿಮುಖವಾಗಿ ನಿರ್ಮಿತವಾಗಿದ್ದರೂ, ಸ್ವಲ್ಪಮಟ್ಟಿಗೆ ಆಗ್ನೇಯದ ಕಡೆಗೇ ತಿರುಗಿದೆ. ಇದು ಗುಡಿಯ

ನಿರ್ಮಾಣ ಕಾರ್ಯ ದಕ್ಷಿಣಾಯನದಲ್ಲಿ ಪ್ರಾರಂಭವಾಗಿರ ಬೇಕು ಎಂಬುದನ್ನು ಸೂಚಿಸುತ್ತದೆ. ಈ ದೇವಾಲಯ ಎಷ್ಟರಮಟ್ಟಿಗೆ ಹಾಳಾಗಿದೆ ಅಂದರೆ ಅದರ ನೆಲ ಭಾಗವನ್ನು ಸಹ ದುರಾತ್ಮರು ಅಗೆದು ನಾಶಮಾಡಿದ್ದಾರೆ. ಇಟ್ಟಿಗೆಯ ಅಧಿಷ್ಠಾನದ ಕೆಲವು ತುಣುಕುಗಳನ್ನು ಬಿಟ್ಟರೆ ಅಲ್ಲಿಂದ ಮೇಲೆ ಏನೂ ಉಳಿದಿಲ್ಲ. ಅಧಿಷ್ಠಾನದ ಕೆಳಗಿನ ಚಪ್ಪಡಿ (ಜನ್ಮನ್) ಮಾತ್ರ ಸುತ್ತಲೂ ನೀಟಾಗಿ ನಿಂತಿದೆ. (ರೇಖಾಚಿತ್ರ-೫). ಇದರಿಂದಾಗಿ ಗುಡಿಯ ವಿಸ್ತೀರ್ಣ ಮತ್ತು ಆಕಾರದ ಚಿತ್ರಣ ವನ್ನು ಪಡೆಯಬಹುದು. ಈ ಚಪ್ಪಡಿಯ ಮೇಲ್ಭಾಗದಲ್ಲಿ ಗುಡಿಯ ಅಧಿಷ್ಠಾನವನ್ನು ಇಟ್ಟಿಗೆ ಗಾರೆಯಿಂದ ನಿರ್ಮಿಸಿದ್ದರು. ಗುಡಿಯ ಒಳಭಾಗದಲ್ಲಿ ಹಾಗೂ ಗೋಡೆಗೆ ಆಸರೆಯಾಗಿ ಅಲ್ಲಲ್ಲಿ ಕಲ್ಲಿನ ಕಂಭಗಳಿದ್ದವು. ನೆಲಚಪ್ಪಡಿ ಹಾಸಿದ್ದರೋ ಇಲ್ಲವೋ ಅದೂ ತಿಳಿಯದು. ಏಕೆಂದರೆ ಅಲ್ಲಿ ಯಾವ ಚಪ್ಪಡಿಯ ತುಣುಕುಗಳೂ ಇಲ್ಲ. ನದಿಯ ಜಲ್ಲಿ ಕಲ್ಲುಗಳನ್ನು ಬಳಸಿ ಗಾರೆಯ ಕಾಂಕ್ರೀಟ್ ಮಾಡಿ ನೆಲವನ್ನು ಮಾಡಿದ್ದಾ ರೆಂದು ತೋರುತ್ತದೆ. ಏಕೆಂದರೆ ಈ ರೀತಿಯ ನದಿ ಜಲ್ಲಿ ಕಲ್ಲುಗಳು ಅಲ್ಲಿ ಹೇರಳವಾಗಿ ದೊರೆಯುತ್ತದೆ. ನೆಲದ ಕೆಳಭಾಗದಲ್ಲಿ ಉಪಯೋಗಿಸಿದ್ದ ಬುರುಡೆಗಲ್ಲುಗಳು ಸಂಮೃದ್ಧ ವಾಗಿ ಗುಡಿಯ ಒಳಭಾಗದ ನೆಲದಲ್ಲೆಲ್ಲಾ ಮೇಲಕ್ಕೆ ಎದ್ದಿವೆ. ಗರ್ಭಗೃಹದ ಉತ್ತರ ಗೋಡೆಯಿಂದ ಹೊರಕ್ಕೆ ಚಾಚಿದ್ದ ಪ್ರನಾಳ ಈಗ ಮೂರು ತುಂಡಾಗಿ ಅಲ್ಲೇ ಬಿದ್ದಿದೆ. ಗುಡಿಯ ನವರಂಗದ ಒಂದೆರಡು ಜಾಗಗಳಲ್ಲಿ ಕಂಬಗಳ ಪೀಠಗಳಾಗಿ ಉಪಯೋಗವಾಗಿದ್ದ ಒಂದೆರಡು ಚಪ್ಪಡಿಗಳು ಕಾಣಬರುತ್ತವೆ. ನವರಂಗದ ಭಾಗದಲ್ಲಿ ಒಂದು ಪಾಣಿಪೀಠ ಅನಾಥವಾಗಿ ಬಿದ್ದಿದೆ. ಇದು ಪ್ರಾಯಶಃ ಗುಡಿಯ ಉತ್ತರಕ್ಕೆ ಇದ್ದು ಈಗ ಸಂಪೂರ್ಣ ನಾಶವಾಗಿರುವ ಅಮ್ಮನವರ (ಪಾರ್ವತಿ) ಗುಡಿಯ ಮೂಲ ವಿಗ್ರಹದ ಪಾಣಿಪೀಠವಾಗಿದ್ದರೂ ಇರಬಹುದು. ಗುಡಿಯ ಮುಂಭಾಗದಲ್ಲಿ ಅದರ ಮುಖ ಮಂಡಪದ ದಕ್ಷಿಣಕ್ಕೆ ನೆಲದಲ್ಲಿ ಹುದುಗಿ ಹೋಗಿದ್ದ ಒಂದು ಲಿಂಗ ಕಂಡುಬಂದಿದೆ. ಮುಖ ಮಂಡಪದ ಮುಂಭಾಗದಲ್ಲಿ ಒಂದು ಸಣ್ಣ ಸುಂದರ, ನಿರಾಲಂಕೃತವಾದ ಕುಳಿತಿರುವ ನಂದಿಯ ಶಿಲ್ಪವೂ ದೊರೆತಿದೆ. (ಚಿತ್ರ -೬).

ಜೋಡಿ ಲಿಂಗದ ಗುಡಿ ಇಷ್ಟೆಲ್ಲಾ ನಾಶವಾಗಿದ್ದರೂ ಈ ಗುಡಿಯ ನಿರ್ಮಾಣದ ಲಕ್ಷಣಗಳನ್ನು ಶೋಧಿಸಿ ನೋಡಿದಾಗ ಕೆಲವು ಕುತೂಹಲಕಾರೀ ಅಂಶಗಳು ಬೆಳಕಿಗೆ ಬಂದವು. ಈ ಲಕ್ಷಣಗಳು ಆ ಕಾಲದಲ್ಲಿ ಶಿಲ್ಪಿಗಳು ಅನುಸರಿಸು ತ್ತಿದ್ದ ಕೆಲವು ಶಾಸ್ತ್ರೀಯ, ಕೆಲವು ಸ್ಥಳೀಯ ವಾಸ್ತು ನಿರ್ಮಾಣ ಪರಂಪರೆಯ ವಿವಿಧ ಮುಖಗಳನ್ನು ಪರಿಚಯ ಮಾಡಿ ಕೊಡುತ್ತವೆ. ಕಾಶ್ಯಪ ಶಿಲ್ಪಶಾಸ್ತ್ರ ಎಂಬುದು ದೇವಾಲಯ ವಾಸ್ತುವಿನ ನಿರ್ಮಾಣ ವಿಧಾನವನ್ನು ಪರಿಚಯಿಸುವ ಒಂದು ಸಮಗ್ರ ಗ್ರಂಥ.[೪] ಈ ಗ್ರಂಥ ಸಾಕಷ್ಟು ಪ್ರಾಚೀನವೂ ಹೌದು. ಈ ಗ್ರಂಥದ ಪ್ರಕಾರ ಹಲವಾರು ದೇವಾಲಯ ವಾಸ್ತು ನಿರ್ಮಾಣಗಳು ದಕ್ಷಿಣಭಾಗದಲ್ಲಿ ನಡೆದಿವೆ. ಈ ಗ್ರಂಥವನ್ನು ದೃಷ್ಟಿಯಲ್ಲಿಟ್ಟುಕೊಂಡು, ಜೋಡಿಲಿಂಗ ದೇವಾಲಯದಲ್ಲಿ ಅನುಸರಿಸಿರುವ ಮಾರ್ಗಗಳನ್ನೂ ಬದಲಾವಣೆಗಳನ್ನೂ, ಮಾಧ್ಯಮಗಳನ್ನೂ ಈಗ ಪರಿಶೀಲಿಸೋಣ.

| ಶ್ರೀ ಕಾಶ್ಯಪ ಶಿಲ್ಪಶಾಸ್ತ್ರ ನಿಯಮಗಳು | ಜೋಡಿ ಲಿಂಗ ಗುಡಿ (ಅನುಸರಣೆ) |
|---|---|
| ದೇವಾಲಯದ ಪಾಯದ ಗುಂಡಿ ೧-೨ ಮೀಟರ್ ಆಳ ಇರಬೇಕು. | ಪಾಯದ ಗುಂಡಿ ೧.೬೫ ಮೀಟರ್ ಇದೆ. |
| ಪಾಯದ ಗುಂಡಿ ಗುಡಿಯ ವಿಸ್ತೀರ್ಣಕ್ಕಿಂತ ಸುತ್ತಲೂ ೨ ಮೀಟರ್ ಅಗಲವಿರಬೇಕು. | ೨೦ ಸೆಂ.ಮೀ. ಮಾತ್ರ ಅಗಲವಾಗಿದೆ. |
| ಗುಂಡಿಯಲ್ಲಿ ಮೊದಲು ೩೦ ಸೆಂ.ಮೀ. ದಪ್ಪದ ಮರಳು ಹಾಸನ್ನು ಹಾಕಬೇಕು. | ೬ ಸೆಂ.ಮೀ. ಗಾತ್ರದ ಮರಳು ಹಾಸು, ನದಿ ಮೂಲದ ಕರಿ ಜೇಡಿ ಮಣ್ಣು ೮ ಸೆಂ.ಮೀ. ನದಿ ಜಲ್ಲಿ ಕಲ್ಲು ಮತ್ತು ಕರಿ ಜೇಡಿಯ ಮಿಶ್ರಣ ಸೆಂ.ಮೀ. (ನದಿ ಜಲ್ಲಿ ಮತ್ತು ಜೇಡಿಯ ಮಿಶ್ರಣದ ಪದರ ಕೇವಲ ಗರ್ಭಗೃಹದ ಭಾಗ ದಲ್ಲಿ ಮಾತ್ರ ಕೊಟ್ಟಿದ್ದಾರೆ. ಕಾರಣ ಈ ಭಾಗ ದಲ್ಲಿ ಶಿಖರದ ಹೆಚ್ಚಿನ ತೂಕ ಬೀಳುವುದರಿಂದ) |
| ಪಾಯದ ಗುಂಡಿಯ ಒಳಗೆ, ಮೇಲಿನ ಗುಡಿಯ ಗೋಡೆ ಗಳಿಗೆ ಅನುಸಾರವಾಗಿ, ಇಟ್ಟಿಗೆಯ ಗೋಡೆಯನ್ನು ಕಟ್ಟಬೇಕು | ಇಡೀ ಪಾಯದ ಗುಂಡಿಯನ್ನು ಸಂಪೂರ್ಣ ವಾಗಿ ಇಟ್ಟಿಗೆ ಚೂರು, ಜೇಡಿ ಮಣ್ಣು ಮಿಶ್ರಣ ದಿಂದ ೮೫ ಸೆಂ.ಮೀ. ವರೆಗೆ ತುಂಬಲಾಗಿದೆ. |

| ಶ್ರೀ ಕಾಶ್ಯಪ ಶಿಲ್ಪಶಾಸ್ತ್ರ ನಿಯಮಗಳು | ಜೋಡಿ ಲಿಂಗ ಗುಡಿ (ಅನುಸರಣೆ) |
| --- | --- |
| ಪಾಯದ ಗುಂಡಿಯ ಗೋಡೆಗಳ ಮಧ್ಯಭಾಗವನ್ನು ವಿವಿಧ ಗಾತ್ರದ ಬುರುಡೆಗಲ್ಲುಗಳಿಂದ ತುಂಬಬೇಕು. ಹೀಗೆ ತುಂಬುವಾಗ ಕೆಳಭಾಗದಲ್ಲಿ ದಪ್ಪ ಗಾತ್ರದ್ದು ಹಾಗೆಯೇ | ಇಡೀ ಪಾಯದ ಗುಂಡಿಯನ್ನು ಬುರುಡೆಗಲ್ಲುಗಳಿಂದ ತುಂಬಿ, ಮಧ್ಯ ಮಧ್ಯದ ಕಂಡಿಗಳನ್ನು ನದಿ ಜಲ್ಲಿ ಮತ್ತು ನದಿ ಜೇಡಿಯ ಮಿಶ್ರಣದಿಂದ |
| ಮೇಲೇರುತ್ತಾ ಸಣ್ಣ ಗಾತ್ರದ ಕಲ್ಲುಗಳನ್ನು ತುಂಬಬೇಕು.<br><br>ಪಾಯದ ಗೋಡೆಯ ಮೇಲೆ ಸುತ್ತಲೂ ಚಪ್ಪಡಿ ಹಾಸನ್ನು (ಜನ್ಮನ್) ಹಾಕಬೇಕು | ಭದ್ರವಾಗಿ ತುಂಬಿದ್ದಾರೆ. ಇದರ ಎತ್ತರ ೬೦ ಸೆಂ. ಮೀಟರ್.<br>ಚಪ್ಪಡಿ ಹಾಸನ್ನು ಪಾಯದ ವಲಯದಲ್ಲಿ ನೀಟಾಗಿ ಹಾಸಿದ್ದಾರೆ. |

(ಜೋಡಿ ಲಿಂಗ ದೇವಾಲಯ ಕೇವಲ ಜನ್ಮನ್ ಮಟ್ಟದವರೆಗೆ ಮಾತ್ರ ಮೂಲ ರೂಪದಲ್ಲಿ ಉಳಿದು ಬಂದಿರುವುದರಿಂದ ಇಲ್ಲಿಂದ ಮುಂದಿನ ನಿರ್ಮಾಣ ವಿಧಾನ ತಿಳಿಯಪಡಿಸುವ ಗೋಜಿಗೆ ಹೋಗಿಲ್ಲ)

ಶ್ರೀ ಕಾಶ್ಯಪ ಶಿಲ್ಪಶಾಸ್ತ್ರ ದೇವಾಲಯ ವಾಸ್ತು ನಿರ್ಮಾಣ ವಿಧಾನದ ಜೊತೆಗೆ ನಿರ್ಮಾಣದಲ್ಲಿ ಉಪಯೋಗಿಸಬೇಕಾದ ಸಾಮಗ್ರಿ ಹಾಗೂ ಅವುಗಳ ಗುಣಲಕ್ಷಣದ ಬಗ್ಗೆಯೂ ವಿವರಣೆಗಳನ್ನು ನೀಡುತ್ತದೆ. ಆದರೆ ಈ ಎಲ್ಲಾ ನಿಯಮಾವಳಿಗಳನ್ನೂ ಆ ಕಾಲದ ಶಿಲ್ಪಿಗಳೆಲ್ಲರೂ, ಎಲ್ಲ ಕಡೆಯೂ ಅನುಸರಿಸುತ್ತಿದ್ದರೆಂಬುದಕ್ಕೆ ಸಾಕ್ಷ್ಯಗಳಿಲ್ಲ. ಅಲ್ಲಲ್ಲಿ ಶಿಲ್ಪಿಗಳು ತಮಗೆ ಅನುಕೂಲವಾದ ರೀತಿಯಲ್ಲಿ ಹಾಗೂ ವಾಸ್ತು ಆಯಸ್ಸು, ಆರೋಗ್ಯಕ್ಕೆ ಧಕ್ಕೆಯಾಗದ ರೀತಿಯಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡಿಕೊಳ್ಳುತ್ತಿದ್ದಿರಬೇಕು. ಅಂತಹ ಒಂದು ನಿದರ್ಶನ ಪ್ರಸ್ತುತ ದೇವಾಲಯ ನಿರ್ಮಾಣ ಕಾರ್ಯದಲ್ಲಿ ಬೆಳಕಿಗೆ ಬಂದಿದೆ. ಈ ದೇವಾಲಯ ಚಿಕ್ಕದೂ ಹಾಗೂ ಆಗ ಕಡಿಮೆ ಖರ್ಚಿನಲ್ಲಿ ನಡೆಯಬೇಕಾಗಿದ್ದ ಕೆಲಸವಾಗಿದ್ದರಿಂದ ವಾಸ್ತುಶಾಸ್ತ್ರದ ಹಲವಾರು ನಿರ್ಮಾಣ ನಿಯಮಗಳನ್ನು ಬದಲಿಸಿದ್ದಾರೆ, ಅಥವಾ ಸರಳೀಕರಿಸಿದ್ದಾರೆ. ಆದರೆ ಗುಡಿಯ ನಿರ್ಮಾಣ ಕಾರ್ಯದಲ್ಲಿ ಮಾತ್ರ ಯಾವುದೇ ರೀತಿಯ ಕಳಪೆ ಕಾರ್ಯ ನಡೆದಿಲ್ಲ. ಏಕೆಂದರೆ ಈ ಗುಡಿ ಅದರ ಜೀವಿತದ ಅವಧಿಯಲ್ಲಿ ಚೆನ್ನಾಗಿಯೇ ಇದ್ದು, ಪುಂಡಾಟಿಕೆಯಿಂದ ನಾಮಾವಶೇಷವಾಗಿದೆಯೇ ಹೊರತು ಅದರಲ್ಲಿ ಬಳಸಿರುವ ಕಳಪೆ ವಸ್ತು ಅಥವಾ ಕಾರ್ಯದಿಂದಲ್ಲ.

ಈಗ ಗುಡಿಯ ನಿರ್ಮಾಣ ವಿಧಾನ ರೀತಿಗೆ ಬರುವುದಾದರೆ, ಕಟ್ಟಡದ ಪಾಯದ ಗುಂಡಿ ಸು. ೧.೫೦ ಮೀಟರ್ ಆಳವಿದೆ. ಹಾಗೂ ಈ ಗುಂಡಿ ಕಟ್ಟಡದ ವಿಸ್ತೀರ್ಣಕ್ಕಿಂತ ಕೇವಲ ಕೆಲವೇ ಅಂಗುಲಗಳಷ್ಟು ಸುತ್ತಲೂ ಅಗಲವಿದೆ. ಪಾಯದ ಗುಂಡಿಯು ಗರ್ಭಗೃಹದ ಭಾಗದಲ್ಲಿ ಮಾತ್ರ ಸುಮಾರು ೭೫ ಸೆಂ.ಮೀಟರಿನಷ್ಟು ಹೆಚ್ಚು ಆಳವಾಗಿದೆ. ಈ ಹೆಚ್ಚನ್ನು ಉದ್ದೇಶಪೂರ್ವಕವಾಗಿಯೇ ಮಾಡಿದ್ದಾರೆ. ಇದು ಈ ಭಾಗದಲ್ಲಿನ ವಿಮಾನ ಶಿಖರದ ಹೆಚ್ಚಿನ ಭಾರವನ್ನು ತಡೆಯುವುದಕ್ಕೋಸ್ಕರ ಮಾಡಿದ ಪೂರ್ವಯೋಜಿತ ರಕ್ಷಣಾ ಕ್ರಮ ಎನ್ನಬಹುದು. ಈ ಹೆಚ್ಚಿನ ಆಳವನ್ನು ಕಪ್ಪುವರ್ಣದ ನದಿ ಜೇಡಿ ಮತ್ತು ನದಿ ಜಲ್ಲಿ ಕಲ್ಲಿನ ಮಿಶ್ರಣದಿಂದ ತುಂಬಿದ್ದಾರೆ. ಈ ಕರಿ ನದಿ ಜೇಡಿ ಮಣ್ಣು ಗಟ್ಟಿಯಾದಾಗ ಗಾರೆ/ಸಿಮೆಂಟಿನಷ್ಟು ಗಟ್ಟಿಯಾಗುವಂತಹ ವಸ್ತು. ಇದರಲ್ಲಿ ಜಲ್ಲಿ ಕಲ್ಲುಗಳನ್ನು ಸೇರಿಸುವುದರಿಂದ ಈಗಿನ ಸಿಮೆಂಟ್ ಕಾಂಕ್ರೀಟಿನ ರೀತಿಯ ಗಟ್ಟಿ ತಳ ನಿರ್ಮಾಣವಾಗುತ್ತದೆ. ಈ ವಿಧಾನವನ್ನು ಪ್ರಾಚೀನ ತಲಕಾಡಿನ ಇನ್ನೂ ಕೆಲವಾರು ಕಟ್ಟಡಗಳಲ್ಲಿ ಬಳಸಿರುವುದು ಉತ್ಖನನಗಳಿಂದ ತಿಳಿದುಬರುತ್ತದೆ.

ಈ ಗಟ್ಟಿ ತಳದ ಜೇಡಿ ಮಣ್ಣಿನ ಹಾಸಿನ ಮೇಲೆ ಪಾಯದ ಗುಂಡಿಯ ಪೂರ್ತಿ ಸುಮಾರು ೮೫ ಸೆಂ.ಮೀಟರ್‌ನಷ್ಟು ಎತ್ತರವಾದ, ಮಣ್ಣು ಮತ್ತು ಇಟ್ಟಿಗೆ ಚೂರಿನ ಮಿಶ್ರಣವನ್ನು ಧಮ್ಮಸ್ಸು ಮಾಡಿ ತುಂಬಿದ್ದಾರೆ. ಇದರ ಮೇಲೆ ಮೂರು ವಿವಿಧ ಗಾತ್ರದ ಬುರುಡೆಗಲ್ಲಿನ ಹಾಸಿದೆ. ಈ ಬುರುಡೆಗಲ್ಲುಗಳ ಮಧ್ಯೆ ಮಧ್ಯೆ ಸಂದುಗಳನ್ನು ನದಿ ಜೇಡಿ ಮತ್ತು ನದಿ ಜಲ್ಲಿಗಳ ಮಿಶ್ರಣದಿಂದ ಭರ್ತಿಮಾಡಿದ್ದಾರೆ. ಈ ಬುರುಡೆಗಲ್ಲು ಹಾಸಿನ ಎತ್ತರ ಸು. ೬೦ ಸೆಂ.ಮೀಟರ್. ಇದರ ಮೇಲೆ ಪಾಯದ ಸುತ್ತಲೂ ಚಪ್ಪಡಿಯ ಹಾಸನ್ನು (ಜನ್ಮನ್) ಕೂರಿಸಿದ್ದಾರೆ. ಇಲ್ಲಿ ಬಳಸಿರುವ ಚಪ್ಪಡಿಯ ಹಾಸಿನ ಎತ್ತರ ೩೨ ಸೆಂ.ಮೀ. ಚಪ್ಪಡಿಗಳನ್ನು ಅದರ ಹೊರಮುಖಗಳಲ್ಲಿ ಮಾತ್ರ ನೀಟಾಗಿ ಸಮ ಮಾಡಿ ಉಳಿದಂತೆ ಉಬ್ಬುತಗ್ಗುಗಳನ್ನು ಹಾಗೆಯೇ ಉಳಿಸಿದ್ದಾರೆ.

ಜನ್ಮನ್ ಮೇಲೆ ಕಟ್ಟಡದ ಅಧಿಷ್ಠಾನ ಇಟ್ಟಿಗೆಯಲ್ಲಿ ನಿರ್ಮಿತವಾಗಿದೆ. ಆದರೆ ಇದು ಅದರ ಆಕೃತಿ ತಿಳಿಯುವುದಕ್ಕಾಗದಷ್ಟರ ಮಟ್ಟಿಗೆ ನಾಶವಾಗಿದೆ. ಆದರೂ ಸಹ ಅಲ್ಲಲ್ಲಿ ಉಳಿದಿರುವ ಅವಶೇಷಗಳಿಂದಾಗಿ ಇಟ್ಟಿಗೆ ನಿರ್ಮಾಣದ ಕೆಲವು ಸ್ವಾರಸ್ಯಕರ ಅಂಶಗಳನ್ನು ಇಲ್ಲಿ ಗಮನಿಸಬಹುದು. ಇಟ್ಟಿಗೆಗಳನ್ನು ಅಚ್ಚುಕಟ್ಟಾಗಿ ತಯಾರಿಸಿದ್ದಾರೆ. ಇವುಗಳನ್ನು

ಚೆನ್ನಾಗಿ ಸುಟ್ಟಿದ್ದಾರೆ. ಇಷ್ಟು ಶತಮಾನಗಳು ಕಳೆದರೂ ಅವುಗಳು ಇನ್ನೂ ಚೆನ್ನಾಗಿಯೇ ಇವೆ. ಇಟ್ಟಿಗೆಗಳೆಲ್ಲವೂ ಒಂದೇ ಅಳತೆಯುಳ್ಳವುಗಳಲ್ಲ. ಅಳತೆಗಳಲ್ಲಿ ಬಹಳಷ್ಟು ವ್ಯತ್ಯಾಸಗಳಿವೆ. ಪಕ್ಕ-ಪಕ್ಕದ ಇಟ್ಟಿಗೆಗಳಲ್ಲೇ ಅಳತೆ ವ್ಯತ್ಯಾಸಗಳನ್ನು ಕಾಣಬಹುದು. ಅವುಗಳ ಉದ್ದ ೩೭ ರಿಂದ ೩೩ ಸೆಂ.ಮೀಟರ್‌ಗಳವರೆಗೂ, ಅಗಲ ೨೦ ½ ಇಂದ ೧೬ ಸೆಂ.ಮೀಟರ್‌ವರೆಗೂ, ಎತ್ತರ ೭ ರಿಂದ ೫ ½ ಸೆಂ.ಮೀಟರ್ ವರೆಗೂ ವ್ಯತ್ಯಾಸವಾಗುತ್ತ ಹೋಗುತ್ತದೆ. ಕೆಲವೊಂದರ ಅಳತೆಯನ್ನು ಮಾತ್ರ ಇಲ್ಲಿ ಕೊಡಲಾಗಿದೆ.

35x20x6 ½ , 34x19x7 , 35x21x7 ½ , 37x20 ½ x –, 36x16x5 ½

ಇಟ್ಟಿಗೆಗಳನ್ನು ಅಚ್ಚುಕಟ್ಟಾಗಿ, ಕ್ರಮ ಬದ್ಧವಾಗಿ ವರಸೆಗಳಲ್ಲಿ ಕೂಡಿಸಿ ಕಟ್ಟಿದ್ದಾರೆ. ನಿರ್ಮಾಣಕ್ಕಾಗಿ ಗಾರೆಯನ್ನು ಬಳಸಿದ್ದಾರೆ. ಕೆಲವು ಕಡೆಗಳಲ್ಲಿ ಕೆಳಗಿನ ಹಾಸುಕಲ್ಲಿನ ಮಟ್ಟ ಅಸಮವಾಗಿದ್ದರೆ, ವರಸೆಯ ಮಟ್ಟವನ್ನು ಕಾಪಾಡುವುದಕ್ಕೋಸ್ಕರ ಹೆಚ್ಚಿನ ಗಾರೆಯನ್ನು ಬಳಸಿದ್ದಾರೆ. ಅಥವಾ ಕೆಲವೆಡೆ ಇಟ್ಟಿಗೆಗಳನ್ನು ಗೋಡಿಯಾಗಿ ನಿಲ್ಲಿಸಿದ್ದಾರೆ. ಕಟ್ಟಡವನ್ನು ಗಾರೆಯಿಂದ ಗಿಲಾವ್ ಮಾಡಿದ್ದರು. ಹೆಚ್ಚಿನ ಅಲಂಕರಣವನ್ನು ಮಾಡಿದ್ದ ಸೂಚನೆಗಳೂ ದೊರಕಿವೆ.

ಈ ಮುಂಚೆಯೇ ತಿಳಿಸಿದಂತೆ ಕಟ್ಟಡ ನೆಲಮಟ್ಟದವರೆಗೆ ನಾಶವಾಗಿದೆ. ಒಳಗಿನ ನೆಲವನ್ನೂ ಸಹ ಅಗೆದು ಹಾಳು ಮಾಡಿದ್ದಾರೆ. ನೆಲವನ್ನು ಗಾರೆ ಮತ್ತು ಹೊಳೆ ಜಲ್ಲಿಕಲ್ಲುಗಳಿಂದ ನಿರ್ಮಿಸಿದಂತೆ ತೋರುತ್ತದೆ. ಒಳಭಾಗ ಚಿಕ್ಕದಾಗಿರುವುದರಿಂದ ಕಂಬಗಳ ಅವಶ್ಯಕತೆ ಇರಲಿಲ್ಲ. ಆದರೂ ಕಂಬದ ಆಸರೆಗಾಗಿ ಕೂರಿಸಿದ್ದ ಒಂದೆರಡು ಚಪ್ಪಡಿಗಳು ದೊರೆತಿರುವುದರಿಂದ ಕಂಬಗಳ ಉಪಯೋಗವೂ ಆಗಿತ್ತೆಂದು ತೋರಿಬರುತ್ತದೆ. ನೆಲವನ್ನು ಅಗೆದ ನಂತರ, ಪುಂಡರು, ಪಾಯದ ಗುಂಡಿಯ ಬುರುಡೆ ಗಲ್ಲುಗಳನ್ನು ಸಹ ಅಗೆದು ಮೇಲಿರಿಸಿದ್ದಾರೆ.

ದೇವಾಲಯದ ಭಿತ್ತಿಯ ತುಣುಕುಗಳಿಂದಾಗಿ ಅದರ ವಲಯವನ್ನು ಗುರುತಿಸಲು ಸಾಧ್ಯವಾಗಿದೆ. ಇದರಿಂದ ತಿಳಿದು ಬರುವ ಕೆಲವಂಶಗಳೆಂದರೆ ದೇವಾಲಯವು ತಳವಿನ್ಯಾಸದಲ್ಲಿ ಒಂದು ಚಿಕ್ಕ ಗರ್ಭಗೃಹ (೩ X ೩ ಮೀಟರ್), ಒಂದು ಆಯತಾಕಾರದ ನವರಂಗ (೬.೫ X ೪ ಮೀಟರ್) ಮತ್ತು ಚಿಕ್ಕದಾದ ಒಂದು ಮುಖಮಂಡಪ (೩ X ೨ ಮೀಟರ್) ಗಳನ್ನು ಹೊಂದಿತ್ತೆಂದು ಹೇಳಬಹುದು. ದೇವಾಲಯವನ್ನು ಸಂಪೂರ್ಣ ಇಟ್ಟಿಗೆಯಿಂದ ಕಟ್ಟಿದ್ದರು. ಇಟ್ಟಿಗೆಗಳ ಜೋಡಣೆಗಾಗಿ ಸುಣ್ಣದ ಗಾರೆಯನ್ನು ಬಳಸಿದ್ದರು. ಆದರೆ ಅಲಂಕರಣೆಯ ವಿಚಾರವಾಗಿ ಏನೂ ತಿಳಿಯದು. ಗಾರೆಯಿಂದ ಗಿಲಾವ್ ಮಾಡಿ, ಸೂಕ್ತ ವಾಸ್ತು ಮತ್ತು ಶಿಲ್ಪ ಅಲಂಕರಣೆಗಳನ್ನು ಅಲ್ಲಲ್ಲಿ ಕೂರಿಸಿದ್ದಿರಬೇಕು. ಗೋಡೆಯ ಗಾತ್ರ ಒಂದು ಮೀಟರ್‌ನಷ್ಟಿದೆ. ಇದರಿಂದಾಗಿ ಕಲ್ಲು ಚಪ್ಪಡಿಯ ಛಾವಣಿ ಗುಡಿಗೆ ಇದ್ದಿರಬಹುದು.

ತಳವಿನ್ಯಾಸದ ಮತ್ತೊಂದು ಸ್ವಾರಸ್ಯಕರ ಸಂಗತಿಯೆಂದರೆ, ಗುಡಿಯ ಪಾಯದ ಸುತ್ತಲೂ ಸುಮಾರು ೮೦ ಸೆಂ.ಮೀ. ದೂರದಲ್ಲಿ ಕಾಡುಗಲ್ಲುಗಳ ಒಂದು ಸಾಲನ್ನು ನೆಲದಲ್ಲಿ ಹುದುಗಿದ್ದಾರೆ. ಇದು ಪ್ರಾಯಶಃ ಗುಡಿಯ ಗೋಡೆಯ ಸುತ್ತಲೂ, ಪಾಯಕ್ಕೆ ನೀರು ಇಳಿಯದಂತೆ ಮಾಡಲು ಹಾಸಿದ್ದ ಚಪ್ಪಡಿಯ ಆಸರೆಗಾಗಿ ಕೂರಿಸಿದಂತೆ ತೋರುತ್ತದೆ. ಈ ವಿನ್ಯಾಸವನ್ನು ಈಗಿನ ವಾಸ್ತುವಿನಲ್ಲಿ 'ಫ್ಲ್ಯಾಗಿಂಗ್' ಎಂದು ಕರೆಯುತ್ತಾರೆ. ಗರ್ಭಗೃಹದ ಉತ್ತರ ಗೋಡೆಯ ಹೊರಮುಖದ ಮಧ್ಯಭಾಗದಲ್ಲಿ ಒಂದು ಸಣ್ಣ, ಇಟ್ಟಿಗೆ ನಿರ್ಮಿತ ತೊಟ್ಟಿ ಕಂಡು ಬಂದಿದೆ. ಇದರ ಮೇಲ್ಗಡೆ ಮುರಿದಿರುವ ಪ್ರನಾಳದ ಮುಂಭಾಗವೂ ಇದೆ. ಈ ತೊಟ್ಟಿ, ಗರ್ಭಗೃಹದಿಂದ ಪ್ರನಾಳದ ಮೂಲಕ ಹೊರಕ್ಕೆ ಬಂದ ನೀರು ಶೇಖರಣೆಗಾಗಿ ಎಂಬುದು ಸ್ಪಷ್ಟ. ಈ ತೊಟ್ಟಿಯೂ ಸಹ ಬಹಳ ದುಸ್ಥಿತಿಯಲ್ಲಿದೆ.

ದೇವಾಲಯದ ಉತ್ತರ ದಿಕ್ಕಿನಲ್ಲಿ ಸುಮಾರು ಮೂರು ಮೀಟರ್ ಅಂತರ ಬಿಟ್ಟು, ಅಮ್ಮನವರ ಗುಡಿಯನ್ನು ಕಟ್ಟಿದ್ದರು. ಇಟ್ಟಿಗೆ ಗಾರೆ ನಿರ್ಮಿತ ಈ ಗುಡಿ ವಿಪರೀತ ದುಸ್ಥಿತಿಯಲ್ಲಿದೆ. ಗರ್ಭಗೃಹ ಮತ್ತು ನವರಂಗ ಮಾತ್ರ ಹೊಂದಿದ್ದು ಈ ಗುಡಿ ವಿಜಯನಗರ ಕಾಲದ ನಿರ್ಮಿತಿ ಎಂಬುದಂತೂ ಸತ್ಯ. ಏಕೆಂದರೆ ಈ ಮುಂಚೆ ಪ್ರತ್ಯೇಕ ಅಮ್ಮನವರ ಗುಡಿ ಕಟ್ಟುವ ಸಂಪ್ರದಾಯ ಅಪರೂಪವಾಗಿತ್ತು.

ದೇವಾಲಯದ ಆವರಣದಲ್ಲಿ ಯಾವುದೇ ಶಿಲ್ಪದ ಸುಳಿವಿಲ್ಲ, ನಂದಿಯ ಮೂರ್ತಿಯೊಂದನ್ನು ಬಿಟ್ಟು. ಮೂಲ ಗುಡಿಯ ಮುಖಮಂಡಪದ ಮುಂಭಾಗದಲ್ಲಿ ಅನಾಥವಾಗಿ ಬಿದ್ದಿದ್ದ ಈ ನಂದಿಯ ಶಿಲ್ಪ ಚಿಕ್ಕದಾದರೂ ಕೆತ್ತನೆಯಲ್ಲಿ ಬಹಳ ಚೊಕ್ಕದಾಗಿದೆ. ಪುಟಾಣಿ ಹೋರಿ ಕರುವಿನ ರೀತಿಯಲ್ಲಿ ಕಂಡರಣೆ ಆಗಿರುವ ಈ ನಂದಿಗೆ ಯಾವುದೇ ರೀತಿಯ ಅಲಂಕರಣೆಯಾಗಲೀ, ಆಭರಣವಾಗಲೀ ಇಲ್ಲ. ಸಂಪೂರ್ಣ ಸರಳವಾಗಿದೆ, ನಗ್ನವಾಗಿದೆ, ಈ ಶಿಲ್ಪ, ತೆಳುವಾದ ಕಲ್ಲಿನ ಪೀಠವಿದೆ. ಈ ಶಿಲ್ಪಕ್ಕೆ ಸರಳತೆ, ನೈಜತೆಗಳೇ ಸೌಂದರ್ಯವನ್ನು ಹೆಚ್ಚಿಸಿದೆ. ಈ ಲಕ್ಷಣಗಳ ಆಧಾರದ ಮೇಲೆ ಈ ನಂದಿ ಶಿಲ್ಪವನ್ನು ಕ್ರಿ.ಶ. ೯ನೇ ಶತಮಾನಕ್ಕೆ ಸೇರಿಸಬಹುದು. ಇದೇ ಕಾಲವನ್ನು ಮೂಲಗುಡಿಗೂ ಸಹ ಅನ್ವಯಿಸಬಹುದು.

## ತಲಕಾಡು ಗುಂಡಿ – XI ದೊಡ್ಡತೋಪು

ಕೀರ್ತಿನಾರಾಯಣ ದೇವಾಲಯದ ಉತ್ತರಕ್ಕೆ ಸುಮಾರು ಒಂದು ಕಿ.ಮೀ. ದೂರದಲ್ಲಿ ಈ ಹಿಂದೆ ಉತ್ಖನನ ನಡೆಸಿದ ಕೆಲವು ಸಂಶೋಧಕರು ದೊಡ್ಡತೋಪು ಎಂದು ಕರೆಯಲ್ಪಡುವ ಸ್ಥಳದಲ್ಲಿ ಉತ್ಖನನ ನಡೆಸಿ, ಪ್ರಾಚೀನವಾದ ಇಟ್ಟಿಗೆಯ ಕಟ್ಟಡದ ಸ್ವಲ್ಪ ಭಾಗವನ್ನು ಬಿಡಿಸಿ ಕೆಲಸವನ್ನು ಅರ್ಧಕ್ಕೆ ಮುಕ್ತಾಯಗೊಳಿಸಿದ್ದರು. ಇದರ ವರದಿಯನ್ನೂ ಸಹ ತಯಾರು ಮಾಡಲಿಲ್ಲ. ಏಳೆಂಟು ವರ್ಷಗಳು ಅನಾಥವಾಗಿ ಬಿದ್ದಿದ್ದ ಈ ಉತ್ಖನನ ಗುಂಡಿಗಳಲ್ಲಿ ಗಿಡಗೆಂಟೆಗಳು ಸಂಮೃದ್ಧವಾಗಿ ಬೆಳೆದಿತ್ತು. ಪ್ರಸ್ತುತ ವರ್ಷದಲ್ಲಿ ಈ ಉತ್ಖನನ ಗುಂಡಿಯ ಮರು ಪರಿಶೀಲನೆ ಹಾಗೂ ವಿಸ್ತೃತ ಉತ್ಖನನ ಕಾರ್ಯವನ್ನು ಕೈಗೊಂಡು, ಒಂದು ವಿಶಾಲವಾದ ಹಾಗೂ ತೀರಾ ನಾಶವಾದ ಕಟ್ಟಡವೊಂದರ ಹಲವಾರು ಸ್ವಾರಸ್ಯಕರ ವಿವರಗಳನ್ನು ಬೆಳಕಿಗೆ ತರಲಾಗಿದೆ.

ಈ ಹಿಂದೆ ಇದೇ ಸ್ಥಳದಲ್ಲಿ ನಾಲ್ಕಾರು ಉತ್ಖನನ ಗುಂಡಿಗಳನ್ನು ತೋಡಲಾಗಿತ್ತು. ಅವುಗಳಲ್ಲಿ ಪ್ರಾಚೀನ ಕಟ್ಟಡವೊಂದರ ಅವಶೇಷಗಳು ಲಭ್ಯವಾಗಿದ್ದವು. ಇಟ್ಟಿಗೆಯಿಂದ ಈ ಕಟ್ಟಡ ಕಟ್ಟಿದ್ದರು. ಕೆಲವೆಡೆ ನೆಲಕ್ಕೆ ಕಲ್ಲು ಹಾಸಿತ್ತು. ಇಟ್ಟಿಗೆಯ ನಿರ್ಮಾಣ, ಒಂದು ಭಾಗದಲ್ಲಿ ಅಧಿಷ್ಠಾನದ ಮೇಲ್ಮಟ್ಟದವರೆಗೂ ಕಾಣಿಸುತ್ತಿತ್ತು. ಇವಿಷ್ಟು ಈ ಮುಂಚಿನ ಉತ್ಖನನದಿಂದ ಕಂಡು ಬಂದ ಅಂಶಗಳಾಗಿದ್ದವು. ಪ್ರಸ್ತುತ ಉತ್ಖನನದಲ್ಲಿ ಉತ್ಖನನ ಗುಂಡಿಗಳನ್ನು ಎಲ್ಲಾ ದಿಕ್ಕು ಗಳಲ್ಲಿಯೂ ವಿಸ್ತರಿಸಿ ಹೆಚ್ಚು ಆಳದವರೆಗೂ ಅಗೆದದ್ದರಿಂದ ಅನೇಕ ಸ್ವಾರಸ್ಯಕರ ವಾಸ್ತು ವಿವರಗಳು ಲಭ್ಯವಾದವು. (ಚಿತ್ರ ೭)

ಕಟ್ಟಡವನ್ನು ಒಂದು ಕಾಲದಲ್ಲಿ ಜನವಸತಿ ಇಲ್ಲದಿದ್ದ ಪ್ರದೇಶವೊಂದರಲ್ಲಿ ಹೊಸದಾಗಿ ನಿರ್ಮಿಸಲಾಗಿತ್ತು. ದೀರ್ಘಾವಧಿಯ ನಂತರ ಕಟ್ಟಡ ನಾಶವಾಗಿ, ಆ ಸ್ಥಳದಿಂದ ಸ್ಥಳೀಯರು ಸಂಪೂರ್ಣವಾಗಿ ಬುಡಮಟ್ಟದವರೆಗೂ ಇಟ್ಟಿಗೆ ಹಾಗೂ ಇತರೆ ಕಟ್ಟಡ ಸಾಮಗ್ರಿಗಳನ್ನು ಅಗೆದು ತೆಗೆದು ಕೊಂಡು ಹೋದರು. ಹೀಗಾಗಿ ಕಟ್ಟಡದ ಇಟ್ಟಿಗೆಯ ಪುಡಿ, ಮಣ್ಣು ಇತ್ಯಾದಿ ವಸ್ತುಗಳು ಅಲ್ಲಿ ಚೆಲ್ಲಾಪಿಲ್ಲಿಯಾಗಿ ಹರಡಿ ಬಿದ್ದಿದ್ದವು. ನಾಶವಾದ ಕಟ್ಟಡದ ಸ್ಥಳದ ಮೇಲೆ ಯಾವುದೇ ಜನವಸತಿ ಮುಂದುರೆಯಲಿಲ್ಲ. ಕ್ರಮೇಣ ಆ ಭಾಗ ಕ್ರಿ.ಶ. ೧೭ನೇ ಶತಮಾನದ ಮಧ್ಯಭಾಗದಲ್ಲಿ ತಲಕಾಡು ಮರಳುರಾಶಿಗೆ ಆಹುತಿಯಾದಾಗ ಈ ಸ್ಥಳವೂ ಸಹ ಮರಳಿನಿಂದಾವೃತವಾಯಿತು. ಆದರೆ ಈ ಭಾಗದಲ್ಲಿ ಎಲ್ಲೆಡೆ ಮರಳು ಶೇಖರಣೆ ಕಡಿಮೆ ಪ್ರಮಾಣದಲ್ಲಿರುವುದರಿಂದ ಕೇವಲ ೧–೨ ಅಡಿಗಳಷ್ಟು ಮಾತ್ರ ಮರಳು ಈ ಕಟ್ಟಡ ಭಾಗದಲ್ಲಿ ಶೇಖರಣೆಗೊಂಡಿತು.

ಪ್ರಸ್ತುತ ಉತ್ಖನನದಲ್ಲಿ ಕಟ್ಟಡದ ಸಂಪೂರ್ಣ ಸ್ವರೂಪವನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಹೀಗೆ ಏಕೆ ಹೇಳುತ್ತಿದ್ದೇವೆಂದರೆ ಕಟ್ಟಡದ ಬಹಳಷ್ಟು ಲಕ್ಷಣಗಳು ಊಹೆಗೆ ಬಿಟ್ಟದ್ದವಾಗಿದೆ. ಆದರೆ ಈ ಊಹೆಗಳಿಗೆ, ಅನುಮಾನಗಳಿಗೆ ಸಾಕಷ್ಟು ಸಾಂದರ್ಭಿಕ ಆಧಾರಗಳು ದೊರೆತಿವೆ. ಕಟ್ಟಡ, ತಳವಿನ್ಯಾಸದಲ್ಲಿ ಒಂದು ಚೌಕಾಕಾರದ ಮಂಡಪ. (ಚಿತ್ರ–೭) ಇದರ ಮುಂಭಾಗದಲ್ಲಿ ಒಂದು ಮುಖ ಮಂಡಪವೂ ಇದ್ದಿರಬೇಕು. ಉತ್ಖನನ ನಡೆಸಲಾಗಿರುವ ಭಾಗ ಅತೀ ಕಡಿಮೆ. ಉತ್ಖನನ ನಡೆಸಬೇಕಾಗಿರುವ ಪ್ರದೇಶ ಇನ್ನೂ ಬಲು ವಿಸ್ತಾರವಾಗಿದೆ. ಹೀಗಾಗಿ ಕಟ್ಟಡ ಸ್ವರೂಪ ಇಂಥದ್ದೇ, ಅದರ ಉದ್ದೇಶ ಇದೇ ಆಗಿತ್ತು ಎಂದು ನಿಖರವಾಗಿ ಹೇಳುವುದು, ಸಧ್ಯದ ಪರಿಸ್ಥಿತಿಯಲ್ಲಿ ಕಷ್ಟ.

ಏನೇ ಆಗಿರಲಿ, ಕಟ್ಟಡದ ಸ್ವಾರಸ್ಯಕರ ವಿವರಗಳು ಹೀಗಿವೆ. ಕಟ್ಟಡವನ್ನು ಇಟ್ಟಿಗೆ, ಗಾರೆ, ಕಲ್ಲು, ಮರ, ಹೆಂಚುಗಳನ್ನು ಬಳಸಿ ನಿರ್ಮಿಸಿದ್ದರು. ಇಟ್ಟಿಗೆಗಳನ್ನು ಮಣ್ಣುಗಾರೆಯಿಂದ ಜೋಡಿಸಿದ್ದರು. ಕೊನೆಯಲ್ಲಿ ಸುಣ್ಣದ ಗಾರೆಯಿಂದ ಗಿಲಾವ್ ಮಾಡಿದ್ದರು. ಭಾರಿ ಮರದ ಕಂಬಗಳನ್ನು ನಿಲ್ಲಿಸಿ, ಅವುಗಳ ಹಾಗೂ ಗೋಡೆಗಳ ಆಧಾರದ ಮೇಲೆ ಭಾವಣಿಯನ್ನು ಕೂರಿಸಿದ್ದರು. ಮೇಲೆ ಹೆಂಚನ್ನು ಹೊದಿಸಿದ್ದರು. ಮರದ ಜೋಡಣೆಗಾಗಿ ವಿವಿಧ ರೀತಿಯ ಕಬ್ಬಿಣದ ಪಟ್ಟಿಗಳು, ಮೊಳೆಗಳು, ಬೋಲ್ಟ್‌ಗಳು, ಕ್ಲಾಂಪ್‌ಗಳು ಇತ್ಯಾದಿ ಹೇರಳವಾಗಿ ಬಳಸಿದ್ದರು. ಈ ರೀತಿ ವಸ್ತುಗಳಿಂದ ಕಟ್ಟಿದ ಕಟ್ಟಡ ಒಂದು ವಿಶಾಲ ಮಂಡಪವಾಗಿತ್ತು. ಈ ಮಂಡಪ ದುರ್ದೈವದಿಂದ ಬೆಂಕಿಗೆ ಆಹುತಿಯಾಯಿತು. ಕಟ್ಟಡ ಸಂಪೂರ್ಣ ನಾಶವಾಯಿತು. ನಾಶವಾದ ಈ ಕಟ್ಟಡದ ಭಾಗ ಯಾವುದೇ ವಸತಿಗಾಗಿ ಪುನರ್ವಿನಿಯೋಗವಾಗಲಿಲ್ಲ. ನಾಶವಾದ ಕಟ್ಟಡದ ಎಲ್ಲಾ ಇಟ್ಟಿಗೆ ಕಲ್ಲು ಇತ್ಯಾದಿ ವಸ್ತುಗಳನ್ನು ಕಳ್ಳರು, ಪುಂಡರು ನಿರ್ಮಾಣ ಸಾಮಗ್ರಿಗಾಗಿ ಖಾಲಿ ಮಾಡಿದರು. ಇದು ಈ ಸ್ಥಳದಲ್ಲಿ ನಡೆದಿದೆ ಎಂದು ಸ್ಥೂಲವಾಗಿ ಹೇಳುವ ವಿಚಾರ. ಇನ್ನು ಈ ಎಲ್ಲಾ ಅಂಶಗಳ ವಿವರಗಳಿಗೆ ಬರೋಣ.

ಕಟ್ಟಡದ ಬಹುತೇಕ ಭಾಗ, ಪ್ರಥಮೇಷ್ಟಕದವರೆಗೆ, ಅಂದರೆ ತಳಪಾಯದ ಅತ್ಯಂತ ಕೆಳಗಿನ ಇಟ್ಟಿಗೆಯವರೆಗೆ ಖಾಲಿಯಾಗಿದೆ. ಆದರೂ ತಳಪಾಯದ ಆಕಾರವನ್ನು ತಿಳಿಯಲು ಸಾಧ್ಯವಾಗಿದೆ. ಹೇಗೆಂದರೆ ಅದು ತಳಪಾಯದ ಗುಂಡಿಯ ರಚನಾವಿಧಾನ. ಕಟ್ಟಡದ ವಿಸ್ತೀರ್ಣದ ಆಕಾರದಲ್ಲಿ, ಅದರ ವಿಸ್ತೀರ್ಣಕ್ಕಿಂತ ಸುಮಾರು ೫–೧೦ ಸೆಂ.ಮೀ. ಅಗಲವಾಗಿ ಪಾಯದ ಗುಂಡಿಯನ್ನು ತೋಡಿದ್ದಾರೆ. ಈ ಗುಂಡಿ ಆ ಪ್ರದೇಶದ ಕನ್ನೈನೆಲದಲ್ಲಿ ತೋಡಿರುವ ಗುಂಡಿ.

ಈ ಪ್ರದೇಶದಲ್ಲಿ ಮಂಚೆ ಯಾವುದೇ ಜನವಸತಿ ಇರಲಿಲ್ಲ. ಸ್ವಾಭಾವಿಕವಾದ, ತಿಳಿ ಹಳದಿ ಬಣ್ಣದ, ಮರಳು ಮಿಶ್ರಿತ ಜೇಡಿ ಮಣ್ಣಿನ ನೆಲ ಅದು. ಅಲ್ಲಿ ಕಟ್ಟಡಕ್ಕೆ ಸರಿಹೊಂದುವಂತೆ ಪಾಯದ ಗುಂಡಿಯನ್ನು ಒಂದು ಮೀಟರ್ ಆಳದವರೆಗೂ ತೋಡಿ ಮತ್ತೆ ಆ ಗುಂಡಿಯಲ್ಲಿ ಮಣ್ಣನ್ನು ತುಂಬಿ ಗಟ್ಟಿ ಮಾಡಿದ್ದಾರೆ. ಹಾಗೆ ತುಂಬುವಾಗ ಒಂದು ಪದರ (ಅಂದರೆ ಸುಮಾರು ೧೦-೨೦ ಸೆಂ.ಮೀ) ಕರೀ ಬಣ್ಣದ ನದೀ ಜೇಡಿ ಮಣ್ಣು (ಇದರಲ್ಲಿ ನದೀ ಜಲ್ಲಿ ಮಿಶ್ರಿತವಾಗಿದೆ) ಮತ್ತೊಂದು ಪದರ ಪಾಯದ ಗುಂಡಿಯಿಂದಲೇ ತೆಗೆದ ಹಳದೀ ಜೇಡಿ ಮಣ್ಣು. ಹೀಗೆ ಪದರ-ಪದರವಾಗಿ ತುಂಬಿದ್ದಾರೆ. ಮೂಲ ನೆಲಮಟ್ಟವನ್ನು ತಲುಪಿದ ನಂತರ ಅದರ ಮೇಲೆ ಕಟ್ಟಡದ ವಿನ್ಯಾಸಕ್ಕೆ ಅನುಗುಣವಾಗಿ ದಪ್ಪವಾದ ಪಾಯದ ಗೋಡೆಯನ್ನು ಇಟ್ಟಿಗೆಯಿಂದ ನಿರ್ಮಿಸಿದ್ದಾರೆ. ಈ ನಿರ್ಮಾಣ ಅಷ್ಟೊಂದು ಬಿಗಿಯಾಗಿಲ್ಲ. ಪಾಯದ ಗೋಡೆಯ ಮೇಲೆ, ಅಧಿಷ್ಠಾನದ ಗೋಡೆಯನ್ನು ಸುಭದ್ರವಾಗಿ ನಿರ್ಮಿಸಿ, ಗಾರೆಯಿಂದ ಗಿಲಾವ್ ಮಾಡಿದ್ದರು. ಈ ರೀತಿ ನಿರ್ಮಾಣವಾದ ಪಾಯದ ಗೋಡೆ ಒಂದರೊಳಗೊಂದರ ಎರಡು ಚೌಕಗಳಾಗಿದ್ದವು. ಎರಡೂ ಚೌಕದ ಗೋಡೆಗಳ ನಡುವಣ ಅಂತರವನ್ನು ಮಣ್ಣಿನಿಂದ ತುಂಬಿ ಭರ್ತಿ ಮಾಡಿದ್ದರು. ಹೀಗೆ ಭರ್ತಿ ಮಾಡುವುದಕ್ಕೆ ಮುಂಚೆ, ಪಾಯದ ಮಧ್ಯದ ಚೌಕದ ಮಧ್ಯಭಾಗದಲ್ಲಿ, ವೃತ್ತಾಕಾರವಾದ ಒಂದು ವಾಸ್ತು ಮಂಡಲವನ್ನು ನಿರ್ಮಿಸಿದ್ದರು. (ಚಿತ್ರ-೮) ಈ ರೀತಿಯ ವಾಸ್ತು ಮಂಡಲ ಪ್ರಾಚೀನ ಕಟ್ಟಡವೊಂದರಲ್ಲಿ, ಅದರಲ್ಲೂ ಉತ್ಖನನದಲ್ಲಿ ದೊರೆತಿರುವುದು ಇದೇ ಮೊದಲ ಬಾರಿಗೆ ಯಾದುದರಿಂದ ಈ ಸಂಶೋಧನೆಗೆ ಹೆಚ್ಚಿನ ಮಹತ್ವವುಂಟು.

ಈ ವಾಸ್ತು ಚಕ್ರ ಇಟ್ಟಿಗೆಯಿಂದ ನಿರ್ಮಿತವಾಗಿದೆ, ವೃತ್ತಾಕಾರವಾಗಿದೆ. ಕೇವಲ ಒಂದೇ ಒಂದು ವರಸೆಯನ್ನು ಮಾತ್ರ ಹೊಂದಿದೆ. ಪಾಯದ ಪ್ರಥಮೇಷ್ಟಕಗಳ ಮಟ್ಟದಲ್ಲಿ ಈ ವಾಸ್ತು ಮಂಡಲ ನಿರ್ಮಾಣವಾಗಿದೆ. ವೃತ್ತಾಕಾರವಾಗಿ, ಸಾಧಾರಣವಾದ ಇಟ್ಟಿಗೆಗಳನ್ನೆ ಇಟ್ಟಿದ್ದಾರೆ. ಈ ವೃತ್ತದ ಹೊರವಲಯದ ಇಟ್ಟಿಗೆಗಳ ಸಂಖ್ಯೆ ೨೦. ಮಧ್ಯದ ಭಾಗದಲ್ಲಿ ಪೂರ್ಣ ಹಾಗೂ ಮುರುಕು ಇಟ್ಟಿಗೆಗಳನ್ನು ಇಟ್ಟಿದ್ದಾರೆ. ಉಳಿದ ಭಾಗವನ್ನು ಭರ್ತಿಮಾಡಿದ್ದಾರೆ. ಈ ವಾಸ್ತು ಮಂಡಲವನ್ನು ಅಗೆದು ತೆಗೆದು ನೋಡಿದಾಗ ಅತ್ಯಂತ ಮೇಲ್ಮಟ್ಟದಲ್ಲಿ ನದೀ ಮರಳು ಮತ್ತು ನದೀ ಜಲ್ಲಿಯ ಮಿಶ್ರಣದ ಒಂದು ಪದರ ಮಾತ್ರ ಇತ್ತು. ಇದರಲ್ಲಿ ದೊರೆತ ಒಂದೇ ಒಂದು ಮಾನವ ರಚಿತ ವಸ್ತುವೆಂದರೆ, ಮಡಿಕೆಯ ಮುಚ್ಚಳವೊಂದರ ಗುಬುಟು ಹಿಡಿ ಮಾತ್ರ. ಇದೂ ಸಹ ಸಾಧಾರಣವಾದ ಒಂದು ಗುಬುಟು ಹಿಡಿ ಮಾತ್ರವೇ ಹೊರತು ಇದರಲ್ಲಿ ವಿಶೇಷತೆ ಏನೂ ಕಂಡುಬರಲಿಲ್ಲ.

ಈ ರೀತಿಯ ವಾಸ್ತು ಮಂಡಲವನ್ನು, ಪಾಯದ ಗುಂಡಿಯ ಮಧ್ಯದ ಚೌಕದ ಮಧ್ಯದಲ್ಲಿ ನಿರ್ಮಿಸಿ, ಅದರ ಮೇಲೆ ಮಣ್ಣನ್ನು ತುಂಬಿದ್ದರು. ಈ ರೀತಿ ಮುಚ್ಚಿದ ಪಾಯದ ಗುಂಡಿಗೆ ಅದರ ಉತ್ತರ-ದಕ್ಷಿಣ ಗೋಡೆಗಳ ಮಧ್ಯಭಾಗದಲ್ಲಿ, ಎರಡೆರಡು ಗುಂಡಿಗಳನ್ನು ಸ್ವಲ್ಪ ಅಂತರ ಬಿಟ್ಟು ತೋಡಿ, ಈ ಗುಂಡಿಗಳಲ್ಲಿ ದಪ್ಪವಾದ ಹಾಗೂ ಎತ್ತರವಾದ ಮರದ ಕಂಬಗಳನ್ನು ನಿಲ್ಲಿಸಿದ್ದರು. ಈ ಕಂಬಗಳಿಗೆ ಸಮಾನಾಂತರ ವಾಗಿ, ಪಾಯದ ಮಧ್ಯದ ಚೌಕಗೋಡೆಯ ನಾಲ್ಕು ಮೂಲೆಗಳಲ್ಲಿ ಗುಂಡಿಗಳನ್ನು ತೋಡಿ, ನಾಲ್ಕು ಬೃಹತ್ತಾದ ಮರದ ಕಂಬಗಳನ್ನು ನಿಲ್ಲಿಸಿದ್ದರು. ಈ ರೀತಿ ಕಂಬಗಳನ್ನು ನಿಲ್ಲಿಸಿದ ನಂತರ ಪೂರ್ವ ಪಶ್ಚಿಮ ಮುಖಗಳಲ್ಲಿ ಹಾಗೂ ಅವುಗಳಿಗೆ ಸನಿಹದ ಉತ್ತರ-ದಕ್ಷಿಣ ಭಾಗದ ಪಾಯದ ಗೋಡೆಯ ಮೇಲೆ, ಅಧಿಷ್ಠಾನವನ್ನು ಇಟ್ಟಿಗೆಯಿಂದ ನಿರ್ಮಿಸಿ, ಅದರ ಮೇಲೆ ಇಟ್ಟಿಗೆಯಿಂದ ಭಿತ್ತಿಯನ್ನು ನಿರ್ಮಿಸಿದ್ದರು. ಉತ್ತರ-ದಕ್ಷಿಣ ಮುಖಗಳಲ್ಲಿ ನಿಲ್ಲಿಸಿದ್ದ ಮರದ ಕಂಭಗಳ ನಡುವಣ ಭಾಗವನ್ನು, ಗಾಳಿ ಬೆಳಕಿಗಾಗಿ, ಮರದ ಜಾಲಂಧ್ರ ಗಳಿಂದ ಮುಚ್ಚಿದ್ದರು.

ಅಧಿಷ್ಠಾನದ ರಚನೆಯಲ್ಲಿ, ಅದರ ಹೊರಮುಖದಲ್ಲಿ ಎತ್ತರವಾದ ಜಗತಿ, ಗಳ, ತ್ರಿಪಟ್ಟಕುಮುದ ಮತ್ತು ಪ್ರತಿ ಇವಿಷ್ಟನ್ನೂ ಇಟ್ಟಿಗೆಯಲ್ಲಿ ನೀಟಾಗಿ ರಚಿಸಿದ್ದರು. ಇದರ ಮೇಲಿನ ಭಿತ್ತಿಯ ಭಾಗ ಸಂಪೂರ್ಣ ಅದೃಶ್ಯವಾಗಿದೆ. ಭಿತ್ತಿಯ ಏರು ವಿನ್ಯಾಸದಲ್ಲಿ ಉತ್ತರ ದಕ್ಷಿಣ ಮುಖಗಳ ಮಧ್ಯದ ಅಂಕಣದಲ್ಲಿ ಮರದ ಜಾಲಂಧ್ರಗಳು, ಅದಕ್ಕೆ ಹೊಂದಿ ಕೊಂಡಂತೆ ಎರಡೂ ಪಾರ್ಶ್ವಗಳಲ್ಲಿ ಎತ್ತರವಾದ, ದಪ್ಪವಾದ ಮರದ ಕಂಭಗಳು ಇದ್ದವು. ಪಾರ್ಶ್ವದ ಎರಡಂಕಣಗಳು ಇಟ್ಟಿಗೆ ಗೋಡೆಯಿಂದ ಆವೃತವಾಗಿದ್ದವು. ಮರದ ಕಂಬಗಳು ಇದ್ದುದಕ್ಕೆ, ಆ ಸ್ಥಳಗಳಲ್ಲಿ ಕಂಬದ ಗುಂಡಿಗಳಿವೆ. ಉಳಿದಂತೆ ಗೋಡೆ ಇದ್ದುದಕ್ಕೆ, ಪಾಯದ ಹಾಗೂ ಅಧಿಷ್ಠಾನದ ಗೋಡೆಯ ಅವಶೇಷಗಳಿವೆ. ಈ ಅಧಿಷ್ಠಾನ ಸಂಪೂರ್ಣ ರೂಪದಲ್ಲಿ ಮಂಡಪದ ವಾಯುವ್ಯ ಮೂಲೆಯಲ್ಲಿ ಮಾತ್ರ ದೊರೆತಿದೆ.

ಈ ರೀತಿಯಲ್ಲಿ ನಿರ್ಮಿಸಿದ ಕಟ್ಟಡದ ಆಕೃತಿ ಚೌಕಾಕಾರ ವಾದ ಮಂಡಪವಾಗಿತ್ತು. ಅದರ ಮಧ್ಯದಲ್ಲಿ ನಾಲ್ಕು ಮರದ ಕಂಬಗಳು, ಇವೆಲ್ಲವೂ ಮಂಡಪಕ್ಕೆ ಮಧ್ಯದ ಒಂದು ಚೌಕ ಅಂಕಣ. ಸುತ್ತಲೂ ಓಡಾಡಲೂ ಕಿರಿದಾದ ಒಂದು ಹಾದಿಯನ್ನು ಒದಗಿಸಿತ್ತು. ಪೂರ್ವ, ಪಶ್ಚಿಮ ಹಾಗೂ ನಾಲ್ಕು ಉಪದಿಕ್ಕುಗಳ ಮೂಲೆಗಳು ಗೋಡೆಗಳಿಂದಾವೃತವಾಗಿದ್ದವು.

ಉತ್ತರ ಮತ್ತು ದಕ್ಷಿಣದ ಮುಖಗಳ ಮಧ್ಯಭಾಗಗಳು ವಿಶಾಲ, ಮರದ ಜಾಲಂಧ್ರಗಳಿಂದ ಕೂಡಿದ್ದವು. ಮಂಡಪಕ್ಕೆ ಪೂರ್ವದಿಕ್ಕಿನಲ್ಲಿ ಪ್ರವೇಶದ್ವಾರ ಮತ್ತು ಆ ದ್ವಾರಕ್ಕೆ ಮುಂದೆ ಮುಖಮಂಡಪಗಳಿದ್ದ ಸೂಚನೆಗಳಿವೆ.

ಈ ರೀತಿ ಏರು ವಿನ್ಯಾಸವಿದ್ದ ಮಂಡಪಕ್ಕೆ ಮೇಲ್ಛಾವಣಿ ಮರದ ಕಟ್ಟು ಮತ್ತು ಹೆಂಚುಗಳಿಂದ ನಿರ್ಮಾಣವಾಗಿತ್ತು. ಉತ್ಖನನದಲ್ಲಿ ಅಪಾರ ಸಂಖ್ಯೆಯಲ್ಲಿ ಹೆಂಚಿನ ಚೂರುಗಳು ದೊರೆತಿವೆ. ಅಲ್ಲದೆ ವಿಶಾಲಮರದ ಕಟ್ಟನ್ನು ನಿರ್ಮಿಸಲು, ಜೋಡಿಸಲು, ಕೂಡಿಸಲು ಬಳಸಿದ ಕಬ್ಬಿಣದ ಮೊಳೆಗಳು, ಗೂಟಗಳು, ಕ್ಲಾಂಪ್‌ಗಳು, ಪಟ್ಟಿಕೆಗಳು, ರಿವೆಟ್‌ಗಳು, ಇತ್ಯಾದಿ, ಸಹ ಸಾಕಷ್ಟು ಸಂಖ್ಯೆಯಲ್ಲಿ ದೊರೆತಿವೆ. ಛಾವಣಿಯ ನಿರ್ಮಾಣದಲ್ಲೂ ಸಹ ಒಂದು ವಿಶೇಷತೆ ಇದ್ದಿರಬಹುದೆಂಬ ಅನಿಸಿಕೆ ಉತ್ಖನನಕಾರರಲ್ಲಿ ಮೂಡಿದೆ. ಅದೇನೆಂದರೆ ಈ ಮರದ ಹೆಂಚಿನ ಛಾವಣಿಯ ಮಧ್ಯದ ಅಂಕಣ, ಇನ್ನೂ ಸ್ವಲ್ಪ ಮೇಲಕ್ಕೆ ಏರಿ, ಸುತ್ತಲೂ, ಗಾಳಿ ಬೆಳಕಿಗಾಗಿ ಜಾಲಂಧ್ರಗಳು ಇದ್ದಿರಬಹುದು. ಏಕೆಂದರೆ ಈ ರೀತಿಯ ವಿನ್ಯಾಸ ಬಾದಾಮಿ ಚಾಲುಕ್ಯರ ಹಲವಾರು ಕಲ್ಲಿನ ದೇವಾಲಯಗಳಲ್ಲಿ ಕಂಡು ಬರುತ್ತದೆ. ಪ್ರಸ್ತುತ ಮಂಡಪದ ಕಾಲ, ವಿನ್ಯಾಸಗಳನ್ನು ಗಮನಿಸಿದಾಗ ಈ ಮಂಡಪವೂ ಸಹ ಆ ಕಾಲದ ಕಲ್ಲಿನ ಮಂಡಪಗಳ, ಪೂರ್ವರೂಪಿಯಾದ ಮರದ ಮಂಡಪಗಳ ಮಾದರಿಯಲ್ಲಿತ್ತೇ ಎಂದೆನಿಸುತ್ತದೆ. ಇದು ನಿಜವಾದ ಪಕ್ಷದಲ್ಲಿ, ಛಾವಣಿಯ ಮಧ್ಯದ ಅಂಕಣವನ್ನು ಇನ್ನೂ ಒಂದು ಮೀಟರ್ ಮೇಲಕ್ಕೆ ಏರಿಸಿ, ಸುತ್ತಲಿನ ಛಾವಣಿಗೂ, ಮಧ್ಯದ ಛಾವಣಿಯ ಕೆಳಂಚಿಗೂ ನಡುವಿನ ಜಾಗದಲ್ಲಿ, ಮರದ ಜಾಲಂಧ್ರಗಳನ್ನು ಕೂಡಿಸಿದ್ದಿರಬಹುದು. ಮಧ್ಯದ ಛಾವಣಿಗೆ ನಾಲ್ಕೂ ದಿಕ್ಕುಗಳಿಗೆ ಇಳಿಜಾರನ್ನು ಕಲ್ಪಿಸಿ, ಅದರಂತೆಯೇ ಸುತ್ತಲಿನ ಛಾವಣಿಗಳನ್ನು ಇಳಿಜಾರಾಗಿ ರೂಪಿಸಿದ್ದಿರಬಹುದು. ಈ ರೀತಿಯ ಒಂದು ಮಂಡಪ ಐಹೊಳೆಯ ಲಾಡ್‌ಖಾನ್ ದೇವಾಲಯದ, ಮರದ ಪೂರ್ವರೂಪಿ ಮಂಡಪ ಎಂದು ಕಲ್ಪಿಸಿಕೊಳ್ಳಲಾಗಿರುವ, ಮಂಡಪಕ್ಕೆ ಹಾಗೂ ಅದರ ಛಾವಣಿಯ ವಿನ್ಯಾಸಕ್ಕೂ ಬಹು ಸಮೀಪ ಮಾದರಿ ಎನಿಸಿಕೊಳ್ಳುತ್ತದೆ. ಇದೇ ರೀತಿಯ ದೇಶೀ ಇಟ್ಟಿಗೆ–ಮರದ ಮಾದರಿಗಳು ನಂತರದ ಕಲ್ಲಿನ ದೇವಾಲಯಗಳಿಗೆ ನಾಂದಿಯಾದವು ಎಂಬುದನ್ನು ಇಲ್ಲಿ ಸ್ಮರಿಸಬೇಕು.

ಈ ಮಂಡಪದ ನಿರ್ಮಾಣ ಉದ್ದೇಶ ಏನಿರಬಹುದು ಎಂಬ ಪ್ರಶ್ನೆ ಈಗ ಉದ್ಭವವಾಗುವುದು ಸಹಜ. ಮಂಡಪದ ಒಳಗಿನ ವಿವರಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಈ ಪ್ರಶ್ನೆಗೆ ಸ್ವಲ್ಪ ಮಟ್ಟಿನ ಸಮಂಜಸ ಉತ್ತರ ದೊರೆಯುತ್ತದೆ. ಮಂಡಪದ ಮಧ್ಯದ ಅಂಕಣದ ಭಾಗದಲ್ಲಿ ಕಲ್ಲಿನ ಹಾಸಿತ್ತೆಂಬ ಅಂಶ ಉತ್ಖನನದಿಂದ ಬೆಳಕಿಗೆ ಬಂದಿದೆ. ಅರ್ಧಂಬರ್ಧವಾಗಿ ನಡೆದಿದ್ದ ಮುಂಚಿನ ಉತ್ಖನನದಲ್ಲಿ ಕಲ್ಲಿನ ಹಾಸು ಸ್ವಲ್ಪಭಾಗ ಕಂಡಿತ್ತು. ಪ್ರಸ್ತುತ ಉತ್ಖನನದಿಂದಾಗಿ ಅದರ ಪೂರ್ಣ ಸ್ವರೂಪದ ಅರಿವಾಗಿದೆ. ಈ ಕಲ್ಲಿನ ಹಾಸು ಬಹಳಷ್ಟು ನಾಶವಾಗಿದೆ. ಆದರೂ ಇದರ ಪೂರ್ಣ ಸ್ವರೂಪವನ್ನು, ಅದರ ನಿರ್ಮಾಣ ಉದ್ದೇಶ ಮತ್ತು ಅದರ ಕಾರ್ಯ ಏನಿತ್ತು ಎಂಬುದನ್ನು ತಿಳಿಯಲು ಸಾಧ್ಯವಾಗಿದೆ. ಈ ಮುಂಚೆ ತಿಳಿಸಿದಂತೆ ಈ ಮಂಡಪದ ಮಧ್ಯದಂಕಣದ, ಮಧ್ಯದಲ್ಲಿ, ಪಾಯದಡಿಯಲ್ಲಿ ಒಂದು ಇಟ್ಟಿಗೆ ನಿರ್ಮಿತ ಚಕ್ರಾಕಾರದ ವಾಸ್ತುಮಂಡಲ ದೊರೆಯಿತೆಂದು ಹೇಳಿದೆ. ವಾಸ್ತು ಚಕ್ರದಿಂದಾಗಿ ಈ ಮಧ್ಯದಂಕಣ ಧಾರ್ಮಿಕವಾಗಿ ವಿಶೇಷವಾದ ಸ್ಥಾನವಾಗಿತ್ತು. ಅದಕ್ಕಾಗಿ ಈ ಅಂಕಣವು ಚಪ್ಪಡಿಗಳ ಹಾಸಿನಿಂದ ಕೂಡಿತ್ತು. ಚಪ್ಪಡಿಯ ಹಾಸು ಅರ್ಧಂಬರ್ಧ ನಾಶವಾಗಿದೆ. ಆದರೂ ಅಳಿದುಳಿದಿರುವ ಹಾಸಿನ ಎರಡು ಚಪ್ಪಡಿಗಳು ವಿಶೇಷವಾದ ಕುರುಹನ್ನು ಹೊಂದಿವೆ. ಅವೆಂದರೆ ಅವುಗಳ ಮೇಲ್ಭಾಗದಲ್ಲಿ ಮಾಡಿರುವ ಸ್ವಲ್ಪ ಆಳದ, ಆಯತಾಕಾರದ ಕೊರೆತ ಅಥವಾ ಗಾಡಿ. ಈ ಕೊರೆತವುಳ್ಳ ಚಪ್ಪಡಿಗಳು, ಸ್ವಲ್ಪ ಅಂತರಬಿಟ್ಟು, ಒಂದೇ ಅಕ್ಷದಲ್ಲಿ ಪೂರ್ವ–ಪಶ್ಚಿಮವಾಗಿ ಇವೆ. ಈ ಎರಡು ಚಪ್ಪಡಿಗಳಲ್ಲಿ, ಪಶ್ಚಿಮದ ಚಪ್ಪಡಿಯ ಕೊರೆತದಲ್ಲಿ ಭದ್ರವಾಗಿ ಜಡಿದು ಬಿಗಿಪಡಿಸಿದ ಕಬ್ಬಿಣದ ಹಲ್ಲೆಯೊಂದು ದೊರೆಯಿತು. ಈ ಕಬ್ಬಿಣದ ಹಲ್ಲೆ, ಕೊರೆತದ ಅರ್ಧಭಾಗವನ್ನು ಮಾತ್ರ ಆವರಿಸಿತ್ತು. ಕೊರೆತದ ಉಳಿದ ಭಾಗ ಖಾಲಿ ಇತ್ತು.

ಇದರಿಂದ ತಿಳಿದು ಬರುವ ಅಂಶವೆಂದರೆ ಈ ಎರಡೂ ಕೊರೆತಗಳು ಯಾವುದೋ ಒಂದು ಮರದ ಮಂಡಪದ/ಪೀಠದ ಕಾಲುಗಳನ್ನು ಭದ್ರವಾಗಿ ನೆಲದ ಮೇಲೆ ಕೂಡಿಸಲು ಮಾಡಿದ ಕೊರೆತಗಳು. ಮರದ ಕಾಲುಗಳನ್ನು ಇವುಗಳಲ್ಲಿ ಇಳಿಸಿ, ಉಳಿದ ಭಾಗಕ್ಕೆ ಅದಕ್ಕಿಂತ ಸ್ವಲ್ಪ ದೊಡ್ಡದಾದ ಕಬ್ಬಿಣದ ಹಲ್ಲೆಯನ್ನು ಬಲವಾಗಿ ಜಡಿದರೆ, ಮಂಡಪದ ಪೀಠದ ಕಾಲುಗಳು ಸ್ವಲ್ಪವೂ ಅಲ್ಲಾಡದಂತೆ, ಜರುಗದಂತೆ ಸುಸ್ಥಿರವಾಗಿ ನಿಲ್ಲುತ್ತದೆ. ಮಂಡಪ/ಪೀಠಕ್ಕೆ ನಾಲ್ಕು ಕಾಲುಗಳು ಇರಲೇಬೇಕು. ಹೀಗಾಗಿ ಉಳಿದೆರಡು ಕಾಲುಗಳ ಸ್ಥಾನ ಯಾವುದು ಎಂಬ ಪ್ರಶ್ನೆ ಬರುತ್ತದೆ. ಉಳಿದೆರೆಡು ಕಾಲುಗಳು ಇದ್ದ ನೆಲದ ಪ್ರದೇಶ ಈಗ ಸಂಪೂರ್ಣವಾಗಿ ನಿರ್ನಾಮವಾಗಿದೆ. ಆದರೆ ಉಳಿದಿರುವ ಈ ಎರಡು ಕುರುಹುಗಳಿಂದ ಮಂಡಪ/ಪೀಠದ ವಿಸ್ತೀರ್ಣ ತಿಳಿಯಲು ಸಾಕು. ಇದು ಪ್ರಾಯಶಃ ೩ಮೀಟರ್ ಉದ್ದ ೨ಮೀಟರ್ ಅಗಲ ಇದ್ದಿರಲೂ ಸಾಕು. ಮಂಡಪದ ಹಿಂಭಾಗ ಅಂದರೆ ಪಶ್ಚಿಮದ ಭಾಗದಲ್ಲಿ, ಪಾಯದ ಗೋಡೆಯಲ್ಲಿ ಹಲವಾರು ಕಂಬ–ಗುಂಡಿಗಳಿವೆ. ಈ ಗುಂಡಿಗಳಲ್ಲಿ ಮಧ್ಯದ ಗುಂಡಿ ಅತ್ಯಂತ ಪ್ರಧಾನ. ಇದು

ಪ್ರಾಯಶಃ ಮಂಡಪದ ಹಿಂಭಾಗದ ಮಧ್ಯದಲ್ಲಿದ್ದ ಛತ್ರಯಷ್ಠಿಗಾಗಿ ಇದ್ದರೂ ಇರಬಹುದು. ಉಳಿದ ಪಾರ್ಶ್ವದ ಗುಂಡಿಗಳು ಮಂಡಪದ ಕಂಬಗಳಿಗಾಗಿ ಇರಬಹುದು.

ಮಂಡಪದ ಹಿಂಭಾಗದಲ್ಲಿ ಸರಿಯಾಗಿ ಬರುವಂತೆ ಪಾಯದ ಗುಂಡಿಯಲ್ಲಿನ ಒಂದು ಗೋಡೆಯಿದೆ. ಈ ಗೋಡೆ ಸುತ್ತಲಿನ ಗೋಡೆಗಳಷ್ಟು ದಪ್ಪವಾಗಿಲ್ಲ. ಆದ್ದರಿಂದ ಒಂದು ಸಾಧಾರಣವಾದ ಪರದೆಗೋಡೆ ನಿರ್ಮಾಣಕ್ಕೆ ಮಾಡಿದ ಪಾಯದ ಗೋಡೆ ಇರಬೇಕು. ಈ ಪರದೆ ಗೋಡೆ ಮಂಡಪದ ಹಿಂಭಾಗದಲ್ಲಿ ಸು.೮೦ಸೆಂ.ಮೀ.ನಷ್ಟು ಹಿಂದಕ್ಕೆ ಇದೆ. ಇದರ ಪಶ್ಚಿಮಕ್ಕೆ ಮಧ್ಯದಂಕಣದ ಸುತ್ತಲಿನ ಪಥ ಮುಂದುವರೆಯುತ್ತದೆ.

ಈ ರೀತಿಯಲ್ಲಿ ಒಂದು ೯ X ೧೨ ಮೀಟರ್ ವಿಸ್ತೀರ್ಣದ ಒಂದು ದೊಡ್ಡದಾದ ಮಂಡಪವನ್ನು ನಿರ್ಮಿಸಿದ್ದರು. ಅದರ ಮಧ್ಯದಲ್ಲಿ ನಾಲ್ಕು ಮೂಲೆಗಳಲ್ಲಿ ಒಂದೊಂದು ಕಂಬಗಳಿರುವ ೪ X ೪ ಮೀಟರ್ ವಿಸ್ತೀರ್ಣದ ಅಂಕಣವಿತ್ತು. ಅಂಕಣದ ಸುತ್ತಲೂ ೨ಮೀಟರ್ ವಿಸ್ತೀರ್ಣದ ಪ್ರದಕ್ಷಿಣ ಪಥವಿತ್ತು. ಮಧ್ಯದಂಕಣದ ಕಲ್ಲು ಹಾಸಿನ ಮೇಲೆ ಒಂದು ಮರದ ಮಂಡಪ/ಪೀಠವಿತ್ತು. ಈ ಮಂಡಪಕ್ಕೆ ಛತ್ರಯಷ್ಠಿ, ಮೂಲೆಗಳಲ್ಲಿ ಕಂಭಗಳು ಇದ್ದುವು. ಹಜಾರದ ಕಂಬಗಳು ಮತ್ತು ಮಂಡಪದ ಉತ್ತರ–ದಕ್ಷಿಣ ಗೋಡೆಗಳಲ್ಲಿನ ಜಾಲಂಧ್ರಗಳು ಮತ್ತು ಅವುಗಳ ಪಾರ್ಶ್ವದ ಕಂಬಗಳು ಮರದ ಕಂಬಗಳಾಗಿದ್ದವು. ಈ ಕಂಬಗಳು ಬೃಹದಾಕಾರವಾಗಿದ್ದು ಅವುಗಳ ಗಾತ್ರ ಸುಮಾರು ೬೦–೮೦ ಸೆಂಮೀಟರ್‌ಗಳಷ್ಟಿದ್ದು ಎತ್ತರ ೧೦ ರಿಂದ ೧೫ ಅಡಿಗಳಷ್ಟಿದ್ದಿರಬೇಕು. ಮಧ್ಯದಂಕಣದ ಮೇಲ್ಛಾವಣಿಯಲ್ಲಿ ಜಾಲಂಧ್ರಗಳು ಇದ್ದವು. ಮೇಲ್ಛಾವಣಿ ಮರದ ಕಟ್ಟಿನ ಮೇಲೆ ನಿಂತಿದ್ದ ಹೆಂಚಿನ ಛಾವಣಿಯಾಗಿತ್ತು.

ಇಷ್ಟು ಸುಂದರವಾಗಿ ನಿರ್ಮಿತವಾಗಿದ್ದ ಮಂಡಪದ ಕಾಲ ಯಾವುದು ಎಂಬುದರ ಬಗ್ಗೆ ಸ್ಪಷ್ಟ ಮಾಹಿತಿಗಳು ದೊರೆತಿಲ್ಲ. ಸಾಂದರ್ಭಿಕ ಆಧಾರದ ಮೇಲೆ ಈ ಮಂಡಪದ ನಿರ್ಮಾಣ ಕಾಲ ಕ್ರಿ.ಶ.೫ನೇ ಶತಮಾನಗಳಿರಬಹುದೆಂಬುದು ಒಂದು ಊಹೆ ಮಾತ್ರ. ಈ ಊಹೆಗೆ ಆಧಾರಗಳೆಂದರೆ ಮಂಡಪದ ನಿರ್ಮಾಣ ವಿಧಾನ, ವಾಸ್ತು ವಿನ್ಯಾಸ, ಲಕ್ಷಣ, ಮುಂತಾದವು ಇವುಗಳೆಲ್ಲವೂ ಐಹೊಳೆಯ ಲಾಡ್‌ಖಾನ್ ದೇವಾಲಯದ ಪೂರ್ವರೂಪೀ ಮರದ ಮಾದರಿಗೆ ಸರಿಸಮನಾಗಿತ್ತೆಂದು ಉತ್ಖನನದಲ್ಲಿ ದೊರೆತ ಆಧಾರಗಳಿಂದ ಊಹಿಸಬಹುದಾಗಿದೆ. ಉತ್ಖನನದಲ್ಲಿ ದೊರೆತ ಮತ್ತೊಂದು ಮುಖ್ಯ ಆಧಾರವೆಂದರೆ, ಮಂಡಪದ ಮಧ್ಯದಂಕಣದ ಚಪ್ಪಡಿಯ ಹಾಸಿನಡಿಗೂ ಮತ್ತು ಕೆಳಗಿನ ವಾಸ್ತು ಚಕ್ರದ ಮೇಲ್ಗಡೆ, ಸುಮಾರು ಮಧ್ಯದಲ್ಲಿ ಅಚ್ಚುಕಟ್ಟಾಗಿ ಕೂರಿಸಲ್ಪಟ್ಟಂತೆ ದೊರೆತ ಒಂದು ಮಣ್ಣಿನ ಪಾತ್ರೆ. ಈ ಮಣ್ಣಿನಪಾತ್ರೆ ಆದಿ-ಚಾರಿತ್ರಿಕ ಯುಗದ ಕಪ್ಪು ಮತ್ತು ಕೆಂಪು ವರ್ಣದ ಮಣ್ಣಿನ ಜಾಡಿ (ಚಿತ್ರ–೯). ಇದರ ಹೊರಮುಖದಲ್ಲಿ ಬಿಳಿ ಸುದ್ದೆ ಮಣ್ಣಿನಲ್ಲಿ ಮಾಡಿದ ಗೆರೆಗಳ ಅಲಂಕರಣವಿದೆ. ಇದನ್ನು ಪುರಾತತ್ವಜ್ಞರು 'ರಸೆಟ್ ಕೋಟೆಡ್ ಕವಲಿಯನ್ ಪೇಯಿಂಟೆಡ್ ಬ್ಲಾಕ್ ಅಂಡ್ ರೆಡ್ ವೇರ್' ಎಂದು ಕರೆಯುತ್ತಾರೆ. ಇದು ದಕ್ಷಿಣ ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿ ದೊರೆಯುವ ಅತಿ ಸಾಮಾನ್ಯವಾದ ಮಡಿಕೆಯ ವಿಧ. ಇದರ ಕಾಲಮಾನ ಕ್ರಿ.ಶ.ದ ಪ್ರಾರಂಭದಿಂದ ಹಿಡಿದು ನಾಲ್ಕನೆಯ ಶತಮಾನದವರೆಗೆ ಎಂದು ಪುರಾತತ್ವಜ್ಞರ ಅಭಿಪ್ರಾಯ. ಈ ವಿನ್ಯಾಸವುಳ್ಳ ಮಡಿಕೆ, ಪ್ರಸ್ತುತ ಮಂಡಪದ ನಿರ್ಮಾಣದಲ್ಲಿ ಪಾಯದೊಳಕ್ಕೆ ಶಾಸ್ತ್ರ–ಸಂಪ್ರದಾಯಬದ್ಧವಾಗಿ ಸೇರಿಸಲ್ಪಟ್ಟಿದೆ ಎಂಬುದು ಆ ಮಡಿಕೆ ದೊರೆತ ಸನ್ನಿವೇಶ, ಸ್ಥಾನಗಳಿಂದ ಸ್ಪಷ್ಟವಾಗುತ್ತದೆ. ಈ ಮಡಿಕೆಯ ಒಳಗಿನ ವಸ್ತುವನ್ನು ಪರೀಕ್ಷಿಸಿದಾಗ ಯಾವುದೇ ಮಹತ್ವವಾದ ವಸ್ತು ದೊರೆಯಲಿಲ್ಲ ಎಂಬುದು ಬೇರೆ ವಿಷಯ. ಈ ದೃಷ್ಟಿಯಿಂದ ನೋಡಿದಾಗ ಈ ಮಂಡಪದ ನಿರ್ಮಾಣ ಕಾಲ ನಾಲ್ಕು–ಐದನೆಯ ಶತಮಾನಗಳಿದ್ದರೂ ಇರಬಹುದು. ಹೊಸದಾದ ನಿರ್ವಾಸಿತ ಪ್ರದೇಶದಲ್ಲಿ ಈ ಮಂಡಪ ನಿರ್ಮಾಣವಾಗಿದೆ ಎಂಬ ಅಂಶವನ್ನು ಪರಿಶೀಲಿಸಿ ದಾಗ, ತಲಕಾಡಿನಲ್ಲಿ ಜನನಿಬಿಡತೆ ಇಲ್ಲದ ಸಮಯದಲ್ಲಿ, ಉತ್ತರ ತಲಕಾಡಿನಲ್ಲಿ ಒಂದು ಹೊಸ ಜಾಗದಲ್ಲಿ ಈ ಮಂಡಪ ನಿರ್ಮಾಣವಾಗಿದೆ ಎನಿಸುತ್ತದೆ. ಈ ಅಂಶವೂ ಸಹ ಅದರ ಪ್ರಾಚೀನತೆಗೆ ಪುಷ್ಟಿ ನೀಡುತ್ತದೆ. ತಲಕಾಡಿನ ಹಿಂದಿನ ಉತ್ಖನನದಲ್ಲಿ (೧೯೯೨–೯೩ ನೋಡಿ ಪ್ರಕಟಿತ ಸಂಪುಟ) ಇಟ್ಟಿಗೆ ನಿರ್ಮಿತ ಜೈನ ಬಸದಿಯೊಂದು ದೊರೆತಿದ್ದು ಅದರ ಕಾಲವನ್ನು ಕ್ರಿ.ಶ.೫–೬ನೇ ಶತಮಾನಗಳು ಇರಬಹುದೆಂದು ಊಹಿಸಲಾಗಿದೆ. ಇಂತಹ ಸನ್ನಿವೇಶದಲ್ಲಿ ಪ್ರಸ್ತುತ ಮಂಡಪವೂ ಸಹ ಕ್ರಿ.ಶ. ೫ನೇ ಶತಮಾನದಲ್ಲಿ ನಿರ್ಮಾಣವಾಗಿದೆಯೆಂದು ಹೇಳಿದರೆ ತಪ್ಪಾಗಲಾರದು.

ಈ ರೀತಿಯಾಗಿ, ಇಷ್ಟು ಪ್ರಾಚೀನವಾಗಿ ನಿರ್ಮಾಣವಾದ ಈ ಮಂಡಪ ಅಥವಾ ಒಂದು ಧಾರ್ಮಿಕ ಸಂಕೀರ್ಣ ಯಾವ ಧರ್ಮಕ್ಕೆ ಸೇರಿದಾಗಿತ್ತು ಎಂಬುದರ ಬಗ್ಗೆ ಯಾವುದೇ ನಿಖರ ಮಾಹಿತಿ ಇಲ್ಲ. ಇದು ಹಿಂದೂಧರ್ಮದ್ದಾಗಿರಬಹುದು ಅಥವಾ ಜೈನಧರ್ಮದ್ದಾಗಿರಬಹುದು. ಈಗಾಗಲೇ ಇದರ ಸನಿಹದಲ್ಲೇ ಸುಮಾರು ೧೩೫ ಮೀಟರ್ ದಕ್ಷಿಣಕ್ಕೆ ಜೈನ ಬಸದಿಯ ಅವಶೇಷಗಳೂ ಸಹ ದೊರೆತಿವೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ಆದ್ದರಿಂದ ಜೈನಧರ್ಮವೂ ಸಹ ತಲಕಾಡಿನಲ್ಲಿ ಕ್ರಿ.ಶ.೫ನೇ ಶತಮಾನದ ವೇಳೆಗೆ ಪ್ರಬಲ

ಪಂಥವಾಗಿ ಬೆಳೆದಿತ್ತು. ಹಿಂದೂ ಮತ್ತು ಜೈನ ಧರ್ಮಗಳ ವಾಸ್ತು ವಿನ್ಯಾಸದಲ್ಲಿ ಮಹತ್ವವಾದ ವ್ಯತ್ಯಾಸಗಳೇನೂ ಇಲ್ಲ. ಸೂಕ್ಷ್ಮ ವ್ಯತ್ಯಾಸಗಳು ಒಂದು ಪಕ್ಷ ಇದ್ದಿದ್ದರೂ ಅವುಗಳನ್ನು ತಿಳಿಯಲು ಸಾಕ್ಷ್ಯಾಧಾರಗಳು ಸಾಲದಾಗಿವೆ. ಚಕ್ರ ರೀತಿಯ ವಾಸ್ತು ಮಂಡಲಕ್ಕೆ ಬರುವುದಾದರೆ ಜೈನಧರ್ಮದಲ್ಲೂ ಸಹ ವಾಸ್ತು ನಿರ್ಮಾಣದಲ್ಲಿ ವಿವಿಧಾಕಾರದ ವಾಸ್ತು ಮಂಡಲಗಳ ಉಪಯೋಗವಿದೆ, ಅವುಗಳಲ್ಲಿ ವೃತ್ತಾಕಾರದ ಮಂಡಲವೂ ಒಂದು. ಹೀಗಾಗಿ ಈ ಮಂಡಪದ ಧಾರ್ಮಿಕ ಒಲವಿನ ಬಗ್ಗೆ ಏನನ್ನೂ ಹೇಳಲು ಸಾಧ್ಯವಾಗಿಲ್ಲ.

ಇಷ್ಟು ಸೊಗಸಾಗಿ ನಿರ್ಮಾಣವಾಗಿ, ವೈಭವಯುತವಾಗಿ ಬಾಳಿದ ಈ ಧಾರ್ಮಿಕ ಕಟ್ಟಡ ದುರಾದೃಷ್ಟವಶಾತ್ ಅಗ್ನಿ ಆಕಸ್ಮಿಕದಿಂದ ಸಂಪೂರ್ಣ ಸುಟ್ಟು ಭಸ್ಮವಾಯಿತು. ಬೆಂಕಿ ಆಕಸ್ಮಿಕದ ಕಾರಣ ತಿಳಿದುಬಂದಿಲ್ಲ, ಆದರೆ ಬೆಂಕಿ ಮಾತ್ರ ಅಪಾರ ಪ್ರಮಾಣದ್ದಾಗಿತ್ತು. ಈ ಮಂಡಪದ ಬೃಹದಾಕಾರದ ಮರದ ಕಂಬಗಳು, ಜಾಲಂಧ್ರಗಳು, ಭಾವಣಿಯ ತೊಲೆಗಳು, ಪಟ್ಟಿಗಳು, ಮಧ್ಯದಂಕಣದ ಮರದ ಮಂಟಪ, ಕಿಟಕಿ, ಬಾಗಿಲುಗಳು, ಇತ್ಯಾದಿಯಾಗಿ ಎಲ್ಲವೂ ಮರದಿಂದ ಮಾಡಿದುದೇ, ಎಲ್ಲವೂ ಬೆಂಕಿಯಲ್ಲಿ ಬೆಂದು ನಿರ್ನಾಮ ವಾಯಿತು. ಮರದ ಭಾವಣಿ ಉರಿದು ಕುಸಿಯಿತು. ಬೆಂಕಿಯ ಪ್ರಮಾಣ, ಅಗಾಧತೆ ಎಷ್ಟು ತೀಕ್ಷ್ಣವಾಗಿತ್ತೆಂದರೆ ಮಧ್ಯದಂಕಣದ, ಕಲ್ಲಿನ ಹಾಸಿನ ಚಪ್ಪಡಿಗಳು ಬೆಂಕಿಯಲ್ಲಿ ಸುಟ್ಟು ಪುಡಿಪುಡಿಯಾಗಿ ಹೋಗಿದ್ದವು. ಕೆಲವು ಚಪ್ಪಡಿಗಳು ಸಣ್ಣ ಸಣ್ಣ ಚೂರುಗಳಾಗಿದ್ದವು, ಕೆಲವು ಸೀಳಿ ಇಟ್ಟಿಗೆಗಳಂತೆ ಚೂರಾಗಿದ್ದವು ; ಇನ್ನುಳಿದವು ಪದರ ಪದರವಾಗಿ ಮೇಲೆದ್ದಿದ್ದವು. ಇಷ್ಟೆಲ್ಲದಕ್ಕೂ ಕಾರಣ ಅಗಾಧವಾದ ಮರದ ರಾಶಿ. ಈ ಮರದ ಮಂಡಪ ಮತ್ತು ಭಾವಣಿಯ ನಿರ್ಮಾಣದಲ್ಲಿ ಉಪಯೋಗವಾಗಿದ್ದ ಕಬ್ಬಿಣದ ದಪ್ಪ ದಪ್ಪಾದ ಗುಬ್ಬಿಗಳು, ಮೊಳೆಗಳು, ಗೂಟಗಳು, ಪಟ್ಟಿಗಳು, ರಿವೆಟ್ಟುಗಳು, ಕ್ಲಾಂಪ್‌ಗಳು, ಇತ್ಯಾದಿ ಎಲ್ಲವೂ ಅಪಾರ ಸಂಖ್ಯೆಯಲ್ಲಿ ಕಲ್ಲಿನ ಹಾಸಿನ ಮೇಲೆ ಬೂದಿ ಮಿಶ್ರಿತ ಮಣ್ಣಿನಲ್ಲಿ ದೊರೆತಿವೆ. ಈ ಕಬ್ಬಿಣದ ವಿವಿಧ ವಸ್ತುಗಳಿಂದ, ಉಪಯೋಗವಾಗಿದ್ದ ಮರದ ವಸ್ತುಗಳ ಅಗಾಧತೆ, ಗಾತ್ರ, ವೈಭವ ಎಲ್ಲದರ ಅರಿವಾಗುತ್ತದೆ.

ಮಂಡಪವನ್ನು ಸುಟ್ಟು ಭಸ್ಮ ಮಾಡಿದ ಈ ಅಗ್ನಿ ದುರಂತ ಏಕೆ ಆಯಿತು, ಯಾವಾಗ ಆಯಿತು ಎಂಬುದಕ್ಕೆ ಉತ್ಖನನದಲ್ಲಿ ಸುಳಿವು ಸಿಕ್ಕಿದೆಯೇ? ಈ ಪ್ರಶ್ನೆಗೆ ಉತ್ತರ ಇಲ್ಲ ಎಂದು ಮಾತ್ರ, ಆದರೆ ಚಾರಿತ್ರಿಕವಾಗಿ ವಿಶ್ಲೇಷಣೆ ಮಾಡಿದಾಗ ಒಂದೆರೆಡು ಚಾರಿತ್ರಿಕ ವಿಷಯಗಳು ಕಟ್ಟಡದ ನಿರ್ಮೂಲನಕ್ಕೆ ಕಾರಣವಾದವೇ ಎಂಬ ಸಂಶಯ ಮೂಡುತ್ತದೆ. ಈ ಮುಂಚೆ ಉತ್ಖನನದಲ್ಲಿ ಬೆಳಕಿಗೆ ಬಂದ ತಲಕಾಡಿನ ಜೈನ ಬಸದಿಯ ಮೂಲಭಾಗವು ಮರದ ಭಾವಣಿಯನ್ನು ಹೊಂದಿತ್ತು ಎಂಬ ವಿಷಯ ಉತ್ಖನನದಿಂದ ತಿಳಿದು ಬಂದಿರುವ ಅಂಶ. ಅದರ ಭಾವಣಿಯೂ ಬೆಂಕಿ ಆಕಸ್ಮಿಕವೊಂದರಲ್ಲಿ ಸುಟ್ಟು ನಾಶವಾಯಿತೆಂದು ಹೇಳಿದೆ. ಈ ರೀತಿ ತಲಕಾಡಿನಲ್ಲಿ ಮರದ ಭಾವಣಿಯ ಕಟ್ಟಡಗಳೇಕೆ ಬೆಂಕಿಯಲ್ಲಿ ಬೆಂದು ನಾಶವಾದವು ಎಂಬುದು ನಿಗೂಢ. ಇದಕ್ಕೆ ಅನೇಕ ಸಾಕ್ಷಿಗಳೂ ಸಹ ಇಲ್ಲದಿಲ್ಲ.

ಕ್ರಿ.ಶ. ೧೧ನೇ ಶತಮಾನದ ಕೊನೆಯ ಭಾಗದಲ್ಲಿ ಆಗ್ನೇಯ ಕರ್ನಾಟಕದ ಅನೇಕ ಭಾಗಗಳು ಚೋಳರ ಆಳ್ವಿಕೆಗೆ ಒಳಪಟ್ಟವು. ಆ ಸಮಯದಲ್ಲಿ ತಲಕಾಡು ಚೋಳರಾಜ್ಯದ ಒಂದು ಪ್ರಾಂತೀಯ ಕೇಂದ್ರವೂ ಆಯಿತು. ಚೋಳರ ಆಳ್ವಿಕೆ ತಲಕಾಡಿನಲ್ಲಿ ಸುಮಾರು ೧೩೦ ವರ್ಷಗಳಷ್ಟು ಕಾಲ ನಡೆಯಿತು. ಇದು ಒಂದು ಚಾರಿತ್ರಿಕ ವಿಷಯ. ಇದೇ ಚೋಳ ವಂಶದ ದೊರೆಗಳಾದ ಒಂದನೆಯ ರಾಜಾಧಿರಾಜ ಚೋಳ (ಕ್ರಿ.ಶ.೧೦೧೮-೫೪) ಮತ್ತು ಆತನ ತಮ್ಮ ಇಮ್ಮಡಿ ರಾಜೇಂದ್ರ (ಕ್ರಿ.ಶ.೧೦೫೨-೬೪) ಇವರೀರ್ವರೂ, ಕಲ್ಯಾಣ ಚಾಳುಕ್ಯವಂಶದ ಆಹವಮಲ್ಲ ಒಂದನೆಯ ಸೋಮೇಶ್ವರನ ಮೇಲೆ ಯುದ್ಧ ಹೂಡಿ ಪ್ರಸಿದ್ಧ ಕೊಪ್ಪಂ ಸಂಗ್ರಾಮದಲ್ಲಿ (ಕ್ರಿ.ಶ.೧೦೫೪) ಕಾದಾಡಿದವರು. ಇವರಲ್ಲಿ ರಾಜಾಧಿರಾಜ ಚೋಳನು ಯುದ್ಧದಲ್ಲಿ ವೀರಮರಣವನ್ನಪ್ಪಿದನು. ಇಮ್ಮಡಿ ರಾಜೇಂದ್ರಚೋಳನು ಯುದ್ಧದಲ್ಲಿ ಜಯಶಾಲಿಯಾಗಿ ಹಿಂತಿರುಗಿದನು. ಕೊಪ್ಪಂ ಸಂಗ್ರಾಮವನ್ನು ಉಲ್ಲೇಖಿಸುವ ಶಾಸನವೊಂದು[3] ಈ ರೀತಿ ಹೇಳುತ್ತದೆ. "ಮಹಾಪಾತಕ ನೆನಿಸಿದ್ದ ಪಾಂಡ್ಯ – ಚೋಳ (ವಂಶದಲ್ಲಿ ಜನಿಸಿದನಾದ) ನೆನಿಸಿದ (ರಾಜಾಧಿರಾಜನು), ನೆಲೆಗೆಟ್ಟು, ತನ್ನ ವಂಶದ ಪೂರ್ವಮರ್ಯಾದೆಯನ್ನು ತ್ಯಜಿಸಿ, ಬೆಳವೊಲ ಪ್ರಾಂತ್ಯವನ್ನು ಪ್ರವೇಶಿಸಿ ಅನೇಕ ದೇವಾಲಯಗಳನ್ನು ಭಸ್ಮಮಾಡಿದನಲ್ಲದೆ, ಗಂಗಪೆರ್ಮಾನಡಿ ನಿರ್ಮಿಸಿದ ಜಿನಾಲಯಗಳನ್ನೂ ಸಹ ಭಸ್ಮಮಾಡಿದನು. ಈ ದುಷ್ಕೃತ್ಯಗಳಿಗಾಗಿ ಆತನಿಗೆ ತನ್ನ ಪ್ರಾಣವನ್ನೇ ಕಳೆದುಕೊಳ್ಳಬೇಕಾದ ಶಿಕ್ಷೆಯೂ ಆಯಿತು".

ಶಾಸನೋಕ್ತವಾದ ಈ ವಿಷಯದಲ್ಲಿ ಮುಖ್ಯವಾದು ದೆಂದರೆ ರಾಜಾಧಿರಾಜ ಚೋಳನು ಭಸ್ಮಮಾಡಿದ ಗಂಗಪೆರ್ಮಾನಡಿ ನಿರ್ಮಿಸಿದ ಬಸದಿಗಳ ವಿಚಾರ. ಆಗ್ನೇಯ ಕರ್ನಾಟಕವನ್ನು ಆಕ್ರಮಿಸಿಕೊಂಡ ಚೋಳದೊರೆ ಈ ಭಾಗದಲ್ಲಿ ಅನೇಕ ಬಸದಿಗಳನ್ನು ಭಸ್ಮಮಾಡಿರಬೇಕು. ಅವುಗಳಲ್ಲಿ ತಲಕಾಡಿನ ಬಸದಿಗಳೂ ಸೇರಿರುವುದರಲ್ಲಿ ಆಶ್ಚರ್ಯವೇನಿಲ್ಲ. ಮರದಲ್ಲಿ ನಿರ್ಮಾಣವಾದ ಈ ಬಸದಿ/ ದೇವಾಲಯಗಳು ಚೋಳರ ದುರಾಡಳಿತದಿಂದಾಗಿ ಅಗ್ನಿಗಾ



ಚಿತ್ರ – ೧ : ತಲಕಾಡು VII ನೆರೆ ತಡೆಗೋಡೆ
ಸಾಮಾನ್ಯ ನೋಟ, ದಕ್ಷಿಣದಿಂದ



ಚಿತ್ರ – ೨ : ತಲಕಾಡು VII ನೆರೆ ತಡೆಗೋಡೆಯ
ಒಂದು ಭಾಗ – ಚಾಚು ವರಸೆಗಳು



← ಚಿತ್ರ – ೩ : ತಲಕಾಡು VII ನೆರೆ ತಡೆಗೋಡೆಯ ಒಂದು ಭಾಗ
– ಪಶ್ಚಿಮಕ್ಕೆ ವಾಲಿರುವುದು ಮತ್ತು ಗೋಡೆ – VII

ಚಿತ್ರ – ೪ : ತಲಕಾಡು VII ಒಡೆಗೋಡೆ





ಚಿತ್ರ – ೫ : ತಲಕಾಡು X ಜೋಡಿಲಿಂಗ ದೇವಾಲಯ ಮೇಲಿನಿಂದ ನೋಟ



ಚಿತ್ರ – ೬ : ತಲಕಾಡು X ಜೋಡಿಲಿಂಗ ದೇವಾಲಯ ನಂದಿ ಶಿಲ್ಪ



ಚಿತ್ರ – ೭ : ತಲಕಾಡು XI ಸಾಮಾನ್ಯ ನೋಟ ದಕ್ಷಿಣದಿಂದ



ಚಿತ್ರ – ೮ : ತಲಕಾಡು XI ವಾಸ್ತುಚಕ್ರ / ಮಂಡಲ



ಚಿತ್ರ – ೯ : ತಲಕಾಡು XI ಆದಿ ಚಾರಿತ್ರಿಕ ಕಾಲದ ಚಿತ್ರಿತ ಜಾಡಿ

ಹುತಿಯಾಗಿರುವುದಲ್ಲಿ ಸಂಶಯವಿಲ್ಲ. ಗಂಗಪೆರ್ಮಾನಡಿಯಿಂದ ನಿರ್ಮಾಣವಾಗಿತ್ತೆಂಬ ಹೇಳಿಕೆ ಯಿಂದ ಭಸ್ಮವಾದ ಆ ಬಸದಿ ಅತಿ ಪ್ರಖ್ಯಾತವೂ, ಪ್ರಾಚೀನವೂ ಆಗಿತ್ತೆಂಬ ಅಂಶ ಅರಿವಾಗುತ್ತದೆ. ಇಂತಹ ಪ್ರಸಿದ್ಧ ಬಸದಿ ಗಂಗ ರಾಜಧಾನಿಯಾದ ತಲಕಾಡಿನಲ್ಲಿ ಇದ್ದಿರಬೇಕೆಂಬ ಅಂಶವೂ ಸ್ಪಷ್ಟವಾಗುತ್ತದೆ. ಏಕೆಂದರೆ ಈ ಪ್ರಸಿದ್ಧ ಬಸದಿ ಗಂಗ ಪೆರ್ಮಾನಡಿ ನಿರ್ಮಿತ ಎಂಬ ಉಪಾಧಿಯಿಂದ ಉಕ್ತವಾಗಿದೆ. ಇದರಿಂದ ಅದರ ಕಾಲ, ದೇಶ, ನಿರ್ಮಾಣ ಎಲ್ಲವೂ ಅಂದರೆ ಗಂಗರಾಜ್ಯ, ಗಂಗಕಾಲ, ಗಂಗದೊರೆ ಮತ್ತು ಗಂಗರಾಜಧಾನಿ ಎಂಬೆಲ್ಲ ಅಂಶಗಳೂ ನಿರ್ದೇಶಿತ ವಾಗುತ್ತದೆ ಎಂಬುದು ಶಾಸನ ಕರ್ತೃವಿನ ಇಂಗಿತ. ಇದಕ್ಕೆ ಸರಿಹೊಂದುವಂತೆ ತಲಕಾಡಿನ ಗಂಗದೊರೆ ನಿರ್ಮಿತ ಬಸದಿ/ದೇವಾಲಯಗಳು ಬೆಂಕಿಗಾಹುತಿಯಾಗಿವೆ. ಈ ಅನುಮಾನ ನಿಜವಾದಲ್ಲಿ ಪ್ರಸ್ತುತ ಕಟ್ಟಡ ಕ್ರಿ.ಶ. ಹನ್ನೊಂದನೆಯ ಶತಮಾನದ ಮಧ್ಯಭಾಗದಲ್ಲಿ ಬೆಂಕಿಯಿಂದ ನಾಶವಾಗಿರಬೇಕು.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ವಿಜಯನಗರ ಅಧ್ಯಯನ**, ಸಂ.೧೩. ಪುಟ ೫೦೭-೨೨. ಮೈಸೂರು ೨೦೦೮.

೨. ಫ್ರಾನ್ಸಿಸ್ ಬುಕಾನನ್. ಎಂ.ಡಿ.. **ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್ ಅಂಡ್ ಮಲಬಾರ್**, ಸಂ. ೧ (ಎರಡನೇ ಆವೃತ್ತಿ) ಹಿಗ್ಗಿನ್ ಬಾತಮ್ಸ್ ಅಂಡ್ ಕಂ. ಮದ್ರಾಸ್ ೧೮೭೦, ಪುಟ ೪೦೪-೦೫.

೩. ಆರ್.ಸಿ. ಮಜುಂದಾರ್ ಮತ್ತಿತರರು.. **ಆನ್ ಅಡ್ವಾನ್ಸ್ಡ್ ಹಿಸ್ಟರಿ ಆಫ್ ಇಂಡಿಯಾ, ಲಂಡನ್** (೧೯೬೦ ಪುಟ ೫೭೧.)

೪. ಜ್ಞಾನಾನಂದ.. **ಶ್ರೀ ಕಾಶ್ಯಪಶಿಲ್ಪ ಶಾಸ್ತ್ರಂ** (ಕನ್ನಡ). ಉತ್ತರಾರ್ಧ. ಕರ್ನಾಟಕ ಶಿಲ್ಪಕಲಾ ಅಕಾಡೆಮಿ. ಬೆಂಗಳೂರು. ೧೯೯೮.

೫. **ಎಪಿಗ್ರಾಫಿಯಾ ಇಂಡಿಕಾ**, ಸಂ. XV ಪುಟ ೨೩, **ಎಪಿಗ್ರಾಫಿಯಾ ಕರ್ನಾಟಕ**, ಸಂಪುಟ VIII, ಸೊರಬ ೩೨೫.

ಡಿ. ಸ್ಮಿತಾರೆಡ್ಡಿ*

# ಹುದೂತಿ ಗ್ರಾಮದ ನವಶೋಧಿತ ಬೃಹತ್ ಶಿಲಾಯುಗದ ನೆಲೆ

ಹುದೂತಿ ಗ್ರಾಮ ಪ್ರಸ್ತುತ ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನಿಂದ ಸುಮಾರು ೪ ಕಿ.ಮೀ.ಗಳ ದೂರದಲ್ಲಿದೆ. ಹುದೂತಿ ಗ್ರಾಮದಿಂದ ಸುಮಾರು ೩ ಕಿ.ಮೀ.ಗಳ ಅಂತರದಲ್ಲಿ ಪ್ರಸಿದ್ಧ ನಾಗಾರಾಧನಾ ಸ್ಥಳವಾದ ವಿದುರಾಶ್ವತ್ಥ ಕ್ಷೇತ್ರವಿದೆ. ಇಲ್ಲಿ ಉತ್ತರ ಪಿನಾಕಿನಿ ನದಿ ಹರಿಯುತ್ತದೆ. ಉತ್ತರ ಪಿನಾಕಿನಿ ನದಿ ಹರಿಯುವ ಪ್ರದೇಶ ಹುದೂತಿ ಗ್ರಾಮದಿಂದ ೧/೨ ಕಿ.ಮೀ. ಅಂತರದಲ್ಲಿದೆ. ಅಲ್ಲದೆ, ಹೊಳೆಯ ರೂಪದಲ್ಲಿ ಸುತ್ತಮುತ್ತಲಿನ ಊರುಗಳ ಮೂಲಕವೂ ಸಹ ಹರಿಯುತ್ತದೆ. ನದಿ ಹರಿಯುವ ಪ್ರದೇಶಗಳಲ್ಲೇ ಬೃಹತ್ ಶಿಲಾಯುಗದ ಸಂಸ್ಕೃತಿ ಕಂಡುಬರುವುದರಿಂದ ಇಲ್ಲಿಯೂ ಈ ಸಂಸ್ಕೃತಿಯ ಕುರುಹುಗಳು ಗೋಚರಿಸುತ್ತಿರುವುದು ಸಹಜವಾಗಿದೆ.

ಹುದೂತಿ ಗ್ರಾಮದ ಹೊಲವೊಂದರಲ್ಲಿ ಬೃಹತ್ ಶಿಲಾಯುಗದ ಕಾಲದ ಒಂದು ಕಲ್ಗೋರಿ ಇದೆ. ಇದು ಸಹಜ ಸ್ಥಿತಿಯಲ್ಲಿಲ್ಲದೆ ಬದಲಾಯಿಸಲ್ಪಟ್ಟ ಸ್ಥಿತಿಯಲ್ಲಿದೆ. ಇದರಲ್ಲಿ ಕೆಲವು ನವಶಿಲಾಯುಗದ ಕಾಲದ ಕಲ್ಲುಗಳನ್ನು, ಶಿಲಾಯುಧಗಳನ್ನು ಇಟ್ಟು ಪೂಜಿಸುತ್ತಾರೆ. ಇದರ ಎದುರಿನಲ್ಲಿ ಮತ್ತೊಂದು ಕಲ್ಲಿನ ಸಣ್ಣ ಗುಡಿಯನ್ನು ಕಟ್ಟಿ ಅಲ್ಲಿನ ಪರಿಸರದಲ್ಲಿ ದೊರೆತಿರುವ ಶಿಲಾಯುಧ ಮತ್ತು ಶಿಲಾಯುಧಗಳ ಮಾದರಿಯಲ್ಲಿರುವ ಶಿಲೆಗಳನ್ನು ಇಟ್ಟು ಪೂಜಿಸುತ್ತಾರೆ. ಇಲ್ಲಿರುವ ಮಣ್ಣು ದಿಬ್ಬವನ್ನು ಗಮನಿಸಿದಾಗ ಹಿಂದೊಮ್ಮೆ ಆ ಪ್ರದೇಶದ ಮೇಲ್ಮೈಮಟ್ಟ ಆ ದಿಬ್ಬದಷ್ಟು ಎತ್ತರದಲ್ಲಿದ್ದು ವ್ಯವಸಾಯಕ್ಕಾಗಿ ಭೂಮಿಯನ್ನು ಉಳುಮೆ ಮಾಡಿರುವುದರಿಂದ ಆ ಮಣ್ಣಿನ ಗುಡ್ಡಕ್ಕಿಂತ ಸುಮಾರು ೬ ಅಡಿಗಳ ತಗ್ಗಿನಲ್ಲಿದೆಯೆಂದು ಸುಲಭವಾಗಿ ಊಹಿಸಬಹುದು.

ಈ ಕಲ್ಗೋರಿಯಿರುವ ಸುಮಾರು ೪-೫ ಎಕರೆ ಭೂಮಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಇಲ್ಲಿ ಯಥೇಚ್ಛವಾಗಿ ಮೃತ್ಪಾತ್ರೆಗಳ ಚೂರುಗಳು/ತುಣುಕುಗಳು ಕಂಡುಬಂದವು. ಅಲ್ಲದೆ ಕಬ್ಬಿಣದ ಕಿಟ್ಟ ಸಾಕಷ್ಟು ಕಂಡುಬಂತು. ಈಗಲೂ ಉಳುಮೆ ಮಾಡುವಾಗ ಅಲ್ಲಿ ಮಣ್ಣಿನ ಪಾತ್ರೆಗಳು ಮತ್ತು ಗೊಂಬೆಗಳು ಹಾಗೂ ಕಬ್ಬಿಣದ ವಸ್ತುಗಳು ದೊರೆಯುತ್ತವೆಂದು ಸ್ಥಳೀಯರು ಹೇಳುತ್ತಾರೆ. ಆದರೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನಗೆ ಪೂರ್ಣ ಪ್ರಮಾಣದ ವಸ್ತುಗಳಾವುವೂ ದೊರೆಯಲಿಲ್ಲ. ಕೇವಲ ಪಾತ್ರೆಗಳ ಚೂರುಗಳು ದೊರೆತವಷ್ಟೆ. ಇಲ್ಲಿ ಕಂಡುಬರುವ ಮಡಿಕೆ ಚೂರುಗಳು ವೈವಿಧ್ಯಮಯವಾಗಿವೆ. ಅವುಗಳೆಂದರೆ :

**೧. ಕಯೋಲಿನ್ ಪೇಯಿಂಟೆಡ್ ಮಡಿಕೆಗಳು :** ಇದನ್ನು White Painted ware ಎಂದೂ ಸಹ ಕರೆಯುತ್ತಾರೆ. ನನ್ನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಈ ಮಾದರಿಯ ಎರಡು ಮಡಿಕೆ ಚೂರುಗಳು ಲಭ್ಯವಾಗಿವೆ. ಒಂದು ತೆಳುವಾದ ಮತ್ತು ಹೊಳಪಿನ ಕಪ್ಪು ಮತ್ತು ಕೆಂಪು (B & R W) ಮಡಿಕೆ ಚೂರಿನ ಮೇಲಿದೆ. ಮತ್ತೊಂದು ಕಪ್ಪು ಮತ್ತು ಕೆಂಪು ಬಣ್ಣದ ಆದರೆ ದಪ್ಪವಾದ ಮಡಿಕೆಯ ಚೂರಿನ ಮೇಲೆ ಪೆಯಿಂಟ್ ಮಾಡಲಾಗಿದೆ ಮತ್ತು ಈ ಪಾತ್ರೆ ಅಲಂಕೃತವಾಗಿದೆ. ಈ ರೀತಿಯ White Painted Ware ಗಳು ಹಿರೇಕೆರೂರು, ತಲಕಾಡು ಮುಂತಾದ ಕೆಲವೇ ಭಾಗಗಳಲ್ಲಿ ಕಂಡುಬಂದಿವೆ.

**೨. ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆ ಚೂರುಗಳು** (B & R W) : ಇಲ್ಲಿ ಎರಡು ಮಾದರಿಯ ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆ ಚೂರುಗಳು ದೊರೆತಿವೆ. ಎರಡರಲ್ಲೂ ಒಳಭಾಗ ಕಪ್ಪು ಮತ್ತು ಹೊರಭಾಗ ಕೆಂಪು ಬಣ್ಣವಿದೆ. ಒಂದು ಮಾದರಿಯ ಮಡಿಕೆ ಚೂರು ತೆಳುವಾಗಿದ್ದರೆ, ಮತ್ತೊಂದು ಸಾಧಾರಣ ದಪ್ಪವಾಗಿವೆ. ಒಳ ಮತ್ತು ಹೊರ ಭಾಗಗಳೆರಡೂ ಹೊಳಪಿನಿಂದ ಕೂಡಿವೆ. ಈ ಪಾತ್ರೆಗಳ ಕಂಠದ ಭಾಗದಲ್ಲಿ ಹೊರಭಾಗದಲ್ಲಿ ಕಪ್ಪು ಇರುವುದರಿಂದ ಇವುಗಳನ್ನು ಕಪ್ಪು ಅಂಚಿನ ಮಡಿಕೆ (Black tapped Ware) ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಭಾರತದ ಎಲ್ಲ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಇಂಥ ಪಾತ್ರೆಗಳು ಕಂಡುಬರುತ್ತವೆ. ೧೯೮೨ರವರೆಗೆ ಭಾರತದಲ್ಲಿ 987 B & R Ware ನೆಲೆಗಳನ್ನು ಗುರುತಿಸಿದ್ದು ಅವುಗಳಲ್ಲಿ ಕರ್ನಾಟಕದಲ್ಲೇ ಅತ್ಯಧಿಕ ೧೭೪ ನೆಲೆಗಳನ್ನು ಎಂದರೆ ಶೇ. ೧೮ರಷ್ಟು ನೆಲೆಗಳು ದಾಖಲಾಗಿದೆ (The Indian Black Wares (First Millenium BC) Ashoka. K Mishra,

* ಭಾಷಾಂತರಕಾರರು, ಭಾಷಾಂತರ ವಿಭಾಗ, ಸಂ. ೨೧೬ ಬಿ, ಕರ್ನಾಟಕ ವಿಧಾನ ಪರಿಷತ್ತು, ಬೆಂಗಳೂರು-೧





ಬಿಳಿ ಬಣ್ಣ ಹಾಕಿರುವ ಮಡಿಕೆ ಚೂರುಗಳು





ಕಪ್ಪು ಮತ್ತು ಕೆಂಪು ಮಡಿಕೆ ಚೂರುಗಳು





ಕಪ್ಪು ಮತ್ತು ಕೆಂಪು ಮಡಿಕೆ ಚೂರುಗಳು







Prathiba prakashana, Delhi 110007 1989) ಕರ್ನಾಟಕದಲ್ಲಿ ಬ್ರಹ್ಮಗಿರಿ, ಹುಳ್ಳೂರು, ಮಸ್ಕಿ, ತೆಕ್ಕಲಕೋಟೆ, ಪಿಕ್ಲಿಹಾಳ, ತಲಕಾಡು, ಹೆಮ್ಮಿಗೆ, ಟಿ. ನರಸೀಪುರ ಮುಂತಾದ ಸ್ಥಳಗಳಲ್ಲಿ B & R.W. ಲಭ್ಯವಾಗಿವೆ.

೩. ಕಪ್ಪು ಬಣ್ಣದ ಮಡಿಕೆ ಚೂರುಗಳು : (Black and red wares) ಇವುಗಳ ಒಳ ಹಾಗೂ ಹೊರಭಾಗಗಳೆರಡೂ ಕಪ್ಪು ಬಣ್ಣದಿಂದಲೇ ಕೂಡಿವೆ. ಇವೂ ಸಹ ಹೆಚ್ಚು ತೆಳುವಾಗಿವೆ. ಇವುಗಳಲ್ಲಿ ಸಹ ಎರಡು ಮಾದರಿಯಿದೆ. ಒಂದು ನಯವಾದ,

ತೆಳುವಾದ ಹೊಳಪಿನ ಮಡಿಕೆಯಾದರೆ, ಮತ್ತೊಂದು ದಪ್ಪವಾದ ಸಾಧಾರಣವಾದ ಮಡಿಕೆಯಾಗಿದೆ. ಅಲ್ಲದೆ ಇವು ಹೊಳಪನ್ನು ಸಹ ಹೊಂದಿರುವುದಿಲ್ಲ.

**೪. ಕೆಂಪು ಬಣ್ಣದ ಮಡಿಕೆ ಚೂರುಗಳು :** ಇವು Black and Red ware ಗಿಂತ ದಪ್ಪವಾಗಿದೆ. ಒಳ ಹಾಗೂ ಹೊರ ಭಾಗಗಳೆರಡರಲ್ಲೂ ಹೊಳಪಾದ ಕೆಂಪು ಬಣ್ಣವಿದೆ.

ಹೊಳಪುಳ್ಳ ಕಪ್ಪು ಮತ್ತು ಕೆಂಪು ಮಡಿಕೆಗಳ ಜೊತೆಗೆ ಅಷ್ಟೊಂದು ಹೊಳಪಿಲ್ಲದ ಮಂದ ಬಣ್ಣದ ಚೂರುಗಳೂ ಸಹ ಲಭ್ಯವಿದ್ದು ಇವು ದಪ್ಪಗಿದೆ. ಇಲ್ಲಿ ಕೆಲವು ಅಲಂಕಾರಿಕ ಮಡಿಕೆ ಚೂರುಗಳು ದೊರೆತಿದ್ದು ಅದರ ಹೊರಭಾಗ ಕೆಂಪು ಬಣ್ಣದಲ್ಲೂ ಮತ್ತು ಒಳಭಾಗ ಕಪ್ಪು ಮತ್ತು ಬೂದಿ ಮಿಶ್ರಿತ ಕಪ್ಪು ಬಣ್ಣದಲ್ಲಿದೆ. ಕೆಲವು ಪಾತ್ರೆಗಳ ಮೇಲೆ ಓರೆಯಾದ ಅಡ್ಡಗೆರೆಗಳು ಮತ್ತು ವಜ್ರಾಕೃತಿಯ ಅಲಂಕಾರವಿದ್ದರೆ, ಇನ್ನು ಕೆಲವು ಮಡಿಕೆಗಳ ಮೇಲೆ ಸರಳವಾದ ಅಲಂಕಾರವಿದ್ದು ಮಡಿಕೆಗಳ ಸುತ್ತಲೂ ಅಡ್ಡಗೆರೆಗಳನ್ನು ಎಳೆಯಲಾಗಿದೆ.

ಇವುಗಳ ಜೊತೆಗೆ ಕೈಯಲ್ಲಿ ಮಾಡಲಾದ ಒರಟಾದ ಮಣ್ಣಿನ ಪಾತ್ರೆಗಳೂ ಸಹ ದೊರೆತಿವೆ. ಸ್ಥಳದಲ್ಲೇ ದೊರೆಯುವ ಕಚ್ಚಾ ಮಣ್ಣನ್ನು ಬಳಸಿ ಕೈಯಿಂದಲೇ ಮಾಡಲಾಗಿದೆ. ಇವುಗಳನ್ನು ಸತ್ತ ವ್ಯಕ್ತಿಗಳ ಬೂದಿಯನ್ನು ಹಾಕಲು, ಧಾನ್ಯಗಳನ್ನು ಬಳಸಲು ಸಂಗ್ರಹಿಸುತ್ತಿದ್ದರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಈ ರೀತಿಯ ವೈವಿಧ್ಯಮಯವಾದ ಮೃತ್ಪಾತ್ರೆಗಳ ಜೊತೆಗೆ ಈ ಪ್ರದೇಶದಲ್ಲಿ ಕಬ್ಬಿಣದ ಕಿಟ್ಟ ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತದೆ. ಈಗಲೂ ಉಳುಮೆ ಮಾಡುವಾಗ ಸಾಕಷ್ಟು ಸಂಖ್ಯೆಯ ಕಬ್ಬಿಣದ ವಸ್ತುಗಳು ದೊರೆಯುತ್ತವೆಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಹಾಗಾಗಿ ಇದು ಸಮಾಧಿ ನೆಲೆ ಎಂಬುದಕ್ಕಿಂತ ಮುಖ್ಯವಾಗಿ ಇದೊಂದು ಬೃಹತ್ ಶಿಲಾ ಸಂಸ್ಕೃತಿಯ ವಾಸದ ನೆಲೆಯಾಗಿತ್ತೆಂದು ಹೇಳಬಹುದು.

ಇದು ನವಶಿಲಾಯುಗದ ಸಂಸ್ಕೃತಿಯ ನೆಲೆಯೂ ಆಗಿತ್ತೆಂಬುದಕ್ಕೆ ಸಾಕಷ್ಟು ಆಧಾರಗಳು ಲಭ್ಯವಾಗುತ್ತವೆ. ಇಲ್ಲಿಯ ಡಾಲ್ಮನ್‌ನಲ್ಲಿ ಮತ್ತು ಅದರ ಎದುರಿರುವ ಸಣ್ಣ ಗುಡಿಯಲ್ಲಿ ೨೫ಕ್ಕೂ ಅಧಿಕ ಶಿಲಾಯುಗದ ಕಾಲದ ಕಲ್ಲುಗಳನ್ನು ಇಟ್ಟು ಪೂಜಿಸಲಾಗುತ್ತಿದೆ. ನನ್ನ ಬಳಿ ಇಂಥ ಎರಡು ಆಯುಧಗಳಿವೆ. ಅವುಗಳಲ್ಲಿ ಒಂದನ್ನು ಅತ್ಯಂತ ಹೆಚ್ಚಾಗಿ ನುಣುಪುಗೊಳಿಸಲಾಗಿದೆ ಮತ್ತು ಇನ್ನೊಂದು ಒರಟಾಗಿದೆ.

ಇವಲ್ಲದೆ ಒಂದು ಗುಂಡಗಿನ ಬೆಣಚು ಕಲ್ಲಿನ ಆಯುಧವೂ ಸಿಕ್ಕಿದೆ. ಇದರ ಎರಡು ಬದಿಗಳಲ್ಲಿ ಚಕ್ಕೆಗಳನ್ನು ಎಬ್ಬಿಸಲಾಗಿದೆ. ಇದು ಬಹುಶಃ ನವಶಿಲಾಯುಗಕ್ಕೂ ಮೊದಲಿನ ಅವನಿಗೆ ಸೇರಿರಬಹುದೆಂದು ಶ್ರೀ ರಾಮದಾಸರೆಡ್ಡಿಯವರು ಅಭಿಪ್ರಾಯಪಟ್ಟಿರುತ್ತಾರೆ.

ಒಟ್ಟಾರೆಯಾಗಿ ಇಲ್ಲಿ ದೊರೆತಿರುವ ಶಿಲಾಯುಧಗಳು ಮತ್ತು ವೈವಿಧ್ಯಮಯವಾದ ಮೃತ್ಪಾತ್ರೆಗಳ ಚೂರುಗಳ ವಿಶ್ಲೇಷಣೆಯಿಂದ ಹಾಗೂ ಸಮೀಪದಲ್ಲೇ ಉತ್ತರ ಪಿನಾಕಿನಿ ನದಿ ಹರಿಯುತ್ತಿರುವುದರ ಹಿನ್ನೆಲೆಯಲ್ಲಿ ಈ ಪ್ರದೇಶವು ಮಧ್ಯಮ ಕಾಲದ ಸೂಕ್ಷ್ಮ ಶಿಲಾಯುಗದ ಅವಧಿ, ನವ ಶಿಲಾಯುಗ, ಬೃಹತ್ ಶಿಲಾಯುಗ ಹಾಗೂ ಇತಿಹಾಸ ಆರಂಭ ಕಾಲದ ಅವಧಿಯ ಸಂಸ್ಕೃತಿಗೆ ನೆಲೆಯಾಗಿತ್ತೆಂದು ತೋರುತ್ತದೆ.

[ಕ್ಷೇತ್ರ ಕಾರ್ಯದಲ್ಲಿ ಸಹಕರಿಸಿದ ನನ್ನ ಪತಿ ಶ್ರೀ ಎನ್.ಸಿ. ಬಾಬುರೆಡ್ಡಿ ಹಾಗೂ ಮಗಳು ಕುಮಾರಿ ಎಸ್.ಬಿ. ಸೃಷ್ಟಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ ಹಾಗೂ ಲೇಖನ ಬರೆಯುವಲ್ಲಿ ನೆರವು ನೀಡಿದ ಡಾ. ಕೆ.ಎಸ್. ಅರುಣಿ ಮತ್ತು ಡಾ. ರಾಮದಾಸರೆಡ್ಡಿಯವರಿಗೆ ಕೃತಜ್ಞತೆಗಳು.]

## ಆಧಾರಸೂಚಿ


೧. Ashoka K. Mishra., *The Indian Black wares* - Prathiba Prakashana, Delhi - 110007, 1989.
೨. Dr. B.K. Gururaja Rao., *Megalithic culture in south India.* Prasaranga, M.D. 1972.
೩. ಡಾ. ಎಸ್. ಶ್ರೀಕಂಠ ಶಾಸ್ತ್ರಿ., ಪುರಾತತ್ವ ಶೋಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
೪. ಡಾ. ಕೆ.ಜಿ. ಶಿವತಾರಕ್., ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಪ್ರೊ. ಕೆ.ಎಂ. ಗರಗ*

# ಹುಲಕೋಟಿಯ ಪ್ರಾಚ್ಯಾವಶೇಷಗಳು

ಕರ್ನಾಟಕ ರಾಜ್ಯ ಮತ್ತು ಆಂಧ್ರ ರಾಜ್ಯಗಳ ನಡುವಿನ ಕೊಂಡಿಯಂತಿರುವ ಕಾರವಾರ – ಗುತ್ತಿ ರಾಷ್ಟ್ರೀಯ ಹೆದ್ದಾರಿ ನಂ. ೬೩ ಹಾದು ಹೋಗಿರುವ ಗದಗದಿಂದ ಪಶ್ಚಿಮಕ್ಕೆ ೧೦ ಕಿ.ಮೀ. ದೂರದಲ್ಲಿ 'ಹುಲಕೋಟಿ' ಗ್ರಾಮ ಗದಗ ಜಿಲ್ಲೆ ಸೇರಿದೆ.

**ಸ್ಥಳನಾಮದ ಹಿನ್ನೆಲೆ :** ಈ ಗ್ರಾಮದ ಚವಡಮ್ಮನ ಹೊಲದಲ್ಲಿ ಮೂರು – ನಾಲ್ಕು ಶತಮಾನದ ಪೂರ್ವದಲ್ಲಿ ಆಂಧ್ರ ಪ್ರಾಂತದಿಂದ ಜನಸಮೂಹ ಬಂದು ಇಲ್ಲಿ ನೆಲೆಸಿದರಂತೆ. ಈ ಜನಸಮೂಹದಲ್ಲಿ ಇರುವ "ಕಾಮಾ–ಗೌಡಶಾನಿ ಮತ್ತು ಭೀಮಾ ಗೌಡಶಾನಿ" ಎಂಬ ಗೌಡತಿಯರು ನೆಲ್ಲು ಕುಟ್ಟಿಕೊಂಡು ಬರಬೇಕೆಂದು ಒಳ್ಳನ್ನು ಹುಡುಕುತ್ತ ಚೌವಡಮ್ಮನ ಸೀಮೆ ದಾಟಿ ಕಲ್ಮೇಶ್ವರ ದೇವಸ್ಥಾನದಲ್ಲಿ ಒಳ್ಳೊಂದನ್ನು ಕಾಣಲು ನೆಲ್ಲು ಕುಟ್ಟಲು ಕುಳಿತುಕೊಂಡರು. ಈಗಾಗಲೇ ಅಲ್ಲಿ ಹುಲಿಯೊಂದು ತನ್ನ ಮರಿಗಳೊಂದಿಗೆ ವಾಸಿಸುತ್ತಿತ್ತು. ನೆಲ್ಲು ಕುಟ್ಟುತ್ತಿರುವ ಸದ್ದನ್ನು ಕೇಳಿದ ಹುಲಿ ಆಕ್ರಮಣ ಮಾಡಿದಾಗ ಗಂಡೆದೆಯನ್ನು ಹೊಂದಿದ ಇಬ್ಬರೂ ಗೌಡತಿಯರು ತಮ್ಮ ಕೈಯಲ್ಲಿರುವ ಒನಕೆಯಿಂದ ಹುಲಿಯನ್ನು ಕುಟ್ಟಿ ಕೊಂದರಂತೆ, ಕ್ರಮೇಣವಾಗಿ ಈ ಕಲ್ಮೇಶ್ವರನ ದೇವಾಲಯಕ್ಕೆ ನೆಲ್ಲು ಕುಟ್ಟಲು ಬರುವವರ ಸಂಖ್ಯೆ ಇಮ್ಮಡಿಯಾಗಿ ಈ ದೇವಾಲಯದ ಸುತ್ತಲು ಬೀಡು ಬಿಟ್ಟು ನೆಲೆ ನಿಲ್ಲಲು ಆರಂಭಿಸಿದರಂತೆ. ಅದರಲ್ಲಿ "ಕಾಮಾ, ಭೀಮಾ, ಗೌಡಶಾನಿಯರ ಮನೆತನ ಪ್ರಮುಖವಾದದ್ದು, ಕ್ರಮೇಣವಾಗಿ ಜನಸಮುದಾಯ ನೆಲೆ ಊರಿದ ಸ್ಥಳಕ್ಕೆ 'ಹುಲಿಕಟ್ಟಿ' ಎಂದು ಕರೆಯಲಾರಂಭಿಸದರಂತೆ. ಮುಂದೆ 'ಹುಲಿಕಟ್ಟಿ' ಪದ ಹೋಗಿ 'ಹುಲಿಕುಟ್ಟಿ' 'ಹುಲಕೋಟಿ' ಎಂಬುದಾಗಿ ಪದನಾಮ ಬದಲಾಗುತ್ತ ಬಂದಿದೆ ಎಂದು ಜನಪದ ಸಾಹಿತ್ಯ ಬಿತ್ತರಿಸುವುದು.

ಈ ಊರಿನ ಮಧ್ಯದ ಪೂರ್ವ ದಿಕ್ಕಿಗೆ ಅಭಿಮುಖವಾಗಿ ಕ್ರಿ.ಶ. ೧೨ ಮತ್ತು ೧೩ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲದ ಸೋಮೇಶ್ವರ ಮತ್ತು ಕಲ್ಮೇಶ್ವರ ದೇವಾಲಯಗಳು ಇವೆ.

**ಸೋಮೇಶ್ವರ ದೇವಾಲಯ :** ಈ ದೇಗುಲಕ್ಕೆ ಪೂರ್ವ ಮತ್ತು ದಕ್ಷಿಣದಲ್ಲಿ ಪ್ರವೇಶ ದ್ವಾರಗಳಿವೆ. ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿದ್ದು, ತೆರೆದ ಸಭಾಮಂಟಪ ಇದೆ. ಅದನ್ನು ನವೀಕರಣ ಮಾಡಲಾಗಿದೆ. ಗರ್ಭಗೃಹದಲ್ಲಿ ನವೀನ ಶಿವಲಿಂಗವಿದೆ. ಮೂಲ ಶಿವಲಿಂಗವನ್ನು ಗರ್ಭಗೃಹದಿಂದ ಬೇರ್ಪಡಿಸಿ, ಹೊಸ ಶಿವಲಿಂಗವನ್ನು ಮತ್ತು ಅಂತರಾಳದಲ್ಲಿ ನವೀನ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದ ಭಿತ್ತಿಯಲ್ಲಿ ಒಂಬತ್ತು ದೇವಕೋಷ್ಠಕಗಳಿವೆ. ಎರಡು ದೇವಕೋಷ್ಠಕಗಳಲ್ಲಿ ಮಾತ್ರ ಗಣೇಶ ಮತ್ತು ನಾಗಮಿಥುನ ಮೂರ್ತಿ ಶಿಲ್ಪಗಳಿವೆ. ನವರಂಗದ ಪೂರ್ವ ಹಾಗೂ ದಕ್ಷಿಣ ಪ್ರವೇಶ ದ್ವಾರದ ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬು ಶಿಲ್ಪಗಳಿವೆ. ಪ್ರವೇಶ ದ್ವಾರದ ಬಾಗಿಲವಾಡದಲ್ಲಿ ವಿವಿಧ ಶಾಖೆಗಳಿದ್ದು ವಜ್ರಶಾಖೆ ಮತ್ತು ಸ್ತಂಭಶಾಖೆಗಳಿಂದ ಅಲಂಕೃತಗೊಂಡಿವೆ. ನವರಂಗವು ನಾಲ್ಕು ಚೌಕಾಕಾರದ ಕಂಭಗಳನ್ನು ಹೊಂದಿದೆ. ಮತ್ತು ಮುಚ್ಚಿಗೆಯಲ್ಲಿ ಪದ್ಮವಿದೆ. ದೇವಾಲಯದ ಅಧಿಷ್ಠಾನ ಸರಳವಾಗಿದ್ದು, ಹೊರಭಿತ್ತಿಯನ್ನು ಮಾತ್ರ ನವೀಕರಣ ಮಾಡಲಾಗಿದೆ. ದೇವಾಲಯಕ್ಕೆ ಶಿಖರವಿರುವುದಿಲ್ಲ.

ಎರಡನೇ ದೇವಾಲಯವಾದ **ಕಲ್ಮೇಶ್ವರ ದೇವಾಲಯವೂ** ಸಹ ಊರಿನ ಮಧ್ಯದಲ್ಲಿದ್ದು, ಪೂರ್ವಾಭಿಮುಖವಾಗಿದ್ದು, ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ಅಂತರಾಳ ಭಾಗಗಳು ಮಾತ್ರವಿದ್ದು, ಉಳಿದ ಭಾಗ ನಶಿಸಿವೆ. ಗರ್ಭಗೃಹ ಚೌಕಾಕಾರವಾಗಿದ್ದು, ಅದರಲ್ಲಿ ಶಿವಲಿಂಗವಿದೆ. ಇದರ ಮುಚ್ಚಗೆಯಲ್ಲಿ ಅರಳಿದ ಪದ್ಮವಿದೆ. ಗರ್ಭಗೃಹದ ದ್ವಾರ ಮತ್ತು ಲಲಾಟಗಳು ಸರಳವಾಗಿವೆ. ಪ್ರವೇಶ ದ್ವಾರದ ಎರಡು ಭಿತ್ತಿಗಳಲ್ಲಿ ಜಾಲಂಧ್ರಗಳಿವೆ. ಗರ್ಭಗೃಹ ಮತ್ತು ಅಂತರಾಳದ ಪಶ್ಚಿಮ ಮತ್ತು ಉತ್ತರ ಭಿತ್ತಿಗಳು ಸುಸ್ಥಿತಿಯಲ್ಲಿವೆ. ದ್ವಾರಬಾಗಿಲು ಲಲಾಟದಲ್ಲಿ ಗಜಲಕ್ಷ್ಮೀ ಇದೆ. ದ್ವಾರಬಾಗಿಲು ಕೆಳಗೆ ಮುಂಭಾಗದಲ್ಲಿ ಭುವನೇಶ್ವರಿಯಿದೆ. ಈ ಊರಿನ ಪ್ರಾಚೀನ ದೇವಾಲಯಗಳ ಸಮೀಪದಲ್ಲಿಯೇ ಚತುರ್ಮುಖ ಬ್ರಹ್ಮ, ವೀರಗಲ್ಲು, ನಂದಿ,

* ಇತಿಹಾಸ ಉಪನ್ಯಾಸಕರು, ಜೆ.ಸಿ.ಟಿ.ಎಂ.ಪ.ಪೂ. ಮಹಾವಿದ್ಯಾಲಯ, ಹುಲಕೋಟಿ – ೫೮೨ ೨೦೫.



ಉಮಾ ಮಹೇಶ್ವರ ಶಿಲ್ಪ



ವೀರ ಬೇಟೆಗಾರನ ಶಿಲ್ಪ



ಸಪ್ತ ಮಾತೃಕೆಯರ ಶಿಲ್ಪ



೧೨ನೇ ಶತಮಾನದ ಸೋಮೇಶ್ವರ ಚಾಳುಕ್ಯ ದೇವಾಲಯ
ಗರ್ಭಗೃಹ, ಅಂತರಾಳ, ನವರಂಗ

ಉಮಾ-ಮಹೇಶ್ವರ, ಸಪ್ತಮಾತೃಕೆಯರು, ಸರಸ್ವತಿ, ಗಜಲಕ್ಷ್ಮಿ, ಮಹಿಷಾಸುರ ಮರ್ದಿನಿ, ಮಹಿಷಾಸುರನ ತಲೆ (ಕೋಣದ ರುಂಡ) ಸೂರ್ಯಶಿಲ್ಪ ಗಣೇಶ, ಶಿವಲಿಂಗ ಆದಿಶೇಷ, ನಾಗಮಿಥುನ, ಹನುಮಂತ, ಹೀಗೆ ಇನ್ನೂ ಹಲವಾರು ಮೂರ್ತಿ ಶಿಲ್ಪಗಳಿವೆ. ಅವುಗಳಲ್ಲಿ ಕೆಲವು ಶಿಲ್ಪಗಳ ಬಗ್ಗೆ ಈ ಕೆಳಗೆ ಚರ್ಚಿಸಲಾಗಿದೆ.



**ಚತುರ್ಮುಖ ಬ್ರಹ್ಮ :** ಪಾಣಿಪೀಠದ ಮೇಲೆ ಏಕಶಿಲೆಯ ಬ್ರಹ್ಮನ ಮೂರ್ತಿ ಇದ್ದು ನಾಲ್ಕು ಮುಖಗಳು ಸ್ಪಷ್ಟವಾಗಿ ಕಾಣುತ್ತಿದ್ದು, ಕಿವಿಯಲ್ಲಿ ಓಲೆಗಳಿವೆ. ಕೊರಳಲ್ಲಿ ಕಂಠಿಹಾರಗಳಿವೆ.

**ಉಮಾ-ಮಹೇಶ್ವರ :** ಉಮೆಯೊಂದಿಗೆ ಕುಳಿತ ಮಹೇಶ್ವರನ ಬಲಗೈ ನಾಶವಾಗಿದೆ. ತನ್ನ ಎಡಗೈಯನ್ನು ಉಮೆಯ ಭುಜದ ಮೇಲೆ ಚಾಚಿರುವನು. ಶಿವ-ಪಾರ್ವತಿಯರ ಕಿವಿಯಲ್ಲಿ ಓಲೆಗಳಿವೆ. ಶಿವನ ಎದೆಯ ಮೇಲೆ ಯಜ್ಞೋಪವಿತ ಇದೆ. ಕುತ್ತಿಗೆಯಲ್ಲಿ ವಿವಿಧ ಆಭರಣಗಳಿಂದ ಅಲಂಕೃತವಾದ ಹಾರಗಳಿವೆ. ಮೂರ್ತಿಪೀಠದ ಮೇಲೆ ನಂದಿ ಮತ್ತು ಷಣ್ಮುಖನ ಕೆತ್ತನೆಗಳಿವೆ.

**ವಿಶಿಷ್ಟ ಸೂರ್ಯ ಶಿಲ್ಪ :** ನಾಗಸುರಳಿಗಳಿಂದ ಎದ್ದು ಬಂದಂತಿರುವ ಸೂರ್ಯನ ಮೂರ್ತಿ ಅಸ್ಪಷ್ಟವಾಗಿದ್ದು ತಲೆಯ ಮೇಲೆ ಚಾಚಿರುವ ನಾಗಹೆಡೆಯು ಸ್ಪಷ್ಟವಾಗಿಲ್ಲ. ಕಿವಿಯಲ್ಲಿ ಓಲೆಗಳಿದ್ದು, ಕೊರಳಿನಲ್ಲಿ ವಿವಿಧ ಹಾರಗಳಿವೆ. ಆದರೆ ಎರಡು ಕೈಯಲ್ಲಿ ಹಿಡಿದ ಕಮಲ ಅಸ್ಪಷ್ಟವಾಗಿದೆ. ಪೀಠದ ಮೇಲೆ ಸೂರ್ಯನ ವಾಹನ ಕುದುರೆಗಳ ಕೆತ್ತನೆಯಿದೆ.

**ಮಹಿಷಾಸುರನ ರುಂಡ :** ಕರಿಯಮ್ಮನ ದೇವಸ್ಥಾನದ ಎದುರಿಗೆ ಇರುವ ದೀಪಸ್ಥಂಭದ ಮುಂದೆ ಇಡಲಾದ ಕೋಣನ ರುಂಡವು ಸರಳವಾದ ಕೆತ್ತನೆಯಿಂದ ಕೂಡಿದೆ.

**ಮಾರುತಿ ಶಿಲ್ಪ :** ಪುರಾತನ ಹನುಮಂತನ ಮೂರ್ತಿಯು ಮಕರ ತೋರಣದಿಂದ ಆವೃತವಾದ ಪ್ರಭಾವಳಿಯನ್ನು ಹೊಂದಿದ್ದು, ಕೀರ್ತಿಮುಖವನ್ನು ಹೊಂದಿದೆ. ಪ್ರಭಾವಳಿಯ ಮಧ್ಯದಲ್ಲಿ ಕಾಳಿಂಗ ಸರ್ಪದ ಕೆತ್ತನೆ ಇದೆ.

**ಬೇಟೆಗಾರನ ಶಿಲ್ಪ :** ವೀರಬೇಟೆಗಾರನು ಬಿಲ್ಲನ್ನು ಹಿಡಿದು ಬಾಣ ಬಿಡುವ ದೃಶ್ಯದಲ್ಲಿ ನಿಂತಿದ್ದಾನೆ. ಬೆನ್ನ



ಹಿಂದಿರುವ ಬತ್ತಳಿಕೆಯಲ್ಲಿ ಬಾಣಗಳಿವೆ. ಟೊಂಕದಲ್ಲಿ ಕಠಾರಿ ಇದೆ.

**ಸಪ್ತಮಾತೃಕೆಯರ ಶಿಲ್ಪ :** ತುಂಡಾದ ಈ ಶಿಲ್ಪದಲ್ಲಿ ಬ್ರಾಹ್ಮಿ, ಇಂದ್ರಾಣಿ, ಕೌಮಾರಿ, ವೈಷ್ಣವಿ, ವಾರಾಹಿ, ಮಹೇಶ್ವರಿ, ಮಹೇಂದ್ರಿ ಅವರನ್ನು ಗುರುತಿಸಲಾಗಿದೆ.

**ಕಾಳಾಮುಖ ಯತಿ ಶಿಲ್ಪ :** ಕಲ್ಮೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕಾಳಾಮುಖ ಯತಿಶಿಲ್ಪವು ಸೊಗಸಾಗಿದ್ದು ಕುಳಿತ ಭಂಗಿಯಲ್ಲಿರುವ ಯತಿಯು ಜಟಾಧಾರಿಯಾಗಿದ್ದು, ಗಡ್ಡವು ಕೇಶವನ್ನು ಹೊಂದಿದ್ದು ಯತಿಯು ಎಡ ಕೈಯಲ್ಲಿ ತಾಳೆಗರಿಯನ್ನು ಹಿಡಿದಿರುವನು.

**ಗಜಲಕ್ಷ್ಮೀ ಶಿಲ್ಪ :** ಮಸೀದೆಯ ಸಮೀಪವಿರುವ ಈ ಶಿಲ್ಪವು ಸುಂದರವಾಗಿ ಕೆತ್ತಲಾಗಿದ್ದು, ಶಿಲ್ಪದ ಮಧ್ಯದಲ್ಲಿ ಗಜಲಕ್ಷ್ಮಿ ಆಸಿನಳಾಗಿದ್ದು, ಎಡ – ಬಲದಲ್ಲಿ ಗಜಗಳು ಲಕ್ಷ್ಮಿಗೆ ಜಲಾಭಿಷೇಕ ಮಾಡುತ್ತಿರುವ ದೃಶ್ಯ ಸೊಗಸಾಗಿದೆ. ಈ ಶಿಲ್ಪದ ಪ್ರಭಾವಳಿಯು ಮಕರ ತೋರಣದಿಂದ ಅಲಂಕೃತವಾಗಿದೆ.

**ವೀರಗಲ್ಲು :** ತುಂಡಾದ ವೀರಗಲ್ಲು ನಾಲ್ಕು ಪಟ್ಟಿಕೆಗಳನ್ನು ಹೊಂದಿದೆ. ಮೊದಲನೆ ಪಟ್ಟಿಕೆಯಲ್ಲಿ ವೈರಿಗಳು ಕುದುರೆಯೊಂದಿಗೆ ಬಂದಿದ್ದು, ಕೈಯಲ್ಲಿ ಡಾಲು ಮತ್ತು ಖಡ್ಗಗಳನ್ನು ಹಿಡಿದಿದ್ದಾರೆ. ವೀರನು ವೈರಿಗಳೊಂದಿಗೆ ಕಾದಾಡಿ ಒಬ್ಬನನ್ನು ಹತ್ಯೆ ಮಾಡಿದ್ದಾನೆ. ಎರಡನೇ ಪಟ್ಟಿಕೆಯಲ್ಲಿ ಐದು ಜನ ವೈರಿಗಳು ಪರಿಬಂದಾಗ ವೀರನು ಹೋರಾಡಿ ಮರಣ ಹೊಂದಿದ್ದಾನೆ. ಮೂರನೇ ಪಟ್ಟಿಕೆಯಲ್ಲಿ ಸ್ವರ್ಗಸ್ಥನಾದ ವೀರನನ್ನು ಅಪ್ಸರೆಯರು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋಗುವ ದೃಶ್ಯವಿದೆ. ನಾಲ್ಕನೇ ಪಟ್ಟಿಕೆಯಲ್ಲಿ ಶಿವಲಿಂಗ, ನಂದಿಯನ್ನು, ಯತಿಯನ್ನು ಕಾಣಬಹುದು. ಸೂರ್ಯ–ಚಂದ್ರವಿದೆ. ಈ ವೀರಗಲ್ಲು ಶೈವ ಧರ್ಮದ್ದು ಎಂದು ತಿಳಿದುಬರುವುದು.

ಇವಲ್ಲದೇ ಇಲ್ಲಿ ಇನ್ನೂ ಹಲವಾರು ತ್ರುಟಿತವಾದ ಶಿಲ್ಪಗಳಿದ್ದು ಅವೂ ಸಹ ಇತಿಹಾಸ ದೃಷ್ಟಿಯಿಂದ ಪ್ರಮುಖವಾಗಿವೆ. ಈ ಊರಲ್ಲಿ ಗಂಭೀರವಾದ ಸಂಶೋಧನೆ ಮಾಡಿದರೆ, ಇಲ್ಲಿನ ಇತಿಹಾಸಕ್ಕೆ ಹೆಚ್ಚಿನ ಬೆಳಕನ್ನು ನೀಡಲು ಸಹಾಯಕವಾಗಬಲ್ಲದು ಎಂದು ಹೇಳಬಹುದು.

(ಕೃತಜ್ಞತೆಗಳು : ಈ ಕ್ಷೇತ್ರ ಕಾರ್ಯದಲ್ಲಿ ಸಲಹೆ ಸಹಾಯ ಮಾಡಿದ ಜಿ.ಸಿ.ಟಿ.ಎಂ.ಪಿ.ಯು. ಕಾಲೇಜಿನ ಶೈಕ್ಷಣಿಕ ಸಲಹಾ ಸಮಿತಿ ಚೇರಮನ್ನರಾದ ಮಾನ್ಯಶ್ರೀ ಡಿ.ಬಿ. ಓದುಗೌಡರ ಗ್ರಾಮ ಪಂಚಾಯತಿಯ ಮಾಜಿ ಅಧ್ಯಕ್ಷರಾದ ಶ್ರೀಮತಿ ವಿಜಯಲಕ್ಷ್ಮೀ ತಮ್ಮನಗೌಡರ, ಫೋಟೋ ಕೃಪೆ ಮಾಡಿದ ಶ್ರೀ ಚಂಬಲ್, ಇವರೆಲ್ಲರಿಗೂ ನನ್ನ ಕೃತಜ್ಞತೆಗಳು.

ವೀರಗಲ್ಲುಗಳನ್ನು, ಮೂರ್ತಿಗಳನ್ನು ಶೋಧಿಸಲು ಸಹಾಯ ಮಾಡಿದ ವಿದ್ಯಾರ್ಥಿಗಳಾದ ಕುಮಾರ, ಸೋಮಶೇಖರ ಮಾಳವಾಡ, ಕಾಸೀಂ ನಧಾಫ, ಮಲ್ಲಜ್ಜ ಕವಡಕಿ, ರಾಘವೇಂದ್ರ ಓದುಗೌಡರ, ಸಂತೋಷ, ಕರಿರಾಯನಗೌಡ್ರ, ಮಂಜುನಾಥ ಬಳ್ಳಾರಿ, ಸಂಜೀವ ಸೋಗಿನ, ಮಂಜುನಾಥ ಹಂಗನಕಟ್ಟಿ, ಮಂಜುನಾಥ ಮಡಿವಾಳರ ಇವರೆಲ್ಲರಿಗೂ ನನ್ನ ವಂದನೆಗಳು.

## ಆಧಾರ ಸೂಚಿ

೧. **ಕರ್ನಾಟಕ ಸರ್ಕಾರದ ಧಾರವಾಡ ಜಿಲ್ಲೆಯ (ಅವಿಭಜಿತ) ಗ್ಯಾಸೆಟಿಯರ್.**

೨. **ಕರ್ನಾಟಕ ದೇವಾಲಯ ಕೋಶ,** ಗದಗ ಜಿಲ್ಲೆ, ಕನ್ನಡ ವಿ.ವಿ. ಹಂಪಿ – ೨೦೦೭.

೩. ಎಸ್.ಕೆ. ರಾಮಚಂದ್ರರಾವ್., **ಮೂರ್ತಿ ಶಿಲ್ಪ ನೆಲೆ – ಹಿನ್ನಲೆ,** ಬೆಂಗಳೂರು ವಿಶ್ವವಿದ್ಯಾಲಯ, ೧೯೭೫.

ಮುತ್ತುರಾಜು*

# ಹಿರಿಯೂರು ತಾಲ್ಲೂಕಿನ ಕೆಲವು ಪ್ರಾಚ್ಯಾವಶೇಷಗಳ ಶೋಧ
## (ಕ್ರಿ.ಪೂ. ಸು. ೩೦೦೦ ದಿಂದ ಕ್ರಿ.ಶ. ಸು. ೧೯ನೆಯ ಶತಮಾನ)

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನಲ್ಲಿ ವಿಪುಲವಾದ ಪ್ರಾಚ್ಯಾವಶೇಷಗಳು ಉಳಿದುಬಂದಿವೆ. ಇತ್ತೀಚೆಗೆ ನಾನು ನಡೆಸಿದ ಕ್ಷೇತ್ರ ಕಾರ್ಯದ ವೇಳೆಯಲ್ಲಿ ಉಪಲಬ್ಧವಾದ ಕೆಲವು ಪ್ರಾಚ್ಯಾವಶೇಷಗಳನ್ನು ಸಂಶೋಧನೆಗೆ ಒಳಪಡಿಸಿ ಇಲ್ಲಿ ದಾಖಲಿಸುತ್ತಿದ್ದೇನೆ.

ತಾಲ್ಲೂಕು ಕೇಂದ್ರದಿಂದ ಹುಳಿಯಾರು ರಸ್ತೆಯ ಬಳಿ ಇರುವ ಸೋಮೇರಹಳ್ಳಿ ಎಂಬ ಗ್ರಾಮದಲ್ಲಿನ ರಂಗನಾಥ ದೇವಾಲಯದ ಗುಡ್ಡದ ಬಳಿ ೧೦ ಸೆಂ.ಮೀ. ಎತ್ತರ ಮತ್ತು ೬ ಸೆಂ.ಮೀ. ಅಗಲದ ಕರಿಯ ಕಲ್ಲಿನ ತ್ರಿಕೋನಾಕಾರದ ನವಶಿಲಾಯುಗಕ್ಕೆ (ಕಾಲ ಕ್ರಿಪೂ. ಸು. ೩೦೦೦–೮೦೦) ಸೇರುವ ಕೈಗೊಡಲಿಯೊಂದು ಪತ್ತೆಯಾಗಿದೆ. ಸಮೀಪದ ಮಳ್ಳಪ್ಪನಗುಡ್ಡದ ಪರಿಸರದಲ್ಲಿ ನವಶಿಲಾಯುಗ ಕಾಲದ ವಿಪುಲವಾದ ಬಯಲು ಬಂಡೆ ರೇಖಾಚಿತ್ರಗಳು ಮತ್ತು ಶಿಲೋಪಕರಣಗಳು ಲಭ್ಯವಾಗಿವೆ. ಸೋಮೇರಹಳ್ಳಿಯ ಈ ಉಪಕರಣದ ಕುರುಹಿನಿಂದಾಗಿ ಇಲ್ಲಿ ನವಶಿಲಾಯುಗದ ಮಾನವನ ಚಟುವಟಿಕೆ ಸ್ಥಳ ಇದ್ದಿತು ಎಂಬುದನ್ನು ನಿರ್ಧರಿಸಬಹುದು.

ಹುಳಿಯಾರು ರಸ್ತೆಯಲ್ಲಿಯ ಇರುವ ಇದ್ದಲ ನಾಗೇನಹಳ್ಳಿಯ ಹೊಲಗಳಲ್ಲಿ ಬೃಹತ್ ಶಿಲಾಯುಗದ (ಕಾಲ ಕ್ರಿಪೂ. ಸು. ೮೦೦) ಸಂಸ್ಕೃತಿಯ ಮೂರು ಶಿಲಾಸಮಾಧಿಗಳು ಪತ್ತೆಯಾಗಿವೆ. ಎರಡು ಶಿಲಾಸಮಾಧಿಗಳು ೨೦ ಅಡಿ ವ್ಯಾಸ ಹೊಂದಿದ್ದು ಗುಂಡುಕಲ್ಲುಗಳ ವೃತ್ತಕ್ಕೆ ತುಂಡು ಕಲ್ಲುಗಳ ಆಸರೆಯನ್ನು ನೀಡಿ ಮಧ್ಯದಲ್ಲಿ ಶವಕುಣಿಯನ್ನು ನಿರ್ಮಿಸಲಾಗಿದೆ. ೬೦ ಅಡಿ ವ್ಯಾಸವನ್ನು ಹೊಂದಿರುವ ಬೃಹತ್ ಅಳತೆಯ ಶಿಲಾಸಮಾಧಿಯೊಂದು ಅತ್ಯಂತ ವಿಸ್ತಾರವಾದುದಾಗಿದೆ. ಕರ್ನಾಟಕದಲ್ಲಿ ಈವರೆಗೆ ದೊರೆತಿರುವ ಬೃಹತ್ ಶಿಲಾಯುಗದ ದೊಡ್ಡ ಶಿಲಾಸಮಾಧಿ ಇದಾಗಿದ್ದು ಸಾಮೂಹಿಕವಾಗಿ ಮಾಡಿರುವ ಶವಸಂಸ್ಕಾರದ ಕುರುಹು ಇದಾಗಿದೆ. ಸುತ್ತಲಿನ ಗುಂಡುಕಲ್ಲುಗಳ ಒಳಗೆಲ್ಲಾ ತುಂಡು ಕಲ್ಲುಗಳ ಆಸರೆಯನ್ನು ನೀಡಿ ಈ ಸಮಾಧಿಯನ್ನು ರಚಿಸಲಾಗಿದೆ.

ಹಿರಿಯೂರಿನ ಗಾಂಧಿ ಸರ್ಕಲ್ ಬಳಿಯ ಕಣಿವೆ ಮಾರಮ್ಮ ದೇವಾಲಯದ ಮುಂದೆ ಒಂದು ಪ್ರಾಚೀನ ವೀರ ಮಾಸ್ತಿಕಲ್ಲು ಉಳಿದು ಬಂದಿದ್ದು ಎರಡೂವರೆ ಅಡಿ ಎತ್ತರ ಮತ್ತು ಎರಡು ಅಡಿ ಅಗಲದ ಕಪ್ಪು ಬಣ್ಣದ ಗ್ರಾನೈಟಿನಲ್ಲಿ ವೀರನ ಮತ್ತು ಆತನ ಸತಿ ಇರುವ ಚಿತ್ರಣಗಳು ಮಾತ್ರ ಇದ್ದು ಲಿಪಿ ಇಲ್ಲವಾಗಿದೆ. ಈ ಸ್ಮಾರಕದ ಬಲಭಾಗದಲ್ಲಿ ಯುದ್ಧವೊಂದರಲ್ಲಿ ಶತ್ರುಗಳ ಜೊತೆ ಹೋರಾಡಿ ಮಡಿದ ವೀರನ ಚಿತ್ರದಲ್ಲಿ ವೀರನು ವೀರತನದಿಂದ ತನ್ನ ಎಡದ ಕಾಲನ್ನು ಮುಂದೆ ಮಾಡಿ ಎಡದ ಕೈನಲ್ಲಿ ಎತ್ತರವಾದ ಬಿಲ್ಲನ್ನು ಹಿಡಿದಿದ್ದಾನೆ. ಬಲದ ಕೈನಲ್ಲಿ ಬಾಣವನ್ನು ಹಿಡಿದಿದ್ದಾನೆ. ನಡುವಿನಲ್ಲಿ ಬಿಚ್ಚುಗತ್ತಿ ಇದೆ. ಎದೆ, ತೋಳು, ಕೈ ಕಾಲುಗಳಲ್ಲಿ ಆಭರಣಗಳಿವೆ. ಜೊತೆಗೆ ಕಾಲಿನ ಮಂಡಿಯ ವರೆಗೂ ಧರಿಸಿರುವ ವಸ್ತ್ರವಲ್ಲದೇ ಶಿರದಲ್ಲಿ ಶಿರೋಮುಡಿ ಮತ್ತು ಕಿವಿಗಳಲ್ಲಿ ಕುಂಡಲಗಳಿವೆ. ಈತನ ವೇಷಭೂಷಣ ಗಳಿಂದ ಇವನೋರ್ವ ಪ್ರಮುಖ ನಾಯಕನಾಗಿರುವಂತಿದೆ.

ವೀರನ ಚಿತ್ರಣದ ಎದುರಿಗೆ ಈತನ ಪತ್ನಿಯು ವೈಭವ ಯುತವಾದ ಉಡುಗೆ–ತೊಡುಗೆ ತೊಟ್ಟು ಬಲದ ಕೈಯಲ್ಲಿ ನಿಂಬೆಯ ಹಣ್ಣನ್ನು ಎತ್ತಿ ಹಿಡಿದು ನಿಂತಿರುವ ಚಿತ್ರಣವಿದೆ. ಯಾವುದೋ ರಾಜಕೀಯ ಕಾರಣದಿಂದ ವೀರನು ತನ್ನ ಶತ್ರುಗಳ ಜೊತೆ ಹೋರಾಡಿ ಮಡಿಯಲಾಗಿ ಈತನ ಸತಿಯು ಅಂದಿನ ಪದ್ಧತಿ ಮತ್ತು ನಂಬಿಕೆಯಂತೆ ಚಿತೆ ಏರಿ ಸಹಗಮನ ಪದ್ಧತಿ ಅನುಸರಿಸಿದ್ದಾಳೆ. ಹಿರಿಯೂರಿನ ಮುಖ್ಯ ಸ್ಥಳದಲ್ಲಿ ಹಿಂದೊಮ್ಮೆ ಯುದ್ಧ ಮತ್ತು ಸಹಗಮನ ನಡೆದಿರುವುದು ಅತ್ಯಂತ ಗಮನಾರ್ಹ ಅಂಶವಾಗಿದೆ. ಕಾಲಮಾನದ ದೃಷ್ಟಿಯಿಂದ ಈ ಸ್ಮಾರಕವು ಕ್ರಿ.ಶ. ಸುಮಾರು ೧೩ನೇ ಶತಮಾನಕ್ಕೆ ಸೇರುತ್ತದೆ.

ಹಿರಿಯೂರಿನ ಪ್ರಾಚೀನ ಬೀದಿಗಳಲ್ಲಿ ಒಂದಾಗಿರುವ ತೇರುಮಲ್ಲೇಶ್ವರ ದೇವಾಲಯದ ಬಳಿಯ ಸಿದ್ಧನಾಯಕ ವೃತ್ತದ ಹಳೆ ಲೈಬ್ರರಿ ಮುಂದೆ ಒಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. ಮೂರು ಅಡಿ ಎತ್ತರ, ಮೂರು ಅಡಿ ಅಗಲದ ಗ್ರಾನೈಟ್‌ನ ಸ್ಮಾರಕ ಇದಾಗಿದೆ. ಇದರಲ್ಲಿ ವೀರನು ಕುದುರೆಯ

* ಕನ್ನಡ ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಉಡುವಳ್ಳಿ – ೪೩.

ಮೇಲೆ ಕುಳಿತು ಬಲದ ಕೈನಲ್ಲಿ ಖಡ್ಗವನ್ನು ಎತ್ತಿ ಹಿಡಿದಿದ್ದಾನೆ. ಎಡದ ಕೈನಲ್ಲಿ ಕುದುರೆಯ ಜೀನನ್ನು ಹಿಡಿದಿದ್ದಾನೆ. ಅಲಂಕೃತವಾದ ಕುದುರೆಯು ಚಲಿಸುವ ಸ್ಥಿತಿಯಲ್ಲಿದ್ದು ತನ್ನ ಎಡಗಾಲಿನಿಂದ ಮಡಿದ ಶತ್ರುವಿನ ರುಂಡವನ್ನು ತುಳಿಯುತ್ತಿದೆ. ವೀರನ ಶಿರೋಮುಡಿಯಿಂದ ಜಡೆ ಇಳಿಬಿದ್ದಿದೆ. ಬಸವ ಮತ್ತು ಸೂರ್ಯಚಂದ್ರ ಚಿತ್ರಗಳಿವೆ. ಕ್ರಿ.ಶ. ಸುಮಾರು ೧೫ನೆಯ ಶತಮಾನದಲ್ಲಿ ನಡೆದ ಘಟನೆಯ ಸ್ಮಾರಕ ಇದಾಗಿದೆ. ಲಿಪಿಯು ಇಲ್ಲದ ಕಾರಣ ಯಾವ ಶತ್ರುಗಳ ಜೊತೆ ಯುದ್ಧ ನಡೆಯಿತೆಂಬುದು ತಿಳಿದುಬಂದಿಲ್ಲ.

ಹಿರಿಯೂರಿನಿಂದ ಲಕ್ಕವ್ವನಹಳ್ಳಿ ರಸ್ತೆಯ ಬಲಬದಿಯಲ್ಲಿರುವ ಕಲ್ಲಯ್ಯನ ಬಡಾವಣೆಯಲ್ಲಿ ಪೂರ್ವಾಭಿಮುಖವಾಗಿ ನಿಲ್ಲಿಸಿರುವ ಮೂರು ವೀರಗಲ್ಲುಗಳು ಒಂದು ಮಾಸ್ತಿಕಲ್ಲು ಹಾಗೂ ಲಿಂಗಮುದ್ರೆ ಕಲ್ಲುಗಳು ಗಮನಾರ್ಹ ವಾಗಿವೆ. ಮೂರು ಅಡಿ ಎತ್ತರ ಹಾಗೂ ಒಂದೂವರೆ ಅಡಿ ಅಗಲದ ವೀರಗಲ್ಲು ಒಂದು ಅಡಿ ದಪ್ಪವಿದೆ. ವೀರನೊಬ್ಬ ನಿಂತಿರುವ ಚಿತ್ರಣವಿದೆ. ವೀರನು ತನ್ನ ಎರಡೂ ಕೈಗಳನ್ನೂ ಇಳಿಬಿಟ್ಟಿದ್ದು ಖಡ್ಗವನ್ನು ನೆಲಕ್ಕೆ ತಾಗುವಂತೆ ಇಳಿಬಿಟ್ಟಿದ್ದಾನೆ. ಬಲದ ಹಾಗೂ ಎಡದ ಕೈಗಳೆರಡರಲ್ಲೂ ಆಯುಧ ಪ್ರಯೋಗದ ಪರಿಣತ ಇವನಾಗಿದ್ದನು ಎಂಬುದನ್ನು ಇದು ತಿಳಿಸುತ್ತದೆ. ಉತ್ತಮವಾದ ಶಿರದ ತುರುಬನ್ನ ಹೊಂದಿದ್ದು ವದನದಲ್ಲಿ ಮೀಸೆ ಇದೆ. ಕೊರಳಲ್ಲಿ ಹಾರ, ನಡುವಿನಲ್ಲಿ ಬಿಚ್ಚುಗತ್ತಿ ಇವೆ. ಹಾಗೂ ಉತ್ತಮವಾದ ಪೋಷಾಕನ್ನು ಧರಿಸಿದ್ದಾನೆ. ಶಾಂತ ಸ್ವಭಾವದ ಲಕ್ಷಣ ಇವನ ಮುಖದಲ್ಲಿದೆ. ಅಂದರೆ ಯಾವುದೋ ಕಾರಣಕ್ಕೆ ಶತ್ರುಗಳ ಜೊತೆ ಹೋರಾಡಿ ಮಡಿದಿದ್ದಾನೆ. ಕಾರಣ ಸ್ಪಷ್ಟವಾಗಿಲ್ಲ. ಮೇಲೆ ಸೂರ್ಯ ಚಂದ್ರರ ಚಿತ್ರಣಗಳಿವೆ. ಕಾಲಮಾನದ ದೃಷ್ಟಿಯಿಂದ ಕ್ರಿ.ಶ. ಸು. ೧೫ನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಈ ವೀರಗಲ್ಲಿನ ಬಲಭಾಗದಲ್ಲಿ ಎರಡೂವರೆ ಅಡಿ ಅಗಲ ಎರಡೂಕಾಲು ಅಡಿ ಎತ್ತರದ ವೀರನೊಬ್ಬನ ಚಿತ್ರಣವಿದೆ. ಗಟ್ಟಿಕಲ್ಲು ಇದಾಗಿದ್ದು ವೀರನು ಇಲ್ಲಿ ಓರೆ ಭಂಗಿಯಲ್ಲಿ ನಿಂತಿದ್ದು ಬಲದ ಕೈಯಲ್ಲಿ ಇಳಿಬಿಟ್ಟ ಖಡ್ಗ ಹಿಡಿದಿದ್ದಾನೆ. ನಡುವಿನಲ್ಲಿ ಬಿಚ್ಚುಗತ್ತಿ ಇದೆ. ಉಡುಪಿನಲ್ಲಿ ಅಲಂಕಾರವಿಲ್ಲದಿದ್ದರೂ ತನ್ನ ಎಡದ ಕೈಯನ್ನು ನಡುವಿನ ವಸ್ತ್ರವನ್ನು ಬಳಸಿ ಹಿಡಿದುಕೊಂಡಿದ್ದಾನೆ. ಮುಂಗೈ ಮತ್ತು ತೋಳುಗಳಲ್ಲಿ ಬಂದಿಗಳಿವೆ, ಶಿರದಲ್ಲಿ ತುರುಬು, ಕರ್ಣದಲ್ಲಿ ಕುಂಡಲಗಳಿವೆ. ವದನದಲ್ಲಿ ಮೀಸೆ ಇದ್ದು ವೀರತನ ಕಾಣುತ್ತಿದೆ. ಯಾವುದೋ ಕಾರಣಕ್ಕೆ ಶತ್ರುಗಳೊಡನೆ ಹೋರಾಡಿ ಇವನು ಸಹ ಮಡಿದಿದ್ದಾನೆ. ಪ್ರಾಚೀನತೆಯ ದೃಷ್ಟಿಯಿಂದ ಇದೂ ಸಹ ೧೧ನೇ ಶತಮಾನಕ್ಕೆ ಸೇರುವ ವೀರಗಲ್ಲು ಆಗಿದೆ. ಮೇಲೆ ಸೂರ್ಯ ಚಂದ್ರರ ಕೆತ್ತನೆಗಳಿವೆ.

ಈ ಸ್ಮಾರಕದ ಬಲಭಾಗದಲ್ಲಿಯೇ ನಾಲ್ಕುವರೆ ಅಡಿ ಎತ್ತರ ಹಾಗೂ ಮೂರೂವರೆ ಅಡಿ ಅಗಲದ ಹುಲಿಯ ಜೊತೆಗಿನ ಹೋರಾಟದ ವೀರಗಲ್ಲುವೊಂದು ಪ್ರಧಾನವಾಗಿದೆ. ಹುಲಿಯು ತನ್ನ ಬಾಯಿಯನ್ನು ತೆರೆದು ವೀರನ ಎಡದ ಕಾಲಿನ ಮೇಲೆ ಹೆಜ್ಜೆಯನ್ನು ಇಟ್ಟಿದೆ. ವೀರನು ಹುಲಿಯ ಬಾಯಿಯಲ್ಲಿ ತನ್ನ ಕೈ ಹಾಕಿ ಕೊಲ್ಲುತ್ತಿದ್ದಾನೆ. ಬಲದ ಕೈನಿಂದ ಹುಲಿಯನ್ನು ಇರಿದಿರುವುದು ಖಡ್ಗದ ಚಿತ್ರಣದಿಂದ ಸ್ಪಷ್ಟವಾಗಿದೆ. ಹುಲಿಯನ್ನು ಕೊಂದು ತಾನೂ ಹತನಾಗಿದ್ದಾನೆ. ಇವನ ಆಕರ್ಷಕ ವೇಷ ಭೂಷಣಗಳನ್ನು ಗಮನಿಸಿದರೆ ಇವನೊಬ್ಬ ಪ್ರಮುಖ ಆಡಳಿತಗಾರನೆಂಬುದು ಸ್ಪಷ್ಟವಾಗುತ್ತದೆ ಹೊಯ್ಸಳ ಕಾಲದ ವೀರಗಲ್ಲುಗಳನ್ನು ಇದು ಹೋಲುವುದ ರಿಂದ ಈ ಸ್ಮಾರಕದ ಕಾಲಮಾನ ಕ್ರಿ.ಶ. ಸುಮಾರು ೧೩ನೇ ಶತಮಾನದ್ದಾಗಿದೆ.

ಈ ಸ್ಮಾರಕದ ಬಲಭಾಗದಲ್ಲಿ ಎರಡೂವರೆ ಅಡಿ ಎತ್ತರ ಹಾಗೂ ಎರಡೂವರೆ ಅಡಿ ಅಗಲದ ವೀರಮಾಸ್ತಿ ಕಲ್ಲೊಂದಿದ್ದು ಮಡಿದ ವೀರ ಮತ್ತು ಸತಿ ಕೈಮುಗಿದು ನಿಂತಿದ್ದಾರೆ. ವೀರನು ಅರಸನಂತೆ ಮುಕುಟ ಧರಿಸಿದ್ದು ಮೀಸೆ ಇದೆ. ತುಂಬು ಪೋಷಾಕು ಮತ್ತು ಆಭರಣಗಳು ಇವೆ. ಈತನ ಬಲಬದಿಗೆ ಸತಿ ನಿಂತಿದ್ದಾಳೆ. ಈಕೆ ಉತ್ತಮ ಪೋಷಾಕು ಆಭರಣ ಧರಿಸಿದ್ದು ನಡುವಿನಲ್ಲಿ ಬಿಚ್ಚುಗತ್ತಿ ಹೊಂದಿದ್ದಾಳೆ. ಅಂದರೆ ಯುದ್ಧದಲ್ಲಿ ಈಕೆಯೂ ಪಾಲ್ಗೊಂಡು ಕಾದು ಮಡಿದಿದ್ದಾಳೆಯೋ ಅಥವಾ ಸತಿಪದ್ಧತಿ ಅನುಸರಿಸಿದ್ದಾಳೆಯೋ ಸ್ಪಷ್ಟವಿಲ್ಲ. ಯಾರ ಜೊತೆ ಹೋರಾಟ ವಾಗಿದೆ ಎಂಬುದು ಸ್ಪಷ್ಟವಿಲ್ಲ. ಕ್ರಿ.ಶ. ಸುಮಾರು ೧೩ನೆಯ ಶತಮಾನಕ್ಕೆ ಈ ವೀರಸ್ಮಾರಕವು ಸೇರುತ್ತದೆ. ಬಳಿಯಲ್ಲಿ ಲಿಂಗಮುದ್ರೆ ಕಲ್ಲು ಇದೆ.

ಕಲ್ಲಯ್ಯ ಬಡಾವಣೆ ಬಳಿಯುಲ್ಲಿಯೇ ಇರುವ ಜಲಶುದ್ಧಿಕರಣ ಇಲಾಖೆಯ ಆವರಣದಲ್ಲೊಂದು ವೀರ ಮಾಸ್ತಿ ಕಲ್ಲು ಒಂದು ನಿಲ್ಲಿಸಲಾಗಿದ್ದು ಬಳಿಯಲ್ಲಿ ಇರಿಸಿದ್ದ ಸ್ಮಾರಕವನ್ನು ಇತ್ತೀಚೆಗೆ ಸ್ಥಳಾಂತರಿಸಲಾಗಿದೆ. ೩ ೧/೨ ಅಡಿ ಎತ್ತರ ಎರಡುಕಾಲು ಅಡಿ ಅಗಲವಾಗಿರುವ ಗ್ರಾನೈಟ್ ಶಿಲ್ಪ ಇದಾಗಿದೆ. ಕಲ್ಲಿನ ಮಧ್ಯಭಾಗವನ್ನು ಹದ ಮಾಡಿಕೊಂಡು ಚಿತ್ರವನ್ನು ಬಿಡಿಸಲಾಗಿದೆ. ಈ ಸ್ಮಾರಕದಲ್ಲಿ ವೀರ ಮತ್ತು ಸತಿಯರ ಚಿತ್ರಗಳಿದ್ದು ಎಡಭಾಗದಲ್ಲಿ ವೀರನ ಚಿತ್ರವಿದೆ. ಈತ ವೀರಾವೇಶದಿಂದ ಬಿಲ್ಲನ್ನು ಎಡದ ಕೈನಲ್ಲಿ ಹಿಡಿದಿದ್ದಾನೆ. ಬಲದ ಕೈಯಲ್ಲಿ ಬಾಣ ಹೂಡಲು ಸಿದ್ಧನಾಗಿದ್ದಾನೆ. ನಡುವಿನಲ್ಲಿ ಬಿಚ್ಚುಗತ್ತಿ ಇದೆ. ಶಿರದಲ್ಲಿ ಶಿರೋಮುಡಿ ಕರ್ಣ ಕುಂಡಲಗಳು ಕೊರಳಲ್ಲಿ ಮತ್ತು ನಡುವಿನಲ್ಲಿ ಆಭರಣಗಳಿದ್ದು ವೀರಗಚ್ಚೆಯ ಪೋಷಾಕು ಇವನಿಗೆ ಇವೆ. ಯಾವುದೊ ಯುದ್ಧದಲ್ಲಿ ವೀರ ಶತ್ರುಗಳ ಜೊತೆ ಹೋರಾಡಿ ಮಡಿದಿದ್ದಾನೆ. ಕಾರಣ ತಿಳಿದುಬಂದಿಲ್ಲ. ಈತನ ಬಲಬದಿಯಲ್ಲಿರುವ ಸತಿಯು ನರ್ತನ ಭಂಗಿಯಲ್ಲಿ ನಿಂತಿದ್ದು ಬಲಗೈನಲ್ಲಿ ಹಣ್ಣನ್ನು ಹಿಡಿದಿದ್ದಾಳೆ. ಶಿರದಲ್ಲಿ ತುರುಬು ಇದ್ದು ಪೋಷಾಕು ಮುಂಗಾಲಿನವರೆಗೂ ಬಂದಿದೆ. ಮುಂಗೈ ಮತ್ತು ತೋಳುಗಳ ಆಭರಣಗಳು ಇವೆ. ಪತಿಯ ಮರಣದ ಕಾರಣದಿಂದಾಗಿ ಈ ಸತಿಯು ಚಿತೆ ಏರಿ ಸಹಗಮನ ಪದ್ಧತಿ ಅನುಸರಿಸಿ ಸಾವಿನಲ್ಲೂ ಪತಿಯನ್ನು

ಹಿಂಬಾಲಿಸಿದ್ದಾಳೆ. ಕಲ್ಲಿನ ಮೇಲೆ ಸೂರ್ಯ ಚಂದ್ರರ ಕೆತ್ತನೆಗಳಿವೆ. ಕ್ರಿ.ಶ. ಸುಮಾರು ೧೪ನೆಯ ಶತಮಾನಕ್ಕೆ ಈ ಸ್ಮಾರಕವು ಸೇರುತ್ತದೆ.

ಬಬ್ಬೂರುವಿನ ಕೃಷಿ ಫಾರಂ ರಸ್ತೆಯ ಆಂಜನೇಯ ಗುಡಿ ಬಳಿ ಪೂರ್ವಾಭಿಮುಖವಾಗಿ ವೀರಗಲ್ಲೊಂದನ್ನು ನಿಲ್ಲಿಸಲಾಗಿದೆ. ಬೂದುಬಣ್ಣದ ಗ್ರಾನೈಟ್ ಇದಾಗಿದ್ದು ನಾಲ್ಕು ಅಡಿ ಎತ್ತರ ಮೂರೂವರೆ ಅಡಿ ಅಗಲ ಮತ್ತು ಅರ್ಧ ಅಡಿ ದಪ್ಪವನ್ನು ಹೊಂದಿದೆ. ಕಲ್ಲನ್ನು ಕಮಾನಾಕಾರವಾಗಿ ನಯ ಮಾಡಿಕೊಂಡು ಶಿಲ್ಪ ಬಿಡಿಸಲಾಗಿದೆ. ಈ ವೀರಗಲ್ಲಿನ ಬಲಭಾಗದಲ್ಲಿ ವೀರನು ಅಲಂಕೃತವಾಗಿರುವ ಚಲಿಸುವ ಕುದುರೆಯ ಮೇಲೆ ಕುಳಿತು ಬಲದ ಕೈನಲ್ಲಿ ಎತ್ತಿ ಹಿಡಿದ ಖಡ್ಗದಿಂದ ಹೋರಾಡುತ್ತಿದ್ದಾನೆ. ಈತನ ಹಿಂದೆ ಈತನ ಪುಟ್ಟ ಮಗ ಕೈಮುಗಿದು ನಿಂತಿದ್ದಾನೆ. ಈ ಬಗೆಯ ಮಗುವಿನ ಚಿತ್ರಣವು ಬೆಂಗಳೂರಿನ ತಾರಾಲಯದ ಬಳಿ ದೊರೆತಿರುವ ವೀರ ಮಾಸ್ತಿಕಲ್ಲಿನಲ್ಲಿಯೂ ಈ ಹಿಂದೆ ದೊರೆತಿದೆ. ಅಂದರೆ ಕುಟುಂಬದ ಸದಸ್ಯರನ್ನು ತೋರಿಸುವ ಸ್ಮಾರಕ ಇದಾಗಿದೆ ಎಂದು ಹೇಳಬಹುದು. ಈ ಮಗುವಿನ ಬಳಿಕ ಮಡಿದ ವೀರನ ಸತಿಯು ಅಲಂಕೃತಳಾಗಿ ಬಲದ ಕೈಯನ್ನು ಎತ್ತಿ ಹಿಡಿದಿದ್ದಾಳೆ. ಎಡದ ಕೈನಲ್ಲಿ ಸೀರೆಯ ನೆರಿಗೆಯನ್ನು ಹಿಡಿದಿದ್ದಾಳೆ. ವೀರನು ರಾಜಕೀಯ ಕಾರಣವೊಂದರಿಂದ ಶತ್ರುಗಳ ಜೊತೆ ಹೋರಾಡಿ ಮಡಿಯಲಾಗಿ ಈತನ ಸತಿ ಅಗ್ನಿಪ್ರವೇಶ ಮಾಡಿದ್ದಾಳೆ. ಕ್ರಿ.ಶ. ಸು. ೧೫ನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ. ಇಲ್ಲಿಯೇ ಬರಹವಿರುವ ಲಿಂಗಮುದ್ರೆ ಕಲ್ಲು ಒಂದು ಇದೆ.

ಇದೇ ಊರಿನ ರಂಗನಾಥ ದೇವಾಲಯದೊಳಗೆ ನಿಲ್ಲಿಸಿರುವ ವೀರಗಲ್ಲೊಂದು ಮೂರುವರೆ ಅಡಿ ಅಗಲ ಮತ್ತು ಎರಡೂವರೆ ಅಡಿ ಎತ್ತರವಿದೆ. ಮೂರು ವ್ಯಕ್ತಿಗಳ ಕೆತ್ತನೆ ಇಲ್ಲಿದ್ದು ವೀರನು ಅಶ್ವದ ಮೇಲೆ ಕುಳಿತು ಖಡ್ಗವನ್ನು ಎತ್ತಿ ಹಿಡಿದಿದ್ದಾನೆ. ಮುಂದೆ ಓರ್ವ ಮಹಿಳೆ ನರ್ತನ ಭಂಗಿಯಲ್ಲಿದ್ದಾಳೆ. ಅವಳ ಮುಂದೆ ಮತ್ತೋರ್ವಳು ನರ್ತನ ಮಾಡುತ್ತಾ ಕೈನಲ್ಲಿ ಒಂದು ಗಂಟನ್ನು ಹಿಡಿದಿದ್ದಾಳೆ. ಇದು ಯುದ್ಧಕ್ಕೆ ಹೊರಡುವ ಮೆರವಣಿಗೆಯನ್ನು ತೋರಿಸುತ್ತದೆ. ಉಳಿದ ಹಂತಗಳು ನಷ್ಟವಾಗಿವೆ. ಅಂದರೆ ಯುದ್ಧದಲ್ಲಿ ಶತ್ರುಗಳ ಜೊತೆ ಹೋರಾಡಿ ಈ ವೀರನು ಹತನಾಗಿದ್ದಾನೆ. ಕ್ರಿ.ಶ. ಸುಮಾರು ೧೪ನೇ ಶತಮಾನಕ್ಕೆ ಈ ವೀರಗಲ್ಲು ಸೇರಿರುತ್ತದೆ.

ಇಲ್ಲಿನ ಕೋಡಿ ಮಲ್ಲೇಶ್ವರ ದೇವಾಲಯದ ಮುಂದೆ ಒಂದು ಮಾಸ್ತಿ ಶಿಲ್ಪವನ್ನು ಇರಿಸಲಾಗಿದೆ. ಎರಡೂವರೆ ಅಡಿ ಎತ್ತರ ಒಂದು ಮುಕ್ಕಾಲು ಅಡಿ ಅಗಲದ ಸ್ಮಾರಕ ಇದಾಗಿದೆ. ಮಾಸ್ತಿ ಹೋಗಿರುವ ಮಹಿಳೆಯು ತನ್ನ ಬಲದ ಕೈನಲ್ಲಿ ಅಮೃತಪಾತ್ರೆ ಮತ್ತು ಎಡದ ಕೈಯಲ್ಲಿ ಬಡಿಸುವ ಸಾಧನವನ್ನು ಹಿಡಿದಿದ್ದು ಅಲಂಕೃತವಾದ ಕೇಶಾಲಂಕಾರ ಮತ್ತು ವೇಷಭೂಷಣಗಳನ್ನು ಹೊಂದಿದ್ದಾಳೆ. ಕಲ್ಲನ್ನು ಅಲಂಕೃತ ಮಾಡಿದ್ದಾರೆ. ಇದರ ಬಳಿ ಲಿಂಗಮುದ್ರೆ ಕಲ್ಲುಗಳು ಇದ್ದು ಒಂದರಲ್ಲಿ ಅಸ್ಪಷ್ಟ ಬರಹವಿದೆ. ಈ ಬಗೆಯ ಆಶಯವನ್ನು ಹೊಂದಿರುವ ಮತ್ತೆರಡು ಮಾಸ್ತಿಕಲ್ಲು ಇದೇ ತಾಲ್ಲೂಕಿನ ಉಡುವಳ್ಳಿ ಮತ್ತು ಕೂನಿಕೆರೆಗಳಲ್ಲಿಯೂ ದೊರೆತಿರುವುದರಿಂದ ಮಾಸ್ತಿಕಲ್ಲುಗಳ ವಿಭಿನ್ನ ಶಿಲ್ಪ ರಚನೆ ಇವುಗಳಾಗಿವೆ. ಕ್ರಿ.ಶ. ಸುಮಾರು ೧೬ನೇ ಶತಮಾನಕ್ಕೆ ಈ ಮಾಸ್ತಿಕಲ್ಲು ಸೇರುತ್ತದೆ. ಬಳಿಯ ಓಣಿಯೊಂದರಲ್ಲಿ ವಿಜಯನಗರದ (ಕ್ರಿ.ಶ. ಸುಮಾರು ೧೫ನೆಯ ಶತಮಾನ) ಕಾಲಕ್ಕೆ ಸೇರುವ ಶಾಸನದ ತುಣುಕು ಬಿದ್ದಿರುವುದು ನೋಡಿದರೆ ಆ ವೇಳೆಗಾಗಲೇ ಇದು ಪ್ರಸಿದ್ಧವಾದ ಸ್ಥಳವಾಗಿದ್ದಿತೆಂದು ತಿಳಿದುಬರುತ್ತದೆ.

ಬಬ್ಬೂರುವಿನಿಂದ ಸುಮಾರು ಏಳು ಕಿ.ಮೀ. ದೂರದಲ್ಲಿರುವ ಆಲೂರು ಅತ್ಯಂತ ಹಿರಿದಾದ ಮತ್ತು ಪ್ರಾಚೀನ ಗ್ರಾಮವಾಗಿದೆ. ಊರಿನ ಪೂರ್ವ ದಿಕ್ಕಿಗೆ ತುಸು ದೂರದಲ್ಲಿ ರಸ್ತೆಯ ಬಲಬದಿಯಲ್ಲಿ ಪೂರ್ವ ದಿಕ್ಕಿಗೆ ಮುಖ ಮಾಡಿ ನಿಲ್ಲಿಸಿರುವ ವೀರಗಲ್ಲು ಒಂದು ಎರಡೂ ಕಾಲು ಅಡಿ ಎತ್ತರ ಒಂದೂವರೆ ಅಡಿ ಅಗಲವಾಗಿದೆ. ಅರ್ಧ ಅಡಿ ದಪ್ಪವಿರುವ ಗ್ರಾನೈಟ್ ಇದಾಗಿದೆ. ಮೂರು ಹಂತಗಳಲ್ಲಿ ಚಿತ್ರಗಳನ್ನು ಬಿಡಿಸಲಾಗಿದೆ. ಒಂದನೆಯ ಹಂತದಲ್ಲಿ ವೀರನೊಬ್ಬನು ಯುದ್ಧ ನಿರತನಾಗಿರುವ ಚಿತ್ರಣವಿದ್ದು ತನ್ನ ಕೈನಲ್ಲಿ ಧನಸ್ಸು ಮತ್ತು ಬಾಣವನ್ನು ಹಿಡಿದಿದ್ದಾನೆ. ಮುಖ ಮತ್ತು ಎದೆಯ ಭಾಗದವರೆಗೂ ಪ್ರಾಯಶಃ ನೆಲದಲ್ಲಿ ಹುದುಗಿ ಹೋಗಿದೆ. ಎರಡನೆಯ ಹಂತದಲ್ಲಿ ಮಡಿದ ಈ ವೀರನನ್ನು ಅಪ್ಸರೆಯರು ಬಾಹುಗಳನ್ನಿಡಿದು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿದ್ದಾರೆ. ಮೂರನೆಯ ಹಂತದಲ್ಲಿ ಶಿವಲಿಂಗದ ಚಿತ್ರಣವಿದೆ. ಶತ್ರುಗಳ ಜೊತೆ ಯಾವುದೋ ಕಾರಣದಿಂದ ಹೋರಾಡಿ ಮಡಿದಿದ್ದಾನೆ ಈ ವೀರ. ಕ್ರಿ.ಶ. ಸುಮಾರು ೧೫ನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ. ಇಲ್ಲಿಯೇ ಹೊಲ ಒಂದರಲ್ಲಿ ತುರು ಕಾಳಗದ ವೀರಗಲ್ಲು ಒಂದು ಬಿದ್ದಿದ್ದು ಇದು ಏಳು ಅಡಿ ಎತ್ತರ ಎರಡೂ ಕಾಲು ಅಡಿ ಅಗಲವನ್ನು ಹೊಂದಿದೆ. ಬಿಳಿ ಬಣ್ಣದ ಗಟ್ಟಿಕಲ್ಲು ಇದಾಗಿದೆ. ಈ ಸ್ಮಾರಕ ಶಿಲೆಯನ್ನು ಮೂರು ಹಂತಗಳಲ್ಲಿ ಕೆತ್ತಲಾಗಿದೆ. ಮೊದಲನೆಯ ಹಂತದಲ್ಲಿ ಎರಡು ಗೋವುಗಳು ಎಡದ ಭಾಗಕ್ಕೆ ಮುಖ ಮಾಡಿರುವ ಸಣ್ಣ ಪ್ರಮಾಣದ ಚಿತ್ರಗಳಿವೆ. ಇವುಗಳ ಮುಂದೆ ವೀರನೊಬ್ಬನು ಎಡದ ಕೈನಲ್ಲಿ ಬಿಲ್ಲನ್ನು ಬಲದ ಕೈಯಲ್ಲಿ ಬಾಣವನ್ನು ಹಿಡಿದಿದ್ದಾನೆ. ಸೊಂಟದಲ್ಲಿ ಬಿಚ್ಚುಗತ್ತಿಯನ್ನು ಹೊಂದಿದ್ದಾನೆ. ಎದುರಿಗಿರುವ ಶತ್ರುವೂ ಸಹ ಬಿಲ್ಲನ್ನು ಬಾಣದಿಂದ ಹೂಡಿ ವೀರನೊಡನೆ ಕಾದಾಡುತ್ತಿದ್ದಾನೆ. ಅಂದರೆ ತುರುಗಳನ್ನು ಅಪಹರಿಸುವ ಕಳ್ಳ ಈ ಶತ್ರುವಾಗಿದ್ದಾನೆ. ಶತ್ರುವಿನಿಂದ ವೀರನು ಹತನಾಗಿದ್ದಾನೆ. ಎರಡನೆಯ ಹಂತದಲ್ಲಿ ಮಡಿದ ವೀರನನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಚಾಮರ ಬೀಸುತ್ತಾ ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ಅಪ್ಸರೆಯರ ಜೊತೆ ವೀರನು ಸ್ವರ್ಗದಲ್ಲಿ ಆಸೀನನಾಗಿದ್ದಾನೆ. ಕ್ರಿ.ಶ. ಸುಮಾರು ೧೬ನೇ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಬಳಿಯಲ್ಲಿಯೇ ಮೂರು ಅಡಿ ಎತ್ತರ, ಎರಡೂವರೆ ಅಡಿ ಅಗಲದ ತುಂಡಾಗಿರುವ ವೀರಗಲ್ಲು ಒಂದು ಇದೆ. ಮೂರು ಹಂತಗಳು ಉಳಿದಿದ್ದು ಅವುಗಳ ಬಲಭಾಗವು ಸಹ ನಷ್ಟವಾಗಿ ಹೋಗಿದೆ. ವೀರನು ಖಡ್ಗ ಹಿಡಿದ ಚಿತ್ರಣ ಮತ್ತು ಎರಡನೆಯ ಹಂತದಲ್ಲಿ ಮಡಿದ ಈ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಒಯ್ಯುತ್ತಿರುವ ಚಿತ್ರಣಗಳು ಮಾತ್ರ ಉಳಿದಿವೆ. ಕ್ರಿ.ಶ. ಸುಮಾರು ೧೫ನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಇಲ್ಲಿಂದ ತುಸು ಮುಂದೆ ಉಳಿದಿರುವ ವೀರಗಲ್ಲಿನ ಭಾಗವೊಂದು ಒಂದೂವರೆ ಅಡಿ ಎತ್ತರ ಹಾಗೂ ಮೂರು ಅಡಿ ಅಗಲವನ್ನು ಉಳ್ಳದ್ದಾಗಿದೆ. ಮಡಿದ ವೀರನನ್ನು ಅಪ್ಸರೆಯೋರ್ವಳು ಬಲಗೈಯಲ್ಲಿ ಶಂಖವನ್ನು ಹಿಡಿದು ಎಡಗೈಯಲ್ಲಿ ಚಾಮರವಿಡಿದು ಕರೆದೊಯ್ಯುತ್ತಿದ್ದಾಳೆ. ಅಪ್ಸರೆಯು ಶಂಖವಿಡಿದಿರುವುದು ಈ ವೀರಗಲ್ಲಿನ ಗಮನಾರ್ಹ ಅಂಶವಾಗಿದೆ. ಈ ಸ್ಮಾರಕವೂ ಸಹ ಕ್ರಿ.ಶ. ಸುಮಾರು ೧೫ನೆಯ ಶತಮಾನಕ್ಕೆ ಸೇರಿದುದಾಗಿದೆ.

ಇಲ್ಲಿಯೇ ತುಸು ದೂರದಲ್ಲಿ ಮೂರು ಮುಕ್ಕಾಲು ಅಡಿ ಎತ್ತರ ಹಾಗೂ ಎರಡೂವರೆ ಅಡಿ ಅಗಲದ ತ್ರಿಕೋನಾಕೃತಿಯ ವೀರಗಲ್ಲೊಂದು ಬಿದ್ದಿದ್ದು ಮೊದಲನೆಯ ಹಂತ ನಷ್ಟವಾಗಿದೆ. ಎರಡನೆಯ ಹಂತದಲ್ಲಿ ವೀರನನ್ನು ಚಾಮರ ಧಾರಿಣಿ ಅಪ್ಸರೆಯರು ಕೈ ಹಿಡಿದು ನಿಲ್ಲಿಸಿಕೊಂಡು ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ವೀರನು ಅಪ್ಸರೆಯರ ಜೊತೆ ಸ್ವರ್ಗದಲ್ಲಿ ಆಸೀನನಾಗಿದ್ದಾನೆ. ಈ ವೀರಗಲ್ಲು ಕ್ರಿ.ಶ. ಸುಮಾರು ೧೫ನೆಯ ಶತಮಾನಕ್ಕೆ ಸೇರುತ್ತದೆ.

ಇದರ ಬಳಿಯಲ್ಲಿಯೇ ಎರಡು ಅಡಿ ಎತ್ತರ ಹಾಗೂ ಒಂದೂ ಮುಕ್ಕಾಲು ಅಡಿ ಅಗಲದ ಸೂರ್ಯನ ವಿಗ್ರಹವೊಂದು ನೆಲದಲ್ಲಿ ಹುದುಗಿಹೋಗಿದೆ. ಸೂರ್ಯನು ತನ್ನೆರಡೂ ಕೈಗಳಿಂದಲೂ ಕಮಲಗಳನ್ನು ಹಿಡಿದಿದ್ದಾನೆ. ಶಿರದ ಹಿಂದೆ ಪ್ರಭಾವಳಿ ಇದೆ. ಹಿರಿಯೂರು ತಾಲ್ಲೂಕಿನಲ್ಲಿ ದೊರೆತಿರುವ ಪ್ರಥಮ ಪ್ರಾಚೀನ ಸೂರ್ಯ ವಿಗ್ರಹ ಇದಾಗಿದೆ. ಇದರ ಕಾಲಮಾನ ಕ್ರಿ.ಶ. ಸುಮಾರು ೧೦ನೆಯ ಶತಮಾನವಾಗಿದೆ. ಬಳಿಯಲ್ಲಿಯೇ ದುರ್ಗೆಯ ಅಪೂರ್ಣ ವಿಗ್ರಹವೊಂದಿದ್ದು ಒಂದೂಮುಕ್ಕಾಲು ಅಡಿ ಅಗಲ ಮತ್ತು ಒಂದೂವರೆ ಅಡಿ ಎತ್ತರವನ್ನು ಹೊಂದಿದೆ. ಭೂಮಿಯಲ್ಲಿ ಬಹುತೇಕ ಹುದುಗಿಹೋಗಿದೆ. ಬಲದ ಕೈನಲ್ಲಿ ತ್ರಿಶೂಲವನ್ನು ಈ ದೇವಿ ಹಿಡಿದಿದ್ದಾಳೆ. ಶಿರದಲ್ಲಿ ಮಕುಟ ಕೊರಳಲ್ಲಿ ಪದಕ ಮತ್ತು ಶರೀರದ ಕೆತ್ತನೆ ಇದ್ದು ಉಳಿದ ಚಿತ್ರಣಗಳು ಕಂಡರಿತವಾಗಿಲ್ಲ. ಈ ಸ್ಮಾರಕದ ಕಾಲಮಾನವೂ ಕ್ರಿ.ಶ. ಸುಮಾರು ಹತ್ತನೆಯ ಶತಮಾನವೇ ಆಗಿದೆ. ಯಾವುದೋ ಕಾರಣಕ್ಕೆ ಈ ಶಿಲ್ಪ ಅಪೂರ್ಣವಾಗಿದೆ. ಇಲ್ಲಿ ಪ್ರಾಚೀನ ಕಾಲಕ್ಕಾಗಲೇ ಸೂರ್ಯ ಮತ್ತು ದುರ್ಗೆಯರಿಗೆ ದೇವಾಲಯ ಇದ್ದುದ್ದು ಸ್ಪಷ್ಟವಾಗುತ್ತದೆ. ಅದೇ ವೇಳೆಯ ಎರಡು ನಾಗರ ಶಿಲ್ಪಗಳು ಹಾಗೂ ನಂದಿಯೊಂದರ ಮೂರ್ತಿಗಳಿದ್ದು ಈ ಅಂಶವನ್ನು ಬಲಪಡಿಸುತ್ತವೆ.

ಹಿರಿಯೂರಿನಿಂದ ಹದಿಮೂರು ಕಿ.ಮೀ. ದೂರದ ಆರನಕಟ್ಟೆ ಬಳಿಯ ತೊರೆಸಾಲು ನಾಗೇನಹಳ್ಳಿಯು ಅತ್ಯಂತ ಪ್ರಾಚೀನ ಗ್ರಾಮಗಳಲ್ಲಿ ಒಂದಾಗಿದೆ. ಹಳೆಯ ಕೋಟೆಯ ಮಣ್ಣಿನ ಅವಶೇಷಗಳನ್ನು ಇಂದಿಗೂ ಕಾಣಬಹುದಾಗಿದೆ. ಇಲ್ಲಿನ ಮುಖ್ಯರಸ್ತೆ ಬಳಿಯ ಆಂಜನೇಯ ದೇವಾಲಯದ ಹಿಂಬದಿಯಲ್ಲಿ ಐದು ವೀರ ಮತ್ತು ಮಾಸ್ತಿಕಲ್ಲು ಸ್ಮಾರಕಗಳಿದ್ದು ಇನ್ನಷ್ಟು ಇಲ್ಲಿನ ಕಲ್ಯಾಣಿಯಲ್ಲಿ ಉರುಳಿ ಹುದುಗಿ ಹೋಗಿವೆ. ಬಲಗಡೆಯಿಂದ ಮೊದಲನೆಯ ಸ್ಮಾರಕವೊಂದು ಎರಡು ಅಡಿ ಎತ್ತರ ಮತ್ತು ಒಂದು ಮುಕ್ಕಾಲು ಅಡಿ ಅಗಲವಾಗಿರುವ ವೀರಗಲ್ಲು ಆಗಿದೆ. ಅಲಂಕೃತವಾದ ವಸ್ತ್ರ ಮತ್ತು ಆಭರಣಗಳನ್ನು ಧರಿಸಿರುವ ವೀರನು ಬಲದ ಕೈಯಲ್ಲಿ ಪರಶುವನ್ನು ಎಡದ ಕೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ಅಂದರೆ ಈತ ಶತ್ರುಗಳೊಡನೆ ಎರಡೂ ಆಯುಧಗಳಿಂದ ಹೋರಾಡಿ ಹತನಾಗಿದ್ದಾನೆ. ಕಾರಣ ತಿಳಿದಿಲ್ಲ. ಕ್ರಿ.ಶ. ಸುಮಾರು ಹನ್ನೆರಡನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಬಳಿಯಲ್ಲಿಯೇ ಇರುವ ಎರಡನೆಯ ವೀರಗಲ್ಲು ಮೂರು ಅಡಿ ಎತ್ತರ ಹಾಗೂ ಎರಡು ಅಡಿ ಅಗಲದ ಅಳತೆಯನ್ನು ಹೊಂದಿದೆ. ವೀರನ ಚಿತ್ರವೇ ಇಲ್ಲಿ ಪ್ರಧಾನವಾಗಿದ್ದು ವೀರನು ಎಡದ ಕೈಯಲ್ಲಿ ಅಲಂಕೃತವಾದ ಧನುಸ್ಸನ್ನು ಹಿಡಿದಿದ್ದು ಬಲದ ಕೈಯಲ್ಲಿ ಖಡ್ಗ ಇಲ್ಲವೇ ಬಾಣವನ್ನು ಹಿಡಿದಿದ್ದಾನೆ. ಬೆನ್ನಿನ ಹಿಂದೆ ಬತ್ತಳಿಕೆ ಇದೆ. ಮೇಲೆ ಸೂರ್ಯ ಚಂದ್ರರ ರೇಖಾಚಿತ್ರವಿದ್ದು ಯುದ್ಧದ ಕಾರಣ ತಿಳಿದುಬಂದಿಲ್ಲ. ಕ್ರಿ.ಶ. ಸುಮಾರು ಹನ್ನೆರಡನೆಯ ಶತಮಾನಕ್ಕೆ ಈ ವೀರಗಲ್ಲು ಸ್ಮಾರಕ ಸೇರುತ್ತದೆ.

ಬಳಿಯಲ್ಲಿರುವ ಮೂರನೆಯ ವೀರಗಲ್ಲು ತುರು ಕಾಳಗದ ವೀರಗಲ್ಲಾಗಿದೆ. ಎರಡು ಅಡಿ ಎತ್ತರ ಮತ್ತು ಒಂದು ಮುಕ್ಕಾಲು ಅಡಿ ಅಗಲವನ್ನು ಉಳ್ಳ ಗಟ್ಟಿ ಶಿಲೆ ಇದಾಗಿದೆ. ಈ ವೀರಗಲ್ಲಿನಲ್ಲಿ ವೀರನದೇ ಪ್ರಧಾನ ಚಿತ್ರಣವಾಗಿದ್ದು ಇವನೊಬ್ಬ ಗೋವಳನಾಗಿದ್ದನೆಂಬುದು ಖಚಿತವಾಗುತ್ತದೆ. ಈತ ಬಲದ ಕೈಯಲ್ಲಿ ಬಾರುಗೋಲನ್ನು ಹಿಡಿದಿದ್ದಾನೆ. ಎಡದ ಕೈಯಲ್ಲಿ ಚಿಚ್ಚುಗತ್ತಿ ಹಿಡಿದಿದ್ದಾನೆ. ವಸ್ತ್ರಾಲಂಕಾರದಲ್ಲಿ ಕಚ್ಚೆ ಪಂಚೆಯ ಮೇಲೆ ಕಂಬಳಿಯ ಹೊದಿಕೆಯನ್ನು ಚಿತ್ರಿಸಲಾಗಿದೆ. ಆಭರಣಗಳನ್ನು ಈತ ಧರಿಸಿದ್ದಾನೆ. ಈತನ ಇಕ್ಕೆಲಗಳಲ್ಲೂ ಗೋವುಗಳೆರಡು ಮುಖ ಮೇಲಕ್ಕೆತ್ತಿ ಇವನೆಡೆಗೆ ಆತ್ಮೀಯತೆಯಿಂದ ನೋಡುತ್ತಿವೆ. ಅಂದರೆ ತುರುಗಳನ್ನು ರಕ್ಷಿಸಲು ಶತ್ರುಗಳೊಡನೆ ಈ ಗೋವಳ ವೀರನು ಹೋರಾಡಿ ಮಡಿದಿದ್ದಾನೆ. ಕ್ರಿ.ಶ. ಸುಮಾರು ಹದಿನಾಲ್ಕನೆಯ ಶತಮಾನಕ್ಕೆ ಈ ತುರುಕಾಳಗದ ವೀರಗಲ್ಲು ಸೇರುತ್ತದೆ.

ಈ ಮೇಲಿನ ಮೂರು ಸ್ಮಾರಕಗಳ ಹಿಂದೆ ಎರಡು ಸ್ಮಾರಕಗಳಿವೆ. ಎರಡು ಅಡಿ ಎತ್ತರ ಮತ್ತು ಮುಕ್ಕಾಲು ಅಡಿ ಅಗಲದ ಗ್ರಾನೈಟ್ ಸ್ಮಾರಕವೂ ಸಹ ವೀರಗಲ್ಲೇ ಆಗಿದೆ. ಇಲ್ಲಿಯೂ ವೀರನ ಚಿತ್ರಣವೇ ಪ್ರಧಾನವಾಗಿದೆ. ವೀರನು

ಕೈಮುಗಿದು ನಿಂತಿದ್ದಾನೆ. ವಸ್ತ್ರ ಮತ್ತು ಆಭರಣದ ಅಲಂಕಾರಗಳು ಇವನಿಗೆ ಇವೆ. ಎಡದ ತೋಳಿನಲ್ಲಿ ಖಡ್ಗವನ್ನು ತಬ್ಬಿ ಹಿಡಿದಿದ್ದಾನೆ. ಈತರ ಇಕ್ಕೆಲಗಳಲ್ಲೂ ಸರ್ಪಗಳೆರಡರ ಚಿತ್ರಣಗಳಿವೆ. ಅಂದರೆ ಈ ವೀರನು ಯಾವ ಕಾರಣದಿಂದ ಮರಣ ಹೊಂದಿದ ಎಂಬುದನ್ನು ತಿಳಿಸುವಲ್ಲಿ ಗೊಂದಲವಿದೆ. ಈ ಬಗೆಯ ಸರ್ಪಚಿತ್ರಣದ ವೀರಗಲ್ಲು ಇದೇ ತಾಲ್ಲೂಕಿನ ಕೂನಿಕೆರೆಯಲ್ಲಿಯೂ ದೊರೆತಿದೆ. ಈ ಸರ್ಪ ಸೂಚಕವು ಈ ವೀರನ ಆರಾಧ್ಯದೈವವೆ ಅಥವಾ ಸರ್ಪದಿಂದ ಕಚ್ಚಿಸಿಕೊಂಡು ಮಡಿದನೇ ಸ್ಪಷ್ಟವಾಗುವುದಿಲ್ಲ. ಕ್ರಿ.ಶ. ಸುಮಾರು ಹದಿನೈದನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಐದು ಅಡಿ ಎತ್ತರದ ಮೂರೂವರೆ ಅಡಿ ಅಗಲದ ಗ್ರಾನೈಟ್ ಶಿಲೆಯ ವೀರಮಾಸ್ತಿ ಕಲ್ಲುವಿನಲ್ಲಿ ಎರಡು ಹಂತಗಳಿವೆ. ಒಂದನೇ ಹಂತದ ಬಲಭಾಗದಲ್ಲಿ ವೀರನು ಎಡದ ಕೈನಲ್ಲಿ ಬಿಲ್ಲನ್ನು ಹಿಡಿದು ಬಲದ ಕೈನಲ್ಲಿ ಬಾಣವನ್ನು ಹಿಡಿದು ನಿಂತಿದ್ದಾನೆ. ಅಲಂಕಾರಿಕ ವಸ್ತ್ರ ಆಭರಣಗಳನ್ನು ಇವನು ಧರಿಸಿರುವುದನ್ನು ಗಮನಿಸಿದರೆ ಇವನೊಬ್ಬ ಸ್ಥಳೀಯ ನಾಯಕನೆಂಬುದು ಖಚಿತವಾಗುತ್ತದೆ. ಇವನ ಮುಂದೆ ಸತಿ ಹೋದ ಇಬ್ಬರು ಸ್ತ್ರೀಯರ ಚಿತ್ರಣಗಳಿದ್ದು ದೊಡ್ಡ ಪ್ರಮಾಣದ ಓರ್ವ ಸತಿಯು ತನ್ನೆರಡೂ ಕೈಗಳನ್ನು ಮೇಲೆ ಎತ್ತಿದ್ದು ನಿಂಬೆಹಣ್ಣನ್ನು ಬಲದ ಕೈನಲ್ಲಿ ಹಿಡಿದಿದ್ದಾಳೆ. ಎಡದ ಕೈನಲ್ಲಿ ವಸ್ತ್ರವೊಂದನ್ನು ಹಿಡಿದಿದ್ದಾಳೆ. ಶಿರದ ಹಿಂದೆ ಪ್ರಭಾವಳಿ ಇದೆ. ಈಕೆಯ ಎಡಬದಿಗೆ ಇರುವ ಸತಿಹೋಗಿರುವ ಮಹಿಳೆಯ ಚಿತ್ರಣವು ಪುಟ್ಟ ಪ್ರಮಾಣದ್ದಾಗಿದ್ದು ಈಕೆಯು ಅಲಂಕಾರಯುಕ್ತ ವಸ್ತ್ರ ಆಭರಣಗಳನ್ನು ಧರಿಸಿದ್ದಾಳೆ ಶಿರದ ಹಿಂದೆ ಪ್ರಭಾವಳಿ ಇದೆ. ಬಲದ ಕೈನಲ್ಲಿ ವಸ್ತ್ರ ಹಿಡಿದಿದ್ದಾಳೆ. ಎಡದ ಕೈಯನ್ನು ಇಳಿ ಬಿಟ್ಟಿದ್ದಾಳೆ. ಮಡಿದಿರುವ ವೀರನ ಸತಿಯರು ಇವರಿಬ್ಬರಾಗಿದ್ದಾರೆ.

ಎರಡನೆಯ ಹಂತದಲ್ಲಿ ಸ್ವರ್ಗಕ್ಕೆ ಸಂದಿರುವ ವೀರನು ಖಡ್ಗವಿಡಿದು ಕುಳಿತುಕೊಂಡಿದ್ದಾನೆ. ಕಾಲದ ದೃಷ್ಟಿಯಿಂದ ಕ್ರಿ.ಶ. ಸುಮಾರು ೧೩ನೆಯ ಶತಮಾನಕ್ಕೆ ಸೇರುವ ಈ ಪ್ರಮುಖ ವೀರಗಲ್ಲುವಿನಿಂದಾಗಿ ಇಲ್ಲಿ ಗಣನೀಯ ಪ್ರಮಾಣದ ಯುದ್ಧವೊಂದು ಜರುಗಿರುವುದು ನಂತರ ಇಲ್ಲಿ ಸತಿಸಹಗಮನ ನಡೆದಿರುವುದು ಬೆಳಕಿಗೆ ಬಂದಂತೆ ಆಗಿದೆ.

ಐಮಂಗಲದ ಬಳಿ ಇರುವ ಮರಡಿ ದೇವಿಗೆರೆಯ ಕೋಡಿ ಮಲ್ಲೇಶ್ವರ ದೇವಾಲಯದ ಬಲಬದಿಯಲ್ಲಿ ನಿಲ್ಲಿಸಿರುವ ತುರುಕಾಳಗದ ವೀರಗಲ್ಲು ಒಂದು ಎರಡೂವರೆ ಅಡಿ ಎತ್ತರ ಮತ್ತು ಅಷ್ಟೆ ಅಗಲದ ಅಳತೆಯನ್ನು ಹೊಂದಿದೆ. ಒಂದೇ ಹಂತದಲ್ಲಿ ಕೆತ್ತಿರುವ ಉಬ್ಬುಶಿಲ್ಪ ಇದಾಗಿದೆ. ಇದರಲ್ಲಿ ವೀರನು ಕುದುರೆಯೊಂದರ ಮೇಲೆ ಕುಳಿತಿದ್ದಾನೆ. ಎಡದ ಕೈಯಲ್ಲಿ ಕುದುರೆಯ ಜೀನ್‌ಅನ್ನು ಬಲದ ಕೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ನಡುವಿನಲ್ಲಿ ಬಿಚ್ಚುಗತ್ತಿ ಇದೆ. ಇವನಿಗೆ ವಸ್ತ್ರ ಮತ್ತು ಆಭರಣಗಳ ಅಲಂಕಾರಗಳಿವೆ. ಅಲ್ಲದೇ ಕುದುರೆಗೂ ಅಲಂಕಾರ ಮಾಡಿರುವುದು ಗಮನಾರ್ಹವಾಗಿದೆ. ಈತನ ಹಿಂದೆ ಎರಡು ಸುತ್ತಿನ ಪುಷ್ಪಲತೆಗಳ ಅಲಂಕಾರವಿದೆ. ಇವುಗಳ ನಡುವೆ ನಿಂತಿರುವ ಪುಟ್ಟ ಪ್ರಮಾಣದ ಗೋವಿನ ಚಿತ್ರ ಇರುವುದರಿಂದ ಇದು ತುರುಕಾಳಗದ ವೀರಗಲ್ಲು ಎಂಬುದನ್ನು ಪರಿಗಣಿಸಲು ಸಾಧ್ಯವಾಗಿದೆ. ಎರಡು ಪುಷ್ಪಗಳ ನಂತರ ಸೂರ್ಯನ ಚಿತ್ರ ಮತ್ತು ಎಡಬದಿಯಲ್ಲಿ ಚಂದ್ರನ ಚಿತ್ರಣವಿದೆ. ಅಲ್ಲದೇ ಬಲಬದಿಯ ಗೋವಿನ ಬಳಿ ಕಳಸದ ಚಿತ್ರಣವಿದೆ. ಕಳ್ಳರೊಡನೆ ತುರುವಿಗಾಗಿ ಈ ವೀರ ಹೋರಾಡಿ ಮಡಿದಿದ್ದಾನೆ. ವೀರಗಲ್ಲಿನ ಮೇಲಿರುವ ಶಿವಲಿಂಗ ಮತ್ತು ನಂದಿಯ ಚಿತ್ರಣದಿಂದ ಈತ ಶೈವಮತಕ್ಕೆ ಸೇರಿದವನೆಂಬು ದನ್ನು ಗುರುತಿಸಬಹುದು. ಕರ್ನಾಟಕದಲ್ಲಿ ಈವರೆಗೆ ದೊರೆತಿರುವ ತುರುಕಾಳಗದ ಕಲಾತ್ಮಕ ವೀರಗಲ್ಲುಗಳಲ್ಲಿ ಇದೊಂದು ವಿಶಿಷ್ಟ ಬಗೆಯದಾಗಿದೆ.

ಆದಿವಾಲದ ಬಳಿ ಇರುವ ನಂದಿಹಳ್ಳಿಯ ರಂಗನಾಥ ದೇವಾಲಯದ ಎದುರಿಗೆ ಪುಟ್ಟ ಗುಡಿಯ ಒಳಗೆ ವೀರಗಲ್ಲೊಂದನ್ನು ನಿಲ್ಲಿಸಲಾಗಿದ್ದು ಇದು ಒಂದುಮುಕ್ಕಾಲು ಅಡಿ ಎತ್ತರ ಮತ್ತು ಅಷ್ಟೆ ಅಗಲವನ್ನು ಉಳ್ಳದ್ದಾಗಿದೆ. ಇದರಲ್ಲಿ ವೀರನೊಬ್ಬನು ತನ್ನ ಎಡದ ಕೈನಲ್ಲಿ ಕೊಡಲಿಯನ್ನು ಹಿಡಿದಿದ್ದಾನೆ. ಬಲದ ಕೈನಲ್ಲಿ ದುಂಡನೆಯ ಕಲ್ಲೊಂದನ್ನು ಹಿಡಿದಿದ್ದಾನೆ. ಕೊಡಲಿಯ ಮೇಲೆ ಮರವೊಂದರ ಚಿತ್ರವಿರುವುದರಿಂದ ಇವನೊಬ್ಬ ಮರ ಕಡಿಯುವ ಕಾಯಕದವನಾಗಿದ್ದಾನೆ. ಈ ವೇಳೆಯಲ್ಲಿ ಶತ್ರುಗಳು ಯಾವುದೋ ಕಾರಣಕ್ಕಾಗಿ ಇವನ ಮೇಲೆ ಆಕ್ರಮಣ ಮಾಡಿದಾಗ ಈ ಮರ ಕಡಿಯುವವನು ಶತ್ರುಗಳ ಜೊತೆ ಕಲ್ಲಿನಿಂದ ಹೋರಾಡಿದ್ದಾನೆ. ಕೊನೆಗೆ ಹತನೂ ಆಗಿರುವುದ ರಿಂದ ಈ ಸ್ಮಾರಕ ನಿರ್ಮಾಣವಾಗಿದೆ. ಇವನಿಗೆ ಶಿರೋಮುಡಿ ಮುಂಗೈ, ತೋಳು ಕಾಲಡಗಿ ನಡುವಿನಲ್ಲಿ ಕಚ್ಚೆ, ಕೊರಳಲ್ಲಿ ಸರ ಮತ್ತು ನಡುವಿನಲ್ಲಿ ಬಿಚ್ಚುಗತ್ತಿ ಇವೆ. ಮೇಲ್ಭಾಗದ ಚಿತ್ರಣದಲ್ಲಿ ಸೂರ್ಯ ಚಂದ್ರರ ಚಿತ್ರಣಗಳಿವೆ.

ಕರ್ನಾಟಕದಲ್ಲಿ ಈವರೆಗೆ ಕಲ್ಲನ್ನು ಆಯುಧವನ್ನಾಗಿ ಹೋರಾಡಿ ಮಡಿದ ವೀರಗಲ್ಲುಗಳು ಲಭಿಸಿಯೇ ಇರಲಿಲ್ಲ. ವೀರಗಲ್ಲುಗಳ ಅಧ್ಯಯನದಲ್ಲಿ ಇದೊಂದು ಹೊಸ ಪ್ರಕಾರವಾಗಿದೆ. ಕ್ರಿ.ಸ. ಸುಮಾರು ೧೫ನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಹಿರಿಯೂರು ತಾಲ್ಲೂಕಿನಲ್ಲಿ ಲಭಿಸಿರುವ ಮೇಲಿನ ಪ್ರಾಚ್ಯಾವಶೇಷಗಳಿಂದಾಗಿ ಹಿರಿಯೂರು ತಾಲ್ಲೂಕಿನ ಪ್ರಾಚೀನ ಇತಿಹಾಸವನ್ನು ಕಟ್ಟುವಲ್ಲಿ ಹೊಸ ಬೆಳಕು ಚೆಲ್ಲಿದಂತಾಗಿದೆ.

ಪ್ರಕಾಶ್ ಶೇಟ್*
ಡಾ. ಎಸ್.ಜಿ. ಸಾಮಕ್**

# ೧ನೇ ಕೃಷ್ಣವರ್ಮನ ಪೋಟಿನ್ ನಾಣ್ಯ ?

ಕೆಲವು ತಿಂಗಳ ಹಿಂದೆ ಬನವಾಸಿಗೆ ಹೋಗಿದ್ದಾಗ ಅಲ್ಲಿನ ಅಕ್ಕಸಾಲಿಗರೊಬ್ಬರಲ್ಲಿ ಕೆಲವು ಪುರಾತನ ನಾಣ್ಯಗಳಿದ್ದ ವಿಷಯ ತಿಳಿಯಿತು. ಅವರಲ್ಲಿದ್ದ ನಾಣ್ಯಗಳನ್ನು ಪರಿಶೀಲಿಸಿದಾಗ ಎರಡು ಪೋಟಿನ್ ನಾಣ್ಯಗಳು ನಮ್ಮ ಗಮನಕ್ಕೆ ಬಂದವು. ಅವುಗಳನ್ನು ಪಡೆದ ಬಗ್ಗೆ ಅಧ್ಯಯನ ಮಾಡಬೇಕೆಂದಿರುವಾಗಲೇ ಅಂತಹುದೇ ನಾಣ್ಯಗಳನ್ನು ಕುರಿತಾದ ಲೇಖನ ದಿನಾಂಕ ೧೧-೧-೨೦೦೮ರ ಹಿಂದೂ ಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. ಆ ಲೇಖನದಲ್ಲಿ ಮಂಜೇಶ್ವರದ ಮುಕುಂದ ಪ್ರಭುಗಳು ಮೊದಲ ಬಾರಿಗೆ ಬನವಾಸಿ ಕದಂಬರ ನಾಣ್ಯವನ್ನು ಪತ್ತೆಹಚ್ಚಿದ ವಿಷಯ ತಿಳಿಯಿತು. ಮುಕುಂದ ಪ್ರಭುಗಳು ಆ ನಾಣ್ಯಗಳ ಮೇಲಿದ್ದ 'ಶ್ರೀ ದೋಷರಾಶಿ' ಯೆಂಬ ಶಾಸನದಿಂದ ಅವು ಕದಂಬರ ಪ್ರಸಿದ್ಧ ದೊರೆ ೨ನೇ ರವಿವರ್ಮನ ಕಾಲದ್ದೆಂಬ ತೀರ್ಮಾನಕ್ಕೆ ಬಂದಿದ್ದಾರೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಡಾ. ಶ್ರೀನಿವಾಸ ಪಾಡಿಗಾರ್ ಹಾಗೂ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಶಾಸನಶಾಸ್ತ್ರ ವಿಭಾಗದ ನಿರ್ದೇಶಕರು ನೀಡಿರುವ ಅಭಿಪ್ರಾಯಗಳ ಆಧಾರದ ಮೇಲೆ ಪ್ರಭುಗಳು ಮೇಲಿನ ತೀರ್ಮಾನಕ್ಕೆ ಬಂದಿದ್ದಾರೆ.

ನಮಗೆ ಸಿಕ್ಕಿರುವ ಎರಡು ಪೋಟಿನ್ ನಾಣ್ಯಗಳಲ್ಲಿ ಒಂದು ನಾಣ್ಯ ೪೫೦ ಮಿಲಿಗ್ರಾಂ ತೂಕವಿದ್ದು ೧೧ ಮಿ.ಮಿ. ವ್ಯಾಸವನ್ನು ಹೊಂದಿದ್ದು 'ದೋಷರಾಶಿ'ಯೆಂಬ ಬರಹವನ್ನು ಹೊಂದಿದೆ. ಮತ್ತೊಂದು ನಾಣ್ಯ ೫೫೦ ಮಿಲಿಗ್ರಾಂ ತೂಕವಿದ್ದು, ೧೪ ಮಿ.ಮಿ. ವ್ಯಾಸ ಹೊಂದಿದ್ದು 'ಶ್ರೀ ದೋಷರಾಶಿ' ಯೆಂಬ ಬರಹವನ್ನು ಹೊಂದಿದ್ದು ಎರಡು ನಾಣ್ಯಗಳ ಹಿಂಭಾಗವು ಶಾಸನ ಹಾಗೂ ಅಲಂಕಾರ ರಹಿತವಾಗಿವೆ. ನಾಣ್ಯಗಳ ಮೇಲೆ ನಾಲ್ಕು ಎಸಳುಗಳ ಕಮಲದ ಹೂವನ್ನು ಚಿತ್ರಿಸಿ ಎಸಳುಗಳ ಮೇಲೆ ಶಾಸನ ಅಕ್ಷರಗಳನ್ನು ಬರೆಯಲಾಗಿದೆ. ಇತ್ತೀಚೆಗೆ ಡಾ. ಎಂ. ಗಿರಿಜಾಪತಿ ಹಾಗೂ ಎಲ್. ಸುಬ್ರಮಣ್ಯ ಅವರು Numismatics Digest Vol. 31 (2007), pp 135 (Coins of the Kadambas of Banavasi) ಯೆಂಬ ಲೇಖನದಲ್ಲಿ ಇದೇ ರೀತಿಯ ನಾಣ್ಯಗಳನ್ನು ಉಲ್ಲೇಖಿಸಿ (ಬೆಣ್ಣೂರು ತಾಮ್ರ ಶಾಸನವನ್ನು ಆಧರಿಸಿ) ಅವು ಕದಂಬ ದೊರೆ ೨ನೇ ಕೃಷ್ಣವರ್ಮನದ್ದಾಗಿರ ಬೇಕೆಂದು ಅಭಿಪ್ರಾಯಪಟ್ಟಿರುತ್ತಾರೆ. (ಸಾಲು ೯-೨೦ ; ಶ್ರೀ ದೋಶರಾಶಿವವರ್ಾತ್ಮ ಧರ್ಮೇಣ ಪೃತ್ವಿಂಚರಂ ಸಿಂಹಾಸನ-ವ, --ರಾಶೀಣಃ-).

ಕೆಲವರ್ಷಗಳ ಹಿಂದೆ ಡಾ. ಸಾಮಕ್ ಮತ್ತು ಡಾ. ಜಗದೀಶ್, ಸೊರಬ ತಾಲೂಕಿನ ಅರತೆಲಗದ್ದೆಯಲ್ಲಿ ಬನವಾಸಿ ಕದಂಬರ ಕಾಲದ ಏಳು ತಾಮ್ರಶಾಸನಗಳನ್ನು ಬೆಳಕಿಗೆ ತಂದಿದ್ದಾರೆ. ಅವುಗಳಲ್ಲಿ ಒಂದು ಶಾಸನ ಕದಂಬದೊರೆ ೧ನೇ ಕೃಷ್ಣವರ್ಮನದಾಗಿದ್ದು ಅದು ಆತನ ಈವರೆಗೆ ದೊರೆತ ಪ್ರಪ್ರಥಮ ಶಾಸನವಾಗಿದೆ. ಆ ಶಾಸನದಲ್ಲಿ ೧ನೇ ಕೃಷ್ಣವರ್ಮನನ್ನು ಶ್ರೀ ದೋಶರಾಸಿ ನರೇಂದ್ರನೆಂದು ಕರೆಯಲಾಗಿದೆ. ಅದರಲ್ಲಿ ಆತ ಸ್ವಸಾಮ್ರಾಜ್ಯ ವ್ರತದೀಕ್ಷೆಯನ್ನು ತೆಗೆದುಕೊಂಡಿರುವುದಾಗಿ ಉಲ್ಲೇಖಿತವಾಗಿದೆ.

ಕೃಷ್ಣವರ್ಮನ ೧೫ ನೆಯ ವರ್ಷದ ಅರೇತಲಗದ್ದೆ ತಾಮ್ರಶಾಸನ

### ಮೊದಲನೆಯ ಹಲಗೆ ಹಿಂಭಾಗ

೧ ಸ್ವಸ್ತಿ ಜಯತಿ ವಿಜಯ ಹೇತುಃ ಕಾರಣಂ ಕಾರಣಾನಾಂ ಪರಮ ನಿಧನಮೇಕ

೨ ಜ್ಯೋತಿರಾತ್ಮೇಶ್ವರಸ್ಯ ಯದಧಿ ವಸತಿ ವಿಶ್ವಾವಿಷ್ಟಪಾನಾಂ ವಿಭೂತಿಃ

೩ ಸ್ಥಿತಿಚಿರತಿ ನಿಸರ್ಗ್ಗೇ ಸ್ವೇನ ವಿಷ್ವಜ್ಮಹಿಮ್ನಾ ॥ ತದನುಕೃತ ವಿಧಾತಃ

೪ ಕೃಷ್ಣವರ್ಮ್ಮರುಧರ್ಮ್ಮಾ ಭುವನವಿದಿತ ಶೌರ್ಯ್ಯಾವಾಪ್ತ ಸರ್ವ್ವಸ್ವರಾಜ್ಯಃ

೫ ಜಯತಿ ಭುವ ಮುದನ್ವನ್ಮೇಖಲಾಮೇಕಪತ್ನೀಮ್ ನಿಹತರಿಪು ನೃಪ ಶ್ರೀ ದೋ

### ಎರಡನೆಯ ಹಲಗೆ ಹಿಂಭಾಗ

೬ ಷರಾಷಿರ್ನ್ನರೇನ್ದ್ರಃ ಅಪಿಚ ಪರಮಾಯುಷಾಮಧಿಗತ ವಿದ್ಯಾನಾ

*೯೪೪೮೨ ೯೬೫೫೫, **೯೪೪೮೪ ೩೮೦೩೮

೭ ಮತಿಷಯ ವಿಭವ ಭುವನ ವಿದಿತಾನಾಮವಿಪನ್ನರ್ತು ಸಮ್ಪದ

೮ ವೃದ್ಧಜನಪದ ಧನಕನಕ ನಿಚಯಾಭಿತರ್ಪ್ಪಿತ ಸುರ

೯ ಗುರುಜನಾನಾನ್ನಿರನ್ತರ ವರ್ಧಮಾನ ಪುಣ್ಯಕರ್ಮ್ಮ ಣಾಮ್

೧೦ ಅನೇಕ ಸಮರ ಸಂಕಟ ವಿಜಯಲಬ್ಧ ಬಹು ಮಾನಾನಾಂ



ಮಂಗಳವೂ ವಿಜಯಕ್ಕೆ ಕಾರಣನೂ ಕಾರಣಗಳಿಗೆ ಆತ್ಮೇಶ್ವರನ ಏಕಜ್ಯೋತಿಯಾದ ವಿಶ್ವವ್ಯಾಪಿಗಳ ಸ್ಥಿತಿ ಚರ ನಿಸರ್ಗ (ಮೂರು ಸ್ವಭಾವಗಳಿಗೂ) ಕಾರಣ ಪುರುಷನೂ ವಿಶ್ವದ ಮಹಿಮೆಯಿಂದ ತಾನೇ ಆಗಿರುವವನೂ ಯಾವುದನ್ನು ಆಶ್ರಯಿಸಿ ವಾಸಿಸುತ್ತಾನೆ (ಅವನು ಜಯಿಸುತ್ತಾನೆ) ಅವನನ್ನು ಆಶ್ರಯಿಸಿದ ವಿಧಾತನಾದ ಕೃಷ್ಣವರ್ಮ(ನು) ಹೆಚ್ಚಿನ ಧರ್ಮದಿಂದಾಗಿ ಪ್ರಪಂಚದಲ್ಲಿ ತಿಳಿಯಲ್ಪಟ್ಟ ಶೌರ್ಯದಿಂದ ಆವರಿಸಿದ ಎಲ್ಲ ಸ್ವರಾಜ್ಯಗಳನ್ನು ಹೊಂದಿದವನಾಗಿ, ಒಡೆತನದಿಂದ ಅಖಿಲ ಸ್ವರಾಜ್ಯವನ್ನು ಏಕಪತ್ನಿಯನ್ನಾಗಿ ಮಾಡಿಕೊಂಡು ಸೋಲಿಸಲ್ಪಟ್ಟ ಶತ್ರುರಾಜರುಗಳನ್ನು ಹೊಂದಿದ ಶ್ರೀದೋಷರಾಶಿನರೇಂದ್ರನು ಜಯಿಸುತ್ತಾನೆ ಮತ್ತು ಕೂಡಾ ಪರಮಾಯುಷಿಗಳ (ಹೆಚ್ಚಿನ ಆಯುಷ್ಯುಳ್ಳ) ವಿದ್ಯೆಯನ್ನು ಹೊಂದಿರುವರ ಅತಿಶಯವಾದ ಐಶ್ವರ್ಯ ದಿಂದಾಗಿ ತಿಳಿಯಲ್ಪಟ್ಟವರ ಭೂಸಂಪತ್ತನ್ನು ಹೊಂದಿದ ಹೆಚ್ಚುತ್ತಿರುವ ದೇಶ ಧನಕನಕಗಳ ರಾಶಿಯಿಂದ ಅರ್ಪಿಸಲ್ಪಟ್ಟವನು, ದೇವ ಗುರು ಜನರನ್ನು ನಿರಂತರವಾಗಿ ಹೊಂದಿರುವ ಹೆಚ್ಚುತ್ತಿರುವ ಪುಣ್ಯಕಾರ್ಯಗಳಿಂದಾಗಿ ಅನೇಕ ಸಮರಗಳೆಂಬ ಸಂಕಟದಲ್ಲಿ ವಿಜಯವನ್ನು ಪಡೆದ ಪ್ರಶಸ್ತಿಗಳನ್ನು, ಪೂಜಿಸುವ ಒಡೆಯರ (ರಾಜರ) ಅಖಿಲ ಜಗಧರ್ಮ ಹೊಂದಿರುವ ಮಹಾರಾಜನಾದ, ಒಡೆಯನಾದ ಮಹಾಸೇನ ಮಾತೃಗಣಗಳನ್ನು ಸೇವಿಸಿದವನಾದ ಅಶ್ವಮೇಧಯಾಗ ಮಾಡಿರುವ ಮಾನವ್ಯಸ ಗೋತ್ರದ ಹಾರಿತೀ ಪುತ್ರನಾದ ಶ್ರೀಕೃಷ್ಣವರ್ಮನು ಶ್ರೀಮತಿಯೊಂದಿಗೆ ಸ್ವಸಾಮ್ರಾಜ್ಯದ ವ್ರತ ದೀಕ್ಷೆಯ ಹದಿನೈದನೆಯ ವರ್ಷದಲ್ಲಿ ಈ ಶಾಸನವನ್ನು ಹೊರಡಿಸಿದ್ದಾರೆ.



ಈಗ ತಿಳಿದಿರುವಂತೆ ಕದಂಬರ ಉಚ್ಚಂಗಿ ಶಾಖೆಯ ಮೂಲಪುರುಷ ಒಂದನೇ ಕೃಷ್ಣವರ್ಮನಾಗಿದ್ದಾನೆ. ಪ್ರಸ್ತುತ ಶಾಸನದ ಆಧಾರದ ಮೇಲೆ ಈವರೆಗೆ ರವಿವರ್ಮನ ಅಥವಾ ೨ನೇ ಕೃಷ್ಣವರ್ಮನದ್ದಾಗಿರಬೇಕೆಂದು ಭಾವಿಸಲಾಗಿದ್ದ ದೋಷರಾಶಿ ಅಂಕಿತದ ನಾಣ್ಯಗಳನ್ನು ದೊರೆ ೧ನೇ ಕೃಷ್ಣವರ್ಮನ ಕಾಲಕ್ಕೆ ಸೇರಿಸಬಹುದಾಗಿದೆ.

ಅಮರೇಶ ಯತಗಲ್*

# ಸುರಪುರ ನಾಯಕ ಅರಸರ ನಾಣ್ಯಗಳು

ಜಿಲ್ಲಾ ಕೇಂದ್ರ ಕಲಬುರ್ಗಿಯಿಂದ ದಕ್ಷಿಣಕ್ಕೆ ೧೦೬ ಕಿ.ಮೀ. ದೂರದಲ್ಲಿರುವ ಸುರಪುರವು ಕೃಷ್ಣ ಹಾಗೂ ಭೀಮಾನದಿಯ ಮಧ್ಯದಲ್ಲಿದೆ. ಇಲ್ಲಿ ಕ್ರಿ.ಶ. ೧೬೩೬ ರಿಂದ ೧೮೫೮ ರವರೆಗೆ ಸುಮಾರು ೧೨ ಜನ ನಾಯಕ ಅರಸರು ಆಳ್ವಿಕೆ ನಡೆಸಿದ್ದಾರೆ. ಇವರು ಗೋಸಲ ವಂಶಜರು. ಈ ಮನೆತನದ ಸ್ಥಾಪಕ ಗಡ್ಡಿಪಿಡ್ಡನಾಯಕ. ಈತ ಆನೆಯ ಸೊಕ್ಕನ್ನು ಅಡಗಿಸಿ 'ಮದಗಜಮಲ್ಲ' ಎಂಬ ಬಿರುದನ್ನು ಧರಿಸಿದ್ದನು. ನಂತರ ಅಧಿಕಾರಕ್ಕೆ ಬಂದ :

ಹಸರಂಗಿ ಪಾಮನಾಯಕ (ಕ್ರಿ.ಶ. ೧೬೬೬–೧೬೮೭), ಪೀತಾಂಬರಿ ಬಹಿರಿಪಿಡ್ಡನಾಯಕ (ಕ್ರಿ.ಶ. ೧೬೮೭–೧೭೨೬), ಇಮ್ಮಡಿ ಪಾಮನಾಯಕ (ಕ್ರಿ.ಶ. ೧೭೨೭–೧೭೪೧), ಮುಮ್ಮಡಿ ಪಿಡ್ಡನಾಯಕ (ಕ್ರಿ.ಶ. ೧೭೪೨–೧೭೪೬), ಮೊಂಡಗೈ ವೆಂಕಟಪ್ಪನಾಯಕ (ಕ್ರಿ.ಶ. ೧೭೪೭–೧೭೫೨), ಮುಮ್ಮಡಿ ಪಾಮನಾಯಕ (ಕ್ರಿ.ಶ. ೧೭೫೩–೧೭೭೩), ಇಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ. ೧೭೭೩–೧೮೦೨), ಮುಮ್ಮಡಿ ಪಿಡ್ಡನಾಯಕ (ಕ್ರಿ.ಶ. ೧೮೦೨–೧೮೧೮), ಮುಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ. ೧೮೧೮–೧೮೨೭), ಕೃಷ್ಣಪ್ಪನಾಯಕ (ಕ್ರಿ.ಶ. ೧೮೨೭–೧೮೪೩), ಹಾಗೂ ನಾಲ್ವಡಿ ವೆಂಕಟಪ್ಪನಾಯಕರು (ಕ್ರಿ.ಶ. ೧೮೪೨–೧೮೫೮). ಅನೇಕ ಬಿರುದುಗಳನ್ನು ಧರಿಸಿದ್ದು ನಾಡಿನ ಸಂಸ್ಕೃತಿಗೆ ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ.

ಸುರಪುರದ ನಾಯಕ ಅರಸರ ಕುರಿತಾಗಿ ಸಾಕಷ್ಟು ಸಂಶೋಧನೆಗಳಾಗಿವೆ. ಸಂಶೋಧನಾ ಮಹಾಪ್ರಬಂಧಗಳೂ ಹೊರಬಂದಿವೆ. ಆ ಸಂಶೋಧನ ಮಹಾಪ್ರಬಂಧಗಳಲ್ಲಿ ಸುರಪುರದ ನಾಯಕ ಅರಸರು ವಿಜಯನಗರದ ನಾಣ್ಯಗಳನ್ನೇ ಬಳಸಿರಬಹುದು. ಇಲ್ಲವೇ ಇವರು ಆದಿಲ್‌ಶಾಹಿಗಳ ಅಧಿಕಾರಾವಧಿಯಲ್ಲಿಯೇ ಅಸ್ತಿತ್ವ ಪಡೆದದ್ದರಿಂದ ಅವರ ಕಾಲದ ನಾಣ್ಯಗಳನ್ನೇ ಚಲಾವಣೆಗೆ ತಂದಿರಬಹುದು. ಮೊಘಲರು, ಹೈದರಾಬಾದ್ ನಿಜಾಮರ ಅಧೀನದಲ್ಲಿದ್ದಾಗ ಅವರ ನಾಣ್ಯಗಳನ್ನು ಬಳಸಿರಬಹುದೆಂಬ ಅಭಿಪ್ರಾಯಗಳನ್ನು ಸಂಶೋಧಕರು ವ್ಯಕ್ತಪಡಿಸುತ್ತಾರೆ.

ಆದರೆ ಕಪಟರಾಳ ಕೃಷ್ಣರಾಯರು 'ಸುರಪುರ ಸಂಸ್ಥಾನದ ಇತಿಹಾಸ' ಎಂಬ ಕೃತಿಯಲ್ಲಿ "ಸುರಪುರಕ್ಕೆ ಮೆಡೋಸ್ ಟೇಲರ್‌ನೆಂಬ ರಾಜಕೀಯ ಪ್ರತಿನಿಧಿಯನ್ನು ಬ್ರಿಟಿಷರು ನೇಮಕ ಮಾಡಿದಾಗ, ಗೌರ್ನರ್ ಜನರಲ್ಲನು ರಾಜಕೀಯ ಪ್ರತಿನಿಧಿಯಾದ ಟೇಲರ್‌ನಿಗೆ ಸುರಪುರದ ನಾಲ್ವಡಿ ವೆಂಕಟಪ್ಪನಾಯಕನು ೧೮೧೫ ರೂಪಾಯಿ ಸುರಪುರದ ನಾಣ್ಯ ಅಥವಾ ೧೫೦೦ ರೂಪಾಯಿಗಳ ಕಂಪನಿ ನಾಣ್ಯಗಳನ್ನು ಕೊಡಬೇಕಾಗುವುದು"[1] ಎಂಬುದನ್ನು ತಿಳಿಸಿದ್ದಾರೆ. ಇದರಿಂದ ಸುರಪುರದ ನಾಣ್ಯಗಳೂ ಚಲಾವಣೆಯಲ್ಲಿದ್ದವು ಎಂಬುದನ್ನು ತಿಳಿಯಬಹುದಾಗಿದೆ. ಅಲ್ಲದೆ ಇವರು ರಾಜಕೀಯವಾಗಿ ಎಷ್ಟು ಪ್ರಾಬಲ್ಯವನ್ನು ಪಡೆದಿದ್ದರೋ, ಆರ್ಥಿಕವಾಗಿಯೂ ಅಷ್ಟೇ ಸುಸ್ಥಿತಿಯಲ್ಲಿದ್ದರು.

ನಾಣ್ಯಗಳ ಕುರಿತಾಗಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಸುರಪುರದ ನಿವೃತ್ತ ಶಿಕ್ಷಕ ಶ್ರೀ ನಾಗಲಿಂಗಪ್ಪ ಶಹಪೂರಕರ್, ಹತ್ತಿರ ಆರು ನಾಣ್ಯಗಳು, ಸುರಪುರದವರಾದ ಡಾ. ರಾಘವೇಂದ್ರ ಗುಡಗುಂಟಿ ಪ್ರಾಚಾರ್ಯರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ಲಿಂಗಸೂಗೂರು ಇವರ ಹತ್ತಿರ ಹನ್ನೊಂದು ನಾಣ್ಯಗಳು, ಶ್ರೀ ಅಯ್ಯಣ್ಣ ಚೆನ್ನಪ್ಪಗೋಳ, ಉಪನ್ಯಾಸಕರು, ಶಹಪುರ ಇವರಲ್ಲಿರುವ ನಾಣ್ಯಗಳು, ಅಲ್ಲದೇ ಸುರಪುರದ ಕೆಲವು ಹಿರಿಯರನ್ನು ವಿಚಾರಿಸಿದಾಗ "ಸಣ್ಣವರಿದ್ದಾಗ ಇಂಥ ನಾಣ್ಯಗಳನ್ನು ಜೇಬಿನ ತುಂಬ ತುಂಬಿಕೊಂಡು ಆಟವಾಡುತ್ತಿದ್ದೆವು"[2], "ಸಂತೆಯಲ್ಲಿ ಬೆಣ್ಣೆಯನ್ನು ತೂಗಲು, ಅಂಗಡಿಯಲ್ಲಿ ಬಂಗಾರ ತೂಗಲು, ಈ ನಾಣ್ಯಗಳನ್ನು ಬಳಸುತ್ತಿದ್ದರು."[3] "ನಾವು ಸಣ್ಣವರಿದ್ದಾಗ ನಮ್ಮ ಮನೆಯಲ್ಲಿ ಇಂಥ ನಾಣ್ಯಗಳು ಸಾಕಷ್ಟಿದ್ದವು, ಇವುಗಳನ್ನು ಆಟವಾಡಲು ಬಳಸುತ್ತಿದ್ದೆವು. ಇವುಗಳನ್ನು ರಕ್ಷಿಸಿಡಬೇಕು, ಇವು ಸುರಪುರದ ನಾಣ್ಯಗಳು, ಮುಂದೊಂದು ದಿನ ಉಪಯೋಗಕ್ಕೆ ಬರಬಹುದು ಎಂಬ ತಿಳುವಳಿಕೆ ಇರಲಿಲ್ಲ"[4] ಎಂದು ಹೇಳುತ್ತಾರೆ. ನಂತರ ಸುರಪುರದ ನಾಣ್ಯಗಳ ಬಳಕೆ ನಿಂತಾಗ ಇವುಗಳನ್ನು ತೂಕ ಮಾಡಲು ಬಳಸಿದರು. ಕೆಲವರು ತಾಮ್ರದ ವ್ಯಾಪಾರಿಗಳಿಗೆ ಮಾರಾಟ

* ಅಧ್ಯಾಪಕ, ಸರ್ಕಾರಿ ವಸತಿಗೃಹ, ಸಂಖ್ಯೆ ೧೧, ಎಸ್.ಜಿ.ಪಿ. ಕಾಲೋನಿ, ಐ.ಬಿ. ಹಿಂದೆ
ಲಿಂಗಸೂಗೂರು, ರಾಯಚೂರು ಜಿಲ್ಲೆ.

ಮಾಡಿದರು; ಆಟಿಕೆಯ ವಸ್ತುಗಳಾಗಿ ಬಳಕೆ ಮಾಡಿದರು. ಹೀಗಾಗಿ ಇಂದು ಇವುಗಳ ಸಂಖ್ಯೆ ಕಡಿಮೆಯಾಗಿದೆ.

ಈ ಎಲ್ಲಾ ಅಭಿಪ್ರಾಯಗಳನ್ನು ಪಡೆದುಕೊಂಡು ರಂಗಂಪೇಟೆ, ಸುರಪುರ, ವನದುರ್ಗ, ಶಹಪುರ ಮುಂತಾದ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಸಿಕ್ಕಿರುವ ನಾಣ್ಯಗಳು ಸುರಪುರ ಸಂಸ್ಥಾನದ ಗತವೈಭವವನ್ನು ಮಾರ್ದನಿಸುತ್ತವೆ.

**ಸುರಪುರ ನಾಯಕ ಅರಸರ ನಾಣ್ಯಗಳು**

ಈ ನಾಣ್ಯಗಳನ್ನು ನಾಲ್ಕು ಬಗೆಗಳಾಗಿ ವರ್ಗೀಕರಿಸ ಬಹುದಾಗಿದೆ. ಮೊದಲನೆಯ ಬಗೆಯ ನಾಣ್ಯಗಳ ಗುಣ ಲಕ್ಷಣಗಳು ಇಂತಿವೆ.

೧. ನಾಣ್ಯಗಳ ಮೇಲ್ಮುಖದಲ್ಲಿ ಶಂಖ, ನಾಮ ಮತ್ತು ಚಕ್ರಗಳಿವೆ. ಇವು ವೈಷ್ಣವ ಸಂಕೇತಗಳಾಗಿವೆ. ಸುರಪುರದ ವೇಣುಗೋಪಾಲಸ್ವಾಮಿಯ ದೇವಾಲಯದ ಗರ್ಭಗುಡಿಯ ದ್ವಾರದ ಮೇಲಿರುವ ಮುದ್ರೆ, ಶಂಖ, ನಾಮ ಮತ್ತು ಚಕ್ರಗಳು ಈ ನಾಣ್ಯಗಳಿಗೆ ತಾಳೆಯಾಗುತ್ತವೆ. ಈ ನಾಣ್ಯಗಳನ್ನು ಟಂಕಿಸಲು ಬಳಸಿರಬಹುದಾದ ಮುದ್ರೆಯೂ ಲಭ್ಯವಾಗಿದೆ.

೨. ಈ ನಾಣ್ಯದ ಹಿಂಭಾಗದಲ್ಲಿ ಚುಕ್ಕೆಗಳಿವೆ. ಅವುಗಳು ೪, ೬, ೮, ೧೦, ೧೨, ೧೪ ಹೀಗೆ ಬೇರೆ ಬೇರೆ ನಾಣ್ಯಗಳಲ್ಲಿ ಅವುಗಳ ಗಾತ್ರಕ್ಕನುಗುಣವಾಗಿ ಸಂಖ್ಯೆಗಳಲ್ಲಿ ವ್ಯತ್ಯಾಸಗಳಿವೆ. ಹಾಗೂ ಅರ್ಧವೃತ್ತಗಳೂ ಇವೆ. ಈ ಚುಕ್ಕೆಗಳು ಏನನ್ನು ಸಂಕೇತಿಸುತ್ತವೆ ಎಂಬುದರ ಕುರಿತು ಸಂಶೋಧನೆಯಾಗ ಬೇಕಾಗಿದೆ.

**ಎರಡನೆಯ ಬಗೆಯ ನಾಣ್ಯಗಳ ಗುಣಲಕ್ಷಣಗಳು ಇಂತಿವೆ.**

೧. ನಾಣ್ಯಗಳ ಮುಂಭಾಗದಲ್ಲಿ 'ಬಹಿರಿ' ಎಂಬ ಬರಹ ಇದೆ. ಇದು ನಾಗರಿ ಲಿಪಿಯಲ್ಲಿದೆ. 'ಬಹಿರಿ' ಎಂಬುದು ಸುರಪುರದ ಅರಸರಿಗಿರುವ ಬಿರುದಾಗಿದೆ.

ಸುರಪುರ ಸಂಸ್ಥಾನದ ಸ್ಥಾಪಕ ಗಡ್ಡಿಪಿಡ್ಡನಾಯಕ (ಕ್ರಿ.ಶ. ೧೬೩೬–೧೬೬೬)ನು ಬಿಜಾಪುರದ ಬಾದಶಹನ ಮದ್ದಾನೆಯನ್ನು ಪಳಗಿಸಿದ್ದಕ್ಕಾಗಿ ಆತನ ಶೌರ್ಯವನ್ನು ಮೆಚ್ಚಿ 'ಗಜಗಂಡ ಬಹಿರಿ ಪಿಡ್ಡನಾಯಕ' ಎಂಬ ಬಿರುದನ್ನು ಆನೆ ಸಹಿತವಾಗಿ ನೀಡಿದನು[೫]. ನಂತರ ಈ ಬಿರುದು ಹಸರಂಗಿ ಪಾಮನಾಯಕ (ಕ್ರಿ.ಶ. ೧೫೫೫–೧೬೮೭) ನಿಗೂ[೬] ಇತ್ತು. ಅಲ್ಲದೇ ಪೀತಾಂಬರ ಬಹಿರಿ ಪಿಡ್ಡನಾಯಕ (ಕ್ರಿ.ಶ. ೧೬೮೭–೧೭೨೬) ನ ಹೆಸರಿನೊಂದಿಗೆ ಬಹಿರಿ ಎಂಬುದು ಸೇರಿಕೊಂಡಿದೆ[೭].

ನಾಣ್ಯಗಳ ಹಿಂಭಾಗದಲ್ಲಿ ನಾಮ, ಶಂಖ ಮತ್ತು ಚಕ್ರಗಳಿವೆ. ಇವುಗಳು ವೈಷ್ಣವ ಸಂಕೇತಗಳಾಗಿವೆ. ಅಲ್ಲದೆ ನಾಣ್ಯಗಳ ಮಧ್ಯಭಾಗದಲ್ಲಿ ಸಣ್ಣ ಗುಳಿಗಳಿವೆ.

**ಮೂರನೆ ಬಗೆಯ ನಾಣ್ಯಗಳ ಗುಣಲಕ್ಷಣಗಳು ಇಂತಿವೆ.**

೧. ನಾಣ್ಯಗಳ ಮುಂಭಾಗದಲ್ಲಿ ಎರಡು ಸಮಾನಂತರ ವೃತ್ತಗಳನ್ನು ಮಾಡಲಾಗಿದ್ದು, ಮೇಲ್ಭಾಗದಲ್ಲಿ ಬಹಿರಿ ಎಂಬ ನಾಗರಿ ಬರಹವಿದೆ. ಅದರ ಕೆಳಗೆ ಒಂದು ನಾಣ್ಯದಲ್ಲಿ ೧೨೬೧, ಇನ್ನೊಂದು ನಾಣ್ಯದಲ್ಲಿ ೧೨೬೨, ಇನ್ನೊಂದು ನಾಣ್ಯದಲ್ಲಿ ೧೨೬೩ ಎಂದು ಸಂಖ್ಯೆಯಲ್ಲಿ ಬರೆಯಲಾಗಿದೆ.

ಈ ಸಂಖ್ಯೆಗಳು ಫಸಲಿ ಶಕದಲ್ಲಿವೆ[೮]. ಅಂದರೆ ೧೨೬೧ ಕ್ರಿ.ಶ. ೧೮೫೨ ಕ್ಕೆ, ೧೨೬೨–೧೮೫೩ ಕ್ಕೆ, ೧೨೬೩– ಕ್ರಿ.ಶ. ೧೮೫೪ ಕ್ಕೆ ಸರಿಹೊಂದುತ್ತದೆ. ಇದು ರಾಜಾ ನಾಲ್ವಡಿ ವೆಂಕಟಪ್ಪನಾಯಕ (ಕ್ರಿ.ಶ. ೧೮೪೨–೧೮೫೮) ನ ಕಾಲಕ್ಕೆ ಸರಿಹೊಂದುತ್ತದೆ. ಹೀಗಾಗಿ ನಾಲ್ವಡಿ ವೆಂಕಟಪ್ಪನಾಯಕನ ಅಧಿಕಾರಾವಧಿಯಲ್ಲಿ ಈ ನಾಣ್ಯಗಳನ್ನು ಟಂಕಿಸವಾಗಿದೆ.

ಡಾ. ಎ.ವಿ. ನರಸಿಂಹಮೂರ್ತಿಯವರು ತಮ್ಮ ಕರ್ನಾಟಕ ನಾಣ್ಯ ಪರಂಪರೆ ಕೃತಿಯಲ್ಲಿ ಸಾಮಂತ ರಾಜರ ನಾಣ್ಯಗಳಲ್ಲಿ ಸುರಪುರದ ನಾಣ್ಯಗಳನ್ನು ಪರಿಚಯಿಸುತ್ತಾ, ಈ ನಾಣ್ಯಗಳು ಹಿಜಿರಾ ಶಕೆಯನ್ನು ಸೂಚಿಸುತ್ತವೆ ಮತ್ತು ವೆಂಕಟಪ್ಪನಾಯಕನ ಆಳ್ವಿಕೆಯ ಸಮಯಕ್ಕೆ ಸರಿಹೊಂದುತ್ತದೆ[೯]ಎಂಬ ವಿವರಣೆಯನ್ನು ನೀಡುತ್ತಾರೆ. ಇದು ತಪ್ಪೆನಿಸುತ್ತದೆ. ಏಕೆಂದರೆ, ಹಿಜಿರಾ ಶಕೆಯ[೧೦] ೧೨೬೧, ೧೨೬೨, ೧೨೬೩ ನ್ನು ಶಕವರ್ಷಕ್ಕೆ ಪರಿವರ್ತಿಸಿದರೆ, ೧೮೮೩, ೧೮೮೪, ೧೮೮೫ ಎಂದಾಗುತ್ತದೆ. ಈ ನಾಣ್ಯಗಳು ವೆಂಕಟಪ್ಪನಾಯಕನ ಆಳ್ವಿಕೆಯ ಸಮಯದ ನಾಣ್ಯಗಳು ಎಂದು ಹೇಳುತ್ತಾರೆ. ಯಾವ ವೆಂಕಟಪ್ಪ ನಾಯಕ? ಸುರಪುರ ಸಂಸ್ಥಾನದಲ್ಲಿ ನಾಲ್ಕು ಜನ ವೆಂಕಟಪ್ಪನಾಯಕರು ಬರುತ್ತಾರೆ. ಈ ವೇಳೆಗಾಗಲೇ ಸುರಪುರ ಸಂಸ್ಥಾನ ಬ್ರಿಟಿಷರ ವಶವಾಗಿ ಒಪ್ಪಂದದಂತೆ ಹೈದರಾಬಾದ್ ನಿಜಾಮರ ಅಧೀನದಲ್ಲಿತ್ತು. ಹೀಗಾಗಿ ಅದು ಹಿಜಿರಾ ಶಕೆ ಅಲ್ಲ ಫಸಲಿ ಎಂದೂ, ರಾಜಾ ನಾಲ್ವಡಿ ವೆಂಕಟಪ್ಪನಾಯಕನ ಕಾಲವೆಂದು ಖಚಿತವಾಗಿ ನಿರ್ಣಯಿಸಬಹುದಾಗಿದೆ.

ನಾಲ್ಕನೇ ಬಗೆಯ ನಾಣ್ಯಗಳಲ್ಲಿ ಹನುಮದ್ಧ್ವಜವೂ ಇದೆ. ಇದು ಸುರಪುರ ಅರಸರ ಧ್ವಜವಾಗಿತ್ತು. ಅವರ ಬಿರುದಾವಳಿಗಳಲ್ಲಿಯೂ ಅದು ಈ ರೀತಿ ಉಲ್ಲೇಖಿತವಾಗಿದೆ. "ಮಹಾರಾಜಾಧಿರಾಜ, ರಾಜಕಂಠೀರವ, ರಾಜಾಧಿಶಿರೋ ಮುಕುಟ, ಗೋಸಲಪಾದೋದಯ, ಶರತೂರ್ಣೋಮಜನಿತ, ಶಶಾಂಕೋಪತೇಜಃಪುಂಜ ವಿರಾಜಿತ ಶ್ರೀಮಂತ ವೆಂಕಟಪ್ಪ

ನಾಯಕ ಬಹಿರಿ ಬಲವಂತ, ಬಹಾದುರ, ಬಿರುದಾಂಕಿತ, ದಿಲ್ಲಿಕಾಧೀಶ, ದುಮಮುಮದ್ವನಿ ಕೋಲಾಹಲ, **ಹನುಮಧ್ವಜ**, ಸವರ್ಣ ಪಂಚಕಳಶ, ಏಕದಂತ, ರಾಮಬಾಣ, ಸವರ್ಣಪಂಜ, ನವಾಬ ಜಂಗ, ಮುತಹರುದ್ದೌಲಾ, ಬಬರುಲ್ಮುಲುಕ ಸರಸರದೇಸಾಯಿ, ಮಾಮಲೆ ನಸರತಬಾದ, ಮಾಮಲೆ ಹಸನಾಬಾದ, ದಾರುಲ್ಮುಜಫರ, ಬಿಜಾಪುರ, ಕಿಲ್ಲೆ ವಾಗಿನಗೇರಿ, ಸಂಸ್ಥಾನ ಸುರಪುರ"[೧೧]. ಹೀಗಾಗಿ ಈ ನಾಣ್ಯವು ಸುರಪುರ ನಾಯಕ ಅರಸರ ಕಾಲದ್ದೆಂದು ಹೇಳಬಹುದಾಗಿದೆ.

## ನಾಣ್ಯದ ತೂಕ

ಈ ನಾಣ್ಯಗಳು ವಿವಿಧ ಗಾತ್ರಗಳನ್ನು ಹೊಂದಿರುವುದರಿಂದ ಬೇರೆ ಬೇರೆ ತೂಕಗಳನ್ನು ಹೊಂದಿವೆ. ೬.೨, ೬.೩, ೬.೪, ೬.೫, ೬.೭, ೯.೩, ೯.೫, ೯.೭, ೯.೮, ೯.೯, ೧೦, ೧೧ ಗ್ರಾಂ ತೂಕಗಳ ನಾಣ್ಯಗಳು ದೊರಕಿವೆ.

## ಲೋಹದ ಬಗೆ

ಇಲ್ಲಿಯವರೆಗೆ ಲಭ್ಯವಿದ್ದ ನಾಣ್ಯಗಳು ತಾಮ್ರದ ನಾಣ್ಯಗಳಾಗಿವೆ. ಬೆಳ್ಳಿಯ ನಾಣ್ಯಗಳು, ಬಂಗಾರದ ನಾಣ್ಯಗಳು ಇದ್ದವೆಂದು ಹಿರಿಯರು ಹೇಳುತ್ತಾರೆ. ಆದರೆ ಇಲ್ಲಿಯವರೆಗೆ ಆ ನಾಣ್ಯಗಳು ಸಿಕ್ಕಿರುವುದಿಲ್ಲ.

## ಟಂಕಸಾಲೆ

ಸುರಪುರ ನಾಯಕ ಅರಸರು ನಾಣ್ಯಗಳನ್ನು ಸ್ವತಃ ಟಂಕಿಸುತ್ತಿದ್ದರೆಂಬುದಕ್ಕೆ ದೊರೆತಿರುವ ಅವರ ಈ ನಾಣ್ಯಗಳೇ ಸಾಕ್ಷಿ. ಆದರೆ ಈ ನಾಣ್ಯಗಳನ್ನು ಟಂಕಿಸುತ್ತಿದ್ದ ಟಂಕಸಾಲೆಯು ಇಲ್ಲಿಯವರೆಗೆ ಸಿಕ್ಕಿಲ್ಲ. ಈ ಬಗ್ಗೆ ಬೇರೆ ಬೇರೆ ರೀತಿಯ ಅಭಿಪ್ರಾಯಗಳಿವೆ. "ಇಂದಿನ ತಾಲೂಕ ಪಂಚಾಯತ ಹಾಗೂ ಪಿ.ಡಬ್ಲ್ಯೂ.ಡಿ. ಕಛೇರಿಯ ಹತ್ತಿರದಲ್ಲಿರುವ ಕಟ್ಟಡವೇ ಟಂಕಸಾಲೆ. ಈ ಕಟ್ಟಡ ವಿನ್ಯಾಸ ಇಂದಿನ ಇಂಜೀನಿಯರ್‌ಗಳಿಗೆ ಸವಾಲಾದದ್ದು. ಟಂಕಸಾಲೆಯ ಭದ್ರತಾಕೋಣೆ ಅದ್ಭುತವಾದದ್ದು. ಅಧಿಕಾರಿ ಕಛೇರಿ, ನಾಣ್ಯಗಳ ಸಂಗ್ರಹ ಕೊಠಡಿ, ನಾಣ್ಯಗಳ ತಯಾರಿಕಾ ಕೋಣೆಗಳ ವಿನ್ಯಾಸಗಳು ಅಂದಿನ ಎಂಜಿನೀಯರ್‌ಗಳ ಕೌಶಲ್ಯಕ್ಕೆ ಸಾಕ್ಷಿಯಾಗಿವೆ"[೧೨] ಎಂದು ಹೇಳಲಾಗುತ್ತದೆ. ಆದರೆ ಈ ಕಟ್ಟಡದ ವಿನ್ಯಾಸವನ್ನು ನೋಡಿದರೆ ಇದು ಟಂಕಸಾಲೆ ಎಂಬ ಯಾವುದೇ ಕುರುಹಿಲ್ಲ. ಆದರೆ ಇದು ಆಗಾಗ ಜೀರ್ಣೋದ್ಧಾರಗೊಂಡಿರಬಹುದಾದ ಸಾಧ್ಯತೆಗಳಿವೆ ಎಂಬ ಮಾತುಗಳು ಕೇಳಿಬರುತ್ತಿವೆ.

"ಸುರಪುರದ ಟೇಲರ್ ಮಂಜಿಲ್‌ನ ಮುಂದಿನ ದಿಬ್ಬದ ಹತ್ತಿರ ಟಂಕಸಾಲೆ ಇದ್ದಿರಬಹುದಾಗಿದೆ"[೧೩] ಎಂಬ ಅಭಿಪ್ರಾಯವೂ ಇದೆ. ಇದರ ಕಟ್ಟಡದ ತಳಪಾಯವು ನೋಡಲು ಸಿಗುತ್ತದೆ. ಆದರೆ ಇಂಥ ಬಯಲು ಪ್ರದೇಶದಲ್ಲಿ ಟಂಕಸಾಲೆ ಇರುವ ಸಾಧ್ಯತೆ ಕಡಿಮೆ. "ಇದು ಕಕ್ಕೇರಿ, ವಾಗಿನಗೇರಿ ಅಥವಾ ಶಹಪುರಗಳಲ್ಲೇನಾದರೂ ಇದ್ದಿರಬಹುದೆ?"[೧೪] ಎಂದೂ ಅನುಮಾನಿಸಲಾಗುತ್ತಿದೆ. ಇದರ ಕುರಿತಾಗಿ ಸಂಶೋಧನೆ ಆಗಬೇಕಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕಪಟರಾಳ ಕೃಷ್ಣರಾವ್; **ಸುರಪುರ ಸಂಸ್ಥಾನ ಇತಿಹಾಸ**, ೧೯೭೭, ಪುಟ–೧೭೬.
೨. ಎ. ಕೃಷ್ಣ, ಸಾಹಿತಿಗಳು, ಸುರಪುರ ಇವರ ಹೇಳಿಕೆಯಿಂದ.
೩. ಜೆ. ಅಗಸ್ಟಿನ್, ನ್ಯಾಯವಾದಿಗಳು, ಸುರಪುರ ಇವರ ಹೇಳಿಕೆಯಿಂದ.
೪. ರಾಜಾಮದನಗೋಪಾಲನಾಯಕರು, ಸುರಪುರ ಇವರ ಹೇಳಿಕೆಯಿಂದ.
೫. ಕಪಟರಾಳ ಕೃಷ್ಣರಾವ್; ಪೂರ್ವೋಕ್ತ, ಪುಟ ೧೪–೧೫.
೬ ಅದೇ, ಪುಟ–೪೩.
೭. ಅದೇ, ಪುಟ–೫೬
೮. ಫಸಲಿ (ಫಜಲಿ) ಶಕ ಕ್ರಿ.ಶ. ೫೯೧. ಇದು ಹೈದರಾಬಾದ್ ನಿಜಾಮರು ಮತ್ತು ಮೈಸೂರಿನ ಟಿಪ್ಪುಸುಲ್ತಾನರ ಕಾಲದಲ್ಲಿ ಬಳಕೆಯಲ್ಲಿತ್ತು.
೯. ಎ.ವಿ. ನರಸಿಂಹಮೂರ್ತಿ; **ಕರ್ನಾಟಕ ನಾಣ್ಯ ಪರಂಪರೆ**, ೨೦೦೩, ಪುಟ–೨೨೪–೨೨೫.
೧೦. ಹಿಜಿರಾ ಶಕ (ಕ್ರಿ.ಶ. ೧೫ ಜುಲೈ ೬೨೨) ಅರಬ್ಬಿ ಭಾಷೆಯಲ್ಲಿ ವಲಸೆ ಹೋಗುವುದು ಎಂದರ್ಥ. ಮಹ್ಮದ್ ಪೈಗಂಬರರು ಮಕ್ಕಾನಗರದಿಂದ ತಮ್ಮ ಹಾಗೂ ಅನುಯಾಯಿಗಳ ಜೀವ ರಕ್ಷಣೆಗಾಗಿ ಮದೀನಾನಗರಕ್ಕೆ ವಲಸೆ ಹೋದರು.
೧೧. ಕಪಟರಾಳ ಕೃಷ್ಣರಾವ್; ಪೂರ್ವೋಕ್ತ, ಪುಟ ೧೨೩.
೧೨. ಅಶೋಕ ಸಾಲವಾಡಗಿ ಸುರಪುರ, ವಿಶೇಷಗಳು ಅವಶೇಷಗಳಾಗುತ್ತ, **ಪ್ರಜಾವಾಣಿ**, ಅಕ್ಟೋಬರ್ ೨೬, ೨೦೦೮.
೧೩. ಎ. ಕೃಷ್ಣ ಸಾಹಿತಿಗಳು, ಸುರಪುರ ಇವರ ಹೇಳಿಕೆಯಿಂದ.
೧೪. ಜೆ. ಅಗಸ್ಟಿನ್, ನ್ಯಾಯವಾದಿಗಳು, ಸುರಪುರ, ಇವರ ಹೇಳಿಕೆಯಿಂದ.

ಡಾ. ಸ್ಮಿತಾ ಸುರೇಬಾನಕರ*

# ಉಚಗಾಂವ ಗ್ರಾಮದ ಸ್ಮಾರಕಶಿಲ್ಪಗಳ ಶೋಧ

ಕ್ರಿಸ್ತ ಶಕ ಒಂದು–ಎರಡನೆಯ ಶತಮಾನದಿಂದ ತನ್ನ ಆಯುರ್ಮಾನದಲ್ಲಿ ನಿರಂತರವಾದ ಉಜ್ವಲ ಭವ್ಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ ಹೊಂದಿದ ಬೆಳಗಾವಿಯಿಂದ ೧೨ ಕಿ.ಮೀ. ದೂರದಲ್ಲಿರುವ ಉಚಗಾಂವ (ಜಿ. ತಾ. ಬೆಳಗಾವಿ) ಒಂದು ಪುರಾತನ ಪ್ರದೇಶ. ಕಲ್ಯಾಣ ಚಾಲುಕ್ಯರ ಮತ್ತು ಗೋವೆಯ ಕದಂಬರ ಕಾಲದಲ್ಲಿ ಉತ್ಸುಗಾವೆ–೩೦ ಎಂದು ಶಾಸನೋಲ್ಲೇಖಿತವಾದ ಪ್ರದೇಶ. ಉಚಗಾಂವ–೩೦ ಗ್ರಾಮಗಳುಳ್ಳ ಆಡಳಿತ ಕೇಂದ್ರ ಶೌರ್ಯ, ಸಾಹಸ, ವೀರತ್ವ ಮತ್ತು ಬಲಿದಾನಕ್ಕೆ ಹೆಸರಾದ ಉಚಗಾಂವದಲ್ಲಿ ಸುಮಾರು ೬೫ ಕ್ಕೂ ಹೆಚ್ಚು ವೀರಮಾಸ್ತಿಶಿಲ್ಪಗಳು ಇದ್ದ ಅಂಶ ಬೆಳಕಿಗೆ ಬಂದಿತು. (ಸೂರ್ಯನಾಥ ಕಾಮತ್ ಸಂಪಾದಿತ ಬೆಳಗಾವಿ ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ೪೦ ಸ್ಮಾರಕಗಳಿದ್ದ ಬಗ್ಗೆ ಉಲ್ಲೇಖವಿದೆ.) ವಿಶ್ವವಿದ್ಯಾಲಯ ಅನುದಾನ ಆಯೋಗದ ಧನಸಹಾಯದಡಿ ಇತ್ತೀಚಿಗೆ ಉಚಗಾಂವನಲ್ಲಿ ಕ್ಷೇತ್ರಕಾರ್ಯದ ಮೂಲಕ ಅನ್ವೇಷಣೆ ಕೈಗೊಂಡಾಗ ೧೬ಕ್ಕೂ ಹೆಚ್ಚು ವೀರಗಲ್ಲುಗಳು ಮತ್ತು ಸತಿಗಲ್ಲುಗಳು ಭೂಮಿಯಲ್ಲಿ ಅಡಗಿರುವ ಅಂಶ ಬೆಳಕಿಗೆ ಬಂದಿತು. ಕಾಲೇಜಿನ ಎನ್.ಎಸ್.ಎಸ್. ಘಟಕದ ವಿದ್ಯಾರ್ಥಿ ಸ್ವಯಂ ಸೇವಕ ತಂಡದ ಸಹಾಯದಿಂದ ಈ ವೀರಮಾಸ್ತಿಶಿಲ್ಪಗಳನ್ನು ಭೂಗರ್ಭದಡಿಯಿಂದ (ಸುಮಾರು ೬–೭ ಅಡಿ ಒಳಗಿದ್ದವುಗಳನ್ನು) ಅಗೆದು ತೆಗೆಯಲಾಯಿತು.

ಉಚಗಾಂವ ಗ್ರಾಮದಲ್ಲಿ ಶೂರರ ಪರಂಪರೆಯಿರುವ ಸಂಗತಿ ಇಲ್ಲಿರುವ ವೀರಶೂರ ದೇವಾಲಯದಿಂದ ವಿದಿತವಾಗುತ್ತದೆ. ಇದು ಈ ಗ್ರಾಮದ ಮಹತ್ವವಾದ ಸ್ಮಾರಕ. ಈ ದೇವಾಲಯ ಮೊದಲಿದ್ದ ಪ್ರಾಚೀನ ದೇವಾಲಯದ ಅವಶೇಷಗಳ ಮೇಲೆ ನಿರ್ಮಾಣಗೊಂಡಿದೆ. (ನವೀಕರಣ ಗೊಂಡು) ವಿಶೇಷವೆಂದರೆ ಈ ದೇವಾಲಯದ ಸುತ್ತಮುತ್ತಲೂ ಹಲವು ಹತ್ತು ವೀರಮಾಸ್ತಿಶಿಲ್ಪಗಳಿವೆ. ಬಹುಶಃ ಈ ದೇವಾಲಯವಿದ್ದ ಪ್ರದೇಶ ರಣಾಂಗಣವಾಗಿದ್ದು, ಯುದ್ಧದಲ್ಲಿ ಮಡಿದ ವೀರರ ವೀರತ್ವದ ದ್ಯೋತಕವಾಗಿ ನಿರ್ಮಾಣ ಗೊಂಡಿರಬಹುದು. ಗರ್ಭಗೃಹ, ಶುಕನಾಸ, ಮುಖಮಂಟಪ ಮತ್ತು ಶಿಖರಗಳನ್ನು ಹೊಂದಿದ ಈ ದೇವಾಲಯ ಶಿವನಿಗೆ ಸಮರ್ಪಿತವಾಗಿದೆ. ಶತ್ರುಗಳು ದನಕರುಗಳನ್ನು ಅಪಹರಿಸಿದಾಗ ಅವುಗಳನ್ನು ರಕ್ಷಿಸಲು ನಡೆದ ಹೋರಾಟವನ್ನು ಬಿಂಬಿಸುವ ತುರುಗೋಳ ಪ್ರಕಾರದ ವೀರಗಲ್ಲುಗಳು ಹೆಚ್ಚಾಗಿವೆ. ಇಲ್ಲಿ ದೊರೆತ ವೀರಮಾಸ್ತಿ ಶಿಲ್ಪಗಳಲ್ಲಿ ಕೆಲವು ವೀರಗಲ್ಲುಗಳು, ಕೆಲವು ಮಾಸ್ತಿಕಲ್ಲುಗಳು ಮತ್ತು ಇನ್ನಿತರವು ವೀರಮಾಸ್ತಿಗಲ್ಲುಗಳು. ಈ ಪ್ರದೇಶದಲ್ಲಿ ದೊರೆತ ಮಾಸ್ತಿಕಲ್ಲುಗಳಲ್ಲಿ ಕೆಲವು ಪೂರ್ಣಸತಿ ಶಿಲ್ಪ ಹಂತಗಳಿರುವ ವೀರಮಾಸ್ತಿಶಿಲ್ಪ ಮತ್ತು ಒಕ್ಕೈ ಇಕ್ಕೈ ಮಾಸ್ತಿಶಿಲ್ಪಗಳೆಂದು ವಿಂಗಡಿಸಬಹುದು.

ವೀರಶೂರದೇಗುಲದ ಹಿಂಭಾಗದಿಂದ ಅಗೆದು ತೆಗೆಯಲಾದ ಭವ್ಯ ವೀರಮಾಸ್ತಿಗಲ್ಲುಗಳಲ್ಲಿ ಆರು ವೀರಗಲ್ಲುಗಳು ಮೂರು ಹಂತವನ್ನು ಹೊಂದಿದೆ. ಕೆಳಗಿನ ಹಂತದಲ್ಲಿ ಎರಡು ಸಾಲುಗಳಲ್ಲಿ ಎದುರು ಬದುರಾಗಿ ನಿಂತು ವೀರನು ವೈರಿಗಳೊಂದಿಗೆ ಕಾದಾಡುವ ದೃಶ್ಯವಿದೆ. ಕಾಲೆತ್ತಿ ಕೆನೆಯುವ ಕುದುರೆಯ ಮೇಲೆ ಕುಳಿತಿರುವ ಯೋಧನ ಶಿಲ್ಪ ವೀರರಸವನ್ನು ಬಿಂಬಿಸುತ್ತದೆ. ಖಡ್ಗ, ಭರ್ಚಿ, ಬಿಲ್ಲು, ಬಾಣ ಉಪಯೋಗಿಸಿ ವೈರಿಗಳೊಡನೆ ಕಾದಾಟ ನಡೆದಿದೆ. ಇಲ್ಲಿರುವ ವೀರಮಾಸ್ತಿಶಿಲ್ಪಗಳಲ್ಲಿ ವೀರನ ಹಿಂಬದಿಗೆ ಇಲ್ಲವೆ ಕಾಲ ಕೆಳಗೆ ಅಥವಾ ಪಕ್ಕದಲ್ಲಿ ಆಕಳುಗಳನ್ನು ಚಿತ್ರಿಸಲಾಗಿದೆ. ವೀರನ ಕೈಯಲ್ಲಿ ಬಾಕು ಅಥವಾ ಬಿಲ್ಲು ಚಿತ್ರಿಸಲಾಗಿದೆ. ದುಂಡಾಗಿ ತುರುಬಿನಂತೆ ಗಂಟುಹಾಕಿದ ತಲೆಕೂದಲು, ವೀರಗಚ್ಚೆ ಹಾಕಿ ಹೋರಾಡುವ ವೈಖರಿ ಗಮನಸೆಳೆಯುತ್ತದೆ. ಇನ್ನು ಕೆಲವು ಶಿಲ್ಪಗಳಲ್ಲಿ ದನಗಳನ್ನು ಅಪಹರಿಸುವ ಚಿತ್ರಣವಿದೆ. ಎರಡನೆಯ ಹಂತದಲ್ಲಿ ವೀರ ಮತ್ತು ಮಾಸ್ತಿಯರನ್ನು ಪಕ್ಕದಲ್ಲಿ ಕುಳ್ಳಿರಿಸಿ ಕಿನ್ನರಿಯರು ಸ್ವರ್ಗಲೋಕಕ್ಕೆ ಕರೆದೊಯ್ಯುವ ದೃಶ್ಯವಿದೆ. ಮೇಲಿನ ಹಂತದಲ್ಲಿ ಸತಿಪತಿಯರಿಬ್ಬರು ಶಿವಲಿಂಗದ ಬಳಿ ಕುಳಿತಿದ್ದಾರೆ. ಇಲ್ಲಿ ದೊರೆತ ವೀರಮಾಸ್ತಿಶಿಲ್ಪಗಳು ಹೊರನೋಟಕ್ಕೆ ಒಂದೆ ತರಹ ಕಂಡು ಬಂದರೂ ವೀರನ ಉಡುಗೆ ತೊಡುಗೆಗಳಲ್ಲಿ, ಬಳಸಿದ ಆಯುಧಗಳಲ್ಲಿ ಶಿವಲಿಂಗದಲ್ಲಿ, ಕಿನ್ನರಿಯರ ವೇಷಭೂಷಣ

* ಮುಖ್ಯಸ್ಥರು, ಇತಿಹಾಸ ವಿಭಾಗ, ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ, ಬೆಳಗಾವಿ.

ಗಳಲ್ಲಿ ವೈವಿಧ್ಯವಿದೆ. ವೀರಶೂರದೇವಾಲಯದ ಪಕ್ಕದಲ್ಲಿ ಅಗೆದು ತೆಗೆಯಲಾದ ೩ ವೀರಮಾಸ್ತಿಗಲ್ಲುಗಳು ಮೂರು ಹಂತದಲ್ಲಿದ್ದು ವೀರ ವೈರಿಗಳೊಂದಿಗೆ ಹೋರಾಡುವ ದೃಶ್ಯ ಮತ್ತು ಮೇಲಿನ ಹಂತದಲ್ಲಿ ವೀರ ಸತಿಯೊಡನೆ ಶಿವಲೋಕ ಸೇರಿದ ಚಿತ್ರಣವಿದೆ. ವೀರರನ್ನು ಮಂಟಪದ ಒಳಗಿರುವಂತೆ ಚಿತ್ರಿಸಲಾಗಿದೆ. ಇವುಗಳು ಎರಡು ಅಡಿ ಅಗಲ ಮತ್ತು ಸುಮಾರು ೪-೫ ಅಡಿ ಉದ್ದ, ೧ ಅಡಿ ದಪ್ಪವಾಗಿದ್ದು, ಕೆಂಪುಮಿಶ್ರಿತ ಬೆಣಚುಗಲ್ಲಿನಿಂದ ನಿರ್ಮಿತ ವಾಗಿದೆ. ಹೋರಾಟದ ಹಂತದಲ್ಲಿ ಕುದುರೆಗಳು ಕಾಲಾಳುಗಳು ಹೆಚ್ಚು ಸಂಖ್ಯೆಯಲ್ಲಿಲ್ಲ. ನಡುವಿನ ಹಂತದಲ್ಲಿ ವೀರನೊಂದಿಗೆ ಆತನ ಪತ್ನಿಯೂ ಮಂಟಪದಲ್ಲಿರುವ ಚಿತ್ರಣವಿದೆ.

ಒಂದು ವೀರಗಲ್ಲಿನಲ್ಲಿ ಹೆದರಿರುವ ದನಗಳು ಸಾಲಾಗಿ ನಿಂತಿರುವ ದೃಶ್ಯವಿದೆ. ಚೌಕಟ್ಟಿನಲ್ಲಿ ವೀರನ ಪಕ್ಕದಲ್ಲಿ ಹೆದರಿ ಕಂಗಾಲಾದ ದನಗಳನ್ನು ಚಿತ್ರಿಸಿದ್ದಲ್ಲದೆ, ಅನೇಕ ದನಗಳನ್ನು ಚೌಕಟ್ಟಿನ ಹೊರಗೆ ಮತ್ತು ಕಾದಾಳುಗಳ ಕಾಲಕೆಳಗೆ ಚಿತ್ರಿಸಲಾಗಿದೆ. ವೀರನ ಒಂದು ಕೈಯಲ್ಲಿ ಬಿಲ್ಲು ಮತ್ತೊಂದು ಕೈಯಲ್ಲಿ ಬಾಣವಿದೆ. ಈ ಚಿತ್ರಣದಿಂದ ಶತ್ರುಗಳು ದನಕರುಗಳನ್ನು ಅಪಹರಿಸಿದ್ದಕ್ಕಾಗಿ ಹೋರಾಟ ನಡೆದ ಅಂಶ ತಿಳಿದು ಬರುತ್ತದೆ. ಇನ್ನೊಂದು ವೀರಗಲ್ಲಿನಲ್ಲಿ ವೀರನೊಬ್ಬನು ಭರ್ಜಿಯಿಂದ ಕುದುರೆಯ ಮೇಲೆ ಕುಳಿತಿರುವ ವೈರಿಯೊಡನೆ ಕಾದಾಡುತ್ತಿದ್ದು ದನಗಳು ಕುದುರೆಯ ಮೇಲೆ ಕುಳಿತ ವೈರಿಗಳ ಹಿಂಭಾಗದಲ್ಲಿ ತಮ್ಮ ಬಾಲ ಮೇಲಕ್ಕೆತ್ತಿ ಹೆದರಿಕೆ ಮತ್ತು ಕುತೂಹಲದಿಂದ ಹೋರಾಟ ಗಮನಿಸುತ್ತಿರುವಂತಿದೆ. ಮತ್ತೊಂದರಲ್ಲಿ ಕದುರೆಯನ್ನು ದನಗಳ ಮೇಲಿನಿಂದ ಛಂಗನೆ ಹಾರಿಸಿ ಹೋರಾಡುವ ದೃಶ್ಯವಿದ್ದು ದನಗಳು ಕಕ್ಕಾಬಿಕ್ಕಿಯಾಗಿ ಓಡುತ್ತಿವೆ. ವೀರ ವೈರಿಯನ್ನು ಭರ್ಜಿಯಿಂದ ಚುಚ್ಚಿ ಕೆಳಗೆ ಕೆಡವಿದ್ದಾನೆ. ಆತನ ತಲೆಯ ಮೇಲೆ ಬಿಲ್ಲಿನಿಂದ ಹೊಡೆಯುತ್ತಿರುವಂತಿದೆ. ವೀರ ಹಾಗೂ ಆತನ ಕಡೆಯವನೊಬ್ಬ ಬಿಲ್ಲು ಬಾಣಗಳನ್ನು ಹಿಡಿದಿದ್ದಾರೆ. ಈ ತುರುಗೋಳ ಶಿಲ್ಪ ಬಹಳ ಸುಂದರವಾಗಿದೆ. ದನಕರುಗಳು ಈ ಪ್ರದೇಶದ ಪ್ರಮುಖ ಸಂಪತ್ತು ಎಂಬುದು ಇಲ್ಲಿ ಉಲ್ಲೇಖನೀಯ. ಈ ವೀರಗಲ್ಲಿನಲ್ಲಿ ಚಿತ್ರಿಸಲಾದ ವ್ಯಕ್ತಿಗಳ ವೇಷ ಭೂಷಣ, ಆಭರಣ, ಆಯುಧ, ಕೇಶಾಲಂಕಾರ ಮತ್ತು ಅವರ ಹೋರಾಟದ ಭಂಗಿ ಬಹಳ ಆಕರ್ಷಕವಾಗಿ ಮೂಡಿ ಬಂದಿದೆ. ಇನ್ನೊದರಲ್ಲಿ ದೊಡ್ಡ ದೊಡ್ಡ ಗುರಾಣಿಗಳನ್ನು ಹಿಡಿದ ವೈರಿಗಳೊಡನೆ ವೀರ ಭರ್ಜಿಯಿಂದ ಹೋರಾಡು ತ್ತಿದ್ದಾನೆ. ಇನ್ನೊಂದು ವೀರಗಲ್ಲಿನಲ್ಲಿ ವೀರ ಈಟಿ ಮತ್ತು ಭರ್ಜಿಯಿಂದ ದನಗಳ್ಳರಾದ ವೈರಿಗಳನ್ನು ತಿವಿಯುತ್ತಿದ್ದಾನೆ. ಕಾಲಡಿ ದನಕರುಗಳು ಸತ್ತುಬಿದ್ದಿದ್ದು, ವೀರ ಮತ್ತು ಶತ್ರುಪಡೆ ಅವುಗಳನ್ನು ತುಳಿದು ಯುದ್ಧಗೈಯುತ್ತಿವೆ. ಬಹುತೇಕ ವೀರಗಲ್ಲುಗಳಲ್ಲಿ (ಒಂದನ್ನು ಹೊರತು ಪಡಿಸಿ) ಮೂರು ಹಂತಗಳಲ್ಲಿವೆ. ವೀರನನ್ನು ಅಪ್ಸರೆಯರು ಕೈಹಿಡಿದು ಕರೆದೊಯ್ಯುವ ದೃಶ್ಯ. ಅಪ್ಸರೆಯರು ಅಮೋಘವಾಗಿ ನೃತ್ಯಗೈಯುವ ದೃಶ್ಯ, ವಿವಿಧ ನಾಟ್ಯಭಂಗಿಗಳಲ್ಲಿ ಆಚರಣಾ ಭಾವದಿಂದ ವೀರನನ್ನು ಕರೆದೊಯ್ಯುತ್ತಿರುವ ದೃಶ್ಯ. ವೀರನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮಂಟಪದಲ್ಲಿ ಕುಳ್ಳಿರಿಸಿ ಕರೆದೊಯ್ಯುವ ದೃಶ್ಯ-ಇವೇ ಮುಂತಾದವುಗಳು ಬಹಳ ಆಕರ್ಷಕವಾಗಿವೆ

ಇಲ್ಲಿರುವ ಒಂದೇ ಹಂತದ ವೀರಮಾಸ್ತಿಶಿಲ್ಪದಲ್ಲಿ ವೀರಮಾಸ್ತಿಯರಿಬ್ಬರೂ ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾರೆ ಆಜಾನುಬಾಹು ವೀರನನ್ನು ಮುಖ್ಯವಾಗಿ ಚಿತ್ರಿಸಿ, ಸತಿಯರನ್ನು ಸಣ್ಣದಾಗಿ ಚಿತ್ರಿಸಲಾಗಿದೆ.

ಇಲ್ಲಿ ದೊರೆತ ಮಾಸ್ತಿಗಲ್ಲುಗಳಲ್ಲಿ ಸಹಗಮನವನ್ನು ಸೂಚಿಸುವ ಶಾಸನವಾಗಲೀ ಶಿಲ್ಪವಾಗಲೀ ಇರದೇ ಇರುವುದರಿಂದ ಇವು ಸಹಗಮನ ಶಿಲ್ಪಗಳಲ್ಲ. ಇವುಗಳು ಪೂರ್ಣಸತಿಶಿಲ್ಪ, ವೀರನ ಇಬ್ಬದಿಯಲ್ಲಿ ಸತಿಯರ ಶಿಲ್ಪ, ವೀರಮಾಸ್ತಿಶಿಲ್ಪ, ಒಕ್ಕೈ ಮತ್ತು ಇಕ್ಕೈ ಮಾಸ್ತಿಶಿಲ್ಪಗಳು ಎಂದು ವಿಭಾಗಿಸಬಹುದು. ಹರಸುವ ಭಂಗಿಯ ಎತ್ತಿದ ಬಲಗೈ, ಹೂವಿನ ಅಲಂಕಾರದ ಕೂದಲಗಂಟು ಹಂತ ಹಂತ ವಾಗಿರುವ ಸೀರೆಯ ಸೆರಿಗೆಗಳು ಆಕರ್ಷಕವಾಗಿವೆ. ಕೂದಲನ್ನು ಹಿಂದೆ ಚಾಚಿ ಹಾಕಿದ ಗಂಟು, ಕಿರಿದಾದ ನಡು ಮತ್ತು ಎದ್ದು ಕಾಣುವ ಕುಚ, ಕಾಲುಂಗರ, ಬಳೆ, ಕಡಗ, ಕೊರಳ ಸರಗಳ ಚಿತ್ರಣ ಮೋಹಕವಾಗಿದೆ. ಇನ್ನು ಕೆಲವು ವೀರಮಾಸ್ತಿಶಿಲ್ಪಗಳಲ್ಲಿ ವೀರ ಮತ್ತು ಮಾಸ್ತಿಯರು ಪದ್ಮಾಸನದಲ್ಲಿ ಕುಳಿತಿದ್ದಾರೆ. ವೀರರ ಮೀಸೆಯನ್ನು ಎದ್ದು ಕಾಣುವಂತೆ ಚಿತ್ರಿಸಲಾಗಿದೆ. ಹೋರಾಡುವಾಗ ಮಡಿದ ಯೋಧನ ಇಬ್ಬರು ಸತಿಯರನ್ನು ಆತನ ಇಕ್ಕೆಲಗಳಲ್ಲಿ ಚಿತ್ರಿಸಿರುವುದರಿಂದ ಆತನ ಇಬ್ಬರು ಪತ್ನಿಯರು ಅನುಗಮನ ಕೈಗೊಂಡದ್ದನ್ನು ಸೂಚಿಸುತ್ತದೆ. ಒಕ್ಕೈ ಮಾಸ್ತಿಕಲ್ಲಿನಲ್ಲಿ ಕಂಬದಿಂದ ಹೊರಟ ಕೈಯನ್ನು ಬಲಭಾಗದಲ್ಲಿ ಚಿತ್ರಿಸಲಾಗಿದೆ. ತೋಳಿಗೂ ಕಂಬಕ್ಕೂ ಮಧ್ಯೆ ಇರುವ ಜಾಗದಲ್ಲಿ ವೀರ ಸತಿಯೊಡನೆ ಕುಳಿತಿದ್ದಾನೆ. ತೋಳಿನ ಮುಂಭಾಗದಲ್ಲಿ ವೀರನೊಬ್ಬನನ್ನೇ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವುದು ಗಮನಾರ್ಹ. ಇನ್ನೊಂದು ವೀರಮಾಸ್ತಿಶಿಲ್ಪದಲ್ಲಿ ಕಂಬದಿಂದ ಹೊರಚಾಚಿದ ತೋಳು ಎಡಭಾಗದಲ್ಲಿದ್ದು, ಕೇವಲ ವೀರನನ್ನು ಮಾತ್ರ ನಾಲ್ವರು ಅಪ್ಸರೆಯರು ಕರೆದೊಯ್ಯುತ್ತಿದ್ದಾರೆ. ಸುಮಾರು ನಾಲ್ಕು ಅಡಿ ಎತ್ತರ ಎಳು ಅಡಿ ಅಗಲವಿರುವ ಈ ವೀರಮಾಸ್ತಿಶಿಲ್ಪಗಳಲ್ಲಿ ತೋಳು ಹೊರಚಾಚಿರುವ ಕಂಬಗಳ ಮೇಲ್ಭಾಗ ಕಳಸದ ಆಕಾರದಲ್ಲಿದೆ. ಚಿತ್ರಿಸಿದ ತೋಳು, ಮುಂಗೈ ಮತ್ತು ಬೆರಳುಗಳು ಪ್ರಮಾಣಬದ್ಧ ವಾಗಿವೆ.

ಉಚಗಾಂವದಲ್ಲಿ ಎರಡು ಇಕ್ಕೈ ವೀರಮಾಸ್ತಿ ಶಿಲ್ಪಗಳು ದೊರೆತಿವೆ. ಮೂರು ಹಂತಗಳಿರುವ ಈ ಶಿಲ್ಪಗಳಲ್ಲಿ ನಡುವಿನ ಹಂತದಲ್ಲಿ ಬಲಭಾಗದಲ್ಲಿ ಒಂದೇ ಕಂಬದಿಂದ ಎರಡು ತೋಳುಗಳು ಹೊರಚಾಚಿದಂತೆ ಚಿತ್ರಿತವಾಗಿದೆ. ತೋಳುಗಳ ಮುಂಭಾಗದಲ್ಲಿ ವೀರ ತನ್ನ ಇಕ್ಕೆಲಗಳಲ್ಲಿರುವ ಇಬ್ಬರು ಸತಿಯರ ತೋಳು ಬಳಸಿ ಸ್ವರ್ಗಯಾನಕ್ಕೆ ಹೊರಟಿದ್ದಾನೆ. ಇಕ್ಕೈ ಮಾಸ್ತಿಶಿಲ್ಪಗಳು ಅಪರೂಪವೆನಿಸಿದ್ದರಿಂದ ಇಲ್ಲಿ ದೊರೆತ ಇಕ್ಕೈ ಮಾಸ್ತಿಶಿಲ್ಪಗಳು ಗಮನಾರ್ಹವೆನಿಸಿವೆ.

ಎಲ್ಲಕ್ಕಿಂತ ಅತಿ ಮಹತ್ವದ ಅಂಶವೆಂದರೆ ಪ್ರಪ್ರಥಮ ಬಾರಿಗೆ ಈ ವೀರಗಲ್ಲುಗಳ ಜೊತೆಗೆ ಮೂರು ಭರ್ಚಿ/ಬಾಕುಗಳು ದೊರೆತಿವೆ. ಮೂರು ಹಂತಗಳ ವೀರಗಲ್ಲುಗಳ ಕೆಳಗೆ ಅಡ್ಡವಾಗಿ ಇಡಲಾದ ಈ ಆಯುಧಗಳು ಭೂಮಿಯಿಂದ ಸುಮಾರು

ಆರು ಅಡಿಗಳಷ್ಟು ಒಳಗೆ ಇದ್ದವು. ಇಲ್ಲಿ ದೊರೆತ ಈ ಭರ್ಚಿ/ಬಾಕುಗಳು ಶಿಲ್ಪದಲ್ಲಿ ವೀರ ಹೋರಾಟಕ್ಕೆ ಬಳಸಿದ ಆಯುಧಗಳನ್ನು ಹೋಲುತ್ತಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಈ ಬಾಕು/ಕೈಗತ್ತಿ ಸುಮಾರು ಒಂದುವರೆ ಗೇಣಿನಷ್ಟು ಉದ್ದವಾಗಿದ್ದು ಬಹಳ ಹರಿತವಾಗಿವೆ. ಚೂಪಾದ ಮುಂಭಾಗ ಹೊಂದಿರುವ ಇದನ್ನು ವೈರಿಗಳ ಮೇಲೆ ಸುಲಭವಾಗಿ ಪ್ರಯೋಗಿಸಬಹುದಾಗಿದೆ. ಇದನ್ನು ವೀರರು ಸೊಂಟದಲ್ಲಿ ಸಿಕ್ಕಿಸಿಕೊಂಡು ಅಥವಾ ಕೈಯಲ್ಲಿ ಹಿಡಿದು ಹೋರಾಡುತ್ತಿರುವುದನ್ನು ಶಿಲ್ಪಗಳಲ್ಲಿ ನೋಡಬಹುದು. ಈ ಬಾಕುಗಳನ್ನು ಕೈಗತ್ತಿ ಅಥವಾ ಕಿರುಗತ್ತಿ ಎಂದೂ ಕರೆಯುತ್ತಾರೆ. ಇಲ್ಲಿ ದೊರೆತ ಬಾಕು ಭರ್ಚಿಗಳನ್ನು ಹೋಲುವ ಆಯುಧಗಳು ವೀರಗಲ್ಲುಶಿಲ್ಪಗಳಲ್ಲಿ ವೀರನ ಕೈಯಲ್ಲಿ, ಸೊಂಟದಲ್ಲಿ ಕಂಗೊಳಿಸುತ್ತಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಇದರಿಂದ ವೀರರ ಸ್ಮರಣಾರ್ಥ ಸ್ಮಾರಕಗಳನ್ನು ಇಡಿಸುವಾಗ ವೀರರು ಬಳಸಿದ ಆಯುಧಗಳನ್ನು ಅವುಗಳ ಜೊತೆಗೆ ಹೂಳಿದ ಅಂಶವನ್ನು ಸ್ಪಷ್ಟಪಡಿಸುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಉಚಗಾಂವ ಗ್ರಾಮದಲ್ಲಿ ದೊರೆತ ವೀರಮಾಸ್ತಿಶಿಲ್ಪಗಳು ಗೋವಾ ಕದಂಬರ ಕಾಲದ್ದಾಗಿದ್ದು, ಹೊರ ನೋಟಕ್ಕೆ ಕಲ್ಯಾಣ ಚಾಲುಕ್ಯರ ಶೈಲಿಯನ್ನು ಹೋಲುತ್ತಿದ್ದರೂ ಸ್ಥಳೀಯ ಪ್ರಭಾವವನ್ನು ಬಿಂಬಿಸುತ್ತವೆ. ಕೆಲವು ಶಿಲ್ಪಗಳು ಶಾಸ್ತ್ರೀಯ ಶೈಲಿಯಲ್ಲಿದ್ದರೆ ಇನ್ನು ಕೆಲವು ಪ್ರಾದೇಶಿಕ ಸಂಪ್ರದಾಯದ ಅನುಕರಣೆಗಳಾಗಿವೆ. ಮಧ್ಯಮ ಶರೀರ, ಗಿಡ್ಡಗಾತ್ರದ ಕಾಲುಗಳು, ಚಪ್ಪಟೆ ಮೂಗು, ದಪ್ಪ ತುಟಿ ಮುಂತಾದ ಪ್ರಾದೇಶಿಕ ಲಕ್ಷಣಗಳು ಕೆಲವು ಶಿಲ್ಪಗಳಲ್ಲಿ ಕಾಣಸಿಕ್ಕರೆ ಇನ್ನು ಕೆಲವು ಪ್ರಮಾಣಬದ್ಧ ಮೈಮಾಟ, ನೇರ ಮೂಗು, ದುಂಡುಮುಖ, ವೀರಗಳೆ ಮುಂತಾದ ರೂಢಿಬದ್ಧ ಮಾದರಿಯನ್ನು ಅನುಕರಿಸಿದಂತೆ ಕಾಣುತ್ತದೆ. ಈ ಶಾಸನ ಶಿಲ್ಪಗಳಲ್ಲಿ ಬಹುತೇಕ ಶಿವಲಿಂಗ ಚಿತ್ರಿತವಾಗಿದ್ದು ಎರಡರಲ್ಲಿ ಮಾತ್ರ ಪದ್ಮಾಸನದಲ್ಲಿರುವ ತೀರ್ಥಂಕರರ ಶಿಲ್ಪವಿದೆ. ಇದು ವಿರಳವೆನಿಸಿದ್ದು, ಹೋರಾಡಿ ಮಡಿದ ವೀರರು ಜೈನಮತೀಯರಾಗಿದ್ದ ಅಂಶ ಸ್ಪಷ್ಟವಾಗುತ್ತದೆ. ಇದಲ್ಲದೆ ಕೆಲವು ಸ್ಮಾರಕಶಿಲ್ಪಗಳು ಸ್ತಂಭ, ಛಾವಣಿ ಮತ್ತು ಗೋಪುರವನ್ನು ಹೊಂದಿವೆ.

ಪ್ರಾದೇಶಿಕ ಪರಿಸರದ ಮಾದರಿಯಿಂದ ಸಮಕಾಲೀನ ಸಾಮಾಜಿಕ ಜೀವನವನ್ನು ಪ್ರತಿಬಿಂಬಿಸುವ ಅನೇಕ ಕೇಶವಿನ್ಯಾಸಗಳು, ಆಭರಣ, ಉಡುಗೆ ತೊಡುಗೆಗಳನ್ನು, ಆಯುಧಗಳನ್ನು ಶಿಲ್ಪದಲ್ಲಿ ಆಕರ್ಷಕವಾಗಿ ಚಿತ್ರಿಸಲಾಗಿದೆ. ಅಪ್ಸರೆಯರು, ಕಿನ್ನರಿಯರು, ಸತಿಯರ ಶಿಲ್ಪಗಳಲ್ಲಿರುವ ತೋಳಬಂದಿ, ಮುತ್ತಿನಸರ, ಬಳೆ, ಕಡಗ, ಕಟಿಸೂತ್ರ, ಕಂಠಿಹಾರ, ಓಲೆ ಮುಂತಾದವುಗಳನ್ನು ಶಿಲ್ಪಗಳಲ್ಲಿ ಚಿತ್ರಿಸಿದ್ದು ಸಮಕಾಲೀನ ಸಾಮಾಜಿಕ ಅಂಶಗಳನ್ನು ವ್ಯಕ್ತಪಡಿಸುತ್ತದೆ. ಉಚಗಾಂವ ಗ್ರಾಮದಲ್ಲಿ ದೊರೆತ ಅನೇಕ ತುರುಗೋಳ ಶಿಲ್ಪಗಳು ಈ ಪ್ರದೇಶದಲ್ಲಿ ಪಶುಸಂಗೋಪನೆ ಪ್ರಧಾನ ವ್ಯವಸಾಯವಾಗಿದ್ದು, ದನಕರುಗಳು ಈ ಪ್ರದೇಶದ ಆರ್ಥಿಕ ವ್ಯವಸ್ಥೆಯ ಮುಖ್ಯ ಸಂಪತ್ತು ಎಂಬುದನ್ನು ಸ್ಪಷ್ಟೀಕರಿಸುತ್ತದೆ. ವಿಷಯ ನಿರೂಪಣೆ ಮತ್ತು ಸಾಮಾಜಿಕ ಅಂಶಗಳನ್ನು ಕಲಾಮಾಧ್ಯಮದಲ್ಲಿ ಸಾಧಿಸಿ, ಜನಸಾಮಾನ್ಯರನ್ನು ಶಿಲ್ಪಗಳಲ್ಲಿ ಸೆರೆಹಿಡಿದ ವೀರತ್ವಪ್ರಧಾನ ಸಮಾಜ ವ್ಯವಸ್ಥೆಯನ್ನು ಪ್ರತಿಬಿಂಬಿಸಲಾಗಿದೆ.

ಇಲ್ಲಿ ದೊರೆತ ಮಾಸ್ತಿಗಲ್ಲುಗಳು ಸತಿಪದ್ಧತಿ ಈ ಪ್ರದೇಶದಲ್ಲಿ ಪ್ರಚಲಿತವಿರುವುದನ್ನು ತಿಳಿಸುತ್ತವೆ ಮತ್ತು ಇಬ್ಬರು ಸತಿಯರನ್ನು, ಇಲ್ಲವೆ ಇಕ್ಕೈಗಳನ್ನು ಸಾಂಕೇತಿಕವಾಗಿ ಚಿತ್ರಿಸಿದ್ದರಿಂದ ಈ ಪ್ರದೇಶದಲ್ಲಿ ಇದ್ದಿರಬಹುದಾದ ಬಹುಪತ್ನಿತ್ವ ಪದ್ಧತಿಯನ್ನು ಪ್ರತಿಬಿಂಬಿಸುತ್ತದೆ.

ಕೊನೆಯದಾಗಿ ಒಂದೇ ಪ್ರದೇಶದಲ್ಲಿ ಹಲವಾರು ವೀರಗಲ್ಲುಗಳು ದೊರೆತಿದ್ದರಿಂದ ಈ ಪ್ರದೇಶದ ಶೌರ್ಯ, ಸಾಹಸ, ವೀರತ್ವ, ಶೌರ್ಯಪ್ರಧಾನ ಸಮಾಜ ವ್ಯವಸ್ಥೆ, ಸಾಮಾಜಿಕ ಕರ್ತವ್ಯ ನಿಷ್ಠೆ, ಅನಿವಾರ್ಯ ಮತ್ತು ಅನಿಶ್ಚಿತತೆಯ ಹೋರಾಟ ಮತ್ತು ಸರ್ವಸಾಮಾನ್ಯ ಜನತೆ ಎದುರಿಸಿದ ಅಸುರಕ್ಷತೆಯನ್ನು ಅವು ಸಾರಿಹೇಳುವಂತಿವೆ. ಅಲ್ಲದೆ ಈ ಸ್ಮಾರಕಶಿಲ್ಪಗಳನ್ನು ಭೂಗರ್ಭದಾಳದಿಂದ ಅಗೆದು ತೆಗೆದು ಅವುಗಳ ಮೂಲಸ್ಥಳದಲ್ಲೇ ನಿಂತು ಅಧ್ಯಯನ ಮಾಡಿದ್ದರಿಂದ ಜನರ ಮಾನಸಿಕ ತುಮುಲ, ಭಾವನೆಗಳು, ಸಮಕಾಲೀನ ಸಾಮಾಜಿಕ ಪರಿಸ್ಥಿತಿಗೆ ಅವರು ಸ್ಪಂದಿಸಿದ ರೀತಿ, ಪರಿಸರದ ಸಂಬಂಧಗಳು–ಮುಂತಾದವುಗಳ ವೈಜ್ಞಾನಿಕ ವಿಶ್ಲೇಷಣೆ ಅಧ್ಯಯನಕ್ಕೆ ಜೀವಂತಿಕೆ ಮೂಡಿಸಿದೆ.

(ತನುಮನದಿಂದ ಶ್ರಮವಹಿಸಿ ಸ್ಮಾರಕ ಶಿಲ್ಪಗಳನ್ನು ಭೂಗರ್ಭದಿಂದ ಅಗೆದು ತೆಗೆದು ಬೆಳಕಿಗೆ ತಂದ ರಾಣಿ ಪಾರ್ವತಿದೇವಿ ಮಹಾವಿದ್ಯಾಲಯದ ಎನ್.ಎಸ್.ಎಸ್. ವಿದ್ಯಾರ್ಥಿ ಸ್ವಯಂ ಸೇವಕರು ಮತ್ತು ಇತಿಹಾಸ ವಿಭಾಗದ ವಿದ್ಯಾರ್ಥಿಗಳಿಗೆ ಕೃತಜ್ಞತೆಗಳು)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಶೆಟ್ಟರ ಎಸ್.ಎಸ್. & ಸಾಂಥೆಮರ್ (ಸಂಪಾದಿತ)., ೧೯೮೨, **ಮೆಮೋರಿಯಲ್ ಸ್ಟೋನ್ಸ್**, ಧಾರವಾಡ.

೨. ಶೇಷಶಾಸ್ತ್ರಿ ಆರ್., ೧೯೮೨, **ಕರ್ನಾಟಕದ ವೀರಗಲ್ಲುಗಳು**, ಕ.ಸಾ.ಪ., ಬೆಂಗಳೂರು.

೩. ಪರಮಶಿವಮೂರ್ತಿ ಡಿ.ವಿ., ೧೯೯೯, **ಕನ್ನಡ ಶಾಸನ ಶಿಲ್ಪ**, ಹಂಪಿ.

೪. ಶೇಠೆ ಬಿ.ಎಸ್., ೧೯೯೧, **ಕರ್ನಾಟಕದಲ್ಲಿ ಸತಿ ಪದ್ಧತಿ**, ಬೆಳಗಾವಿ.

೫. ಚಿದಾನಂದಮೂರ್ತಿ ಎಮ್., ೧೯೮೮, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಬೆಂಗಳೂರು.

೬ ಚನ್ನಕ್ಕ ಎಲಿಗಾರ, ೧೯೯೦, **ಶಾಸನದಲ್ಲಿ ಸ್ತ್ರೀ ಸಮಾಜ**, ಧಾರವಾಡ.

೭. ಉಚಗಾಂವ ಗ್ರಾಮದಲ್ಲಿ ಕೈಗೊಂಡ ಕ್ಷೇತ್ರಕಾರ್ಯ.

ಬಸವರಾಜಪ್ಪ ಪರಪ್ಪ*

# ಕಂದಗಲ್ಲಿನ ವೀರಗಲ್ಲುಗಳು ಮತ್ತು ಸ್ಮಾರಕಗಲು

ಇಂದಿನ ದಾವಣಗೆರೆ ಜಿಲ್ಲೆಗೆ ಸೇರಿರುವ ದಾವಣಗೆರೆ ತಾಲ್ಲೂಕು ಮಾಯಕೊಂಡ ಹೋಬಳಿಯ 'ಕಂದಗಲ್ಲ' ಗ್ರಾಮದಲ್ಲಿ ಎರಡು ವೀರಗಲ್ಲುಗಳಿವೆ. ಅವುಗಳ ಅಗಲ ಸುಮಾರು ಒಂದುವರೆ ಅಡಿ, ಉದ್ದ ಸುಮಾರು ೪ ಅಡಿ ಎತ್ತರವಿರುತ್ತವೆ.

**ಒಂದನೇ ವೀರಗಲ್ಲಿನ ವಿವರ :** ಇದು ಸುಮಾರು ೧೦-೧೧ನೇಯ ಶತವಮಾನದ್ದಾಗಿರುತ್ತದೆ. ವೀರನ ಹಿಂಭಾಗದಲ್ಲಿ ಬಿಲ್ಲು ಬಾಣದ ಬತ್ತಳಿಕೆ ಇದ್ದು ಇದನ್ನು ಬೆನ್ನಿನ ಹಿಂದೆ ಇರಿಸಿಕೊಂಡಿರುತ್ತಾನೆ. ಈ ಬತ್ತಳಿಕೆಯಲ್ಲಿ ಬಾಣಗಳಿದ್ದು ಬಿಲ್ಲನ್ನು ಸೆಟೆದೆಳೆದು ಶತ್ರುವನ್ನು ಹೊಡೆಯಲು ಸಿದ್ಧರಾಗಿ ನಿಂತಿರುತ್ತಾರೆ. ಈ ವೀರಗಲ್ಲಿನ ವೀರನು ಜಟೆಯನ್ನು ಕಟ್ಟಿರುತ್ತಾನೆ. ಈ ವೀರನ ದೇಹದಾರ್ಢ್ಯ ಕಟ್ಟುಮಸ್ತಾಗಿರುತ್ತದೆ.

**ಎರಡನೇ ವೀರಗಲ್ಲು :** ಈ ವೀರಗಲ್ಲಿನಲ್ಲಿ ಕುದುರೆಯ ಮೇಲೇರಿ ಬಿಲ್ಲು-ಬತ್ತಳಿಕೆಂಯುನ್ನು ಹಿಡಿದು ನಾಗಾಲೋಟದಿಂದ ಓಡಿಸಿಕೊಂಡು ಬಂದು ಶತ್ರುವನ್ನು ಕೆಡವಿ ತುಳಿದಿರುವುದು ಕಾಣುತ್ತದೆ. ಈ ವೀರಗಲ್ಲು ಒಂದುಕಾಲು ಅಡಿ ಅಗಲ, ಎತ್ತರ ೩ ಅಡಿಯಿರುತ್ತದೆ. ಈ ವೀರಗಲ್ಲುಗಳು ಕಂದಗಲ್ಲ ಗ್ರಾಮದ ವಾಯುವ್ಯ ದಿಕ್ಕಿನಲ್ಲಿ ಚೆನ್ನಗಿರಿ ತಾಲ್ಲೂಕು ಹಿರೇಕೊಗಲೂರಿಗೆ ಹೋಗುವ ದಾರಿಯಲ್ಲಿವೆ. ಇಲ್ಲಿರುವ ದೇವಾಲಯಗಳ ವಿವರಣೆಯನ್ನು ಕೆಳಗೆ ನೀಡಲಾಗಿದೆ. ಈ ಗ್ರಾಮದ ಪಶ್ಚಿಮ ಭಾಗದಲ್ಲಿ ಸುಮಾರು ೩೦೦ ಎಕರೆ ಇರುವ ಪುರಾತನ ಕೆರೆ ಇದೆ. ಇದಕ್ಕೆ ಕಲ್ಲಿನಲ್ಲಿ ಕಟ್ಟಿರುವ ಶಿಲಾಸ್ತಂಭಗಳ ಕೂಡಿ ಇರುತ್ತದೆ. ಈ ಕೆರೆಯ ತಟದಲ್ಲಿ ಕಲ್ಲೇಶ್ವರನ ದೇವಸ್ಥಾನವಿದ್ದು, ದೇವಸ್ಥಾನದ ಪಕ್ಕದಲ್ಲಿ ನಾರಾಯಣ ದೇವರ ದೊಡ್ಡ ವಿಗ್ರಹವಿರುತ್ತದೆ. ಇದರ ಉದ್ದ ೬ ಅಡಿ, ಅಗಲ ೩ ಅಡಿ ಇರುತ್ತದೆ. ಇದು ಕದಂಬರ ಕಾಲದಲ್ಲಿ ಕಟ್ಟಿದ್ದೆಂದು ಗ್ರಾಮೀಣರಲ್ಲಿ ಪ್ರಚಲಿತವಿದೆ. ಗ್ರಾಮದ ಒಳಭಾಗದಲ್ಲಿ ಶ್ರೀ ವೀರಭದ್ರ ದೇವಾಲಯವಿದ್ದು, ಇದು ೬ ಅಡಿ ಎತ್ತರವಿದೆ. ೩ ಅಡಿ ಅಗಲವಿರುತ್ತದೆ. ಶ್ರೀ ವೀರಭದ್ರ ದೇವರ ರಥೋತ್ಸವವು ಯುಗಾದಿ ಆದ ೯ ದಿನಗಳಲ್ಲಿ ಜಾತ್ರೆ ನಡೆಯುತ್ತದೆ. ಈ ವೀರಭದ್ರ ದೇವಸ್ಥಾನವು ಸಂಪೂರ್ಣ ಕಲ್ಲಿನದಾಗಿದ್ದು, ಇದು ಕೂಡ ಪುರಾತನವಾದುದೆಂದು ಹೇಳಲಾಗುತ್ತದೆ. ಶ್ರೀ ವೀರಭದ್ರ ದೇವರ ಎದುರು ಭಾಗದ ಹೊರಗಡೆ ಗರುಡ ಸ್ತಂಭವಿರುತ್ತದೆ. ಈ ಜಾಗವು ಮಹಿಮಾಪುರುಷರ ಸ್ಥಳವಾಗಿರುತ್ತದೆ. ಶ್ರೀ ವೀರಭದ್ರ ದೇವರ ಕರುಣೆಯಿಂದ ಗ್ರಾಮದ ಕೆಲವು ದೇವತೆಗಳು ಇಲ್ಲಿ ನೆಲೆಸಿರುತ್ತಾರೆ.

**ಇದೊಂದು ಪುಣ್ಯಭೂಮಿ :** ಶ್ರೀ ವೀರಭದ್ರ ದೇವರ ದೇವಸ್ಥಾನದ ಈಶಾನ್ಯ ಭಾಗಕ್ಕೆ ಊರ ಒಳಗಡೆ ಶ್ರೀ ಹನುಮಂತ ದೇವರ ದೇವಾಲಯ ಇದೆ. ಈ ವಿಗ್ರಹವು ಸುಮಾರು ಏಳುವರೆ ಅಡಿ ಎತ್ತರವಿದ್ದು, ೪ ಅಡಿ ಅಗಲವಿರುತ್ತದೆ. ಇದರ ಜಾತ್ರೆಯು ಕೂಡ ಪ್ರತಿ ವರ್ಷಕ್ಕೊಮ್ಮೆ ನಡೆಯುತ್ತದೆ. ಇದರ ವಿಶೇಷವೆಂದರೆ ಇದು ಊರ ಒಳಗಡೆ ಇರುತ್ತದೆ. ಈಶಾನ್ಯ ಭಾಗಕ್ಕೆ ಊರ ಹೊರಗೆ ಬನ್ನಿಮರವಿದ್ದು ಸುಮಾರು ಇದರ ವಯಸ್ಸು ೪೦೦ ವರ್ಷಗಳಾಗಿರುತ್ತವೆ. ಇಲ್ಲಿ ಪ್ರತಿ ವರ್ಷವು ವಿಜಯದಶಮಿ ದಿನ ಗ್ರಾಮದ ಎಲ್ಲಾ ದೇವರುಗಳು ಇಲ್ಲಿ ಬಂದು ಅಂಬು ಒಡೆದು ಬನ್ನಿ ಮುಡಿದು ಮೆರವಣಿಗೆಯನ್ನು ನಡೆಸುತ್ತಾರೆ. ಮೆರವಣಿಗೆಯನ್ನು ನಡೆಸುವ ಕಾಲದಲ್ಲಿ ಊರ ಹೊರಗಿರುವ ಕಂದಗಲ್ಲಿನ ವೀರಗಲ್ಲುಗಳಿಗೆ ಪೂಜೆ ಮಾಡಿಸಿಕೊಂಡು ದೇವರುಗಳು ಊರ ಒಳಗೆ ಹೋಗುತ್ತವೆ.

ಕಂದಗಲ್ಲ ಗ್ರಾಮದ ಇತಿಹಾಸವನ್ನು ತೆಗೆದುಕೊಂಡರೆ ಗ್ರಾಮದ ಪೂರ್ವ ಭಾಗದ ಕಡೆ ಉತ್ತರ ಹರಿದ್ರಾವತಿ ನದಿ ಹರಿಯುತ್ತದೆ. ಇದನ್ನು ಶ್ಯಾಗಲೆ ಹಳ್ಳವೆಂದು ಕರೆಯುತ್ತಾರೆ. ಈ ಹಳ್ಳದ ತಟದ ಮೇಲೆ ಮಹೇಶ್ವರ ದೇವಾಲಯವಿದ್ದು ಇಲ್ಲಿ ಮಾವಿನ ತೋಪಿದ್ದು ಈ ಮಾವಿನ ತೋಪಿನಲ್ಲಿ ಪ್ರತಿ ವರ್ಷವೂ ಮಹೇಶ್ವರ ಜಾತ್ರೆಯನ್ನು ಈ ಊರಿನ ವೀರಶೈವರೆಲ್ಲರೂ ಸೇರಿ ಮೂರು ದಿವಸಗಳ ಕಾಲ ನಡೆಸುತ್ತಿದ್ದರು. ಮತ್ತೊಂದು ದಿನ ಊರ ಶ್ರೀ ವೀರಭದ್ರ ದೇವಸ್ಥಾನದ ಮುಂದೆ ದೊಂದಿ (ಪಂಜು) ಯನ್ನು ಹಚ್ಚಿಕೊಂಡು ಜಾತ್ರೆಗೆ ಬಂದ ಅನ್ಯ ಜನರಿಗೆ ಅನ್ನಸಂತರ್ಪಣೆಯನ್ನು ಮಾಡುತ್ತಿದ್ದರು. ಅದಲ್ಲದೆ ಈ

* ಕಂದಗಲ್ಲ.







ಗ್ರಾಮದ ಭೂಮಿ ಕರಿಮಣ್ಣಿನಿಂದ ಕೂಡಿದ್ದು ಭೀಮನ ಎರೆ ಎಂದು ಕರೆಯುತ್ತಾರೆ. ಇದು ಫಲವತ್ತಾದ ಪ್ರದೇಶವಾಗಿರುತ್ತದೆ. ಇದಕ್ಕೆ ಕಂದಗಲ್ಲ ಎಂದು ಹೆಸರು ಬರಲು ಕಾರಣವೇನೆಂದರೆ, **ಕಂದ** ಎಂದರೆ **ಬಾಳೆ** ಹಾಗೂ **ಗಲ್ಲ** ಎಂದರೆ ವನ ಎಂದಾಗಿರುತ್ತದೆ. ಇದಕ್ಕೆ ಈಗಲೂ ಕೂಡ **ಬಾಳೆದಡ್ಲೂ** ಎಂದು ಕರೆಯುತ್ತಾರೆ. ಕಾರಣ ೧೨ನೇಯ ಶತಮಾನದ ಕಾಲದಲ್ಲಿ ಅಕ್ಕಮಹಾದೇವಿಯವರು ಉಡುತಡಿಯಿಂದ ಶ್ರೀಶೈಲಕ್ಕೆ ಹಾದು ಹೋಗುವಾಗ ಇಲ್ಲಿಯ ಬಾಳೆ ವನದಲ್ಲಿ ತಂಗಿದ್ದರೆಂದು ಪುರಾತನ ಕಾಲದಿಂದಲೂ ಹೇಳುವ ವಾಡಿಕೆ ಇದೆ. ಈ ಗ್ರಾಮದ ಜನ ಈಗಲೂ ಸಹ ಕೊಡುಗೈ ದಾನಿಗಳೆಂದು ಹೇಳುತ್ತಾರೆ. ಈ ಶಬ್ದವನ್ನು ಜನಪದರ ಬಾಯಿಯಲ್ಲಿ ಹಾಡು ಕಟ್ಟಿ ಹೇಳುತ್ತಾರೆ. ಈಗ ಇವೆಲ್ಲವೂ ಕ್ಷೀಣಿಸುತ್ತಾ ಬಂದಿವೆ.

ಈ ಗ್ರಾಮದಲ್ಲಿ ಒಂದು ದೊಡ್ಡ ಕೋಟೆಯಿದ್ದು ಈಗ ಇದು ಶಿಥಿಲವಾಗಿದ್ದು ಕಂಡುಬರುತ್ತದೆ.

ಕೊನೆಯದಾಗಿ ಹೇಳುವುದಾದರೆ ಈ ಅಪ್ರಕಟಿತ ವೀರಗಲ್ಲುಗಳನ್ನು ಕಂದಗಲ್ಲ ಗ್ರಾಮದ ಪುರಾತನ ವೀರರ ಕಲ್ಲುಗಳೆಂದು ಬಣ್ಣಿಸುತ್ತಾರೆ. ಈ ಪ್ರಾಗೈತಿಹಾಸಿಕ ಪ್ರದೇಶವು ವೀರ ಭೂಮಿಯೆಂದು ಗೋಚರವಾಗುತ್ತದೆ.

ವೀರಗಲ್ಲುಗಳ ಮತ್ತು ಎಲ್ಲಾ ದೇವರುಗಳ ಚಿತ್ರಗಳನ್ನು ಮುದ್ರಿಸಲಾಗಿದೆ.

ಡಾ. ಪಿ.ವಿ. ಕೃಷ್ಣಮೂರ್ತಿ*

# ಶ್ರೀನಿವಾಗಿಲ ತುರುಗೋಳ್ ಶಿಲ್ಪ - ಶಾಸನ ಶೋಧ

ಬೆಂಗಳೂರು ನಗರದ ಕೋರಮಂಗಲ ಬಡಾವಣೆಗೆ ಹೊಂದಿಕೊಂಡಂತಿರುವ ಶ್ರೀನಿವಾಗಿಲು/ಸೀನಿವಾಗಿಲು ಗ್ರಾಮ ಅದರ ನೆರೆಯಲ್ಲಿನ ಇಬ್ಬಲೂರು ಮಿಲಿಟರಿ ಕ್ಯಾಂಪಿಗೆ ಸೇರಿದ ಭೂಮಿಯಲ್ಲಿ ಸುಮಾರು ಪ್ರಾಚೀನವಾದ ಶಿವದೇವಾಲಯ ಇದೆ. ಆ ದೇವಾಲಯದ ಮುಂದೆ ಪ್ರಸ್ತುತ ತುರುಗೋಳ್ ಶಾಸನ ಶಿಲ್ಪವಿದೆ. ಸುಮಾರು ೭೦ ಸೆಂ.ಮೀ. ಅಗಲ ಮತ್ತು ೭೦ ಸೆಂ.ಮೀ. ಎತ್ತರವಿರುವ ಈ ಸ್ಮಾರಕಶಿಲೆಯ ಎಡಬದಿಯಲ್ಲಿ ಪ್ರಧಾನವಾಗಿ ಸುಂದರವಾದ ಆಲೀಢ ಭಂಗಿಯಲ್ಲಿರುವ ವೀರನ ಶಿಲ್ಪವಿದೆ. ಕೆಳಭಾಗದ ಬಲದಿಯಲ್ಲಿ ಎರಡು ಹಸುಗಳ ಶಿಲ್ಪವಿದೆ. ಮೇಲ್ತುದಿಯಲ್ಲಿ ಚಾಮರಧಾರಿಯರಾದ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಒಯ್ಯುತ್ತಿರುವಂತೆ ಬಿಡಿಸಲಾಗಿದೆ. ಆದರೆ ಪೀಠದ ಮೇಲೆ ವೀರನು ಆಸೀನವಾಗಿರುವಂತಿರುವುದು ವಿಶಿಷ್ಟವಾಗಿದೆ. ಬಲ ಮಧ್ಯಭಾಗದಲ್ಲಿ ನಾಲ್ಕು ಸಾಲುಗಳ ಶಾಸನವಿದೆ.

ವೀರನ ಉಬ್ಬುಶಿಲ್ಪ ಸುಂದರವಾಗಿದ್ದು ಎಡಗೈಯಲ್ಲಿ ಬಿಲ್ಲನ್ನು ಬಲಗೈಯಲ್ಲಿ ಬಾಕುವನ್ನು ಹಿಡಿದಿದ್ದಾನೆ. ಬೆನ್ನ ಹಿಂದೆ ೫ ಬಾಣಗಳ ಬತ್ತಳಿಕೆ ಇದೆ. ೩-೪ ಬಾಣಗಳು ಹಿಂದಿನಿಂದ ಹಾಗೂ ಮುಂದಿನಿಂದ ವೀರನನ್ನು ಚುಚ್ಚಿರುವಂತೆ ಬಿಡಿಸಲಾಗಿದೆ. ನಡುವಿಗೆ ವೀರಗಚ್ಚೆಯನ್ನು ತೊಟ್ಟಿದ್ದಾನೆ. ಕೊರಳು, ತೋಳುಗಳಲ್ಲಿ ಆಭರಣಗಳನ್ನು



* ೩೩೭, 'ಶ್ರೀಕೃಷ್ಣಕೃಪ', ೩ನೇ ಕ್ರಾಸ್, ಸುಬ್ಬಣ್ಣ ಲೇಔಟ್, ಹರಿನಗರಕ್ರಾಸ್, ಬೆಂಗಳೂರು - ೫೬೦ ೦೬೨



ಧರಿಸಿರುವಂತೆ ಬಿಡಿಸಲಾಗಿದೆ. ಕಿವಿಗಳಲ್ಲಿ ಕುಂಡಲ ಮತ್ತು ತಲೆಯ ವೀರಮುಡಿ ಬಲಕ್ಕಿದ್ದು ಆಕರ್ಷಕವಾಗಿದೆ. ಶಿಲ್ಪದಲ್ಲಿ ವೀರನ ಚಲನಶೀಲತೆ ಎದ್ದು ಕಾಣುವಂತೆ ಬಿಡಿಸಲಾಗಿದೆ. ವೀರನ ಹಿಂಬದಿಗೆ ಕೆಳಭಾಗದಲ್ಲಿ ಬಿಡಿಸಿರುವ ದಷ್ಟಪುಷ್ಟವಾದ ತುರುಗಳು ಗೃಹಾಭಿಮುಖ ವಾಗಿ ಕಾತುರದಿಂದ ಓಡಿಹೋಗುತ್ತಿರುವಂತೆ ಬಿಡಿಸಿರುವುದರಿಂದ ಈ ತುರುಗಾಳಗದಲ್ಲಿ ವೀರನು ಹಸುಗಳನ್ನು ಹಿಂಪಡೆದು ವೀರಮರಣವನ್ನಪ್ಪಿರುವಂತೆ ತೋರುತ್ತದೆ. ವೀರನ ಶಿಲ್ಪದ ಮೇಲೆ ಚಿತ್ರಿತವಾಗಿರುವ ಸ್ವರ್ಗಾರೋಹಣ ಶಿಲ್ಪ ಸಮಕಾಲೀನ ಗಂಗ, ನೊಳಂಬ, ಬಾಣರ ಶಿಲ್ಪಗಳಲ್ಲಿದ್ದಂತೆಯೇ ಇದೆ. ಆದರೆ ವೀರ ಪೀಠದ ಮೇಲೆ ಕುಳಿತಿರುವಂತಿದ್ದು ವಿಶಿಷ್ಟವಾಗಿದೆ. ಆಗ್ಗೆ ವಿಮಾನದ ಕಲ್ಪನೆ ಇನ್ನೂ ಮೂಡಿರಲಿಲ್ಲ ಎಂದು ತೋರುತ್ತದೆ. ಒಟ್ಟಾರೆ ಈ ಸ್ಮಾರಕ ಶಿಲೆಯ ಶಿಲ್ಪವು ಹೆಚ್ಚು ಚಲನಶೀಲತೆಯಿಂದ ಕೂಡಿ ಗಮನಾರ್ಹವಾಗಿದೆ.

ಸಾಕಷ್ಟು ಆಳವಾಗಿ ಕೊರೆದಿರುವ ಶಾಸನ ಲಿಪಿ ಮತ್ತು ಭಾಷೆ ಕನ್ನಡ. ಅಕ್ಷರಗಳು ಸುಮಾರು ೪ X ೫ ಸೆಂ.ಮೀ. ಪ್ರಮಾಣದ್ದಾಗಿವೆ. 'ಐತ್ವ' ಮತ್ತು 'ಓ'ತ್ವಗಳ ಹಾಗೂ ಲಿಪಿಯ ಬೆಳವಣಿಗೆಯ ದೃಷ್ಟಿಯಿಂದ ಈ ಶಾಸನದ ಕಾಲವನ್ನು ಸುಮಾರು ಕ್ರಿ.ಶ. ೮ನೇ ಶತಮಾನದ ಅಂತ್ಯ ಭಾಗಕ್ಕೆ ಹಾಕಬಹುದಾಗಿದೆ. ಅಂದರೆ ಗಂಗ ಶ್ರೀಪುರುಷನ ಕಾಲಾವಧಿಯ ಸ್ಮಾರಕ ಶಿಲೆ ಇದೆಂದು ಹೇಳಬಹುದಾಗಿದೆ.

ಶಾಸನದಲ್ಲಿ ಪಳ್ಚತೆರೆಯಮ್ಮ ಎಂಬ ವೀರನು ಸಿಯ್ಯನೆಲ್ವಾಗಿಲ ಗ್ರಾಮದ ತುಱುಗಳನ್ನು ಇಕ್ಕಿಸಿ ಅಂದರೆ ಹಿಂತಿರುಗಿ ಪಡೆದು ಆ ಹೋರಾಟದಲ್ಲಿ ಮಡಿದು ಸ್ವರ್ಗಸ್ಥನಾದಂತೆ ವಿವರವಿದೆ.

ಇಲ್ಲಿ ಉಕ್ತವಾಗಿರುವ ವೀರನ ಹೆಸರು ವಿಶಿಷ್ಟವಾಗಿದೆ. ಪಳ್ಚತೆರೆಯಮ್ಮ ಎಂಬ ಹೆಸರು ಅಪರೂಪದ್ದಾಗಿದೆ. 'ಪಳಂಚು' ಎಂಬುದಕ್ಕೆ to strike against, to clash together, to enconter, to oppose, to resist ಎಂಬ ಅರ್ಥಗಳಿವೆ. ಹಾಗೇ ಪಳಚನೆ ಎಂದರೆ ಪಳಕನೆ, ಪಳಂಚೆ ಎಂಬ ಅರ್ಥಗಳಿವೆ. ಹಾಗೆಂದರೆ with a glitter, with pure brightness, with a flash; brightness, pureness ಮುಂತಾದ ಅರ್ಥಗಳಿವೆ. ಹಾಗಾಗಿ ಪಳ್ಚದ್ ಎರೆಯಮ್ಮ ಎಂದು ಹೆಸರನ್ನು ಬಿಡಿಸಿಕೊಂಡರೆ ಶೌಚಾಚಾರದ ವೀರ ಎರೆಯಮ್ಮ ಎಂದಾಗುತ್ತದೆ. (ಬೇಗೂರು ವೀರಗಲ್ಲಿನ ಇರುಗನನ್ನು ಆ ವೀರಗಲ್ಲು ಶಾಸನ ಶವುಚರನೆಂದು ಉಲ್ಲೇಖಿಸಿರುವುದನ್ನು ಗಮನಿಸಬಹುದು.)

ಈ ಶಾಸನದಲ್ಲಿ ಊರಿನ ಹೆಸರನ್ನು ಸಿಯ್ಯನೆಲ್ವಾಗಿಲು ಎಂದು ಕರೆದಿರುವುದು ಇಂದು ಆ ಶಾಸನ ದೊರೆತ ಗ್ರಾಮದ ಪೂರ್ವನಾಮ ಇದೆಂಬುದು ಖಚಿತವಾಗುತ್ತದೆ. ಹೊಸಕೋಟೆ ತಾಲೂಕಿನಲ್ಲೂ ನೆಲವಾಗಿಲು ಎಂಬ ಗ್ರಾಮವಿದೆ. ಸಿಯ್ಯ ಅಥವಾ ಸಿಯ್ಯನೆ ಎಂಬುದಕ್ಕೆ ಕಿಟ್ಟೆಲ್ ನಿಘಂಟಿನಲ್ಲಿ sweetly, ಕಮ್ಮನೆ ಎಂಬ ಅರ್ಥಗಳಿವೆ. ಹಾಗಾಗಿ ಸಿಯ್ಯ + ನೆಲ್ ಎಂಬುದು ಸಿಹಿಯಾದ ನೆಲ್ಲನ್ನು ಅಂದರೆ ಭತ್ತವನ್ನು ಬೆಳೆಯುವ ಸ್ಥಾನ ಇದಾಗಿತ್ತೆಂಬುದರ ಸೂಚನೆ ನೀಡುತ್ತದೆ. ಇಂದಿಗೂ ಸ್ಥಳೀಯವಾಗಿ ಬೆಳೆಯುವ ದೊಡ್ಡಬೈರ ನೆಲ್ಲು ಎಂಬ ಭತ್ತದ ಅಕ್ಕಿ ಸಿಹಿಯಾಗಿರುವುದನ್ನು ಇದು ಸೂಚಿಸುತ್ತಿದೆ ಎಂದು ತೋರುತ್ತದೆ.

### ಶಾಸನ ಪಾಠ

೧ ಸ್ವಸ್ತಿ ಶ್ರೀ ಪ(ಳ್ಚ)ತೆಱೆ
೨ ಯಮ್ಮ ಸಿಯ್ಯನೆಲ್ವಾ
೩ ಗಿಲ ತುಱುವನಿಕ್ಕಿಸಿ
೪ ಸತ್ತು ಸಗ್ಗಿಯಾದಾಂ

ಡಾ. ಎಚ್.ಎಸ್. ಉಷಾರಾಣಿ*

# ಮಲೆಯೂರು ನಿಷಿಧಿ ಶಾಸನಗಳು

ಮಲೆಯೂರು ಧಾರ್ಮಿಕ ಹಾಗೂ ಅಧ್ಯಾತ್ಮಿಕ ಪರಂಪರೆಗೆ ಹೆಸರುವಾಸಿ. ಇಂದು ಮಲೆಯೂರು ಚಾಮರಾಜನಗರ ಜಿಲ್ಲೆಗೆ ಸೇರಿದ ಗ್ರಾಮ. 'ರಾಜಾವಳಿ ಕಥಾ' ಬರೆದ ದೇವಚಂದ್ರನ ನಾಡು. ಜೈನಗುರು ಪೂಜ್ಯಪಾದರು ತಮ್ಮ ಕೊನೆಯ ದಿನಗಳನ್ನು ಕಳೆದ ತಾಣ. ಮೈಸೂರಿನಿಂದ ೫೦ ಕಿ.ಮೀ. ಹಾಗೂ ಚಾಮರಾಜ ನಗರದಿಂದ ೨೦ ಕಿ.ಮೀ. ದೂರದಲ್ಲಿರುವ ಮಲೆಯೂರು ಜೈನಧರ್ಮದ ಕೇಂದ್ರಗಳಲ್ಲಿ ಒಂದು.

ಉತ್ತರದಿಂದ ಭದ್ರಬಾಹುಮುನಿ ದಕ್ಷಿಣಾಭಿಮುಖವಾಗಿ ಕರ್ನಾಟಕಕ್ಕೆ ಬಂದಾಗ ಆತನೊಡನೆ ಬಂದಿದ್ದ ಅನೇಕ ಜೈನ ಮುನಿಗಳು ಬೆಟ್ಟಗುಡ್ಡಗಳನ್ನಾಶ್ರಯಿಸಿ ತಪಸ್ಸನ್ನಾಚರಿಸಿ ಸಮಾಧಿ ಹೊಂದಿರುವುದು ತಿಳಿದಿರುವ ವಿಷಯ. ಹಾಗಾಗಿ ಅಲ್ಲಲ್ಲಿ ಸಮಾಧಿ ಸ್ಮಾರಕಗಳನ್ನು ಕಾಣಬಹುದಾಗಿದೆ. ಅವುಗಳನ್ನು ನಿಷಿಧಿಗಳೆಂದು ಸಂಬೋಧಿಸುವುದು ರೂಢಿಯಲ್ಲಿದೆ. ಈ ರೀತಿ ಸಮಾಧಿ ಸ್ಮಾರಕಗಳನ್ನು ಸ್ಥಾಪಿಸುವ ಪದ್ಧತಿ ಶ್ರವಣಬೆಳಗೊಳದಲ್ಲಿ ೭ನೇ ಶತಮಾನದಿಂದ ಪ್ರಾರಂಭವಾಯಿತೆಂದೂ, ಅದು ೧೨ನೇ ಶತಮಾನದವರೆಗೆ ಹೆಚ್ಚು ಪ್ರಚಾರಕ್ಕೆ ಬರಲಿಲ್ಲವೆಂದೂ ಷ. ಶೆಟ್ಟರ್ ಅಭಿಪ್ರಾಯ.[೧] ನಿಷಿಧಿಗಳಲ್ಲಿ ಮಲೆಯೂರಿನ ನಿಷಿಧಿಗಳು ಗಮನಾರ್ಹವಾಗಿವೆ. ಅವುಗಳಲ್ಲಿ ಉತ್ತರವಾಗಿರುವ ಬರಹಗಳು ಸಂಬಂಧಪಟ್ಟ ಯತಿಗಳು, ಮುನಿಗಳು ಅವರ ಗುರುಪರಂಪರೆ ಬಗ್ಗೆ ಮಾಹಿತಿ ನೀಡುತ್ತವೆ. ಈ ಹಿನ್ನಲೆಯಲ್ಲಿ ನಿಷಿಧಿ ಶಾಸನಗಳನ್ನು ಆಧರಿಸಿ ನಿಷಿಧಿಯ ವಿಧಿ ವಿಧಾನ, ನಿಷಿಧಿ ಮಾಡಿಸಿದವರ ಬಗ್ಗೆ ಅಧ್ಯಯನ ಮಾಡುವುದೇ ಈ ಪ್ರಬಂಧದ ಉದ್ದೇಶವಾಗಿದೆ.

ಮಲೆಯೂರಿನ ಪ್ರಕಟಿತ ೨೦ ಶಾಸನಗಳಲ್ಲಿ ೧೦ ನಿಷಿಧಿ ಶಾಸನಗಳಾಗಿವೆ. ಈ ಶಾಸನಗಳು ಸಮಾಧಿ ಮರಣವನ್ನಪ್ಪಿದವರ ಗೌರವಾರ್ಥ ನಿಲ್ಲಿಸಿದ ಸ್ಮಾರಕಗಳಾಗಿವೆ. ಜೈನ ಪರಂಪರೆಯಲ್ಲಿ ಮರಣ ವ್ರತಾಚರಣೆಯ ವಿಧಾನವನ್ನು ಸಮಾಧಿ, ಸಲ್ಲೇಖನ, ಸನ್ಯಸನ, ಪಂಡಿತ, ಪಂಚಪದ, ಆರಾಧನಾ, ಪೌಗ್ಗಮಣ ಮುಂತಾದ ಪದಗಳಿಂದ ಉಲ್ಲೇಖಿಸಲಾಗಿದೆ. ನಿಷಿಧಿ ಪದವು ಧ್ಯಾನಾಸಕ್ತನು ಆಯ್ದುಕೊಂಡ ಸ್ಥಳ ಹಾಗೂ ಭಂಗಿಗಳನ್ನು ಸೂಚಿಸುವುದೆಂದು ಅರ್ಥೈಸಲಾಗಿದೆ. ಮುನಿಗಳು ಧ್ಯಾನಕ್ಕಾಗಿ ಬಂಡೆಗಳನ್ನು ಆಶ್ರಯಿಸುತ್ತಿದ್ದುದು ಸರ್ವೇಸಾಮಾನ್ಯವಾಗಿತ್ತು. ಕೆಲವರು ಕುಕ್ಕುಟಾಸನ, ಪಲ್ಯಂಕದಲ್ಲಿ ಧ್ಯಾನ ಮಾಡಿದರೆ ಮತ್ತೆ ಕೆಲವರು ಕಾಯೋತ್ಸರ್ಗ ಮತ್ತು ಏಕಪಾರ್ಶ್ವ ನಿಯಮ ಅನುಸರಿಸಿ ಕಾಯಕ್ಲೇಶದಲ್ಲಿ ತೊಡಗಿರುತ್ತಿದ್ದರು.[೨]

ನಿಷಿಧಿಗಳನ್ನು ಬಂಡೆಕಲ್ಲು ಮತ್ತು ಗುಂಡುಕಲ್ಲುಗಳ ಮೇಲೆ ಕೆತ್ತುವುದು ರೂಢಿಯಲ್ಲಿತ್ತು. ಮಲೆಯೂರಿನಲ್ಲೂ ಅಂತಹ ಬಂಡೆಕಲ್ಲು ಮತ್ತು ಗುಂಡುಕಲ್ಲುಗಳನ್ನೇ ಬಳಸಿಕೊಳ್ಳಲಾಗಿದೆ. ಕಾರಣ ಅಲ್ಲಿಯ ಕನಕಗಿರಿ ಬೆಟ್ಟ ತಪಸ್ಸಿಗೆ ಯೋಗ್ಯವಾಗಿದ್ದು ಪ್ರಾಚೀನ ಕಾಲದಿಂದಲೂ ಋಷಿಮುನಿಗಳನ್ನು ಆಕರ್ಷಿಸಿತ್ತು.

ಬಂಡೆಕಲ್ಲುಗಳಿಗಿಂತ ಗುಂಡುಕಲ್ಲು ನಿಷಿಧಿಗಳು ಹೆಚ್ಚು ಕಲಾತ್ಮಕವಾಗಿ ಉಳಿದೆಡೆಗಳಲ್ಲಿ ಕಂಡುಬರುವಂತೆ ಮಲೆಯೂರಿನಲ್ಲೂ ಕಾಣಬಹುದಾಗಿದೆ. ಶಾಸನ ಪಾಠಕ್ಕಿಂತ ಶಿಲ್ಪಕ್ಕೆ ಪ್ರಾಧಾನ್ಯತೆ ದೊರಕಿದೆ. ಉದಾಹರಣೆಗೆ ಕ್ರಿ.ಶ. ೧೩೫೫ರ ಶಾಸನ[೩] "ಲಲಿತಕೀರ್ತಿಭಟ್ಟಾರಕರು ಶಕವರ್ಷ ೧೨೭೭ ಮನ್ಮಥ ಸಂವತ್ಸರದ ಚೈತ್ರ ಬಹುಳ ೧೪ ಗುರುವಾರದಲ್ಲು ತಮ್ಮ ನಿಷಿಧಿ ನಿಮಿತ್ತವಾಗಿ ಕನಕಗಿರಿಯಲ್ಲು ಮಾಡಿಸಿದ ವಿಜಯದೇವರ ಪ್ರತುಮೆಗ (ಪ್ರತಿಮೆ) ಅವರ ಮುಖ್ಯವಾದ ಆಚಾರ್ಯ ಓಲಗರು ಮಂಗಳ ಮಹಾ ಶ್ರೀ ಶ್ರೀ ಶ್ರೀ" ಎಂದಿದೆ. ಅವರ ಆಚಾರ್ಯ ಪರಂಪರೆಯನ್ನು ಶಾಸನದಲ್ಲಿ ಪರಿಶೀಲಿಸಲಾಗಿ ಶಾಸನ ಪಾಠದ ಮೊದಲ ಎರಡು ಪಂಕ್ತಿಗಳು ಮಾಹಿತಿ ನೀಡುತ್ತವೆ. ಅದರ ಪ್ರಕಾರ, ಆಚಾರ್ಯರ ಸಾಲಿನಲ್ಲಿ 'ಶ್ರೀ ಮೂಲಸಂಘ ದೇಶೀಯಗಣ ಕೊಂಡಕುಂದಾನ್ವಯ ಪುಸ್ತಕಗಚ್ಛ ಹನಸೋಗೆಯ ಬಳಿಯ ಶ್ರೀ ಮದ್ರಾಯ ರಾಜಗುರು ಮಂಡಳಾಚಾರ್ಯ ಸಮಯಾಚರಣರುಮಪ್ಪ ಹೇಮಚಂದ್ರ ಭಟ್ಟಾರಕರ ಶಿಷ್ಯರು ತೆಲುಗ ಆದಿದೇವರು ಲಲಿತಕೀರ್ತಿ ಭಟ್ಟಾರಕರ ಶಿಷ್ಯರು ಲಲಿತಕೀರ್ತಿಭಟ್ಟಾರಕರು ಎಂದು ದಾಖಲಿಸಲಾಗಿದೆ. ಶಾಸನ ಪಾಠದ ಮೇಲಿನ ಭಾಗದಲ್ಲಿ ಬ್ರಹ್ಮದೇವರ ಶಿಲ್ಪ ವಿಜಯ

* ೪೩೩, 'ಇ' ಬ್ಲಾಕ್, ಜೆ.ಪಿ. ನಗರ, ಮೈಸೂರು - ೫೭೦ ೦೦೮.

ಪಾರ್ಶ್ವನಾರ್ಥ ಶಿಲ್ಪ ಆಚಾರ್ಯರು ಓಲಗರ ಉಬ್ಬುಶಿಲ್ಪಗಳಿವೆ. ಈ ಶಿಲ್ಪಗಳ ಭಂಗಿಗಳನ್ನು ಗಮನಿಸಿದಾಗ ಏಕಪಾರ್ಶ್ವ ನಿಯಮನ್ನನುಸರಿಸಿ ಸಮಾಧಿ ಮರಣ ಸಾಧಿಸಿದಂತಿದೆ.[೪] ಆದರೆ ಶಾಸನ ಪಾಠದಲ್ಲಿ ಯಾವುದೇ ಆಸನ, ಭಂಗಿ ಹಾಗೂ ವ್ರತದ ವಿವರವಿಲ್ಲ. ಇಷ್ಟಾದರೂ ಮಲೆಯೂರಿನ ಸವಿಸ್ತಾರ ಗುಂಡುಕಲ್ಲು ನಿಷಿಧಿ ಶಾಸನ ಎಂದು ಹೇಳಿದರೆ ತಪ್ಪಾಗಲಾರದು. ಈ ಶಿಲಾಲೇಖವು ಬೆಟ್ಟದಲ್ಲಿ ಗುಂಡಿನ ಪೂರ್ವಭಾಗದಲ್ಲಿದೆ.

ಮತ್ತೊಂದು ಉಬ್ಬುಶಿಲ್ಪಗಳನ್ನೊಳಗೊಂಡಿರುವ ಶಾಸನ[೫] ಕ್ರಿ.ಶ. ೧೮೯೯ರದ್ದು. ಈ ಶಾಸನದ ಪ್ರಕಾರ ಚಂದ್ರಕೀರ್ತಿ ಯೋಗಿ ಸ್ವನಿಷಿಧಿಯಾತ್ಯ ಚಂದ್ರಪ್ರಭಾ ಸ್ವಾಮಿಗಳ ಪ್ರತಿಮೆ ಮಾಡಿಸಿದರು. ಇವರ ಪರಂಪರೆಯ ವಿವರ ಹೀಗಿದೆ: ಇವರು 'ಶ್ರೀಮೂಲ ಸಂಘ ದೇಶೀಗಣ ಪುಸ್ತಕಗಚ್ಛ ಇಂಗಳೇಶ್ವರದ ಬಳಿ ಕೊಂಡಕುಂದಾನ್ವಯರ ಸಂಬಂಧಿಗಳು ಶ್ರುತಮುನಿಗಳ ಪದಪದ್ಮಭೃಂಗರು ಶುಭಚಂದ್ರದೇವರ ಪ್ರಿಯಾಗ್ರ ಶಿಷ್ಯರುಂ ಶ್ರೀಮತು ಸಕಲ ಕಲಾ ಪ್ರವೀಣರುಮಪ್ಪ ಶ್ರೀ ಕೊಪಣದ ಚಂದ್ರಕೀರ್ತಿ ದೇವರು' ಎಂದು ಉಲ್ಲೇಖಿಸಲಾಗಿದೆ. ಇಲ್ಲಿಯೂ ಬರವಣಿಗೆಯ ಮೇಲ್ಭಾಗದಲ್ಲಿ ಬ್ರಹ್ಮದೇವರು, ಚಂದ್ರಪ್ರಭುಸ್ವಾಮಿ ಹಾಗೂ ಇತರರ ಉಬ್ಬುಶಿಲ್ಪಗಳಿವೆ. ಈ ಉಬ್ಬುಶಿಲ್ಪಗಳು ಅವರ ಗುರುಪರಂಪರೆಯನ್ನು ಸೂಚಿಸುತ್ತವೆ ಎಂದು ತಿಳಿಯಬಹುದು. ಈ ನಿಷಿಧಿ ಶಾಸನ ಬೆಟ್ಟದಲ್ಲಿ ಗುಂಡಿನ ಪಶ್ಚಿಮ ಭಾಗದಲ್ಲಿವೆ. ಜೇನುಗೂಡಿನ ಪಕ್ಕದಲ್ಲಿದೆ. (ಸ್ಥಳೀಯ ವಿದ್ಯಾರ್ಥಿಗಳು ಈ ನಿವೇಶನಗಳಿಗೆ ಕರೆದೊಯ್ದು ತೋರಿಸಿದ್ದಕ್ಕಾಗಿ ಅವರಿಗೆ ಕೃತಜ್ಞತೆಗಳು.)

ಮತ್ತೆರಡು ಶಾಸನಗಳಲ್ಲೂ ಉಬ್ಬುಶಿಲ್ಪಗಳಿದ್ದು ಅವು ೧೨ ಮತ್ತು ೧೪ನೇ ಶತಮಾನಕ್ಕೆ ಸೇರಿದುದಾಗಿವೆ. ಕ್ರಿ.ಶ. ೧೧೮೧ರ ಶಾಸನ[೬] ಚಿಕ್ಕತಾಯಿಗೆ ಸಂಬಂಧಪಟ್ಟದ್ದಾಗಿದೆ. ಆಕೆ ಬಂಧುಸತ್ಕಾರ, ದಾನಧರ್ಮಕ್ಕೆ ಹೆಸರುವಾಸಿಯಾಗಿದ್ದಳೆಂದು ಶಾಸನದಿಂದ ತಿಳಿದುಬರುತ್ತದೆ. ಅದರಂತೆ ಆಕೆಯನ್ನು "ಜಿನೇಂದ್ರ ಪಾದಾಂ ಬುಜಭಕ್ತಿಯುಕ್ತಾ ಶ್ರೀ ಚಿಕ್ಕತಾಯಿತಿ ಮಹಾ ಪ್ರಸಿದ್ಧಾ" ಎಂಬುದಾಗಿ ಗುರುತಿಸಲಾಗಿದೆ. ಅಲ್ಲದೆ "ಮುನಿಜನಪದಭಕ್ತೋ ಬಂದು ಸತ್ಕಾರದಕ್ಷೋಧರಣಿ ಪವರ ವೈದ್ಯೋ ಭಾತಿ ಪ್ರಧ್ಬಿತಲೇಸ್ಮಿನ್ ತಸ್ಯ ಕುಲವನಿತಾ ತ್ರಿವರ್ಗ ಸಂಸಾಧನ ಸಾವದಾನಾ ಸಾಧ್ವಿ ಶುಭಾಕಾರಯುತಾ ಸುಶೀಲಾ" ಎಂದು ಶ್ಲಾಘಿಸಲಾಗಿದೆ. ಆಕೆ ಪಾರ್ಶ್ವನಾಥನ ಪಂಚಪರ್ವಕ್ಕೆ ನಿತ್ಯ ಅನ್ನದಾನಕ್ಕೆಂದು ಕಿನ್ನರಿಪುರವನ್ನು ದತ್ತಿ ನೀಡಿದ್ದಳೆಂದು ಶಾಸನ ತಿಳಿಸುತ್ತದೆ. ಹೀಗೆ ಆಕೆಯ ಧಾರ್ಮಿಕ ಸಾಮಾಜಿಕ ಸೇವೆ ಗಮನಾರ್ಹವಾಗಿದ್ದುದು ಸ್ಪಷ್ಟವಾಗುತ್ತದೆ. ಇಂದು ಈ ಶಾಸನ ಕಲ್ಲನ್ನು ಬಸದಿಯ ಪ್ರಾಕಾರದ ಎಡಭಾಗದಲ್ಲಿರುವ ಗ್ರಂಥಾಲಯದಲ್ಲಿ ಸಂಗ್ರಹಿಸಿಡಲಾಗಿದೆ.

೧೪ನೇ ಶತಮಾನದ್ದೆಂದು ಅಂದಾಜು ಮಾಡಲಾಗಿರುವ ಪಾರ್ಶ್ವನಾಥ ಬಸದಿಯ ಪ್ರಾಕಾರದಲ್ಲಿ ದಕ್ಷಿಣ ಕಡೆ ನಿಲ್ಲಿಸಿರುವ ಕಲ್ಲು[೭] ಬಾಹುಬಲಿ ಪಂಡಿತದೇವರ ನಿಷಿಧಿಯಾಗಿದೆ. ಇವನು ಸಕಲ ವಿದ್ಯಾ ಚಕ್ರವರ್ತಿಯೆನಿಸಿದ್ದು ದ್ವಿಭಾಷಾ ಕವಿತಾ ತ್ರಿಣೇತ್ರರೆಂದೂ ಹೋರಾಶಾಸ್ತ್ರ (ಜ್ಯೋತಿಷ್ಯ ಶಾಸ್ತ್ರ) ಸರ್ವಜ್ಞನೆಂದು ವರ್ಣಿಸಲ್ಪಟ್ಟಿದ್ದಾನೆ. ಮೂಲತಃ ದೇಶೀಯ ಗಣಾಗ್ರೇಸರರೆನಿಸಿದ್ದ ಶ್ರೀ ಕೊಂಡಕುಂದಾನ್ವಯ ಪರಂಪರೆಯವರೆಂದು ಗೊತ್ತಾಗುತ್ತದೆ. ಶಾಸನ ಪಾಠ ಹೀಗಿದೆ. "ಬಾಹುಬಲಿ ಪಂಡಿತದೇವರು ನಯಕೀರ್ತಿ ಬ್ರತಿನಂದನಂ ಸರಳ ವಿದ್ಯಾಚಕ್ರವರ್ತ್ಯಾ ಹ್ವಯಂ ದ್ವಯಭಾಷಾ ಕವಿತಾ ತ್ರಿಣೇತ್ರನುರು ಹೋರಾಶಾಸ್ತ ಸರ್ವಜ್ಞ ಕಂನಯಯೋಕ್ತಂ ವರಮೂಲಸಂಘದೊಡಯಂ ದೇಸಿಗಣಾಗ್ರೇಸರಂ ಪ್ರಿಯದಂ ಪೊಸ್ತಗಗಚ್ಛ ಪೊರ್ನತಿಳಕಂ ಶ್ರೀಕೊಂಡ ಕುಂದಾನ್ವಯಂ" ಎಂದು.

ಇನ್ನ ಬಂಡೆಯ ಮೇಲೆ ಪಿರಮಿಡ್ಡಿನ ಆಕಾರದಲ್ಲಿ ಹಾಸುಗಲ್ಲುಗಳನ್ನು ಜೋಡಿಸಿ ಶಿಖರದಲ್ಲಿ ಪಾದ ಕೆತ್ತಿದ ಶಿಲೆಯನ್ನಿಡಲಾಗಿದೆ. ಕ್ರಿ.ಶ. ೧೫೧೭ರ ಶಾಸನದ[೮] ಪ್ರಕಾರ, ಯತಿಪತಿ ಮುನಿಚಂದ್ರಾರ್ಯ ಸಮಾಧಿ ಹೊಂದಿದ್ದು, ಆತನ ಶಿಷ್ಯ ವೃಷಭದಾಸವರ್ಣಿ ಪಾದ ಬರೆಸಿದ ಹಾಗೂ ವಿದ್ಯಾನಂದೋಪಾಧ್ಯಾಯ ರಚಿಸಿದನೆಂದಿದೆ. ಇದು ಬೆಟ್ಟದ ಮೇಲೆ ದೊಣೆಗೆ ಉತ್ತರ ಬಲಿತಲ್ಲಿಗೆ ದಕ್ಷಿಣದ ಅರೆಯ ಮೇಲಿದೆ. ಅದೇ ರೀತಿ ಸೇನಗಣದ ಈಶಾನ್ಯದ ಬಂಡೆಯ ಮೇಲೆ ಕಾಲೋಗ್ರ ಗಣದ ಮುನಿಚಂದ್ರದೇವರ ಪಾದವನ್ನು ಶಿಷ್ಯ ಆದಿವಾಸ ಬರೆಸಿದ್ದಾನೆಂದು ಹೇಳಲಾಗಿದೆ.[೯]

ಕ್ರಿ.ಶ. ೧೬೭೪ರ ಶಾಸನವು[೧೦] ಲಕ್ಷ್ಮಿಸೇನ ಮುನೀಶ್ವರರು ಹೇಮಾದ್ರಿಯಲ್ಲಿ ಅಂದರೆ ಕನಕಗಿರಿಯ ವಿಜಯ ಪಾರ್ಶ್ವನಾಥ ಜಿನನ ಸನ್ನಿಧಿಯಲ್ಲಿ ಸತ್ಫಲಾಪೇಕ್ಷೆಯಿಂದ ದೀಕ್ಷೆ ತೆಗೆದುಕೊಂಡರು ಎಂದಿದೆ. ಅಂದರೆ ಸಲ್ಲೇಖನ ವ್ರತ ಕೈಗೊಂಡು ಸಮಾಧಿ ಮರಣ ಹೊಂದಿದರು. ವಿಜಯಪ್ಪಯ್ಯ ಇವರ ಪಾದಗಳನ್ನು ಬರೆಸಿದ. ಈ ಶಾಸನವು ಬೆಟ್ಟದ ಮೇಲೆ ದೊಣೆಗೆ ಉತ್ತರದ ಬಲಿ ಕಲ್ಲಿಗೆ ದಕ್ಷಿಣದ ಅರೆಯ ಮೇಲಿದೆ. ಶಾಸನ ಪಾಠ ಹೀಗಿದೆ. "ಶಾಕೇ ದ್ರವ್ಯ ಪದಾರ್ತ್ಥ ಭೂತಧರಣೀ ಸಂಖ್ಯಾಮಿತೇ ವತ್ಸರೇ ಚಾನಂದೇ ವರ ಪುಷ್ಯಮಾಸಸಿತ ಪಕ್ಷೇ ಪಂಚಮೀ ಸತ್ತಿಥೌ ಲಕ್ಷ್ಮೀಸೇನ ಮುನೀಶ್ವರೇಣ ಪರದುರ್ವಾರ್ಯ ಧೀಭ ಸಿಂಹೇನವ್ಯೆ ಹೇಮಾದ್ರೌ ವರಪಾರ್ಶ್ವನಾಥ ಜಿನಪೇ ದೀಕ್ಷಾಶ್ರಿತಾ ಸತ್ಫಲಾ ವಿಜಯಪ್ಪಯ್ಯ ಪಾದ ಬರೆಸಿದನು" ಎಂದು.



ಲಲಿತಕೀರ್ತಿ ಭಟ್ಟಾರಕರ ನಿಷಿಧಿ



ಚಂದ್ರಕೀರ್ತಿ ಯೋಗಿ ನಿಷಿಧಿ



ಚಿಕ್ಕತಾಯಿ ನಿಷಿಧಿ



ಬಾಹುಬಲಿ ಪಂಡಿತನ ನಿಷಿಧಿ

ವಿಧಿವತ್ತಾಗಿ ಮರಣ ಹೊಂದಿದ ಮತ್ತೊಬ್ಬ ಮುನಿ ಭಟ್ಟಾಕಲಂಕರು. ಕ್ರಿ.ಶ. ೧೮೧೪ರ ಶಾಸನವು[೧೦] ಭಟ್ಟಾಕಲಂಕರನ್ನು ಕುರಿತು ಶ್ರೀಮದ್ದೇಶಿ ಗಣಾಗ್ರ್ಯೋ ಕನಕಗಿರಿವರೇ ಸಿದ್ಧ ಸಿಂಹಾಸನೇಶಃ 'ಪ್ರಾಪದ್ಭಟ್ಟಾಕಲಂಕಸ್ಸು ಮರಣ ವಿಧಿನಾಸ್ಮಿನಿರೌ ನಾಗಲೋಕ' ಎಂದು ಹೇಳುತ್ತದೆ. ಈ ಶಾಸನವು ಬೆಟ್ಟದ ಮೇಲೆ ಅರೆಯಲ್ಲಿ ಉತ್ತರಭಾಗದ ಕೊನೆಯಲ್ಲಿ ಕಲ್ಲುಗುಡ್ಡೆ ಬಳಿ ಇದೆ. ಇನ್ನು ಬೆಟ್ಟದಲ್ಲಿ ಗುಂಡಿನ ಬ್ರಹ್ಮದೇವರ ಪೂಜೆಗೆ ಹೋಗುವ ಮಾರ್ಗದಲ್ಲಿರುವ ಶಾಸನ[೧೧] ಭಟ್ಟಾಕಲಂಕರ ಗುಣಗಾನ ಮಾಡಿರುವುದು ಹೀಗಿದೆ. "ಶ್ರೀಮದ್ದೇವರ ದೇವವಂದಿತ ಜಿನಾಂಘ್ರಿದ್ವಂದ್ವ ಸಂಧಾರಿತಂ ಪ್ರೇಮಂ ಚಿತ್ತ ಸಮಸ್ತ ಭವ್ಯ ಜನರಿಂದಂ ಶೋಭಿತಂ ಸದ್ಗುಣೋದ್ಧಾಮಂ ಪೊಸ್ತುಕಗಚ್ಛ ದೇಶೀಗಣದೊಳ್ ವಿಭ್ರಾಜಿತಂ ಸತ್ಕಲಾರಾಮಂ ಭಟ್ಟಾಕಲಂಕ ಮುನಿಪಂ ತ್ರೈಲೋಕ್ಯ ಸಂಪೂಜಿತಂ" ಎಂದು ಇದರಿಂದ ಭಟ್ಟಾಕಲಂಕ ಮುನಿ ಶ್ರೀಮತ್ ದೇವಾದಿ ದೇವರುಗಳಿಂದ ವಂದಿಸಲ್ಪಡುವ ಪಾದಗಳುಳ್ಳವನು ಸಮಸ್ತ ಜನರಿಂದ ಶೋಭಿಸಲ್ಪಡುವವನು ಸದ್ಗುಣಗಳಿಂದ ಉತ್ತಮನಾದವನು ಎನಿಸಿದ್ದು ಪುಸ್ತಕಗಚ್ಛ ದೇಶೀಗಣದಲ್ಲಿ ಒಳ್ಳೆಯ ಕಲಾ ವಿದ್ಯೆಗಳಿಂದ ಶೋಭಿಸುತ್ತಿರುವವನು ಮೂರು ಲೋಕಗಳಿಂದಲೂ ಪೂಜಿಸಲ್ಪಡುವವನು ಎಂದು ಆತನ ಗುಣ ವ್ಯಕ್ತಿತ್ವ ಪರಿಚಯವಾಗುತ್ತದೆ.

ಹೀಗೆ ದೇವಚಂದ್ರನ ನಾಡಾದ ಮಲೆಯೂರು ಜೈನಯತಿ ಪರಂಪರೆಗೆ ಪ್ರಸಿದ್ಧಿ ಪಡೆದಿದ್ದು ಅನೇಕ ಯತಿಗಳ ತಪಸ್ಸಿನ ತಾಣವಾಗಿತ್ತು. ಅದ್ವಿತೀಯ ದೈವೀಶಕ್ತಿಯ ಜಾಗೃತಿ, ಆತ್ಮಾವಲೋಕನ ಹಾಗೂ ಆತ್ಮಸಮರ್ಪಣೆಯ ವಿಧಿಗೆ ನೆಲೆಬೀಡಾಗಿತ್ತೆಂಬುದು ಅಧ್ಯಯನ ಯೋಗ್ಯವಾಗಿದೆ. ಸ್ಥಳೀ ಪಂಡಿತರಾಗಿರುತ್ತಿದ್ದ ಸಾಧಕರು ಭಕ್ತಿ ಮತ್ತು ಶ್ರದ್ಧೆಯಿಂದ ಆರಾಧನಾ ಗ್ರಂಥವನ್ನು ಸ್ವಾಧ್ಯಾಯ ಮಾಡಿ ಮನನ ಮಾಡಿಕೊಳ್ಳುತ್ತಿದ್ದುದರಿಂದ ಈ ನಿಷಿಧಿ ಸ್ಮಾರಕಗಳಲ್ಲಿ ಆರಾಧನಾ ಪಠಣ ಅಥವಾ ಅದರಿಂದಾಯ್ದ ಉಪದೇಶವನ್ನೊಳಗೊಂಡ ವ್ರತ ವಿಧಾನವನ್ನು ಅನುಸರಿಸುತ್ತಿದ್ದರೆಂಬುದನ್ನು ಸ್ಫುಟವಾಗಿ ಪ್ರತಿಬಿಂಬಿಸಲಾಗಿದೆ. ಅಂದರೆ ಆಧ್ಯಾತ್ಮಿಕ ಗ್ರಂಥವೇ ಆರಾಧನೆಗೆ ಮೀಸಲು. ಆ ಗ್ರಂಥವನ್ನು ಉಬ್ಬುಶಿಲ್ಪಗಳ ನಡುವೆ ತೋರಿಸಲಾಗಿದೆ.

ಈಗಾಗಲೇ ಶೆಟ್ಟರ್ ಅವರ 'ಸಾವಿಗೆ ಆಹ್ವಾನ' ಕೃತಿ ಸಾಕಷ್ಟು ಜೈನ ಪರಂಪರೆಯ ಮಾಹಿತಿಗಳನ್ನು ಒಳಗೊಂಡಿದೆ. ಕನಕಗಿರಿಯ ಮಹಿಮೆ ಹಾಗೂ ಮಲೆಯೂರಿನ ಅಧ್ಯಯನದ ಬಗ್ಗೆ ಶ್ರೀ ಚಕ್ರಪಾಣಿ ಅವರು ಬರೆದಿದ್ದು ಅದು ಮುದ್ರಣ ಹಂತದಲ್ಲಿದ್ದು, ಸದ್ಯದಲ್ಲೇ ವಿದ್ವಾಂಸರ ಕೈ ಸೇರಲಿದೆ ಎಂಬುದು ಸಂತಸದ ಸಂಗತಿ. ಅವರ ಅಧ್ಯಯನದ ಶ್ರಮ ಸಾರ್ಥಕ.

(ಪ್ರಸ್ತುತ ಪ್ರಬಂಧ ಸಿದ್ಧಪಡಿಸಲು ಸೂಕ್ತ ಮಾರ್ಗದರ್ಶನ ಮಾಡಿದ ಕನಕಗಿರಿಯ ಪೂಜ್ಯ ಶ್ರೀ ಭುವನಕೀರ್ತಿ ಭಟ್ಟಾರಕ ಸ್ವಾಮೀಜಿಯವರಿಗೆ ಕೃತಜ್ಞತೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಷ. ಶೆಟ್ಟರ್., ಸಾವಿಗೆ ಆಹ್ವಾನ,** ಪುಟ ೧೨೯.
೨. ಅದೇ., ಪುಟ ೯೮.
೩. ಎ.ಕ. ಸಂಪುಟ ೪, ಚಾಮರಾಜನಗರ ೩೬೫.
೩ಅ. ದೇಹವ ಒಂದೇ ಮಗ್ಗುಲಿನಲ್ಲಿ ಒರಗಿಕೊಂಡು ಸಮಾಧಿ ಮರಣ ಸಾಧಿಸುವುದು. ಸ್ಥಳೀಯ ಉಬ್ಬುಶಿಲ್ಪಗಳು ಒಂದು ಕಾಲನ್ನು ಮುಂದು ಮಾಡಿ ಏಕಪಾರ್ಶ್ವದಲ್ಲಿವೆ. ಗಮನಿಸಿ.
೪. ಎ.ಕ. ಸಂಪುಟ ೪, ಚಾಮರಾಜನಗರ, ೩೬೨.
೫. ಅದೇ., ಚಾಮರಾಜನಗರ, ೩೭೧.
೬ ಅದೇ., ಚಾಮರಾಜನಗರ, ೩೬೯
೭. ಅದೇ., ಚಾಮರಾಜನಗರ, ೩೫೮.
೮. ಅದೇ., ಚಾಮರಾಜನಗರ, ೩೫೯.
೯. ಅದೇ., ಚಾಮರಾಜನಗರ, ೩೬೦.
೧೦. ಅದೇ., ಚಾಮರಾಜನಗರ, ೩೬೧.
೧೨. ಅದೇ., ಚಾಮರಾಜನಗರ, ೨೫೭.

ಡಾ. ಜಿ. ಕರಿಯಪ್ಪ*
ಜಿ.ಸಿ. ಸುರೇಶ**

# ಬೇಲೂರಿನ ವೀರಗಲ್ಲುಗಳು ಮತ್ತು ಮಹಾಸತಿ ಕಲ್ಲುಗಳು

ಬೇಲೂರು ಮಂಡ್ಯ ಜಿಲ್ಲೆ ಮತ್ತು ಅದೇ ತಾಲ್ಲೂಕಿಗೆ ಸೇರಿರುವ ಒಂದು ಗ್ರಾಮ. ಇದು ಮಂಡ್ಯದಿಂದ ಆಗ್ನೇಯಕ್ಕೆ ಸುಮಾರು ೧೯ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ದಕ್ಷಿಣ ಭಾಗದಲ್ಲಿ ಚೆನ್ನಕೇಶವ ದೇವಾಲಯ, ಪೂರ್ವಭಾಗದಲ್ಲಿ ಶಿಥಿಲವಾದ ದೇವಾಲಯದ ಅವಶೇಷಗಳು ಕಂಡುಬರುತ್ತವೆ. ಇದರ ಸುತ್ತಮುತ್ತ ಅಲ್ಲಲ್ಲಿ ವೀರಗಲ್ಲುಗಳು ಹಾಗೂ ಮಹಾಸತಿಕಲ್ಲುಗಳು ಕಂಡುಬರುತ್ತವೆ. ಇವುಗಳಿಂದ ಪೂರ್ವಕ್ಕೆ ಶಿವ ದೇವಾಲಯ, ಈ ದೇವಾಲಯದ ವಾಯುವ್ಯಭಾಗದಲ್ಲಿ ತಿಬ್ಬಾದೇವಿಯ ದೇವಾಲಯವಿದ್ದು ಇದರ ಈಶಾನ್ಯಕ್ಕೆ ಒಂದು ವಿಶಾಲವಾದ ಕೆರೆಯಿದೆ.

ಈ ಗ್ರಾಮಕ್ಕೆ ಮೊದಲು ಬೆಲುತ್ತೂರು ಎಂದು ಕರೆಯಲಾಗುತ್ತಿತ್ತು ಎಂದು ಕ್ರಿ.ಶ. ೧೧ ಮತ್ತು ೧೨ನೆಯ ಶತಮಾನದ ಶಾಸನದಿಂದ ತಿಳಿದುಬರುತ್ತದೆ. ಈ ಬೆಲುತ್ತೂರು ಎಂಬುದು ಕಾಲ ಕಳೆದಂತೆ ಬೇಲೂರಾಗಿ ಪರಿವರ್ತನೆ ಯಾಗಿರಬೇಕು ಅಲ್ಲದೆ ಇದಕ್ಕೆ ಈಗ ಇಲ್ಲಿರುವ ಚನ್ನಕೇಶವ ದೇವಾಲಯವಿರುವುದರಿಂದಾಗಿ ಇದನ್ನು ಚನ್ನಪ್ಪನದೊಡ್ಡಿ ಎಂದು ಕರೆಯುತ್ತಾರೆ ಇಷ್ಟೆಲ್ಲಾ ಐತಿಹಾಸಿಕ ಕುರುಹುಗಳನ್ನು ಹೊಂದಿರುವ ಈ ಗ್ರಾಮವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇದು ಈ ಹಿಂದೆ ಇತಿಹಾಸ ಪ್ರಸಿದ್ಧವಾದ ಧಾರ್ಮಿಕ ಸ್ಥಳವಾಗಿದ್ದಂತೆ ಕಂಡುಬರುತ್ತದೆ ಇದರಲ್ಲಿ ನಾವು ಗ್ರಾಮದಲ್ಲಿ ಲಭ್ಯವಾಗಿರುವ ವೀರಗಲ್ಲುಗಳನ್ನು ಮತ್ತು ಮಹಾಸತಿ ಕಲ್ಲುಗಳ ಬಗ್ಗೆ ಇಲ್ಲಿ ವಿವರಣೆಯನ್ನು ನೀಡಿದ್ದೇನೆ.

**ಒಂದನೆಯ ವೀರಗಲ್ಲು :** ಸುಮಾರು ೫ ಅಡಿ ಎತ್ತರ, ೪ ಅಡಿ ಅಗಲವಿರುವ ಈ ವೀರಗಲ್ಲು ಅರ್ಧ ಅಡಿ ದಪ್ಪವಾಗಿದ್ದು ಗ್ರಾನೈಟ್ ಶಿಲೆಯಿಂದ ಮಾಡಲಾಗಿದೆ. ಇದರಲ್ಲಿ ನಾಲ್ಕು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ ಮೊದಲನೆಯ (ಕೆಳ) ಹಂತದಲ್ಲಿ ಗೋವುಗಳನ್ನು ಕದಿಯಲು ಬಂದ ಕುದುರೆ ಸವಾರನಿಗೂ ಮತ್ತು ಗೋವುಗಳನ್ನು ರಕ್ಷಿಸಲು ಬಂದ ವೀರರಿಗೂ ನಡುವೆ ನಡೆಯುವ ಹೋರಾಟದ ಸನ್ನಿವೇಶಗಳನ್ನು ಇಲ್ಲಿ ಬಿಡಿಸಲಾಗಿದೆ. ಕುದುರೆಯ ಮೇಲೇರಿ ಬಂದ ಗೋವುಗಳ ಕಳ್ಳನೊಬ್ಬ ಗೋವುಗಳನ್ನು ಕದಿಯಲು ಬಂದಾಗ ಮೂರು ಜನ ಗೋವುಗಳನ್ನು ರಕ್ಷಿಸಲು ಬಂದ ವೀರರು ಅವನೊಡನೆ ಹೋರಾಡುತ್ತಾ ಇದರಲ್ಲಿ ಒಬ್ಬ ವೀರ ಮಡಿದು ನೆಲದ ಮೇಲೆ ಬಿದ್ದಿದ್ದಾನೆ ಮತ್ತೊರ್ವನು ಅವನೊಡನೆ ಹೋರಾಟಕ್ಕಿಳಿದಾಗ ಕುದುರೆ ಸವಾರನು ತನ್ನ ಕೈಯಲ್ಲಿದ್ದ ಉದ್ದನೆ ಭರ್ಜಿಯಿಂದ ಅವನ ತಲೆಗೆ ತಿವಿಯುತ್ತಿದ್ದಾನೆ ವೀರನು ಕತ್ತಿಯನ್ನು ಮೇಲೆತ್ತಿ ಹಿಡಿದು ಎಡಗೈಯಲ್ಲಿ ಗುರಾಣಿ ಹಿಡಿದಿದ್ದಾನೆ ಮತ್ತೊರ್ವನು ಅವನ ಹಿಂದೆ ಬಿಲ್ಲು ಬಾಣ ಹಿಡಿದು ಹೋರಾಟಕ್ಕೆ ಸಜ್ಜಾಗಿ ನಿಂತಿದ್ದಾನೆ. ಇವನ ಕೆಳಗೆ ಒಂದು ಗೋವು ನಿಂತಿದೆ. ಎರಡನೆಯ ಹಂತದಲ್ಲಿ ಹೋರಾಡಿ ವೀರ ಮರಣ ಹೊಂದಿದ ವೀರನನ್ನು ದೇವಕನ್ಯೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ ದೇವಲೋಕಕ್ಕೆ ಹೋಗುತ್ತಿರುವ ವೀರನಿಗೆ ಗಜಗಳು ಹೂವಿನ ಹಾರವನ್ನು ವೀರನಿಗೆ ಅರ್ಪಿಸಲು ಸಜ್ಜಾಗಿ ನಿಂತಿದೆ. ಮೂರನೆಯ ಹಂತದಲ್ಲಿ ನೃತ್ಯಗಾರರನ್ನು ಮತ್ತು ವಾದ್ಯವಾದಕರನ್ನು ಕೆತ್ತಲಾಗಿದೆ ಇದರ ಮೇಲ್ಭಾಗದಲ್ಲಿ ಮಂಟಪದೊಳಗೆ ಲಿಂಗದ ರಚನೆಯಿದ್ದು ಇದರ ಪಕ್ಕದಲ್ಲಿ ನಂದಿಯನ್ನು ಕೆತ್ತಲಾಗಿದೆ ನಂದಿಯ ಹಿಂಭಾಗದಲ್ಲಿ ಭಕ್ತನೊಬ್ಬನು ಕೈಮುಗಿದುಕೊಂಡು ನಿಂತಿದ್ದಾನೆ ಪಕ್ಕದಲ್ಲಿ ಮೂರು ಜನರು ಅಂಜಲಿಬದ್ಧರಾಗಿ ಪದ್ಮಾಸನದಲ್ಲಿ ಕುಳಿತಿದ್ದಾರೆ.

**ಎರಡನೆಯ ವೀರಗಲ್ಲು :** ಇದು ಸು. ೫ ಅಡಿ ಎತ್ತರ, ೩ ಅಡಿ ಅಗಲವಾಗಿದ್ದು ಅರ್ಧ ಅಡಿ ದಪ್ಪನಾಗಿದೆ. ಇದನ್ನು ಗ್ರಾನೈಟ್ ಶಿಲೆಯಿಂದ ಮಾಡಲಾಗಿದೆ ಇಲ್ಲಿ ಮೂರು ಹಂತದಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ. ಇದರ ಕೆಳಭಾಗವು ಭೂಮಿಯಲ್ಲಿ ಹೂತುಹೋಗಿದೆ. ಆದರೂ ಶಿಲ್ಪಗಳ ಅರ್ಧಭಾಗ

* ಉಪನ್ಯಾಸಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ ಮಾನಸಗಂಗೋತ್ರಿ, ಮೈಸೂರು – ೫೭೦ ೦೦೬.
** ಹಿರಿಯ ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು ೫೭೦ ೦೦೬.

ಕಂಡುಬರುತ್ತದೆ. ಇದರಲ್ಲಿ ೪ ಜನ ವೀರರು ಕತ್ತಿ ಗುರಾಣಿಯನ್ನು ಹಿಡಿದು ಹೋರಾಟದಲ್ಲಿ ತೊಡಗಿರುವಂತೆ ಶಿಲ್ಪಗಳನ್ನು ಬಿಡಿಸಲಾಗಿದೆ. ಮತ್ತೋರ್ವನು ವೀರರು ಹೋರಾಡುತ್ತಿರುವುದನ್ನು ವೀಕ್ಷಿಸುತ್ತಾ ನಿಂತಿದ್ದಾನೆ. ಎರಡನೆಯ ಹಂತದಲ್ಲಿ ವೀರಮರಣವನ್ನಪ್ಪಿದ ವೀರನನ್ನು ದೇವಕನ್ಯೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ ಇವನಿಗೆ ಗಜಗಳು ಸಹ ಪುಷ್ಪ ಹಾರವನ್ನು ಸಮರ್ಪಿಸಲು ಸಜ್ಜಾಗಿ ನಿಂತಿದೆ ಇದರ ಮೇಲ್ಭಾಗದಲ್ಲಿ ನೃತ್ಯಗಾರರನ್ನು ಚಿತ್ರಿಸಲಾಗಿದೆ. ಮೂರನೆಯ ಹಂತದಲ್ಲಿ ಲಿಂಗ ಮತ್ತು ನಂದಿಯನ್ನು ಕೆತ್ತಲಾಗಿದ್ದು ಇದಕ್ಕೆ ವೀರನು ಪೂಜೆ ಸಲ್ಲಿಸುತ್ತಿದ್ದಾನೆ ಇವನ ಪಕ್ಕದಲ್ಲಿ ಡೋಲುವಾದಕರು ಮತ್ತು ನೃತ್ಯಗಾರನನ್ನು ಕೆತ್ತಲಾಗಿದೆ.

**ಮೂರನೆಯ ವೀರಗಲ್ಲು :** ಈ ವೀರಗಲ್ಲು ಸುಮಾರು ೪ ಅಡಿ ಎತ್ತರ, ೨ ಅಡಿಗಳ ಅಗಲವಾಗಿದ್ದು ಅರ್ಧ ಅಡಿ ದಪ್ಪನಾಗಿರುವ ಗ್ರ್ಯಾನೈಟ್ ಶಿಲೆಯಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. ಈ ವೀರಗಲ್ಲಿನ ಕೆಳಗಿನ ಹಂತದಲ್ಲಿ ಒಬ್ಬ ವೀರನು ಬಿಲ್ಲು ಬಾಣ ಹಿಡಿದು ವೀರಗಚ್ಚೆಯನ್ನು ಹಾಕಿ ಮೈಮೇಲೆ ವಿವಿಧ ಬಗೆಯ ಆಭರಣಗಳನ್ನು ಧರಿಸಿ (ಕೊರಳಿಗೆ ಕಂಠಿಹಾರ, ಕಿವಿಯಲ್ಲಿ ಕರ್ಣಕುಂಡಲ) ತಲೆಯ ಕೂದಲನ್ನು ದುಂಡಾಗಿ ಸುರುಳಿಯಂತೆ ಸುತ್ತಿ ಕಟ್ಟಿದ್ದಾನೆ ಈ ವೀರನ ಹಿಂಬದಿಯಲ್ಲಿ ಒಂದು ರಾಜ ಛತ್ರಿ ಇದೆ. ಎರಡನೆಯ ಹಂತದಲ್ಲಿ ವೀರಮರಣ ಹೊಂದಿದ ವೀರನನ್ನು ದೇವಕನ್ಯೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ ದೇವಲೋಕದಲ್ಲಿ ವೀರನು ವೀರಾಸನದಲ್ಲಿ ಕುಳಿತಿದ್ದು ಅಭಯ ಹಸ್ತವನ್ನು ಹೊಂದಿದ್ದಾನೆ. ಇವನ ಅಕ್ಕಪಕ್ಕದಲ್ಲಿ ಪೂಜಾವಸ್ತುಗಳನ್ನು ಹಿಡಿದು ನಿಂತಿರುವ ತರುಣಿಯರಿದ್ದಾರೆ. ಮಧ್ಯದ ಪಟ್ಟಿಕೆಯಲ್ಲಿ ಅಪ್ರಕಟಿತ ಶಾಸನವಿದೆ. ಇಲ್ಲಿಯ ಅಕ್ಷರಗಳು ಸರಿಯಾಗಿ ಗುರುತಿಸಲಾಗದಷ್ಟು ಅಳಿಸಿಹೋಗಿವೆ.

**ನಾಲ್ಕನೆಯ ವೀರಗಲ್ಲು :** ಮಾಸ್ತಮ್ಮನ ಗುಡಿಯ ಪಕ್ಕದಲ್ಲಿ ಬಿದ್ದುಹೋಗಿರುವ ಈ ವೀರಗಲ್ಲು ಸುಮಾರು ೬ ಅಡಿ ಎತ್ತರ, ೩ ಅಡಿ ಅಗಲ ಹಾಗೂ ಅರ್ಧ ಅಡಿ ದಪ್ಪನಾಗಿದೆ. ಗ್ರ್ಯಾನೈಟ್ ಶಿಲೆಯಲ್ಲಿ ಕೆತ್ತಿರುವ ಈ ವೀರಗಲ್ಲಿನಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು ಶಾಸನೋಕ್ತವಾಗಿದೆ. ಇದು ಬೆಳವದು ನಾಡಿನ ಬೆಳತ್ತೂರಿನ ಬಾನಮ್ಮ ಮತ್ತು ಸೀಲಾರ ಇರುಮೆ ನಾಯಕನ ಮಗನಾದ ಹೊಲಮನಾಯಕನೆಂಬುವನು ಗೋವುಗಳ್ಳರೊಡನೆ ಹೋರಾಡಿ ವೀರಮರಣವನ್ನಪ್ಪಿದ ವಿಷಯವನ್ನು ತಿಳಿಸುತ್ತದೆ.

ಮೊದಲನೆಯ ಹಂತದಲ್ಲಿ ವೀರನು ತನ್ನ ಕೈಗಳಲ್ಲಿ ಕತ್ತಿಗುರಾಣಿ ಹಿಡಿದಿದ್ದಾನೆ. ಕಡಗ, ತೋಳಬಂದಿ, ಕಂಠಿಹಾರ, ಕರ್ಣಕುಂಡಲಗಳನ್ನು ಧರಿಸಿರುವ ಈತನು ಬಹಳ ಅಲಂಕಾರಿಕವಾಗಿದ್ದಾನೆ. ತಲೆಯ ಕೂದಲನ್ನು ದುಂಡಾಗಿ ಮೇಲಕ್ಕೆ ಎತ್ತಿಕಟ್ಟಿದ್ದಾನೆ ಈ ವೀರನ ಕೆಳಗೆ ಒಬ್ಬ ಪುರುಷನು ಮರಣ ಹೊಂದಿದ್ದಾನೆ. ಈ ವೀರನ ಎಡಭಾಗದಲ್ಲಿ ಗೋವುಗಳು ನಿಂತಿವೆ. ಇವನ ಬಲಭುಜದ ಮೇಲೆ ಮತ್ತೋರ್ವನು ಆಯುಧಗಳನ್ನು ಹಿಡಿದು ನಿಂತಿದ್ದಾನೆ. ಎರಡನೆಯ ಹಂತದಲ್ಲಿ ವೀರಮರಣವನ್ನಪ್ಪಿದ ವೀರನನ್ನು ಮತ್ತು ಅವನ ಪತ್ನಿಯನ್ನು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ಲಿಂಗದ ಮುಂದೆ ಪದ್ಮಾಸನದಲ್ಲಿ ಅಂಜಲಿಬದ್ಧರಾಗಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಈ ವೀರಗಲ್ಲಿನ ಎಡಭಾಗದಲ್ಲಿ ಶಾಸನವನ್ನು ಕೆತ್ತಲಾಗಿದೆ.

**ಐದನೆಯ ವೀರಗಲ್ಲು :** ಇದು ಸುಮಾರು ೪ ಅಡಿ ಎತ್ತರ ಮತ್ತು ೨ ಅಡಿ ಅಗಲವಾಗಿದೆ. ಗ್ರ್ಯಾನೈಟ್ ಶಿಲೆಯಲ್ಲಿ ಮಾಡಲಾಗಿರುವ ಈ ವೀರಗಲ್ಲು ಅರ್ಧ ಅಡಿ ದಪ್ಪನಾಗಿದೆ ಇದರಲ್ಲಿ ಐದು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ ಕೆಳಗಿನ ಹಂತದಲ್ಲಿ ಮೂರು ಜನ ವೀರರು ಕತ್ತಿಯನ್ನು ಮೇಲೆತ್ತಿ ಹೋರಾಟಕ್ಕೆ ಸಿದ್ಧವಾಗಿ ನಿಂತಿದ್ದಾರೆ. ಎರಡನೆಯ ಹಂತದಲ್ಲಿ ವೀರರಿಬ್ಬರೂ ಹೋರಾಡುತ್ತಿದ್ದಾರೆ ಈ ಹೋರಾಟದಲ್ಲಿ ಒಬ್ಬ ವೀರನು ಇನ್ನೊಬ್ಬನಿಗೆ ತನ್ನ ಕತ್ತಿಯಿಂದ ತಲೆಗೆ ತಿವಿದಿದ್ದಾನೆ. ಮೂರನೆಯ ಹಂತದಲ್ಲಿ ಹೋರಾಡಿ ವೀರಮರಣವನ್ನಪ್ಪಿದ ವೀರನನ್ನು ದೇವಕನ್ಯೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ ನಾಲ್ಕನೆಯ ಹಂತದಲ್ಲಿ ದಂಪತಿಗಳಿಬ್ಬರು ಪದ್ಮಾಸನದಲ್ಲಿ ಅಂಜಲಿಬದ್ಧರಾಗಿ ಕುಳಿತಿದ್ದಾರೆ ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಕೆತ್ತಲಾಗಿದೆ.

**ಆರನೆಯ ವೀರಗಲ್ಲು :** ಬಳಪದ ಕಲ್ಲಿನಲ್ಲಿ ಮಾಡಲಾಗಿರುವ ಈ ವೀರಗಲ್ಲು ಸುಮಾರು ೪ ಅಡಿ ಎತ್ತರ, ೪ ಅಡಿ ಅಗಲವಾಗಿದೆ ಇದರಲ್ಲಿ ವೀರನೊಬ್ಬನು ಹೋರಾಟಕ್ಕೆ ಸಜ್ಜಾಗಿ ಬಲಗೈಯಲ್ಲಿ ಕತ್ತಿಯನ್ನು ಹಿಡಿದು ನಿಂತಿದ್ದಾನೆ. ಮೈಮೇಲೆ ವಿವಿಧ ರೀತಿಯ ಆಭರಣ ಧರಿಸಿದ್ದಾನೆ ಪಂಚೆಯನ್ನು ಕಟ್ಟಿಕೊಂಡು ವೀರಗಚ್ಚೆಯನ್ನು ಹಾಕಿಕೊಂಡಿದ್ದಾನೆ. ಕಿವಿಗಳಿಗೆ ಕರ್ಣಕುಂಡಲವನ್ನು ಧರಿಸಿದ್ದಾನೆ ಪಾದಗಳಿಗೆ ಪಾದರಕ್ಷೆಯನ್ನು ಹಾಕಿಕೊಂಡಿದ್ದಾನೆ. ಈ ವೀರನ ಹಿಂಭಾಗದಲ್ಲಿ ಮತ್ತೊಬ್ಬ ವ್ಯಕ್ತಿಯು ನಿಂತಿದ್ದಾನೆ ವೀರಗಲ್ಲಿನ ಸ್ವಲ್ಪ ಭಾಗ ಭಗ್ನವಾಗಿದೆ.

**ಏಳನೆಯ ವೀರಗಲ್ಲು :** ಇದು ಸುಮಾರು ೪ ಅಡಿ ಎತ್ತರ, ೨ ಅಡಿ ಅಗಲವಾಗಿದ್ದು ಅರ್ಧ ಅಡಿ ದಪ್ಪವಾಗಿದೆ ಇದರಲ್ಲಿ ಎರಡು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ ಮೊದಲನೆಯ ಹಂತದಲ್ಲಿ ಹೋರಾಡಿ ವೀರಮರಣ

ಹೊಂದಿದ ವೀರನನ್ನು ದೇವಕನ್ಯೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಎರಡನೆಯ ಹಂತದಲ್ಲಿ ಲಿಂಗ ಹಾಗೂ ನಂದಿಯನ್ನು ಕೆತ್ತಲಾಗಿದೆ. ಲಿಂಗಕ್ಕೆ ಪೂಜೆಯನ್ನು ಸಲ್ಲಿಸುತ್ತಿದ್ದಾರೆ. ಪಕ್ಕದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ವ್ಯಕ್ತಿಯನ್ನು ಚಿತ್ರಿಸಲಾಗಿದೆ ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಚಿತ್ರಿಸಲಾಗಿದೆ.

**ಎಂಟನೆಯ ವೀರಗಲ್ಲು :** ಬಳಪದ ಕಲ್ಲಿನಲ್ಲಿ ಮಾಡಲಾಗಿರುವ ಈ ವೀರಗಲ್ಲು ಸುಮಾರು ೫ ಅಡಿ ಎತ್ತರ, ೪ ಅಡಿ ಅಗಲವಾಗಿದ್ದು ಅರ್ಧ ಅಡಿ ದಪ್ಪನಾಗಿದೆ. ಇವರಲ್ಲಿ ಮೂರು ಹಂತದಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ ಇವರ ಕೆಳಗಿನ ಹಂತವು ಭೂಮಿಯಲ್ಲಿ ಹೂತುಹೋಗಿದೆ. ಆದರೆ ಮೂರು ಜನ ವೀರರು ಹೋರಾಟ ಮಾಡುತ್ತಿರುವ ಶಿಲ್ಪಗಳ ಮೇಲ್ಭಾಗ ಮಾತ್ರ ಕಂಡುಬರುತ್ತದೆ.

**ಒಂಬತ್ತನೆಯ ವೀರಗಲ್ಲು :** ಇದನ್ನು ಅರ್ಧ ಅಡಿ ದಪ್ಪ, ೪ ಅಡಿ ಎತ್ತರ ಮತ್ತು ಇದರ ಮೇಲ್ಭಾಗ ೩ ಅಡಿ ಅಗಲ ಕೆಳಭಾಗ ಓರೆಯಾಗಿ ಬಂದು ೨ ಅಡಿ ಅಗಲವಾಗಿದೆ. ಬೆಣಚುಕಲ್ಲಿನಲ್ಲಿ ಮಾಡಲಾಗಿರುವ ಈ ವೀರಗಲ್ಲಿನಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ. ಕೆಳಭಾಗವು ಹೋರಾಟದ ಶಿಲ್ಪಗಳಿಂದ ಕೂಡಿದ್ದು ಕಾಲಪುರುಷನ ಹಾವಳಿಗೆ ತುತ್ತಾಗಿ ಅಸ್ಪಷ್ಟವಾಗಿ ಕಾಣುತ್ತದೆ. ಎರಡನೆಯ ಹಂತದಲ್ಲಿ ವೀರಪುರುಷನನ್ನು ದೇವಲೋಕಕ್ಕೆ ಗಂಧರ್ವಕನ್ಯೆಯರು ಕರೆದೊಯ್ಯುತ್ತಿರುವ ದೃಶ್ಯಸನ್ನಿವೇಶವಿದೆ. ಮೂರನೆಯ ಹಂತದಲ್ಲಿ ಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವಂತೆ ಚಿತ್ರಿಸಲಾಗಿದೆ ಪಕ್ಕದಲ್ಲಿ ನಂದಿಯ ಶಿಲ್ಪವಿದೆ ಇದರ ಪಕ್ಕದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ವೀರಪುರುಷನ ಶಿಲ್ಪವನ್ನು ಕೆತ್ತಲಾಗಿದೆ.

### ಮಹಾಸತಿಕಲ್ಲುಗಳು

ಯುದ್ಧಗಳಲ್ಲಿ ವೀರನು ವೀರಾವೇಶದಿಂದ ಹೋರಾಡಿ ಮಡಿದಾಗ ಅವನ ಪತ್ನಿಯು ತನ್ನ ಗಂಡನೊಂದಿಗೆ ಮಡಿಯಲಿಚ್ಛಿಸಿ ಸಹಗಮನ ಮಾಡುವುದರ ಮೂಲಕ ತನ್ನ ಪ್ರಾಣಾರ್ಪಣೆಯನ್ನು ಮಾಡಿಕೊಂಡಿದುದರ ಸ್ಮರಣಾರ್ಥವಾಗಿ ನಿಲ್ಲಿಸಲಾದ ಕಲ್ಲುಗಳನ್ನು ಮಾಸ್ತಿಕಲ್ಲು ಅಥವಾ ಮಹಾಸತಿಕಲ್ಲು ಎಂದು ಹೇಳಬಹುದು. ಸತಿ ಅಥವಾ ಸಹಗಮನ ಪದ್ಧತಿ ಸಾರ್ವತ್ರಿಕವಾಗಿರಲಿಲ್ಲ ಹಾಗೂ ಬಲತ್ಕಾರವೂ ಅಲ್ಲಿರಲಿಲ್ಲವೆಂಬುದು ಗಮನಿಸಬೇಕಾದ ಸಂಗತಿ. ಪತಿಯೇ ಪರದೈವವೆಂಬ ಭಾವನೆಯಲ್ಲಿ ಬೆಳೆದ ಹೆಣ್ಣು ಪತಿಯ ಮರಣವನ್ನು ಸಹಿಸಲಾಗದೆ ಏಕೈಕ ನಿಷ್ಠೆಯಿಂದ ಆತನನ್ನು ಹಿಂಬಾಲಿಸಿ ಸ್ವಸಂತೋಷದಿಂದ ಒಪ್ಪಿಕೊಂಡು ಸಹಗಮನವನ್ನು ಪ್ರಾರಂಭಿಸಿರುವುದೇ ಮೂಲವಾಗಿರಬೇಕು. ಏಕೆಂದರೆ ಧರ್ಮಶಾಸ್ತ್ರಗಳಲ್ಲಿಯೂ ಬಲತ್ಕಾರದ ಸಹಗಮನಕ್ಕೆ ಒಪ್ಪಿಗೆಯನ್ನು ನೀಡಿಲ್ಲ. ಆದರೂ ಕೆಲವು ಕಡೆಗಳಲ್ಲಿ ಧಾರ್ಮಿಕ ಸ್ವರೂಪ ಬಂದು ಹೆಣ್ಣಿಗೆ ಇಷ್ಟವಿಲ್ಲದಿದ್ದರೂ ಆ ವಿಧಿ ನಡೆಯುತ್ತಿದ್ದಂತೆ ತೋರುತ್ತದೆ. ಕೆಲವು ಸಮಯದಲ್ಲಿ ಪತಿಯ ಸಾವನ್ನು ಕೇಳಿ ಹಲವು ಸ್ತ್ರೀಯರು ಸಹಗಮನ ಮಾಡಿಕೊಳ್ಳುತ್ತಿದ್ದರು. ಡಾ. ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯಪಡುವಂತೆ ಪ್ರಾಚೀನ ಜನರು ಈ ಲೋಕದಂತಹ ಇನ್ನೊಂದು ಲೋಕವಿದೆಯೆಂದು ನಂಬಿದ್ದರು. ವ್ಯಕ್ತಿ ಮಡಿದಾಗ ಅವನು ಪರಲೋಕಕ್ಕೆ ಹೋಗುವನೆಂದು ಅಲ್ಲಿ ಅವನ ಭೋಗಕ್ಕೆ ಇಲ್ಲಿಂದ ಅವನಿಗಿಷ್ಟವಾದ ವಸ್ತುಗಳನ್ನು ಕಳುಹಿಸಬೇಕೆಂದು ಭಾವಿಸಿದರು. ಬಹುಶಃ ಸಹಗಮನ ಪದ್ಧತಿಗೆ ಇದೇ ಮೂಲವಿರಬಹುದು ಎಂಬ ಅವರ ಅಭಿಪ್ರಾಯವನ್ನು ಅಲ್ಲಗೆಳೆಯುವಂತಿಲ್ಲ. ಗಂಡನು ಇಂಥದ್ದೇ ಕಾರಣಕ್ಕಾಗಿ ಮಡಿದಿರಬೇಕೆಂಬ ಯಾವುದೇ ನಿಯಮವಿದ್ದಂತೆ ಕಾಣುವುದಿಲ್ಲ. ಒಟ್ಟಾರೆಯಾಗಿ ಇದರ ಬಗ್ಗೆ ಹೇಳಬೇಕೆಂದರೆ ಪತಿಯನ್ನು ಹಿಂಬಾಲಿಸಿದ ಮಹಾಸಾಧ್ವಿಯವರ ಸ್ಮರಣೆಗಾಗಿ ನೆಟ್ಟಂತಹ ಕಲ್ಲುಗಳೇ ಮಹಾಸತಿ ಕಲ್ಲುಗಳೆಂದು ಹೇಳಬಹುದು.

**ಒಂದನೆಯ ಮಹಾಸತಿ ಕಲ್ಲು :** ಈ ಮಹಾಸತಿಯ ಕಲ್ಲು ಚೌಕಾಕಾರವಾಗಿದ್ದು ಸುಮಾರು ೪ ಅಡಿ ಎತ್ತರ, ೧ ಅಡಿ ದಪ್ಪನಾಗಿಯು ಮತ್ತು ೨ ಅಡಿ ಅಗಲವಾಗಿದೆ. ಇದೊಂದು ಕಂಬದಂತಿದ್ದು ಇದರ ಬಲಭಾಗಕ್ಕೆ ಚಾಚಿಕೊಂಡಿರುವ ಕೈಯನ್ನು ಕೆತ್ತನೆ ಮಾಡಲಾಗಿದೆ. ಈ ಕೈ ಅಭಯ ಹಸ್ತದ ರೀತಿಯಲ್ಲಿ ಮೇಲಕ್ಕೆ ಎತ್ತಲಾಗಿದೆ. ಮುಂಗೈಯಲ್ಲಿ ಕಡಗ ಮತ್ತು ಬಳೆಗಳನ್ನು ಹಾಕಿಕೊಂಡಿರುವಂತೆ ಕೆತ್ತನೆ ಮಾಡಲಾಗಿದೆ. ಈ ಮಹಾಸತಿ ಕಲ್ಲಿನ ಕಂಬದ ಮೇಲ್ಭಾಗದಲ್ಲಿ ಕಳಸವನ್ನು ಕೆಳಭಾಗದ ಕೈಯಲ್ಲಿ ಸುಂದರವಾದ ಮತ್ತೊಂದು ಕಳಸವನ್ನು ಕೆತ್ತಲಾಗಿದೆ ಮೇಲ್ಭಾಗದಲ್ಲಿ ಲಿಂಗವನ್ನು ಮಂಟಪದೊಳಗೆ ಕೆತ್ತನೆ ಮಾಡಲಾಗಿದೆ. ಇದರ ಪಕ್ಕದಲ್ಲಿ ನಂದಿ ಶಿಲ್ಪವನ್ನು ಶಿಲ್ಪಿಸಲಾಗಿದೆ. ನಂದಿಯ ಪಕ್ಕದಲ್ಲಿ ಮೂರು ಜನ ಭಕ್ತರು ಕೈ ಮುಗಿದು ಕುಳಿತಿದ್ದಾರೆ ಇದರ ಪಕ್ಕದಲ್ಲಿ ನಂದಿ ಶಿಲ್ಪವನ್ನು ಶಿಲ್ಪಿಸಲಾಗಿದೆ. ನಂದಿಯ ಪಕ್ಕದಲ್ಲಿ ಮೂರು ಜನ ಭಕ್ತರು ಕೈ ಮುಗಿದು ಕುಳಿತಿದ್ದಾರೆ ಇದರ ಮೇಲ್ಭಾಗದಲ್ಲಿ ಸೂರ್ಯ ಮತ್ತು ಚಂದ್ರನನ್ನು ಕೆತ್ತಲಾಗಿದೆ. ಈ ಮಹಾಸತಿ ಕಲ್ಲಿಗೆ ಸ್ಥಳೀಯರು ಪೂಜೆಯನ್ನು ಸಲ್ಲಿಸುತ್ತಿದ್ದಾರೆ.

**ಎರಡನೆಯ ಮಹಾಸತಿಕಲ್ಲು :** ಮೇಲೆ ವಿವರಿಸಿರುವ ಮಹಾಸತಿಯ ಕಲ್ಲಿನ ಲಕ್ಷಣದಂತೆ ಇದೆ ಇದು ಸುಮಾರು ೩ ಅಡಿ ಎತ್ತರವಾಗಿದ್ದು ಚೌಕಾಕಾರವಾಗಿದೆ. ಈ ಮಹಾಸತಿಯ ಕೈಕೆಳಗೆ ಕಳಸದ ರೀತಿಯ ಗಿಂಡಿಯನ್ನು

  

ಕೆತ್ತನೆ ಮಾಡಲಾಗಿದೆ. ಇದು ಬಹಳ ನಯವಾಗಿ ಮತ್ತು ಸುಂದರ ಕೆತ್ತನೆಯಿಂದ ಕೂಡಿದೆ.

**ಮೂರನೆಯ ಮಹಾಸತಿಕಲ್ಲು :** ಈ ಮಹಾಸತಿ ಕಲ್ಲು ಮೇಲೆ ಹೇಳಲಾಗಿರುವ ಮಹಾಸತಿಯ ಕಲ್ಲಿನಂತೆಯೇ ಲಕ್ಷಣವನ್ನೊಂದಿದ್ದು ಇದನ್ನು ಈ ಗ್ರಾಮದ ಭೈರವೇಶ್ವರ ದೇವಾಲಯದ ಬಲಬದಿಯಲ್ಲಿ ನಿಲ್ಲಿಸಲಾಗಿದೆ ಈ ಕಲ್ಲಿಗೆ ಇಂದಿಗೂ ಪೂಜೆ ಸಲ್ಲಿಸುತ್ತಿದ್ದಾರೆ. ಇದಕ್ಕೆ ಸ್ಥಳೀಯರು ಮಾಸ್ತಮ್ಮನ ಗುಡಿ ಎಂದು ಕರೆಯುತ್ತಾರೆ. ಇದೇ ರೀತಿ ಇರುವ ಮಹಾಸತಿಕಲ್ಲುಗಳನ್ನು ಮಂಡ್ಯ ತಾಲ್ಲೂಕಿನ ಗುತ್ತಲು, ಮದ್ದೂರು ತಾಲ್ಲೂಕಿನ ಹೆಮ್ಮನಹಳ್ಳಿ ಮತ್ತು ಮಾಚನಹಳ್ಳಿಯಲ್ಲಿ ಕಂಡುಬರುತ್ತದೆ.

ಈ ಬೇಲೂರಿನಲ್ಲಿ ಇಷ್ಟೊಂದು ವೀರಗಲ್ಲುಗಳು ಮತ್ತು ಮಹಾಸತಿಕಲ್ಲುಗಳು ಕಂಡುಬರಲು ಕಾರಣವೆಂದರೆ ಹಿಂದೆ ಇದೊಂದು ಯುದ್ಧಭೂಮಿಯಾಗಿರಬಹುದು ಅಥವಾ ಇಲ್ಲಿರುವ ವೀರಗಲ್ಲುಗಳಲ್ಲಿ ಹೆಚ್ಚಾಗಿ ಗೋವುಗಳ ಶಿಲ್ಪಗಳನ್ನು ಮತ್ತು ಗೋವುಗಳ್ಳರೊಡನೆ ಹೋರಾಡುತ್ತಿರುವ ವೀರರ ಶಿಲ್ಪಗಳನ್ನು ಗಮನಿಸಿದರೆ ಹಿಂದೆ ಗೋವುಗಳ ಸಾಕಾಣಿಕೆಯ ಪ್ರದೇಶವಾಗಿದ್ದಂತೆ ಕಂಡುಬರುತ್ತದೆ ಈ ಗ್ರಾಮವು ಹಿಂದೆ ಸಮೃದ್ಧವಾಗಿ ಸಿರಿಸಂಪತ್ತಿನಿಂದ ಕೂಡಿದ ಸ್ಥಳವಾಗಿರ ಬೇಕೆಂದೆನಿಸುತ್ತದೆ.

## ಆಕರ ಗ್ರಂಥಗಳು


೧. ಡಾ. ಆರ್. ಶೇಷಶಾಸ್ತ್ರಿ., **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು.
೨. **ಡಾ. ಬಿ.ಆರ್. ಹಿರೇಮಠ.,** ವೀರಗಲ್ಲುಗಳು.
೩. ಡಾ. ಡಿ.ವಿ. ಪರಮಶಿವಮೂರ್ತಿ, **ಕನ್ನಡ ಶಾಸನಶಿಲ್ಪ.**
೪. ಮೆಮೊರಿಯಲ್ ಸ್ಟೋನ್ – ಎಸ್. ಶೆಟ್ಟರ್.
೫. **ಡಾ. ಎಂ. ಚಿದಾನಂದಮೂರ್ತಿ.,** ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.
೬ **ಡಾ. ಎಚ್. ತಿಪ್ಪೇರುದ್ರಸ್ವಾಮಿ.,** ಕರ್ನಾಟಕ ಸಂಸ್ಕೃತಿ ಸಮೀಕ್ಷೆ.
೭. ಎಪಿಗ್ರಾಫಿಯ ಕರ್ನಾಟಿಕ ಸಂಪುಟ ೭.

ಡಾ. ಎಚ್.ಎಸ್. ಗೋಪಾಲರಾವ್ *

# ಛಿನ್ನಮಂಗಲದ ಮುಕ್ತನಾಥೇಶ್ವರ ದೇವಾಲಯಕ್ಕೆ ಹೊಂದಿಕೊಂಡ ಕಿಂಟ್ಟಿಗೆ ಸಮಾಧಿ

ನೆಲಮಂಗಲ (ಅದೇ ತಾಲ್ಲೂಕು)ಕ್ಕೆ ಸುಮಾರು ೩ ಕಿ.ಮೀ.ದೂರದಲ್ಲಿರುವ ಛಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯವು ತನ್ನ ವಾಸ್ತು ಮತ್ತು ಶಿಲ್ಪಕಲೆಯಿಂದಾಗಿ ಪ್ರಸಿದ್ಧವಾಗಿದೆ. ದೇವಾಲಯದ ಸಮೀಪವೇ ಇರುವ ಗ್ರಂಥ ಲಿಪಿ ಮತ್ತು ತಮಿಳು ಭಾಷೆಯ ಒಂದು ಶಾಸನದ ಪ್ರಕಾರ ದೇವಾಲಯವು ಚೋಳರ ಕಾಲದಲ್ಲಿ ನಿರ್ಮಾಣವಾಗಿದೆ. ಕ್ರಿ.ಶ.೧೧೧೦ರಲ್ಲಿ ಕುಲೋತ್ತುಂಗ ಚೋಳ ದೇವಾಲಯಕ್ಕೆ ದಾನ ನೀಡಿದ್ದಾನೆ. ಶಿಥಿಲಾವಸ್ಥೆಯಲ್ಲಿದ್ದ ಈ ದೇವಾಲಯವನ್ನು ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಇಲಾಖೆಯು ೨೦೦೬ರಲ್ಲಿ ಸಂರಕ್ಷಿಸಿದೆ. ದೇವಾಲಯದ ಸಂರಕ್ಷಣೆ ಆಗುತ್ತಿದ್ದ ಸಂದರ್ಭದಲ್ಲಿ, ೨೧-೩-೨೦೦೬ರಂದು ದೇವಾಲಯದ ನವರಂಗದ ಅಧಿಷ್ಠಾನದ ಹೊರಗೆ ಈಶಾನ್ಯ ಮೂಲೆಯಲ್ಲಿ ಎರಡು ಅಸ್ಥಿಪಂಜರಗಳು ಕಂಡವು. ಮೊದಲಿಗೆ ಕಂಡದ್ದು ಮೇಲ್ಭಾಗದ ಒಂದು ಅಸ್ಥಿಪಂಜರದ ತಲೆಯ ಭಾಗ ಮಾತ್ರ. ನಂತರ ಎಚ್ಚರಿಕೆಯಿಂದ ಕೆಲಸ ಮುಂದುವರಿದಂತೆ ಒಂದರ ಮೇಲೊಂದು ಇದ್ದ ಎರಡೂ ಅಸ್ಥಿಪಂಜರಗಳು ಬೆಳಕಿಗೆ ಬಂದವು. ಪುರಾತತ್ವ ಇಲಾಖೆ ಸಂರಕ್ಷಣ ಕಾರ್ಯ ಕೈಗೊಂಡಿತ್ತಾದ್ದರಿಂದ ಆ ಬಗ್ಗೆ ಇಲಾಖೆಯೇ ಸೂಕ್ತವಾಗಿ ಕ್ರಮ ತೆಗೆದುಕೊಳ್ಳಲು ಮನವರಿಕೆ ಮಾಡಲಾಯಿತು. ಅಸ್ಥಿಪಂಜರದ ಭಾಗಗಳನ್ನು ಪ್ರಯೋಗಾಲಯಕ್ಕೆ ಕಳುಹಿಸಿ, ಅವುಗಳ ಕಾಲ, ಚಹರೆ ಮತ್ತು ಇತರ ವಿವರಗಳನ್ನು ತಿಳಿಯಲು ಪ್ರಯತ್ನ ಮಾಡಬಹುದಾಗಿತ್ತು. ಆದರೆ, ಅಂತಹ ಯಾವ ಪ್ರಯತ್ನಗಳಿಗೂ ಅವಕಾಶ ಆಗಲಿಲ್ಲ. ಸಂರಕ್ಷಣಾ ಕಾರ್ಯಕ್ಕೆ ಅಡ್ಡಿಯಾಗಿ ಜನರ ಕುತೂಹಲ ಹೆಚ್ಚಿದ ಕಾರಣ ಅಸ್ಥಿಪಂಜರಗಳನ್ನು ತೆಗೆದು, ಸಮೀಪದಲ್ಲೇ ಇರುವ ಕಾಲುವೆಯಲ್ಲಿ ಹೂಳಲಾಯಿತು.

ದೇವಾಲಯದ ಸಂರಕ್ಷಣಾ ಕಾರ್ಯ ಆರಂಭವಾದಾಗಲೇ ಅಲ್ಲಿ ಕೆಲಸಗಳ ಮೇಲ್ವಿಚಾರಣೆ ಮಾಡುತ್ತಿದ್ದ ವ್ಯಕ್ತಿಗೆ ದೇವಾಲಯದ ಗರ್ಭಗೃಹವನ್ನು ತೆಗೆಯುವಾಗ ಅಲ್ಲಿ ಏನಾದರೂ ವಿಶೇಷಗಳು ಕಂಡರೆ ತಕ್ಷಣ ತಿಳಿಸಬೇಕೆಂಬ ಸೂಚನೆ ನೀಡಲಾಗಿತ್ತು. ನನ್ನ ಅನುಮಾನ ಇದ್ದುದು ಆ ದೇವಾಲಯವು ಒಂದು 'ಪಳ್ಳಿಪ್ಪಡೈ' ಆಗಿರಬಹುದು ಎಂದು. ದೇವಾಲಯದ ಹೆಸರು, ಅಲ್ಲಿನ ಕಾಪಾಲಿಕ ಗುರುಗಳ ಶಿಲ್ಪಗಳು ಹಾಗೂ ದೇವಾಲಯದ ಎದುರಿಗೆ ನಿಲ್ಲಿಸಿರುವ



ಅಧಿಷ್ಠಾನಕ್ಕೆ ಹೊಂದಿಕೊಂಡ ಸಮಾಧಿ

ಭಕ್ತ ವಿಗ್ರಹವನ್ನು ಕಂಡಾಗ ಅದು ಒಂದು ಸಮಾಧಿ ದೇವಾಲಯ ಆಗಿರಬಹುದು ಎಂಬ ಅನುಮಾನ ನನಗಿತ್ತು. ಆದರೆ, ದೇವಾಲಯದ ಗರ್ಭಗೃಹವನ್ನು ಪೂರ್ಣ ಕಳಚಿದಾಗಲೂ ಅಂತಹ ಯಾವುದೇ ಸುಳಿವು ಸಿಗಲಿಲ್ಲ. ದೇವಾಲಯದ ನವರಂಗದ ಭಿತ್ತಿಯನ್ನು ಕಳಚುತ್ತಿದ್ದಾಗ, ದೇವಾಲಯದ ಈಶಾನ್ಯ ಭಾಗದ ಅಧಿಷ್ಠಾನಕ್ಕೆ ಹೊಂದಿಕೊಂಡಂತೆ ಅಸ್ಥಿಪಂಜರಗಳು ಗೋಚರವಾದವು. ಆ ಭಾಗದ ಕೆಲಸವನ್ನು ಒಂದು ವಾರದ ಅವಧಿಗೆ ಸ್ಥಗಿತಗೊಳಿಸಿ, ನಿಧಾನವಾಗಿ ಆ ಭಾಗದ ಮಣ್ಣನ್ನು ತೆಗೆಯಲಾಯಿತು. ಮೊದಲು ಕಂಡ ಒಂದು ಅಸ್ಥಿಪಂಜರದ ತಲೆಯ ಬುರುಡೆ ದಕ್ಷಿಣಕ್ಕಿದ್ದರೆ, ನಂತರ ಗೋಚರವಾದ ತಲೆಯ ಬುರುಡೆ ಉತ್ತರಕ್ಕಿತ್ತು. ಒಂದು ವಾರಕ್ಕೂ ಹೆಚ್ಚು ಕಾಲ ಗಾಳಿಗೆ ತೆರೆದುಕೊಂಡಿದ್ದ ಕಾರಣ ಅಸ್ಥಿಪಂಜರಗಳನ್ನು ಪರೀಕೆಗಾಗಿ ಪ್ರಯೋಗಾಲಯಕ್ಕೆ ಕಳುಹಿಸಲಾಗಲಿಲ್ಲ.

ಅಧಿಷ್ಠಾನಕ್ಕೆ ಹೊಂದಿಕೊಂಡಂತೆಯೇ ಅಸ್ಥಿಪಂಜರಗಳು ಇದ್ದುದರಿಂದ ಅವು ದೇವಾಲಯ ನಿರ್ಮಾಣದ ಕಾಲದಲ್ಲಿ

* ೧೪೪, 'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂ. ಗ್ರಾ. ಜಿ. ೫೬೨ ೧೨೩.

ಹೂತದ್ದಲ್ಲ ಎಂದು ಸ್ಪಷ್ಟವಾಗುತ್ತದೆ. ನಂತರ ಬಹುತೇಕ ೧೬ ಅಥವಾ ೧೭ನೆಯ ಶತಮಾನದಲ್ಲಿ ಈ ಸಮಾಧಿ ಕಾರ್ಯ ನಡೆದಿರಬಹುದು. ಇದು ಕೇವಲ ಊಹೆ. ಕ್ರಿ.ಶ.೧೧ನೆಯ ಶತಮಾನದಲ್ಲಿ ನಿರ್ಮಾಣ ಆಗಿರಬಹುದಾದ ದೇವಾಲಯವು ಕ್ರಿ.ಶ.೧೫ ಮತ್ತು ೧೬ನೆಯ ಶತಮಾನದಲ್ಲಿ ಕೆಲವು ಬದಲಾವಣೆಗಳನ್ನು ಕಂಡಿದೆ. ಆ ಹೊತ್ತಿಗೆ ಒಮ್ಮೆ ದೇವಾಲಯದ ಜೀರ್ಣೋದ್ಧಾರ ಅಥವಾ ಸಂರಕ್ಷಣಾ ಕಾರ್ಯ ಆಗಿರುವ ಸಂಭಾವ್ಯತೆ ಇದೆ. ದೇವಾಲಯದ ಸಂರಕ್ಷಣೆಯ ಸಂದರ್ಭದಲ್ಲಿ ನವರಂಗದ ನೆಲಹಾಸಿನ ಕಲ್ಲಿನ ಕೆಳಗೆ ಕ್ರಿ.ಶ.ಸು.೧೦ನೆಯ ಶತಮಾನಕ್ಕೆ ಸೇರುವ ಒಂದು ಸೂರ್ಯ ಶಿಲ್ಪ ದೊರೆತಿದೆ. ಅಲ್ಲದೆ, ಅಧಿಷ್ಠಾನದ ಭಾಗದಲ್ಲಿ ಅಧಿಷ್ಠಾನದ ನೆಲಮಟ್ಟದಿಂದ ಸುಮಾರು ೪.೫ ಅಡಿಯಷ್ಟು ಮಣ್ಣು ಮುಚ್ಚಿಕೊಂಡಿತ್ತು. ಇದರಿಂದ ದೇವಾಲಯ ನಿರ್ಮಾಣದ ನಂತರ ಯಾವುದೋ ಕಾಲದಲ್ಲಿ ಈ ಸಮಾಧಿ ಆಗಿರಬಹುದು ಎಂಬ ಅನುಮಾನ ಬಲವಾಗುತ್ತದೆ. ದೇವಾಲಯದ ಹೊರಗಡೆಯ ತೆರೆದ ಮುಖಮಂಟಪವು ವಾಸ್ತು ಮತ್ತು ಶೈಲಿಯ ಕಾರಣದಿಂದ ನಂತರದ ಸೇರ್ಪಡೆ. ಕ್ರಿ.ಶ.೧೦ ಮತ್ತು ೧೧ನೆಯ ಶತಮಾನಗಳಲ್ಲಿ ಹೆಚ್ಚು ಜನಸಂಪರ್ಕ ಪಡೆದಿದ್ದ ದೇವಾಲಯ ಕ್ರಮೇಣ ಜನಸಂಪರ್ಕ ಕಳೆದುಕೊಂಡು, ಅಧಿಷ್ಠಾನದ ಭಾಗ ಮಣ್ಣಿನಿಂದ ಮುಚ್ಚಿಹೋಗಿರುವ ಸಾಧ್ಯತೆ ಇದೆ. ಜೊತೆಗೆ ದೇವಾಲಯದ ಪಕ್ಕದಲ್ಲೇ ಹರಿಯುವ ಭಿನ್ನಮಂಗಲ ಕೆರೆಯ ಕೋಡಿಯ ನೀರೂ ಮಣ್ಣು ತುಂಬಿಕೊಳ್ಳಲು ಕಾರಣ ಆಗಿರಬಹುದು. ಕ್ರಿ.ಶ.೧೭೯೨ರ ಒಂದು ನಕ್ಷೆಯ ಪ್ರಕಾರ ಈ ಭಾಗದಲ್ಲಿ ಆ ಕಾಲಕ್ಕೆ ಅರ್ಕಾವತಿ ನದಿಯ ಪಾತ್ರ ಇತ್ತು.

ಮುಕ್ತನಾಥೇಸ್ವರ ದೇವಾಲಯಕ್ಕೆ ಸಂಬಂಧಿಸಿದ ಗ್ರಂಥ ಲಿಪಿ ಮತ್ತು ತಮಿಳು ಭಾಷೆಯ ಕ್ರಿ.ಶ.೧೧೧೦ ರ ಒಂದು ಶಾಸನವು ಕುಲೋತ್ತುಂಗ ಚೋಳನು ತನ್ನ ಆಳ್ವಿಕೆಯ ೪೧ನೆಯ ವರ್ಷದಲ್ಲಿ ವಿನ್ನಮಂಗಲದ ಮುತ್ತೀಸ್ವರ ಮುಡೈಯಾರ್ ದೇವರಿಗೆ ದೇವದಾನವಾಗಿ ಸಕ್ಕಿರೂರು (ಈಗಿನ ಸಗರೂರು) ಗ್ರಾಮದಲ್ಲಿ ಭೂಮಿದಾನ ಮಾಡಿರುವ ವಿಷಯವನ್ನು ದಾಖಲಿಸಿದೆ.[೧] ಅಂದರೆ ಆ ಹೊತ್ತಿಗೆ ಮುಕ್ತಿನಾಥೇಶ್ವರ ದೇವಾಲಯದ ನಿರ್ಮಾಣ ಆಗಿತ್ತು ಎಂದು ಸ್ಪಷ್ಟವಾಗುತ್ತದೆ. ಅ ಹೊತ್ತಿಗೆ ಸಮೀಪದ ಸೋಲದೇವನ ಹಳ್ಳಿಯಲ್ಲಿ ಸಿದ್ಧೇಶ್ವರ ದೇವಾಲಯ ಇದ್ದ ವಿಷಯವನ್ನು ರಾಜೇಂದ್ರ ಚೋಳನ ೧೬ನೆಯ ವರ್ಷದ ಅಂದರೆ, ಕ್ರಿ.ಶ. ೧೦೨೮ರ ಶಾಸನ ದಾಖಲಿಸಿದೆ.[೨] ಆ ಶಾಸನವು ಛಾಯಾ ಪರಮೇಶ್ವರನಿಂದ ಆರಂಭಿಸಿ, ಆಗ ದೇವಾಲಯದ ಗುರುವಾಗಿದ್ದ ರೂಪಶಿವನವರೆಗಿನ ಪರಂಪರೆಯನ್ನು ನೀಡಿದೆ. ಇದರಿಂದ ಆ ಭಾಗದಲ್ಲಿ ಆ ಹೊತ್ತಿಗೆ ನಾಥ ಪಂಥ ಪ್ರಬಲ ವಾಗಿತ್ತೆಂದು ತಿಳಿಯುತ್ತದೆ. ಬಿನ್ನಮಂಗಲ ಮತ್ತು ಸೋಲದೇವನ ಹಳ್ಳಿಗಳ ನಡುವಿನ ಅಂತರ ಕಡಿಮೆ ಇರುವುದರಿಂದ ಈ ಪ್ರದೇಶದಲ್ಲೂ ನಾಥ ಪಂಥದ ಪ್ರಭಾವ ಇತ್ತೆಂದು ತಿಳಿಯುತ್ತದೆ.

ನೆಲಮಂಗಲ ತಾಲ್ಲೂಕಿನಲ್ಲಿ ಬಿನ್ನಮಂಗಲದ ಮುಕ್ತಿನಾಥ ಹೆಚ್ಚು ಪ್ರಭಾವಶಾಲಿಯಾಗಿದ್ದ. ಕ್ರಿ.ಶ. ೧೫೨೬[೩] ಮತ್ತು ಕ್ರಿ.ಶ.೧೫೫೬ರ[೪] ಶಾಸನಗಳೂ ಕೊನೆಯಲ್ಲಿ 'ನಾಡ ವೊಪ್ಪೆ ಶ್ರೀ ಮುಕ್ತನಾತ' ಎಂದು ದಾಖಲಿಸಿವೆ. ಆಂದರೆ ಕ್ರಿ.ಶ.೧೧ನೆಯ ಶತಮಾನದ ಎರಡನೆಯ ದಶಕದಿಂದ ೧೪ನೆಯ ಶತಮಾನದ ಮೂರನೆಯ ದಶಕದವರೆಗೆ ಭಿನ್ನಮಂಗಲದ ಮುಕ್ತನಾಥೇಶ್ವರನು ನೆಲಮಂಗಲದ ಸುತ್ತಮುತ್ತಣ ಪ್ರದೇಶದ ಪ್ರಭಾವೀ ದೇವರಾಗಿದ್ದ ಎಂದು ಖಚಿತವಾಗುತ್ತದೆ. ಬಹುತೇಕ ಆವರೆಗೆ ಸುಸ್ಥಿತಿಯಲ್ಲಿದ್ದ ದೇವಾಲಯವು ನಂತರ ಕ್ರಮೇಣ ನೈಸರ್ಗಿಕ ವಾಗಿಯೇ ಮಣ್ಣು ತುಂಬಿಕೊಂಡು ದುಸ್ಥಿತಿಗೆ ಬಂದಿರಬಹುದು. ಇಂತಹ ಸಂದರ್ಭದಲ್ಲಿ ಯಾರೋ ಒಬ್ಬ ಆಧಿಕಾರಿ ಅಥವಾ ಭಕ್ತ ದೇವಾಲಯವನ್ನು ಸಂರಕ್ಷಿಸುವ ಪ್ರಯತ್ನ ನಡೆಸಿರುವ ಸಾಧ್ಯತೆ ಇದೆ. ಅಂತಹ ಪ್ರಯತ್ನದಲ್ಲಿ ದೇವಾಲಯದ ಮುಂದಿನ ನಾಲ್ಕು ಕಂಬಗಳ ಮೇಲಿನ ತೆರೆದ ಮುಖಮಂಟಪ ರಚನೆಗೊಂಡಿರಬೇಕು. ಆಧಿಷ್ಠಾನವನ್ನು ಮುಚ್ಚಿಕೊಂಡಿದ್ದ ಮಣ್ಣನ್ನು ತೆಗೆಯುವ ಪ್ರಯತ್ನ ನಡೆದಂತೆ ತೋರುವುದಿಲ್ಲ.

ನಾಥ ಅಥವಾ ಕಾಳಾಮುಖ ಪಂಥದ ನೆಲೆಯಾಗಿದ್ದ ಬಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯವು ತಮ್ಮ ಪಂಥದ ಗುರುಗಳ ವಾಸ ಮತ್ತು ಅನುಷ್ಠಾನಕ್ಕೆ ಅವಕಾಶ ಕಲ್ಪಿಸಿದ ಕಾರಣದಿಂದ, ಸಾಮಾನ್ಯ ಭಕ್ತರು ದೂರ ಉಳಿದಿರುವ ಸಾಧ್ಯತೆಗಳಿವೆ. ಊರಿನ ಆಚೆ ಕೆರೆಯ ಕೆಳಗೆ ಗದ್ದೆಯ ಬಯಲಿನಲ್ಲಿ ಇರುವ ದೇವಾಲಯವು ಒಂದು ಕಾಲಕ್ಕೆ ಬಹಳ ಪ್ರಭಾವಶಾಲಿಯಾದರೂ, ತಾಂತ್ರಿಕಾಚರಣೆಯ ಶೈವ ಗುರುಗಳು ಅಲ್ಲಿ ನೆಲೆಸಿದ ಕಾರಣ ಸಾಮಾನ್ಯ ಜನರ ಸಂಪರ್ಕ ತಪ್ಪಿ ಗುರುಗಳು ಮತ್ತು ಆವರ ಶಿಷ್ಯರ ತಾಂತ್ರಿಕ ಆಚರಣೆಗಳು ನಿರಾತಂಕವಾಗಿ ಮುಂದುವರಿದ ಸೂಚನೆಯನ್ನು ಈಗ ಪತ್ತೆ ಆಗಿರುವ ಸಮಾಧಿ ನೀಡುತ್ತದೆ.

ದೇವಾಲಯದ ಈಶಾನ್ಯ ಭಾಗದ ಅಧಿಷ್ಠಾನಕ್ಕೆ ಹೊಂದಿಕೊಂಡಿರುವ ಸಮಾಧಿಯು ಆಕಸ್ಮಿಕವಾಗಿ ನಿರ್ಮಾಣ ವಾದುದಲ್ಲ. ನೆಲಕ್ಕೆ ಹೊಂದಿಕೊಂಡಂತೆ ಸು.ನಾಲ್ಕು ಅಡಿ ಉದ್ದ ಮತ್ತು ಎರಡು ಅಡಿ ಅಗಲದ ಇಟ್ಟಿಗೆಯ ಹಾಸನ್ನು ಸಿದ್ಧಪಡಿಸಿ, ಅದರ ಮೇಲೆ ಮೊದಲು ಒಂದು ಶವವನ್ನು ದಕ್ಷಿಣಕ್ಕೆ ತಲೆ ಬರುವಂತೆ ಇಟ್ಟು ನಂತರ ಎರಡನೆಯ ಶವವನ್ನು ಆದರ ಮೇಲೆ ಉತ್ತರಕ್ಕೆ ತಲೆ ಬರುವಂತೆ ಇಟ್ಟು ಸಮಾಧಿ ಮಾಡಲಾಗಿದೆ. ಪೂರ್ವಯೋಜಿತ ಸಮಾಧಿ ಯಾದ್ದರಿಂದ ಎಲ್ಲ ಸಿದ್ಧತೆಗಳೂ ಕ್ರಮಬದ್ಧವಾಗಿ ಆಗಿವೆ. ಎರಡೂ ಶವಗಳ ಮೊಣಕಾಲನ್ನು ಮಡಿಸಿ, ಒಂದರ ಮೇಲೊಂದನ್ನು ಇಟ್ಟು ಸಮಾಧಿ ಮಾಡಲಾಗಿರುವುದರಿಂದ ಒಂದು ಶವವನ್ನು ಗುರುವಿನದೆಂದೂ, ಮತ್ತೊಂದು ಶವವನ್ನು ಆವನ ಶಿಷ್ಯನದೆಂದೂ ಊಹಿಸಲು ಅವಕಾಶಗಳಿವೆ.

ಕಾಳಭೈರವನ ಅರ್ಚಕರೂ ಆಗಿದ್ದ ಕಾಪಾಲಿಕರಲ್ಲಿ ವಾಮಾಚಾರ ಪದ್ಧತಿಯ ಆಚರಣೆ ಇತ್ತು.[೫] ಈಗಾಗಲೇ ಪ್ರಸ್ತಾಪಿಸಿರುವ ನೆಲಮಂಗಲ ತಾಲ್ಲೂಕಿನ ಸೋಲದೇವನಹಳ್ಳಿ ಶಾಸನವು ಛಾಯಾ ಪರಮೇಶ್ವರನ ಮಗ ಸ್ತಂಭನಾಥ, ಅವನ ಮಗ ದೀಪನಾಥ, ಅವನ ಶಿಷ್ಯ ಮೌನನಾಥ ಮತ್ತು ಅವನ ಶಿಷ್ಯ ರೂಪಶಿವರನ್ನು ಪ್ರಸ್ತಾಪಿಸಿದೆ. ಈ ಪರಂಪರೆ ಭಿನ್ನಮಂಗಲದಲ್ಲಿ ಮುಂದುವರಿದಿರಬಹುದು. ಭಿನ್ನಮಂಗಲದ



**ಸಮಾಧಿಯಲ್ಲಿನ ಜೋಡಿ ಅಸ್ಥಿಪಂಜರಗಳು**

ಮುಕ್ತಿನಾಥೇಶ್ವರ ದೇವಾಲಯದ ಹೊರಭಿತ್ತಿಯಲ್ಲಿ ಕಾಳಾಮುಖ ಗುರುಗಳು ಮತ್ತು ಭೈರವನ ಶಿಲ್ಪಗಳೂ ಇವೆ.

ಭಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯವು ಮೊದಲಿನಿಂದಲೂ ರಹಸ್ಯ ತಾಂತ್ರಿಕ ಆಚರಣೆಗಳಿಗೆ ಅವಕಾಶ ಕಲ್ಪಿಸಿದೆ ಎಂದು ಊಹಿಸಬಹುದು. ಕರ್ನಾಟಕದಲ್ಲಿ ಕಾಪಾಲಿಕ ಮತ್ತು ನಾಥ ಸನ್ಯಾಸಿಗಳಿಗೆ ಯಾವ ಬೇಧವೂ ಇರಲಿಲ್ಲ ಎಂಬ ಅಭಿಪ್ರಾಯ ಡಾ॥ ಎಂ. ಚಿದಾನಂದಮೂರ್ತಿ ಅವರದು.[೬] ಈ ಹಿನ್ನೆಲೆಯಲ್ಲಿ ಭಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯವು ಕ್ರಿ.ಶ.೧೬ ಮತ್ತು ೧೭ನೆಯ ಶತಮಾನಗಳಲ್ಲಿ ತಾಂತ್ರಿಕ ಆಚರಣೆಗಳಿಗೆ ಅವಕಾಶ ಕಲ್ಪಿಸಿರುವ ಸಾಧ್ಯತೆಗಳಿವೆ.

ಅಸ್ತಿಪಂಜರಗಳನ್ನು ಪರೀಕ್ಷೆಗೆ ಪ್ರಯೋಗಾಲಯಕ್ಕೆ ಕಳುಹಿಸಲು ಸಾಧ್ಯವಾಗಲಿಲ್ಲವಾದ್ದರಿಂದ, ಅವುಗಳಲ್ಲಿ ದೊರೆತ ಎರಡೂ ಅಸ್ತಿಪಂಜರಗಳು ಪುರುಷರವೋ, ಸ್ತ್ರೀಯರವೋ ಎಂದು ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗಿಲ್ಲ. ಕಾಪಾಲಿಕರು ಶಿವನ ಭಕ್ತರಾದರೆ ಕೌಳರು ಶಕ್ತಿಯ ಉಪಾಸಕರು.[೭] ಅಸ್ತಿಪಂಜರಗಳಲ್ಲಿ ಒಂದು ಪುರುಷನದು, ಮತ್ತೊಂದು ಸ್ತ್ರೀಯದ್ದಾಗಿದ್ದರೆ, ಆಗ ಅದು ಕೌಳರಿಗೆ ಸೇರಿದ್ದ ಶಕ್ತಿ ಆರಾಧನೆಯ ಶಾಕ್ತ ಪಂಥಕ್ಕೆ ಸೇರಿದ್ದ ಸಮಾಧಿಗಳು ಎಂಬ ತೀರ್ಮಾನಕ್ಕೆ ಬರಬಹುದಾಗಿತ್ತು. ಇದು ಅಸ್ಪಷ್ಟವಾಗಿರುವುದರಿಂದ, ಎರಡೂ ಅಸ್ತಿಪಂಜರಗಳು ಪುರುಷರಿಗೇ ಸೇರಿದ್ದು ಎಂಬ ಊಹೆಯೊಂದಿಗೆ ಗುರುವಿನ ಜೊತೆಗೇ ತಾನೂ ಸಮಾಧಿ ಆಗುವ ವ್ರತ ಕೈಗೊಂಡಿದ್ದ ಒಬ್ಬ ಶಿಷ್ಯ ಗುರು ಮರಣಿಸಿದಾಗ, ತಾನು ಮೊದಲು ಜೀವಂತವಾಗಿಯೇ ಸಿದ್ಧಪಡಿಸಿದ್ದ ವೇದಿಕೆಯಲ್ಲಿ ಮಲಗಿ, ತನ್ನ ಮೇಲೆ ಗುರುವಿನ ಶವವನ್ನು ಹೊತ್ತು ಸಮಾಧಿ ಆಗಿರುವ ಸಾಧ್ಯತೆ ಇದೆ. ಕರ್ನಾಟಕದ ವೀರ ಪರಂಪರೆಯಲ್ಲಿ ಕೀಳ್ಗುಂಟೆಯು ಚಿರಪರಿಚಿತ. ಗಂಗ ದೊರೆ ಪೆರ್ಮಾನಡಿಯು ಸ್ವರ್ಗವೇರಿ ದಾಗ, ಅವನ ಮನೆಮಗ ಅಗರಯ್ಯ ಕೀಳ್ಗುಂಟೆಯಾದ ವಿಷಯವನ್ನು ದೊಡ್ಡಹುಂಡಿಯ ಶಾಸನ ಶಿಲ್ಪಸಹಿತ ದಾಖಲಿಸಿದೆ.[೮] ಇದು ಒಡೆಯನ ಕೆಳಗೆ ಸಮಾಧಿ ಆದವನು ಎಂಬ ಅರ್ಥ ಕೊಡುತ್ತದೆ. ಇದು ಸೇವಕನೂ ಆಗಬಹುದು ಅಥವಾ ಶಿಷ್ಯನೂ ಆಗಬಹುದು.

ಭಿನ್ನಮಂಗಲದ ಕೆಳಭಾಗದ ಅಸ್ತಿಪಂಜರದ ತಲೆಯ ಭಾಗವು ದಕ್ಷಿಣಕ್ಕಿರುವುದರಿಂದ, ಅದು ಶಿಷ್ಯನದೆಂದೂ, ಮೇಲಿನ ಅಸ್ತಿಪಂಜರದ ತಲೆಯು ಉತ್ತರಕ್ಕಿರುವುದರಿಂದ ಅದು ಗುರುವಿನದೆಂದೂ ತಿಳಿಯುತ್ತದೆ. ತನ್ನ ವ್ರತದಂತೆ ಗುರು ಸತ್ತಾಗ ಅವನ ಶಿಷ್ಯನೂ ಸಮಾಧಿಯಾಗಿದ್ದಾನೆ. ಗುರುವನ್ನು ಮರಣದ ನಂತರ ಸಮಾಧಿ ಮಾಡಿದರೆ, ಶಿಷ್ಯನು ತನ್ನ ಗುರುವಿನ ಶವವನ್ನು ಹೊತ್ತು ಜೀವಂತವಾಗಿ ಸಮಾಧಿಯಾಗಿದ್ದಾನೆ ಎಂದು ಊಹಿಸಲು ಅವಕಾಶಗಳಿವೆ.

ಅಸ್ತಿಪಂಜರದ ಮೇಲೆ ಅಥವಾ ಪಕ್ಕದಲ್ಲಿ ಬೇರೆ ಯಾವುದೇ ವಸ್ತುಗಳು ದೊರೆತಿಲ್ಲ. ಸಾಮಾನ್ಯವಾಗಿ ಗುರುವನ್ನು ಕುಳಿತಂತೆ ಸಮಾಧಿ ಮಾಡುವುದು ರೂಢಿ. ಶಿಷ್ಯನ ವ್ರತದ ಕಾರಣದಿಂದ ಈ ರೂಢಿಯನ್ನು ತಪ್ಪಿಸಿ, ಜೀವಂತ ಶಿಷ್ಯನ ಮೇಲೆ ಗುರುವಿನ ಶವವನ್ನಿಟ್ಟು ಸಮಾಧಿ ಮಾಡಿರುವ ಸಾಧ್ಯತೆಗಳಿವೆ.



**ಒಂದು ಅಸ್ಥಿಪಂಜರದ ಹಲ್ಲುಗಳು**

## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು


೧. ಎ.ಕ. IX ನೆಲಮಂಗಲ ೩, ಕ್ರಿ.ಶ. ೧೧೧೦
೨. ಅದೇ, ನೆಲಮಂಗಲ ೧, ಕ್ರಿ.ಶ. ೧೦೨೯
೩. ಇತಿಹಾಸ ದರ್ಶನ ಸಂ. ೨, (ಸಂ) ಡಾ॥ ಸೂರ್ಯನಾಥ ಕಾಮತ್, ಲಕ್ಷ್ಮಣ್ ತೆಲಗಾವಿ, ೧೯೮೭, ಪು. ೬೦
೪. ಎ.ಕ. IX ನೆಲಮಂಗಲ ೧೧೦, ಕ್ರಿ.ಶ.೧೩೩೬
೫. ಡಾ॥ ಎಂ.ಚಿದಾನಂದ ಮೂರ್ತಿ, ೧೯೬೬, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಮೈಸೂರು, ಪು.೧೫೨
೬. ಡಾ॥ ಎಂ.ಚಿದಾನಂದ ಮೂರ್ತಿ, ಮಧ್ಯಕಾಲೀನ ಕರ್ನಾಟಕದ ಕೆಲವು ರಹಸ್ಯ ತಾಂತ್ರಿಕ ಪಂಥಗಳು, **ಸಂಶೋಧನ ತರಂಗ-೨**, ಬೆಂಗಳೂರು ೧೯೭೨, ಪು. ೨೬೧
೭. ಅದೇ, ಪು. ೨೫೯
೮. ಎ.ಕ. III ಟಿ. ನರಸೀಪುರ ೯೧, ಕ್ರಿ.ಶ. ೯೨೧

ಡಾ. ಅಣ್ಣಯ್ಯ ಟಿ.ಬಿ.*

# ವೀರ ಸೋಮೇಶ್ವರನ ಕಾಲದ ಗರುಡರು

ಕ್ರಿ.ಶ.೧೩ನೇ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದ ಪ್ರಮುಖ ರಾಜ ಮನೆತನವೆಂದರೆ ದ್ವಾರಸಮುದ್ರದ ಹೊಯ್ಸಳರು. ಈ ಮನೆತನದಲ್ಲಿ ಕ್ರಿ.ಶ. ೧೨೩೫-೧೨೫೪ರ ವರೆಗೆ ಆಡಳಿತ ನಡೆಸಿದ ವೀರಸೋಮೇಶ್ವರನು ಓರ್ವ ಆಕರ್ಷಕ ವ್ಯಕ್ತಿತ್ವದ ರಾಜನಾಗಿದ್ದಾನೆ. ಈತನ ಕಾಲದಲ್ಲಿ ಪ್ರಮುಖವಾಗಿ ಗರುಡರು ಕಾಣಸಿಗುತ್ತಾರೆ.

ಕೆಲವು ಆದರ್ಶಗಳನ್ನು ಉಳಿಸುವುದಕ್ಕಾಗಿ ಈ ಕಾಲದ ಕೆಲ ಜನರು ತಮ್ಮ ಜೀವನವನ್ನು ಉದಾರವಾಗಿ ತ್ಯಾಗ ಮಾಡುತ್ತಿದ್ದರು. 'ಮೋಕ್ಷ'ವನ್ನು ಹೊಂದುವ ಆಸೆಯಿಂದ ರಾಜನಿಗೆ ಶೌರ್ಯ, ರಾಷ್ಟ್ರಪ್ರೇಮ, ಸ್ವಾಮಿನಿಷ್ಠೆಯನ್ನು ತೋರಿಸುವ ದೃಷ್ಟಿಯಿಂದ, ಗಂಡನಿಗೆ ನಿಷ್ಠೆ ಹೊಂದುವ ಉದ್ದೇಶದಿಂದ ಜನಗಳು ಜೀವಿಸಲು ಬಹಳ ಆಸೆ ಇದ್ದರೂ ಸಂತೋಷದಿಂದ ತಮ್ಮ ಪ್ರಾಣವನ್ನು ತ್ಯಜಿಸುತ್ತಿದ್ದರು. ಈ ರೀತಿ ಪ್ರಾಣ 'ತ್ಯಾಗ'ವನ್ನು ಮಾಡಿಕೊಳ್ಳುವುದು 'ಆತ್ಮಹತ್ಯೆ' ಯಾಗುತ್ತದೆ. ಹಾಗಾಗಿ ಮಹಾಪಾಪವಾದರೂ ಧರ್ಮಶಾಸ್ತ್ರದ ಪ್ರಕಾರ 'ಪವಿತ್ರ' ಎಂಬುದಾಗಿ ಭಾವಿಸಲಾಗಿದ್ದು ರಾಜಮಹಾರಾಜರುಗಳು ಅವಕಾಶ ಕಲ್ಪಿಸಿಕೊಟ್ಟಿದ್ದರು. ಅಲ್ಬುರೊನಿಯ ಪ್ರಕಾರ ಬ್ರಾಹ್ಮಣರು ಮತ್ತು ಕ್ಷತ್ರಿಯರು ಈ ಪದ್ಧತಿಯಿಂದ ನಿಷೇಧಿಸಲ್ಪಟ್ಟಿದ್ದರು.[೧]

ಆತ್ಮಾರ್ಪಣೆಗೆ ಇನ್ನೊಂದು ಕಾರಣವೆಂದರೆ ತಮ್ಮ ನಾಯಕನ ಮೇಲಿನ ನಿಷ್ಠೆ ಹಾಗೂ ಕೃತಜ್ಞತೆ. ಇಂತಹ ವ್ಯಕ್ತಿಗಳನ್ನು 'ವೇಳವಾಳಿ'ಗಳೆಂದು ಕರೆಯಲಾಗುತ್ತಿತ್ತು.[೨] ತಮ್ಮ ನಾಯುಕನು ತೀರಿಕೊಂಡಾಗ ತಮ್ಮ ಪ್ರಾಣವನ್ನು ತ್ಯಜಿಸುವುದಾಗಿ ಅವರು ಆಣೆ ಮಾಡುತ್ತಿದ್ದರು. ಇವರು ಚಿತೆಯನ್ನೇರುವ ಮೂಲಕ ಅಥವಾ ಇರಿದ ಖಡ್ಗಕ್ಕೆ ಬಲಿಯಾಗುವುದರ ಮೂಲಕ ಅಥವಾ ಖಡ್ಗದಿಂದ ತಮ್ಮನ್ನು ತಾವೇ ಇರಿದುಕೊಳ್ಳುವುದರ ಮೂಲಕ ಪ್ರಾಣ ಕಳೆದು ಕೊಳ್ಳುತ್ತಿದ್ದರು. ಹೀಗೆ ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದ ಹೊಯ್ಸಳ ಸದಸ್ಯರ ತಂಡವನ್ನು 'ಗರುಡರು' ಎಂದು ಕರೆಯಲಾಗುತ್ತಿತ್ತು.

ಯೋಧರ ಒಂದು ಗುಂಪು ಅಸ್ತಿತ್ವದಲ್ಲಿತ್ತು ಎಂಬುದರ ಬಗ್ಗೆ ಹೊಯ್ಸಳರ ಶಾಸನಗಳು ನಮಗೆ ಸ್ಪಷ್ಟವಾದ ಮಾಹಿತಿಯನ್ನು ನೀಡುತ್ತವೆ. ಒಂದರ್ಥದಲ್ಲಿ ಈ ತಂಡವು ಹೊಯ್ಸಳರ ಸರ್ವಶ್ರೇಷ್ಠ ಅರಸ ಹಾಗೂ ಅವನ ಕೆಳಗಿನ ಸಾಮಂತ ರಾಜನ ನಡುವೆ ಅಸ್ತಿತ್ವದಲ್ಲಿದ್ದ ವಿಶೇಷ ಸಂಬಂಧಗಳನ್ನು ಸೂಚಿಸುತ್ತವೆ.

'ಗರುಡ' ಎಂಬ ಪದವು ನಾರಾಯಣ ಅಥವಾ ವಿಷ್ಣುವಿನ ವಾಹನವಾಗಿತ್ತೆಂದು ನಂಬಲಾದ ಪುರಾಣದ ಒಂದು ಪಕ್ಷಿ ಎಂಬ ಉಲ್ಲೇಖವನ್ನು ನೀಡುತ್ತದೆ. ಗರುಡವು ನಾರಾಯಣನ ಭಾರವನ್ನು ಹೊತ್ತಂತೆ, ಈ ಯೋಧರ ತಂಡವು ಹೊಯ್ಸಳ ಸಾಮ್ರಾಜ್ಯದ ಹೊರೆಯನ್ನು ವಿಶೇಷ ರೀತಿಯಲ್ಲಿ ಹೊತ್ತರು. ಗರುಡರು ಎಲ್ಲಾ ರೀತಿಯಲ್ಲೂ ದೈಹಿಕವಾಗಿ, ಮಾನಸಿಕವಾಗಿ, ಕೌಟುಂಬಿಕವಾಗಿ ಹಾಗೂ ಸಿರಿಯ ಮೂಲಕವಾಗಿಯೂ ರಾಜರುಗಳೊಂದಿಗೆ ವಿಲೀನವಾಗುತ್ತಿದ್ದರು. ಗರುಡರು ಮತ್ತು ಹೊಯ್ಸಳ ರಾಜರುಗಳ ನಡುವೆ ಸಾಮ್ಯರೂಪತೆ ಎಷ್ಟು ಪೂರ್ಣವಾಗಿ ತ್ತೆಂದರೆ, ಗರುಡರಿಗೆ ಯಾವುದೇ ವೈಯಕ್ತಿಕತೆಯಾಗಲಿ ಅಥವಾ ಅಹಂಕಾರವಾಗಲಿ ಇರಲಿಲ್ಲ. ಅವನು ತನ್ನ ರಾಜನೊಂದಿಗೆ ಅವನ ಸಾವಿನ ನಂತರ ತಾನೂ ತಕ್ಷಣವೇ ಸಾಯುವವನೆಂದು ಭಾಷೆ ಅಥವಾ ಶಪಥವನ್ನು ಮಾಡುತ್ತಿದ್ದನು. ತನ್ನ ಯಜಮಾನನ ಸಾವಿನ ನಂತರ ತನ್ನ ವೈಯಕ್ತಿಕ ಉಳಿವು ನಿರರ್ಥಕ ಎಂದು ಗರುಡಯೋಧರು ತಿಳಿದಿದ್ದರು. ನಾಯಕರ ವಂಶಸ್ಥರ ವೀರ ಸೋಮೇಶ್ವರನಿಗೆ ನಿರಂತರವಾಗಿ ಗರುಡರಾಗುವ ಆಣೆಯನ್ನು ಹೊತ್ತಿರುವುದು ಕಂಡುಬರುತ್ತದೆ.

ಈ ಗರುಡಯೋಧರು ಹೊಯ್ಸಳ ರಾಜ ವ್ಯವಸ್ಥೆಯ ಆಡಳಿತ ಮೇಲ್ವರ್ಗದ ಉನ್ನತ ಶ್ರೇಣಿಯಿಂದ ಬಂದವ ರಾಗಿದ್ದರು. ವೀರಸೋಮೇಶ್ವರನ ಕಾಲದಲ್ಲೂ ಗರುಡರು ಉನ್ನತ ಶ್ರೇಣಿಯವರಾಗಿದ್ದರು. ಉದಾಹರಣೆಗೆ ಮುಗಿಲ ಸಂತತಿಯ ಗರುಡರ ಮೊದಲ ಸದಸ್ಯನಾದ ಗಂಡ ನಾರಾಯಣಶೆಟ್ಟಿಯು ಕಬ್ಬಾಹುನಾಡಿನ ಮಹಾಪ್ರಭು ವಾಗಿದ್ದನು. ಈತನ ವಂಶಸ್ಥರು ವೀರಸೋಮೇಶ್ವರನ ಕಾಲದಲ್ಲಿ

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನಾಗಮಂಗಲ.

ಮಹಾಸಾಮಂತರಾಗಿದ್ದರು.[೭] ಇವರು ಕೇವಲ ಸಾಮಂತರಾಗಿ ಖ್ಯಾತರಾಗಿದ್ದಲ್ಲದೇ ಗರುಡಯೋಧರಾಗಿಯೂ ಸ್ವೀಕೃತರಾಗಿದ್ದರು.

ಗಂಡನಾರಾಯಣಶೆಟ್ಟಿಯು ಯುದ್ಧಪ್ರಿಯ ಗುಣಗಳ ಜೊತೆಗೆ ಅವರ ಇತರೆ ಗುಣಗಳನ್ನು ಈ ಕೆಳಕಂಡಂತೆ ವರ್ಣಿಸಲಾಗಿದೆ[೮].

"ಗಂಡನಾರಾಯಣಶೆಟ್ಟಿಯು, ಕಮಲಕ್ಕೆ ಭಾಸ್ಕರನಿದ್ದಂತೆ, ಮುಗಿಲ ಸಂತತಿಯ ಪ್ರಸಿದ್ಧ ವ್ಯಕ್ತಿ. ಹೊಯ್ಸಳ ರಾಜನ ಪದ್ಮಪಾದಗಳಿಂದ ಮಧುವನ್ನು ಹೀರುತ್ತಿರುವ ಮದವೇರಿದ ಭೃಂಗ, ಪ್ರಸಿದ್ಧ ಮಹಾ ಸಾಮಂತ, ಒಳ ಸಂಚುಕಾರರನ್ನು ಹತ್ತಿಕ್ಕ ವರ್ತಕರ ನಾಯಕತ್ವವನ್ನು ಹೊಂದಿದ ಪರಾಕ್ರಮಿಗಳ ನಾಯಕನು ನಂದೇಶಿಯಿಂದ, ಕನ್ನಡಿಗ ಯೋಧರ ಮುಖ್ಯಸ್ಥರ ಸೇನಾನಾಯಕ. ಹೊಯ್ಸಳ ಲೆಂಕ ನಿಸ್ವಾಲೆಂಕರ ಪೋಷಕ, ಕಿತ್ತುಕೊಳ್ಳುವುದು, ಹಾಗೆಯೇ ಬಿಟ್ಟು ಬಿಡುವ ನಾಯಕರ ಪರಾಕ್ರಮಿ, ಯುದ್ಧಕ್ಕೆ ಬರುವ ಆದರೆ ಹಿಂದಕ್ಕೆ ಓಡುವ ನಾಯಕರ ಪರಾಕ್ರಮಿ ಸೇವುಣ ಸೇನೆಯ ಸಿಂಹಸ್ವಪ್ನ, ಹಣೆಯುಳ್ಳ ಸಾಮಂತರಾಗಿದ್ದ ಗರುಡರ ನಾರಾಯಣ ಅವರ ಮಾತನ್ನು ಮುರಿಯುವ ಲೆಂಕರ ಪರಾಕ್ರಮಿ", (ಬೆಸುಗೆ ತಪ್ಪುವ ಲೆಂಕರ ಗಂದಾರಂ) ಸಂಪತ್ತು, ಹೃದಯ ರಾಜ್ಯಾಡಳಿತ ಚಲನೆಯನ್ನು ದೊಡ್ಡ ಪ್ರಮಾಣದಲ್ಲಿ ಒದಗಿಸಿದ ವಿಷಯವು ಸ್ಪಷ್ಟವಾಗಿದೆ. ಹಾಗೂ ಹೊಯ್ಸಳರ ರಾಜ್ಯ ವಿಸ್ತರಣೆ ನೀತಿಯಲ್ಲಿ ಗರುಡರು ಒಂದು ಪ್ರಮುಖ ಅಸ್ತ್ರವಾಗಿದ್ದರು. ಇಲ್ಲಿ ಕುತೂಹಲಭರಿತವಾದ ಅಂಶವೆಂದರೆ ***ಗರುಡರ ವಂಶಾವಳಿಯ ಪಟ್ಟಿಯಲ್ಲಿ ವರ್ತಕರ ಜಾತಿಯ ಅಂಕಿತವಾದ 'ಶೆಟ್ಟಿ'ಯನ್ನು ಕಡೆಗಣಿಸಿರುವುದನ್ನು ನೋಡುತ್ತೇವೆ.*** ಅದಕ್ಕೆ ಪರ್ಯಾಯವಾಗಿ ಸೇನೆಗೆ ಸಂಬಂಧಿಸಿದ ಅಂತ್ಯ ಪ್ರತ್ಯಯವಾದ **'ನಾಯಕ'**ವು ಕ್ರಮವಾಗಿ ಬರುತ್ತಿರುವುದನ್ನು ಗಮನಿಸುತ್ತೇವೆ. ಇದು ಬಹುಶಃ ಏಕೆಂದರೆ ಒಂದು ವೃತ್ತಿಯಿಂದ ಇನ್ನೊಂದು ವೃತ್ತಿಗೆ ಸಂಪೂರ್ಣ ಬದಲಾವಣೆ ಹೊಂದುವುದಾಗಿತ್ತು. ೧೧೭೯ನೇ ಶಕ ವರ್ಷದ ನಳ ವರ್ಷದಲ್ಲಿ, ವೈಶಾಖದ ಪ್ರಕಾಶವಾದ ೬ನೇ ದಿನವಾದ ಶನಿವಾರದಂದು ಕನ್ನೇಯ ನಾಯಕನು ತನ್ನ ಹೆಂಡತಿಯರ ಜೊತೆ ವುಮ್ಮವ್ವೆ, ಜವನವ್ವೆ ಮತ್ತು ಕಲ್ಲವ್ವೆ ಜೊತೆ, ಹತ್ತು ಮಾನಿಸ ಲೆಂಕಿತಿಯರು, ಇಪ್ಪತ್ತೊಂದು ಮಾನಿಸಂ ಲೆಂಕರ ಜತೆಗೂಡಿ ಗಜ ಮಸ್ತಕದಲ್ಲಿ ಗರುಡನನ್ನು ಆರು ಬಾರಿ ಅಪ್ಪಿಕೊಂಡು ಹೊಯ್ಸಳ ದೊರೆಯಾದ ಸೋಮೇಶ್ವರ ದೇವನ ಭಾಷೆಯನ್ನು ಈಡೇರಿಸಿದರು[೯]. ಗರುಡರ ಆಕ್ರಮಣವನ್ನು ತಾಳಲಾಗದೆ ಆದಿಶೇಷನು ಪಾತಾಳಕ್ಕೆ ಹೋದನು. ಆದರೆ ಇದಕ್ಕೆ ವಿರುದ್ಧವಾಗಿ ಕನ್ನೇಯ ನಾಯಕನು ಭಯಾನಕ ಗರುಡನ ಬಲವನ್ನು ವಿರೋಧಿಸಿದನು. ಅವನನ್ನು ನಡುಗಿಸಿ, ವಶಪಡಿಸಿಕೊಂಡು ಸೌರರಾಜನ ಲೆಂಕವಾಳಿಯನ್ನು ಪ್ರಪಂಚಕ್ಕೆ ತೋರಿಸಿದನು[೧೦]. "ಇನ್ನೇನು ಹೇಳುವುದು ! ಛೇ ! ನನ್ನರಸನ ಸಾವಿನ ನಂತರ ನನ್ನೀಸರನು ನನಗಪಪಾಸ್ಯ, ಲೆಂಕದ ಬಿಂಕದರಸನಾ ಹೇಗೆ ಬದುಕಲಿ". ಈ ರೀತಿ ಹೇಳುತ್ತಾ, ದೇಹವನ್ನು ಕೊಂಕಿಸದೇ, ತಲೆ ತುಂಡರಿಸಿದನು ಮತ್ತು ಧ್ಯಾನಾಸ್ತಕನಂತೆ ಅವನ ಕಾಲಿನ ಮೇಲೆ ಬೊಂಬೆಯಂತೆ ನಿಶ್ಚಲವಾಗಿ ನಿಂತನು ಈ ಸಾಮಂತ ಕಣ್ಣನು ತನ್ನ ಎಡಕಾಲಿಗೆ ಚಿನ್ನದ ಕಾಲಂದಿಗೆಯನ್ನು ತೊಟ್ಟು ಕೀರ್ತಿವಂತನಾದನು. ಕನ್ನೇಯ ನಾಯಕನು ನೋಡುತ್ತಾ ನಿಂತಿರುವಂತೆ ಇಡೀ ಜನಸ್ತೋಮ ನಿಬ್ಬೆರಗಾಯಿತು, ಸಂಬಂಧಿಗರು ಮೂಕರಾದರು ಮತ್ತು ನಾಡಿನ ಎಲ್ಲಾ ಹೆಂಡತಿಯರು ಧೈರ್ಯವನ್ನು ಕೊಂಡಾಡಿದರು. ಕಲ್ಲವ್ವೆ, ಜವನವ್ವೆ ಮತ್ತು ವುಮ್ಮವ್ವೆ, ಪ್ರೀತಿ ಪಾತ್ರ ಪತ್ನಿಯರಾದ ಇವರು ಧೈರ್ಯದಿಂದ ಆಗತಾನೆ ಶಿರಚ್ಛೇದವಾದ ರುಂಡವನ್ನು ಆರತಿಯಂತೆ ಬೆಳಗಿದರು[೧೧].

ಶಾಸನಗಳಲ್ಲಿ ಬರುವ ವಿವರಗಳನ್ನು ಒಟ್ಟುಗೂಡಿಸಿ ಮುಗಿಲ ಗರುಡರ ವಂಶಾವಳಿಯನ್ನು ಹೀಗೆ ರೂಪಿಸಬಹುದು. ವೀರ ಸೋಮೇಶ್ವರನ ಕಾಲದ ಕ್ರಿ.ಶ. ೧೨೫೬ರ ಕೃ.ರಾ. ಪೇಟೆ ತಾಲ್ಲೂಕಿನ ಅಗ್ರಹಾರ ಬಾಚೋಹಳ್ಳಿಯಲ್ಲಿ ದೊರೆತಿರುವ ಶಾಸನ ಸಂಖ್ಯೆ ೮೨ (IV, 9) ಈ ಮಾಹಿತಿ ದೊರೆತಿದೆ.

ಗಂಡನಾರಾಯಣ ಶೆಟ್ಟಿ ಪತ್ನಿ ಮಾರವ್ವೆ (ಬೀಚವ್ವೆ ?)

ಹೊಯ್ಸಳ ಶೆಟ್ಟಿ–ಪತ್ನಿ ಮಾಚವ್ವೆ | ಬೋಕಣ್ಣ | ಬಚ್ಚಮ್ಮ

ಒಬ್ಬೆಯನಾಯಕ | ಕೊರೆಯನಾಯಕ–ಪತ್ನಿಯರು:ಮಾರವ್ವೆ, ಚಿಕ್ಕ ಮಾದವ್ವೆ

ಮಹಾದೇವನಾಯಕ

ಬಲ್ಲೆಯ | ಸಿವನೆಯನಾಯಕ

ಲಖಿಯನಾಯಕ – ಪತ್ನಿ ಗಂಗಾದೇವಿ

ಕನ್ನೇಯನಾಯಕ – ಪತ್ನಿಯರು : ವುಮ್ಮವ್ವೆ, ಕಲ್ಲವ್ವೆ

ರಂಗೇಯನಾಯಕ ಪತ್ನಿಯರು : ಕೇತವ್ವೆ, ಹೊನ್ನವ್ವೆಮಂಚಮ್ಮ

ಸಂಕ್ಷಿಪ್ತವಾಗಿ ಹೇಳುವುದಾದರೆ ಈ ಗರುಡ ಪಂಥವು ಸಾಮಂತ ಯೋಧರಾಜ ವ್ಯವಸ್ಥೆಯ ನೈಸರ್ಗಿಕ ಬೆಳವಣಿಗೆಯ ಮೌಲ್ಯ ಸಿದ್ಧಾಂತವನ್ನು ವಿವರಿಸುತ್ತದೆ. ಈ ಸಾಮಂತರ ಧರ್ಮನೀತಿ ತತ್ವಗಳಿಂದ ನಿಸ್ಸಂದೇಹನಿಷ್ಠೆ, ಅಂತಸ್ತು ಮತ್ತು ಗೌರವದ ಬಲವಾದ ರಕ್ಷಣೆ, ಎಲ್ಲ ಕರ್ತವ್ಯಗಳ ಸಮರ್ಪಕವಾಗಿ ಪೂರ್ಣಗೊಳಿಸುವಿಕೆ ಇವುಗಳು ಈ ಪಂಥದ ಸಿದ್ಧಾಂತವನ್ನು ರೂಪಿಸಿದವು. ಈ ಗರುಡ ಪಂಥವು ೧೩ನೇ ಶತಮಾನದಲ್ಲಿ ಅದರ ಪರಾಕಾಷ್ಠತೆಯ ಮಟ್ಟವನ್ನು ತಲುಪಿತು. ಅವರು ಹೊಯ್ಸಳರಡಿಯ ಸಾಮಂತ ಪದ್ಧತಿಯ ಭಾಗವಾಗಿದ್ದರಿಂದ ಅವರನ್ನು "ಸಾಮಂತರ ಗರುಡ" ಎಂದು ಕರೆಯಲಾಗುತ್ತಿತ್ತು[೧೨]. ಯುದ್ಧ ನೀತಿಯೊಂದಿಗಿನ ಅವರ

ಸಂಬಂಧವು ಅವರಿಗೆ 'ಸಂಗ್ರಾಮ ಗರುಡ' ಎಂಬ ಬಿರುದನ್ನು ಒದಗಿಸಿತ್ತು[೧೨]. ಹಾಗೂ ಅವರ ರಾಜನಿಷ್ಠತೆಯಲ್ಲಿ ಶಾಸನಗಳು ನಮಗೆ ಹೇಳುವಂತೆ ಅವರು ನಿಸ್ಸಂದೇಹವಾಗಿ ವಿಷ್ಣುವಿನ ಗರುಡದಂತಿದ್ದರು. ಈ ರೀತಿಯಾದ ನೀತಿಯುತವಾದ ಮತ್ತು ಶ್ರದ್ಧೆಯುಳ್ಳ ಯೋಧರ ತಂಡದ ನೆರವಿಲ್ಲದೆ ಹೊಯ್ಸಳರ ಕ್ರಿ.ಶ. ೧೨ ಮತ್ತು ೧೩ನೇ ಶತಮಾನದ ರಾಜ್ಯ ವಿಸ್ತರಣೆಯನ್ನು ಊಹಿಸಲು ಅಸಾಧ್ಯ. ಹಾಗಾಗಿ ಗರುಡರು ನಿಸ್ಸಂದೇಹವಾಗಿ ಹೊಯ್ಸಳ ರಾಜ ವ್ಯವಸ್ಥೆಯ ಆಧಾರಸ್ತಂಭವಾಗಿದ್ದರು.

**ವೀರ ಸೋಮೇಶ್ವರನ ಕಾಲದಲ್ಲಿದ್ದ ಗರುಡರು**

| ಕಾಲ | ಗರುಡರು | ಶಾಸನಗಳು ದೊರೆತ ಸ್ಥಳ |
|---|---|---|
| ಕ್ರಿ.ಶ. ೧೨೩೮ | ಗಾವುಡ | ತಮ್ಮಡಹಳ್ಳಿ (ಚಾಮರಾಜನಗರ) |
| ಕ್ರಿ.ಶ. ೧೨೪೦ | ಕವಿ ಗಾವುಡ | (ಚಾಮರಾಜನಗರ) |
| ಕ್ರಿ.ಶ. ೧೨೪೦ | ಗಾವುಡರು | ಗುಂಬಳ್ಳಿ (ಯಳಂದೂರು) |
| ಕ್ರಿ.ಶ. ೧೨೪೧ | ಪ್ರಭುಗಾವುಡರು | ಕಲ್ಕುಂದ |
| ಕ್ರಿ.ಶ. ೧೨೪೨ | ಬೋಚಿ-ಗಾವುಡ | ಹೆಮ್ಮನಹಳ್ಳಿ (ಮೈಸೂರು) |
| ಕ್ರಿ.ಶ. ೧೨೪೨ | ದಮ್ಮ-ಗಾವುಡ | ಚಾಕನಕೆರೆ |
| ಕ್ರಿ.ಶ. ೧೨೪೪ | ಪ್ರಾಚಿ-ಗಾವುಡರು | ಹೊನ್ನೇನಹಳ್ಳಿ (ನಾಗಮಂಗಲ) |
| ಕ್ರಿ.ಶ. ೧೨೪೮ | ಮಾದಿ-ಗಾವುಡ | ತವನಂದಿ (ಹೊಳೇನರಸೀಪುರ) |
| ಕ್ರಿ.ಶ. ೧೨೪೭ | ಆದಿ-ಗಾವುಡ | ಹೀರೆಹಳ್ಳಿ |
| ಕ್ರಿ.ಶ. ೧೨೪೮ | ಕೋವಿ-ಗಾವುಡ | |
| ಕ್ರಿ.ಶ. ೧೨೫೧ | ಮಲ್ಲಿ-ಗಾವುಡ | ಕನ್ನಲಿ (ಮಂಡ್ಯ) |
| ಕ್ರಿ.ಶ. ೧೨ನೇ ಶತಮಾನ | ದಮ್ಮೆ-ಗಾವುಡ | ಚಾಕನಕೆರೆ |
| ಕ್ರಿ.ಶ. ೧೨ನೇ ಶತಮಾನ | ಚಿಕ್ಕ-ಗಾವುಡ | ಗೋವಿಂದಹಳ್ಳಿ |
| ಕ್ರಿ.ಶ. ೧೨ನೇ ಶತಮಾನ | ಸಿರಿಯಾ-ಗಾವುಡ | ದಡ್ಡಮಾಲಗೂಡು (ಮಳವಳ್ಳಿ) |
| ಕ್ರಿ.ಶ. ೧೨ನೇ ಶತಮಾನ | ಕೀರ್ತಿ-ಗಾವುಡ | |

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಅಲ್ಬೂರೊನಿ-೧೧, ಪುಟ ೧೭೦.

೨. E.C. 7, - sk-136-1968.

೩. E.C-9, Cg-44-1077.

೪. See Emile Durkhein - *suicide, trans*. By J.A. Spaulding and C. Sinson ed by George simpson (New York 1951). Durkhein divides suicide in to three categories. a) Cagoistc b) Altusitic c) Anomic

೫. E.C. VI (NS) K.R. pet 77, 1179 A.D. and K.R. Pet 82, 1179 A.D.

೬ Ibid., K.R. pet 82, 1179 A.D.

೭. Ibid., ೮. Ibid., ೯. Ibid., ೧೦. Ibid., ೧೧. Ibid.,

೧೨. SII IX. I, 115-1054 A.D.

೧೩. BKII., 113, 1974 A.D.

ಡಾ. ಡಿ.ಎಂ. ನಾಗರಾಜು*

# ಕಲ್ಯಾಣ ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಶಾಸನಗಳಲ್ಲಿ ಶೈವಧರ್ಮ

ಪ್ರಾಚೀನ ಕರ್ನಾಟಕದಲ್ಲಿನ ಧಾರ್ಮಿಕ ಜೀವನವನ್ನು ನಾವು ಗಮನಿಸಿದಾಗ ಹಿಂದಿನಿಂದಲೂ ಹಲವಾರು ಧರ್ಮಗಳು ಬೆಳೆದುಬಂದಿವೆ.

ಶೈವಧರ್ಮವು ಪ್ರಾಚೀನ ಧರ್ಮಗಳಲ್ಲಿ ಒಂದು ಹಾಗೂ ಅತ್ಯಂತ ಪ್ರಮುಖವಾದಂತಹ ಧರ್ಮವೂ ಕೂಡ ಆಗಿದೆ. ಪ್ರಾರಂಭದಿಂದಲೇ ಶೈವಧರ್ಮಕ್ಕೆ ಪೂರಕವಾದಂತೆ ದೇವಾಲಯಗಳ ನಿರ್ಮಾಣ, ಶಿಲ್ಪಗಳ ರಚನೆ ಹಾಗೂ ಉತ್ತರ ಭಾರತದಿಂದ ವಿಶೇಷವಾಗಿ ಕಾಶ್ಮೀರದಿಂದ ಶೈವಗುರುಗಳ ಆಗಮನ ಮೊದಲಾದ ಚಟುವಟಿಕೆಗಳು ಕ್ರಿ.ಶ. ಒಂದನೇ ಶತಮಾನದಿಂದ ಕ್ರಿ.ಶ. ೬–೭ನೇ ಶತಮಾನಗಳಲ್ಲಿ ನಡೆದಿವೆ. ಶೈವಧರ್ಮವನ್ನು ಅತ್ಯಂತ ಪ್ರಾಚೀನ ಧರ್ಮವೆಂದೂ ಕೂಡ ತಿಳಿಯಲಾಗಿದೆ.

ಆರನೇ ವಿಕ್ರಮಾದಿತ್ಯನ ಕಾಲದ ಧಾರ್ಮಿಕ ಸ್ಥಿತಿಗತಿಗಳಿಗೆ ಪೂರಕವಾಗಿ ಅಂದು ಪ್ರಚಲಿತದಲ್ಲಿದ್ದ ಧರ್ಮಗಳಿಗೆ ಪೀಠಿಕೆಯಾಗಿ ಅವುಗಳ ಬೆಳವಣಿಗೆಯ ಹಿನ್ನೆಲೆ ಅವಶ್ಯಕತೆ ಇದೆ.

ಕಲ್ಯಾಣದ ಚಾಳುಕ್ಯರು ರಾಜ್ಯ ಸ್ಥಾಪನೆ ಮಾಡಿದ ನಂತರದಲ್ಲಿ ಬಹುತೇಕ ವೈಷ್ಣವ ಮತ್ತು ಶೈವ ಧರ್ಮಗಳೆರಡಕ್ಕೂ ಸಮಾನ ಪ್ರಾಧಾನ್ಯತೆ ನೀಡಿದ್ದಾರೆ. ಈ ಕಾಲದಲ್ಲಿ ಕಾಳಾಮುಖ, ಲಾಕುಳ ಹಾಗೂ ಪಾಶುಪತ ಶೈವ ಸಿದ್ಧಾಂತಗಳು ಬಹು ಜನಪ್ರಿಯಗೊಂಡು ಅಂದಿನ ಸಮಾಜದಲ್ಲಿ ಅತ್ಯಂತ ಪ್ರಭಾವಕಾರಿಯಾದಂತಹ ಸ್ಥಾನವನ್ನು ಹೊಂದಿದ್ದವು. ಧಾರ್ಮಿಕ ಚಟುವಟಿಕೆಗಳಲ್ಲಿ ಇವರು ಪ್ರಮುಖ ಪಾತ್ರವಹಿಸುತ್ತಿದ್ದರು. ದೇವಾಲಯಗಳ ಸ್ಥಾನಪತಿಗಳಿಗಾಗಿ ಮಠಗಳನ್ನು ಸ್ಥಾಪಿಸಿ ವಿದ್ಯಾರ್ಜನೆಗೈಯುತ್ತಿದ್ದರು.

ಆರನೇ ವಿಕ್ರಮಾದಿತ್ಯನ ಕಾಲದ ಶಾಸನಗಳನ್ನು ಒಟ್ಟಾರೆಯಾಗಿ ನೋಡಿದಾಗ ಅವನು ಅಧಿಕಾರ ವಹಿಸಿಕೊಂಡ ನಂತರದಲ್ಲಿ ನೂರಾರು ಶೈವ ದೇವಾಲಯಗಳು ರಾಜ್ಯದ ಉದ್ದಗಲಕ್ಕೂ ನಿರ್ಮಾಣವಾಗಿವೆ. ಇವುಗಳ ಜೀರ್ಣೋದ್ಧಾರಕ್ಕೆ ನಿತ್ಯನೈವೇದ್ಯಕ್ಕೆ, ಅಂಗರಂಗಭೋಗಕ್ಕೆ ಇನ್ನಿತರ ಚಟುವಟಿಕೆಗಳಿಗೆ ಸಾಕಷ್ಟು ಪ್ರಮಾಣದಲ್ಲಿ ನೇರವಾಗಿ ಮತ್ತು ಅವನ ಪರವಾಗಿ ಅವನ ಮಾಂಡಳಿಕರು, ದಂಡನಾಯಕರು, ಮಹಾಪ್ರಧಾನರು, ಪೆರ್ಗ್ಗಡೆಗಳು ದಾನ ನೀಡಿದ ದಾಖಲೆಗಳು ವಿಪುಲವಾಗಿವೆ. ರಾಜಪರಿವಾರದಿಂದ ವಿಕ್ರಮಾದಿತ್ಯನ ಮಡದಿಯರು ಅನೇಕ ಶೈವ ಮಠಗಳಿಗೆ ದೇವಾಲಯಗಳಿಗೆ ದಾನ ದತ್ತಿಗಳನ್ನು ನೀಡಿದ ಉಲ್ಲೇಖಗಳು ಕೂಡ ಕಂಡುಬರುತ್ತವೆ.

ಸಾಮಾನ್ಯವಾಗಿ ಶೈವ ದೇವಾಲಯಗಳೊಂದಿಗೆ ಮಠಗಳ ನಿರ್ಮಾಣ ಆಗುತ್ತಿತ್ತು. ವಿದ್ಯೆಯ ಅಧಿದೇವತೆಯಾದ ಸರಸ್ವತಿದೇವಿಯ ಆರಾಧನೆ ಅವುಗಳ ಒಂದು ಮುಖ್ಯ ಭಾಗವಾಗಿತ್ತು. ಹೀಗಾಗಿ ಸರಸ್ವತಿ ದೇವಾಲಯಗಳು ಮಠದ ಭಾಗವಾಗಿ ಈ ಕಾಲದಲ್ಲಿ ಕಂಡುಬರುತ್ತವೆ. ಅದಕ್ಕೆ ಹಲವಾರು ಶಾಸನೋಕ್ತ ದಾಖಲೆಗಳು ಕೂಡ ಇವೆ. ಈ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಮಾಡುವುದು ಹಾಗೂ ಅವುಗಳಿಗೆ ದಾನದತ್ತಿಗಳನ್ನು ಕೊಡುವುದರ ಮೂಲಕ ಶೈವಧರ್ಮದ ಬೆಳವಣಿಗೆಗೆ ಸಹಾಯಕವಾಯಿತು ಎಂದು ಹೇಳಬಹುದು. ವಿಕ್ರಮಾದಿತ್ಯನು ಬನವಾಸಿ ೧೨೦೦೦ ಭಾಗವನ್ನು ನೋಡಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಅವನ ತಂದೆ ಹಾಕಿಸಿದ ಅಮ್ಮಿನಬಾವಿ ಶಾಸನದಲ್ಲಿ (ಕ್ರಿ.ಶ. ೧೦೭೧) ಒಂದು ಶಿವದೇವಸ್ಥಾನವನ್ನು ಕಟ್ಟಿಸಿ ಕುಂದೂರು ನಾಡಿನ ಒಂದು ಅಗ್ರಹಾರಕ್ಕೆ ಅನ್ನದಾನಕ್ಕಾಗಿ ಹಾಗೂ ದೇವಸ್ಥಾನದ ಪೂಜೆಗೋಸ್ಕರವಾಗಿ ದಾನದತ್ತಿಗಳನ್ನು ನೀಡಿದನೆಂದು ತಿಳಿದುಬರುತ್ತದೆ. ಕ್ರಿ.ಶ. ೧೦೭೪ರ ಹಲಗುಂದಿ ಶಾಸನದಲ್ಲಿ ಸೋಳಿಗರ ತೀರ್ಥ ಹಿಡಿಂಬೇಶ್ವರ ಮತ್ತು ಭೀಮೇಶ್ವರ ದೇವರಿಗೆ ಭೂದಾನ ನೀಡಿದ ವಿವರವಿದೆ. ಇದೇ ಕಾಲದ ಸಂಗಮೇಶ್ವರ ಶಾಸನದಲ್ಲಿ ರಾಜನು ಸ್ವಯಂಭು ಸಂಗಮೇಶ್ವರ ದೇವರಿಗೆ ಭೂದಾನ ಮಾಡಿದನು. ವಿಕ್ರಮಾದಿತ್ಯನ ಕಾಲದಲ್ಲಿ ಕಾಳಾಮುಖರ ಚಟುವಟಿಕೆಗಳು ಸಾಕಷ್ಟು ಪರಿಣಾಮಕಾರಿಯಾಗಿ ಬೆಳವಣಿಗೆ ಹೊಂದಿದ್ದವು. ಕಾಳಾಮುಖರ ಎರಡು ಪ್ರಮುಖ ಶಾಖೆಗಳಾಗಿ ಶಕ್ತಿಪರ್ಷೆ ಮತ್ತು ಸಿಂಹಪರ್ಷೆಗಳು ಪ್ರಭಾವಕಾರಿಯಾಗಿ ಬೆಳೆದವು. ಬಳ್ಳಿಗಾವೆ ಒಂದು ಕಾಳಾಮುಖ ಶೈವ ಕೇಂದ್ರವಾಗಿತ್ತು.

* ಭಾರತೀಯ ಪುರಾತತ್ವ ಸರ್ವೇಕ್ಷಣ (ಶಾಸನ ಶಾಸ್ತ್ರ ಶಾಖೆ), ಸಂಕ್ರಾಂತಿವೃತ್ತ, ಹೆಬ್ಬಾಳ ೨ನೇ ಹಂತ, ಮೈಸೂರು.

ವಿಕ್ರಮಾದಿತ್ಯನ ಕಾಲದ ಶಾಸನಗಳನ್ನು ನೋಡಿದಾಗ ಅವುಗಳಲ್ಲಿ ದೇವಾಲಯ ನಿರ್ಮಾಣಕ್ಕೆ ಆಚಾರ್ಯರುಗಳಿಗೆ ಸ್ಥಾನಪತಿಗಳಿಗೆ ಉಪಾಧ್ಯಾಯರುಗಳಿಗೆ ಇತ್ಯಾದಿ ವಿಷಯ ವಸ್ತುಗಳಿಗೆ ದಾನನೀಡಿದ ದಾಖಲೆಗಳು ದೊರೆಯುತ್ತವೆ. ಕ್ರಿ.ಶ. ೧೦೭೭ರ ವಡ್ಡಗೇರಿ ಶಾಸನ ಒಂದು ಪ್ರಮುಖ ಕಾಳಾಮುಖ ಪರಂಪರೆಯ ಕೇಂದ್ರವಾಗಿತ್ತು. ಶ್ರೀ ದಾಯಿಮೇಶ್ವರ ದೇವರನ್ನು ಪ್ರತಿಷ್ಠಾಪಿಸಿ ನಂದಾದೀಪ, ನೈವೇದ್ಯ ಅರ್ಚನೆ, ಚೈತ್ರ ಪವಿತ್ರ ಪೂಜೆಗಳಾಗಿ ದಾನದತ್ತಿಗಳನ್ನು ನೀಡಿದರು. ಕ್ರಿ.ಶ. ೧೦೭೭ರ ಏವೂರು ಶಾಸನ ಸ್ವಯಂಭು ಶಿವದೇವಾಲಯ ಕಟ್ಟಿಸಿದ ಉಲ್ಲೇಖ ನೀಡುತ್ತದೆ. ಕ್ರಿ.ಶ. ೧೦೭೭ರ ಅಂಕಲಗಿಯ ಶಾಸನ ಕಾಳಾಮುಖ ಗುರುಗಳ ವಿವರವನ್ನು ನೀಡುತ್ತವೆ. ಶ್ರೀಮತು ಚಟ್ಟಿಯಷಳಂಗಿಯರ ಸುಪುತ್ರ ತ್ರಿವಿಕ್ರಮ ಷಳಂಗಿಯ ಮತ್ತು ಶ್ರೀ ರುದ್ರಭಟ್ಟೋಪಾಧ್ಯಾಯರ ಹೆಸರುಗಳನ್ನು ಉಲ್ಲೇಖಿಸುತ್ತದೆ. ಇಲ್ಲಿನ ಶಂಕರದೇವ ತ್ರಿಮೂರ್ತಿ ದೇವರ ದೇವಾಲಯವನ್ನು ಮಾಡಿಸಿದ ದಾಖಲೆಯೂ ಹಾಗೂ ಆ ದೇವಾಲಯಕ್ಕೆ ದಾನದತ್ತಿಗಳನ್ನು ನೀಡಿದ ವಿವರವಿದೆ. ಕ್ರಿ.ಶ. ೧೦೭೭–೭೮ರ ಕುರುಡಿ ಶಾಸನ ಪಲ್ಲವೇಶ್ವರ ದೇವರನ್ನು ಉಲ್ಲೇಖಿಸುತ್ತದೆ. ಹಾಗೂ ಊರಿನ ಮಹಾಜನರು ಪೂಜೆ ಪುನಸ್ಕಾರಗಳಿಗೆ ದಾನದತ್ತಿಗಳನ್ನು ನೀಡಿದ ಉಲ್ಲೇಖವಿದೆ. ಲಿಂಗಸೂರು ತಾಲ್ಲೂಕಿನ ತೆಂಗಳಲಾದ ಕ್ರಿ.ಶ. ೧೦೭೯ರ ಶಾಸನದಲ್ಲಿ ಶೈವ ಉಪಾಧ್ಯಾಯನಾದ ತ್ರಿನೇತ್ರ ಶಿವಪಂಡಿತ ಎಂಬುವನು ಕೀರ್ತಿ ಸೋಮೇಶ್ವರ ದೇವಸ್ಥಾನದ ಅಧಿಕಾರವನ್ನು ವಹಿಸಿಕೊಂಡಿರುವ ಉಲ್ಲೇಖವಿದೆ. ಕ್ರಿ.ಶ. ೧೦೭೮–೮೦ರ ಎರಡು ಶಾಸನಗಳು ಆಂಧ್ರಪ್ರದೇಶದ ಆಲಂಪುರಂನಲ್ಲಿ ದೊರಕಿದ್ದು ಅಲ್ಲಿನ ಬ್ರಹ್ಮೇಶ್ವರ ದೇವರಿಗೆ ದಾನದತ್ತಿಗಳನ್ನು ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೦೭೯ರ ನೀಲಗುಂದ ಶಾಸನದಲ್ಲಿ ಮಹಾಜನರು ಮೂಲಸ್ಥಾನ ಸ್ವಯಂಭು ರಾಮೇಶ್ವರದೇವರ ಸೇವೆಗೆ ಭೂಮಿಯನ್ನು ದತ್ತಿಯಾಗಿ ಬಿಟ್ಟಿದ್ದು. ಇಲ್ಲಿನ ಐನೂರು ವ್ಯಾಪಾರಸ್ಥರು ಅಡಿಕೆ ಎಲೆ ಇತ್ಯಾದಿ ವಸ್ತುಗಳನ್ನು ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೦೭೯ರ ಗಳಗನಾಥದ ಶಾಸನದಲ್ಲಿ ಪಲ್ಗುಣಿ ತೀರ್ಥದಲ್ಲಿ ಅಧಿಪತಿಯಾಗಿದ್ದ ಬೊಮ್ಮೆಯ್ಯನು ತನ್ನ ತಾಯಿ ಜೋಗಿಯಬ್ಬೆಯ ನೆನಪಿಗಾಗಿ ಗಳಗೇಶ್ವರ ದೇವಾಲಯದಲ್ಲಿ ಮಂಟಪವನ್ನು ನಿರ್ಮಿಸಿದನು. ಇದೇ ವರ್ಷದಲ್ಲಿ ರಾಮದುರ್ಗದ ಶಾಸನದಲ್ಲಿ ಗರುಡಸೆಟ್ಟಿ ಎಂಬುವವನು ಸೋಮೇಶ್ವರ ದೇವಾಲಯವನ್ನು ಕಟ್ಟಿಸಿದ ಎಂದು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೭೯ರ ಅಂಕಲಗಿ ಶಾಸನ ರುದ್ರಭಟ್ಟೋಪಾಧ್ಯಾಯನ ಮಗಳು ಮುದ್ದಲದೇವಿಯ ಮದುವೆಯ ಸಂದರ್ಭದಲ್ಲಿ ಧರ್ಮವಾಗಿ ತ್ರಿಮೂರ್ತಿ ದೇವಸ್ಥಾನವನ್ನು ನಿರ್ಮಿಸಿರುವ ಉಲ್ಲೇಖವಿದೆ. ಚೆನ್ನತುಂಬಲಮ್ ಶಾಸನದಲ್ಲಿ ಕುಂದೇಶ್ವರ ದೇವರ ಉಲ್ಲೇಖ ಬರುತ್ತದೆ. ಈ ದೇವಾಲಯವನ್ನು ಪೆರ್ಗ್ಗಡೆ ಕಂಬಯ್ಯನು ನಿರ್ಮಿಸಿದ್ದು ಒಂದು ಮತ್ತರು ಗದ್ದೆ ೫೦ ಮತ್ತರು ಕಪ್ಪು ಭೂಮಿ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೦೮೦ರ ತೆರಸಿಕೊಪ್ಪ ಶಾಸನ ಮೂದಲೇಶ್ವರ ಕಲಿದೇವಸ್ವಾಮಿ ದೇವರಿಗೆ ಕರ್ಪೂರಭೂಮಿ ದತ್ತಿ ನೀಡಿದ ವಿವರವಿದೆ. ೧೦೮೦ರ ತುಂಬೂರ ಹೊಸೂರ ಶಾಸನದಲ್ಲಿ ಜೈನಭಕ್ತನಾಗಿದ್ದು ಹಾಗೂ ಪದ್ಮಾವತಿ ದೇವರ ಆರಾಧಕನಾಗಿದ್ದು ವೀರನೊಳಂಬ ಪಲ್ಲವ ಪೆರ್ಮಾನಡಿ ಜಯಸಿಂಹ ದೇವನು ಸರಸ್ವತಿ ದೇವರಿಗೆ ಒಂದು ಕಿವಿ ಉಂಗುರವನ್ನು ದಾನ ನೀಡಿದನೆಂದು ತಿಳಿಸುತ್ತದೆ. ಇದರಿಂದ ಬಹುಶಃ ಅಲ್ಲಿ ಶೈವದೇವಾಲಯವಿದ್ದು ಅದರ ಭಾಗವಾಗಿ ಸರಸ್ವತಿ ದೇವಿಯಿದ್ದು ಬಹುಶಃ ಈ ದಾನವನ್ನು ನೀಡಿದಂತೆ ತೋರುತ್ತದೆ. ಕ್ರಿ.ಶ. ೧೦೮೨ರ ಶಾಸನದಲ್ಲಿ ರುದ್ರೇಶ್ವರ ದೇವರ ಪ್ರತಿಷ್ಠಾಪನೆಯ ಬಗ್ಗೆ ದಾಖಲೆಯಿದೆ. ಇದೇ ಕಾಲದ ತೇಗೂರಿನ ಶಾಸನದಲ್ಲಿ ಕಲಿದೇವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ ಉಲ್ಲೇಖವಿದೆ. ಕ್ರಿ.ಶ. ೧೦೮೨ರ ಆಳಂದ ಶಾಸನವು ಆಳಂದಪುರದ ಸ್ವಯಂಭುದೇವರಿಗೆ ರಾಣಿ ಚಂದಲದೇವಿಯು ಆದಾಯ ದಿಂದ ತೆರಿಗೆ ವಿನಾಯಿತಿ ಮಾಡಿ ಸುಂಕವನ್ನು ರಾಜನ ಅನುಮತಿಯ ಮೇರೆಗೆ ನೀಡಿದಳು ಎಂದು ಹಾಗೂ ದೇವಸ್ಥಾನದ ಅರ್ಚಕರಾದ ಸುರೇಶ್ವರ ಪಂಡಿತನು ಕೂಡ ಕೆಲವು ದಾನಗಳನ್ನು ಸ್ವೀಕರಿಸಿದನೆಂದು ತಿಳಿದುಬರುತ್ತದೆ. ಇದೇ ಕಾಲದ ಕ್ರಿ.ಶ. ೧೦೮೩ ರೋಣ ತಾಲ್ಲೂಕಿನ ಸವಡಿ ಶಾಸನದಲ್ಲಿ ಆಚುಗಿ ಅವನ ಮಗ ಭೂಲೋಕಮಲ್ಲ ಪೆರ್ಮಾಡಿ ಕಿಸುಕಾಡು–೭೦ರ ಭಾಗವನ್ನು ಆಳುತ್ತಿರುವಾಗ ಗಂಗರಸ ಬಾಚಿಮಯ್ಯನು ಸಯಿಡ ಅಗ್ರಹಾರದ ಮೂಲಸ್ಥಾನದೇವರ ಅರ್ಚಕರಾದ ಚಂದ್ರಭೂಷಣ ಪಂಡಿತರಿಗೆ ಭೂದಾನಗಳನ್ನು ನೀಡಿದರು ಎಂದು ತಿಳಿದುಬರುತ್ತದೆ. ಈ ದಾನವನ್ನು ಅಲ್ಲಿನ ೪೦೦ ಮಹಾಜನಗಳ ಸಮ್ಮುಖದಲ್ಲಿ ನೀಡಲಾಯಿತು ಎಂದು ತಿಳಿದುಬರುತ್ತದೆ.

ಕಲ್ಯಾಣ ಚಾಳುಕ್ಯರ ಕಲ್ಯಾಣ ಭೂಮಿಯಾದ ಬೀದರ್ ಬಸವಕಲ್ಯಾಣ ಗುಲ್ಬರ್ಗಾ ಪ್ರದೇಶ ಶೈವ ಮತ್ತು ವೈಷ್ಣವ ಸಂಪ್ರದಾಯಗಳಿಗೆ ಸಾಕಷ್ಟು ವಿವರಗಳನ್ನು ಒದಗಿಸಿವೆ. ಈ ಭಾಗದ ಕಾಳಗಿ, ಸೇಡಂ, ಜಲಸಂಗಿ, ಮರ್ತೂರು, ಇಜ್ಜೇರಿ, ಕುಳಗೇರಿ, ಗೋಗಿ, ರುದ್ರವಾಡಿ ಮೊದಲಾದ ಸ್ಥಳಗಳು ಆ ಕಾಲದ ಪ್ರಮುಖ ಧಾರ್ಮಿಕ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ಕ್ರಿ.ಶ. ೧೦೮೮ರ ಇಜ್ಜೇರಿ ಶಾಸನದಲ್ಲಿ

ಅಹವಮಲ್ಲದೇವನು ಶಂಕರನಾರಾಯಣ ದೇವರ ಅಂಗಭೋಗಕ್ಕೆ ಹಾಗೂ ತಪೋಧನರ ಆಹಾರಕ್ಕೆ ಭೂಮಿ ದಾನ ಮಾಡಿದನೆಂದು ಹೇಳುತ್ತದೆ. ಇದೇ ವರ್ಷದ ಕುಳಗೇರಿ ಶಾಸನದಲ್ಲಿ ಶ್ರೀಮದಗ್ರಹಾರ ಕುಣಿಲಂಗೆಜೆಯ ಪ್ರಮುಖ ಮಹಾಜನಗಳು ರುದ್ರೇಶ್ವರ ದೇವರಿಗೆ ಉತ್ತರಾಯಣ ಸಂಕ್ರಮಣದಲ್ಲಿ ಸೋಮಗ್ರಹಣ ನಿಮಿತ್ತವಾಗಿ ದಾನದತ್ತಿಗಳನ್ನು ನೀಡಿದರು. ಕ್ರಿ.ಶ. ೧೧೨೫ರ ಕುಳಗೇರಿ ಶಾಸನವು ರುದ್ರೇಶ್ವರ ದೇವರನ್ನು ಉಲ್ಲೇಖಿಸುತ್ತದೆ. ಇದೇ ಊರಿನ ಮತ್ತೊಂದು ಶಾಸನ ದಂಡನಾಯಕ ಮಹಾವಿಷ್ಣು ದೇವರಸನು ಕುಣಿಲಂಗೆಜೆಯ ಹಿರಿಯ ಸ್ಥಾನದ ಶ್ರೀ ನಾಗರಾಶಿ ಪಂಡಿತರ್ಗ್ಗೆ ಹಾಗೂ ಇಲ್ಲಿನ ನಾಗೇಶ್ವರ ದೇವರಿಗೆ, ಭೋಗೇಶ್ವರ ದೇವರಿಗೆ ಮತ್ತು ಕಾಮೇಶ್ವರ ದೇವರಿಗೆ ದಾನದತ್ತಿಗಳನ್ನು ನೀಡಿದ ವಿವರವಿದೆ. ಕುಳಗೇರಿಯಲ್ಲಿ ಹಲವಾರು ಶಿವ ದೇವಾಲಯ ಗಳು ಇದ್ದುದಕ್ಕೆ ಈ ಮೇಲಿನ ಶಾಸನಗಳು ದಾಖಲೆ ಒದಗಿಸುತ್ತವೆ.

ಶೈವ ಭಕ್ತರು ಶಿವನ ಆರಾಧಕರಾಗಿ ಅತ್ಯಂತ ಗಟ್ಟಿ ನಂಬಿಕೆಗಳನ್ನು ಹೊಂದಿದ್ದರು. ಶಿವದೇವಾಲಯಗಳಿಗೆ ಯಾವುದೇ ರೀತಿಯ ತೊಂದರೆಗಳು ಉಂಟಾದಲ್ಲಿ ತಮ್ಮ ಪ್ರಾಣವನ್ನು ನೀಡಿದಂಥ ಉಲ್ಲೇಖಗಳಿವೆ. ಇದು ಅವರ ಧಾರ್ಮಿಕ ನಂಬಿಕೆಗಳಿಗೆ ದಾಖಲೆಯಾಗಿದೆ. ಶಿವಾಲಯವನ್ನು ಅನಳಿಯ ಧರ್ಮನಿಮಿತ್ತವಾಗಿ ಗಂಗಾರಾಸಿ ಜೀಯನು ಮಣಿಯಾರಿನ ಶಿವಾಲಯದೊಂದಿಗೆ ಭಾವನಾತ್ಮಕ ಸಂಬಂಧಗಳನ್ನು ಹೊಂದಿದ್ದು ಅದು ಅಳಿದಾಗ ಅಧಿಕಾರಿ ಯನ್ನು ಕೊಂದು ತಾನು ಕೂಡ ಪ್ರಾಣತೆತ್ತು ತನ್ನ ಧಾರ್ಮಿಕ ನಿಷ್ಠೆಯನ್ನು ತೋರಿದ್ದು ತಿಳಿದುಬರುತ್ತದೆ. ಅವನ ಮಗ ಸಿಗರಾಸಿಗೆ ಅತ್ತಿಮಬ್ಬೆ ಚಂದಿಯಕ್ಕನು ಕ್ಷಮೆಯನ್ನು ಕೊಡಲು ಸಿಂಗರಾಸಿಗೆ ಜೀವನ ನಿರ್ವಹಣೆಗಾಗಿ ದಾನವನ್ನು ನೀಡಿದರು ಎಂದು ಶಾಸನ ಉಲ್ಲೇಖಿಸುತ್ತದೆ.

ನಿಂಬರಗಿ ಕೂಡ ಶೈವ ಕೇಂದ್ರವಾಗಿತ್ತು. ಇಲ್ಲಿ ಶ್ರೀಸ್ವಯಂಭು ಕೋಟಿ ಶಂಕರದೇವಸ್ಥಾನ ಶಾಸನೋಕ್ತವಾಗಿದೆ. ಮತ್ತೂರು ಕೂಡ ಶೈವ ಕೇಂದ್ರವೇ ಆಗಿತ್ತು. ಇಲ್ಲಿನ ವಿಜ್ಞಾನೇಶ್ವರನು ಶೈವ ಧರ್ಮವನ್ನು ಪರಿಪಾಲಿಸುತ್ತಿದ್ದ. ಕ್ರಿ.ಶ. ೧೧೯೭ರ ಹರಸೂರಿನ ಶಾಸನದಲ್ಲಿ ಸಾಗರಸೆಟ್ಟಿ ಮತ್ತು ಬಾಳಸೆಟ್ಟಿಯ ಭವನವನ್ನು ಹಾಗೂ ಬಾಳೇಶ್ವರ ವಾಸವಂ (ಬಾಳೇಶ್ವರ ದೇವಸ್ಥಾನ) ಹಾಗೂ ಸಾಗರಸೆಟ್ಟಿಯ ಕೇದಾರೇಶ್ವರ ದಾಸವಂ ಅಂದರೆ ಕೇದಾರೇಶ್ವರ ದೇವಸ್ಥಾನದಲ್ಲಿ ಷಣ್ಮುಖ, ಕೇಶವ, ಗಣಪತಿ, ಸಪ್ತಮಾತೃಕೆ, ವಾಣಿ, ಸರಸ್ವತಿ ಶಿಲ್ಪಗಳನ್ನು ಪ್ರತಿಷ್ಠಾಪಿಸಿದುದರ ಉಲ್ಲೇಖವಿದೆ. ಕ್ರಿ.ಶ. ೧೧೦೭ರ ದಿಗ್ಗಾಂವ ಶಾಸನದಲ್ಲಿ, ಸ್ವಯಂಭು ಸೋಮೇಶ್ವರ ದೇವರ ಉಲ್ಲೇಖ ನಾಗಾಯಿ ಶಾಸನದಲ್ಲಿ, ಕ್ರಿ.ಶ. ೧೦೮೬ ತ್ರೈಪುರುಷ ಉಲ್ಲೇಖ ಕ್ರಿ.ಶ. ೧೧೯೪ರ ನಾಗಾಯಿ ಶಾಸನದಲ್ಲಿ ರಾಮತೀರ್ಥದ ರಾಮೇಶ್ವರ ದೇವರನ್ನು ಗಣಪತಿಯನ್ನು ಪ್ರತಿಷ್ಠಾಪಿಸಿದ ಉಲ್ಲೇಖವಿದೆ. ಇದೇ ಶಾಸನದಲ್ಲಿ ಸಿದ್ದೇಶ್ವರ ದೇವರ ಲೋಕೇಶ್ವರ ದೇವರ ದೇವಾಲಯಗಳ ಉಲ್ಲೇಖಗಳೂ ಕಂಡುಬರುತ್ತವೆ.

ಬಳ್ಳಾರಿ ಪ್ರದೇಶವು ಕೂಡ ಶೈವ ಧರ್ಮದ ಪ್ರವರ್ಧಮಾನ ಕೇಂದ್ರವಾಗಿತ್ತು. ಈ ಭಾಗದಲ್ಲಿ ಹಲವಾರು ಶೈವ ದೇವಾಲಯಗಳು ನಿರ್ಮಾಣವಾಗಿವೆ. ಕ್ರಿ.ಶ. ೧೦೮೨–೮೩ರ ಹೊಳಗುಂಡಿಯ ಶಾಸನದಲ್ಲಿ ಮಹಾಮಂಡಳೇಶ್ವರ ಗಂಗರಸನ ಮಗ ಮಹಾಸಾಮಂತ ಚಾಮುಂಡ ಅರಸನು ಎರಿಕಗಾವುಂಡನ ತಂದೆ ಹೊಳಗುಂಡಿಯಲ್ಲಿ ನಿರ್ಮಿಸಿದ ಶ್ರೀ ಬಾತೇಶ್ವರ ದೇವಾಲಯಕ್ಕೆ ಭೂಮಿಯನ್ನು ದಾನ ಮಾಡಿದನೆಂದು ತಿಳಿಸುತ್ತದೆ. ಕ್ರಿ.ಶ. ೧೧೧೬ರ ಹರಪನಹಳ್ಳಿ ತಾಲ್ಲೂಕಿನ ಬಾಗಳಿ ಶಾಸನ ಇಲ್ಲಿನ ಕಲಿದೇವರಿಗೆ ನಂದಾದೀಪವನ್ನು ದಾನ ನೀಡಿದನು ಎಂದು ತಿಳಿದು ಬರುತ್ತದೆ.

ಉತ್ತರ ಕನ್ನಡ ಜಿಲ್ಲೆಯ ಅಗ್ಗರೆಯಲ್ಲಿ ದೊರೆತ ಕ್ರಿ.ಶ. ೧೧೯೫–೯೬ರ ಶಾಸನದಲ್ಲಿ ಕುಪ್ಪ ಗಾವುಂಡ ಮತ್ತು ಆತನ ಹೆಂಡತಿ ನಾಗಿಯಬ್ಬೆ ಮತ್ತು ಜಕ್ಕಗಾವುಂಡನು ಇಲ್ಲಿ ಶಿವದೇವಾಲಯವೊಂದನ್ನು ಕಟ್ಟಿಸಿ ಅಲ್ಲಿನ ಸ್ಥಾನಪತಿಗಳಾದ ಜನ್ನಯಗಾಳಯ ಶಿಷ್ಯ ಜಕ್ಕಯ್ಯಜೀಯರಿಗೆ ದಾನದತ್ತಿಗಳನ್ನು ನೀಡಿದರೆಂದು ತಿಳಿದುಬರುತ್ತದೆ.

ಆಂಧ್ರಪ್ರದೇಶದ ಭಾಗದಲ್ಲಿ ಶ್ರೀಶೈಲ, ಕುಡುವೇಸಂಗಮ, ಆಲಂಪುರ, ಮಹಾನಂದಿ ಮೊದಲಾದ ನೆಲೆಗಳು ಪ್ರಮುಖ ಶೈವಕೇಂದ್ರಗಳಾಗಿದ್ದವು. ಆಲಂಪುರ ಕ್ರಿ.ಶ. ೧೧೦೭ರ ಶಾಸನದಲ್ಲಿ ಆಲಂಪುರದ ಬ್ರಹ್ಮೇಶ್ವರ ದೇವಾಲಯವು ಶ್ರೀಪರ್ವತದ ಪಶ್ಚಿಮ ಬಾಗಿಲಿದ್ದಂತೆ, ಎಂಬ ಮಾತನ್ನು ಹೇಳುತ್ತಾ ವಿಕ್ರಮಾದಿತ್ಯನ ಮುಖ್ಯ ರಾಣಿಯರಲ್ಲಿ ಒಬ್ಬಳಾದ ಅಭಿನವಸರಸ್ವತಿ ಚಂದಲದೇವಿಯು ಹೇಳಿದ್ದಾಳೆಂದಿದೆ. ಬ್ರಹ್ಮೇಶ್ವರ ದೇವಾಲಯದ ಸ್ಥಾನಪತಿಯಾದ ಧರಣೇಂದ್ರ ರಾಶಿಪಂಡಿತರಿಗೆ ದಾನದತ್ತಿಗಳನ್ನು ನೀಡಿದಳೆಂದೂ ತಿಳಿಸುತ್ತದೆ. ಮೆಡಕ್ ಜಿಲ್ಲೆಯ ಅಲ್ಲಾದುರ್ಗಾ ಶಾಸನದಲ್ಲಿ ನೇರಳಕೇರಿ ಯಲ್ಲಿ ಚಲ್ಲೇಶ್ವರ ದೇವಾಲಯವನ್ನು ನಿರ್ಮಿಸಿದ ವಿವರವೂ ಹಾಗೂ ದೇವಾಲಯದ ದೈನಂದಿನ ಚಟುವಟಿಕೆಗಳಿಗಾಗಿ ಹಲವು ಮತ್ತರು ಭೂಮಿ ನೀಡಿದ ದಾಖಲೆಗಳಿವೆ. ಲೇಮುಲವಾಡದ ಶಾಸನದಲ್ಲಿ ಇದು ಒಂದು ಶೈವಕೇಂದ್ರವಾಗಿ ಹರಿಕೇಶ್ವರ ದೇವಾಲಯವನ್ನು ಹೊಂದಿದ್ದು ಇಲ್ಲಿನ ಸಂಘಪರಿಕೆಯ ಬ್ರಹ್ಮೇಶ್ವರ ಪಂಡಿತರಿಗೆ ದಾನ ನೀಡಿದ

ಬಗ್ಗೆ ಉಕ್ತವಾಗಿದೆ. ರಾಜೇಶ್ವರಾದಿತ್ಯ ಗೃಹ ಬದ್ದೇಗೇಶ್ವರ ನಗರೇಶ್ವರ ಚತು ಸ್ಥಾನಾದಿ ಮಲ್ಲಿಕಾರ್ಜುನ ವ್ಯಕ್ತ ಲಿಂಗಿ ವಿದ್ಯಾರಾಶಿ ವ್ಯಾಖ್ಯಾನಿ ಭಟ್ಟಾರಕರಿಗೆ ನಾಗಮಯ್ಯನ ಮಗ ಪೆದ್ದಣಯ್ಯನು ದಾನದತ್ತಿಗಳನ್ನು ನೀಡಿದ ಉಲ್ಲೇಖವಿದೆ. ಇದೇ ಭಾಗದಲ್ಲಿ ಅಲಪನಳ್ಳಿ ಶಾಸನದಲ್ಲಿ ಶ್ರೀ ಸಾಲೇಶ್ವರ ದೇವರ ಅಂಗಭೋಗಕ್ಕೆ ನೇವೈದ್ಯಕ್ಕೆ ಸೆಟ್ಟಿಕಾರರು, ನಾನಾದೇಶಿಗಳು ಕೂಡಿ ತೆರಿಗೆಗಳನ್ನು ದಾನಬಿಟ್ಟರೆಂದು ಹೇಳುತ್ತದೆ. ಗಂಗಾಪುರ ಶಾಸನದಲ್ಲಿ ಭೀಮೇಶ್ವರ ದೇವರಿಗೆ ಮಹಾಪ್ರಧಾನ ಧರ್ಮ್ಮಮಹೇಶ್ವರ ದಂಡನಾಯಕನು ಭೂದಾನವನ್ನು ನೀಡಿದ ವಿವರವನ್ನು ನೀಡುತ್ತದೆ. ನೇಖೂಂಡ ಶಾಸನದಲ್ಲಿ ಪಟ್ಟ ಮಹಾದೇವಿ ಲಕ್ಷ್ಮಾದೇವಿಯರು ಇವರ ಮಗ ಕುಮಾರ ಪೆರ್ಮಾಡಿ ದೇವನು ಮತ್ತು ಬಿಕ್ಕಿದೇವನು ರಾಮೇಶ್ವರ ದೇವರಿಗೆ ಇಲ್ಲಿ ತಪೋಧನರ ದೇವರ ಬ್ರಹ್ಮಪುರಿನಾಗಿಯಣ್ಣ ಭಟ್ಟನು ಭೂದಾನವನ್ನು ನೀಡಿದರು. ಗೂಡೂರಿನ ಶಾಸನದಲ್ಲಿ ಮಲ್ಲೇಶ್ವರ ದೇವರ ಉಲ್ಲೇಖ ಬರುತ್ತದೆ. ಕೊಣನುಪಾಕ ಶಾಸನದಲ್ಲಿ ಸ್ವಯಂಭು ಸೋಮೇಶ್ವರ ದೇವಸ್ಥಾನವಿದ್ದುದನ್ನು ತಿಳಿಸುತ್ತದೆ.

ಮುನಿರಾಬಾದಿನ ಶಾಸನದಲ್ಲಿ ಶ್ರೀಸೋಮೇಶ್ವರ ದೇವರ ಪ್ರತಿಷ್ಠೆಯ ವಿವರವು ದೊರೆಯುತ್ತದೆ. ಕ್ರಿ.ಶ. ೧೦೯೯ರ ಗಣೇಶವಾಡಿಯ ಶಾಸನ ಭೀಮಸಮುದ್ರದ ದಂಡೆಯ ಮೇಲೆ ತ್ರಿಕೂಟೇಶ್ವರ ದೇವಾಲಯವನ್ನು ನಿರ್ಮಿಸಿ ಅಲ್ಲಿ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರನನ್ನು ಭೀಮನಾಥ ಎಂಬುವವನು ಸ್ಥಾಪಿಸಿದನೆಂದು ತಿಳಿಸುತ್ತದೆ. ಬಿಜಾಪುರ ಜಿಲ್ಲೆಯ ಮಲಗಾಣನ ಶಾಸನದಲ್ಲಿ ತ್ರೈಪುರುಷ ದೇವಾಲಯವನ್ನು ಮಾಡಿಸಿ ಅದರಲ್ಲಿ ಶ್ರೀಮದ್ ಆದಿತ್ಯದೇವರು ಕೇಶವದೇವರು ಮತ್ತು ವಾಮೇಶ್ವರ ದೇವರನ್ನು ಪ್ರತಿಷ್ಠೆ ಮಾಡಿಸಿದನೆಂದು ತಿಳಿಸುತ್ತದೆ. ಕ್ರಿ.ಶ. ೧೧೦೧ರ ಗದಗ ಶಾಸನದಲ್ಲಿ ಶಂಕರನಾರಾಯಣ ದೇವಾಲಯದ ಉಲ್ಲೇಖವಿದೆ. ಹೊಸೂರಿನ ಕ್ರಿ.ಶ. ೧೧೦೩ರ ಶಾಸನದಲ್ಲಿ ಮಾರತೇಶ್ವರ ದೇವಾಲಯ ಕಟ್ಟಲು ಮಹಾಪ್ರಭು ನಾಕಗಾವುಂಡನು ದಾನದತ್ತಿಗಳನ್ನು ನೀಡಿದನು ಎಂದು ಸೂಚಿಸುತ್ತದೆ. ಕ್ರಿ.ಶ. ೧೧೨೦ರ ಶಾಸನ ಮೂಲಸ್ಥಾನ ದೇವರನ್ನು ಹೆಸರಿಸುತ್ತದೆ. ಕುದ್ರಿಯ ಕ್ರಿ.ಶ. ೧೧೨೨ರ ಶಾಸನದಲ್ಲಿ ಮಹಾಮಂಡಳೇಶ್ವರ ನಿಂಬಯ್ಯನು ನಿಂಬೇಶ್ವರ ದೇವಾಲಯ ಕಟ್ಟಿದನೆಂದು ದಾಖಲಾಗಿದೆ. ಕರಡಿಕಲ್ಲಿನ ಸ್ವಯಂಭುಸ್ವಾಮಿನಾಥ ದೊರೇಶ್ವರ ದೇವರ ಕಲಚುರೇಶ್ವರ ದೇವ ಮತ್ತು ಪ್ರಸನ್ನಭೈರವ ದೇವಾಲಯಗಳನ್ನು ಮಹಾಮಂಡಲೇಶ್ವರ ಕರಕರಸನು ನಿರ್ಮಿಸಿದ. ಕ್ರಿ.ಶ. ೧೦೮೩ರಲ್ಲಿ ಅಂಬಳಿಯಲ್ಲಿ ದಂಡನಾಯಕ ಅನಂತ ಪಾಲಯ್ಯನು ಕಲಿದೇವರ ಹಾಗೂ ಧವಳಶಂಕರ ದೇಗುಲಗಳನ್ನು ನಿರ್ಮಿಸಿ ದಾನದತ್ತಿಗಳನ್ನು ನೀಡಿದನು. ಸೋಮಪುರದಲ್ಲಿ ಕ್ರಿ.ಶ. ೧೦೮೦ ಶಾಸನದಲ್ಲಿ ಶಿವ ದೇವಾಲಯವೊಂದನ್ನು ನಿರ್ಮಿಸಿ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದ ವಿವರವಿದೆ. ಕ್ರಿ.ಶ. ೧೦೮೩ರ ಬಿಜಾಪುರ ಶಾಸನದಲ್ಲಿ ಮಹಾಮಂಡಳೇಶ್ವರನ ಭೀವಣದೇವರು ಸಕಳೇಶ್ವರ ದೇವರನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಹಾವೇರಿ ತಾಲ್ಲೂಕಿನ ಹಟ್ಟಿಮಟ್ಟರುವಿನ ಕ್ರಿ.ಶ. ೧೦೮೭ರ ಶಾಸನವು ವಡ್ಡರಾವುಳದ ಸುಂಕಾಧೀಶ್ವರ ದಂಡನಾಯಕ ಶಿವರಾಜನು ಭೋಗೇಶ್ವರ ದೇವಾಲಯವನ್ನು ನಿರ್ಮಿಸಿದ ಬಗ್ಗೆ ಹೇಳಿದೆ. ಕ್ರಿ.ಶ. ೧೦೮೮ರ ಉಕ್ಕುಂದ ಶಾಸನ ದಾಸಗಾವುಂಡ ಎಂಬುವನು ಈಶ್ವರ ದೇವಾಲಯವನ್ನು ನಿರ್ಮಿಸಿ ಅಭಿಮಾನಸಿಂಹ ಪಂಡಿತರಿಗೆ ದೇವಾಲಯವನ್ನು ನೀಡಿದನೆಂದು ತಿಳಿಸುತ್ತದೆ. ಬಿಜಾಪುರ ಕನ್ನೂರಿನಲ್ಲಿ ಕ್ರಿ.ಶ. ೧೦೮೯ರ ಶಾಸನವು ಮಹಾಪ್ರಧಾನ ಕನ್ನಪಯ್ಯನು ಸ್ವಯಂಭು ಚಂಡೇಶ್ವರ ದೇವಾಲಯವನ್ನು ನಿರ್ಮಿಸಿ ಭೂದಾನ ಮಾಡಿದ ಬಗ್ಗೆ ತಿಳಿಸಿದೆ. ಹಾವೇರಿ ತಾಲ್ಲೂಕಿನ ಕ್ರಿ.ಶ. ೧೦೯೨ರ ಶಾಸನದಲ್ಲಿ ಕೋಟೇಶ್ವರ ದೇವರ ಮತ್ತು ಕಲಿದೇವರ ದೇವಾಲಯಗಳ ಉಲ್ಲೇಖವಿದ್ದು ಮಲ್ಲೂರಿನ ಗಾವುಂಡರು ಮತ್ತು ಅಱುವತ್ತೊಕ್ಕಲಿನವರು ದಾನ ನೀಡಿದ ಉಲ್ಲೇಖವಿದೆ. ಬಂಕಾಪುರದ ಕ್ರಿ.ಶ. ೧೦೯೩ರ ಶಾಸನದಲ್ಲಿ ನಕರೇಶ್ವರ ದೇವಾಲಯ ಉಲ್ಲೇಖವಿದೆ. ಮುದೇನೂರು ಕ್ರಿ.ಶ. ೧೦೯೮ರ ಶಾಸನದಲ್ಲಿ ಶಂಕರ ನಾರಾಯಣ ದೇವಾಲಯದ ಉಲ್ಲೇಖವಿದೆ. ಹಾವೇರಿ ತಾಲ್ಲೂಕಿನ ದೇವಗಿರಿ ಕ್ರಿ.ಶ. ೧೧೨೧ರ ಶಾಸನದಲ್ಲಿ ತ್ರಿಭುವನಸಿಂಗಿ ಪಂಡಿತನು ತ್ರಿಭುವನೇಶ್ವರ ದೇವಾಲಯವನ್ನು ನಿರ್ಮಿಸಿದನೆಂದು ಹಾಗೂ ದೇವಾಲಯಕ್ಕೆ ಭೂಮಿದಾನ ನೀಡಿದ ವಿವರವಿದೆ. ಹಾವೇರಿಯ ಕ್ರಿ.ಶ. ೧೧೦೯ರ ಶಾಸನದಲ್ಲಿ ಹಾವೇರಿಯ ಸಿದ್ದೇಶ್ವರ ದೇವರಿಗೆ ಮಹಾಜನಗಳ ಸಮ್ಮುಖದಲ್ಲಿ ದತ್ತಿಯನ್ನು ಬಿಟ್ಟರೆಂದು ತಿಳಿದುಬರುತ್ತದೆ. ಇದೇ ತಾಲ್ಲೂಕಿನ ಅಗಡಿಯಲ್ಲಿ ಬಿರುದರೆ ದೇವನು ಅಗಂಡೆಯಲ್ಲಿ (ಅಗಡಿ) ಬಿರುದೇಶ್ವರ ದೇವಾಲಯವನ್ನು ನಿರ್ಮಿಸಿದನು. ಹಾಗೂ ದೇವಾಲಯದ ಸ್ಥಾನಪತಿಯಾಗಿದ್ದ ವರೇಶ್ವರ ಪಂಡಿತನಿಗೆ ದಾನದತ್ತಿಗಳನ್ನು ನೀಡಿದನೆಂದು ತಿಳಿದುಬರುತ್ತದೆ. ಕ್ರಿ.ಶ. ೧೧೧೬ರ ಗದಗ ಶಾಸನದಲ್ಲಿ ಮಹದೇವನಾಯಕನು ಮಣಿಯರ ಮಲ್ಲಿಕಾರ್ಜುನ ದೇವಾಲಯವನ್ನು ನಿರ್ಮಿಸಿ ದೇವಾಲಯದ ಅಂಗರಂಗ ಭೋಗಕ್ಕೆ ದಾನದತ್ತಿಗಳನ್ನು ನೀಡಿದ ದಾಖಲೆಯಿದೆ. ಹಿರೆಕೆರೂರು ತಾಲ್ಲೂಕಿನ ಕಾಗಿನೆಲೆಯಲ್ಲಿ ಕ್ರಿ.ಶ. ೧೧೨೧ರ ಶಾಸನದಲ್ಲಿ ಕಾಳೇಶ್ವರ ದೇವಾಲಯದ ಉಲ್ಲೇಖವಿದೆ. ಕ್ರಿ.ಶ.

೧೧೨೭ರಲ್ಲಿ ಕಾಳಗಾವುಂಡ ಮತ್ತು ಕಾಳಸೆಟ್ಟಿಯರು ಬ್ರಹ್ಮೇಶ್ವರ ದೇವಾಲಯವನ್ನು ನಿರ್ಮಿಸಿದ ವಿವರವಿದೆ. ರಾಣಿಬೆನ್ನೂರು ತಾಲ್ಲೂಕು ಹೊನ್ನತಿಯ ಕ್ರಿ.ಶ. ೧೧೨೪ರ ಶಾಸನದಲ್ಲಿ ದೇಕಣ್ಣ ಮತ್ತು ನಾಕಣ್ಣ ಎಂಬ ಪ್ರಧಾನರು ಹೊನ್ನವೃತ್ತಿಯಲ್ಲಿ ಚಾಮೇಶ್ವರ ದೇವಾಲಯ ನಿರ್ಮಿಸಿದ ಬಗ್ಗೆ ಹೇಳಿದೆ. ಲಕ್ಷ್ಮೇಶ್ವರ ಶಾಸನದಲ್ಲಿ ಮಹಾಸ್ವಂಯಭು ಸೋಮೇಶ್ವರದೇವರ ಉಲ್ಲೇಖವನ್ನು ನೀಡುತ್ತಾ ಮಹೇಂದ್ರ ಸೋಮಪಂಡಿತ ದೇವನು ಸ್ಥಾನಪತಿಯಾಗಿದ್ದನೆಂದು ಹೇಳಿದೆ. ಮಹಾರಾಷ್ಟ್ರ ರಾಜ್ಯದ ನಾಗಪುರ ಹತ್ತಿರ ಇರುವ ಕ್ರಿ.ಶ. ೧೦೮೭ರ ಸಿತಾಬಾಲ್ಡಿಯಲ್ಲಿ ದೊರೆತ ಶಾಸನದಲ್ಲಿ ಲಾಟಾಕಾವಳ ಮಹಾರಾಷ್ಟ್ರಕೂಟ ದಡಿಯದೇವನು ತ್ರೈಪುರುಷ ದೇವಾಲಯವನ್ನು ನಿರ್ಮಿಸಿದನೆಂದು, ಹಲವಾರು ದಾನದತ್ತಿಗಳನ್ನು ನೀಡಿದನೆಂದು ಉಲ್ಲೇಖವಾಗಿದೆ. ಕ್ರಿ.ಶ. ೧೧೧೦ರ ಮುತ್ತಗಿ ಶಾಸನದಲ್ಲಿ ರಾಮೇಶ್ವರ ದೇವಾಲಯ ನಿರ್ಮಾಣದ ವಿವರವನ್ನು ನೀಡುತ್ತದೆ. ಈ ಶಾಸನದಲ್ಲಿ ಶೈವಗುರುಗಳ ಒಂದು ಸಂಪೂರ್ಣ ಪರಂಪರೆಯ ಚಿತ್ರಣವನ್ನು ನೀಡುತ್ತದೆ. ಇವರೆಲ್ಲರೂ ಕಾಳಾಮುಖ ಪರಂಪರೆಯವರೇ ಆಗಿದ್ದಾರೆ. ವಿಕ್ರಮಾದಿತ್ಯನ ಕಾಲದಲ್ಲಿ ಕಾಳಾಮುಖ ಕೇಂದ್ರಗಳು ರಾಜ್ಯದ ಉದ್ದಗಲಕ್ಕೂ ಹರಡಿಕೊಂಡಿದ್ದು ಶೈವಧರ್ಮವನ್ನು ಪ್ರಚಾರಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿದುವು.

ಕ್ರಿ.ಶ. ೧೧೨೩ರಲ್ಲಿ ಬಾಳಂಬೀಡಿನ ಶಾಸನದಲ್ಲಿ ಬಮ್ಮಗಾವುಂಡನು ಬಳ್ಳಾರಿಯ ಬೀಡಿನಲ್ಲಿ ಬ್ರಹ್ಮೇಶ್ವರ ದೇವಾಲಯವನ್ನು ನಿರ್ಮಿಸಿದುದಾಗಿಯೇ ಬಾಳಂಬೀಡಿನಲ್ಲಿ ಚಿಕ್ಕೇಶ್ವರ ದೇವಸ್ಥಾನದಲ್ಲಿ ಆ ದೇವಸ್ಥಾನಕ್ಕೆ ಸೇರಿದಂತೆ ಚಿಕ್ಕೇಶ್ವರ ಮಠವು ಇರುವುದನ್ನು ತಿಳಿಸುತ್ತದೆ. ಬಳ್ಳಿಗಾವೆ ಒಂದು ಪ್ರಮುಖ ಕಾಳಾಮುಖ ಶೈವತತ್ವ ಕೇಂದ್ರವಾಗಿತ್ತು. ಕೇದಾರಶಕ್ತಿ ಪಂಡಿತನ ಪರಂಪರೆಯವನಾದ ಶ್ರೀಕಂಠ ಪಂಡಿತನು ಸರ್ವವೇದ ಪ್ರವೀಣನಾಗಿದ್ದನು. ಹಾಗೂ ಅವನು ಲಾಕುಳ, ಬೌದ್ಧ, ಲೋಕಾಯುತ ಮೊದಲಾದ ತತ್ವಗಳನ್ನು ತಿಳಿದವನಾಗಿದ್ದು ತನ್ನನ್ನು ತಾನೇ ಲಕುಳೇಶ್ವರ ಎಂಬು ದಾಗಿಯೂ ಹೇಳಿಕೊಂಡಿದ್ದಾನೆ. ಕರಡಿಕಲು, ಕೂಳನುಪಾಕವು ಕಾಳಾಮುಖ ಕೇಂದ್ರವೇ ಆಗಿದ್ದವು.

ಕೊನೆಯದಾಗಿ ಈ ಕಾಲದ ಶೈವ ಧಾರ್ಮಿಕ ಚಟುವಟಿಕೆಗಳನ್ನು ನೋಡಿದಾಗ ಸ್ಪಷ್ಟವಾಗಿ ಶೈವ ಧರ್ಮವು ಪ್ರಥಮ ಆದ್ಯತೆಯ ಧರ್ಮವಾಗಿದ್ದಿತು ಎಂದು ಹೇಳಬಹುದು. ಶೈವಧರ್ಮವೇ ಪ್ರಧಾನವಾಗಿದ್ದರೂ ವೈಷ್ಣವ, ಜೈನ ಧಾರ್ಮಿಕ ಚಟುವಟಿಕೆಗಳೂ ಸಾಕಷ್ಟು ಇವೆ ಎಂಬುದನ್ನು ತಿಳಿಯ ಬಹುದು.

## ಆಧಾರ ಸೂಚಿ


೧. ಎ.ಆರ್.ಐ.ಇ.
೨. **ಎಪಿಗ್ರಾಫಿಯ ಇಂಡಿಕಾ.**
೩. ಎಸ್.ಐ.ಐ. ಸಂಪುಟಗಳು.
೪. **ಎಪಿಗ್ರಾಫಿಯ ಕರ್ನಾಟಕ.**
೫. ಬಿ.ಕೆ.ಐ. ಸಂಪುಟಗಳು.
೬. ಎಚ್.ಎ.ಎಸ್.
೭. ಡಾ. ಪಿ.ಬಿ. ದೇಸಾಯಿ., **ಹಿಸ್ಟರಿ ಆಫ್ ಕರ್ನಾಟಕ.**
೮. ಡಾ. ಡಿ.ಎಂ. ನಾಗರಾಜು., **ಕಲ್ಯಾಣ ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಶಾಸನಗಳ ಸಾಂಸ್ಕೃತಿಕ ಅಧ್ಯಯನ.**

ವೇಮಗಲ್ ಮೂರ್ತಿ*

# ಸೀತಿಬೆಟ್ಟದ ಭೈರವದೇವರಿಗೆ ಸಂದ ಶಾಸನೋಕ್ತ ಗ್ರಾಮದಾನದ ಊರುಗಳು - ಒಂದು ಪರಿಶೀಲನೆ

ಕೋಲಾರದ ವಾಯವ್ಯಕ್ಕೆ ಸುಮಾರು ಇಪ್ಪತ್ತು ಕಿ.ಮೀ. ಹಾಗೂ ಅದೇ ತಾಲೂಕಿನ ವೇಮಗಲ್ಲಿಗೆ ಉತ್ತರದಲ್ಲಿ ಸುಮಾರು ಆರು ಕಿ.ಮೀ. ದೂರದಲ್ಲಿರುವ, ಮೊರಸು ಒಕ್ಕಲಿಗರ ಆರಾಧ್ಯದೈವವಾಗಿರುವ ಭೈರವೇಶ್ವರನು ಸೀತಿಬೆಟ್ಟದ ಶ್ರೀಪತೀಶ್ವರನ ಕ್ಷೇತ್ರಪಾಲಕನಾಗಿ ನೆಲೆ ನಿಂತಿದ್ದಾನೆ. ಸುಮಾರು ಹತ್ತನೆಯ ಶತಮಾನದಿಂದ ಹದಿನೇಳನೆಯ ಶತಮಾನದವರೆಗೂ ಈ ಕ್ಷೇತ್ರದಲ್ಲಿ ಲಭ್ಯವಿರುವ ಶಾಸನಗಳು ಕ್ಷೇತ್ರಪಾಲಕನನ್ನೂ ಹಾಗೂ ಕ್ಷೇತ್ರೇಶ್ವರನಾದ ಶ್ರೀಪತೀಶ್ವರನನ್ನು ಪ್ರಸ್ತಾಪಿಸುತ್ತವೆ. ಬೆಟ್ಟದ ಮೇಲೆ ನೈಸರ್ಗಿಕ ಕಲ್ಲಾಸರೆಯಲ್ಲಿ ನೆಲೆಸಿರುವ ದೇವರನ್ನು ಶ್ರೀಪತೀಶ್ವರ ಎಂದು ಕರೆದಿದ್ದಾರೆ. ಈ ಸೀತಿ ಗ್ರಾಮವನ್ನು ಪ್ರಾಚೀನ ಶಾಸನಗಳಲ್ಲಿ "ಶ್ರೀಪತಿ", "ಶ್ರೀಪತಿಮಲೆ" ಎಂದು ಹಾಗೂ ಅನಂತರದ ಶಾಸನಗಳಲ್ಲಿ ಸೀವತಿ, ಸೀಪತಿ, ಸೀಹತಿ ಎಂದು ಕರೆಯಲಾಗಿದೆ[೧]. ಅದೇ ಇಂದು ಸೀತಿ ಎಂಬ ಹೆಸರಿನಲ್ಲಿ ಕರೆಯಲ್ಪಡುತ್ತಿದೆ. ಈ ಬೆಟ್ಟದ ಮೇಲೆ ದಕ್ಷಿಣಾಭಿಮುಖವಾಗಿ ಕಲ್ಲಾಸರೆಯ ಗುಡಿಯ ಜೊತೆಗೆ ಸುಮಾರು ಕ್ರಿ.ಶ. ೧೦೮೨ರಲ್ಲಿ ರಚಿತವಾದ ಭೈರವೇಶ್ವರ ದೇವರನ್ನು ಶಾಸನಗಳು ತ್ರಿಭುವನಪಡಂಗ ಎಂದು ಕೊಂಡಾಡಿವೆ. ಕೋಲಾರ, ಬೆಂಗಳೂರು, ಚಿಂತಾಮಣಿ ಮುಂತಾದ ಕಡೆಗಳಲ್ಲಿ ಈ ದೇವರಿಗೆ ಹೆಚ್ಚು ಭಕ್ತರಿದ್ದಾರೆ ಎಂದು ತಿಳಿದುಬರುತ್ತದೆ. ಪ್ರಾಚೀನವಾಗಿ ಗಂಗರು, ಚೋಳರು, ಚೋಳಗಂಗರು, ಹೊಯ್ಸಳರು ಅವರ ಮಾಂಡಲೀಕರಾದ ಪೂರ್ವಾದಿರಾಯರು, ಕರಿಯಗಂಗಪೆರುಮಾಳರು, ಬ್ರಹ್ಮಾದಿರಾಯರು ಹಾಗೂ ವಿಜಯನಗರದ ಅರಸರೂ ಈ ದೇವರಿಗೆ ಭಕ್ತರಾಗಿ ನಡೆದುಕೊಂಡು ಬಂದಿದ್ದಾರೆ. ಈ ಸೀತಿಬೆಟ್ಟವು ನೊಳಂಬವಾಡಿಯ ಭಾಗವಾಗಿದ್ದ ಕೈವಾರನಾಡಿನಲ್ಲಿ ಅಂತರ್ಗತವಾಗಿದ್ದಿತು.

ಪೃಥ್ವೀಪತಿಯ ಮಗ ನನ್ನಿಯ ಗಂಗ ಹಾಗೂ ಮೊಮ್ಮಗ ಎರಡನೇ ಪೃಥ್ವೀಪತಿ ಈ ಕೈವಾರ ನಾಡಿನ ಪ್ರದೇಶವನ್ನು ಆಳಿದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಇವರು ಪಲ್ಲವರ ಹಾಗೂ ಚೋಳರ ಆಶ್ರಿತರಾಗಿದ್ದು "ತಮಿಳು ಗಂಗರೆಂದು" ಹೆಸರು ಪಡೆದಿರುತ್ತಾರೆ. ಇವರ ವಂಶದವರೇ ಸೀತಿಬೆಟ್ಟದ ದೇವಾಲಯದ ಬೆಳವಣಿಗೆಗೆ ಹೆಚ್ಚು ಶ್ರಮವಹಿಸಿರುವುದು ತಿಳಿಯುತ್ತದೆ. ಸೀತಿಬೆಟ್ಟದಲ್ಲಿ ಇಂದಿಗೂ ಪ್ರತಿ ವರ್ಷ ಚೈತ್ರಮಾಸದಲ್ಲಿ ಶ್ರೀಪತಿ ಹಾಗೂ ಭೈರವದೇವರಿಗೆ ಐದು ದಿನಗಳ ಜಾತ್ರೆ ನಡೆಯುತ್ತದೆ. ಹೀಗೆ ಪ್ರಖ್ಯಾತಿ ಹೊಂದಿದ ಶ್ರೀಪತಿ ಹಾಗೂ ಭೈರವದೇವರಿಗೆ ಗಂಗರು, ಚೋಳರು, ಹೊಯ್ಸಳರು ಹಾಗೂ ವಿಜಯನಗರದ ಅರಸರು ಅನೇಕ ದಾನದತ್ತಿಗಳನ್ನು ಬಿಟ್ಟಿರುವುದು ಶಾಸನಗಳಿಂದ ತಿಳಿದು ಬರುತ್ತದೆ.

ದೇವಾಲಯದ ದೇವರ ಪೂಜಾಕೈಂಕರ್ಯಗಳಿಗೆ ದತ್ತಿ ನೀಡಿರುವ ಬಗ್ಗೆ ತಿಳಿಸುವ ಶಾಸನಗಳೇ ದೇವದಾನ ಶಾಸನವೆನಿಸುತ್ತವೆ. ಇವುಗಳ ಉದ್ದೇಶ ದೇವಾಲಯದಲ್ಲಿ ಪೂಜಾಕೈಂಕರ್ಯಗಳು ನಿರಂತರ ನಡೆದುಕೊಂಡುಬರಲು ಹಾಗೂ ಆ ದೇಗುಲದಲ್ಲಿ ಪೂಜೆ ಮಾಡುವ ಅರ್ಚಕರಿಗೆ ಜೀವನ ಸಾಗಿಸಲು ಅನುಕೂಲವಾಗಲಿ ಎಂಬುದೆ ಆಗಿದೆ.

ಸೀತಿಯಲ್ಲಿ ದೊರೆತ ಶಾಸನಗಳಲ್ಲಿ ಸರ್ವಮಾನ್ಯವಾಗಿ, ದೇವದಾನವಾಗಿ, ಭೂಮಿಯನ್ನು ದತ್ತಿ ಬಿಟ್ಟಿರುತ್ತಾರೆ. ಅಮೃತಪಡಿಗಾಗಿ, ನಂದಾದೀವಿಗೆಗಾಗಿ ಹಾಗೂ ಇತರೆ ಸೇವೆಗಾಗಿ ದಾನ ಬಿಟ್ಟಿರುವುದೇ ಹೆಚ್ಚು. ಹೀಗೆ ಬಿಟ್ಟ ದಾನಗಳು ಕಾಲಾಂತರದಲ್ಲಿ ನಿಂತುಹೋಗುವುದುಂಟು. ಇದನ್ನು ಮುಂದೆ ಇನ್ನೊಬ್ಬ ಅರಸು ಮುಂದುವರಿಸಿಕೊಂಡು ಹೋಗಲು ಏರ್ಪಾಟು ಮಾಡಿದ ಉದಾಹರಣೆಗಳುಂಟು. ದಾನಗಳನ್ನು ನೀಡುವಾಗ ಗ್ರಾಮಗಳನ್ನೂ ಹಾಗೂ ಗ್ರಾಮಗಳ ಬಳಿ ಇರುವ ಭೂಮಿ, ಹೊಲ, ಗದ್ದೆಗಳನ್ನು ಬಿಟ್ಟಿದ್ದು ಅದರಿಂದ ಬರುವ ಉತ್ಪನ್ನಗಳಿಂದ ದೇವತಾಕಾರ್ಯಗಳನ್ನು ಮುಂದುವರಿಸಿಕೊಂಡು ಹೋಗಲು ವ್ಯವಸ್ಥೆ ಮಾಡಿರುತ್ತಾರೆ. ಉದಾಹರಣೆಗೆ ಕ್ರಿ.ಶ. ೧೪೬೭ರ ಶಾಸನದಲ್ಲಿ ಹೀಗೆ ಹೇಳಿದೆ: ರಾಜೇಂದ್ರ ಚೋಳ, ವೀರಬಲ್ಲಾಳರು ಭೈರವದೇವರ ಅಂಗ, ರಂಗಭೋಗಗಳಿಗೆ ಬಿಟ್ಟ ಗ್ರಾಮಗಳು ಕಾಲಕ್ರಮೇಣ ಕೈತಪ್ಪಿಹೋಗಿ ಕ್ರಿ.ಶ. ೧೪೬೭ರಲ್ಲಿ ಕಠಾರಿ ಸಾಳುವ

*ನಂ. ೧೫೬೫, ೧೭ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ಬಿ.ಎಸ್.ಕೆ. ಫಸ್ಟ್ ಸ್ಟೇಜ್, ಎರಡನೇ ಬ್ಲಾಕ್ ಬೆಂಗಳೂರು - ೫೦.

ಸೀತಿದೇವರಿಗೆ ದತ್ತಿ ಬಿಟ್ಟಿದ್ದ ವೇಮಗಲ್ ಹೋಬಳಿ ಪ್ರದೇಶದ ಶಾಸನೋಕ್ತ ಗ್ರಾಮಗಳು



ನರಸಿಂಗರಾಯರು, ನಿಂತುಹೋಗಿದ್ದ ಪೂಜಾ ಕೈಂಕರ್ಯಗಳು ಪೂರ್ವಮರ್ಯಾದೆ ರೀತಿಯಲ್ಲಿ ನಡೆಯುವಂತೆ ಭೈರವದೇವರಿಗೆ ೧೩ ಗ್ರಾಮಗಳನ್ನು ದಾನ ಬಿಟ್ಟಿರುತ್ತಾರೆ.

ಹೀಗೆ ಬಿಟ್ಟ ದತ್ತಿದಾನಗಳಿಂದ ದೇವರಿಗೆ ಪೂಜಾ ಕೈಂಕರ್ಯಗಳು ಸರಿಯಾಗಿ ನಡೆದುಕೊಂಡು ಬರಲು ಸ್ಥಾನಿಕರನ್ನು ನೇಮಿಸಿರುತ್ತಾರೆ. ಇಲ್ಲಿ ಸ್ಥಾನಿಕರ ಸಂಖ್ಯೆ ನಿಖರವಾಗಿ ಇರುವುದಿಲ್ಲ, ಉದಾಹರಣೆಗೆ ಸೀತಿ ಬೆಟ್ಟದ ಶಾಸನಗಳಲ್ಲಿ ಕ್ರಿ.ಶ. ಸುಮಾರು ೧೫೧೬ರ ಶಾಸನದ ಪ್ರಕಾರ ೨೮ ಜನ ಸ್ಥಾನಿಕರು ಇದ್ದರೆ, ಕ್ರಿ.ಶ. ೧೬೬೩ರ ಶಾಸನದಿಂದ ೮ ಜನ ಸ್ಥಾನಿಕರು ಇದ್ದರೆಂದು ತಿಳಿದುಬರುತ್ತದೆ[೨]. ಶಾಸನಗಳಲ್ಲಿ ಸ್ಥಾನಿಕರ ಹೆಸರುಗಳನ್ನು ಹೇಳಿದ್ದಾರೆ. ಉದಾಹರಣೆಗೆ ಕ್ರಿ.ಶ. ೧೫೨೮ರ ಶಾಸನದಲ್ಲಿ ಸ್ಥಾನಿಕರ ಹೆಸರನ್ನು ಚೆಂದವಟ್ಟ ನಂಜಪಜೀಯರ ಮಗ ಕಾಳಚಂದಪ್ಪಜೀಯರು ಎಂದೂ, ೧೬೧೭ರ ಶಾಸನದಲ್ಲಿ ಮತ್ತೊಬ್ಬ ಸ್ಥಾನಿಕರ ಹೆಸರು ಯೇಚಣ್ಣ ಎಂದು ತಿಳಿದುಬರುತ್ತದೆ.

ಸುಮಾರು ಕ್ರಿ.ಶ. ೧೧೦೫ ರಿಂದ ೧೬೫೩ರ ವರೆಗಿನ ಶಾಸನಗಳು ಈ ದೇವರಿಗೆ ನಿರಂತರವಾಗಿ ಪೂಜೆ ಸಾಗಲೆಂದು ಹಲವಾರು ಪುರಧರ್ಮ ದಾನಗಳನ್ನು ನೀಡಲಾಗಿದೆ. ಡಾ. ಕೆ.ವಿ. ಕೃಷ್ಣಮೂರ್ತಿಯವರು ತಮ್ಮ 'ಪುರಧರ್ಮ ಶಾಸನಗಳು-ಒಂದು ಅವಲೋಕನ' ಎಂಬ ಲೇಖನದಲ್ಲಿ ಕವಿತ್ವ ಮುಂತಾದ ಮನರಂಜನಾತ್ಮಕ ವಿಷಯಗಳಲ್ಲಿ ಪ್ರತಿಷ್ಠಿತರಾದ ವ್ಯಕ್ತಿಗಳಿಗೆ ಪುರಸ್ಕಾರ ರೂಪದಲ್ಲಿ ನೀಡಲಾಗುತ್ತಿದ್ದ ಗ್ರಾಮಗಳೇ ಪುರಗಳು ಎಂದು ಅನಿಸಿಕೊಳ್ಳುತ್ತಿದ್ದವು ಎಂದು ತಿಳಿಸಿದ್ದಾರೆ.[೩] ಆದರೆ ಕಾಲಾಂತರದಲ್ಲಿ ಇವು ತಮ್ಮ ಸ್ವರೂಪವನ್ನು ಮಾರ್ಪಡಿಸಿ ಕೊಂಡಿರುವುದು ಕಂಡುಬರುತ್ತದೆ ಎಂದು ಹೇಳಿ, ದೇವಾಲಯ, ಮಠ, ಪಂಥ, ಇತ್ಯಾದಿ ಸಂಸ್ಥೆಗಳ ನೇತಾರರಾದ ಅಯ್ಯನವರು, ಯತಿಗಳು, ಒಡೆಯರು ಮೊದಲಾದವರಿಗೆ ಪುರಸ್ಕಾರ ಪೂರ್ವಕವಾಗಿ, ಸರ್ವಮಾನ್ಯವಾಗಿ ಪುರಧರ್ಮ-ದಾನ ನೀಡಿರುವುದು ಕಂಡುಬರುತ್ತದೆ ಎಂದು ಹೇಳಿರುತ್ತಾರೆ. ಕಾಲಾಂತರದಲ್ಲಿ ಇಂತಹ ಪುರಧರ್ಮಗಳನ್ನು ದೇವಾಲಯ, ಮಠ ಅಥವಾ ಪಂಗಡಗಳಲ್ಲಿನ ಧಾರ್ಮಿಕ ಕಾರ್ಯಗಳಾದ ನೈವೇದ್ಯ, ಅಂಗ, ರಂಗವೈಭವ, ರಥೋತ್ಸವ, ಅಭಿಷೇಕ, ಪೂಜೆ, ದೀಪರಾಧನೆ ಮೊದಲಾದ ಅಮೃತಪಡಿಗೆ ಸಂಬಂಧಿಸಿದ ಕಾರ್ಯಗಳು ಸಾಂಗವಾಗಿ ಸಾಗಲೆಂಬ ಆಶಯದಿಂದ ಪುರಧರ್ಮಗಳನ್ನು ಬಿಟ್ಟಿರುವುದು ಕಂಡುಬರುತ್ತದೆ ಎಂದು ಹೇಳಿದ್ದಾರೆ. ಇದನ್ನು ನೀಡುವವರು ರಾಜರು ಅಥವಾ ಸ್ಥಳೀಯ ಮಾಂಡಲೀಕರೋ, ದಂಡಾಧಿಪತಿಗಳೋ, ಆಡಳಿತಾಧಿಕಾರಿಗಳೋ ಆಗಿರುತಾರೆ. ಹೀಗೆ ಬಿಡುವ ಉದ್ದೇಶ ತಮ್ಮ ಅರಸುಗಳಿಗೆ ಧರ್ಮವಾಗಬೇಕೆಂದೂ, ಪುಣ್ಯವಾಗಬೇಕೆಂದೂ ಪುರಧರ್ಮ ಬಿಟ್ಟಿರುತ್ತಾರೆ. ಅವುಗಳಲ್ಲಿ ಹಲವಾರು ಗ್ರಾಮಗಳು ತಮ್ಮ ಮೂಲಸ್ವರೂಪವನ್ನು ಇಂದಿಗೂ ಉಳಿಸಿಕೊಂಡಿವೆ. ಉದಾ: ಸೀತಿಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಪುರ ಎಂಬುದೊಂದು ಊರು ಇದೆ. ಶಾಸನಗಳು ಪುಳಿಯಂಪಳ್ಳಿ ಎಂದು ಕರೆದಿದ್ದು, ಈಗ ಇದನ್ನು ಪುರ/ಪುರಹಳ್ಳಿ ಎಂದು ಕರೆಯುತ್ತಿದ್ದಾರೆ.

ಇಂದಿನ ಕೋಲಾರ ತಾಲೂಕಿನ ವೇಮಗಲ್ ಹೋಬಳಿ ಹಾಗೂ ಚಿಂತಾಮಣಿ ತಾಲೂಕಿನ ಕೈವಾರ ಹೋಬಳಿ ಹಾಗೂ ಹೊಸಕೋಟೆ ತಾಲೂಕಿನ ನಂದಗುಡಿ ಹೋಬಳಿಗಳ ಪ್ರದೇಶದಲ್ಲಿ ಈ ದೇವರಿಗೆ ನೀಡಿರುವ ಪುರಧರ್ಮದ ದಾನಗ್ರಾಮಗಳನ್ನು ಗುರುತಿಸುವುದೇ ಈ ಲೇಖನದ ಮುಖ್ಯ ಉದ್ದೇಶ.

ಈ ಭಾಗದ ಜನರು ಇಂದಿಗೂ ಈ ದೇವರಿಗೆ ನಿಷ್ಠರಾಗಿರುವುದಕ್ಕೆ ಆ ಪ್ರದೇಶದ ಜನರು ಇಟ್ಟುಕೊಳ್ಳುವ ಹೆಸರುಗಳೇ

## ಸೀತಿ ಭೈರವೇಶ್ವರನಿಗೆ ಸಂದ ದಾನದತ್ತಿ ಗ್ರಾಮಗಳ ಪಟ್ಟಿ

| ಕ್ರಮ ಸಂಖ್ಯೆ | ಶಾಸನದ ಆಕರ | ಕಾಲ | ಶಾಸನೋಕ್ತ ಗ್ರಾಮ | ಈಗಿನ ಹೆಸರು | ದಾನ ಕೊಟ್ಟವರ ಹೆಸರು | ಯಾವ ದಾನ ಏತಕ್ಕಾಗಿ |
|---|---|---|---|---|---|---|
| ೧. | ಎ.ಕ. XVII ಕೋಲಾರ ೩೪೫ | ಕ್ರಿ.ಶ. ೧೧೨೦ | ವಡಕರೆ ಮರುದೇರಿ | ಮದ್ದೇರಿ | ವೀರಗಂಗ ಪೂಯ್ಸಳ ದೇವರ್ | ಶ್ರಾವಣ ಮಾಸದ ದೇವದಾನವಾಗಿ |
| ೨. | ಎ.ಕ. XVII ಕೋಲಾರ ೩೩೦ | ಕ್ರಿ.ಶ. ೧೨೬೩ | ಬುಧನಾಡಲ್ಲಿ ವಂಗಾಪತಿ ಪಿಡಾಗೈಯಲ್ಲಿ, ತಿತ್ತಂಡೂರಿನಲ್ಲಿ | | ವಾಸುದೇವನೆಂಬುವನು | ದೇವದಾನ ಸುಪ್ರಭಾತ ನೈವೇದ್ಯಕ್ಕೆ ಜಮೀನು, ಹೊಲ, ಗದ್ದೆ |
| ೩. | ಎ.ಕ. X ಕೋಲಾರ ೪೧ | ಕ್ರಿ.ಶ. ೧೨೬೮ | ಸಿರಿಯನಲ್ಲಾಲಂ | | ಸಂಬು ಕುಲೋತ್ಭವನು, ಗೋದಾವರಿ ವಲ್ಲವನ್ 'ತಮ್ಮಜಯನು' | ಮದ್ಯೆ ವೇಳೆ ನೈವೇದ್ಯಕ್ಕೆ ಹೊಲ, ಗದ್ದೆ, ಭೂಮಿ |
| ೪. | ಎ.ಕ. X ಕೋಲಾರ ೪೯ | ಕ್ರಿ.ಶ. ೧೨೮೦ | ಪುಳಿಯಂಪಳ್ಳಿ | ಪುರಹಳ್ಳಿ | ಶೆಲ್ವಗಂಗನ ಮಗ ಕರಿಯ ಗಂಗ ಪೆರುಮಾಳ್ | ತಿರುಮಂಟಪಕ್ಕೆ ಹೊಲ, ಗದ್ದೆ, ಜಮೀನು ದೇವದಾನವಾಗಿ |
| ೫. | ಎ.ಕ. X ಕೋಲಾರ ೫೪ | ಕ್ರಿ.ಶ. ೧೨೮೦ | ಶ್ರೀಪತಿ ಕಳ್ಳಪ್ಪಳ್ಳಿ | ಸೀತಿ ಕಳ್ಳಹಳ್ಳಿ | ಶ್ರೀಭೋಸನ ವೀರಬಲ್ಲಾಳ ದೇವರ ಮಗ ಪೆರಿಯಮಲ್ಲಪ್ಪ ದಣ್ಣಾಯಕ್ಕರು | ಸರ್ವಮಾನ್ಯ |
| ೬ | ಎ.ಕ. X ಕೋಲಾರ ೪೮ | ಕ್ರಿ.ಶ. ೧೨೮೧ | ಪುಳಿಯಪ್ಪಳ್ಳಿ | ಪುರಹಳ್ಳಿ | ಗಂಗಪೆರುಮಾಳ್ ಮಗ ವಸುದೇವನ್ | ದೇವದಾನವಾಗಿ ಹೊಲ, ಗದ್ದೆ, ಜಮೀನು ಹಾಗೂ ಕಿಲಾಸನ್ ಕೆರೆಯನ್ನು ದೇವದಾನವಾಗಿ |
| ೭. | ಎ.ಕ. X ಕೋಲಾರ ೪೬ . | ಕ್ರಿ.ಶ. ೧೨೮೪ | ಮಾಡಕ್ಕೆರೈ | | ಗಂಗಪೆರುಮಾಳ್ | ಸರ್ವಮಾನ್ಯವಾಗಿ ಹೊಲ, ಗದ್ದೆ |
| ೮. | ಎ.ಕ. XVIII ಕೋಲಾರ ೩೩೧ | ಕ್ರಿ.ಶ. ೧೨೮೫ | ಕೋನೂರು | | ಪೆರುಮಾಳ್ | ನೈವೇದ್ಯಕ್ಕೆ ಕೋನೂರು ಕೆರೆಯಲ್ಲಿ ಐದು ಖಂಡಗ ಗದ್ದೆ |
| ೯. | ಎ.ಕ. XVIII ಕೋಲಾರ ೩೩೨ | ಕ್ರಿ.ಶ. ೧೨೮೫ | ಪುಳಿಯಂಬಳ್ಳಿ | ಪುರಹಳ್ಳಿ | ವಾಸುದೇವರ ಮಗನು ಗಂಗಪೆರುಮಾಳ್ | ದಾನ ತಿಳಿಯುತ್ತಿಲ್ಲ |
| ೧೦. | ಎ.ಕ. X ಕೋಲಾರ ೪೫ | ಕ್ರಿ.ಶ. ೧೨೮೭ | ಮೂವಾರು | | ವಾಸುದೇವನು | ಸರ್ವಮಾನ್ಯ ಹೊಲ, ಗದ್ದೆ |

| | | | | | | |
|---|---|---|---|---|---|---|
| ೧೧. | ಎ.ಕ. XVII ಕೋಲಾರ ೩೨೯ | ಕ್ರಿ.ಶ. ೧೨೯೯ | ಮಳೈ | ಮಲೆಯಪ್ಪನ ಹಳ್ಳಿ | ವೀರಗಂಗರ ಮಗ ಮಳ್ಳೈಯ ಪೆರುಮಾಳ್ | ಹೊಲ, ಗದ್ದೆ ಉದಕ ಮಾಡಿ |
| ೧೨. | ಎ.ಕ. XVII ಕೋಲಾರ ೩೨೮ | ಕ್ರಿ.ಶ. ೧೨೯೩ | ಕಳ್ಳಪ್ಪಳ್ಳಿ ಪ್ರುಳಿಯಂಬಳ್ಳಿ ನಲ್ಲಾಲಂ ಕುಮ್ಮೈಕಲ್ | ಕಳ್ಳಹಳ್ಳಿ ಪುರಹಳ್ಳಿ | | ದೇವದಾನ, ಹೆಣ್ಣು ಕುದುರೆ ಇದರಲ್ಲಿ ಹುಟ್ಟಿದ ಮರಿಗಳ ಮೇಲಿನ ತೆರಿಗೆ ದೇವರ ಸೇವೆಗೆ |
| ೧೩. | ಎ.ಕ. X ಕೋಲಾರ ೩೮ | ಕ್ರಿ.ಶ. ೧೨೯೯ | ಮಾಲಿಯೂರು | ಶ್ರೀ ರಾಜ ರಾಜ ಮಹಾರಾಜ ಕರ್ಕಟಕ ಮಾಲೂರು | | ಹೊಲ, ಗದ್ದೆ, ಸಾಗೋಳಿ ಭೂಮಿ ಬಾವಿ, ಮರ ಅಲ್ಲಿರುವ ಭೂಮಿ ದೇವರ ಸೇವೆಗೆ |
| ೧೪. | ಎ.ಕ. XVII ಕೋಲಾರ ೩೩೨ | ಕ್ರಿ.ಶ. ೧೩೦೨ | ಶ್ರೀಪತಿ | ಸೀತಿ | ಮರೈಪುಕ್ಕರಾಮನ್ ಸೊಣ್ಣನಾಯನ್ | ಮಠದಾನ |
| ೧೫. | ಎ.ಕ. XVII ಕೋಲಾರ ೩೩೭ | ಕ್ರಿ.ಶ. ೧೩೦೯ | ನೊಂಡಂಗುಳಿ | ನಂದುಗುಡಿ | | ಸಂದಿಕಾಲದ ನೈವೇದ್ಯಕ್ಕೆ ಸಂತೆಯಲ್ಲಿ ನೂರಕ್ಕೆ ಒಂದು ಹೊರೆ ಅಡಕೆ |
| ೧೬. | ಎ.ಕ. XVII ಕೋಲಾರ ೩೩೪ | ಕ್ರಿ.ಶ. ೧೩೧೭ | ನೊಂಡಂಗುಳಿ | ನಂದುಗುಡಿ | | ಪೂಜೆಗೆ, ದೀಪಾರಾದನೆಗೆ ಸರ್ವಸಾಮಾನ್ಯವಾಗಿ ಬಿಟ್ಟಿರುವುದು |
| ೧೭. | ಎ.ಕ. XVII ಕೋಲಾರ ೩೩೬ | ಕ್ರಿ.ಶ. ೧೩೩೮ | ಕಳ್ಳಪ್ಪಳ್ಳಿ | ಕಳ್ಳಹಳ್ಳಿ | ಶ್ರೀಪೂಯ್ಸಳ ವೀರ ವಲ್ಲಾಳ ದೇವರ ಕುಮಾರರು ಮಹಾಪ್ರದಾನ ಶ್ರೀ.. ದಣ್ಣಾಯಕರು ತಮ್ಮ ಹಿರಿಯ ವಲ್ಲಪ್ಪ ದಣ್ಣಾಯಕರು | ಸರ್ವಮಾನ್ಯ ನೈವೇದ್ಯಕ್ಕೆ |
| ೧೮. | ಎ.ಕ. XVII ಕೋಲಾರ ೩೩೨ | ಕ್ರಿ.ಶ. ೧೩೬೧ | ಚೆಂಜಿಮಲೆ | ಚೆಂಜಿಮಲೆ | ಲಕ್ಕರಸರ ಕುಮಾರ | ನೈವೇದ್ಯಕ್ಕೆ ತಿರುನಂದಾ ವೆಳಕಿಗೆ, ಇದರ ಜೊತೆಗೆ ಬಂಗಾರ ವನ್ನು ಕೊಟ್ಟಿದ್ದಾರೆ |
| ೧೯. | ಎ.ಕ. X ಕೋಲಾರ ೩೯ | ಕ್ರಿ.ಶ. ೧೩೯೪ | ಪಟ್ಟಿಯೂರು ಕುರಂಬೂರು ಶ್ರೀಪತಿ | ಕುರುಬೂರು ಸೀತಿ | ಚೊಕ್ಕಪ್ಪನ ಮಗ... ಕುರಂಬೂರಿನ ವೈಯಪ್ಪನು | ಶ್ರೀಪತಿಯಲ್ಲಿ ದೊಡ್ಡ ಕೆರೆಯನ್ನು ಕಟ್ಟುವಾಗ ದಕ್ಷಿಣದಲ್ಲಿ ಪೆರಿಯ ಪೆರುಮಾಳಿನ ಎರಡು ಖಂಡಗ ಬೆಳೆಯುವ ಜಮೀನುಕೊಡತಕ್ಕದ್ದು ಸರ್ವಮಾನ್ಯವಾಗಿ |
| ೨೦. | ಎ.ಕ. X ಕೋಲಾರ ೩೩ | ಕ್ರಿ.ಶ. ೧೪೬೭ | ಸೀಹತ್ತಿ ಮಠಪುರ ಕಳೆಯಹಳ್ಳಿ | ಸೀತಿ ಮಠಪುರ ಕಳ್ಳಹಳ್ಳಿ | ಹೊಯ್ಸಳ ವೀರಬಲ್ಲಾಳ | ನಿಂತುಹೋಗಿದ್ದ ಪೂಜೆ ಇತರೆ ಕೈಂಕರ್ಯಗಳು |

|  |  |  |  |  |  |  |
|---|---|---|---|---|---|---|
|  |  |  | ಮಡವಳ<br>ಮದ್ದೇರಿ<br>ಚೆಂಜಿಮಲೆ<br>ಬಇರಂಡಳ್ಳಿ<br>ಮಲ್ಲಂಡಪಳ್ಳಿ<br>ಚೋಳಘಟ್ಟ<br>ದಡಿಯರಹಳ್ಳಿ<br>ಹುಲ್ಲನಕಲ್ಲ<br>ಮಾರಗೊಂಡನಹಳ್ಳಿ<br>ಕಾಮಾಂಡೆಹಳ್ಳಿ | ಮಡಿವಾಳ<br>ಮದ್ದೇರಿ<br>ಚಂಜಿಮಲೆ<br>ಬೈರಂಡಹಳ್ಳಿ<br>ಮಲ್ಲಂಡಹಳ್ಳಿ<br>ಚೋಳಘಟ್ಟ<br>– –<br>ಹುಲ್ಲನಕಲ್ಲು<br>– –<br>ಕಾಮಂಡಹಳ್ಳಿ |  | ಪೂರ್ವಮರ್ಯಾದೆ ರೀತಿಯಲ್ಲಿ ನಡೆಯುವಂತೆ ದಾನವಾಗಿ ಬಿಟ್ಟಿರುವ ಗ್ರಾಮಗಳು |
| ೨೧. | ಎ.ಕ. X ಕೋಲಾರ ೩೫ | ಕ್ರಿ.ಶ. ೧೪೬೮ | ಮರವಾಳಹಳ್ಳಿ |  | ಸಾಂಬ್ಯೊಯ ನಾಯ್ಕರ ಕುಮಾರ ಚಿವುಯ ನಾಯಕರು | ಸುವರ್ಣ ಪಾತ್ರಕ್ಕೆ ಒಂದು, ನಂದಾದೀವಿಗೆಗೆ ಒಂದು |
| ೨೨. | ಎ.ಕ. X ಕೋಲಾರ | ಕ್ರಿ.ಶ. ೧೨೮೯ | ಓದುವಾನ್ ಕುಟ್ಟೈ |  | ಮಲ್ಲೆಯ ಪೆರುಮಾಳ್ | ಹೊಲ, ಗದ್ದೆಗಳು |
| ೨೩. | ಎ.ಕ. X ಕೋಲಾರ | ಕ್ರಿ.ಶ. ೧೪೦೧ | ತಿರಿಯಾಲ |  | ಮಾದನಾಯಕ | ಸರ್ವಮಾನ್ಯವಾಗಿ |
| ೨೪. | ಎ.ಕ. X ಕೋಲಾರ | ಕ್ರಿ.ಶ. ೧೬೬೩ | ಮುಳ್ಳುಕುಂಟೆ |  |  |  |

ಸಾಕ್ಷಿ. ಉದಾಹರಣೆಗೆ – ಭೈರೇಗೌಡ, ಭೈರಪ್ಪ, ಭೈರಮ್ಮ, ಭೈಚಮ್ಮ ಇತ್ಯಾದಿ.

ಈ ಪ್ರದೇಶದಲ್ಲಿ ಕೆಲವು ಗ್ರಾಮದ ಹೆಸರುಗಳು ಇಂದಿಗೂ ತಮ್ಮ ಮೂಲನಾಮವನ್ನು ಹೊಂದಿವೆ. ಉದಾಹರಣೆಗೆ – ಮಠಪುರ, ಚೋಳಘಟ್ಟ, ಮಲ್ಲಂಡಹಳ್ಳಿ, ಚಂಜಿಮಲೆ ಇತ್ಯಾದಿ. ಕೆಲವು ತಮ್ಮ ಹೆಸರನ್ನು ಸ್ವಲ್ಪ ಮಾರ್ಪಡಿಸಿಕೊಂಡಿವೆ. ಉದಾಹರಣೆಗೆ–ಮರದೇರಿ–ಮದ್ದೇರಿ ಎಂದೂ, ಪುಳಿಯಂಪಳ್ಳಿ–ಪುರಹಳ್ಳಿ ಎಂದೂ, ಸೀಹತ್ತಿ–ಸೀತಿ ಎಂದೂ, ಕಳ್ಳಪಳ್ಳಿ–ಕಳ್ಳಹಳ್ಳಿ ಎಂದೂ ಬದಲಾವಣೆಗೊಂಡಿರುವುದು ಗೊತ್ತಾಗುತ್ತದೆ. ಇಷ್ಟು ಹೊರತು ಈ ಮೇಲೆ ಹೇಳಿದ ಭೌಗೋಳಿಕ ಪ್ರದೇಶದಲ್ಲಿಯೇ ಈ ದೇವಾಲಯಕ್ಕೆ ಸಂದಿರುವ ದಾನಗ್ರಾಮಗಳನ್ನು ಗುರುತಿಸಬಹುದು. ಕೆಲವೇ ಕೆಲವು ಊರುಗಳು ಬೇಚರಾಕಾಗಿ ಅದರಲ್ಲಿ ಕೆಲವು–ಊರುಗಳು ನಾಮಾಶೇಷವಾಗಿ ಹೋಗಿದೆ.

ಉಳುವವನಿಗೆ ಭೂಮಿ ಕಾಯಿದೆಯಡಿಯಲ್ಲಿ ಹಾಗೂ ಅದಕ್ಕೆ ಮುಂಚೆಯೇ ದೇವಾಲಯಕ್ಕೆ ಸಂದಿದ್ದ ಭೂದಾನಗಳು ಪ್ರಸ್ತುತ ದೇವಾಲಯಗಳಿಗೆ ವಶದಿಂದ ದೂರವಾಗಿ ಹೋಗಿವೆ. ವಿಜಯನಗರೋತ್ತರ ಮತ್ತು ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಈ ದೇವಾಲಯದ ಆಡಳಿತ ಅವಸಾನಗೊಂಡಿದ್ದು ಒಂದು ಮುಖ್ಯ ಕಾರಣವಾಗಿದೆ.

ಕೆಲವು ಶಾಸನೋಕ್ತ ಗ್ರಾಮಗಳನ್ನು ಈ ಕೆಳಕಂಡಂತೆ ಪಟ್ಟಿ ಮಾಡಿದ್ದು, ಅವುಗಳನ್ನು ನಕ್ಷೆಯಲ್ಲಿಯೂ ಸಹ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಡಾ. ಎಂ.ಜಿ. ನಾಗರಾಜರವರು ಕೋಲಾರ ಜಿಲ್ಲೆಯನ್ನು ಪ್ರಸ್ತಾಪಿಸುತ್ತ ರಾಜೇಂದ್ರ ಚೋಳ/ಹೊಯ್ಸಳ ವೀರಬಲ್ಲಾಳರು ನೀತಿಯ ಭೈರವದೇವರ ಅಂಗ ರಂಗ ಭೋಗ ನೈವೇದ್ಯಕ್ಕೆ ಕೊಟ್ಟಿದ್ದ ಗ್ರಾಮಗಳ ಪೈಕಿ ಮಠಪುರವೂ ಒಂದು ಎಂದು ಹೇಳಿದ್ದಾರೆ. (ಈ ನನ್ನ ಲೇಖನಕ್ಕೆ ಸಲಹೆ ಸೂಚನೆಗಳನ್ನು ಕೊಟ್ಟು ಸಹಕರಿಸಿದ ನನ್ನ ಗುರುಗಳಾದ ಡಾ. ಪಿ.ವಿ. ಕೃಷ್ಣಮೂರ್ತಿ ಹಾಗೂ ಆತ್ಮೀಯ ಮಿತ್ರರಾದ ಸು೦.ಕ೦. ಗೋವರ್ಧನ್‌ರವರಿಗೆ ನಾನು ಆಭಾರಿಯಾಗಿರುತ್ತೇನೆ.)

## ಆಧಾರಸೂಚಿ


೧. ಇತಿಹಾಸ ದರ್ಶನ, ಸಂಪುಟ ೮, ೧೯೯೩, ಪುಟ ೧೩೫, ಡಾ. ಪಿ.ವಿ. ಕೃಷ್ಣಮೂರ್ತಿ.
೨. ಡಾ. ದೇವರಕೊಂಡಾರೆಡ್ಡಿ, ಶ್ರೀ ಭೈರವೇಶ್ವರ ಕ್ಷೇತ್ರ, ಸೀತಿ ಬೆಟ್ಟ – 'ಸೀತಿಬೆಟ್ಟದ ಶಾಸನಗಳು' ೧೯೯೬. ಪುಟ ೩೮.
೩. ಡಾ. ಪಿ.ವಿ. ಕೃಷ್ಣಮೂರ್ತಿ, ಇತಿಹಾಸ ದರ್ಶನ, ಸಂಪುಟ ೩, ಸಂಚಿಕೆ ೧, ೧೯೯೮, ಪುಟ ೧೫೨.
೪. ಡಾ. ಎಂ.ಜಿ. ನಾಗರಾಜ್, ಸಾಂಸ್ಕೃತಿಕ ವೀರಶೈವ, ೨೦೦೫, ಪುಟ ೬೬.
೫. ಶ್ರೀ ಭೈರವ ಕ್ಷೇತ್ರದ ಸೀತಿ ಬೆಟ್ಟ, ೧೯೯೬, ಸೀತಿ ಗ್ರಾಮ.

ಡಾ. ಕೆ. ವಸಂತಲಕ್ಷ್ಮಿ *

# ಶಾಸನೋಕ್ತ ವಾಜಿ ವಂಶದ ಬ್ರಾಹ್ಮಣರು !

ಯಾಜ್ಞವಲ್ಕ್ಯಗುರುಂ ವಂದೇ ಯೋಗಿನಾಮೀಶ್ವರಂ ಪರಂ।
ತೈತ್ತರೀಯ ಸುಶಾಖಾಯಾಃ ಜನಕಂ ವೇದಪಾರಗಂ॥

ಭಾರತದ ಧಾರ್ಮಿಕ ಇತಿಹಾಸವು ವೇದಗಳ ಕಾಲದಿಂದ ಆರಂಭವಾಗುತ್ತದೆ. ವೇದಗಳು ಭಾರತೀಯ ಸಂಸ್ಕೃತಿಯ ಬುನಾದಿಯಾಗಿದೆ. ಮೂಲ ಸ್ವರೂಪದಲ್ಲಿ ಅಖಂಡವಾದ ವೇದವು ಒಂದೇ ಇದ್ದು, ಜಟಿಲವಾಗಿತ್ತು. ವೇದವ್ಯಾಸ ಮುನಿಗಳು ವೇದ ಜ್ಞಾನವನ್ನು ಪ್ರಚುರಪಡಿಸಲು ಆಶಿಸಿ ಅದನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಿದರು ಮತ್ತು ಕ್ರಮವಾಗಿ ಋಗ್, ಯರ್ಜು, ಸಾಮ ಮತ್ತು ಅಥರ್ವಣ ವೇದಗಳನ್ನು, ಪೈಲ, ವೈಶಂಪಾಯನ, ಜೈಮುನಿ ಮತ್ತು ಸುಮಂತು ಮುನಿಗಳಿಗೆ ಬೋಧಿಸಿದರೆಂದು ತಿಳಿಯುತ್ತದೆ.[೧] ವೇದಕಾಲದಲ್ಲಿ ಮಾಡುತ್ತಿದ್ದ ಯಾಗ ಯಜ್ಞಾದಿಗಳಲ್ಲಿ ದೇವತೆಗಳಿಗೆ ಹವಿಸ್ಸಿನ ಭಾಗವನ್ನು ಅರ್ಪಿಸಿ, ಸಂತುಷ್ಟಿ ಪಡಿಸುತ್ತಿದ್ದವರು ಅಧ್ವರ್ಯುಗಳು. ಯಾಜಕರು ಯಜುರ್ವೇದದ ಮಂತ್ರಗಳನ್ನು ಪಠಿಸುತ್ತ ಯಜ್ಞಕಾರ್ಯದಲ್ಲಿ ತೊಡಗುತ್ತಿದ್ದ ಇವರು 'ಅಗ್ರಗಣ್ಯಮಿತ್ರ'ರೆನಿಸಿದ್ದರು.

ವೈಶಂಪಾಯನ ಮುನಿಗಳಲ್ಲಿ ಯಜುರ್ವೇದವನ್ನು ಅಭ್ಯಾಸ ಮಾಡಿದ ಶಿಷ್ಯರಲ್ಲಿ ಯಾಜ್ಞವಲ್ಕ್ಯರು ಪ್ರಮುಖರು. ಒಮ್ಮೆ ವೈಶಂಪಾಯನರು 'ಯಜುರ್ವೇದ'ವನ್ನು ಶಾಖೆಗಳಾಗಿ ವಿಂಗಡಿಸಲು ಆಲೋಚಿಸಿ ಶಿಷ್ಯರಾದ ಯಾಜ್ಞವಲ್ಕ್ಯರ ಮೇಲೆ ಕೋಪಗೊಂಡಂತೆ ನಟಿಸಿ ತಾವು ಕಲಿಸಿದ ವಿದ್ಯೆಯನ್ನೆಲ್ಲಾ ವಮನ ಮಾಡಲು ಹೇಳಿದರು. ಗುರುಗಳ ಆದೇಶದಂತೆ ಯಾಜ್ಞವಲ್ಕ್ಯರು, ವೈಶಂಪಾಯನವರ ಎಲ್ಲ ಶಿಷ್ಯರಲ್ಲಿದ್ದ ಜ್ಞಾನವನ್ನು ಯೋಗಮಾರ್ಗದಿಂದ ಸಂಗ್ರಹಿಸಿ ಒಟ್ಟಾದ ಯಜುರ್ವೇದದ ಜ್ಞಾನವನ್ನು ಖಂಡಿಕೆಗಳನ್ನಾಗಿಸಿ ವಮನ ಮಾಡಿದರಂತೆ. ನಂತರ ಸೂರ್ಯದೇವರನ್ನು ಕುರಿತು ತಪಸ್ಸು ಮಾಡಿ ಬ್ರಹ್ಮದೇವರನ್ನು ಬಿಟ್ಟರೆ ಮತ್ಯಾರು ಅಭ್ಯಾಸ ಮಾಡಿರದ ಸುವಿಸ್ತಾರವಾದ, ಸತ್ವಪ್ರಧಾನವಾದ 'ಶುಕ್ಲಯಜುರ್ವೇದವನ್ನು' ಪಡೆದರು. ಸೂರ್ಯಮಂಡಲ ಮಧ್ಯಸ್ಥನಾದ ಭಗವಾನ್ ನಾರಾಯಣನೇ ಹಯಗ್ರೀವ ರೂಪದಿಂದ ಯಾಜ್ಞವಲ್ಕ್ಯರಿಗೆ ಶುಕ್ಲ ಯಜುರ್ವೇದವನ್ನು ಉಪದೇಶಿಸಿದನು.[೨] ಇದರಿಂದ ಯಾಜ್ಞವಲ್ಕ್ಯರಿಗೆ 'ವಾಜಸೇನಾಯಿ' ಎಂಬುದು ಅನ್ವರ್ಥ ನಾಮವಾಯಿತು.[೩]

ಯಜುರ್ವೇದದಲ್ಲಿ ಶುಕ್ಲ ಯಜುರ್ವೇದ ಮತ್ತು ಕೃಷ್ಣ ಯಜುರ್ವೇದಗಳೆಂದು ಎರಡು ವಿಧಗಳಿವೆ. ಶುಕ್ಲ ಯಜುರ್ವೇದವು ಮಧ್ಯಂದಿನ ಶಾಖೆ ಮತ್ತು ಕಾಣ್ವಶಾಖೆಗಳೆಂಬ ಎರಡು ವಿಭಾಗಗಳಲ್ಲಿ ಉಳಿದುಬಂದಿದೆ. ಈ ವೇದಕ್ಕೆ ಸಂಬಂಧಿಸಿದಂತೆ ಆಪಸ್ತಂಭ ಗ್ರಾಹ್ಯಸೂತ್ರ, ಬೋಧಾಯನ ಸೂತ್ರ, ಕಾಣ್ವಬ್ರಾಹ್ಮಣ, ಕಾಣ್ವ ಅರಣ್ಯಕ, ಮಾಧ್ವಂದಿನ ಅರಣ್ಯಕ, ಈಶಾವಾಸ್ಯೋಪನಿಷದ್ ಮತ್ತು ಬೃಹದಾರಣ್ಯಕೋಪನಿಷದ್ ಮುಂತಾದ ಕೃತಿಗಳಿವೆ. ವಾಜಸೇನಾಯಿ ಪಂಥದ ಬಗೆಗೆ ಗಮನಿಸಿದರೆ ವಾಜಿನ್ ಎಂಬ ಶಬ್ದಕ್ಕೆ ೧) ಅಶ್ವ, ಕುದುರೆ, ೨) ಪಕ್ಷಿ, ಹಕ್ಕಿ ೩) ಶರ, ಬಾಣ, ೪) ವೇಗವಾದ, ೫) ಬಲಶಾಲಿಯಾದ, ಶಕ್ತಿವಂತ, ೬) ರೆಕ್ಕೆಗಳುಳ್ಳ / ಗರಿಗಳುಳ್ಳ ಎಂಬ ಅರ್ಥಗಳಿವೆ.[೩] ವಾಜಃ ಎಂದರೆ ಅನ್ನ ಎಂಬ ಅರ್ಥವೂ ಇದ್ದು, ಸನಿಃ ಎಂದರೆ ದಾನವೆಂಬ ಅರ್ಥವಿದೆ. ವಾಜಮನ್ನಮಿತಿಶೃತೇಃ ಎಂಬ ಶೃತಿ ವಾಕ್ಯವಿದೆ. ಇದರಂತೆ ವಾಜಸೇನಾಯಿ ಎಂದರೆ ನಿರಂತರವಾಗಿ ಅನ್ನದಾನ ಮಾಡುವವನು ಎಂಬುದಾಗಿ ತಿಳಿಯುತ್ತದೆ. ಯಾಜ್ಞವಲ್ಕ್ಯರಿಗೆ ಭಗವಾನ್ ನಾರಾಯಣನು ಉಪದೇಶಿಸಿದ ಸಂದರ್ಭವನ್ನು ತಿಳಿಸುವಲ್ಲಿ

> "ವಾಜಿರೂಪೇಣ ಯದ್ವೇದಂ ವಿಧೇರುದ್ಬೋಧಿತ ಪುರಾ।
> ತದ್ವೇದಂ ಯಾಜ್ಞವಲ್ಕ್ಯಸ್ಯ ತದ್ದೇವೋಪ್ಯುಪದೇಶಿತಃ ॥
> ತಚ್ಛಾಖಾಸ್ಯಾದಾದಿಶಾಖಾ ವೇದಕಲ್ಪ ಮಹೀರುಹೆ ।
> ವಾಜಿನಾಂ ಪ್ರಥಮಶಾಖಾ ಯೋಗಿಕೆ ರೂಢಿಕೆ ಧ್ರುವಂ॥

ಎಂಬ ಶ್ಲೋಕವಿದೆ. ಇದು ಯಾಜ್ಞವಲ್ಕ್ಯರ ಪರಂಪರೆಯನ್ನು 'ವಾಜಿ ಶಾಖೆ' ಎಂದು ಕರೆಯುತ್ತಿದ್ದರೆಂದು ನಿಶ್ಚಿತವಾಗಿ ತಿಳಿಸುತ್ತಿದೆ. ಈ ವಾಜಿ ವಂಶವು ಶಾಸನಗಳಲ್ಲಿ ತಿಳಿಸಿರುವ 'ವಿಪ್ರಕುಲದ ಶ್ರೇಷ್ಠ ವಂಶ' ವೆನ್ನಿಸಿದ್ದ ವೇದವೆಂಬ ಕಲ್ಪದ್ರುಮದ ಪ್ರಥಮ ಶಾಖೆಯಾಗಿ ಅಗ್ರಸ್ಥಾನ ಪಡೆದಿತ್ತೆಂದು ತಿಳಿಯುತ್ತದೆ.[೪] ತಮಿಳುನಾಡು, ಆಂಧ್ರಪ್ರದೇಶ ಮತ್ತು ಕರ್ನಾಟಕಗಳಲ್ಲಿ ಕೃಷ್ಣ ಯಜುರ್ವೇದದ ಬಳಕೆ ಹೆಚ್ಚು. ಉಳಿದ ಪ್ರಾಂತ್ಯಗಳಲ್ಲಿ

* ನಂ. ೧೬೭೬, ೫ನೇ ಅಡ್ಡರಸ್ತೆ, ೧೦ನೇ ಮುಖ್ಯರಸ್ತೆ, ಬನಶಂಕರಿ ೧ನೇ ಘಟ್ಟ, ಬೆಂಗಳೂರು - ೫೦

ಪ್ರಚಲಿತವಾಗಿರುವುದು ಶುಕ್ಲ ಯಜುರ್ವೇದವೆಂದು ವಿದ್ವಾಂಸರು ತಿಳಿಸಿದ್ದಾರೆ.[೫] ಹೀಗೆ ಕರ್ನಾಟಕ ಭಾಗದಲ್ಲಿ ಅಪರೂಪವೆನ್ನಿಸಿದ್ದ ವಾಜಸೇನಾಯಿ ಪ್ರಚಲಿತವಾದ ವಾಜಿ ವಂಶದವರ ಬಗೆಗೆ ಇಲ್ಲಿ ಬೆಳಕು ಚೆಲ್ಲಲು ಯತ್ನಿಸಲಾಗಿದೆ.

'ವಾಜಿ ವಂಶ' ನಿಷ್ಪತ್ತಿ ಮತ್ತು ಶಬ್ದಾರ್ಥದ ಬಗೆಗೆ ಗಮನಸೆಳೆಯುತ್ತಾ, ಡಾ। ಹಂಪನಾಗರಾಜಯ್ಯನವರು "ವಾಜಪೇಯಿ (ವಾಜಸನೀಯ) ಎಂಬ ಯಜ್ಞ-ಯಾಗಾದಿಗಳನ್ನು ಮಾಡಿದ ಹಿರಿಯರಿಂದ ಬಂದ ಮನೆತನವಾಗಿ, ಅದು ವಾಜಿಕುಲ" ಎಂದು ಹೆಸರು ಪಡೆದಿರಬಹುದು. ಇದೇ ಸರಿಯಾದ ನಿಷ್ಪತ್ತಿ ಮೂಲವೆಂದು ಖಚಿತವಾಗಿ ಹೇಳುವುದಕ್ಕೆ ಕಾರಣವೆಂದರೆ ಈ ವಾಜಿ ವಂಶದ ಪ್ರಾಚೀನ ದಾಖಲೆಗಳು ಅವರ ವೈದಿಕತ್ವ ಮತ್ತು ಯಜ್ಞ ಯಾಗಾದಿಗಳ ಆಚರಣೆಯನ್ನು ದೃಢಪಡಿಸುತ್ತವೆ ಎಂದಿದ್ದಾರೆ.[೬] ಅಶ್ವಮೇಧ ವಾಜಪೇಯ ಯಜ್ಞವು ಸೋಮಯಾಗ ಇವೆಲ್ಲ ಪ್ರಸಿದ್ಧವಾದ ಯಾಗ ಯಜ್ಞಗಳಾಗಿವೆ. ಎಲ್ಲಾ ಯಜ್ಞಗಳಲ್ಲೂ ಅಧ್ವರ್ಯುಗಳಾಗಿ (ಯಾಜಕರಾಗಿ) ಪಾಲ್ಗೊಳ್ಳುವವರು ಯಜುರ್ವೇದದವರಾಗಿದ್ದಾರೆ. ವಾಜಪೇಯ ಯಾಗದಲ್ಲಿ ಪಾಲ್ಗೊಂಡ ಅಧ್ವರ್ಯುಗಳ ವಂಶಸ್ಥರು 'ವಾಜಪೇಯಿ'ಗಳೆಂದೂ, ಸೋಮಯಾಗದಲ್ಲಿ ಅಧ್ವರ್ಯುಗಳಾಗಿ ಪಾಲ್ಗೊಂಡಿದ್ದ ವಂಶಜರನ್ನು 'ಸೋಮಯಾಜಿ'ಗಳೆಂದು ಕರೆಯುತ್ತಾರೆ.[೭] ವಾಜಪೇಯಿಗಳೂ, ಸೋಮಯಾಜಿಗಳೂ, ವಾಜಿ ವಂಶದ ವಿವಿಧ ಪಂಗಡದವರೆಂದು ತಿಳಿಯಬಹುದಾಗಿದೆ.

ಕರ್ನಾಟಕದ ದಾನ ಶಾಸನಗಳಲ್ಲಿ ದಾನ ಪ್ರತಿಗ್ರಹಿಸಿದ ಬ್ರಾಹ್ಮಣರ ನಾನಾಗೋತ್ರ, ವಂಶಗಳ ವಿವರಗಳು ಉಲ್ಲೇಖವಾಗಿದ್ದರೂ, ಈ ಪಂಥದ ಬಗೆಗೆ ಹೆಚ್ಚಾಗಿ ವಿವರಗಳು ಲಭ್ಯವಿಲ್ಲ. ಕ್ರಿ.ಶ. ೯೦೫ರ ಆಸಂದಿ ಗ್ರಾಮದ ತಾಮ್ರ ಶಾಸನದಲ್ಲಿ ಆಸಂದಿ ವಿಷಯಕ್ಕೆ ಸೇರಿದ ತೋರಗಲ್ಲು ಗ್ರಾಮವನ್ನು ಗಂಗರ ದೊರೆ ಶಿವಮಾರನ ಮಗ ಜಯಸಿಂಹನ ಆಶಯದಂತೆ ನಾನಾ ವೃತ್ತಿಗಳಾಗಿ ಮಾಡಿ ದಾನ ನೀಡಲಾಗಿದೆ. ಈ ಶಾಸನದ ದಾನಪ್ರತಿಗ್ರಾಹಿಗಳಲ್ಲಿ ಒಬ್ಬರಾದ ಶಿವಕುಮಾರ ಶರ್ಮರನ್ನು 'ಕೌಶಿಕ ಗೋತ್ರದವರಾಗಿದ್ದು ವಾಜಸೇನಾಯಿ ಪಾರಗಾಃ' ರಾಗಿದ್ದರೆಂದು ತಿಳಿಯುತ್ತದೆ. [ಎಕ ೧೨, ಕಡೂರು ೨೪].

ಕರ್ನಾಟಕದ ಶಾಸನ ಕ್ಷೇತ್ರದಲ್ಲಿ ಕ್ರಿ.ಶ. ೧೦ನೇ ಶತಮಾನ ಒಂದು ಪ್ರಮುಖ ಘಟ್ಟವಾಗಿದ್ದು, ಆ ಕಾಲದ ಮತ್ತು ನಂತರದ ಕಾಲದ ಶಾಸನ ಪಾಠಗಳು ಸುದೀರ್ಘವೂ, ಸ್ವಾರಸ್ಯಕರವೂ ಆಗಿರುವುದು ಗಮನಾರ್ಹವಾಗಿದೆ. ಕನ್ನಡ ಶಾಸನಗಳಲ್ಲಿ ಆಯಾ ಸಂದರ್ಭಕ್ಕನುಗುಣವಾಗಿ ಆ ಶಾಸನದಲ್ಲಿ ಬರುವ ಗಣ್ಯವ್ಯಕ್ತಿಗಳನ್ನು ಉದಾಹರಣೆಗೆ ಪ್ರಧಾನಿಗಳು, ಮಂತ್ರಿಗಳು, ಸೇನಾಪತಿಗಳು, ದಾನಿಗಳ ಸಾಧನೆಯನ್ನು ಬಣ್ಣಿಸುವಲ್ಲಿ ಅವರ ವಂಶಾವಳಿಯ ವಿವರಗಳು ದೊರೆಯುತ್ತಿವೆ. ಆ ಕಾಲದ ಶಾಸನಗಳು ಅವರ ಘನವ್ಯಕ್ತಿತ್ವವನ್ನು ಚಿತ್ರಿಸುವಲ್ಲಿ ಅಂದಿನ ಸಮಾಜದ ಹಲವು ವಿಚಾರಗಳನ್ನು ತೆರದಿಟ್ಟಿವೆ. ಇಲ್ಲಿ ಕರ್ನಾಟಕದಲಿ ನೆಲೆಸಿದ್ದಿರಬಹುದಾದ 'ವಾಜಿವಂಶ'ದ ಬ್ರಾಹ್ಮಣರ ಸ್ಥಿತಿಗತಿಗಳ ಬಗೆಗೆ ಬೆಳಕು ಚೆಲ್ಲಲು ಯತ್ನಿಸಲಾಗಿದೆ.

ವಾಜಿ ವಂಶದ ಬ್ರಾಹ್ಮಣರ ಪ್ರಾಚೀನತೆಯನ್ನು ಗಮನಿಸಿದರೆ, ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಶಾಸನವೊಂದು [ಎಸ್.ಐ.ಐ. XI-i-36] ವಾಜಿ ವಂಶದ ಬ್ರಾಹ್ಮಣನ ಧೈರ್ಯ, ಸಾಹಸಗಳನ್ನು ಬಣ್ಣಿಸಿದೆ. ಮಹಾಮಾಂಡಲಿಕನಾಗಿ, ಇಮ್ಮಡಿ ಬೂತುಗನು ರೋಣವನ್ನು ಆಳುತ್ತಿದ್ದಾಗ, ಅನ್ಯಾಯವಾಗಿ ತೆರಿಗೆಯನ್ನು ತೆರಲು ಒಪ್ಪದೆ ಪ್ರತಿಭಟಿಸಿ, ಹೋರಾಡಿ ಸತ್ತ ವೀರ ಪಂಪಯ್ಯನನ್ನು-ಶಾಸನವು-"ಪಂಪಯ್ಯನುದ್ದಾಮ ಸದ್‌ಗುಣುಕಂ ವಾಜಿಕುಳೋದಮಂ ಭುದನುತಂ ಶೋಣ್ಡಿಲ್ಯಗೋತ್ರೋನ್ನತಂ" ಎಂದು ಪ್ರಶಂಸಿಸಿದೆ.

ಕ್ರಿ.ಶ. ೧೧೧೯ರ ಬಳ್ಳಾರಿ ಜಿಲ್ಲೆಯ ಕುಡುತಣಿಯ ವೀರಭದ್ರ ದೇವಾಲಯದ ಶಾಸನವು (ಕ.ವಿ.ಶಾ.ಸಂ. ೧ ಬಳ್ಳಾರಿ ೩೬] ಚಾಳುಕ್ಯ ದೊರೆ ತ್ರಿಭುವನಮಲ್ಲನು ಆಳುತ್ತಿದ್ದಾಗ, ಅವನ ಅಧಿಕಾರಿಯಾಗಿದ್ದ ಕೇಶಿರಾಜ ಚಮೂಪತಿಯನ್ನು ಪರಮಪಾವನವೆನಿಸಿದ್ದ ವಾಜಿಕುಳ ಸುಪುತ್ರನಾದ ಕೇಶಿರಾಜನ ವಂಶಾವಳಿಯನ್ನು ಉಲ್ಲೇಖಿಸಿದೆ. ಶ್ರೀವತ್ಸಗೋತ್ರ ತಿಳಕನಾದ ಕೇಶಿರಾಜನನ್ನು ಶಾಸನವು "ಸತ್ಯದಿನನುಪಮ ಸನ್ಮಾನದಿಂದ ದಾನದಿಂ ಸಾರವಚೋವಿಸ್ತಾರದಿಂ ವೀರಪಿನತಿಏಳ ಸೌಂದರ್ಯದಿಂದ ಕಾರ್ಯದಿಂ ಕೇಶವರಾಜಂ ರಾಜನಾಮಂ ನೆಗೆಳ್ದಬಿಳಗುಣಭ್ರಾಜಿತಾ ಎಂದಿದೆ. ಇವನ ಅಗ್ರತನೂಜ ಮಾಳಪನಿನಾಯಕ ಇವನ ಮಗ ಮಾರ್ತಾಂಡನಾಯಕನು ವಿವೇಕನಿಧಿಯೂ ವೀರಮಾರ್ತಾಂಡನೂ ಆಗಿದ್ದನು ಇವನು ಕುಡುತಣಿಯಲ್ಲಿ ಮಾರ್ತಾಂಡೇಶ್ವರ ದೇವಾಲಯವನ್ನು, ಸರಸ್ವತಿ ಮತ್ತು ವಿನಾಯಕ ಗುಡಿಗಳನ್ನು ಕಟ್ಟಿಸಿ ದಾನ ನೀಡಿದ್ದನ್ನು ಶಾಸನ ತಿಳಿಸುತ್ತಿದೆ. ಶಾಸನವು ಇವನನ್ನು 'ವಿಪ್ರಕುಳ ಮಾರ್ತಾಂಡ' ಎಂದು ಕರೆದಿದೆ.

ಇದೇ ಕುಡುತಣಿಯ ಕುಮಾರಸ್ವಾಮಿ ದೇವಾಲಯದ ಕಟ್ಟೆ ಶಾಸನವು (ಕ್ರಿ.ಶ. ೧೧೪೮-ಕ.ವಿ.ಶಾಸಂ. ೧. ಬಳ್ಳಾರಿ ೨೩) ವಾಜಿ ವಂಶದ ಮೂಲದ ಬಗೆಗೆ ತಿಳಿಸುತ್ತಾ ವಿಷ್ಣುವಿನ ನಾಭಿಯ ಕಮಲದಿಂದ ಜನಿಸಿದ ಬ್ರಹ್ಮನು ಲೋಕಸೃಷ್ಟಿ ಮಾಡಿದಾಗ ಬೇರೆ ಬೇರೆ ಋಷಿ ಮಾರ್ಗಗಳನ್ನು ನಿರ್ಮಿಸಲು, ಯಾಜ್ಞವಲ್ಕ್ಯರು ವಿಸ್ತರಿಸಿದ ವಾಜಿ ವಂಶದಲ್ಲಿ

ಅಗಣ್ಯ ಪುಣ್ಯನಿಧಿಯೂ, ವಿಪ್ರವಂಶ ಚೂಡಾಮಣಿಯಾದ 'ದೇಕರಸ'ನು ಹುಟ್ಟಿದನು ಎಂದು ತಿಳಿಸಿದೆ. ಶಾಸನವು ಶ್ರೀ ಶಾಂಡಿಲ್ಯ ವಿನೂತ ಗೋತ್ರನೂ ಮನುಚಾರಿತ್ರನೂ ವಿವೇಕೋತ್ತ ರಾವಾಸನಾದ ದೇಕರಸನಿಗೆ ಮಗನಾಗಿ ಮಲ್ಲರಸನು ಜನಿಸಿದನು. ಮಲ್ಲರಸನ ಮಗ ಕೇಶಿರಾಜನನ್ನು ಕಮಳೋದರ ಪಾದಪಯೋಜಭೃಂಗನೂ, ಪಂಡಿತ ಪಾರಿಜಾತನೂ ಆಗಿದ್ದು, ಇವನು ಬಿಟ್ಟ ದಾನವನ್ನು ಶಾಸನ ದಾಖಲಿಸುತ್ತಿದೆ.

*ಕಡೂರು ತಾಲೂಕಿನ ಬ್ರಹ್ಮ ಸಮುದ್ರದ ಲಕ್ಷ್ಮೀನಾರಾಯಣ ದೇವಾಲಯದ ಶಾಸನವು (ಎಕ ೧೨ ಕಡೂರು ೧೬೯) ಹೊಯ್ಸಳ ನಾರಸಿಂಹ ದೇವನ ರಾಜ್ಯವಾರ್ಧಿಗೆ ಅಮೃತಕರನಂತಿದ್ದ ಶ್ರೀಕರಣ ಪ್ರಧಾನಿಯೂ, ಧರ್ಮರತ್ನಾಕರ, ಉದ್ವಾಟೋಪ ಪಂಚಾನದ, ಅನುಪಮ ತೇಜನಿಧಿ ಎಂದೂ ಬಣ್ಣಿಸಿದೆ.*

*ತರೀಕೆರೆ ತಾಲೂಕಿನ ಸಮತಳ ಗ್ರಾಮದ ಶಾಸನವು [ಎಕ ೧೨, ಕಡೂರು ೬೪] ಹೊಯ್ಸಳ ನಾರಸಿಂಹ ದೇವನ ಅಧಿಕಾರಿ ಹೆಗ್ಗಡೆ ಚಂದಿರಯ್ಯನನ್ನ 'ವಾಜಿಕುಲ ಸರೋವರ ರಾಜಹಂಸ', ಬಂಧುಜನಕುವಳಯಾನಂದ ಚಂದ್ರ' ಇಷ್ಟಜನ ಕಲ್ಪದ್ರುಮ ಆಶ್ರಿತ ಜನ ಕಾಮಧೇನು ಎಂದೂ ಕರೆದಿದೆ. ಹೆಗ್ಗಡೆ ಚಂದಿರಯ್ಯನು ಪತ್ನಿ ಚೌಡವ್ವೆಯೊಂದಿಗೆ ಸಮತಳ ಗ್ರಾಮದಲ್ಲಿ ಮುದ್ದೇಶ್ವರ ದೇವರ ಪ್ರತಿಷ್ಠೆ ಮಾಡಿ ದಾನ ಬಿಟ್ಟದ್ದನ್ನು ಶಾಸನ ತಿಳಿಸುತ್ತಿದೆ.*

*ಅರಸೀಕೆರೆಯ ಶಾಸನವೊಂದು [ಎಕ-೧೦, ಅಕೆರೆ ೨೩] ಹೊಯ್ಸಳ ವೀರಬಲ್ಲಾಳ ದೇವನ ಪಾದಪದ್ಮೋಪ ಜೀವಿಯಾದ ಮಾರಮಂತ್ರಿ ಚೂಡಾಮಣಿಯ ಮಗ ಕೇಸಿರಾಜನನ್ನು ಶಾಸನವು 'ಪೊಯ್ಸಳ ಗಂಧ ಹಸ್ತಿ, ವರವಾಜಿ ವಂಶವಿಭು' ಎಂದು ಕರೆದಿದೆ. ಇವನಿಗೆ ರಾಜನು ಮೆಚ್ಚಿ ಅರಸಿಕೆರೆಯ ಶ್ರೀಕರಣಾಧಿಪತಿಯಾಗಿ ಮಾಡಿದನು. ಅರಸಿಕೆರೆಯಲ್ಲಿ ನೆಲೆಸಿದ್ದ ವಿಪ್ರರು ಉನ್ನತವಾದ ಕೇಶವ ದೇವಾಲಯವನ್ನು ನಿರ್ಮಿಸಿದಾಗ ಬಿಟ್ಟ ದಾನವನ್ನು ಶಾಸನ ತಿಳಿಸುತ್ತಿದೆ.*

*ಅರಸೀಕೆರೆ ತಾಲೂಕಿನ ಮುರುಂಡಿ ಗ್ರಾಮದ ಶಾಸನವು (ಎಕ – ೧೦) ಅ. ಕೆರೆ ೨೨೭] ಹೊಯ್ಸಳ ಚಕ್ರವರ್ತಿ ವೀರಬಲ್ಲಾಳ ದೇವರು ಆಳುತ್ತಿದ್ದಾಗ, ಮಹಾಪ್ರಧಾನ, ಸರ್ವಾಧಿಕಾರಿ, ಮಹಾಪಸಾಯಿತನೂ, ಶ್ರೀಕರಣದ ಹೆಗ್ಗಡೆಯೂ ಆಗಿದ್ದ ಎರೆಯಣ್ಣನ ಸಾಹಸವನ್ನು ಮೆಚ್ಚಿ ದೊರೆಯು ಮುರಿಂಡಿ ಗ್ರಾಮವನ್ನು ನೀಡಿದಾಗ ಎರೆಯಣ್ಣನು ಅದನ್ನು ಶ್ರೀ ನಾರಸಿಂಹಪುರವೆಂಬ ಅಗ್ರಹಾರವನ್ನಾಗಿ ಮಾಡಿ ಅಲ್ಲಿ ವಿದ್ಯಾಕೇಂದ್ರವನ್ನು ಮಾಡಿ ದಾನ ಬಿಡುತ್ತಾನೆ. ಈ ಶಾಲೆಯಲ್ಲಿ ಸೋವಿಯಣ್ಣನು ಕರ್ನಾಟ ಬಾಲಶಿಕ್ಷೆ (ಕನ್ನಡ ಭಾಷಾ ಬೋಧನೆ) ಯನ್ನು ಕಲಿಸುತ್ತಿದ್ದರು. ಇವರ ಜೀವಿತಕ್ಕೂ, ಹನ್ನೆರಡು ಜನ ವಿದ್ಯಾರ್ಥಿಗಳ ಜೀವಿತಕ್ಕೆ ದಾನ ನೀಡಿದ ಎರೆಯಣ್ಣನನ್ನು ಶಾಸನವು 'ಶ್ರೀ ವಾಜಿ ವಂಶೋತ್ತಮ' ಎಂದು ಕರೆದಿದೆ. ಈ ಶಾಸನದೊಂದಿಗೆ ಉಲ್ಲೇಖವಾಗಿರುವ ಮತ್ತೊಂದು ಶಾಸನವು ವಿಪ್ರಶಿಖಾಮಣಿ ಆಚಿರಾಜನ ಮತ್ತು ಆಚಯಕ್ಕನ ಮಗ ನಾಕಿರಾಜನನ್ನು ವಾಜಿವಂಶ ವರ್ಧನನ್ ಆತ್ರೇಯ ಗೋತ್ರ ಪವಿತ್ರನ್' ಎಂದಿದ್ದು ಇವನು ಕೆರೆ, ದೇಗುಲಗಳನ್ನು ಮಾಡಿಸಿದನೆಂದು ತಿಳಿಸುತ್ತಿದೆ.*

*ಬಳ್ಳಾರಿ ಜಿಲ್ಲೆಯ ಹಿರೇಹಡಗಲಿಯ ಶಾಸನವು [ಕವಿಶಾಸಂ ೧, ಹಡಗಲಿ ೫೩] ಕ್ರಿ.ಶ. ೧೨೧೨ರಲ್ಲಿ ಹೊಯ್ಸಳ ವೀರಬಲ್ಲಾಳದೇವನ ರಾಣಿ ಪದುಮಲದೇವಿಯು ಹಡಗಲಿಯನ್ನಾಳುತ್ತಿದ್ದಾಗ ಮಹಾಪ್ರಧಾನವಾದ ಗಂಗಿಮಯ್ಯ ನಾಯಕರು ದಾವಣ್ಣಗಳು ಭೂಮಿಯನ್ನು ಕೊಂಡು ದಾನ ಬಿಟ್ಟದ್ದನ್ನು ತಿಳಿಸಿದೆ. ಈ ಶಾಸನವು ಗಂಗಿಮಯ್ಯನಾಯಕರ ವಂಶಾನ್ವಯದ ಬಗೆಗೆ ತಿಳಿಸುವಲ್ಲಿ ಅವರನ್ನು "ಗೌತಮ ಗೋತ್ರದ ಕಾಮಧೇನು" ವಾಜಿ ಕುಳದಿನೇಶನೆಂದಿದೆ.*

*ವಾಜಿ ವಂಶದವರಲ್ಲಿ ಕೆಲವರು ಬುಧನುತರು ಮಾತ್ರವಲ್ಲದೇ ಕವಿಗಳೂ ವಿದ್ವಾಂಸರೂ, ವೇದ ಪಾರಂಗತರೂ ಆಗಿದ್ದರು. ಕಡೂರು ತಾಲೂಕಿನ ಕೆರೆಸಂತೆ ಗ್ರಾಮದ ಶಾಸನ ಪಾಠವನ್ನು (ಎಕ-೧೨, ಕಡೂರು ೬೪].*

*ಹರಿಹರ, ಮಾಯಿದೇವಿಗಳ ಪುತ್ರನ ನಿಂದಿತನೂ ವಾಜಿ ವಂಶ ಶೇಖರನೂ ಅಕಳಂಕ ಕೀರ್ತಿಯೂ, ಕಳಿಕಾಲ ಬೃಹಸ್ಪತಿಯೂ, ಸೋಮನಾಥ ಮತ್ತು ಶಂಕರನ ಸೋದರನಾದ ಕಾಶ್ಯಪಗೋತ್ರ ವರ್ಧನನೆನಿಸಿದ್ದ ಕವಿ ನಾಗವರ್ಮನು ರಚಿಸಿದ್ದ ಎಂಬ ಉಲ್ಲೇಖವಿದೆ. ಇದರಂತೆ ಅರಸಿಕೆರೆಯ ಕೇಶವ ದೇವಾಲಯದ ಶಾಸನ ಪಾಠವನ್ನು ಸರ್ವಾಧಿಕಾರಿಯೂ ಆಗಿದ್ದ ಆಚಿರಾಜನು ಬ್ರಹ್ಮ ಸಮುದ್ರದಲ್ಲಿ ವಿಷ್ಣುಗೃಹವನ್ನು ನಿರ್ಮಿಸಿ ಲಕ್ಷ್ಮೀನಾರಾಯಣನನ್ನು ಪ್ರತಿಷ್ಠೆ ಮಾಡಿ. ಬಿಟ್ಟ ದಾನವನ್ನು ತಿಳಿಸಿದೆ. ದಾನಿ ಆಚಿರಾಜನ ವಂಶಾನ್ವಯವನ್ನು ತಿಳಿಸುತ್ತಾ ಶಾಸನವು "ಗುರು ಯಾಜ್ಞವಲ್ಕ್ಯರಿಂದೆಸೆವ ವಾಜಿ ವಂಶದೊಳಾದಂ ದಿವಿಜ ಪ್ರಿಯ ಹವಿ ಮನು ಮಾರ್ಗ್ಗವಿದಂ ಮನುಭಟ್ಟ ಸೋಮಯಾಜಿ ಸಮಾಖ್ಯಂ" ಎಂದಿದೆ. ಮನುಭಟ್ಟ ಸೋಮಯಾಜಿಯ ವಂಶದಲ್ಲಿ ಜನಿಸಿದ ಆದಿತ್ಯನ ಮಗ ಮಾಧವ, ಮಾಧವನ ಮಗ ಆಚಿರಾಜ ಇದೇ ವಂಶದಲ್ಲಿ ಕೇಶಿರಾಜ ಮತ್ತು ಚೌಂಡಿಯಕ್ಕನ ಮಕ್ಕಳಲ್ಲಿ ಒಬ್ಬನಾದ ಆಚಿರಾಜನನ್ನು ಶಾಸನವು ವಿದ್ವಜ್ಜನಾಧಾರನೆಂದೂ, ವಿನಯಾಂಬೋಧಿ, ಯಾಚನವೆಂದು, ಮನುಮುನಿ ಪ್ರಖ್ಯಾತನೆಂದೂ ಬಣ್ಣಿಸಿದೆ.*

*ಚನ್ನರಾಯಪಟ್ಟಣ ತಾಲೂಕಿನ ಸಂತೆ ಶಿವರ ಗ್ರಾಮದ ಶಾಸನವು [ಎಕ ೧೦, ಚ.ರಾ.ಪ ೮೩] ಹೊಯ್ಸಳ ಚಕ್ರವರ್ತಿ ವೀರಬಲ್ಲಾಳ ದೇವರ ಮಹಾಪ್ರಧಾನ, ಬಾಹತ್ತರ ನಿಯೋಗಾಧಿಪತಿಯೂ, ರಾಯದಂಡನಾಥನೂ ಆಗಿದ್ದ ಪೇಷಣ ಹನುಮಂತನೆನಿಸದ್ದ ಅಮಿತಯ್ಯ ದಂಡನಾಯಕರು ಹೊಯ್ಸಳ ವೀರಬಲ್ಲಾಳ ದೇವರಿಂದ ಶಿವರ ಮತ್ತು ಅದರ ಆರು ಹಳ್ಳಿಗಳನ್ನು ಪಡೆದು ಅಗ್ರಹಾರವನ್ನಾಗಿ ಮಾಡಿ ದಾನ ಬಿಟ್ಟದ್ದನ್ನು ತಿಳಿಸಿದೆ. ಕ್ರಿ.ಶ. ೧೨೩೩ರಲ್ಲಿ ವೀರನಾರಸಿಂಹ ದೇವರಿಗೆ ಬಿನ್ನವಿಸಿ ಆ ಅಗ್ರಹಾರದ ನಡುವೆ ಅಮಿತಯ್ಯ ದಂಡನಾಯಕ ನಿರ್ಮಿಸಿದ ಶ್ರೀ ಅಮೃತೇಶ್ವರ, ವಾಮೇಶ್ವರ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳಿಗೆ ದಾನ ಬಿಟ್ಟದ್ದನ್ನು ದಾಖಲಿಸಿದೆ. ಈ ಅಮಿತಯ್ಯ ದಂಡನಾಯಕನ ವಂಶಾವಳಿಯನ್ನು ತಿಳಿಸುವಲ್ಲಿ ಶಾಸನವು ಭಾರದ್ವಾಜಗೋತ್ರದ ಕಣ್ವಾಭಜಾತನಾದ ವಾಮರಸ ದಂಡಾಧೀಶನ ಮಗ ಅಮಿತಯ್ಯ ದಂಡನಾಯಕನನ್ನು*

ವಿಶೇಷವಾಗಿ ಬಣ್ಣಿಸಿದೆ. ಇವನು ಮಹಾಪ್ರಚಂಡ ದಂಡನಾಥ, ಪ್ರಧಾನ ಕರಿ ಕಳಭಯೂಥನಾಥ ಕುದುರೆ ಕಾಳಗದಲ್ಲಿ ಉನ್ನಂತಿ ಕೆಪಡೆದ 'ಸುಭಟ ಸವಾರಿಚೂಡಾರತ್ನ, ಭಟ್ಟ ಜನ ಬಾಂಧವ, ದೀನಯಾಚಕಜನ ಜಂಗಮ ಪಾರಿಜಾತ, ಬೊಪ್ಪನಂಕಕಾರ, ಸಕಳಕುಳ ರಾಜಿ 'ವಾಜಿ ವಂಶ ಚೂಡಾಮಣಿ' ಎನ್ನಿಸಿದ್ದನು. ಇವನ ಶಿವರ ಗ್ರಾಮದಲ್ಲಿ ಅಮೃತೇಶ್ವರ, ವಾಮೇಶ್ವರ ದೇವರಿಗೆ ಬಿಟ್ಟ ದಾನವನ್ನು ತಿಳಿಸಿದೆ. ಈ ಅಮಿತಯ್ಯ ದಂಡನಾಯಕನೇ ಕ್ರಿ.ಶ. ೧೨೨೬ರಲ್ಲಿ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ಬೆಣ್ಣೆಕಲ್ಲು ಗ್ರಾಮದಲ್ಲಿಯೂ, ವಜ್ರೇಶ್ವರ, ಅಮಿತೇಶ್ವರ, ಪದ್ಮಲೇಶ್ವರ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳನ್ನು ನಿರ್ಮಿಸಿ ದಾನ ನೀಡಿದ್ದಾನೆ. ಈ ಶಾಸನವೂ ಹೊಯ್ಸಳರ ದೊರೆ ವೀರ ನಾರಸಿಂಹದೇವನ ಆಳುತ್ತಿದ್ದಾಗ ನೀಡಿದ್ದಾಗಿದೆ. ಶಾಸನದಲ್ಲಿ ಅಮಿತಯ್ಯನ ಪ್ರಶಸ್ತಿಯೂ ಪುನರುಕ್ತವಾಗಿರುವುದು ಗಮನಾರ್ಹವಾಗಿದೆ. ವಾಜಿವಂಶ ಚೂಡಾಮಣಿಯಾದ ಅಮಿತಯ್ಯನು ಈ ದಾನವನ್ನು ಅಲ್ಲಿದ್ದ ಲಾಕುಲೀಶ ಮುನಿ ಕಳೇಶ್ವರ ಪಂಡಿತರಿಗೆ ನೀಡಿದ್ದಾನೆ. [ಕವಿಶಾಸಂ-೧, ಹ.ಬೊ.ಹಳ್ಳಿ ೨]

ನಾಗಮಂಗಲ ತಾಲೂಕಿನ ಲಾಲಿನಕೆರೆ ಶಾಸನವು [ಎಕ-೭, ನಾ.ಮಂ. ೬೩] ಕ್ರಿ.ಶ. ೧೧೬೫ರಲ್ಲಿ ಹೊಯ್ಸಳ ನಾರಸಿಂಹದೇವನ ಮಹಾಪ್ರಧಾನ ಹೆಗ್ಗಡೆ ಕಂಠಿಮಯ್ಯನು ಮಹಾಪ್ರಧಾನ ದಂಡನಾಯಕ ಚೊಕ್ಕಣ್ಣ ಮತ್ತು ಸಮಸ್ತ ಪ್ರಜೆ ಗಾವುಂಡಗಳು ಸೇರಿ ಮಧುಕೇಶ್ವರ ದೇವರ ಶ್ರೀಕಾರ್ಯಕ್ಕಾಗಿ ಬಿಟ್ಟ ದಾನವನ್ನು ತಿಳಿಸುತ್ತಿದೆ ಈ ಶಾಸನದಲ್ಲಿ ಕಂಠಿಮಯ್ಯನ ವಂಶಾನ್ವಯವನ್ನು ತಿಳಿಸುವಲ್ಲಿ "ಮಧುಸೂದನ ಮತ್ತು ಮುದ್ದಿಯಕ್ಕನ ಮಗ ಕಂಠಿಮಯ್ಯನನ್ನು ವಾಜ್ಯವಂಶೋತ್ತ ಮನಮಳ ಗುಣಾಲಂಕೃತ ಭುವನನುತ ವಾಜಿವಂಶೋದ್ಭವಕರ ವಿಭು ಸೋಮನಾಥನ ಪುತ್ರನೂ, ಕವಿರಾಜನೂ, ಕಾಶ್ಯಪಗೋತ್ರ ವರ್ಧನನಾದ ದೇವಪಾರ್ಯನು ರಚಿಸಿದ್ದಾನೆಂದು ತಿಳಿಯುತ್ತದೆ. [ಎಕ-೧೦, ಅಕೆರೆ ೨೩]. ಮೇಲಿನ ಶಾಸನಗಳನ್ನು ಗಮನಿಸಿದರೆ ಈ ಕೆಲವು ಹೊಸ ವಿಚಾರಗಳು ಗೋಚರಿಸುತ್ತಿವೆ.

೧. ವಾಜಿ ವಂಶವೆಂಬುದು ಪುರಾಣ ಪ್ರಸಿದ್ಧವಾದ ಗುರು ಯಾಜ್ಞವಲ್ಕ್ಯರಿಂದ ವಿಸರಿಸಿದ 'ವಾಜಸೇನಾಯಿ ಕುಲ'ವೇ 'ವಾಜಿವಂಶ'ವೆನ್ನಿಸಿತೆಂದು ಖಚಿತವಾಗಿ ತಿಳಿದುಬರುತ್ತದೆ.

೨. ವಾಜಿವಂಶದವರಲ್ಲಿ ಶೌಂಡಿಲ್ಯ, ಕೌಂಡಿಣ್ಯ, ಶ್ರೀವತ್ಸ, ಕಾಶ್ಯಪ, ಭಾರದ್ವಾಜ, ಆತ್ರೇಯ ಮುಂತಾದ ನಾನಾ ಗೋತ್ರದವರಿದ್ದರೆಂದು ತಿಳಿಯುತ್ತದೆ.

೩. ವಾಜಿವಂಶದ ವಿಪ್ರಶ್ರೇಷ್ಠರು, ವೇದ ಪಾರಂಗತರೂ, ಶೂರರೂ ಆಗಿದ್ದು ರಾಜಾಸ್ಥಾನಗಳಲ್ಲಿ ಮಹಾಪ್ರಧಾನ, ಸರ್ವಾಧಿಕಾರಿ, ಹೆಗ್ಗಡೆ, ದಂಡನಾಯಕರೂ ಶ್ರೀಕರಣದ ಹೆಗ್ಗಡೆ ಮುಂತಾದ ಪ್ರಮುಖ ಸ್ಥಾನಗಳಲ್ಲಿದ್ದು ರಾಜಮನ್ನಣೆ ಪಡೆದಿದ್ದ ಗಣ್ಯವ್ಯಕ್ತಿಗಳಾಗಿದ್ದರು.

೪. ರಾಜರಿದ್ದ ಗ್ರಾಮಗಳನ್ನು ಪಡೆದು ಆಳ್ವಿಕೆ ನಡೆಸುತ್ತಿದ್ದ ಸಾಮಂತರೂ ಊರೊಡೆಯರೂ ಇದ್ದರು.

೫. ಸಾಮಾನ್ಯವಾಗಿ ಈ ಗಣ್ಯರೆಲ್ಲರೂ ತಮ್ಮ ಊರುಗಳಲ್ಲಿ ಶಿವಾಲಯಗಳನ್ನು, ವಿಷ್ಣು ಗೃಹಗಳನ್ನು ನಿರ್ಮಿಸಿ ದೇವರ ಶ್ರೀ ಕಾರ್ಯಕ್ಕಾಗಿ ದಾನ ನೀಡಿರುವುದು ಗಮನಾರ್ಹವಾಗಿದೆ. ಈ ವಂಶಸ್ಥರಲ್ಲಿ ಹರಿಹರ ಭೇದವು ಕಾಣದೆ ಮೂಲತಃ ಇವರು ಇಂದಿಗೂ ಉಳಿದು ಬಂದಿರುವ ಸ್ಮಾರ್ಥ ಬ್ರಾಹ್ಮಣರ ಪಂಗಡದವರೆಂದು ತಿಳಿಯುತ್ತದೆ.

೬. ವಾಜಿ ವಂಶವು ವಿಪ್ರಕುಲಗಳಲ್ಲೆ ಶ್ರೇಷ್ಠ ಕುಲವಾಗಿದ್ದು ವಿಶೇಷವಾಗಿ ಜ್ಞಾನಿಗಳು, ವೇದಾಪಾರಂಗತರೂ, ಪಂಡಿತರೂ, ಕವಿಗಳೂ ಆಗಿದ್ದರು.

ಹೀಗೆ ಸುಮಾರು ಕ್ರಿ.ಶ. ಹತ್ತನೇ ಶತಮಾನದಿಂದ ಕರ್ನಾಟಕದಲ್ಲಿ ವಿಶೇಷವಾಗಿ ಹೊಯ್ಸಳ ನಾಡಿನಲ್ಲಿ ನೆಲೆಸಿದ್ದ ವಾಜಿವಂಶದ ವಿಪ್ರರು, ರಾಜಾಸ್ಥಾನಗಳಲ್ಲಿ ಪ್ರಮುಖ ಹುದ್ದೆಗಳಲ್ಲಿದ್ದ ಕಾರ್ಯನಿರ್ವಹಿಸುತ್ತಾ ನಾಡಿನ ಅಭಿವೃದ್ಧಿಗಾಗಿ ಶ್ರಮಿಸಿರುವುದು ಮತ್ತು ಕೆರೆಗಳು, ದೇವಾಲಯ ಮತ್ತು ಅಗ್ರಹಾರಗಳನ್ನು ನಿರ್ಮಿಸುತ್ತಾ ಯಾಗ ಯಜ್ಞ ಕಾರ್ಯಗಳನ್ನು ತೊಡಗುತ್ತಿದ್ದರು ಹೀಗೆ ನಾಡಿನ ಸಂಸ್ಕೃತಿ ಸಂವರ್ಧನೆಗೆ ಕಾರಣರಾಗಿದ್ದು ಅಂದಿನ ಸಮಾಜದಲ್ಲಿ ಪ್ರಮುಖ ಪಾತ್ರವಹಿಸಿದ್ದನ್ನು ಕಾಣಬಹುದಾಗಿದೆ.

[ಈ ಪ್ರಬಂಧವನ್ನು ಸಿದ್ಧಪಡಿಸುವಲ್ಲಿ ನನಗೆ ಸಲಹೆ ನೀಡಿದ ವೇ॥ ಪಂ॥ ವಿದ್ವಾನ್ ಶ್ರೀ ಎಂ. ವೆಂಕಟೇಶ್ ಭಟ್‌ರವರಿಗೆ ನಾನು ಋಣಿಯಾಗಿದ್ದೇನೆ.]

## ಆಧಾರಸೂಚಿ


೧. ಪ್ರೊ. ಎಸ್.ಕೆ. ರಾಮಚಂದ್ರರಾವ್ – "ವೇದವಾಙ್ಮಯ" (ಲೇ) (ಪು. ೪೫–೫೭) **ಸಾಮಪ್ರಿಯ** [ವೇ॥ಪಂ॥ ಬಿ.ಕೆ. ಶಿವಯ್ಯನವರ ಅಭಿನಂದನಾ ಗ್ರಂಥ.]

೨. ಭಾರತ ಶ್ರೀನಿವಾಸರಾಯರು – **ಶ್ರೀಮಚ್ಛುಕ್ಲಯಜುಶ್ಶಾಖಾಸುವಿಚಾರ** (ಪು. ೧೫).

೩. ಚಕ್ರವರ್ತಿ ಶ್ರೀನಿವಾಸಗೋಪಾಲಾಚಾರ್ಯ – **ಸಂಸ್ಕೃತ ಕನ್ನಡ ನಿಘಂಟು** ಪಂಚಮಭಾಗ, (ಪುಟ ೨೩೭೪).

೪. **ಶ್ರೀ ಮಚ್ಛುಕ್ಲಯಜುಶ್ಶಾಖಾಸುವಿಚಾರ,** ಪುಟ ೧೭.

೫. ವೇದ ವಾಙ್ಮಯ, ಪುಟ ೫೬.

೬ ಡಾ. ಹಂಪ ನಾಗರಾಜಯ್ಯ, 'ಶಾಸನಗಳಲ್ಲಿ ಎರಡು ವಂಶಗಳು', (ಪುಟ ೩೧).

೭. Dr. P.V. Kane-*History of Dharmasastra*, Vol. V, Part - II.

ಡಾ. ಎಸ್.ಕೆ. ಕೊಪ್ಪ*

# ಕ್ಷಿತಿರುಹನೋಂಪಿ : ಒಂದು ಶಾಸನೋಕ್ತ ಅಪರೂಪದ ವ್ರತ

ಮಾನವ, ನಿಸರ್ಗದ ಕೂಸು. ಅವನ ಜೀವನಾಧಾರವಾದ ಮೂಲ ಅಗತ್ಯಗಳಲ್ಲಿ ಗಾಳಿ, ನೀರು, ಅನ್ನ ಪ್ರಮುಖವಾದವು. ಇವುಗಳ ಮಹತ್ವವನ್ನು ಅರಿತ ಮಾನವ ಪೂಜ್ಯಭಾವನೆಯಿಂದ ಅವುಗಳನ್ನು ಪೂಜಿಸಿದ, ಧರ್ಮಭಾವನೆಯಿಂದ ಆರಾಧಿಸಿದ ಮಾನವನ ಬುದ್ಧಿಮತ್ತೆ ವಿಕಾಸವಾದಂತೆಲ್ಲ ಈ ನೈಸರ್ಗಿಕ ಸಂಪನ್ಮೂಲಗಳು ಹೊಸ ಆಯಾಮ ಪಡೆಯುತ್ತ ಸಾಗಿದವು. ಅವನ ವೈಯಕ್ತಿಕ ಹಂಬಲ ಸಾಮಾಜಿಕ ಜೀವನದಲ್ಲಿ ಪರೋಪಕಾರದತ್ತ, ತ್ಯಾಗವೃತ್ತಿಯತ್ತ ಮುಖ ಮಾಡಿತು. ಪ್ರಾಚೀನ ಕಾಲದ ಇಂಥ ಔದಾರ್ಯಗಳಲ್ಲಿ ಗಿಡ-ಮರಗಳನ್ನು ನೆಟ್ಟು ಬೆಳೆಸುವುದೂ ಒಂದು.

ಕಾವ್ಯ-ಶಾಸನಗಳಲ್ಲಿನ ಪುರವರ್ಣನೆಗಳಲ್ಲಿ ಉತ್ಪ್ರೇಕ್ಷೆ ಇದೆಯಾದರೂ ಪ್ರತೀ ಊರಿನ ಹೊರವಲಯದಲ್ಲಿ ಅಂದು ನೈಸರ್ಗಿಕ ಸಸ್ಯರಾಜಿಗಳಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಕನ್ನಡ ಶಾಸನಗಳಲ್ಲಿನ ಅವುಗಳ ವರ್ಣನೆಯನ್ನು ಗಮನಿಸಿದ ಚಿದಾನಂದಮೂರ್ತಿಯವರು 'ಅವು ಸಾರ್ವಜನಿಕ ಉಪಯೋಗಕ್ಕಾಗಿ ಇದ್ದ ವಿಹಾರೋದ್ಯಾನಗಳು ಎಂಬ ಭಾವನೆ ಬರುತ್ತದೆ' ಎಂದಿದ್ದರೆ.[೧] ಪ್ರಾಚೀನ ಕಾಲದ ದೇವಾಲಯಗಳಿಗೆ ನೀಡುವ ದಾನವಸ್ತುಗಳಲ್ಲಿ ಹೊಲ-ಗದ್ದೆ-ತೋಟಗಳೊಂದಿಗೆ ಗಿಡ-ಮರಗಳೂ ಸೇರಿವೆ. ದೇವಾಲಯದ ದೈನಂದಿನ ಪೂಜೆ-ಪುರಸ್ಕಾರ, ವಿಶೇಷೋತ್ಸವ ಆಚರಣೆಗಳಲ್ಲಿ ಎಲೆ-ಅಡಿಕೆ (ತಾಂಬೂಲ ಸೇವೆ) ; ನೈವೇದ್ಯಕ್ಕಾಗಿ ತೆಂಗಿನಕಾಯಿ, ಪೂಜೆಗೆ ಹೂ-ಹಣ್ಣುಗಳು ಬೇಕಿದ್ದವು. ಅದಕ್ಕಾಗಿ ದೇವಾಲಯಗಳಿಗೆ ಧರ್ಮತೋಟ, ಧರ್ಮದಾರವೆ ನಂದನವನಗಳನ್ನು ಬಿಡಲಾಗುತ್ತಿತ್ತು.

ಆ ತೋಟಗಳಲ್ಲಿನ ಮಾವು, ತೆಂಗು, ಹುಣಸೆ, ನೇರಿಲ, ನಿಂಬೆ, ಹಲಸು ಮೊದಲಾದ ಫಲತರುಗಳು ಮತ್ತು ಹೂಗಿಡಗಳನ್ನು ಶಾಸನಗಳು ಉಲ್ಲೇಖಿಸುತ್ತಿದ್ದು ; ಅವು ಒಂದು ಬಗೆಯಲ್ಲಿ ದೇವಾಲಯದ ಅಗತ್ಯಗಳನ್ನು ಪೂರೈಸುವುದರೊಂದಿಗೆ ಆರ್ಥಿಕ ವ್ಯವಸ್ಥೆಗೂ ಸಹಾಯಕವಾಗುತ್ತಿದ್ದವು. ದಕ್ಷಿಣ ಭಾರತದಲ್ಲಿ ಕ್ರಿ.ಶ. ೯ ರಿಂದ ೧೩ನೆಯ ಶತಮಾನದವರೆಗೆ ಇಂಥ ದತ್ತಿಗಳು ಹೇರಳವಾಗಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಅಷ್ಟೇ ಅಲ್ಲ ಅವುಗಳ ಮೇಲ್ವಿಚಾರಣೆಗೆ 'ತೋಟವಾರಿಯಂ' ಎಂಬ ಸಂಪುಟ ವಿರುತ್ತಿದ್ದುದು ಗಮನಾರ್ಹವಾಗಿದೆ.[೨] ಇದು ಗಿಡಮರ ಬೆಳೆಸುವ ಬಗೆಗೆ ಅಲ್ಲಿನ ಸ್ಥಳೀಯ ಆಡಳಿತ ಮತ್ತು ಸಾರ್ವಜನಿಕರು ಹೊಂದಿದ ಆಸ್ಥೆಯನ್ನು ಎತ್ತಿ ತೋರುತ್ತದೆ.

ಆದರೆ ಇಂಥ ಧರ್ಮದಾರವೆಯನ್ನು 'ಕ್ಷಿತಿರುಹ ನೋಂಪಿ' ವ್ರತದ ಭಾಗವಾಗಿ ಬೆಳೆಸಿದ ಒಂದು ಅಪರೂಪದ ಉಲ್ಲೇಖ ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಹಿರೇಬೇವಿನೂರಿನ ಶಾಸನದಲ್ಲಿದೆ.[೩] ನನಗೆ ತಿಳಿದಂತೆ ಇಂಥ ವ್ರತದ ಉಲ್ಲೇಖ ಬೇರೆಡೆಯ ಯಾವ ಶಾಸನಗಳಲ್ಲಿಯೂ ಉಕ್ತಗೊಂಡಿಲ್ಲ. ಹೀಗಾಗಿ ಈ ಶಾಸನಕ್ಕೆ ಎಲ್ಲಿಲ್ಲದ ಮಹತ್ವ ಪ್ರಾಪ್ತವಾಗುತ್ತದೆ.

ಇಂಡಿ ತಾಲೂಕಿನ ಉತ್ತರಕ್ಕೆ ೧೪ ಕಿ.ಮೀ. ಅಂತರದ ಮೇಲಿರುವ ಬೇವಿನೂರು ಹಿಂದೆ ತರ್ದವಾಡಿ ಸಾಸಿರದ ಮೂವತ್ತಾರುಂ ಬಾಡದ ರಾಜಧಾನಿಯಾಗಿತ್ತು. ಅದನ್ನು ಯಾದವ ಚಕ್ರವರ್ತಿ ಭಿಲ್ಲಮದೇವನ ಮಂತ್ರಿ ಮಾಯಿದೇವ ದಂಡನಾಯಕನ ಅಮಾತ್ಯ ಬೊಪ್ಪಣ ಚಮೂಪ ನೋಡಿಕೊಳ್ಳುತ್ತಿದ್ದ. ಈ ಬೊಪ್ಪಣಯ್ಯನ ಅರ್ಧಾಂಗಿ ಸಿರಿದೇವಿಯಕ್ಕ. ಅವಳು ವ್ರತಸಾರ ಸಮುಚ್ಚಯ ಮತ್ತು ಸ್ಮೃತಿಗಳಲ್ಲಿರುವ ನೋಂಪಿಗಳನ್ನೆಲ್ಲ ಮಾಡಿ 'ಕ್ಷಿತಿರುಹ ನೋಂಪಿ' ಒಂದುಳಿದೆಯೆಂದು ಕೇಳಿ ಪರಮಾನಂದಗೊಳ್ಳುತ್ತಾಳೆ. ಅಷ್ಟೇ ಅಲ್ಲ ಭೂತಳದ ಕಲ್ಪವೃಕ್ಷಗಳೆಂದು ಮಾಮರ, ನೇರಿಲೆ, ಈಳೆ, ಪಲಸು, ಖರ್ಜೂರ, ತೆಂಗು, ಪೂಗಿತರು ವನಸ್ಪತಿಗಳನ್ನು ಅತ್ಯಾನಂದದಿಂದ ನೆಟ್ಟು ವ್ರತವನ್ನು ಆಚರಿಸುತ್ತಾಳೆ.

ಮರ ಗಿಡ ನೆಡುವ ಅವಳ ವ್ರತದಿಂದ ಒಂದು ಬನವೇ ಅಲ್ಲಿ ನಿರ್ಮಾಣವಾಗುತ್ತದೆ. ಅದನ್ನು ಕಂಡ ಮಾಯಿದೇವ ದಂಡನಾಯಕ ಮೂವತ್ತಾರುಂಬಾಡದ ಗಾವುಂಡ, ಸೆಟ್ಟಿಗುತ್ತ, ಮುಂಮುರಿದಂಡ, ಪೇರವಣಿಗ, ಗವರೆ-ಗಾತ್ರಿಗ ಮತ್ತು ಸುಂಕಿಗರನ್ನು ನೆರಪಿ ಕುಳ್ಳಿರಿಸಿ ಆ ವನದ ಆಶ್ರಯದಲ್ಲಿ

* ಪದವಿ ಕಾಲೇಜು, ಇಂಡಿ, ವಿಜಾಪುರ ಜಿಲ್ಲೆ.

ಧರ್ಮಸಂತೆ ನೆರೆಯಿಸುವಂಥೆ ಕೇಳಿಕೊಳ್ಳುತ್ತಾನೆ. ಅವರೆಲ್ಲ ತಮ್ಮ ಒಪ್ಪಿಗೆಯನ್ನು ಸೂಚಿಸುತ್ತಾರೆ. ಆಗ ಬನ ಮತ್ತು ಸಂತೆಯನ್ನು ಬೊಪ್ಪಣ ಚಮೂಪನ ಭಿನ್ನಪದಂತೆ ಮಾಯಿದೇವ ಧರ್ಮದಾರವೆ ಮತ್ತು ಧರ್ಮಸಂತೆಯಸ್ನಾಗಿ ಸರ್ವಾರ್ಥಗೊಳಿಸುತ್ತಾನೆ. ಆ ಬನವನ್ನು ಸರಿಯಾಗಿ ನೋಡಿಕೊಂಡು ಹೋಗಲು ಮಾಯಿದೇವನು ತರ್ದವಾಡಿ ನಾಡಿನ ಮನ್ನೆಯ ವೀರಬಂದರಸ ಮತ್ತು ತನ್ನ ಅಧಿಕಾರಿ ಬೊಪ್ಪಣರಿಗೆ ಆದೇಶಿಸುತ್ತಾನೆ. ಆಗ ಅವರು ಬೇವಿನೂರ ಮಲ್ಲಗಾವುಂಡ, ಅಲ್ಲಿಯ ಎಂಟು ಹಿಟ್ಟು, ಸ್ಥಾನಮಾನ್ಯ, ಸೇನಭೋವ, ಅರುವತ್ತೊಕ್ಕಲು ಮೊದಲಾದವರೊಂದಿಗೆ ಸೇರಿ ಆ ಬನದಲ್ಲಿ ಇನ್ನೂ ಕೆಲವು ಮರಗಳನ್ನು ನೆಟ್ಟು ಸರಿಯಾಗಿ ನೋಡಿಕೊಳ್ಳಲು ಬನಕಾರ ಚವುಂಡೆಯ ಮತ್ತು ನನ್ನಯ್ಯರಿಗೆ ೧೨ ಮತ್ತರು ಭೂಮಿ, ೧೨ ಕೆಯ್ ನಿವೇಶನವನ್ನು ದಾನವಾಗಿ ಬಿಡುತ್ತಾರೆ.

ಅಷ್ಟೇ ಅಲ್ಲ ಆ ಬನದ ಮರಗಳಲ್ಲಿ ಕೆಲವು ಫಲ ಭರಿತವಾದಾಗ ಅವುಗಳನ್ನು ಅಲ್ಲಿಯ ತಲೆಕಾವದೇವ, ರೇವಣೇಶ್ವರದೇವ, ಭೋಗೇಶ್ವರದೇವ, ಸಾತೇಶ್ವರದೇವ ಹೀಗೆ ಒಂದೊಂದು ದೇವಾಲಯಕ್ಕೆ ೩ ಮಾವಿನ ಮರ ೧ ಹುಣಿಸೆ, ೧ ನೇರಿಲು ಮರ ಬಿಟ್ಟುಕೊಡುತ್ತಾರೆ. ಹಾಗೇ ಅಲ್ಲಿನ ಬ್ರಹ್ಮಪುರಿಗೆ ೮ ಮಾಮರ, ೧ ಹುಣಿಸೆ, ೧ ನೇಯಿ, ಖೇಡಗೆ ಸ್ವಯಂಭು ದೇವರಿಗೆ ೮ ಮಾಮರ, ೧ ಹುಣಿಸೆ, ೧ ನೇರಿಲು, ಸೆಟ್ಟಿಗುತ್ತ, ಮುಂಮುರಿ ದಂಡಕ್ಕೆ ೫ ಮಾಪಿನಮರ, ಶಾಸನ ಕವಿ ಬೆಡಗಿನ ಸೋಮನಾಥ ಪಂಡಿತರಿಗೆ ೮ ಮಾವಿನಮರ ಹೀಗೆ ಹಂಚಿಕೊಡುತ್ತಾರೆ.

ಈ ಬನದಲ್ಲಿ ನೆರೆಯುವ ಧರ್ಮಸಂತೆಗೆ ಸುಂಕ (ತೆರಿಗೆ) ಪಡೆಯಬಾರದೆಂದು ಮಾಯಿದೇವ ದಂಡನಾಯಕ ಕಟ್ಟಪ್ಪಣೆ ವಿಧಿಸುತ್ತಾನೆ. ನಾವೂ ಪ್ರತಿವರ್ಷ ವನಮಹೋತ್ಸವ ಆಚರಿಸುತ್ತೇವೆ. ಅದಕ್ಕಾಗಿ ಸಾಕಷ್ಟು ಖರ್ಚು-ವೆಚ್ಚ ಮಾಡುತ್ತೇವೆ. ಆದರೆ ಗಿಡಗಳು ಮಾತ್ರ ಇಲ್ಲ. ವರ್ಷ ವರ್ಷ ಗಿಡ ನೆಟ್ಟ ಸ್ಥಳದಲ್ಲಿಯೇ ಮತ್ತೆ ಗಿಡ ನೆಡುವ, ಖರ್ಚು ಮಾಡುವ ಸಾರ್ಥಕ್ಯ ಮಾತ್ರ ನಮ್ಮ ಪಾಲಿಗಿದೆ.

## ಆಧಾರಸೂಚಿ


೧. **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು. ೪೪೩.

೨. ಬಿ.ಜಿ.ಎಲ್. ಸ್ವಾಮಿ., **ಶಾಸನಗಳಲ್ಲಿ ಗಿಡಮರಗಳು,** ಪು. ३४, ३೫.

೩. ಸೌ.ಇ.ಇ. XX ೧೭೫ ಕ್ರಿ.ಶ. ೧೧೯೦.

ಸುಂಕಂ ಗೋವರ್ಧನ *

# ತೆರಕಣಾಂಬಿ ರಾಜ್ಯ

ತೆರಕಣಾಂಬಿಯು ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಹೋಬಳಿ ಕೇಂದ್ರವಾಗಿದ್ದು ಚಾಮರಾಜನಗರ – ಗುಂಡ್ಲುಪೇಟೆ ಮುಖ್ಯರಸ್ತೆಯಲ್ಲಿದೆ.

ತೆರಕಣಾಂಬೆ, ತೆರಕಣಾಂಬಿಯ ಸ್ಥಳ, ತೆರಕಣಾಂಬಿಯ ನಾಡು, ತೆರಕಣಾಂಬೆಯ ರಾಜ್ಯ, ತೆರಕಣಾಂಬೆಯ ರಾಯಕಟಕ, ತೆರಕಣಾಂಬೆಯ ಸೀಮೆ, ತೆರಕಣಾಂಬೆಯ ಮಹಾರಾಜ್ಯ, ತೆರಕಣಾಂಬೆ ಪಟ್ಟಣ, ತೆರಕಣಾಂಬೆಯ ನೆಲವೀಡು, ತೆರಕಣಾಂಬಿಯ ಭಂಡಾರ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿರುವ ಈ ಪ್ರದೇಶವು ಅನೇಕ ನಾಡು, ಸೀಮೆಗಳನ್ನು ಒಳಗೊಂಡ ಒಂದು ವಿಸ್ತಾರವಾದ ಭೂಭಾಗವಾಗಿತ್ತು. ತೆರಕಣಾಂಬೆಯ ರಾಜ್ಯದಲ್ಲಿ ಹಲವಾರು ನಾಡು, ಸೀಮೆಗಳು ಅಂತರ್ಗತವಾಗಿದ್ದು ಹಲವಾರು ರಾಜಮನೆತನಗಳ ಆಶ್ರಯತಾಣವಾಗಿತ್ತು.

'ತೆರಕಣಾಂಬೆ' ಶಬ್ಧದ ಅತ್ಯಂತ ಪ್ರಾಚೀನ ದಾಖಲೆ ಸಿಗುವುದು ಕ್ರಿ.ಶ. ೧೩೧೦ರ ತ್ರಯಂಬಕಪುರ ಶಾಸನದ ಮೂಲಕ. ಅದಕ್ಕೂ ಮುನ್ನ ಈ ಊರಿನ ಹೆಸರು ಕೂಡುಗಲ್ಲೂರು. ರೈಸ್‌ರವರು ದಾಖಲಿಸಿರುವಂತೆ ಈ ಪ್ರದೇಶವು ದ್ರಾವಿಡ, ಕೇರಳ, ಹದಿನಾಡುಗಳ ಗಡಿ ಪ್ರದೇಶ. ಇನ್ನೊಂದು ಅಭಿಪ್ರಾಯದ ಪ್ರಕಾರ ಗಂಗ, ಕೇರಳ, ಕದಂಬ ಅರಸು ಮನೆತನಗಳ ಗಡಿ ಪ್ರದೇಶ. ಈ ಅರಸು ಮನೆತನಗಳ ಗಡಿ ಪ್ರದೇಶವು ಈ ಊರಲ್ಲಿ ಕೂಡುವುದರಿಂದ ಇದು ಕೂಡುಗಲ್ಲೂರು[1] ತ್ರಿಕದಂಬಪುರವೇ ನಂತರ ತೆರಕಣಾಂಬಿಯಾಯಿತು ಎನ್ನುವುದು ವಾದ. ಆದರೆ ಇವೆಲ್ಲ ಪಂಡಿತವಾದಗಳು. ದ್ರಾವಿಡ ಶಬ್ದವಾದ ಕಡವೆಟ ಎಂದರೆ ಬೆಟ್ಟದ ತಪ್ಪಲು. ಈ ತೆರುಕಣಾಂಬೆಯ ಮೂಲವಾಗಿರುವ ಸಾಧ್ಯತೆ ಹೆಚ್ಚಿದೆ.[2]

ಕ್ರಿ.ಶ. ೧೧೯೯ರಷ್ಟು ಹಿಂದಿನಿಂದಲೇ ಅಸ್ತಿತ್ವದಲ್ಲಿದ್ದ 'ಕುಡುಗುನಾಡು' ಮುಂದೆ ಹೊಯ್ಸಳರ ಆಳ್ವಿಕೆಯು ಕೊನೆಯಾಗುವವರೆಗೂ ಕುಡುಗುನಾಡು, ಕಾರೆನಾಡು, ಹೊರನಾಡು, ಅಂಣಿನಾಡು, ಹಿರಿಯನಾಡು, ಎಡತಲೆನಾಡು, ತೊರೆನಾಡು, ಹುಲ್ಲನಹಳ್ಳಿಯನಾಡು, ಹೊದೆನಾಡು, ಎಡೆಯಾಲನಾಡು, ಕಣಾಲನಾಡು, ಸುಗುನಾಡು, ನಪಿಲೆನಾಡು ಹಾಗೂ ಬಯಲ್ನಾಡುಗಳನ್ನು ಒಳಗೊಂಡ 'ಹದಿನಾಲ್ಕು ನಾಡಿನ' ಕೇಂದ್ರಸ್ಥಳವಾಗಿದ್ದಿತು.[3] ಹೊಯ್ಸಳರ ನಂತರ ವಿಜಯನಗರದ ಅರಸರ ಕಾಲದಲ್ಲಿ ಇವುಗಳನ್ನು ಒಳಗೊಂಡ ಇವತ್ತಿನ ಇಡೀ ಚಾಮರಾಜನಗರ ಜಿಲ್ಲೆ, ಮೈಸೂರು ಜಿಲ್ಲೆಯ ನಂಜನಗೂಡು ಹಾಗೂ ಹೆಗ್ಗಡದೇವನಕೋಟೆ ತಾಲ್ಲೂಕುಗಳ ಜೊತೆಗೆ ತಮಿಳುನಾಡಿನ ಈರೋಡು ಹಾಗೂ ಕೊಯಮತ್ತೂರು ಜಿಲ್ಲೆಯ ಕೆಲ ಭೂಭಾಗಗಳನ್ನೊಳಗೊಂಡ ವಿಸ್ತಾರವಾದ ಭೂಪ್ರದೇಶವನ್ನು ತೆರಕಣಾಂಬೆಯ ರಾಜ್ಯವನ್ನಾಗಿ ಪರಿವರ್ತಿಸಲಾಯಿತು.

ಹೊಯ್ಸಳರ ಆಳ್ವಿಕೆ ಕೊನೆಯಾಗುವ ವೇಳೆಗೆ 'ಹದಿನಾಲ್ಕು ನಾಡು' ತನ್ನ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಂಡು ತೆರಕಣಾಂಬೆ ರಾಜ್ಯದಲ್ಲಿಯೇ ಸೇರಿಹೋಯಿತು. ಕ್ರಿ.ಶ. ೧೪೧೪ ರಿಂದ ೧೫೩೦ ರವರೆಗೆ ಉಮ್ಮತ್ತೂರನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಉಮ್ಮತ್ತೂರಿನ ಪ್ರಭುಗಳು, ಯಳಂದೂರನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳಿದ ಹದಿನಾಡಿನ ಅರಸರು, ಕಳಲೆಯನ್ನು ಕೇಂದ್ರವನ್ನಾಗಿಸಿಕೊಂಡು ಆಳಿದ ಕಳಿಳಲೆ ದಳವಾಯಿ ವಂಶದ ಪ್ರಭುಗಳು ಕೆಲಕಾಲ ಈ ಪ್ರದೇಶದ ಮೇಲೆ ಹಿಡಿತವನ್ನು ಸಂಪಾದಿಸಿದ್ದರು. ಕ್ರಿ.ಶ. ೧೩೧೦ ರಿಂದ ೧೭ನೆಯ ಶತಮಾನದವರೆಗಿನ ಶಾಸನಗಳು ಈ ಪ್ರದೇಶವನ್ನು ಆಳಿದವರ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.

ವಿಜಯನಗರದ ಆಡಳಿತದಲ್ಲಿ ತೆರಕಣಾಂಬೆಯ ಸೀಮೆ ಹಾಗೂ ನಾಡುಗಳನ್ನು ಸಂವಾದಿಯಾಗಿಯೇ ಬಳಸಲಾಗಿದೆಯಾದರೂ ತೆರಕಣಾಂಬೆಯ ನಾಡು, ತೆರಕಣಾಂಬೆಯ ಸೀಮೆಯಲ್ಲಿದ್ದ ಒಂದು ಆಡಳಿತ ಘಟಕ ಎಂದೇ ಭಾವಿಸಬೇಕಾಗುತ್ತದೆ. ಈ ಪ್ರದೇಶದಲ್ಲಿ ನಾಡು, ಸ್ಥಳ, ಸೀಮೆಗಳನ್ನು ಅತ್ಯಂತ ಸ್ಪಷ್ಟವಾದ ಅರ್ಥದಲ್ಲಿ ಉಪಯೋಗಿಸದೆ ಅನೇಕ ಗೊಂದಲಗಳಿಗೆ ಕಾರಣವಾಗಿದೆ. ಬೇರೆ ಬೇರೆಯೇ ಆದ ನೀಲನಕ್ಷೆಯನ್ನು ತಯಾರಿಸಿಕೊಂಡ ನಂತರ ಈ ವಿಂಗಡಣೆಗಳು ಸ್ವಲ್ಪಮಟ್ಟಿಗೆ ಗೋಚರವಾಗುತ್ತವೆ.

* ನಂ. ೬೭, ೧ನೇ ಅಂತಸ್ತು, ಕೋದಂಡರಾಮಪುರ, ೫ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩.

ತೆರಕಣಾಂಬೆ ರಾಜ್ಯದಲ್ಲಿ ಅಂತರ್ಗತವಾಗಿದ್ದ ಸ್ಥಳ, ಸೀಮೆ, ನಾಡುಗಳನ್ನು ಈ ಕೆಳಗಿನಂತೆ ವರ್ಗೀಕರಿಸ ಬಹುದಾಗಿದೆ.

**ಹಂಗಳ ಸ್ಥಳ :** ತೆರಕಣಾಂಬಿಯ ಶಾಸನವೊಂದು[೪] ಹಂಗಳ ಸ್ಥಳವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೬೪೦ರ ಈ ಶಾಸನದಲ್ಲಿ ಹಂಗಳ ಸ್ಥಳದಲ್ಲಿದ್ದ ಪುತ್ತನಪುರವನ್ನು ಉಲ್ಲೇಖಿಸುತ್ತದೆ. ಇದೇ ಗ್ರಾಮವನ್ನು ಇದೇ ಸ್ಥಳದಲ್ಲಿದೆ ಎಂದು ಕ್ರಿ.ಶ. ೧೬೬೦ರ ಪುತ್ತನಪುರ ಶಾಸನವೂ ದಾಖಲಿಸುತ್ತದೆ.[೫]

**ಸಿರಿಯೂರು ಸ್ಥಳ :** ತ್ರಯಂಬಕಪುರದ ತಾಮ್ರಶಾಸನ ವೊಂದು[೬] ತೆರಕಣಾಂಬೆ ರಾಜ್ಯದ ಪಡುವನಾಡು ಸೀಮೆ ಯಲ್ಲಿದ್ದ ಸಿರಿಯೂರು ಸ್ಥಳವನ್ನು ಉಲ್ಲೇಖಿಸುತ್ತದೆ. ಈ ಶಾಸನದ ಕಾಲ ಕ್ರಿ.ಶ. ೧೫೨೧. ಈ ಶಾಸನವು ಸಿರಿಯೂರು ಸ್ಥಳದಲ್ಲಿದ್ದ ಸಿರಿಯೂರು, ಗೋಣಿಯಪುರ, ಮರೊಡಮಲಿ, ಐಚ್ಚನಹಳ್ಳಿ, ಸಂಪಗೆಯಪುರ, ಸೊಡಲೀಪುರ, ಸೋಮೆಯ ಪುರ, ಗಳಿಗೆಯಪುರ, ಹರದೀಪುರ, ಕುಂಮಾರನಪುರ, ಜಯಿದಾನಪುರ, ಮೋಟಗೌಡನಹಳ್ಳಿ, ಅಪಣನಪುರ, ಬದನೇಪುರ, ಗಂಗೋಪುರ ಗ್ರಾಮಗಳನ್ನು ಉಲ್ಲೇಖಿಸುತ್ತದೆ.

**ಪಡಗುನಾಡು ಸ್ಥಳ :** ಗುಂಡ್ಲುಪೇಟೆ ತಾಲ್ಲೂಕಿನ ತ್ರಯಂಬಕಪುರದ ಶಾಸನವೊಂದು[೭] ತೆರಕಣಾಂಬೆಯ ಸೀಮೆಯ ಪೆಡುಗುನಾಡು ಸ್ಥಳದ ಹುಲ್ಲಾನವನ್ನೇ ಕಾಮಲಾಪುರ ಅಗ್ರಹಾರವನ್ನಾಗಿ ಪರಿವರ್ತಿಸಿ ಸರ್ವಮಾನ್ಯ ದಾನವನ್ನು ನೀಡಲಾಗಿದೆ ಈ ಶಾಸನದ ಕಾಲ ಕ್ರಿ.ಶ. ೧೫೩೩.

**ಕಣಿಗೆಹಳ್ಳಿಯ ಸ್ಥಳ :** ಗುಂಡ್ಲುಪೇಟೆ ತಾಲ್ಲೂಕಿನ ಗೋಪಾಲಪುರದ ಕ್ರಿ.ಶ. ೧೫೩೭ರ ಅಚ್ಯುತರಾಯನ ಕಾಲದ ಶಾಸನವು[೮] ತೆರಕಣಾಂಬೆಯ ಸೀಮೆಯಲ್ಲಿದ್ದ ಕಣಿಗೆಹಳ್ಳಿಯ ಸ್ಥಳದಲ್ಲಿದ್ದ ಯಿಂಗಳವಾಡಿ, ಹೊನ್ನಗೌಂಡನಹಳ್ಳಿ, ಬಸವನ ಕೆರೆಗಳನ್ನು ಪ್ರಸ್ತಾಪಿಸುತ್ತದೆ.

**ಗರಗನಹಳ್ಳಿಯ ಸ್ಥಳ :** ಗುಂಡ್ಲುಪೇಟೆಯ ರಾಮೇಶ್ವರ ದೇವಾಲಯದ ಶಾಸನವೊಂದು[೯] ಕ್ರಿ.ಶ. ೧೩೭೪ ರದಾಗಿದ್ದು ಗರಗನಹಳ್ಳಿಯ ಸ್ಥಳವು ತಿರುಕಣಾಂಬೆಯ ರಾಯಕಟಕದಲ್ಲಿತ್ತು ಎಂದು ಹೇಳುತ್ತದೆ. ಈ ಗರಗನಹಳ್ಳಿಯು ಇಂದಿಗೂ ಇದೇ ಹೆಸರಲ್ಲಿದ್ದು, ಗುಂಡ್ಲುಪೇಟೆ ತಾಲ್ಲೂಕಿನಲ್ಲಿದೆ.

**ಬಳುಕೆರೆ ಸ್ಥಳ :** ಗುಂಡ್ಲುಪೇಟೆಯ ಇದೇ ಶಾಸನವು ತಿರುಕಣಾಂಬೆಯ ರಾಯಕಟಕದಲ್ಲಿದ್ದ ಹುಲ್ಲನಹಳ್ಳಿಯ ಸ್ಥಳದ ಪಕ್ಕದಲ್ಲಿದ್ದ ಬಳುಕೆರೆ ಸ್ಥಳವನ್ನು ಹೆಸರಿಸುತ್ತದೆ. ಇದು ಇಂದಿನ ಚಾಮರಾಜನಗರ ತಾಲ್ಲೂಕಿನಲ್ಲಿದೆ.

**ಮಾರುತ್ತರ ಸ್ಥಳ :** ಬಳುಕೆರೆ ಸ್ಥಳದ ಪಕ್ಕಕ್ಕೆ ಬರುವ ಈ ಜಾಗವೂ ಸಹ ಈ ಮೇಲೆ ಹೇಳಿದ ಶಾಸನದಲ್ಲಿಯೇ ದಾಖಲಾಗಿದೆ.

**ಕೊಲುಗಾಣದ ಸ್ಥಳ :** ಕ್ರಿ.ಶ. ೧೩೭೨ರ ಗುಂಡ್ಲುಪೇಟೆಯ ಶಾಸನದಲ್ಲಿ ಉಕ್ತವಾಗಿರುವ ಈ ಕೊಲುಗಾಣದ ಸ್ಥಳವು[೧೦] ಗುಂಡ್ಲುಪೇಟೆ ತಾಲ್ಲೂಕಿನ ಸೋಮೆಹಳ್ಳಿಯ ಕ್ರಿ.ಶ. ೧೪೨೨ರ ಶಾಸನದಲ್ಲಿ[೧೧] ಮತ್ತೆ ಪ್ರಸ್ತಾಪವಾಗುತ್ತದೆ. ಈ ಶಾಸನದಲ್ಲಿ ಬಾಗೇ ಸೋಮೆಹಳ್ಳಿಯು ಕೊಲುಗಾಣದ ಸ್ಥಳದಲ್ಲಿ ಇದ್ದುದನ್ನು ತಿಳಿಸುತ್ತದೆ. ಚಾಮರಾಜನಗರದ ೩೭೨ ಸಂಖ್ಯೆಯ ಶಾಸನವು ಕ್ರಿ.ಶ. ೧೪೨೨ರದ್ದಾಗಿದ್ದು ಕುಲುಗಾಣದ ಭಾಗದಲ್ಲಿ ಮಲೆಯೂರು, ಹುಣಸೂರುಪುರ, ಸೂರುಪುರ, ಬೆಟ್ರಹಳ್ಳಿ, ಮಲ್ಲೂರು, ಚೌಡಿಹಳ್ಳಿಗಳು ಇದ್ದುದನ್ನು ದಾಖಲಿಸುತ್ತದೆ.

**ಹುಲ್ಲನಹಳ್ಳಿಯ ಸ್ಥಳ :** ಗುಂಡ್ಲುಪೇಟೆಯ ಕ್ರಿ.ಶ. ೧೩೭೨ ಶಾಸನದಲ್ಲಿ ಪ್ರಸ್ತಾಪಿಸಲಾಗಿರುವ ಹುಲ್ಲನಹಳ್ಳಿಯ ಸ್ಥಳಕ್ಕೆ ನಂತರ ಕ್ರಿ.ಶ. ೧೬೩೮ರ ತೆರಕಣಾಂಬಿಯ ಶಾಸನದಲ್ಲಿ[೧೨] ಉಲ್ಲೇಖಿತ ಗೊಂಡಿರುವ ಕಣಿಯಾಲನಾಡು ಅಂತರ್ಗತ ವಾಗಿದ್ದು ಈ ಕಣಿಯಾಲ ನಾಡಿನಲ್ಲಿ ಪಿಲ್ಲಹಳ್ಳಿ, ತರ್‍ಗನಹಳ್ಳಿ, ಅಲ್ಲಾಳನಾಥ ಪುರಗಳು ಇದ್ದುದನ್ನು ತಿಳಿಸುತ್ತದೆ. ಈ ಹುಲ್ಲನಹಳ್ಳಿಯು ಇಂದಿಗೆ ನಂಜನಗೂಡು ತಾಲ್ಲೂಕಿನಲ್ಲಿದೆ.

**ಹೊಸನಾಡು ಸ್ಥಳ :** ಬಿಳಿಗಿರಿರಂಗನಬೆಟ್ಟದ ತಪ್ಪಲಿಗೆ ಬರುವ ಹೊಸನಾಡು ಸ್ಥಳದಲ್ಲಿ ಮೇಲೂರು, ಕಾಲುವಳ್ಳಿ, ಕಂಠನಕಟ್ಟೆ ಹಾಗೂ ಬಸವನಪುರಗಳು ಇದ್ದುದನ್ನು ಕ್ರಿ.ಶ. ೧೪೯೨ರ ಚಾಮರಾಜನಗರ ತಾಲ್ಲೂಕಿನ ಬಸವನಪುರ ಶಾಸನವು ದಾಖಲಿಸುತ್ತದೆ.[೧೩]

**ತಗಡೂರು ಸ್ಥಳ :** ಚಾಮರಾಜನಗರ ತಾಲ್ಲೂಕಿನ ಹೆಗ್ಗೊಠಾರದಲ್ಲಿರುವ ಕ್ರಿ.ಶ. ೧೫೨೭ರ ಕೃಷ್ಣದೇವರಾಯನ ಶಾಸನವೊಂದು[೧೪] ವುಮ್ಮತ್ತೂರು ಸೀಮೆಯ ತಗಡೂರು ಸ್ಥಳದಲ್ಲಿದ್ದ ಹೆಗ್ಗೊಠಾರವನ್ನು ಅವಸರದ ದೇವರಸಯ್ಯನ ವರಿಗೆ ದಾನ ನೀಡಿದ್ದನ್ನು ದಾಖಲಿಸಿದೆ. ಗುಂಡ್ಲುಪೇಟೆ ತಾಲ್ಲೂಕಿನಲ್ಲಿರುವ ಹೊರೆಯಾಲದ ಕ್ರಿ.ಶ. ೧೫೪೬ರ ದಾನ ಶಾಸನದಲ್ಲಿ[೧೫] ಅಚ್ಚುತರಾಯನು ತಗಡೂರಿನ ಚಿಕ್ಕಮಲಯ್ಯನಿಗೆ ನೀಡಿರುವ (೧೫೪೬) ಗ್ರಾಮವು ಉಮ್ಮತ್ತೂರಿನ ಸೀಮೆಯ ತಗಡೂರು ಸ್ಥಳದ ಹೊಜಿಯಾಲ ಎಂದಿದೆ.

**ಕಲ್ಲುಹಳ್ಳಿಯ ಸ್ಥಳ :** ಈಗ ಬೇಚಿರಾಕ್ ಆಗಿರುವ ಗುಂಡ್ಲುಪೇಟೆ ತಾಲ್ಲೂಕಿನ ಹಳ್ಳದಪುರವು ಕ್ರಿ.ಶ. ೧೫೫೦ರಲ್ಲಿ ತೆರಕಣಾಂಬಿ ಸೀಮೆಯಲ್ಲಿದ್ದ ಕಲ್ಲುಹಳ್ಳಿಯ ಸ್ಥಳಕ್ಕೆ ಸೇರಿತ್ತು.[೧೬]

**ಉಯಂಬಳ್ಳಿಯ ಸ್ಥಳ :** ಚಾಮರಾಜನಗರ ತಾಲ್ಲೂಕಿನ ನಂಜೇದೇವರಪುರದ ಶಾಸನವೊಂದು[೧೭] ಕ್ರಿ.ಶ. ೧೫೩೧ ರದಾಗಿದ್ದು ಇದು ಉಯಂಬಳ್ಳಿಯ ಸ್ಥಳದ ಡಣಾಯಕನ ಪುರವನ್ನು ಉಲ್ಲೇಖಿಸುತ್ತದೆ. ಇದೇ ತಾಲ್ಲೂಕಿನ ಸೋಮಸಮುದ್ರದ ಕಾಳಿಕೆರೆ ಏರಿಯ ಮೇಲಿರುವ ಶಾಸನವು[೧೮] ಈ ಸೋಮಸಮುದ್ರವು ಉಯಂಬಳ್ಳಿ ಸ್ಥಳದಲ್ಲಿ ಇದ್ದುದನ್ನು ತಿಳಿಸುತ್ತದೆ.

**ತೆರಕಣಾಂಬೆಯ ಸ್ಥಳ / ನಾಡು :** ಕ್ರಿ.ಶ. ೧೫೪೬ರ ಹಸುಗೂಲಿಯ ಶಾಸನದಲ್ಲಿ[೧೯] ಈ ಹಸುಗೂಲಿಯು ತೆರಕಣಾಂಬೆಯ ಸೀಮೆಯಲ್ಲಿತ್ತು. ಕ್ರಿ.ಶ. ೧೫೪೮ರ ಕೋಟಿಕೆರೆಯ ಶಾಸನದ ಪ್ರಕಾರ[೨೦] ಕೋಟೆಯಕೆರೆ ರಾಮನಪುರಗಳೂ, ಕ್ರಿ.ಶ. ೧೪೭೬ರ ಸೋಮಹಳ್ಳಿಯ ಶಾಸನದ ಪ್ರಕಾರ[೨೧] ತೆರಕಣಾಂಬಿ ನಾಡಿನ ಸೋಮೆಹಳ್ಳಿ, ಮಾಧವಪಟ್ಟಣ, ಮದ್ದೂರು, ಹೊನ್ನಗೊಂಡನಹಳ್ಳಿಗಳೂ, ಕ್ರಿ.ಶ. ೧೪೮೨ರ ಚಿಕ್ಕಣಾಪುರದ ಶಾಸನದ ಪ್ರಕಾರ[೨೨] ತೆರಕಣಾಂಬಿ ನಾಡಿನ ಕಾಚಗೊಂಡನಹಳ್ಳಿ, ಮಾದಣನಹಳ್ಳಿ, ಚಿಕ್ಕಣನಹಳ್ಳಿಗಳೂ, ಕ್ರಿ.ಶ. ೧೫೫೩ರ ಹೊರೆದಹಳ್ಳಿಯ ಶಾಸನದ ಪ್ರಕಾರ[೨೩] ಹೂರದಹಳ್ಳಿಯು, ಕ್ರಿ.ಶ. ೧೫೦೪ರ ತೆರಕಣಾಂಬಿ ಶಾಸನದ ಪ್ರಕಾರ[೨೪] ತೆರಕಣಾಂಬಿ ನಾಡಿನ ಹೊರದಾಟು, ಪಿರಿಯೂರು ಕ್ರಿ.ಶ. ೧೫೧೩ರ ತ್ರಯಂಬಕಪುರದ ಶಾಸನದ ಪ್ರಕಾರ[೨೫] ತೆರಕಣಾಂಬೆ ಸೀಮೆಯಳಿ ತ್ರಯಿಂಬಕಪುರ, ಮದ್ದೂರು, ಕಾಲುವಳಿ, ಎಳಗನೂರು, ಚಿಣಮೆ, ಕೋಟಸೋಗೆ, ಬೊಮ್ಮನಹಳ್ಳಿ, ತುಪ್ಪೂರು, ಬಲಚವಾಡಿ, ಮಂಗಲದ ಮಾಳ, ಮಾಧವಪಟ್ಟಣ ಗಳೂ, ಕ್ರಿ.ಶ. ೧೪೧೭ರ ಇದೇ ಊರಿನ ಶಾಸನದ ಪ್ರಕಾರ[೨೬] ಹಂದೀಪುರ, ತಂಣಿಲೆ, ಗುರುಹಳ್ಳಿ, ಮಲೂರು, ಅಂಕೇಹಳ್ಳಿ, ಕೊಡೆಹಳ್ಳಿ, ಕೂತನೂರು, ವಿಜಯಾಪುರ, ನಲುವೂರು, ಮುಂತಾದ ಅನೇಕ ಗ್ರಾಮಗಳು, ೧೫ನೆಯ ಶತಮಾನದ ಇದೇ ಊರಿನ ಇನ್ನೊಂದು ಶಾಸನದ ಪ್ರಕಾರ[೨೭] ಮಡುವಿನಬೀಡು, ಇದೇ ಊರಿನ ಕ್ರಿ.ಶ. ೧೫೨೧ರ ಶಾಸನದ ಪ್ರಕಾರ[೨೮] ತೆರಕಣಾಂಬೆಯ ಸ್ಥಳದಲ್ಲಿ ಅಣ್ಣಿಯೂರು, ಚೆನ್ನಯ್ಯನಪುರ, ಚಿರುಕನಹಳ್ಳಿ, ಹೊಸಹಳ್ಳಿ, ಚೌಡೇಹಳ್ಳಿಗಳೂ, ಕ್ರಿ.ಸ. ೧೬೦೭(೭)ರ ಎಲೆಯೂರಿನ ಶಾಸನದ ಪ್ರಕಾರ[೨೯] ತೆರಕಣಾಂಬಿ ಸೀಮೆಯ ಯರೆಯೂರು, ಕಳಿಕೊಟಾರ ಗಳೂ, ಚಾಮರಾಜನಗರದ ಕ್ರಿ.ಶ. ೧೬೭೫ರ ಶಾಸನದ ಪ್ರಕಾರ[೩೦] ತೆರಕಣಾಂಬಿ ಸ್ಥಳದ ಕಬ್ಬಿಗನಪುರ, ಹುಲ್ಲಾನಾ, ಶೀಲವಂತನಪುರ, ಹುಲೇಕೆರೆ, ತವರಿನಪುರ, ಕೊಡಸೋಗೆ, ನಾಯಿಂದನಕಟ್ಟೆ, ಕಂದಾಗಾಲಗಳೂ, ಕ್ರಿ.ಶ. ೧೫೫೫ರ ಅರಕಲವಾಡಿಯ ಶಾಸನದ ಪ್ರಕಾರ[೩೧] ಅರಕಲವಾಡಿ, ಮಲ್ಲಯ್ಯನಪುರ, ರಂಗರಾಜಪುರ, ಕ್ರಿ.ಶ. ೧೬೧೦ರ ಕಲಗೆರೆಯ ಶಾಸನದ ಪ್ರಕಾರ[೩೨] ಈ ಊರೂ, ಕ್ರಿ.ಶ. ೧೬೬೮ರ ಕೇತಹಳ್ಳಿಯ ಶಾಸನದ ಪ್ರಕಾರ[೩೩] ಕೇತಿಹಳ್ಳಿಯೂ, ಈ ತೆರಕಣಾಂಬಿಯ ಸೀಮೆ / ನಾಡು / ಸ್ಥಳಗಳಲ್ಲಿ ಅಂತರ್ಗತವಾಗಿದ್ದವು. ಈ ವಿಶಾಲವಾದ ಪ್ರದೇಶವು ಇಂದಿನ ಗುಂಡ್ಲುಪೇಟೆ, ಚಾಮರಾಜನಗರ ಹಾಗೂ ನಂಜನಗೂಡು ತಾಲ್ಲೂಕುಗಳನ್ನು ಒಳಗೊಂಡಿತ್ತು.

**ಉಮ್ಮತ್ತೂರು ಸೀಮೆ :** ಈ ಹಿಂದೆಯೇ ಪ್ರಸ್ತಾಪಿಸಿದ ಹಾಗೆ ಉಮ್ಮತ್ತೂರು ಸೀಮೆಯಲ್ಲಿ ತಗಡೂರು ಸ್ಥಳವು ಅಂತರ್ಗತವಾಗಿತ್ತು. ಈ ತಗಡೂರು ಸ್ಥಳದಲ್ಲಿ ಹೆಗ್ಗೊತಾರ, ಉಮ್ಮತ್ತೂರು, ಹೊರೆಯಾಲ ಗ್ರಾಮಗಳಿದ್ದವು.

**ಪಡುವನಾಡು ಸೀಮೆ :** ಈ ಹಿಂದೆಯೇ ಪ್ರಸ್ತಾಪಿಸಿದ ಹಾಗೆ ಪಡುವನಾಡು ಸೀಮೆಯಲ್ಲಿ ಸಿರಿಯೂರು ಸ್ಥಳವಿತ್ತು.

**ವಿಜಯಾಪುರದ ಸೀಮೆ :** ಕೊಳ್ಳೇಗಾಲ ತಾಲ್ಲೂಕಿನ ವಿಜಯಾಪುರದ ಆಸುಪಾಸು ಇದ್ದ ಗ್ರಾಮಗಳನ್ನು ಒಳಗೊಂಡ ವಿಜಯಾಪುರದ ಸೀಮೆಯಲ್ಲಿ ಕ್ರಿ.ಶ. ೧೫೫೪ರ ಗುಂಡ್ಲುಪೇಟೆಯ ಶಾಸನದ ಪ್ರಕಾರ[೩೪] ವಿಜಯಾಪುರವೂ, ಗುಂಡ್ಲುಪೇಟೆ ತಾಲ್ಲೂಕಿನ ಮಸೆಹಳ್ಳಿ ಶಾಸನದ ಪ್ರಕಾರ[೩೫] ಮಸೆಹಳ್ಳಿ, ಮಬುಜ ಕ್ರಿ.ಶ. ೧೫೪೬ರ ಎಳೆಪುರ, ಕೆಂಗಹಳುಪುರಗಳು ಅಂತರ್ಗತವಾಗಿದ್ದವು.

**ವೆಲಗಿನ ಸೀಮೆ :** ಕ್ರಿ.ಶ. ೧೪೧೭ರ ತ್ರಯಂಬಕಪುರ ಶಾಸನದ ಮೂಲಕ[೩೬] ನಮಗೆ ಸಿಗುವ ಅತ್ಯಂತ ಮಹತ್ವದ ಸಂಗತಿಯೆಂದರೆ ತಮಿಳುನಾಡು ಜಿಲ್ಲೆಯ ಭವಾನಿ ನದಿಯ ಕೆಳಗೆ ಇರುವ ಭಾಗವು ವೆಲಗಿನ ಸೀಮೆಯಾಗಿ ತೆರಕಣಾಂಬಿ ರಾಜ್ಯದಲ್ಲಿ ಇತ್ತು. ಈ ವೆಲಗಿನ ಸೀಮೆಯಲ್ಲಿ ಕಬುಪನಾಡಿದ್ದು ಈ ಕಬುಪನಾಡಿನಲ್ಲಿ ಆದಿಯೂರು, ಪಾಲುದೊಳಿಲು, ಕಲಿಗಿ, ವೊಡಚಿಯಾರುಗಳು ಪುಂದನಾಡಿನಲ್ಲಿ ಬಂಗೆಡಗ್ರಾಮವೂ ಸೇರಿದ್ದವು.

**ಕುಲುಮಡ ಸೀಮೆ :** ಕ್ರಿ.ಶ. ೧೪೧೭ರ ತ್ರಯಂಬಕಪುರದ ಶಾಸನದ ಮೂಲಕ ನಮಗೆ ಸಿಗುವ ವಿಶೇಷ ಸಂಗತಿಯೆಂದರೆ ಎಲೂರು, ಕಣಿವೂರುಗಳು ಕುಲುಮಡೆ ಸೀಮೆಯಲ್ಲಿದ್ದವು. ಮಾರತನಲ್ಲೂರನ್ನು ಒಳಗೊಂಡ ವೆಡವರಸನಾಡೂ ಸಹ ಈ ಕುಲುಮಡ ಸೀಮೆಯಲ್ಲಿದ್ದವು. ಇವು ತಮಿಳುನಾಡಿನ ಭವಾನಿ ನದಿಯ ಕೆಳಗಿನ ವೆಲಗಿನಸೀಮೆಯ ಪಕ್ಕದಲ್ಲಿ ಇದ್ದು, ಈ ವಡವರಸನಾಡು ಕೊಂಗಿನ ಸೀಮೆಯಲ್ಲಿತ್ತು ಎಂದು ಇದೇ ಊರಿನ ಇನ್ನೊಂದು ಶಾಸನವು[೩೭] ತಿಳಿಸುತ್ತದೆ.

# ತೆರಕಣಾಂಬಿ ರಾಜ್ಯ



**ಕೊಂಗಿನ ಸೀಮೆ :** ಕ್ರಿ.ಶ. ೧೩೨೧ರ ತ್ರಯಂಬಕಪುರದ ಶಾಸನದ ಪ್ರಕಾರ (ಗುಂ ೧೫೦) ತೆರಕಣಾಂಬಿ ರಾಜ್ಯದ ಕೊಂಗಿನ ಸೀಮೆಯಲ್ಲಿ ಅಸಗರಹಾಲ. ಆದಿಯೂರು, ಕರಿಂಗಿ, ವೊಡಚಿಂಯೂರು, ಮಾದಪಲೂರುಗಳು ಅಂತರ್ಗತವಾಗಿದ್ದವು.

**ಕುಡುಗು ನಾಡು :** ತೆರಕಣಾಂಬೆಯ ನಾಡು ಹಾಗೂ ಕುಡುಗು ನಾಡುಗಳು ಸಂವಾದಿಯಾಗಿಯೇ ಬರುತ್ತದೆ. ಈ ಎರಡೂ ನಾಡೂ ಒಂದೇ. ಇದರ ಕೇಂದ್ರ ಸ್ಥಳ ತೆರಕಣಾಂಬಿ. ಕೆಲವು ಶಾಸನಗಳು ತೆರಕಣಾಂಬಿ ನಾಡೆಂದರೆ ಕೆಲವು ಶಾಸನಗಳು ಕುಡುಗುನಾಡು ಎನ್ನುತ್ತವೆ. ಆದರೆ ತೆರಕಣಾಂಬಿಯ ಹಲವಾರು ಸೀಮೆಗಳಲ್ಲಿ ಕುಡುಗುನಾಡು ಕೂಡ ಒಂದಾಗಿತ್ತು. ಈ ಕುಡುಗುನಾಡಿನಲ್ಲಿ ಹೊನ್ನಕಹಳ್ಳಿ, ಮಳವಳ್ಳಿ, ದೇವಲಾಪುರ, ನಂಜನಾಥಪುರ, ಗೀತಯ್ಯಪುರ, ಕೋಡಿಹಳ್ಳಿ, ಅಂಣೆಯೂರು, ಚೆನ್ನಯ್ಯನಪುರ, ಕೋಡಿಯಪುರ, ಆಲೇಡಿ, ಆಲವಾಡಿ, ಗೊಂಡನಹಳ್ಳಿ, ಮಚ್ಚಂದಿ, ಹೆಗ್ಗವಾಡಿ, ಗೊಂಡಿಗನಹಳ್ಳಿ, ಮಡೆಹಳ್ಳಿ, ರಾಮನಾಥಪುರ, ಕೆಲಸೂರು, ಚಿತ್ರಹಳ್ಳಿ ಗ್ರಾಮಗಳು ಅಂತರ್ಗತವಾಗಿದ್ದುದನ್ನು ಗುಂಡ್ಲುಪೇಟೆ ತಾಲ್ಲೂಕಿನ ಹಲವಾರು ಶಾಸನಗಳು ದಾಖಲಿಸುತ್ತವೆ. ಈ ಕುಡುಗು ನಾಡು ಇಂದಿನ ಗುಂಡ್ಲುಪೇಟೆ ತಾಲ್ಲೂಕಿನ ಅರ್ಧ ಭಾಗವನ್ನು ಹೊಂದಿದ್ದಿತು. ಹುಲಿಗನ ಮರಡಿಯ ತಪ್ಪಲಿನಲ್ಲಿದ್ದ ಈ ನಾಡು ಗೋಪಾಲಸ್ವಾಮಿ ಬೆಟ್ಟದವರೆಗೂ ವ್ಯಾಪಿಸಿತ್ತು. ಒಂದೇ

ಒಂದು ಶಾಸನವು ಕುಡುಗುನಾಡು ೩೦೦ (ಮುನ್ನೂರು) ಎಂದು ದಾಖಲಿಸಿದೆ. (ಗುಂ. ೩)

**ಬಡಗುನಾಡು** : ಚಾಮರಾಜನಗರ ತಾಲ್ಲೂಕಿನ ದಾಸನಪುರದ ಕ್ರಿ.ಶ. ೧೫೩೬ರ ಶಾಸನವೊಂದು[೩೮] ಯೆಣ್ಣೆಗುಂಬ, ತಿಮ್ಮಪ್ಪನಪುರಗಳು ಈ ಬಡುಗುನಾಡಿನಲ್ಲಿ ಇದ್ದುದನ್ನು ದಾಖಲಿಸುತ್ತದೆ. ೧೬ನೇ ಶತಮಾನದ ಭೀಮನ ಬೀಡಿನ ಶಾಸನವೊಂದು[೩೯] ವುರಳತಿಪ್ಪೂರು ಬಡಗನಾಡಿನಲ್ಲಿದ್ದುದನ್ನು ತಿಳಿಸುತ್ತದೆ.

**ಕಾರೆನಾಡು** : ಹದಿನಾಲ್ಕು ನಾಡಿನ ಭಾಗವಾಗಿದ್ದ ಈ ಕಾರೆನಾಡು ನಂತರ ತೆರಕಣಾಂಬಿ ರಾಜ್ಯದಲ್ಲಿ ಸೇರಿಹೋಯಿತು. ಕಪಿಲಾನದಿಯ ದಂಡೆಯಲ್ಲಿದ್ದ ಈ ನಾಡು ಹಿಂದೆ ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿತ್ತು. ಈ ಕಾರನಾಡಿನಲ್ಲಿ ಬೆಲುವಾರಡಿ ಗ್ರಾಮವಿದ್ದುದು ಒಂದು ಶಾಸನದಲ್ಲಿದೆ.[೪೦]

**ಹದಿನಾಡಿನ ಭಾಗಗಳು** : ಕುಮಾರನಾಡು, ಹಿರಿಯ ನಾಡು, ತೊರೆನಾಡು, ಎಣ್ಣೆ ನಾಡುಗಳು ಹದಿನಾಡಿನ ಶಾಸನೋಕ್ತ ಭಾಗಗಳಾಗಿದ್ದು ಉಗುನೆಯ ಎಂಬ ಗ್ರಾಮ ಎಣ್ಣೆನಾಡಿನಲ್ಲಿತ್ತು.

**ಪೆರೂರುನಾಡು** : ಇವತ್ತಿನ ಕೊಯಮತ್ತೂರು ತಾಲ್ಲೂಕಿನ ಪಕ್ಕದಲ್ಲಿ ಇರುವ ಪೆರೂರು, ಪೆರೂರು ನಾಡಿನ ಕೇಂದ್ರಭಾಗ. ಇದು ತೆರಕಣಾಂಬೆ ರಾಜ್ಯದಲ್ಲಿ ಇದ್ದುದನ್ನು ತ್ರಯಂಬಕಪುರದ ಶಾಸನವು ಖಾತ್ರಿಗೊಳಿಸುತ್ತದೆ.

**ಕಣಿಯಾಲ ನಾಡು** : ಕ್ರಿ.ಶ. ೧೬೩೪ರ ತೆರಕಣಾಂಬಿಯ ಶಾಸನವು[೪೧] ಹುಲ್ಲನಹಳ್ಳಿಯ ಸ್ಥಳದಲ್ಲಿದ್ದ ಕಣಿಯಾಲ ನಾಡನ್ನು ಉಲ್ಲೇಖಿಸಿ ಈ ನಾಡಿನಲ್ಲಿ ಐಲ್ಲಹಳ್ಳಿ, ತರ್ರಗನಹಳ್ಳಿ, ಅಲ್ಲಾಳನಾಥಪುರಗಳು ಅಂತರ್ಗತವಾಗಿದ್ದುದನ್ನು ತಿಳಿಸುತ್ತದೆ. ಇದು ಇಂದಿನ ನಂಜನಗೂಡು ತಾಲ್ಲೂಕಿನಲ್ಲಿದೆ.

ಈ ಮೇಲೆ ಹೇಳಿದ ಸ್ಥಳ, ಸೀಮೆ, ನಾಡುಗಳು ತೆರಕಣಾಂಬಿ ರಾಜ್ಯದಲ್ಲಿ ಅಂತರ್ಗತವಾಗಿದ್ದು ಹೆಗ್ಗಡದೇವನ ಕೋಟೆ, ನಂಜನಗೂಡು ತಾಲ್ಲೂಕುಗಳಲ್ಲಿ ಹರಿಯುವ ಕಪಿಲಾನದಿಯು ಈ ನಾಡಿನ ಉತ್ತರ ಗಡಿಯಾಗಿದ್ದು ಕೊಯಮತ್ತೂರಿನ ಬಳಿಯಲ್ಲಿ ಹರಿಯುವ ನೋಯಿಲ್ ನದಿ ಈ ರಾಜ್ಯದ ದಕ್ಷಿಣದ ಗಡಿಯಾಗಿದ್ದುದನ್ನು ಶಾಸನಗಳ ಆಧಾರದ ಮೂಲಕ ಖಾತ್ರಿಗೊಳಿಸಲಾಗಿದೆ. ಈ ರಾಜ್ಯದಲ್ಲಿ ಮಹದೇಶ್ವರಬೆಟ್ಟ ಶ್ರೇಣಿಗಳು, ಬಂಡೀಪುರ ಬೆಟ್ಟ ಶ್ರೇಣಿಗಳು, ಗೋಪಾಲಸ್ವಾಮಿ ಬೆಟ್ಟ ಶ್ರೇಣಿಗಳು ಹಾಗೂ ನೀಲಗಿರಿ ಶ್ರೇಣಿಗಳು ಹರಡಿಕೊಂಡಿದ್ದು ನದಿಗಳಾದ ಕಪಿಲಾನದಿ, ಕಾವೇರಿ, ನುಗುನದಿ, ಗುಂಡ್ಲುಹೊಳೆ, ಸುವರ್ಣಾವತಿ ನದಿ, ಉದುಮಾರ್‍ರಹಳ್ಳಿ, ಮೀಯಾರ್ ನದಿ, ಪಾಲಾರ್ ನದಿ, ನೋಯಿಲ್ ನದಿಗಳು ಮಳೆಗಾಲದಲ್ಲಿ ಹುಚ್ಚುಹೊಳೆಯಾಗಿ ಹರಿಯುತ್ತವೆ.

ಇನ್ನೊಂದು ಪ್ರಮುಖ ಸಂಗತಿಯನ್ನು ಕೊನೆಯಲ್ಲಿ ಹೇಳಲೇಬೇಕು. ಈ ರಾಜ್ಯದ ಹಲವಾರು ಶಾಸನಗಳು ಈ ನಾಡಿನ ಕೇಂದ್ರವನ್ನು ತೆರಕಣಾಂಬೆಯೆಂದೇ ದಾಖಲಿಸಿದ್ದರೂ ಕೆಲವು ಶಾಸನಗಳು ಮಾತ್ರ ತೆರಕಣಾಂಬಿ ಎಂದು ಕೂಡ ದಾಖಲು ಮಾಡಿದೆ. ಆದರೆ ಇಂದಿಗೂ ತೆರಕಣಾಂಬಿ ರೂಪವೇ ಉಳಿದುಕೊಂಡು ಬಂದಿದೆ.

[ಈ ಲೇಖನವನ್ನು ತಯಾರಿಸುವಲ್ಲಿ ಸಲಹೆ-ಸೂಚನೆ ಗಳನ್ನು ಕೊಟ್ಟು ಉಪಕರಿಸಿದ ಗುರುಗಳಾದ ಡಾ. ಅ.ಲ. ನರಸಿಂಹನ್ ಹಾಗೂ ಡಾ. ಪಿ.ವಿ. ಕೃಷ್ಣಮೂರ್ತಿ ಯವರಿಗೆ ಅನಂತ ವಂದನೆಗಳು.]

## ಆಧಾರ ಸೂಚಿ ಮತ್ತು ಅಡಿಟಿಪ್ಪಣಿಗಳು


೧. ಬಿ.ಎಲ್. ರೈಸ್, Mysore and Coorg.

೨. ಮಲೆಯೂರು ಗುರುಸ್ವಾಮಿ, ಪ್ರಸಂ ॥ : **ಹೊನ್ನಹೊಳೆ**, ಜಿ.ಎಸ್. ನಾಗರತ್ನ, **ಸಾಂಸ್ಕೃತಿಕ ರಾಜಧಾನಿ ತೆರಕಣಾಂಬಿ**, ಚಾಮರಾಜನಗರ, ೨೦೦೭.

೩. ಅದೇ. ಮಂಜುಳಾ ಹುಲ್ಲಹಳ್ಳಿ, 'ಹದಿನಾಲ್ಕು ನಾಡರಸರು. ಒಂದು ಅವಲೋಕನ', ಪು. ೩೭.

೪. ಎಪಿಗ್ರಾಫಿಯಾ ಕರ್ನಾಟಕ (ಪ), ಸಂಪುಟ ೩, ಗುಂಡ್ಲುಪೇಟೆ ೧೨೧.

೫. ಅದೇ, ಗುಂಡ್ಲುಪೇಟೆ ೧೫೩.

೬ ಅದೇ, ಗುಂಡ್ಲುಪೇಟೆ ೧೫೦.

೭. ಅದೇ, ಗುಂಡ್ಲುಪೇಟೆ ೧೩೭.

೮. ಅದೇ, ಗುಂಡ್ಲುಪೇಟೆ ೨೧೩.

೯. ಅದೇ, ಗುಂಡ್ಲುಪೇಟೆ ೧೭.

೧೦. ಅದೇ, ಗುಂಡ್ಲುಪೇಟೆ ೧೭.

೧೧. ಅದೇ, ಗುಂಡ್ಲುಪೇಟೆ ೭೮.

೧೨. ಅದೇ, ಗುಂಡ್ಲುಪೇಟೆ ೧೧೩.

೧೩. ಎಪಿಗ್ರಾಫಿಯಾ ಕರ್ನಾಟಕಾ (ಪ) ಸಂಪುಟ ೪, ಚಾಮರಾಜನಗರ, ೨೩೬.

೧೪. ಅದೇ, ಚಾಮರಾಜನಗರ, ೩೮೭.

೧೫. ಎ.ಕ. ೩, ಗುಂಡ್ಲುಪೇಟೆ ೫೩.

೧೬. ಅದೇ, ಗುಂಡ್ಲುಪೇಟೆ ೮೫.

೧೭. ಎ.ಕ. ೪, ಚಾಮರಾಜನಗರ ೪೦೧.

೧೮. ಅದೇ, ಚಾಮರಾಜನಗರ ೪೦೫.

೧೯. ಎ.ಕ. ೩, ಗುಂಡ್ಲುಪೇಟೆ ೨೯.

೨೦. ಅದೇ, ಗುಂಡ್ಲುಪೇಟೆ ೪೯.

೨೧. ಅದೇ, ಗುಂಡ್ಲುಪೇಟೆ ೭೭.

೨೨. ಅದೇ, ಗುಂಡ್ಲುಪೇಟೆ ೮೧.

೨೩. ಅದೇ, ಗುಂಡ್ಲುಪೇಟೆ ೯೩.

೨೪. ಅದೇ, ಗುಂಡ್ಲುಪೇಟೆ ೧೧೪.

೨೫. ಅದೇ, ಗುಂಡ್ಲುಪೇಟೆ ೧೩೬.

೨೬. ಅದೇ, ಗುಂಡ್ಲುಪೇಟೆ ೧೪೯.

೨೭. ಅದೇ, ಗುಂಡ್ಲುಪೇಟೆ ೧೫೧.

೨೮. ಅದೇ, ಗುಂಡ್ಲುಪೇಟೆ ೧೫೦.

೨೯. ಅದೇ, ಗುಂಡ್ಲುಪೇಟೆ ೧೭೦.

೩೦. ಎ.ಕ. ೪, ಗುಂಡ್ಲುಪೇಟೆ ೧೧.

೩೧. ಅದೇ, ಚಾಮರಾಜನಗರ ೩೦೧.

೩೨. ಅದೇ, ಚಾಮರಾಜನಗರ ೩೦೭.

೩೩. ಅದೇ, ಚಾಮರಾಜನಗರ ೩೭೯.

೩೪. ಎ.ಕ. ೩, ಗುಂಡ್ಲುಪೇಟೆ ೬.

೩೫. ಎ.ಕ. ೩, ಗುಂಡ್ಲುಪೇಟೆ ೨೩.

೩೬. ಎ.ಕ. ೩, ಗುಂಡ್ಲುಪೇಟೆ ೧೪೯.

೩೭. ಎ.ಕ. ೩, ಗುಂಡ್ಲುಪೇಟೆ ೧೫೦.

೩೮. ಎ.ಕ. ೪, ಚಾಮರಾಜನಗರ ೩೦೨.

೩೯. ಎ.ಕ. ೩, ಗುಂಡ್ಲುಪೇಟೆ ೧೯.

೪೦. ಅದೇ, ಗುಂಡ್ಲುಪೇಟೆ ೧೪೯.

೪೧. ಅದೇ, ಗುಂಡ್ಲುಪೇಟೆ ೧೧೩.

ಎಸ್. ಪರಶಿವಮೂರ್ತಿ*

# ಕಂಚುಗಲ್ಲಿನ ಚಳುಕೆಯರು

ಕರ್ನಾಟಕದ ದಕ್ಷಿಣ ಭಾಗವನ್ನು ಕ್ರಿ.ಶ. ೧೦೬೫ಕ್ಕೆ ಹಿಂದಿನಿಂದಲೂ ಹೊಯ್ಸಳರು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಆಳಿದರು. ಅವರಲ್ಲಿ ಹೊಯ್ಸಳ ನೃಪಕಾಮನ ಮಗ ವಿನಯಾದಿತ್ಯ ಪ್ರಾರಂಭದ ಪ್ರಸಿದ್ಧ ದೊರೆ. ಇವನ ಅನಂತರ ಇವನ ಮಗ ಯರೆಯಂಗನ ೨ನೇ ಪುತ್ರ ವಿಷ್ಣುವರ್ಧನನು ಪ್ರಖ್ಯಾತ ದೊರೆ. ಇವನ ಕಾಲದಲ್ಲಿ ಹೊಯ್ಸಳ ರಾಜ್ಯ ವಿಸ್ತಾರವಾಯಿತು. ಇದು ಚಾಲುಕ್ಯ ಚಕ್ರಾಧಿಪತ್ಯದಲ್ಲಿ ಪ್ರಮುಖ ಮಹಾಮಂಡಲವೆಂದು ಪರಿಗಣಿಸಲ್ಪಟ್ಟಿತು. ವಿಷ್ಣುವರ್ಧನನು ಕೂಡ ತನ್ನ ತಂದೆ ತಾತಂದಿರಂತೆ ಚಾಲುಕ್ಯ ಚಕ್ರವರ್ತಿಗಳ ಮಹಾಮಂಡಳೇಶ್ವರನಾಗಿ ಆಳುತ್ತಿದ್ದನು. ಇವನು ಕ್ರಿ.ಶ. ೧೧೦೦ ರಿಂದ ಕ್ರಿ.ಶ. ೧೧೫೨ರವರೆಗೆ ಆಳಿದ ದಾಖಲೆಗಳಿವೆ.[೧] ಇವನು ಹೊಯ್ಸಳ ರಾಜ್ಯವನ್ನು ಅನೇಕ ನಾಡುಗಳಾಗಿ ವಿಂಗಡಿಸಿ ಆಡಳಿತಕ್ಕೆ ಅನುಕೂಲವಾಗುವಂತೆ ಮಾಡಿದನು. ಅವುಗಳಲ್ಲಿ ಆಸಂದಿನಾಡು ಪ್ರಮುಖವಾದ್ದು. ಆಸಂದಿನಾಡನ್ನು ವಿಷ್ಣುವರ್ಧನನ ಪಟ್ಟದರಸಿಯರಲ್ಲೊಬ್ಬಳಾದ ಬೊಮ್ಮಲಾದೇವಿಯು ಆಳುತ್ತಿದ್ದಳು.[೨] ಆಸಂದಿಗೆ ಸೇರಿದ ಮಗರ ಮುನ್ನೂರಲ್ಲಿ ಚಳುಕೆವೃತ್ತಿ ಒಂದು ಉಪವಿಭಾಗ ಈ ಚಳುಕೆ ವೃತ್ತಿಯನ್ನು ಚಳುಕೆಯ ವಂಶದವರು ಸಿಂಗಟಗೆರೆ ಮತ್ತು ಕಂಚುಗಲ್ಲಿನಿಂದ ಆಳುತ್ತಿದ್ದರೆಂಬ ವಿಷಯ ಶಾಸನಗಳಲ್ಲಿ ಉಲ್ಲೇಖವಾಗಿದೆ. ಚಳುಕೆವೃತ್ತಿಗೆ ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಕೆಲವು ಹಳ್ಳಿಗಳು ಮತ್ತು ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಕೆಲವು ಹಳ್ಳಿಗಳೂ ಸೇರಿವೆ. ಈ ವೃತ್ತಿಯನ್ನು ಆಳುತ್ತಿದ್ದ ಚಳುಕೆಯವಂಶದವರ ಬಗ್ಗೆ ಕಡೂರು ತಾಲ್ಲೂಕು ಕಂಚಿಗಲ್ಲಿನ ಚಳುಕೇಶ್ವರ ಮತ್ತು ಗುಡೇಶ್ವರ ದೇವಾಲಯದಲ್ಲಿರುವ ಶಾಸನಗಳು ಮಾಹಿತಿ ನೀಡುತ್ತವೆ. ಚಳುಕೆವೃತ್ತಿಯನ್ನು ಚಳುಕೆಯನಾಯಕನು ಕ್ರಿ.ಶ. ೧೧೧೩ರಲ್ಲಿ ಆಳುತ್ತಿದ್ದನು ಎಂಬ ವಿಷಯವನ್ನು ಅದೇ ತಾಲ್ಲೂಕಿನ ಯಗಟಿಯ ಕಲ್ಲೇಶ್ವರ ದೇವಸ್ಥಾನದಲ್ಲಿರುವ ಶಾಸನ ತಿಳಿಸುತ್ತದೆ.[೩] ಅನಂತರದ ವಿವರಗಳನ್ನು ಕಂಚುಗಲ್ಲಿನ ಶಾಸನಗಳು ತಿಳಿಸುತ್ತವೆ. ಕಂಚುಗಲ್ಲು ಶಾಸನಗಳ[೪] ಪ್ರಕಾರ ವಿಷ್ಣುವರ್ಧನನು ತನ್ನ ಅಂಗರಕ್ಷಕನಾಗಿದ್ದ ಚಳುಕೆಯ ನಾಯಕನೊಂದಿಗೆ ಚಾಳುಕ್ಯ ಚಕ್ರವರ್ತಿ ಹೆಮ್ಮಾಡಿರಾಯನ ಓಲಗಕ್ಕೆ ಹೋಗಿದ್ದಾಗ ಆ ಓಲಗದಲ್ಲಿ ಓಲಗಕಾತಿಯಾಗಿದ್ದ ಬಡಗಲಿಂದ ಬಂದ ಚಳುಕವ್ವೆಯರು "ಈ ಚಳುಕೆಯ ನಾಯಕನು ನಮ್ಮ ಅನ್ವಯದವನು ಇವನನ್ನು ನಿಮ್ಮ ನಂಬುಗೆಯ ಸಾಮಂತನನ್ನಾಗಿ ಮಾಡಿಕೊಳ್ಳಿ" ಎಂದು ಹೇಳಿದ್ದರಿಂದ ವಿಷ್ಣುವರ್ಧನನು ತನ್ನ ರಾಜ್ಯದ ಕೆಲವು ಹಳ್ಳಿಗಳನ್ನು ಸೇರಿಸಿ ಚಳುಕೆವೃತ್ತಿಯನ್ನು ನಿರ್ಮಿಸಿ ಚಳುಕೆಯ ನಾಯಕನಿಗಿತ್ತು ತನ್ನ ಮಹಾಸಾಮಂತನನ್ನಾಗಿ ನೇಮಿಸಿದನು.[೫] ಈ ಶಾಸನದಲ್ಲಿ ಹೇಳಿರುವ ಚಾಳುಕ್ಯ ಚಕ್ರವರ್ತಿ ಹೆಮ್ಮಾಡಿರಾಯನ ಆಸ್ಥಾನದಲ್ಲಿ ಓಲಗಕಾತಿಯಾಗಿದ್ದ ಚಳುಕವ್ವೆಯು ಚಾಲುಕ್ಯರ ಯಾವುದೋ ತಲೆಮಾರಿಗೆ ಸೇರಿದ ದಾಯಾದಿ ವಂಶದವಳಿರಬೇಕು. ಆಕೆಯನ್ನು ಬಡಗಲಿಂದ ಬಂದವಳೆಂದು ಹೇಳಿರುವುದರಿಂದ ಬಹುಶಃ ಈಕೆ ಗುಜರಾತ್ ಪ್ರಾಂತ್ಯದಲ್ಲಿ ಆಳುತ್ತಿದ್ದ ಚಾಳುಕ್ಯಕುಲದ ದಾಯಾದಿವಂಶಕ್ಕೆ ಸೇರಿದವಳಿರಬೇಕು.[೬]

ಚಾಲುಕ್ಯ ಚಕ್ರವರ್ತಿ ಹೆಮ್ಮಾಡಿರಾಯನೆಂದರೆ ಕ್ರಿ.ಶ. ೧೦೭೬ ರಿಂದ ೧೧೨೬ರವರೆಗೆ ಆಳಿದ ೬ನೇ ವಿಕ್ರಮಾದಿತ್ಯನಾಗಿದ್ದಾನೆ.[೭]

ಚಳುಕೆಯವಂಶದವರು ವಿಷ್ಣುವರ್ಧನನ ಅತ್ಯಂತ ನಂಬುಗೆಯ ಮಹಾಸಾಮಂತರಾಗಿ ಚಳುಕೆವೃತ್ತಿಯನ್ನು ಆಳಿದರು. ಹೊಯ್ಸಳರ ಕಾಲದಲ್ಲಿ ರಾಜನಿಗೆ ಅತ್ಯಂತ ನಂಬುಗೆಯ ವ್ಯಕ್ತಿಗಳನ್ನು ಗರುಡರೆಂದು ಕರೆದಿರುವುದು ಕಂಡುಬರುತ್ತದೆ. ಈ ಚಳುಕೆಯ ವಂಶದವರು ವಿಷ್ಣುವರ್ಧನನ ಗರುಡರಾಗಿದ್ದಂತೆ ಕಂಡುಬರುತ್ತದೆ. ಚಳುಕೆವೃತ್ತಿಯ ಪ್ರದೇಶದಲ್ಲಿ ಬರುವ ಒಂದು ಬೆಟ್ಟಕ್ಕೆ ನೊಣಬನಕಲ್ಲು ಅಥವಾ ಗರುಡನಗಿರಿ ಎಂಬ ಹೆಸರು ಇದ್ದು, ಆ ಬೆಟ್ಟದ ಮೇಲೆ ಮೂರು ಲಿಂಗಗಳನ್ನು ಸ್ಥಾಪಿಸಲಾಗಿದೆ. ಈ ಬೆಟ್ಟದ ತುದಿಯಲ್ಲಿರುವ ಲಿಂಗವನ್ನು ಈಗ ಶಂಕರೇಶ್ವರ ಎಂದು ಕರೆಯುತ್ತಾರೆ. ಈ ಲಿಂಗವು ದೊಡ್ಡ ಛಾಚುಬಂಡೆಯ ಬಿಡದಲ್ಲಿದೆ. ಇದರ ವೈಶಿಷ್ಟ್ಯವೆಂದರೆ ಲಿಂಗದ ಮುಂದೆ ನಂದಿಯ ಬದಲಾಗಿ

* ಮೇಲಿನ ಮಠ, ಶಾನುಭೋಗರ ಬೀದಿ, ಅರಸೀಕೆರೆ - ೫೭೩ ೧೦೩. ಹಾಸನ ಜಿಲ್ಲೆ.

ಒಂದು ಗರುಡನ ವಿಗ್ರಹವಿದೆ. ಈ ಲಿಂಗದಿಂದ ಸ್ವಲ್ಪ ದೂರದಲ್ಲಿ ಮತ್ತೆರಡು ಲಿಂಗಗಳಿದ್ದು ಅವನ್ನು ನೊಳಂಬೇಶ್ವರ ಮತ್ತು ಸಾದೇಶ್ವರ ಎಂದು ಕರೆಯುತ್ತಾರೆ. ಈ ಲಿಂಗಗಳ ಮುಂದೆ ನಂದಿಯಾಗಲಿ ಗರುಡನ ವಿಗ್ರಹವಾಗಲಿ ಇಲ್ಲ. ಇವುಗಳು ಚಳುಕೆಯ ವಂಶದವರ ನೆನಪಿನಲ್ಲಿ ಸ್ಥಾಪಿಸಿದ ಲಿಂಗಗಳಾಗಿವೆ. ಈ ಬೆಟ್ಟದಲ್ಲಿ ಶಾಸನಗಳು ಇಲ್ಲ ಆದರೆ ಈ ಬೆಟ್ಟದ ಸುತ್ತ ಇರುವ ಹಳ್ಳಿಗಳಲ್ಲಿ ಚಳುಕೆಯ ವಂಶದವರ ಶಾಸನಗಳಿವೆ.[೮] ಕಡೂರು ತಾಲ್ಲೂಕು ಕಂಚುಗಲ್ಲು ಗ್ರಾಮದ ಶಾಸನಗಳು ಚಳುಕೆಯ ವಂಶದವರ ವಿವರಗಳನ್ನು ನೀಡುತ್ತವೆ.

ಚಳಿಕೆಯ ನಾಯಕ

ಬಿಟ್ಟೆಯನಾಯಕ<br>ಹೆಂ. ಕೇತವ್ವೆ ನಾಯಕಿತಿ

ನೊಣಬೆಯನಾಯಕ<br>ಹೆಂ. ಚಯ್ಯವ್ವೆ ನಾಯಕಿತಿ

ಹಿರಿಯ ಚಳುಕೆನಾಯಕ<br>ಅಳಿಯಂದಿರು ಕಲಿದೇವನಾಯಕ<br>ಮತ್ತು ಮಾದಿಗಾವುಂಡ

ಚಿಕ್ಕ ಚಳುಕೆನಾಯಕ<br>ಹೆಂ. ಗುಡ್ಡವ್ವೆ ನಾಯಕಿತಿ

ನೊಣಚೆಯನಾಯಕ<br>ಹೆಂ. ಬೊಮ್ಮಲೆ ನಾಯಕಿತಿ

ಮಾಚೆಯನಾಯಕ<br>ಹೆಂ. ಬೊಮ್ಮವ್ವೆ ನಾಯಕಿತಿ

ಚಿಕ್ಕನೊಣಚೆ ನಾಯಕ<br>ಹೆಂ. ಕಲ್ಲಗವುಡಿ

ಬೊಮ್ಮರಸ ಚಳುಕೆನಾಯಕ

ಬಲ್ಲಾಳ<br>ಚಳುಕಯ್ಯ

ಚಳುಕೆನಾಯಕನ ಮಕ್ಕಳು ಬಿಟ್ಟೆಯನಾಯಕ ಮತ್ತು ನೊಣಬೆಯ ನಾಯಕರು ವಿಷ್ಣುವರ್ಧನನ ಕಾಲದಲ್ಲಿ ಆಳುತ್ತಿದ್ದರು. ಅವರಲ್ಲಿ ನೊಣಬೆಯ ನಾಯಕ ಮತ್ತು ಚಯ್ಯವ್ವೆ ನಾಯಕಿಯರ ಮಕ್ಕಳು ಹಿರಿಯ ಚಳುಕೆನಾಯಕ ಮತ್ತು ಚಿಕ್ಕಚಳುಕೆನಾಯಕರು. ಇವರಲ್ಲಿ ಹಿರಿಯ ಚಳುಕೆ ನಾಯಕನಿಗೆ ಗಂಡು ಸಂತಾನವಿಲ್ಲದ್ದರಿಂದ ಅಳಿಯಂದಿರ ಹೆಸರನ್ನು ಕಡೂರು ತಾಲ್ಲೂಕು ಕೊತ್ತಗೆರೆ ಶಾಸನ ಹೇಳುತ್ತದೆ. ಚಿಕ್ಕಚಳುಕೆ ನಾಯಕನ ಮತ್ತು ಗುಡ್ಡವ್ವೆ ನಾಯಕಿತಿಯ ಮಕ್ಕಳು ನೊಣಬೆಯನಾಯಕ ಮತ್ತು ಮಾಚೆಯನಾಯಕರು ಚಳುಕೆ ವೃತ್ತಿಯನ್ನು ಆಳುತ್ತಿದ್ದು ಕಂಚುಗಲ್ಲಿನ ಚಳುಕೇಶ್ವರ ಮತ್ತು ಗುಡೇಶ್ವರ ಲಿಂಗಗಳನ್ನು ತಮ್ಮ ತಂದೆ, ತಾಯಿ ನೆನಪಿನಲ್ಲಿ ಕಟ್ಟಿಸಿದರು. ಈ ದೇವಾಲಯ ಮೂರು ಅಂಕಣಗಳನ್ನು ಹೊಂದಿದ್ದು ತ್ರಿಕೂಟಾಚಲ ಮಾದರಿಯ ದೇವಸ್ಥಾನವಾಗಿದೆ. ಮಧ್ಯ ಇರುವ ಗರ್ಭಗುಡಿಯಲ್ಲಿ ಚಳುಕೇಶ್ವರ ಲಿಂಗವಿದೆ. ಅದರ ಮುಂಭಾಗದಲ್ಲಿ ನಂದಿಯ ವಿಗ್ರಹವಿದೆ, ಉಳಿದ ಗರ್ಭಗೃಹಗಳಲ್ಲಿ ದಕ್ಷಿಣ ದಿಕ್ಕಿನ ಗರ್ಭಗೃಹದಲ್ಲಿ ಗುಡೇಶ್ವರ



ಮತ್ತು ಉತ್ತರ ದಿಕ್ಕಿನ ಗರ್ಭಗೃಹದಲ್ಲಿ ವಿಷ್ಣುವಿನ ವಿಗ್ರಹವಿದ್ದು, ಅದನ್ನು ನಾರಾಯಣ ನೆಂದು ಕರೆಯುತ್ತಾರೆ. ಚಳುಕೆಯ ವಂಶದವರ ಪ್ರಶಸ್ತಿಗಳಲ್ಲಿ "ಶ್ರೀಮನು ಮಹಾನಾಯಕ ನಂದಗೋಕುಲ ನಾರಾಯಣ ದೇವರ ಪಾದ ಪಂಚಕಜ ಭ್ರಮರನುಂ............ಎಂದು ಮುಂತಾದ ಪ್ರಶಸ್ತಿಗಳಿವೆ.



ಆದುದರಿಂದ ಆ ವಿಷ್ಣು ವಿಗ್ರಹವು ನಾರಾಯಣದೇವರ ವಿಗ್ರಹವಾಗಿದೆ. ದೇವಾಲಯದ ಒಳಭಾಗದಲ್ಲಿ ಆರು ಅಡಿ ಎತ್ತರದ ಒಂದು ಶಾಸನವಿದೆ. ಮತ್ತೊಂದು ಶಾಸನ ದೇವಾಲಯದ ಮುಂದೆ ನೆಟ್ಟಿದೆ. ಈ ದೇವಾಲಯದ ಸಮೀಪದ ಕೆರೆಯ ದಂಡೆಯ ಮೇಲೆ ಮತ್ತೊಂದು





ದೇವಾಲಯವಿದ್ದು, ಅದನ್ನು ಕಲ್ಲೇಶ್ವರ ದೇವಾಲಯವೆಂದು ಕರೆಯುತ್ತಾರೆ. ಈ ದೇವಾಲಯ ತುಂಬಾ ಶಿಥಿಲವಾಗಿ ಹೋಗಿದ್ದರಿಂದ ಕಂಚುಗಲ್ಲಿನ ಜನರು ಅದನ್ನು ಕೆಡವಿ ಮತ್ತೊಂದು ಹೊಸ ದೇವಾಲಯವನ್ನು ಕಟ್ಟಿದ್ದಾರೆ. ಈ ದೇವಾಲಯದಲ್ಲಿ ಐದು ಶಾಸನಗಳಿದ್ದು, ಮೂರು ಶಾಸನಗಳು ಚಳುಕೆಯ ವಂಶದವರಿಗೆ ಸೇರಿದ್ದು. ಮತ್ತೆರಡು ವೀರಗಲ್ಲುಗಳಾಗಿವೆ. ಈ ದೇವಾಲಯದ ಕಂಬ, ಬೋದಿಗೆ, ಬಾಗಿಲವಾಡಗಳ ಅವಶೇಷಗಳು ಪಕ್ಕದಲ್ಲಿ ಬಿದ್ದಿವೆ. ಇವುಗಳಲ್ಲಿ ಗಣಪತಿ, ಕಾರ್ತಿಕೇಯ ಇದ್ದು ಮತ್ತೆರಡು ವಿಗ್ರಹಗಳು ದೇವಾಲಯ ನಿರ್ಮಿಸಿದವರ ವಿಗ್ರಹಗಳು ಆಗಿರುವ ಸಾಧ್ಯತೆ ಇದೆ.

ನೊಣಬೆಯನಾಯಕ ಮತ್ತು ಬೊಮ್ಮಲೆ ನಾಯಕಿರೆಯರ ಮಕ್ಕಳು ಚಿಕ್ಕನೊಣಬೆಯನಾಯಕ, ಬೊಮ್ಮರಸ ಚಳುಕೆಯನಾಯಕರು, ಮಾಚೆಯನಾಯಕ ಮತ್ತು ಬೊಮ್ಮವ್ವೆ ನಾಯಕಿರೆಯ ಮಗ ಬಲ್ಲಾಳ ಚಳುಕಯ್ಯ.[೯]

ಕಲ್ಯಾಣಿ ಚಾಲುಕ್ಯ ಮನೆತನದೊಂದಿಗೆ ನೊಳಂಬ ವಂಶದವರು ವೈವಾಹಿಕ ಸಂಬಂಧವಿಟ್ಟುಕೊಂಡಿದ್ದರೆಂಬುದು ಈಗಾಗಲೇ ತಿಳಿದ ವಿಷಯ. ಈ ಚಳುಕೆಯ ವಂಶಾವಳಿಯಲ್ಲಿ ಚಳುಕೆಯನಾಯಕ ಮತ್ತು ನೊಣಬೆಯನಾಯಕ ಎಂಬ ಹೆಸರುಗಳು ಪದೇ ಪದೇ ಬರುವುದರಿಂದ ಚಳುಕೆಯ ವಂಶದವರಿಗೂ ಮತ್ತು ನೊಳಂಬವಂಶದವರಿಗೂ ವೈವಾಹಿಕ ಸಂಬಂಧ ಇದ್ದಿರಬಹುದೆಂದು ಊಹಿಸಬಹುದು.

ದೋರಸಮುದ್ರದ ಹೊಯ್ಸಳರು ಚಾಲುಕ್ಯರ ಮಹಾಮಂಡಲೇಶ್ವರರಾಗಿ ಆಳುತ್ತಿದ್ದ ಕಾಲದಲ್ಲೇ ಚಾಲುಕ್ಯರ ಯಾವುದೋ ತಲೆಮಾರುಗಳ ದಾಯಾದಿಗಳಾದ ಚಾಲುಕ್ಯರು ಹೊಯ್ಸಳರ ಸಾಮಂತರಾಗಿ ಆಳುತ್ತಿದ್ದರೆಂಬುದು ಈ ಶಾಸನಗಳಿಂದ ತಿಳಿದುಬರುತ್ತದೆ. ವಿಷ್ಣುವರ್ಧನನ ರಾಣಿಯರಾದ ಬೊಮ್ಮಲಾದೇವಿ ಮತ್ತು ರಾಜಲದೇವಿಯರ ಸೋದರಮಾವನಾದ ಮಂಚಿಯರಸನೆಂಬುವವನು ವಿಷ್ಣುವರ್ಧನನ ಸಾಮಂತನಾಗಿ ವಿಷ್ಣುಸಮುದ್ರ ಅಥವಾ ಕೆರೆಯ ಸಂತೆಯಲ್ಲಿ ಆಳುತ್ತಿರುವುದು ಅಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ.[೧೦] ಈ ಮಂಚಿಯರಸನು ಚಾಲುಕ್ಯ ಕುಲಕ್ಕೆ ಸೇರಿದ ಕಲಿದಟ್ಟರಸನ ಮೊಮ್ಮಗ ಮತ್ತು ವಿಭುವಿಟ್ಟರಸನ ಮತ್ತು ಕೇತಬ್ಬರಸಿಯರ ಮಗನೆಂದು ತಿಳಿದು ಬರುತ್ತದೆ. ಮತ್ತೊಂದು ಶಾಸನ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಕಿತ್ತನಕೆರೆಯಲ್ಲಿದ್ದು, ಚಳುಕೆಯ ವಂಶದ ಹೆಸರನ್ನೊಳಗೊಂಡಿದೆ. ಈ ಶಾಸನ ಪರಿಚಯಿಸುವ ವಿವರ ಹೀಗಿದೆ.[೧೧]

ಚಳಿಯರೆಯಂಗ
ಹೆಂ. ಸೋಮವ್ವೆ
|
ಸಾಮಂತ ಬೆನವಯ್ಯ
ಹೆಂ. ಸಾಂತವ್ವೆ
|
ಸಾಮಂತ ಮಾಚೆಯ — ಸಾಮಂತ ಚೋಳಯ — ಸಾಮಂತ ಹುಲ್ಲಯ

ಈ ಶಾಸನದ ಚಳಿಯಂಗ ಎಂಬ ಹೆಸರು ಬಹುಶಃ ಚಳುಕೆಯ ವಂಶಕ್ಕೆ ಸಂಬಂಧಿಸಿರುವಂತಿದೆ. ಚೋಳಯ್ಯ ಎಂಬುದು ಚಳುಕಯ್ಯ ಎಂಬುದರ ರೂಪಾಂತರವಾಗಿರಬಹುದು. ಈ ವಂಶಾವಳಿ ಕೂಡ ಚಾಲುಕ್ಯ ಕುಲಕ್ಕೆ ಸೇರಿದ್ದೆಂದು ಎಪಿಗ್ರಾಫಿಯ ಕರ್ನಾಟಕದ ಸಂಪುಟ ೧೦ರ ಪೀಠಿಕೆಯಲ್ಲಿ ಅಭಿಪ್ರಾಯಪಡಲಾಗಿದೆ.[೧೨]

ಮತ್ತೊಂದು ಶಾಸನ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ದೊಡ್ಡಗನ್ನಿ ಗ್ರಾಮದ್ದು. ಇದು ಚಾಲುಕ್ಯ ತ್ರಿಭುವನಮಲ್ಲ ಅಂದರೆ ೬ನೇ ವಿಕ್ರಮಾದಿತ್ಯನ ಕಾಲದ್ದಾಗಿದ್ದು, ಹೊಯ್ಸಳ ಎರೆಯಂಗನ ಸಾಮಂತನಾಗಿ ಆಳುತ್ತಿದ್ದ ಚಾಲುಕ್ಯ

ಕುಲದ ಮುದ್ದಮರಸನ ಮಗ ಬಾಚರಸನೆಂಬುವವನ ಬಗ್ಗೆ ಹೇಳುತ್ತದೆ. ಈ ಬಾಚರಸ ಮಹಾಮಂಡಲೇಶ್ವರ, ಚಾಲುಕ್ಯಾಭರಣ, ಚಾಳುಕ್ಯ ಕುಲತಿಲಕ ಎಂಬ ಹೆಸರುಗಳಿಂದ ಕರೆಯಲ್ಪಟ್ಟಿದ್ದಾನೆ. ಹೊಯ್ಸಳ ರಾಜ್ಯದಲ್ಲಿ ಅನೇಕ ಚಾಳುಕ್ಯ ವಂಶದ ಮನೆತನಗಳು ಆಳುತ್ತಿದ್ದುದರಿಂದ ಈ ಚಳುಕೆಯರನ್ನು **"ಕಂಚುಗಲ್ಲು ಚಳುಕೆಯರು"** ಎಂದು ಗುರುತಿಸಲಾಗಿದೆ. ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಯ ಕೆಲವು ಶಾಸನಗಳಲ್ಲಿ[೧೪] ಈ ಚಳುಕೆಯರು, ಚಾಳುಕ್ಯಭರಣ, ಚಾಳುಕ್ಯ ಕುಲತಿಲಕ ಎಂಬ ಪ್ರಶಸ್ತಿಗಳನ್ನು ಹೊಂದಿದ್ದು ಹಲವು ಮನೆತನಗಳು ಹೊಯ್ಸಳರ ಸಾಮಂತರಾಗಿ ಆಳುತ್ತಿದ್ದದ್ದು ಕಂಡುಬರುತ್ತದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಕರ್ನಾಟಕ ಪರಂಪರೆ,** ಸಂಪುಟ ೪೭೭, ಸಂಪಾದಕ : ಆರ್.ಆರ್. ದಿವಾಕರ್.

೨. **ಎಪಿಗ್ರಾಫಿಯ ಕರ್ನಾಟಕ,** ಸಂಪುಟ ೧೦, ಅರಸೀಕೆರೆ ಶಾಸನ ಸಂಖ್ಯೆ ೬೩, ಕಲ್ಗುಂಡಿ, ಮಹಾಲಿಂಗೇಶ್ವರ ದೇವಾಲಯದ ಬಳಿ ಇರುವ ಕಲ್ಲು, ಕಾಲ ಕ್ರಿ.ಶ. ೧೧೩೫.

೩. ಅದೇ., ಸಂಪುಟ ೧೨, ಕಡೂರು ೧೮೮, ಯಗಟಿ ಕಲ್ಲೇಶ್ವರ ದೇವಾಲಯದ ಬಳಿ ಇರುವ ಕಲ್ಲು, ಕಾಲ ಕ್ರಿ.ಶ. ೧೧೧೩.

೪. ಅದೇ., ಸಂಪುಟ ೧೨, ಕಡೂರು ೨೭, ಕಂಚುಗಲ್ಲು, ಚಳುಕೇಶ್ವರ ದೇವಾಲಯದಲ್ಲಿರುವ ಕಲ್ಲು, ಕಾಲ ಕ್ರಿ.ಶ. ೧೨೧೬.

೫. ಅದೇ., ಸಂಪುಟ ೧೨, ಕಡೂರು ೨೮, ಕಂಚುಗಲ್ಲು, ಚಳುಕೇಶ್ವರ ದೇವಾಲಯದಲ್ಲಿರುವ ಕಲ್ಲು, ಕಾಲ ಕ್ರಿ.ಶ. ೧೨೧೬.

೬. ಕರ್ನಾಟಕ ಪರಂಪರೆ, ಸಂಪುಟ ೧, ಪು. ೩೨೦, ಸಂ. ಆರ್.ಆರ್. ದಿವಾಕರ್.

೭. ಅದೇ., ಸಂಪುಟ ೧, ಪು. ೩೪೫, ಸಂ. ಆರ್.ಆರ್. ದಿವಾಕರ್.

೮. **ಎಪಿಗ್ರಾಫಿಯ ಕರ್ನಾಟಕ,** ಸಂಪುಟ ೧೦, ಅರಸೀಕೆರೆ, ೬೧, ಗಂಜಿಗೆರೆ ಜೀಚೇಶ್ವರ ದೇವಾಲಯದ ಬಳಿಯಿರುವ ಕಲ್ಲು, ಕಾಲ ಕ್ರಿ.ಶ. ೧೧೯೭-೯೮.

೯. ಅದೇ., ಸಂಪುಟ ೧೨, ಕಡೂರು ೨೪೭, ಯಾರಲಘಟ್ಟ ಸೋಮೇಶ್ವರ ದೇವಾಲಯದಲ್ಲಿರುವ ಕಲ್ಲು, ಕಾಲ ಕ್ರಿ.ಶ. ೧೨೭೨.

೧೦. ಅದೇ., ಸಂಪುಟ ೧೨, ಕಡೂರು ೬೭, ಕೆರೆ ಸಂಹಿತೆ ಹೊಲದಲ್ಲಿರುವ ಪಾಳು ದೇವಸ್ಥಾನದ ಕಂಬದ ಮೇಲೆ ಕಾಲ ಕ್ರಿ.ಶ. ೧೧೪೧.

೧೧. ಅದೇ., ಅರಸೀಕೆರೆ ೧೧೪, ಕಿತ್ತನಕೆರೆ, ಪಾಳು ಶಿವಾಲಯದ ಬಳಿ ಇರುವ ಕಲ್ಲು, ಕಾಲ ಕ್ರಿ.ಶ. ೧೧೩೨.

೧೨. ಅದೇ., ಪೀಠಿಕೆ ಪುಟ XLiii.

೧೩. ಅದೇ., ಚನ್ನರಾಯಪಟ್ಟಣ, ೧೪೦, ದೊಡ್ಡಗನ್ನಿ, ಕಾಲ ಕ್ರಿ.ಶ. ೧೧೯೯-೧೧೦೦.

೧೪. ಚಳುಕೆಯ ನಾಯಕರು ಎಂಬ ಹೆಸರಿನ 'ನಾಯಕ' ಪದ ಅಧಿಕಾರ ಸೂಚಿಯೇ ಹೊರತು ಜಾತಿ ಸೂಚಕವಲ್ಲ.

ಡಾ. ಕೆ.ಜಿ. ವಸಂತಮಾಧವ*

# ಕರ್ನಾಟಕದ ವೈದ್ಯಕೀಯ ಚರಿತ್ರೆ ಅಧ್ಯಯನದ ಅವಲೋಕನ

**ಪೀಠಿಕೆ**

ಇತಿಹಾಸದ ಘಟನೆಗಳನ್ನು ವೈದ್ಯಕೀಯ ಸಂಗತಿಗಳು ತಿರುವು ಮಾಡಿದ್ದನ್ನು ಅಲ್ಲಲ್ಲಿ ನೋಡಬಹುದು. ಇದು ಕರ್ನಾಟಕ ಇತಿಹಾಸದಲ್ಲಿ ನಡೆದಿದೆ. ಇದರಿಂದಾಗಿ ಇಲ್ಲಿನ ಇತಿಹಾಸಕ್ಕೆ ಅವು ಹಲವು ಹೊಸ ಆಯಾಮ ನೀಡಿವೆ.[೧] ಹೀಗಿದ್ದರೂ ವೈದ್ಯಕೀಯ ಇತಿಹಾಸ ಘಟನೆಗಳಿಗೆ ಕರ್ನಾಟಕದ ಇತಿಹಾಸಕಾರರು ಹೆಚ್ಚಿಗೆ ಗಮನ ನೀಡಿಲ್ಲ. ಈ ಲೇಖನದಲ್ಲಿ ಈ ಬಗೆಗೆ ಅವಲೋಕನ ಮಾಡಲಾಗಿದೆ.

**ವೈದ್ಯಕೀಯ ಶಾಸ್ತ್ರಗಳ ಸ್ವರೂಪ :** ವೈದ್ಯಕೀಯ ಇತಿಹಾಸಕ್ಕೆ ಹಲವಾರು ಆಕರಗಳಿವೆ. ಇಂಥವುಗಳಲ್ಲಿ ದೇಶಿ ಮತ್ತು ವಿದೇಶಿ ಆಕರಗಳೆಂದು ವಿಂಗಡಿಸಲಾಗಿದೆ. ದೇಶೀಯ ಆಕರಗಳಲ್ಲಿ ಶಾಸನಗಳು, ಸಾಹಿತ್ಯ ಕೃತಿಗಳು ಮತ್ತು ಇನ್ನಿತರ ಬರಹಗಳು, ವಿದೇಶೀಯ ಆಕರಗಳಲ್ಲಿ ವಿದೇಶಿಯರ ಬರಹಗಳು ಮತ್ತು ಪ್ರವಾಸಿಗರ ವರದಿಗಳು. ಇವುಗಳನ್ನು ಅಳವಡಿಸಿಕೊಂಡು ರಚಿತವಾದ ವೈದ್ಯಕೀಯ ಇತಿಹಾಸ ಕರ್ನಾಟಕದಲ್ಲಿ ನಡೆದದ್ದು ಬಹಳ ವಿರಳ. ಹೀಗಿದ್ದರೂ ವೈದ್ಯಕೀಯ ಇತಿಹಾಸದ ಘಟನೆಗಳನ್ನು ಕೆಲವರು ಅಧ್ಯಯನಿಸಿದ್ದಾರೆ.

**ಇತಿಹಾಸ ಗ್ರಂಥಗಳಲ್ಲಿ ವೈದ್ಯಕೀಯ ಇತಿಹಾಸ :** ಕೆಲವು ಇತಿಹಾಸ ಗ್ರಂಥಗಳಲ್ಲಿ ವೈದ್ಯಕೀಯ ಇತಿಹಾಸದ ತುಣುಕುಗಳು ಅಲ್ಲಲ್ಲಿ ಉಲ್ಲೇಖಿಸಲ್ಪಟ್ಟಿವೆ. ಇವುಗಳನ್ನು ಸಂಯೋಜಿಸಿ ಬರೆದವರಲ್ಲಿ ಬಿ.ಎಲ್. ರೈಸ್ ಮೊದಲಿಗರು. ಇವರ ಶಾಸನ ಗ್ರಂಥಗಳಲ್ಲಿ ಮೈಸೂರು ಮತ್ತು ಕೂರ್ಗ್ *ಶಾಸನ ಸಂಪುಟ (Mysore and Coorg from Inscriptions Londen, 1907)* ಗಮನಾರ್ಹ.[೨] ವೈದ್ಯರ ಹೆಸರುಗಳು ಅವರ ವೈದ್ಯಕೀಯ ಕುಶಲತೆ ಮತ್ತು ಕಾಲಗಳ ವಿವರ ಈ ಗ್ರಂಥದಲ್ಲಿದೆ. ಬಳ್ಳಿಗಾವೆ ಯಲ್ಲಿ ಔಷಧಶಾಲೆ, ಇದೇ ರೀತಿಯಲ್ಲಿ ಕೋಡಿಮಠದಲ್ಲಿಯೂ ಇರುವುದು ಶಸ್ತ್ರಕ್ರಿಯೆಯಲ್ಲಿ ಪ್ರಸಿದ್ಧವಾದ ದೇವಬಿಳ್ಳೆಯಣ್ಣನಿದ್ದುದು ಮತ್ತು ವಿಜಯನಗರ ಕಾಲದಲ್ಲಿ ಹೃದಯರೋಗ ಪಂಡಿತ ಕೇಶವನಿದ್ದುದು ಈ ಕೃತಿಯಲ್ಲಿ ಕಾಲನಿಯಮದಂತೆ ತಿಳಿಸಿದೆ. ಇಲ್ಲಿನ ವೈದ್ಯರು ಧನ್ವಂತರಿಯ ಆರಾಧಕರು ಮತ್ತು ಅವನಷ್ಟೆ ಚಿಕಿತ್ಸಾ ಪ್ರವೀಣತೆ ಹೊಂದಿದ್ದರೆಂದು ತಿಳಿಸಿರುವುದನ್ನು ಅಲಕ್ಷಿಸುವಂತಿಲ್ಲ. ಕೊನೇದಾಗಿ ಸಿಡುಬು ಮತ್ತು ವಾಂತಿಭೇದಿ ರೋಗ ಉಲ್ಬಣದಲ್ಲಿದ್ದಾಗ ಶೂದ್ರಜಾತಿಯವಳಾದ ನಂಜಮ್ಮ ಈ ರೋಗಗಳನ್ನು ಗುಣಪಡಿಸಿದ್ದನ್ನು ಈ ಗ್ರಂಥದಲ್ಲಿ ತಿಳಿಸಿದ್ದು ಗಮನಾರ್ಹವೆ. ಇದರಿಂದಾಗಿ ಕರ್ನಾಟಕದಲ್ಲಿ ಸ್ತ್ರೀಯರು ವೈದ್ಯಶಾಸ್ತ್ರದಲ್ಲಿ ನಿರತರಾಗಿದ್ದರೆಂಬ ಸತ್ಯವನ್ನು ಬೆಳಕಿಗೆ ತಂದಿದೆ. ಇದು ಭಾರತೀಯ ವೈದ್ಯಕೀಯ ಇತಿಹಾಸದಲ್ಲಿ ಅಪೂರ್ವ ಘಟನೆ, ಕೆಲವು ವೈದ್ಯರ ಕಾಲ ನಿರ್ಣಯಿಸಲು ಶಾಸನ ರೈಸರ ಸಂಪುಟದಿಂದಾಗಿ ಬಹಳ ಉಪಕಾರವಾಗಿದೆ. ಇದು ಕರ್ನಾಟಕದ ವೈದ್ಯಕೀಯ ಇತಿಹಾಸ ತಿಳಿಸುವ ಪ್ರಥಮ ಹೆಜ್ಜೆ.

ಸಾಹಿತ್ಯ ಕೃತಿಗಳಲ್ಲಿ ವೈದ್ಯಕೀಯ ವಿಚಾರ ತಿಳಿಸುವ ಪ್ರಯತ್ನವು ೧೯೨೦ರ ದಶಕದಲ್ಲಿ ನಡೆಯಿತು. ಇದನ್ನು ನಡೆಸಿದವರಲ್ಲಿ ಅಗ್ರಗಣ್ಯರು ಇ.ಪಿ. ರೈಸ್ ಮತ್ತು ಆರ್. ನರಸಿಂಹಾಚಾರ್ಯರು.[೩] ಇವರ ಹಲವು ಕೃತಿಗಳು ವೈದ್ಯರು, ಅವರ ವೈದ್ಯಕೀಯ ಕೃತಿಗಳು ಕೆಲವು ಸಾಮಾನ್ಯ ರೋಗಗಳು, ಅವುಗಳ ನಿವಾರಣೆ ಉಪಯೋಗಿಸುತ್ತಿದ್ದ ಔಷಧಿಗಳು ಇತ್ಯಾದಿ ವಿಚಾರಗಳ ಬೆಳಕನ್ನು ಚೆಲ್ಲುತ್ತದೆ. ಇದಲ್ಲದೆ ಕೆಲವು ಅರಸರು ವೈದ್ಯಶಾಸ್ತ್ರದ ಬೆಳವಣಿಗೆಗೆ ನೀಡಿದ ಪ್ರೋತ್ಸಾಹವು ಇವರ ಕೃತಿಯಲ್ಲಿ ಉಲ್ಲೇಖಿಸಿದೆ. ಆರ್. ನರಸಿಂಹಾಚಾರ್ಯರ ಗ್ರಂಥದಲ್ಲಿ ವೈದ್ಯಕೀಯಶಾಸ್ತ್ರದ ಹಲವು ಮುಖಗಳ ವಿವರಣೆಗಳು ಇವೆ. ಹಲವಾರು ವೈದ್ಯರು ಮುಖ್ಯವಾಗಿ ವಿಷ್ಣುದೇವ, ರಾಮಾಧಪಂಡಿತ, ಮಂಗರಾಜ, ಲಕ್ಷ್ಮಣ ಪಂಡಿತ, ಕಲ್ಲರಸ, ಶ್ರೀಧರದೇವರ ಮತ್ತು ಅವರ ವೈದ್ಯಕೀಯ ಗ್ರಂಥಗಳ ಪರಿಚಯ ಸಿಗುವುದು ಇವರ ಕೃತಿಯಲ್ಲೇ. ಶಾಸನ ಮತ್ತು ಸಾಹಿತ್ಯ ಕೃತಿಗಳನ್ನು ಆಧರಿಸಿ ಬಿ.ಎ. ಸಾಲೆತ್ತೂರರು ಜೈನ ವೈದ್ಯರು ಮತ್ತು ಅವರ ಕೃತಿಗಳು ಮತ್ತು ಇವರು ವೈದ್ಯಶಾಸ್ತ್ರಕ್ಕೆ ನೀಡಿದ ಕೊಡುಗೆಯನ್ನು ತಿಳಿಸುವ ಗ್ರಂಥವನ್ನು ೧೯೩೯ರಲ್ಲಿ ಪ್ರಕಟಿಸಿದ್ದು ಕರ್ನಾಟಕದ ವೈದ್ಯಕೀಯ ಇತಿಹಾಸ ತಿಳಿಯುವಲ್ಲಿ ಇನ್ನೊಂದು ಪ್ರಮುಖ ಘಟನೆಯಾಗಿದೆ.[೪] ಮೈಸೂರು

* ಆರಾಧನೆ, ಪಾವಂಜೆ, ದಕ್ಷಿಣ ಕನ್ನಡ.

ಒಡೆಯರ ಕಾಲದಲ್ಲಿದ್ದ ವೈದ್ಯರು ಅವರ ಕೃತಿಗಳು ಮತ್ತು ಅವುಗಳಲ್ಲಿ ಅಡಗಿದ್ದ ವೈದ್ಯಕೀಯ ಸಂಗತಿಗಳನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ಹಯವದನರಾವ್ ತಮ್ಮ ಬೃಹತ್ ಗ್ರಂಥ **ಮೈಸೂರಿನ ಇತಿಹಾಸದಲ್ಲಿ** ತಿಳಿಸಿದ್ದಾರೆ.[೫] ಶಾಸನಗಳನ್ನು ಆಧರಿಸಿ ಪ್ರಾಚೀನ ಕರ್ನಾಟಕದಲ್ಲಿ ವೈದ್ಯಕೀಯ ಪ್ರಗತಿಯನ್ನು ಡಾ. ಚಿದಾನಂದಮೂರ್ತಿಯವರ ಗ್ರಂಥದಲ್ಲಿ ವ್ಯಕ್ತವಾಗಿದೆ. **ಚರಕ, ಹಾರಿತಂ ಅಶ್ವಿನೀ ಮತಂ, ಬಾಹಲಿಂ ಸುಶ್ರುತ್ರಂ** (ವೈದ್ಯಗ್ರಂಥ) ಕ್ಷಾರ ಪಾನೀಯಮ್ ನರವೈದ್ಯಂಗಳನ್ನು ಅಭ್ಯಸಿಸುತ್ತಿದ್ದನ್ನು ಇವರು ವಡ್ಡಾರಾಧನೆ ಆಧಾರದಿಂದ ತಿಳಿಸಿದ್ದಾರೆ. ರಾಜನು ವೈದ್ಯಕೀಯ ಸಹಾಯವನ್ನು ಜನರಿಗೆ ಎಷ್ಟು ಮಟ್ಟಿಗೆ ಒದಗಿಸುತ್ತಿದ್ದನೆಂಬ ವಿಷಯದಲ್ಲಿ ಶಾಸನಗಳು ಮೌನವಾಗಿದೆ. ವೈದ್ಯರು ವೃತ್ತಿಯನ್ನು ಸ್ವತಂತ್ರವಾಗಿ ನಡೆಸುತ್ತಿದ್ದರು. ಜನರು ತಮ್ಮ ಊರಿನಲ್ಲಿದ್ದ ವೈದ್ಯರನ್ನು ಆಶ್ರಯಿಸುತ್ತಿದ್ದರೆಂದು ಇವರ ಅಭಿಪ್ರಾಯ.[೬] ಡಾ. ಗುರುರಾಜ ಆಚಾರ್ಯರು ಪ್ರಾಚೀನ ಕರ್ನಾಟಕದಲ್ಲಿ ವೈದ್ಯಕೀಯ ಶಿಕ್ಷಣ ನಡೆಯುವ ಕ್ರಮ ಮತ್ತು ಕೆಲವು ವೈದ್ಯರು ಮುಖ್ಯವಾಗಿ ವಿಜಯಪಂಡಿತ, ಒಬ್ಬಣ್ಣ, ಜಯಯು ಅಭ್ಯುತವಿರೇಂದ್ರ ಉಲ್ಲೇಖಿಸಿ ಅವರ ವೈದ್ಯಕೀಯ ಪರಿಣತೆಯ ಕುರಿತಾಗಿ ಮಾಹಿತಿ ನೀಡಿದ್ದಾರೆ.[೭] ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದೇವಾಲಯಗಳಲ್ಲಿ ವೈದ್ಯಕೀಯ ಶಿಕ್ಷಣ ನಡೆಯುತ್ತಿದ್ದುದನ್ನು ಡಾ. ಗೋಪಾಲರ ಪ್ರಬಂಧದಲ್ಲಿ ಉಲ್ಲೇಖವಿದೆ.[೮]

ವೈದ್ಯಶಾಸ್ತ್ರದ ಅಧ್ಯಯನದ ಇನ್ನೊಂದು ಮುಖ ಪರಿಚಯ ಮಾಡಿಕೊಟ್ಟವರಲ್ಲಿ ಡಾ. ಜಗ್ಗಿ ಗಮನಾರ್ಹರು. ಯುನಾನಿ ಆಯುರ್ವೇದದ ಬೆಳವಣಿಗೆ ಮತ್ತು ಹೊಂದಾಣಿಕೆ, ವಿಜಯನಗರ ಮತ್ತು ಬಹಮನಿ ಮತ್ತು ಸುಲ್ತಾನರ ಆಳ್ವಿಕೆಯಲ್ಲಿ ಇವುಗಳು ಹೇಗೆ ನಡೆಯಿತು ಎಂಬ ವಿಚಾರ ಇವರು ಅಧ್ಯಯನಿಸಿ ಕೆಲವು ಉಪಯುಕ್ತ ಮಾಹಿತಿಗಳನ್ನು ನೀಡಿದ್ದಾರೆ. ಕೆಲವು ಮುಸ್ಲಿಂ ಹಕೀಮರು ಮುಖ್ಯವಾಗಿ ನರ್ಸಿಉದ್ದಿನ, ಪೆರಾಜ್ಜಿ ಹಕೀಮ್ ಮತ್ತು ಅಲಂ ಮಹಮ್ಮದರು ಸ್ಥಳೀಯ ವೈದ್ಯಕೀಯ ಪದ್ಧತಿಯನ್ನು ಗೌರವಿಸಿ ತಮ್ಮ ವೈದ್ಯ ಪದ್ಧತಿಯನ್ನು ಅಭಿವೃದ್ಧಿಗೊಳಿಸಿದುದನ್ನು ಜಗ್ಗಿ ಅವರು ತಿಳಿಸಿದ್ದಾರೆ. ಬೀದರ್‌ನಲ್ಲಿ ಆಸ್ಪತ್ರೆ ಇದ್ದುದ್ದಲ್ಲದೆ ಇದರಲ್ಲಿ ಹಿಂದು ಮತ್ತು ಮುಸ್ಲಿಂ ವೈದ್ಯರುಗಳು ಸೇವೆ ಸಲ್ಲಿಸುತ್ತಿದ್ದರೆಂದು ತಿಳಿದುಬರುವುದು ಇವರ ಗ್ರಂಥದಲ್ಲಿಯೇ.[೯]

ವಚನಗಳಲ್ಲಿ ವೈದ್ಯಕೀಯ ಸಂಗತಿ ಇರುವುದನ್ನು ಡಾ. ಪಿ.ವಿ. ನಾರಾಯಣ ಬೆಳಕಿಗೆ ತಂದಿದ್ದಾರೆ. ಒಂದೊಂದು ಕಾಯಿಲೆಗೂ ಒಂದೊಂದು ದೇವತೆಗಳ ಕೋಪವೇ ಕಾರಣವೆಂದು ಜನರು ನಂಬಿಕೊಂಡು ಆ ಕಾಯಿಲೆಗಳಿಗೆ ಚಿಕಿತ್ಸೆಯನ್ನು ಮಾಡುತ್ತಿದ್ದರು. ಆದರೆ ಅದು ಸರಿಯಲ್ಲವೆಂದು ವಚನಕಾರರು ಹೇಳುತ್ತಾರೆ. ರೋಗಗಳಿಗೆ ಔಷಧ ಮಾಡಿಕೊಳ್ಳುವರು ಬಹಳಷ್ಟು ಜನರಿದ್ದರು. ಇವರು ವೈದ್ಯರ ಬಳಿ ಹೋಗಿ ಬೇಡಿ ಹಣವನ್ನು ಕೊಟ್ಟು ಔಷಧಿಯನ್ನು ತರುತ್ತಿದ್ದರು. ಇದಲ್ಲದೆ ಢೋಂಗಿ ವೈದ್ಯರು ಇದ್ದುದ್ದನ್ನು ವಚನಕಾರರು ತಿಳಿಸಿದ್ದಾರೆಂದು ಪಿ.ವಿ. ನಾರಾಯಣ ತನ್ನ ಗ್ರಂಥದಲ್ಲಿ ತಿಳಿಸಿದ್ದಾರೆ. ಇಹಲೋಕದ ಬಾಧೆಯಿಂದ ಪಾರು ಮಾಡಲು ದೇವರನ್ನು ಭವರೋಗ ವೈದ್ಯನೆಂದು ಕರೆಯುವುದು ವಚನಕಾರರಲ್ಲೂ ಇದ್ದರು. ವಚನಗಳಲ್ಲಿ ದೇಹಭಾಗಗಳು, ರೋಗಗಳು, ಔಷಧ, ಮರುಜೀವಣಿ, ರಸವೈದ್ಯ, ಅಂಜನ ಸಿದ್ಧಿ ಇತ್ಯಾದಿಗಳನ್ನು ಈ ಗ್ರಂಥಕರ್ತರು ಬೆಳಕಿಗೆ ತಂದಿದ್ದಾರೆ.[೧೦]

ಕರ್ನಾಟಕದ ಅರಸರ ಆಶ್ರಯದಲ್ಲಿ ರಚಿತವಾದ ಮಾನಸೊಲ್ಲಾಸ ಮತ್ತು ಶಿವತತ್ವರತ್ನಾಕರ ಕೃತಿಗಳಲ್ಲಿದ್ದ ವೈದ್ಯಕೀಯ ಅಂಶವನ್ನು ಕೆಲವು ವಿದ್ವಾಂಸರು ಅಧ್ಯಯನಿಸಿ ಕೆಲವು ಅಪರೂಪದ ಮಾಹಿತಿಗಳನ್ನು ತಿಳಿಸಿದ್ದು ಗಮನಾರ್ಹ. ಇಂತಹ ವಿದ್ವಾಂಸರಲ್ಲಿ ದಿ. ಜಿ.ಎಸ್. ದೀಕ್ಷಿತರು ಶಿವತತ್ವರತ್ನಾಕರದಲ್ಲಿದ್ದ ವೈದ್ಯಕೀಯ ಮಾಹಿತಿಗಳನ್ನು ೧೯೭೦ರಲ್ಲಿ ತಿಳಿಸಿದ್ದರು.[೧೧] ಇದೇ ವಿಚಾರಗಳಲ್ಲಿ ಸಾಕಷ್ಟು ವಿವರಣೆ ನೀಡಿದವರು ರಾಧಾಕೃಷ್ಣಮೂರ್ತಿ.[೧೨] ಮಾಧವನಾರಾಯಣಜೋಯಿಸರು ಮಾನಸೊಲ್ಲಾಸದಲ್ಲಿ ಹುದುಗಿದ ವೈದ್ಯಶಾಸ್ತ್ರವನ್ನು ವಿಶ್ಲೇಷಿಸಿ ಅವುಗಳ ವಿವರಣೆಗಳನ್ನು ವೈಜ್ಞಾನಿಕವಾಗಿ ತಮ್ಮ ಪ್ರಬಂಧದಲ್ಲಿ[೧೩] ತಿಳಿಸಿದ್ದು ಗಮನಾರ್ಹ ಸಂಗತಿ.

**ವೈದ್ಯಕೀಯ ಶಾಸ್ತ್ರ ಕನ್ನಡದಲ್ಲಿ** : ವೈದ್ಯಕೀಯ ಶಾಸ್ತ್ರವನ್ನು ಕನ್ನಡದಲ್ಲಿ ಬರೆದು ಅದನ್ನು ಪ್ರಚಾರಗೊಳಿಸುವ ಪ್ರಯತ್ನವು ೧೯೩೦ರ ದಶಕದಲ್ಲಿ ನಡೆಯಿತು. ಇದನ್ನು ನಡೆಸಿದವರಲ್ಲಿ ವಿರೂಪಾಕ್ಷಶಾಸ್ತ್ರಿಯವರ ಗ್ರಂಥ – ಪ್ರತ್ಯಕ್ಷ ಚಮತ್ಕಾರ ವಿದ್ಯಾ ಮಹೋದರಿ. ಇದು ೧೯೩೧ರಲ್ಲಿ ಪ್ರಕಟವಾಯಿತು. ಈ ಗ್ರಂಥದಲ್ಲಿ ವೃಕ್ಷಾಯುರ್ವೇದ, ಪಶುವೈದ್ಯ ಮತ್ತು ಆಯುರ್ವೇದ ಇತಿಹಾಸ ಮತ್ತು ರೋಗ ಮತ್ತು ಅವುಗಳ ನಿವಾರಣೆಗಳ ವಿವರಣೆಯನ್ನು ಸರಳವಾಗಿ ತಿಳಿಸಿದ್ದಾರೆ. ಶಿವಕುಮಾರ ಸ್ವಾಮಿಯವರ ಗ್ರಂಥ – ಆರೋಗ್ಯದರ್ಪಣ, ಆಯುರ್ವೇದದ ಇತಿಹಾಸವನ್ನು ಸರಳ ಕನ್ನಡ ಭಾಷೆಯಲ್ಲಿ ತಿಳಿಸಿದ್ದು ಮೆಚ್ಚುವಂತಾಗಿದೆ. ೧೯೪೩ರಲ್ಲಿ ಪ್ರಕಟವಾದ ಈ ಗ್ರಂಥದಲ್ಲಿ ಚರಕ, ಸುಶ್ರುತ, ವಾಗ್ಭಟ, ಮಾಧವ ನಿದಾನ, ಚಕ್ರದತ್ತ, ಭಾವಪ್ರಕಾಶ, ಬಸವರಾಜ, ಕೆಳದಿ ಬಸವರಾಜ ಮತ್ತು ಇವರ ಗ್ರಂಥಗಳಲ್ಲಿರುವ ಮುಖ್ಯ ಅಂಶಗಳನ್ನು ತಿಳಿಸಿದ್ದಾರೆ. ಕೊನೆಯದಾಗಿ ಇದೇ ಗ್ರಂಥದಲ್ಲಿ ಆಯುರ್ವೇದ ವಿದೇಶಿಯ ಪ್ರತಿಕ್ರಿಯೆಗಳನ್ನು ತಿಳಿಸಿದೆ. ಸಮಗ್ರ ಆಯುರ್ವೇದ ಇತಿಹಾಸ ಸರಳವಾಗಿ ಕನ್ನಡದಲ್ಲಿ ಮೂಡಿಬಂದ ಈ ಗ್ರಂಥವು

ಕರ್ನಾಟಕದ ವೈದ್ಯಕೀಯ ಇತಿಹಾಸದಲ್ಲಿ ಗಮನಾರ್ಹ ಗ್ರಂಥ. ಕರ್ನಾಟಕದಲ್ಲಿನ ಆಯುರ್ವೇದದ ಸಮಗ್ರ ಇತಿಹಾಸವನ್ನು ಕನ್ನಡದಲ್ಲಿ ಬರೆದವರಲ್ಲಿ ಡಾ. ಶ್ರೀಕಂಠಮೂರ್ತಿ ಅವರ ಬರಹ ಪ್ರಶಂಸನೀಯ. ಇವರ ಗ್ರಂಥ ಕರ್ನಾಟಕದ ಆಯುರ್ವೇದದ ಇತಿಹಾಸ ವೈದ್ಯಕೀಯ ಇತಿಹಾಸದ ಸಮಗ್ರ ಚಿತ್ರವನ್ನು ನೀಡುತ್ತದೆ. ಹಲವಾರು ಅನಾಮಧೇಯ ವೈದ್ಯರು, ವೈದ್ಯಗ್ರಂಥಗಳು, ವೈದ್ಯ ಶಾಲೆಗಳು, ಅಧ್ಯಯನ, ಅಧ್ಯಾಪನಾದಿ ಪದ್ಧತಿಗಳು, ವೈದ್ಯಕೀಯ ಚಿಕಿತ್ಸಾ ಕ್ರಮಗಳು ಮತ್ತು ವೈದ್ಯ ವೃತ್ತಿ ಪಾಲನೆಗಳ ವಿಷಯಗಳನ್ನು ಸಂಗ್ರಹಿಸಿ ತಿಳಿಸಿದ್ದಾರೆ. ಈ ಗ್ರಂಥಕರ್ತರು, ಇವುಗಳನ್ನು ಕಾಲಾನುಕ್ರಮ ಪಟ್ಟಿಯಲ್ಲಿ ತಿಳಿಸಿದ್ದು ಮೆಚ್ಚುವಂತಹದು. ಆದರೆ ಜಾನಪದ, ಯುನಾನಿ ಮತ್ತು ವಿದೇಶಿ ವೈದ್ಯಪದ್ಧತಿಗಳ ಬೆಳವಣಿಗೆಗೆ ಇವರು ಹೆಚ್ಚಿನ ಗಮನ ಕೊಟ್ಟಿಲ್ಲ. ಈ ಗ್ರಂಥವನ್ನು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯವರು ೧೯೭೨ರಲ್ಲಿ ಪ್ರಕಟಿಸಿದರು. ಇದೇ ಮಾದರಿಯಲ್ಲಿ ಎಸ್.ಕೆ. ರಾಮಚಂದ್ರರಾವ್ ವೈದ್ಯಕೀಯ ಇತಿಹಾಸವನ್ನು ಕನ್ನಡದಲ್ಲಿ ಬರೆದರು. ಇದು ಬೆಂಗಳೂರಿನಲ್ಲಿ ೧೯೮೦ರಲ್ಲಿ ಪ್ರಕಟವಾಯಿತು.

**ಕೆಲವು ವಿಶಿಷ್ಟ ವೈದ್ಯಕೀಯ ಗ್ರಂಥಗಳು :** ಈ ಶೀರ್ಷಿಕೆಯಲ್ಲಿ ನಮ್ಮ ಗಮನ ಸೆಳೆಯುವ ಗ್ರಂಥಗಳಲ್ಲಿ 'ಶಾಸನಗಳಲ್ಲಿ ಗಿಡಮರಗಳು' (ಬೆಂಗಳೂರು) ಎಂಬ ಕೃತಿಯ ಕರ್ತರು ಬಿ.ಜಿ.ಎಲ್. ಸ್ವಾಮಿ. ಈ ಗ್ರಂಥದಲ್ಲಿ ವೈದ್ಯಕೀಯ ಇತಿಹಾಸ ಮತ್ತು ಶಾಸನಗಳಲ್ಲಿ ತಿಳಿಸಿದ ಔಷಧಿ ಗಿಡಗಳು ಮತ್ತು ವೈದ್ಯರುಗಳ ವಿಚಾರ ತಿಳಿಸಿದ್ದಾರೆ. ಇವುಗಳ ನಿರೂಪಣೆಗಳಿಗೆ ಶಾಸನಗಳೇ ಆಧಾರ. ಆಯುರ್ವೇದದ ಉಗಮದ ಮಾಹಿತಿಯನ್ನು ಶಾಂತಿನಾಯಕರು ತಮ್ಮ ಗ್ರಂಥ ಸಿಂಕೋನಾದಲ್ಲಿ[೧೪] ತಿಳಿಸಿದ್ದಾರೆ. ಇವರ ಅಭಿಪ್ರಾಯದಂತೆ **"ಪ್ರಾಚೀನ ಭಾರತದಲ್ಲಿ ಅಂದಿನ ಜಾನಪದದವರು ಬಳಸುತ್ತಿದ್ದ ನಾಡಮದ್ದು, ಮನೆಮದ್ದುಗಳು ಆಗಿನ ಋಷಿಗಳ ಗಮನಕ್ಕೆ ಬಂದಾಗ ಆಯುರ್ವೇದ ಹುಟ್ಟಿಕೊಂಡಿತು. ಇಲ್ಲಿನ ಜನಪದ ವೈದ್ಯವು ಜಗತ್ತಿನ ಎಲ್ಲಾ ವೈದ್ಯಗಳ ತಾಯಿ"** ಎಂದಿದೆ. ಸ್ತ್ರೀ ವೈದ್ಯರ ಪಾತ್ರ, ಆಧುನಿಕ ವೈದ್ಯ ಮತ್ತು ಮನೆಮದ್ದುಗಳು ಇತ್ಯಾದಿಗಳ ವಿಶ್ಲೇಷಣಾ ಇದರಲ್ಲಿದೆ.

ಜೈನ ವೈದ್ಯ ಪದ್ಧತಿ, ಇದರ ವಿಹಂಗಮ ಇತಿಹಾಸ, ಜೈನರು ವೈದ್ಯಕೀಯ ಶಾಸ್ತ್ರಕ್ಕೆ ನೀಡಿದ ಕೊಡುಗೆಗಳು, ಓಂದು ವೈದ್ಯ ಕ್ರಮಕ್ಕಿಂತ ಭಿನ್ನವಾಗಿ ಜೈನರು ಮತ್ತು ಆಯುರ್ವೇದ ಸಾಧಿಸಿದ ವೈಶಿಷ್ಟಗಳ ವಿವರಗಳನ್ನು ಧನ್ಯ ಕುಮಾರ ಇಜಾರಿ ತಮ್ಮ ಗ್ರಂಥ ಜೈನ ವೈದ್ಯಕೀಯ ಪರಂಪರೆ.[೧೫] (ಹಂಪಿ ವಿಶ್ವವಿದ್ಯಾಲಯ ೨೦೦೪)ರಲ್ಲಿ ವಿವರಿಸಿದ್ದಾರೆ. ಜೈನ ವೈದ್ಯಕೀಯ ಪರಂಪರೆಯ ಚಿಂತನೆ ಇದರಲ್ಲಿದೆ. ಕೆಲವು ರೋಗಗಳ ಇತಿಹಾಸ ತಿಳಿಸುವ ವೈದ್ಯಕೀಯ ಗ್ರಂಥಗಳು ಕನ್ನಡ ಭಾಷೆಯಲ್ಲಿದೆ. ಇಂತಹವುಗಳಲ್ಲಿ ನಡಿಬೈಲು ಉದಯಶಂಕರ ಗ್ರಂಥ ಮಧುಮೇಹಕ್ಕೆ ಆಯುರ್ವೇದ ಚಿಕಿತ್ಸೆ ಗಮನಾರ್ಹ. ಈ ಗ್ರಂಥದಲ್ಲಿ ಮಧುಮೇಹ ರೋಗದ ಇತಿಹಾಸವಿದೆ. ಈ ರೋಗಕ್ಕೆ ಚರಕ, ಸುಶ್ರುತ, ಮಾಧವ, ವಾಗ್ಭಟ, ಚಕ್ರಪಾಣಿದತ್ತ, ಯೋಗರತ್ನಾಕರ ಮತ್ತು ಬೊಮ್ಮರಸಯ್ಯರ ವ್ಯಾಖ್ಯಾನಗಳ ವಿವರಣೆಗಳಿವೆ.[೧೬]

**ಲೇಖನಗಳು :** ಕೆಲವು ಪತ್ರಿಕೆಗಳಲ್ಲಿ ವೈದ್ಯಕೀಯ ಇತಿಹಾಸ ತಿಳಿಸುವ ಲೇಖನಗಳು ೧೯೨೧ ರಿಂದ ಪ್ರಕಟವಾಗುತ್ತಾ ಇದೆ. ಇಂತಹ ಲೇಖಕರಲ್ಲಿ ಎಂ. ಗೋಪಾಲ ಕೃಷ್ಣರಾವ್ ಪ್ರಮುಖರು ಇವರ ಲೇಖನ – 'ಆಯುರ್ವೇದ ಸಾಹಿತ್ಯ' ಕನ್ನಡದಲ್ಲಿ ಬರೆದಿದ್ದಾರೆ. ಈ ಲೇಖನದಲ್ಲಿ ಗೋಪಾಲಕೃಷ್ಣರಾವ್ ಭಾರತದ ವೈದ್ಯಕೀಯ ಶಾಸ್ತ್ರದ ಕುರಿತಾಗಿ ವಿದೇಶಿಯರಲ್ಲಿದ್ದ ತಪ್ಪು ತಿಳುವಳಿಕೆಗೆ ಭಾರತೀಯರೇ ಕಾರಣರಾಗಿದ್ದಾರೆಂಬ ಹೊಸ ವಿಚಾರ ತಿಳಿಸಿದ್ದಾರೆ. ಇದಲ್ಲದೆ ಆಯುರ್ವೇದದ ಬೆಳವಣಿಗೆ ವಿವಿಧ ಹಂತಗಳನ್ನೂ ತ್ರಿದೋಷದ ಸರಿಯಾದ ವಿವರಣೆಗಳನ್ನು ಮತ್ತು ಇವುಗಳ ಅಧ್ಯಯನದಲ್ಲಿ ವಿವೇಚನೆಯ ಅವಶ್ಯಕತೆಯನ್ನೂ ಈ ಲೇಖಕರು ಒತ್ತಿ ಹೇಳಿದ್ದಾರೆ.[೧೭]

**ಇತರ ಲೇಖನಗಳು :** ಕೆ.ಪಿ. ಶರ್ಮಾ ಮತ್ತು ಸತ್ಯನಾರಾಯಣ ಅವರ ಲೇಖನಗಳು ದಕ್ಷಿಣಕನ್ನಡ ಜಿಲ್ಲೆಯ ವೈದ್ಯಶಾಸ್ತ್ರದ ಆಗುಹೋಗುಗಳನ್ನು ತಿಳಿಸುತ್ತದೆ. ಈ ಲೇಖನಗಳಲ್ಲಿ ತಿಳಿಸಿದ ಆಗುಹೋಗುಗಳು ೧೯ ಮತ್ತು ೨೦ನೆಯ ಶತಮಾನಗಳ ಮಧ್ಯಾವಧಿಗೆ ಸೀಮಿತವಾಗಿದೆ.[೧೮] ವೈದ್ಯಕೀಯ ಇತಿಹಾಸದ ಕುತೂಹಲಕರ ಲೇಖನಗಳಲ್ಲಿ ಜಿ.ಎಸ್. ರಾಮಭಟ್ಟರ 'ಕುಮಾರ ಭಾರತದಲ್ಲಿ ಚಿಕಿತ್ಸೆ ತಾಂತ್ರಿಕತೆ' ಗಮನಾರ್ಹ. ಇದು ಸಂಯುಕ್ತ ಕರ್ನಾಟಕ ಸೌರಭದಲ್ಲಿ (೦೫.೦೬.೨೦೦೫) ಪ್ರಕಟವಾಗಿದೆ. ಮಧ್ಯಕಾಲೀನ ಕರ್ನಾಟಕದ ಸ್ಥಳೀಯ ವೈದ್ಯಕೀಯ ಮಾಹಿತಿಯನ್ನು ಧನ್ಯಕುಮಾರ ಇಜಾರಿಯವರ ಲೇಖನ "ಸರ್ವಜ್ಞ ವಚನದಲ್ಲಿ ವೈದ್ಯಕೀಯ ವಿಚಾರ"ದಿಂದ ತಿಳಿಯಬಹುದು.[೧೯]

## ಉಪಸಂಹಾರ

೧. ಕರ್ನಾಟಕದಲ್ಲಿ ವೈದ್ಯ ಇತಿಹಾಸವನ್ನು ಅಧ್ಯಯನಿಸುವಲ್ಲಿ ವಿದ್ವಾಂಸರು ಆಯುರ್ವೇದಕ್ಕೆ ಹೆಚ್ಚಿನ ಪ್ರಾಮುಖ್ಯತೆ ಯನ್ನು ಕೊಟ್ಟಿದ್ದಾರೆ. ಯುನಾನಿ, ರೂಢಿಯಲ್ಲಿದ್ದ ಜನಪದ ವೈದ್ಯಕೀಯ ಪದ್ಧತಿ ಅಧ್ಯಯನ

ಮತ್ತು ಆಯುರ್ವೇದದೊಂದಿಗೆ ಇರುವ ಸಂಪರ್ಕಗಳ ವಿಚಾರ ಹೆಚ್ಚಿನ ಗಮನ ನೀಡಿಲ್ಲ.

೨. ವೈದ್ಯಕೀಯ ಇತಿಹಾಸಕ್ಕಿರುವ ಆಕರಗಳ ಸಂಗ್ರಹ ಮತ್ತು ಅವುಗಳ ವಿಶ್ಲೇಷಣೆ ಸರಿಯಾಗಿ ನಡೆಯದಿಲ್ಲ ಮುಖ್ಯವಾಗಿ ವಿದೇಶಿ ಆಕರಗಳನ್ನು ಸರಿಯಾಗಿ ಯಾರು ಹೆಚ್ಚಿಗೆ ಗಮನಿಸಲಿಲ್ಲ.

೩. ವೈದ್ಯಕೀಯ ಶಾಸ್ತ್ರದ ಅಧ್ಯಯನ ಹೇಗೆ ನಡೆಸುತ್ತಿದ್ದರು, ಅದಕ್ಕೆ ಜನರ ಪ್ರತಿಕ್ರಿಯೆ, ವೈದ್ಯಕೀಯ ಅಧ್ಯಯನಿಸುವಲ್ಲಿ ಸ್ತ್ರೀಯರ ಪಾತ್ರ ಮತ್ತು ಆಯುರ್ವೇದ ಗ್ರಂಥಗಳ ಸರಿಯಾದ ವಿವೇಚನೆ ಸಮರ್ಪಕವಾಗಿ ನಡೆಸುವ ಅವಶ್ಯಕತೆ ಇದೆ. ಇಂತಹ ಅಧ್ಯಯನದಲ್ಲಿ ವಿಚಾರಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇರಬೇಕು.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಈ ವಿಚಾರಗಳನ್ನು ಡಾ. ಜೆ.ಡಿ.ಬರ್ನಲ ತಮ್ಮ ಗ್ರಂಥದಲ್ಲಿ ವಿವರಿಸಿದ್ದಾರೆ. J.P. Bernal., *Science is Histor Vol. I* (London 1969) ಪು. ೫೫-೫೬.

೨. B.L. Rice., *Mysore and Coorg from the Inscriptions*, AES 1986) ಪು. ೧೮೮-೮೯, ಪು. ೮೯ ಸ್ತ್ರೀ ವೈದ್ಯರು ಈಜಿಪ್ಟಿನಿಯಲ್ಲಿ ಕಾಣಿಸಿಕೊಂಡದ್ದನ್ನು ಬಿಟ್ಟರೆ ಕರ್ನಾಟಕದಲ್ಲಿ ಕಾಣಿಸಿಕೊಂಡಿರುವುದನ್ನು ಅಲಕ್ಷಿಸುವಂತಿಲ್ಲ. ಶಾಸನದಲ್ಲಿ ಕಾಣಿಸಿಕೊಂಡ ನಂಜಮ್ಮ ವಾಂತಿಭೇದಿ ರೋಗವನ್ನು ಗುಣಪಡಿಸುತ್ತಾಳೆ. ಇದು ಪಾಂಡವಪುರ ಶಾಸನದಲ್ಲಿ ತಿಳಿಸಿರುವುದನ್ನು ರೈಸರು ಬೆಳಕಿಗೆ ತಂದಿದ್ದಾರೆ.

೩. E.P. Rice., *History of Canaries Literature*, ಆರ್. ನರಸಿಂಹಾಚಾರ್ಯ., ***ಕರ್ನಾಟಕ ಕವಿಚರಿತ್ರೆ***, ಭಾಗ-೧, (ಪ್ರಥಮ ಮುದ್ರಣ ೧೯೧೭, ಎರಡನೇ ಮುದ್ರಣ + ಬೆಂಗಳೂರು ೧೯೬೩) ಪು. ೧೨೭, ೧೭೯-೧೮೦, ೪೭೨-೭೩, ೫೦೦-೫೦೮, ಭಾಗ III ೧೧೨, ೧೧೭, ೨೦೧, ೨೦೨).

೪. ಬಿ.ಎ. ಸಾಲೆತ್ತೂರ., *Mediaeval Jainism with reference Vijayanagar*, (Bombay 1938) ಪು ೧೬೨, ೩೮೫, ೩೮೭.

೫. ಶ್ರೀ ಹಯವದನರಾವ್., *History of Mysore*, (Bangalore 1943, p. 36, 38, 459, II, p. 339).

೬ ಎಂ. ಚಿದಾನಂದಮೂರ್ತಿ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಎರಡನೇ ಮುದ್ರಣ, ೧೯೭೯, ಪು. ೨೩೩, ೪೦೫.

೭. ಗುರುರಾಜ ಆಚಾರ್ಯ., *Some aspects of Economic and Social Life in Karnataka*, AD 1000-1300 AD (Mysore 1974), ಪು ೨೧೭.

೮. ಎಚ್.ಎಸ್. ಗೋಪಾಲರಾಯ., **ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ**, (ಮೈಸೂರು ೧೯೯೩) ಪು ೧೬, ೨೨, ೨೧೭, ೨೧೮.

೯. Jaggi I.P. : *Medicine in Mediavial India Delhi*, 1977, ಪು. ೧೨೩-೧೨೫, ೧೩೧-೧೩೪.

೧೦. ಪಿ.ವಿ. ನಾರಾಯಣ., **ವಚನಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ**, (ಗದಗ ೧೯೮೩) ೩೫೭, ೩೭೦.

೧೧. ಜಿ.ಎಸ್. ದೀಕ್ಷಿತ., The Siva tatvarathnakara as Source book for Science in Ancient and Medieval India, *Indian Journal of History and Science* 1970, ಪು. ೧೧.

೧೨. ಶ್ರೀಮತಿ ರಾಧಾಕೃಷ್ಣಮೂರ್ತಿ., *Sivatatava Ratankara keladi Basavaraja A Cultural Study*, (Keladi 1995) ಪ್ರ.ಪು 235-280.

೧೩. ಮಾಧವ ನಾರಾಯಣ ಜೋಯಿಸ., *Treatment of Secular Arts and Science in Someswaras Manasollasa*. (ಅಪ್ರಕಟಿತ ಪ್ರಬಂಧ ೧೯೮೪ ಈಗ ಇದು ಪ್ರಕಟವಾಗಿದೆ.)

೧೪. ಶಾಂತಿನಾಯಕ., (ಸಂ) : **ಸಿಂಕೋನಾ** (ಹೊನ್ನಾವರ ೧೯೮೧, ಕೃತಜ್ಞತೆ, ಪು. ೧)

೧೫. ಧನ್ಯಕುಮಾರ ಇಜಾರಿ ಈ ಗ್ರಂಥವಲ್ಲದೆ ಇನ್ನಿತರ ವೈದ್ಯಕೀಯ ಶಾಸ್ತ್ರ ಗ್ರಂಥಗಳನ್ನು ಮತ್ತು ಲೇಖನಗಳನ್ನು ಕನ್ನಡದಲ್ಲಿ ಬರೆದಿದ್ದಾರೆ. ಇವರ ಆಯುರ್ವೇದ ಗ್ರಂಥಗಳು "**ಆಯುರ್ವೇದದಲ್ಲಿ ಮಕ್ಕಳ ಆರೋಗ್ಯ**"

೧೬. ನಡಿಬೈಲು ಉದಯಶಂಕರ., **ಮಧುಮೇಹಕ್ಕೆ ಆಯುರ್ವೇದ ಚಿಕಿತ್ಸೆ**, ಮಂಗಳೂರು (೧೯೯೭) ಪು. ೯, ೧೨, ೭೦, ೭೮.

೧೭. ಬೆಳಗಾವಿ ಸಾಹಿತ್ಯ ಸಮ್ಮೇಳನ, ೧೯೮೦, ಬೆಂಗಳೂರು, ೧೯೮೧, ಪು. ೩೯೫-೪೦೭.

೧೮. "ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಯುರ್ವೇದ '**ಸುದರ್ಶನ ಮೂಲ್ಕಿ**' ೧೯೭೭, ಪು. ೩೩೬., ನಾಡವೈದ್ಯ ಮತ್ತು ಆಯುರ್ವೇದ ಜಿಲ್ಲೆಯ ಆಗುಹೋಗುಗಳು (ಮಂಗಳೂರು ೨೦೦೦) ಪು. ೨೩೧-೨೩೬.

೧೯. **ಕರ್ನಾಟಕ ಭಾರತಿ,** ಧಾರವಾಡ ೧೯೭೩) ನವೆಂಬರ್ ಪು. ೨೧-೩೨.

ಡಾ. ತುಳಸಿರಾಮ್‌ನಾಯಕ್*

# ಬೆಂಗಳೂರಿನ ಹಿರಿಯ ಕೆಂಪೇಗೌಡ ಹಾಗೂ ವಂಶಿಕರ ಧಾರ್ಮಿಕ ದತ್ತಿಗಳು

ಬೆಂಗಳೂರನ್ನು ನಿರ್ಮಿಸಿದ ಒಂದನೇ ಕೆಂಪೇಗೌಡ ಯಲಹಂಕನಾಡ ಪ್ರಭುಗಳ ರಾಜವಂಶಸ್ಥ. ಕೆಂಪೇಗೌಡನ ವಂಶಸ್ಥರು ಮತ್ತು ಬೆಂಗಳೂರು ನಿರ್ಮಾಣದ ಬಗ್ಗೆ ದೊರೆಯುವ ಎಲ್ಲಾ ಚಾರಿತ್ರಿಕ ಮೂಲಗಳನ್ನು ಇಟ್ಟುಕೊಂಡು ಅಧ್ಯಯನ ನಡೆಸಿದ ನೇರ ಕೃತಿಗಳು ತೀರಾ ಕಡಿಮೆ. ಕೆಂಪೇಗೌಡ ವಂಶಸ್ಥರನ್ನು ಪಾಳೆಯಗಾರರೆಂದು ಹೊಯ್ಸಳರ ಸಾಮಂತರೆಂದು ಹಾಗೂ ನಂತರದಲ್ಲಿ ವಿಜಯನಗರದ ಅರಸರ ಸಾಮಂತರೆಂದೂ ಮತ್ತು ಮೈಸೂರು ಅರಸರ ಸಾಮಂತರೆಂದು ಗುರುತಿಸಲಾಗಿದೆ.[೧]

ಯಲಹಂಕ ಪ್ರಭುಗಳು ವಿಜಯನಗರದರಸರ ರಾಜಕೀಯ ನೀತಿ, ಧಾರ್ಮಿಕ ಏಕಸಾಮ್ಯತೆಗಳನ್ನು ಅನುಸರಿಸಿದ್ದರೂ ವಿಜಯನಗರಕ್ಕಿಂತ ಭಿನ್ನವಾದ ಅನೇಕ ಉದಾತ್ತ ಅಂಶಗಳನ್ನು ಇವರ ಅಧಿಕಾರಾವಧಿಯಲ್ಲಿ ಕಾಣಬಹುದಾಗಿದೆ. ಆಕ್ರಮಣಶೀಲ ಮನೋಭಾವಕ್ಕೆ ಹೆಚ್ಚು ಒತ್ತು ಕೊಡುತ್ತಿರಲಿಲ್ಲ. ಬಿಜಾಪುರದ ಸುಲ್ತಾನನ ಷಾಜಿ–ರಣದುಲ್ಲಾ ಸೇನೆಗಳ ಜೊತೆಯಲ್ಲಿ ಕೆಂಪೇಗೌಡನು ಶೀಘ್ರಗತಿಯಲ್ಲಿ ಎಚ್ಚೆತ್ತುಕೊಂಡು ವೀರಾವೇಶದಿಂದ ಸೆಣಸಿದನಾದರೂ ತೀವ್ರ ಸೋಲನ್ನು ಅನುಭವಿಸಬೇಕಾಯಿತು. ಈ ಯುದ್ಧದ ಬಗೆಗೆ ವಿವರಣೆ ನೀಡುತ್ತಾ ಕವೀಂದ್ರ ಪರಮಾನಂದರು ಕೆಂಪೇಗೌಡನ ವ್ಯಕ್ತಿತ್ವವನ್ನು ಹೀಗೆ ವಿವರಿಸುತ್ತಾರೆ. "ಕೆಂಪೇಗೌಡನು ಅತ್ಯಂತ ಚಾಣಾಕ್ಷ ಮತ್ತು ಧೈರ್ಯಶಾಲಿ ರಾಜನಾಗಿದ್ದನು. ಆದ್ದರಿಂದಲೇ ಅನೇಕ ದಿನಗಳ ಕಾಲ ಯುದ್ಧವನ್ನು ಮುಂದುವರಿಸಿಕೊಂಡು ಹೋಗಲು ಸಫಲನಾದರೂ ಕಡೆಗೆ ಬೆಂಗಳೂರು (ಬೆಂಗ್ಳೂರು) ಕೋಟೆಯನ್ನು ಬಿಟ್ಟುಕೊಡಲೇಬೇಕಾಯಿತು. ಕೊನೆಗೂ ಯುದ್ಧವು ಒಪ್ಪಂದದಲ್ಲಿ ಅಂತ್ಯಗೊಂಡಿತು" ಎನ್ನುತ್ತಾರೆ. ಪ್ರಜಾಹಿತ ಕಾರ್ಯಗಳ ಶ್ರಮವಹಿಸಿದ ಇವರ ಸಂಕಲ್ಪ ಶಕ್ತಿಯ ಮತ್ತು ಆಡಳಿತವು ಧರ್ಮದ ತಳಹದಿಯ ಮೇಲೆ ನಿಂತಿದೆಯೆಂದರೆ ತಪ್ಪಾಗಲಾರದು. ಅಂತೆಯೇ ಇವರುಗಳ ಕಾಲದಲ್ಲಿ ಕಾರ್ಯರೂಪಗೊಂಡ ಹಲವು ದೇವಾಲಯಗಳು, ಅನ್ನಸತ್ರಗಳು, ಕೆರೆಗಳು ತಟಾಕಗಳು, ಮಠ ಮತ್ತು ಅಗ್ರಹಾರಗಳು ಜನಪರವಾದ ಹಾಗೂ ಜನೋಪಯೋಗಿಯಾದ ಚಟುವಟಿಕೆಗಳಾಗಿದ್ದು, ಧಾರ್ಮಿಕ ಮನೋಭಾವದ ಹಿನ್ನೆಲೆಯಲ್ಲಿ ಬಿಂಬಿತವಾಗಿವೆ. ಸುಮಾರು ೪೫೦ ವರ್ಷಗಳ ಕಾಲ ರಾಜ್ಯಾಡಳಿತ ಸೂತ್ರವನ್ನು ನಡೆಸಿದ ಯಲಹಂಕ ಪ್ರಭುಗಳ ಕಾಲದ ಧಾರ್ಮಿಕ ಪರಿಸ್ಥಿತಿ ಹಾಗೂ ಕೊಡುಗೆಗಳೂ ದಾಖಲೆಗಳ ಪ್ರಕಾರ ಮೊದಲನೇ ಕೆಂಪೇಗೌಡನ ಕಾಲದಿಂದ ಆರಂಭಗೊಳ್ಳುತ್ತವೆ. ಅಂದರೆ, ಈ ಹಿಂದಿನ ರಣಭೈರೆಗೌಡ, ಜಯಗೌಡ, ಗಿಡ್ಡೇಗೌಡ, ಕೆಂಪನಂಜೇಗೌಡರ ಕಾಲಕ್ಕೆ ಧಾರ್ಮಿಕ ಪರಿಸ್ಥಿತಿಯನ್ನು ಕುರಿತಂತೆ ಲಿಖಿತ ದಾಖಲೆಗಳ ಉಪಲಬ್ಧದ ಕೊರತೆಯ ಕಾರಣ ಬೆಂಗಳೂರು ಕೆಂಪೇಗೌಡನ ಆಳ್ವಿಕೆಯ ಕಾಲದಿಂದ ಮಾತ್ರ ದಾಖಲಿಸಬೇಕಾಗುತ್ತದೆ. ಈತನ ಕಾಲದಲ್ಲಿ ನಿರ್ಮಿತಗೊಂಡ ಬೆಂಗಳೂರಿನ ಗವಿಗಂಗಾಧರೇಶ್ವರ ಬಸವನಗುಡಿಯಲ್ಲಿರುವ ಸುಂದರ ಸಾಲಂಕೃತ ಬಸವ, ಬೃಹತ್ ಗಣಪತಿ, ಆಂಜನೇಯ, ನಂದೀಶ್ವರ, ಪ್ರಳಯ ಕಾಲದ ವೀರಭದ್ರ ಮನೋಹರವಾದ ರಚನೆಗಳಾಗಿವೆ.

ಭೈರವ ಉಪಾಸಕನಾದ ಕೆಂಪೇಗೌಡನು ಶಿವನ ಆರಾಧಕನಾದನೆಂದೂ ಅಂತಾಗಿ ಶಿವದೇವಾಲಯವನ್ನು ನಿರ್ಮಿಸಿದನೆಂದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಇದಕ್ಕೆ ಪೂರಕವೆಂಬಂತೆ ಮಾಗಡಿಯ ನೈರುತ್ಯಕ್ಕಿರುವ ಕೆಂಪಸಾಗರ ಗ್ರಾಮದಲ್ಲಿ ಒಂದು ವೀರಶೈವ ಮಠದ ನವರಂಗದ ಒಂದು ಕಂಬದ ಮೇಲೆ ಒಂದು ಲಿಂಗ ಮಡಿಕೆಯಿಂದ ಹೊರಬರುತ್ತಿರುವಂತೆ ಕೆತ್ತಿಸಿದ್ದು ಅದರ ಮುಂದುಗಡೆಯ ಕಂಬದಲ್ಲಿ ಕೆಂಪೇಗೌಡನ ಪ್ರತಿಕೃತಿಯನ್ನು ಕೆತ್ತಲಾಗಿದೆ. ಭಕ್ತಿ ದ್ಯೋತಕವಾಗಿ ಇದನ್ನು "ಸುರ ಬಾಂಡೇಶ್ವರ" ಎಂದು ಕರೆಯಲಾಗಿದೆ.

ಗೌಡನು ಬೆಂಗಳೂರಿನ ಕೋಟೆಯ ದಕ್ಷಿಣ ದಿಗ್ಭಾಗಕ್ಕೆ ಕಲ್ಯಾಣ ಬಸವೇಶ್ವರನ ಗುಡಿಯನ್ನು ಅದರ ಮುಂಭಾಗದಲ್ಲಿ ಒಂದು ಸುಂದರವಾದ ಕೊಳವನ್ನು ನಿರ್ಮಿಸಿದುದ್ದಾಗಿ ಡಾ. ಗುಂಡಪ್ಪ ದೀಕ್ಷಿತರು ತಿಳಿಸುತ್ತಾರೆ. ಮುಂದೆ ಕ್ರಿ.ಶ. ೧೬೯೦ರಲ್ಲಿ ಮೂಲರಂಗಯ್ಯನೆಂಬ ಪಾರುಪತ್ಯಗಾರನ ಮೂಲಕ

* ೨೩೯೧, 'ಆನಂದ ಭವನ', ೭ನೇ ಮುಖ್ಯರಸ್ತೆ ಬಿ.ಎಸ್.ಕೆ. ೨ನೇ ಹಂತ, ಬೆಂಗಳೂರು – ೫೬೦ ೦೭೦.

ಮೈಸೂರಿನ ಚಿಕ್ಕದೇವರಾಜ ಒಡೆಯರು ಈ ದೇಗುಲವನ್ನು ವೆಂಕಟರಮಣಸ್ವಾಮಿ ದೇವಾಲಯವನ್ನಾಗಿ ಪರಿವರ್ತಿಸಿರುತ್ತಾರೆ. ಹಲಸೂರಿನ ಸೋಮೇಶ್ವರ, ರಾಮಗಿರಿಯ ರಾಮದೇವ ಗುಡಿಯ ರಂಗಮಂಟಪ, ಹುತ್ರಿದುರ್ಗದ ಬುಡದಲ್ಲಿ ಆದಿನಾರಾಯಣ, ವೀರಭದ್ರ ಹಾಗೂ ಆಂಜನೇಯ ದೇವಾಲಯಗಳು ಕೆಂಪೇಗೌಡನ ಕಾಲದಲ್ಲಿ ನಿರ್ಮಾಣಗೊಂಡವು[೨] ಹಾಗೂ ಅವು ಪರಧರ್ಮ ಸಹಿಷ್ಣುತೆಯನ್ನು ವ್ಯಕ್ತಪಡಿಸುತ್ತವೆ.

ಬೆಂಗಳೂರಿನ ಸಂಪಂಗಿಕೆರೆ, ಧರ್ಮಾಂಬುದಿ ಕೆರೆ, ಜಕರಾಯನಕೆರೆ, ಕೆಂಪಾಂಬುದಿ ಕೆರೆ ಹಾಗೂ ಕಾರಂಜಿ ಕೆರೆ ಕಟ್ಟಿಸಿ ಜನರಿಗೆ ಹಾಗೂ ಜಾನುವಾರುಗಳಿಗೆ ಮತ್ತು ವ್ಯವಸಾಯಕ್ಕೆ ಅನುಕೂಲವಾಗುವ ಹಾಗೆ ಹಿರಿಯ ಕೆಂಪೇಗೌಡನು ಮಾಡಿಸಿದ್ದನು.

ಕ್ರಿ.ಶ. ೧೫೫೦ರಲ್ಲಿ ಶಿವಗಂಗೆಯು ಕೆಂಪೇಗೌಡನ ಸ್ವಾಧೀನವಾಯಿತು. ಶಿವಗಂಗಾ ಗಿರಿಯ ಭವ್ಯ ಪ್ರಕೃತಿಯ ಸೌಂದರ್ಯ ಮನಮಿಡಿದುದರ ಫಲವಾಗಿ ಭಕ್ತಿಪೂರ್ವಕವಾಗಿ ಗಿರಿಯ ಸುತ್ತೆಲ್ಲಾ ಹಲವು ಗುಡಿ ಗೋಪುರಗಳನ್ನು ಅನ್ನಸತ್ರಗಳನ್ನು ಕಟ್ಟಿಸಿ, ಆ ಗುಡಿಗಳಲ್ಲಿ ನಿತ್ಯಾರಾಧನೆಗೆ, ಪೂಜೆಪುನಸ್ಕಾರಗಳಿಗೆ ಆದಾಯ ಬರುವಂತೆ ಸೂಕ್ತ ವ್ಯವಸ್ಥೆ ಮಾಡಿದನು. ಅಲ್ಲದೇ ಮೂಲ ದೇವಾಲಯ ಶಿಥಿಲಗೊಂಡಿದ್ದರಿಂದ ಜೀರ್ಣೋದ್ಧಾರ ಮಾಡಿಸಿದ್ದುದಲ್ಲದೇ ದೇಗುಲದಲ್ಲಿ ವಿಶಾಲವಾದ ಸಭಾಂಗಣವನ್ನು ಕಟ್ಟಿಸಿಕೊಟ್ಟನು. ಈಗಲೂ ಸಹ ಈ ಸಭಾಂಗಣವನ್ನು ಕೆಂಪೇಗೌಡ ಹಜಾರವೆಂದೇ ಕರೆಯುತ್ತಾರೆ. ಇಲ್ಲಿನ ಗಂಗಾಧರೇಶ್ವರ ಗುಡಿಯಲ್ಲಿರುವ ಒಂದು ಮತ್ತು ಮೂರನೆಯ ಘಂಟೆಯ ಶಾಸನಗಳಲ್ಲಿ "ಚೆಲುವನಹಳ್ಳಿಯ ಜ್ಞಾನಮೂರ್ತಿ ದೇವರು ತಮ್ಮ ಗುರುಗಳೆಂದು" ಭಕ್ತಿಪೂರ್ವಕವಾಗಿ ಸ್ಮರಣೆ ಮಾಡಿರುವ ದಾಖಲೆಗಳಿವೆ. ಸ್ವತಃ ಹಿರಿಯ ಕೆಂಪೇಗೌಡರೆ ಅರ್ಪಿಸಿರುವ ಇಲ್ಲಿನ ದೇವಾಲಯದ ದೊಡ್ಡ ಗಂಟೆಯೊಂದರ ಮೇಲೆ "ಸಂಕ್ರಾಂತಿಯ ಪುಣ್ಯ ಕಾಲದಲ್ಲಿ ಶ್ರೀಮನ್ ಮಹಾದೇವ ದಕ್ಷಿಣ ವಾರಣಾಸಿ ಶ್ರೀ ಕಕ್ಕುದ್ಗಿರಿವಾಸ ಶ್ರೀ ಗಂಗಾಧರ ಸ್ವಾಮಿಯ ಶ್ರೀಪಾದಕ್ಕೆ ಶ್ರೀಮನ್ ಮಹಾಯಲಹಂಕ ನಾಡಪ್ರಭು ಕೆಂಪನಾಚೆಗೌಡರ ಮಕ್ಕಳು ಕೆಂಪೇಗೌಡರು ತಮಗೆ ಪುತ್ರ, ಪೌತ್ರ ಪಾರಂಪರ್ಯ ಅಭಿವೃದ್ಧಿಯಾಗಲೆಂದೂ ತಮ್ಮ ಮಾತಾಪಿತೃಗಳಿಗೆ ಮೋಕ್ಷವಾಗಲೆಂದು ಅರ್ಪಿಸಿದ ಗಂಟೆ"[೩] ಎಂದೇ ಉಲ್ಲೇಖಿಸಲಾಗಿದೆ. ಈ ಗಂಟೆಯು ಶಾಸನವನ್ನು ಶಿವಗಂಗೆಯ ಕಾಶ್ಯಪ ಗೋತ್ರದ ಕೇತಿಯ ಒಡೆಯರ ಮಕ್ಕಳು ನಮಃಶಿವಾಯ ಒಡೆಯರು ಯೆರೆದುದಾಗಿ ತಿಳಿದುಬರುತ್ತದೆ.

ಶಿವಗಂಗೆಯ ಬೆಟ್ಟದ ಮೇಲೆ ಗಂಗಾಧರೇಶ್ವರನ ದೇವಸ್ಥಾನದ ಗವಿಯ ಒಳಗೆ ಕೆಂಪೇಗೌಡನ ಕಂಚಿನ ಪ್ರತಿಮೆಯಿದೆ. ಈ ಪ್ರತಿಮೆಯ ಪೀಠ ಭಾಗದಲ್ಲಿರುವ ಶಾಸನದಲ್ಲಿ "ಬೆಂಗಳೂರ ಕೆಂಪನಾಚೆಯಗೌಡರ ಕುಮಾರ ಕೆಂಪಯ್ಯಗೌಡನು ಗಂಗಾಧರಸ್ವಾಮಿಯ ಪಾದಕ್ಕೆ ಸದಾ ನಮಸ್ಕಾರ"[೪] ಎಂದೇ ಉಲ್ಲೇಖಿಸಲಾಗಿದ್ದು, ಗೌಡನಿಗೆ ಗಂಗಾಧರ ಸ್ವಾಮಿಯ ಮೇಲೆ ಇದ್ದ ಅಪಾರ ಭಕ್ತಿಯ ಸಂಕೇತಕ್ಕೆ ಈ ರಚನೆ ಸಾಕ್ಷಿಯಾಗಿದೆ.

ಮತ್ತೊಂದು ತಾಮ್ರಶಾಸನದಲ್ಲಿ "ಚತುರ್ಥ ಗೋತ್ರದ ಯಲಹಂಕ ನಾಡ ಪ್ರಭುಗಳಾದ ನಂಜೇಗೌಡರ ಪೌತ್ರರಾದ ಕೆಂಪನಂಜೇಗೌಡರ ಪುತ್ರರಾದ ಹಿರಿಯ ಕೆಂಪೇಗೌಡರು ಶ್ರೀವತ್ಸ ಗೋತ್ರದ ಅಪಸ್ತಂಭ ಸೂತ್ರದ ಯಜುಶಾಖಾಧ್ಯಾಯಿಗಳಾದ ವರದ ಅಯ್ಯಂಗಾರರ ಪೌತ್ರರಾದ ತಿಮ್ಮಪ್ಪಯ್ಯನವರ ಪುತ್ರರಾದ ತಿರುಮಲಯ್ಯನವರಿಗೆ-ಬೆಂಗಳೂರು ಸೀಮೆಯ ವೊರತೊರು ಹೋಬಳಿಗೆ ಸೇರಿದ ವೊರತೊರು, ಸೋರುಹುಣಿಸೆ, ಹಾರುವಹಳ್ಳಿ ಈ ಮೂರು ಗ್ರಾಮಗಳನ್ನು ಶಿವಗಂಗೆಯ ಶ್ರೀ ಗಂಗಾಧರೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ಪರಮೇಶ್ವರಾರ್ಪಣ ಬುದ್ಧಿಯಿಂದ ಸರ್ವಮಾನ್ಯವಾಗಿ ಅಗ್ರಹಾರದ ಗ್ರಾಮಗಳನ್ನಾಗಿ ದಾನ ಮಾಡಿದ"[೫] ವಿಚಾರಗಳಿವೆ.

ಇಮ್ಮಡಿ ಕೆಂಪೇಗೌಡನು (ಕ್ರಿ.ಶ. ೧೫೬೯-೧೬೩೮) ಸಹ ತನ್ನ ತಾತನಂತೆ ಧಾರ್ಮಿಕ ಸಹಿಷ್ಣುತೆಯನ್ನು ಮೆರೆದನು. ಈತನ ಕಾಲದಲ್ಲಿ ಹೆಚ್ಚಿನ ಶಾಸನಗಳು ರಚಿತವಾಗಿದ್ದು, ಧಾರ್ಮಿಕ ಅಂಶಗಳಿಂದ ಕೂಡಿದೆ. ಈತನು ಸಹ ಅನೇಕ ದೇವಾಲಯಗಳನ್ನು ಅನ್ನಸತ್ರಗಳು, ಮಠಗಳು ಮತ್ತು ಅಗ್ರಹಾರಗಳನ್ನು ಕಟ್ಟಿಸಿದ್ದಾನೆ. ಈತನು "ಚಿಕ್ಕರಾಯ" ನೆಂದೇ ಪ್ರಸಿದ್ಧನಾಗಿದ್ದ ಇಮ್ಮಡಿ ಕೆಂಪೇಗೌಡನು ಅಧಿಕಾರಕ್ಕೆ ಬಂದಾಗ ವಿಜಯನಗರದ ಪರವಾಗಿ ವೆಂಕಟಪತಿರಾಯನು ಪೆನುಗೊಂಡೆಯ ಮಂಡಲಾಧಿಪತಿಯಾಗಿ ಆಡಳಿತ ನಡೆಸುತ್ತಿದ್ದನು. ದೈವಭಕ್ತನಾಗಿದ್ದ ಈತ ಶಿವಮತಾಭಿಮಾನಿಯಾಗಿದ್ದು, ತಾನು ಸದಾಶಿವ ಗೋತ್ರಕ್ಕೆ ಸೇರಿದವನೆಂದು ಈತನ ಶಾಸನಗಳಲ್ಲಿಯೇ ಉಲ್ಲೇಖವಿದೆ. ಮಾಗಡಿಯ ಸೋಮೇಶ್ವರ ದೇವಾಲಯಕ್ಕೆ ಶಕ ೧೫೫೨ರಲ್ಲಿ ಮಾಗಡಿ ಸೀಮೆಯ ಹಂಚಿಕುಪ್ಪೆ, ಪೋತ, ಕೆಂಪಾಪುರಗಳನ್ನು ದಾನವಾಗಿ ನೀಡಿರುವ ಈ ಶಾಸನದಲ್ಲಿ ಸದಾಶಿವಗೋತ್ರದ ಯಲಹಂಕ ನಾಡಪ್ರಭುಗಳಾದ ಕೆಂಪನಂಜೇಗೌಡರ ಹಿರಿಯ ಕೆಂಪೇಗೌಡರ ಪುತ್ರರಾದ ಇಮ್ಮಡಿ ಕೆಂಪೇಗೌಡರ ಬಿನ್ನಹ ಎಂದೇ ಪ್ರಸ್ತಾಪಿಸಲಾಗಿದೆ.

ಬೆಂಗಳೂರಿನ ಕೆಂಪಾಪುರ ಹಾಗೂ ಹೆಸರುಘಟ್ಟದ ಬಳಿಯ ಐಗಂಡಪುರ ಅಗ್ರಹಾರಗಳು ಈತನ ಕಾಲದಲ್ಲಿ

ನಿವರ್ಾಣವಾಗಿದ್ದವು. ಕೆಂಪಾಪುರ ಅಗ್ರಹಾರದ ದಾನಶಾಸನದಲ್ಲಿ ಈ ಅಗ್ರಹಾರಗಳನ್ನು ೪೮ ಮಂದಿಗೆ ದಾನ ನೀಡಿದ ವಿವರಗಳಿವೆ. ಇದರಲ್ಲಿ ೪೭ ಮಂದಿ ನಾನಾ ಗೋತ್ರ, ಸೂತ್ರ ಸಂಪ್ರದಾಯಗಳಿಗೆ ಸೇರಿದ ಬ್ರಾಹ್ಮಣ ವಿದ್ವಾಂಸರಾದರೆ, ಒಬ್ಬ ಮಾತ್ರ ತುರಿಯ ಜಾತಿಯ ಧರ್ಮಿಷ್ಠನಾದ ವಿರೇಶನೆಂಬುವವನಿಗೆ ಭೂದಾನ ನೀಡಲಾಗಿದೆ. ಈತ ಶ್ರೀರಂಗಪಟ್ಟಣದ ರಾಜ ಸಮ್ಮುಖದಲ್ಲಿ ನಡೆದ ವಿದ್ವತ್‌ಸಭೆಯಲ್ಲಿ ರಾಜನಿಂದ ಬಹುಮಾನಿತ ನಾಗಿದ್ದುದಾಗಿ ತಿಳಿದುಬರುತ್ತದೆ.

ಇಮ್ಮಡಿ ಕೆಂಪೇಗೌಡನು ಹಲಸೂರಿನ ಸೋಮೇಶ್ವರ ದೇವಾಲಯವನ್ನು ಸಮಗ್ರವಾಗಿ ಪುನರುಜ್ಜೀವನಗೊಳಿಸಿದ್ದು ದಲ್ಲದೆ, ಇದಕ್ಕೆ ಒಂದು ಭವ್ಯವಾದ ಗೋಪುರವನ್ನು ಕಟ್ಟಿಸಿದ ಕೀರ್ತಿಯೂ ಈತನಿಗೆ ಸಲ್ಲುತ್ತದೆ. ಈ ದೇವಾಲಯದ ಹೊರಗೋಡೆಯ ಮೇಲೆ ಕೆತ್ತಿರುವ ಗಿರಿಜಾ ಕಲ್ಯಾಣದ ಚಿತ್ರಗಳು ಪಕ್ಕದ ಕಾಮಾಕ್ಷಿ ಅಮ್ಮನವರ ಪ್ರತ್ಯೇಕಗುಡಿ ಇವೆಲ್ಲಾ ಮನೋಜ್ಞವಾಗಿವೆ. ಇಲ್ಲಿ ದಿನವಹಿ ನಡೆಯುವ ನಿತ್ಯ ಪಡಿತರ ಪೂಜೆ, ದೀಪಾರಾಧನೆ, ಆಗಾಗ್ಗೆ ನಡೆಯುವ ಉತ್ಸವಗಳು ವರ್ಷಂಪ್ರತಿ ನಡೆಯುವ ರಥೋತ್ಸವಗಳ ಖರ್ಚುವೆಚ್ಚಗಳ ಸಲುವಾಗಿ ಹಲಸೂರು ಹೋಬಳಿಗೆ ಸೇರುವ ೩೩ ಹಳ್ಳಿಗಳಲ್ಲಿ ಉತ್ಪನ್ನವಾಗುವ ಬೆಳೆಯಲ್ಲಿ ಖಂಡುಗ ಒಂದಕ್ಕೆ ಒಂದು ಕೊಳಗದ ದವಸದಂತೆ ಸೋಮೇಶ್ವರನ ದೇವಾಲಯಕ್ಕೆ ಕಟ್ಟುನಿಟ್ಟಾಗಿ ಒಪ್ಪಿಸುವಂತೆ ಇಮ್ಮಡಿ ಕೆಂಪೇಗೌಡನು ರಾಜಾಜ್ಞೆ ಮಾಡಿದ್ದುದಾಗಿ ತಿಳಿದುಬರುತ್ತದೆ. ಇವೆಲ್ಲದರ ಸ್ಮರಣಾರ್ಥವಾಗಿ ಹಲಸೂರಿನ ಸೋಮೇಶ್ವರನ ದೇವಾಲಯದಲ್ಲಿ ಇಮ್ಮಡಿ ಕೆಂಪೇಗೌಡನ ಭಕ್ತ ವಿಗ್ರಹ ಇರುವುದನ್ನು ಇಂದಿಗೂ ನೋಡಬಹುದು.

ಈತನ ಕಾಲದ ಮತ್ತೊಂದು ಮುಖ್ಯ ವಿಷಯ ವೇನೆಂದರೆ, ಬೆಂಗಳೂರು ಪಟ್ಟಣದ ಪೌರೋಹಿತ್ಯದ ಹಕ್ಕನ್ನು ವೇದಟ್ಲಿ ಅನಂತಭಟ್ಟ ಎಂಬಾತನಿಗೆ ದಾನ ನೀಡಿದ್ದುದು. ಈ ದಾನ ಶಾಸನದ ಮುಖ್ಯಾಂಶಗಳೇನೆಂದರೆ ಶಕ ೧೬೯೯ರಲ್ಲಿ ಇಮ್ಮಡಿ ಕೆಂಪೇಗೌಡನು ಕೌಂಡಿನ್ಯ ಗೋತ್ರದ ಅಪಸ್ತಂಭ ಸೂತ್ರದ ಯಜುಶಾಖಾಧ್ಯಾಯಿಗಳಾದ ದೇವರಾಯ ಪಟ್ಟಣಕ್ಕೆ ಪ್ರತಿ ನಾಮವಾದ ಬೆಂಗಳೂರಿನ ವಾಸಿಗಳಾದ ವೇದಟ್ಲಿ ಅನಂತಭಟ್ಟರ ಪೌತ್ರರಾದ ಸಂಗನಭಟ್ಟರ ಪುತ್ರರಾದ ಅನಂತಭಟ್ಟರಿಗೆ ಬರೆಸಿಕೊಟ್ಟ ಪುರೋಹಿತ ದಾನ ಧರ್ಮಶಾಸನ....ಸಂಗಮೇಶ್ವರ ಗದ್ದುಗೆಯ ಪೂಜಾ ಕಾಲದಲ್ಲಿ ಇವರ ಕೋರಿಕೆಯ ಮೇರೆಗೆ ಇಮ್ಮಡಿ ಕೆಂಪೇಗೌಡನು ಅನಂತಭಟ್ಟರಿಗೆ ಬೆಂಗಳೂರು ಕಸಬೆ ಒಳಗೆ ಇರುವ ದೇಶದವರು ಮುಂತಾದ ೧೮ ಪಣಸ್ತರ ಪೌರೋಹಿತ್ಯವನ್ನು ಮುಂದೆ ಈ ಗ್ರಾಮವು ವೃದ್ಧಿಯಾಗತಕ್ಕ ಬಗೆಗೆ ಯಂತ್ರೋದ್ಧಾರಣೆ ಮಾಡಿಸಿ ಈ ಊರಿನ ಚತುರ್ದಿಕ್ಕು ಗಳಿಗೂ ಶಿಖರಗಳನ್ನು ನಿರ್ಮಿಸಿ ಎಲ್ಲ ಕಟ್ಟು ನಿಬಂಧನೆ ಮಾಡಿಸಿ ಇಲ್ಲಿನ ಪೌರೋಹಿತ್ಯಾ ವಿಶಿಷ್ಟವನ್ನು ನಿಮ್ಮ ಪುತ್ರ, ಪೌತ್ರ ಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವುದೆಂದು ಬರೆಸಿಕೊಟ್ಟ ಪುರೋಹಿತ ಧರ್ಮಶಾಸನ ಇದಾಗಿದೆ. ಅಂದರೆ ಪ್ರಾಚೀನ ಬೆಂಗಳೂರಿನ ಗುಡಿ ಗೋಪುರಗಳನ್ನು ನಿರ್ಮಾಣ ಮಾಡಿಸಿದವನು ಇಮ್ಮಡಿ ಕೆಂಪೇಗೌಡನೆ ಎಂಬುದಾಗಿ ಮೇಲ್ಕಂಡ ಶಾಸನದಲ್ಲಿ ಉಲ್ಲೇಖವಾಗಿರುವುದು ಗಮನಾರ್ಹ.

ನಗರದ ಚಿಕ್ಕಪೇಟೆಯ ತೂಗದ ಅಚ್ಚಪ್ಪನ ಮನೆಯ ಮಗುಲಿಗೆ ಸಿಕ್ಕಿದ ತೆಲುಗು ಶಾಸನದ ಪಾಠ ಹೀಗಿದೆ :

**ಮತು ಯಲಹಂಕ**
**ನಾಡ ಪ್ರಭುವುಲೈನ ಯಿಮ್ಮಡಿ ಕೆಂ**
**ಪಯಗೌನಿ ಅಯವಾರಿಕಿ ಆ ಚಂದ್ರಾ**
**ರ್ಕಂಗಾನು ಪುತ್ರ ಪೌತ್ರ ಪಾರಂಪರ್ಯಾಮುಗ ಧ**
**ರ್ಮಂ ಕೊರಕು ಗುಜ್ಜರಿ ವಿಶ್ವನಾಥು**
**ಕಟ್ಟಿಂಚಿನ ಧರ್ಮಶಾಲಾ ಮಠಂ**
**ಶ್ರೀಮುಖ ಸಂವತ್ಸರದ ವೈಶಾಖ ಶು**
**ಧ ತ್ರಿತಿಯ್ಯಂದು...**

ಇಲ್ಲಿ ಇಮ್ಮಡಿ ಕೆಂಪೇಗೌಡರ ಅಯ್ಯನವರಿಗೆ ಅಂದರೆ ಕುಲಗುರುಗಳಿಗೆ ಧರ್ಮಾರ್ಥವಾಗಿ ಗುಜ್ಜರಿ ವಿಶ್ವನಾಥ ಎಂಬುವವನು ಧರ್ಮಶಾಲಾ ಮಠವನ್ನು ಕಟ್ಟಿಸಿಕೊಟ್ಟ ವಿವರಗಳಿವೆ. ಹಾಗಾದರೆ ಇಲ್ಲಿ ಬರುವ ಇಮ್ಮಡಿ ಕೆಂಪೇಗೌಡನ ಕುಲಗುರು ಯಾರು ಎಂಬುದು ಪ್ರಶ್ನೆ? ಇತ್ತೀಚೆಗೆ ಬೆಳಕು ಕಂಡಿರುವ ಕ್ರಿಶ. ೧೬೦೬ರ ಗುಮ್ಮಳಾಪುರದ ಶಾಸನ ಒಂದರಲ್ಲಿ ಯಲಹಂಕ ನಾಡಪ್ರಭುವಾದ ಇಮ್ಮಡಿ ಕೆಂಪೇಗೌಡನು ಭಾರದ್ವಾಜ ಗೋತ್ರದ ಪಡಿಪಿಡಿ ವರ್ಗದ ಕೊಲ್ಲಿಪಾಕೆಯ ರೇವಣ ಸಿದ್ಧೇಶ್ವರ ಸಂಪ್ರದಾಯದವರಾದ–ಗುಮ್ಮಳಾಪುರ ಸಿಂಹಾಸನದ ಕರ್ತೃವಾದ ನಂಜೇದೇವರು ಅಯ್ಯನವರು ಪೌತ್ರರಾದ ಚೆನ್ನಮಲ್ಲಿಕಾರ್ಜುನದೇವರ ಪುತ್ರರಾದ ನಂಜೇದೇವಪ್ಪ ಅಯ್ಯನವರಿಗೆ ಮೇಲೂರಿಗೆ ಸೇರಿದ ಗುಮ್ಮಳಾಪುರವನ್ನು ದಾನವಾಗಿ ನೀಡಿದ್ದ ವಿವರಗಳು ಇವೆ. ಇಲ್ಲಿ ಉಲ್ಲೇಖವಾಗಿರುವ ಗುಮ್ಮಳಾಪುರದ ಮಠವು ಈಗಲೂ ಅಸ್ತಿತ್ವದಲ್ಲಿದ್ದು, ಇದು ವೀರಶೈವ ಗುರುವರ್ಗಕ್ಕೆ ಸೇರಿದ ಮಠವಾಗಿದೆ. ಇಮ್ಮಡಿ ಕೆಂಪೇಗೌಡನು ಇಲ್ಲಿ ಪ್ರಸ್ತಾಪವಾಗಿರುವ ನಂಜೇದೇವಪ್ಪನವರಿಗೆ ಭಕ್ತಿಗೌರವವುಳ್ಳವನಾಗಿದ್ದುದು ಈ ಶಾಸನದಿಂದ ವ್ಯಕ್ತವಾಗಿದೆ. ಹೀಗಾಗಿ ಬೆಂಗಳೂರಿನ ಗುಜರಿ ವಿಶ್ವನಾಥನ ಶಾಸನದಲ್ಲಿ

ಬರುವ ಇಮ್ಮಡಿ ಕೆಂಪೇಗೌಡನ ಅಯ್ಯನವರು ಹಾಗೂ ಗುಮ್ಮಳಾಪುರದ ಶಾಸನದಲ್ಲಿ ಬರುವ ನಂಜೇದೇವಪ್ಪ ಅಯ್ಯನವರು ಒಬ್ಬರೇ ಎಂದು ಊಹಿಸಲು ಅವಕಾಶವಿದೆ. ಅಂದರೆ ಈ ನಂಜೇದೇವಪ್ಪ ಅಯ್ಯನವರು ಒಬ್ಬರೇ ಎಂದು ಊಹಿಸಲು ಅವಕಾಶವಿದೆ. ಅಂದರೆ, ಈ ನಂಜೇದೇವಪ್ಪ ಅಯ್ಯನವರು ಇಮ್ಮಡಿ ಕೆಂಪೇಗೌಡನ ಮೇಲೆ ವಿಶೇಷವಾದ ಪ್ರಭಾವ ಬೀರಿದ್ದಿರಬಹುದಾಗಿದೆ. ಆದ ಕಾರಣ ಮೇಲ್ಕಂಡ ಶಾಸನಗಳಲ್ಲಿನ ದತ್ತಿಗಳು ಹುಟ್ಟಿಕೊಂಡಂತಿವೆ.

ಇಮ್ಮಡಿ ಕೆಂಪೇಗೌಡನ ಶೌರ್ಯ ಸಾಹಸಗಳನ್ನು, ಕೀರ್ತಿ ಪ್ರತಿಷ್ಠೆಗಳನ್ನು ಬಿಂಬಿಸುವ "ಕೆಂಪೇಗೌಡನ ಜಯಪ್ರಶಸ್ತಿಯು" ಐತಿಹಾಸಿಕವಾಗಿ ಅನೇಕ ಸಂಗತಿಗಳನ್ನು ಹೊರಚೆಲ್ಲುತ್ತದೆ. ಈ ಪುಟ್ಟ ಕೃತಿಯು ಎರಡು ಭಾಗಗಳಿದ್ದು, ಮೊದಲನೆಯ ಭಾಗದಲ್ಲಿ ೧೯ ಪದ್ಯಗಳು. ಎರಡನೆಯ ಭಾಗದಲ್ಲಿ ೩೯ ಪದ್ಯಗಳು ಇವೆ. ಮೊದಲ ಭಾಗದ ಕೊನೆಯ ಪದ್ಯದಲ್ಲಿ "....ಶ್ರೀ ಸದ್ಗುರು ನಂಜೇಶ್ವರನ ಕೃಪೆಯು ಸಮಾಪ್ತಾ!! ಎಂದು ಹೇಳಿ" ಸುಖದಿ ಸುಸ್ಥಿರ ಬಾಳು ಸುಪ್ರತಾಪಾನಾಚಯ ಕೆಂಪ ಧರಣೀಶನಣುಗ. ಯಿಮ್ಮಡಿ ಕೆಂಪ ಭೂಪಾಲ !![೬] ಎಂದು ಮುಕ್ತಾಯವಾಗಿದೆ. ಇದೇ ರೀತಿ ಎರಡನೇ ಭಾಗದ ೩೭ನೇ ಪದ್ಯದಲ್ಲಿ "ಧರೆಯೊಳೆಲಹಂಕದ ನಾಡ ವರಶಾಸನೋಧಾರ ! ವರ ಕಕುದ್ಗಿರಿ ಗಂಗೇಶನ ಭಕ್ತ ಮಂದಾರಾ ! ಹರುಷದಲಿ ಹಲಸೂರವಾಸ ಸೋಮೇಶ್ವರನ! ಕರುಣದಲಿ ವರ ಬೆಂಗಳೂರಾ ಸ್ಥಳದಲ್ಲಿ ! ಮೆರೆವಾ ದೊಡ್ಡ ಬಸವೇಶ್ವರನ ದಯದಿ !! ಗುರು ನಂಜೇಶ್ವರರ ಕೃಪೆಯನು ಸಲಿಪಡೆದು ! ಹಿರಿಯ ಕೆಂಪ ಭೂವರನ ಚೆನ್ನಾಂಬಿಯ ಕುಮಾರ ! ನೀ ಬಾಳು ! ಶುಭಕರದಿ ರವಿಚಂದ್ರರುಳ್ಳ ನಕಾ! ಕೆಂಪಾ ! ಧರಣಿಪತಿನೀ ವಿಭೀಷಣಪಟ್ಟವಾಳೋ ! ಎಂದು ಮುಕ್ತಾಯವಾಗಿದೆ.

ಈ ಕಿರುಕಾವ್ಯದ ಎರಡು ಭಾಗಗಳ ಅಂತ್ಯದ ಪದ್ಯದಲ್ಲಿ ಉಲ್ಲೇಖವಾಗಿರುವ ಶ್ರೀ ಗುಮ್ಮಳಾಪುರದ ಸದ್ಗುರು ನಂಜೇಶ ಮೇಲ್ಕಂಡ ೧೬೦೬ರ ಗುಮ್ಮಳಾಪುರದ ಶಾಸನ ಭಾಗದಲ್ಲಿ ಉಲ್ಲೇಖವಾಗಿರುವ ಗುಮ್ಮಳಾಪುರದ ನಂಜೇದೇವಪ್ಪ ಅಯ್ಯನವರು, ಇವರಿಬ್ಬರೂ ಒಬ್ಬರೇ ಎಂಬುದು ಖಚಿತವಾಗುತ್ತದೆ. ಜೊತೆಗೆ ಇಮ್ಮಡಿ ಕೆಂಪೇಗೌಡನ ಕುಲಗುರುವು ಇದೇ ಸದ್ಗುರು ನಂಜೇದೇವಪ್ಪ ಅಯ್ಯನವರೇ ಎಂಬುದು ಸ್ಪಷ್ಟವಾದಂತಾಗಿದೆ. ಜೊತೆಗೆ ಈ ನಂಜೇದೇವಪ್ಪ ಅಯ್ಯನವರೇ ಸದ್ಗುರು ನಂಜೇಶ್ವರನೆಂಬ ಅಂಕಿತದಲ್ಲಿ ತಮ್ಮ ಶಿಷ್ಯ ಭೂಪಾಲ ಇಮ್ಮಡಿ ಕೆಂಪೇಗೌಡನ ಕುರಿತಾದ "ಕೆಂಪೇಗೌಡನ ಜಯ ಪ್ರಶಸ್ತಿ"ಯನ್ನು ರಚಿಸಿದ್ದಿರಬಹುದಾಗಿ ತರ್ಕಿಸಲು ಅವಕಾಶವಿದ್ದು, ಈ ತರ್ಕ ಸತ್ಯಕ್ಕೆ ಹೆಚ್ಚು ಹತ್ತಿರವಿದೆ ಎಂದರೆ ತಪ್ಪಾಗಲಾರದು.

ಕ್ರಿ.ಶ. ೧೬೩೩ರ ಬೆಂಗಳೂರಿನ ಗುಜ್ಜರಿ ವಿಶ್ವನಾಥನ ಶಾಸನದಲ್ಲಿ ಉಲ್ಲೇಖವಾಗಿರುವಂತೆ ಇಮ್ಮಡಿ ಕೆಂಪೇಗೌಡನ ಅಯ್ಯನವರು ಗುಮ್ಮಳಾಪುರದ ನಂಜೇದೇವಪ್ಪ ಅಯ್ಯನವರೇ ಎಂಬುದಾಗಿ ಮೇಲ್ಕಂಡ ತರ್ಕಗಳಿಂದ ಪಕ್ಕವಾದ ವಿಚಾರವಾದ ಕಾರಣ ಬೆಂಗಳೂರಿನ ಚಿಕ್ಕಪೇಟೆಯ ಗುರುವರ್ಗದ ಈಗಿನ ಮಹಂತಿನ ಮಠವೇ ಗುಜ್ಜರಿ ವಿಶ್ವನಾಥನು ನಿರ್ಮಿಸಿದ ಧರ್ಮಶಾಲಾ ಮಠ ಎಂಬುದಾಗಿತ್ತೆಂದು ಅಭಿಪ್ರಾಯಪಡಲು ಸಾಕಷ್ಟು ಆಧಾರಗಳು ದೊರಕಿದಂತಾಗಿದೆ. ಇದೇ ಮಹಂತಿನ ಮಠಕ್ಕೆ ಜಕ್ಕರಾಯನ ಕೆರೆಯ ಬಳಿ ಸಂಗನಕೊಡುಗೆಯ ಮಾನ್ಯವಾಗಿ ನೀಡಿದ್ದ ಗದ್ದೆಯ ವಿಚಾರಗಳು ಮಹಂತಿನ ಮಠದ ಗದ್ದೆಯ ಶಾಸನ ಒಂದರಲ್ಲಿ ಪ್ರಸ್ತಾಪವಾಗಿವೆ.

ಇಮ್ಮಡಿ ಕೆಂಪೇಗೌಡನ ಕಾಲದ ಬೆಂಗಳೂರಿನ ಮತ್ತೊಂದು ಪ್ರಮುಖ ಶಾಸನ ನಗರದ ಮುತ್ಯಾಲಪೇಟೆಯ ರಂಗನಾಥಸ್ವಾಮಿ ದೇವಾಲಯದಲ್ಲಿರುವ ಶ.ಕ. ೧೫೪೯ರ ಶಾಸನ. ಈ ಶಾಸನದಲ್ಲಿ ಗೌಡನ ಅನುಮತಿಯಂತೆ ಅಯ್ಯಾಹೊಳೆವರ್ತಕ ಸಂಘದ ಉಭಯ ನಾನಾ ದೇಶಗಳ ಪಡಿತರ ನೈವೇದ್ಯ ಶ್ರೀಮದ್ ಜಾತ್ರಾ ಮಹೋತ್ಸವಗಳಿಗೆ ದತ್ತಿಯನ್ನು ನೀಡಿದ ವಿಚಾರಗಳಿವೆ. ಈ ಜಾತ್ರಾದಿಗಳಿಗೆ ದತ್ತು ನೀಡಿದ ವಂತಿಗೆದಾರರು–ಪೆನುಕೊಂಡ, ಗೂಳೂರು, ಚಿಕ್ಕನಾಯಗಿ ಪಲ್ಲಿ, ಬಳ್ಳಾಪುರ, ತಾಟಿಪರ್ತಿ, ಅವರೆ, ಚಂದ್ರಗಿರಿ, ಕೋಳಾಲ, ಕೊತ್ತಕೋಟ, ಕಾವೇರಿಪಟ್ಟಣ, ರಾಯಕೋಟಂ, ಶ್ರೀರಂಗಪಟ್ಟಣ, ನರಸೀಪುರ, ಬೇಲೂರು, ನಾಗಮಂಗಲ, ಇಕ್ಕೇರಿ, ಬಸ್ತಿ ಇತ್ಯಾದಿ ಸ್ಥಳಗಳು ಜನರು ಸೇರುತ್ತಿದ್ದರು[೭] ಎಂಬ ವಿಚಾರಗಳಿವೆ. ಇನ್ನೂ ಕೆಲವು ಕಾವ್ಯಗಳನ್ನು ಅವಲೋಕಿಸಿ ನೋಡಿದಾಗ ಶಾಂತವೀರದೇಶಿಕನ (ಕ್ರಿ.ಶ. ೧೬೫೦) 'ಶಿವಲಿಂಗ ಚಾರಿತ್ರ್ಯ'ದಲ್ಲಿ ಬೆಂಗಳೂರಿನ ಪ್ರಭುವೆನಿಸಿದ್ದ ಇಮ್ಮಡಿ ಕೆಂಪೇಗೌಡನು ಶಿವಲಿಂಗಾರ್ಯರ ಪುತ್ರ ವೀರಣ್ಣಾರ್ಯರು ಬೆಂಗಳೂರಿಗೆ ಬಂದಾಗ ಅವರನ್ನು ಸ್ವಾಗತಿಸಿ "ನಿಲಯ, ಹಿತ್ತಿಲ, ಜಿತ್ತಿ, ಮಹಾಕೂಪಂಗಳಂ ನಿರ್ಮಿಸಿ ನೀವಿರ್ಪುದೆಂದು ವೀರಣ್ಣಾರ್ಯಂಗೊಪ್ಪಿಸಿದನು.... ಎಂಬ ಮಾತುಗಳಿವೆ.[೮] "ನಿರಂಜನ ವಂಶ ರತ್ನಾಕರ"ದಲ್ಲಿ ಉಲ್ಲೇಖಿತವಾಗಿರುವ ಮಾಗಡಿಯ ನಾಡಗೌಡನೇ ಇಮ್ಮಡಿ ಕೆಂಪೇಗೌಡನಾಗಿದ್ದು, ಈತ ಕಲ್ಯಾಣದ ಬಸವ ಪರಂಪರೆಯ ೨೨ನೆಯ ಗುರುವಾಗಿದ್ದ ಗಗನದಾರ್ಯರ ಶಿಷ್ಯತ್ವ ಪಡೆದು ಅವರಿಂದ ಶಿವಲಿಂಗಧಾರಿಯಾದುದಾಗಿ ತಿಳಿದುಬರುತ್ತದೆ. ಹೀಗೆ ಗಗನದಾರ್ಯರ ಶಿಷ್ಯತ್ವವನ್ನು ಪಡೆದ ಮೇಲೆ

ಇದುವರೆಗೆ ಚತುರ್ಥ ಗೋತ್ರದವನೆಂದು ಗುರ್ತಿಸಿಕೊಳ್ಳುತ್ತಿದ್ದ ಇಮ್ಮಡಿ ಕೆಂಪೇಗೌಡನು ಅನಂತರ ತಾನು ಸದಾಶಿವ ಗೋತ್ರದವನೆಂದು ಎಲ್ಲೆಡೆ ಶಾಸನಗಳಲ್ಲಿ ಹೇಳಿ ಕೊಂಡಂತಿದೆ.[೯]

ವಿಜಯನಗರದ ಅರಸರ ಕಾಲದಲ್ಲಿ (ಕ್ರಿ.ಶ. ೧೩೩೬–೧೬೪೬) ಸಾಮಾನ್ಯವಾಗಿ ಶಿವಭಕ್ತರಿಗೆ ಬಿಟ್ಟ ಗ್ರಾಮಗಳನ್ನು ಶಿವಪುರಗಳೆಂದೂ,[೮] ಬ್ರಾಹ್ಮಣರಿಗೆ ಬಿಟ್ಟ ಗ್ರಾಮಗಳನ್ನು ಅಗ್ರಹಾರಗಳೆಂದೂ, ಕರೆಯುವುದು ರೂಢಿಯಲ್ಲಿತ್ತು. ಇದೇ ಸಂದರ್ಭದಲ್ಲಿ ಬೆಂಗಳೂರು ಪ್ರಾಂತ್ಯದಲ್ಲಿ ಯಲಹಂಕದ ಪ್ರಭುಗಳ ಕಾಲಕ್ಕೆ (ಕ್ರಿ.ಶ. ೧೪೧೮–೧೭೨೮) ಇಂತಹ ನೂರಾರು ಪುರಗಳು, ಮಠಮಾನ್ಯಗಳ ಉಂಬಳಿ ಗ್ರಾಮಗಳು ಹುಟ್ಟಿಕೊಂಡಿರುವಂತಿದೆ. ಇಂದಿಗೂ ಬೆಂಗಳೂರು ನಗರದ ಉತ್ತರ ಮತ್ತು ದಕ್ಷಿಣ ತಾಲ್ಲೂಕುಗಳು ಎರಡೂ ಸೇರಿ ಇಂತಹ ೭೪ ಪುರಗಳು ಹಾಗೂ ಸರಿ ಸುಮಾರು ಇಷ್ಟೇ ಸಂಖ್ಯೆಯ ಅಗ್ರಹಾರಗಳು ಇರುವುದನ್ನು ಗುರುತಿಸಬಹುದಾಗಿದೆ. ಇಂತಹ ಅನೇಕ ಪುರಗಳು ಹಾಗೂ ಅಗ್ರಹಾರಗಳು ಗೌಡ ದೊರೆಗಳ ಕಾಲದಲ್ಲಿ ಅದರಲ್ಲೂ ಇಮ್ಮಡಿ ಕೆಂಪೇಗೌಡನ ಕಾಲದಲಿ ಈತ ಉದಾರವಾಗಿ ಬಿಟ್ಟ ದಾನ ದತ್ತಿಗಳ ಫಲವಾಗಿ ಹುಟ್ಟಿಕೊಂಡಿದ್ದವು ಎಂದು ಹೇಳಬಹುದಾಗಿದೆ.

ಬೆಂಗಳೂರಿನ ಇಂತಹ ಒಂದು ಪ್ರಮುಖ ನಗರದ ವಿಮಾನ ಕಾರ್ಖಾನೆಯ ಬಳಿ ಇರುವ **ವಿಭೂತಿಪುರ** ಇಲ್ಲಿನ ಸ್ಥಳೀಯ ಹಿರಿಯರು ಹೇಳುವ ಐತಿಹ್ಯಗಳ ಪ್ರಕಾರ ಈ ಮಠದ ಪ್ರಾಚೀನ ಕಟ್ಟಡವನ್ನು ಬೆಂಗಳೂರಿನ ದೊರೆ ಇಮ್ಮಡಿ ಕೆಂಪೇಗೌಡನೇ ಕಟ್ಟಿಸಿದುದಾಗಿ ಬಲವಾದ ನಂಬಿಕೆ. ಇದಕ್ಕೆ ಸಾಕ್ಷಿ ಎಂಬಂತೆ ಇಲ್ಲಿನ ಮಠದ ಒಳಭಾಗದಲ್ಲಿ ಉತ್ತರಾಭಿ ಮುಖವಾಗಿ ಯಿರುವ ವೀರಭದ್ರಸ್ವಾಮಿಯ ಗರ್ಭಗುಡಿಯ ಮುಂಭಾಗದ ಸ್ತಂಭವೊಂದರ ಮೇಲೆ ಇಮ್ಮಡಿ ಕೆಂಪೇಗೌಡನು ತನ್ನ ಇಬ್ಬರು ಅರಸಿಯರಾದ ಕೆಂಪಮಾಂಬೆ ಮತ್ತು ಲಿಂಗಮಾಂಬೆಯರ ಜೊತೆ ನಿಂತಿರುವ ಉಬ್ಬು ಶಿಲ್ಪವಿಲ್ಲಿದೆ.

ಶಾಸನಗಳಲ್ಲಿ ಉಲ್ಲೇಖಗೊಂಡಂತೆ ಸಾವನದುರ್ಗದ ಲಕ್ಷ್ಮಿನಾರಸಿಂಹಸ್ವಾಮಿ, ವೀರಭದ್ರ ದೇವಾಲಯ, ಮಾಗಡಿ ರಂಗನಾಥಸ್ವಾಮಿ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದ್ದಾನೆ. ಹಾಗೂ ಅನೇಕ ಗ್ರಾಮಗಳನ್ನು ದಾನ ನೀಡಿದ್ದಾನೆ. ಕ್ರಿ.ಶ. ೧೬೨೭ರ ತಾಮ್ರಶಾಸನದ ಪ್ರಕಾರ ಬೆಂಗಳೂರು ಸೀಮೆಯ ಸೊಂಡೇಕೊಪ್ಪದ ಬಳಿಯ ವ್ಯಾಸರಾಯ ಸಮುದ್ರವನ್ನು ವ್ಯಾಸರಾಯ ಮಠದ ರಾಮಚಂದ್ರ ಒಡೆಯರ "ಮಠಧರ್ಮಕ್ಕೆ" ದಾನ ನೀಡಿದ ಸಂಗತಿ ಹಾಗೂ ಕ್ರಿ.ಶ. ೧೬೩೦ರ ಶಿಲಾಶಾಸನದ ಪ್ರಕಾರ ಮಾಗಡಿ ಸೀಮೆಗೆ ಸೇರಿದ ಕಂಚುಗಾರ್ರಹಳ್ಳಿ ಮತ್ತು ಹಾಲುಶಿಂಗನಹಳ್ಳಿಗಳನ್ನು ಸೋಮೇಶ್ವರ ದೇವಾಲಯದಲ್ಲಿ "ನಿತ್ಯಕಟ್ಲೆ, ಪಡಿತರ ದೀಪಾರಾಧನೆ, ಮಹಾರಥೋತ್ಸವ, ಪರ್ವತಿಥಿ, ಸಕಲ ಉತ್ಸವಗಳು ಸಾಂಗವಾಗಿ ಜರುಗಲೆಂದು ದಾನವಿತ್ತನೆಂದು ವಿವರಗಳಿವೆ.[೧೦]

ಮುಂದೆ ದೊಡ್ಡ ವೀರಪ್ಪಗೌಡನ ಕಾಲದಲ್ಲಿ ಕಲ್ಲಿಕೆರೆ ಹಾಗೂ ಡೊಂಕನಪುರ ಗ್ರಾಮಗಳನ್ನು ಬ್ರಾಹ್ಮಣರಿಗೆ ದತ್ತಿ ದಾನ ಕೊಟ್ಟ ವಿವರ ಹಾಗೂ ಮಾತಾಪಿತೃಗಳಿಗೆ ಪುಣ್ಯವಾಗಲೆಂದೂ ದೇವನಹಳ್ಳಿ, ನೇಕಲವಾಡಿ ಹಾಗೂ ಸಾತನೂರು ಗ್ರಾಮಗಳನ್ನು ದತ್ತಿ ಬಿಟ್ಟ ವಿವರಗಳು ಅಲ್ಲದೆ ಶೀಗುಪ್ಪೆ ಗ್ರಾಮವನ್ನು ಶೃಂಗೇರಿ ಮಠಕ್ಕೆ ಆರಬೀಡರಹಳ್ಳಿಯನ್ನು ಸುಬ್ರಹ್ಮಣ್ಯಸ್ವಾಮಿಗೆ ಅಳುಕೆಪ್ಪ ಗ್ರಾಮವನ್ನು ಕಾಶೀಧರ್ಮ ಪೀಠಕ್ಕೆ ದಾನವಿತ್ತ ವಿವರಗಳಿವೆ. ಹಾಗೂ ೧೬೭೮ರ ಶಾಸನವೊಂದರಲ್ಲಿ ತನಗೆ ಸಂತಾನಾಭಿವೃದ್ಧಿಯಾಗಬೇಕೆಂಬ ಫಲಾಪೇಕ್ಷೆಯಿಂದ ಸುಬ್ರಹ್ಮಣ್ಯಸ್ವಾಮಿಗೆ ಹರಕೆ ಹೊತ್ತ ವಿವರ ಧಾರ್ಮಿಕ ನಂಬಿಕೆಯ ದ್ಯೋತಕವಾಗಿದೆ. ದೊಡ್ಡ ವೀರಪ್ಪಗೌಡನ ನಂತರ ಕೊನೆಯ ಪ್ರಭುವಾದ ಮುಮ್ಮಡಿ ಕೆಂಪವೀರಪ್ಪಗೌಡನು ಸಹ ಪಿತೃವಾಕ್ಯ ರೀತ್ಯಾ ತನ್ನ ಆಡಳಿತಾವಧಿಯಲ್ಲಿ ಧರ್ಮ ಪರಿಪಾಲನೆ ಕ್ರಮಗಳನ್ನು ಕೈಗೊಂಡಿದ್ದು ತನ್ನ ಧಾರ್ಮಿಕ ಸಹಿಷ್ಣುತೆಯನ್ನು ಮುಂದುವರೆಸಿದ್ದನು. ೧೬೭೨ರ ಶಾಸನದಲ್ಲಿ ಹುತ್ತರಿ ದುರ್ಗಕ್ಕೆ "ದೇವಗಿರಿ" ಎಂಬ ಪ್ರತಿನಾಮದಿಂದ ಕರೆದು "ಮುಮ್ಮಡಿ ದೊಡ್ಡವರ ಸಾಗರ" "ಕಲಿಕೆರೆ" ಎಂಬ ಗ್ರಾಮವನ್ನು ಶಂಕರೇಶ್ವರ ಸ್ವಾಮಿಯ ದಿವ್ಯ ಸನ್ನಿಧಿಯಲ್ಲಿ ದಾನ ಮಾಡಿದನೆಂದು ತಿಳಿಸಿದೆ. ಹಾಗೂ ಶಾಸನದಲ್ಲಿ ಯಲಹಂಕ ಪ್ರಭುವನ್ನು ಸದಾಶಿವ ಗೋತ್ರದ ರಾಜರೆಂದು ಕರೆದಿದೆ. ಅಲ್ಲದೆ ಮಾಗಡಿಯ ಸೋಮೇಶ್ವರ ದೇವಾಲಯದ ಎಲ್ಲಾ ಬಗೆಯ ಉತ್ಸವಾದಿ ಆರಾಧನೆಗೆ ಉದ್ಧೂರದ ಹಳ್ಳಿಯನ್ನು ಉಂಬಳಿಯಾಗಿ ದಾನ ನೀಡಿದ ಬಗ್ಗೆ ವಿವರಗಳಿವೆ. ಜೊತೆಗೆ ಸೋಮೇಶ್ವರ ದೇವಾಲಯದ ಪ್ರತಿಷ್ಠಾಪನೆಯ ಸಂದರ್ಭದಲ್ಲಿ ಮಾಯನಾಯಕನಹಳ್ಳಿ, ಮಾದನಾಯಕನಹಳ್ಳಿ ಮತ್ತು ಕೆಂಪಸಾಗರ ಹಾಗೂ ಅಲ್ಲಿನ ೨೦೦ ಮನೆಗಳನ್ನು ಸಹ "ಮುಮ್ಮಡಿ ಕೆಂಪಸಾಗರ ಅಗ್ರಹಾರ" ಎಂದು ಹೆಸರಿಟ್ಟು ೨೪ ಮಹಾಜನರಿಗೆ ವೃತ್ತಿಗಳಾಗಿ ವಿಭಜಿಸಿ ದಾನ ನೀಡಿದನೆಂದು ಶಾಸನೋಕ್ತವಾಗಿ ತಿಳಿದುಬಂದಿದೆ. ತನ್ನ ವೃದ್ಧ ತಾಯಿ ಕಂಚಿಗೆ ಹೋಗಿ ವರದರಾಜ ದೇವರ ದರ್ಶನ ಮಾಡಲು ಅಸಮರ್ಥಳಾದುದ್ದರಿಂದ ಬೈಚಾಪುರ ಗ್ರಾಮದಲ್ಲೇ ವರದಸ್ವಾಮಿ ದೇವಾಲಯವನ್ನು ಕಟ್ಟಿಸಿದನೆಂದು ಪ್ರತೀತಿಯಿದ್ದು ಅದು ಮಾತೃಪ್ರೇಮದ ದ್ಯೋತಕವಾಗಿದೆ. ಯಲಹಂಕ ಪ್ರಭುಗಳ ಕಾಲಾವಧಿಯಲ್ಲಿ ನಾಡಪ್ರಭುಗಳಲ್ಲದೆ, ಇತರೆ

ಸಾರ್ವಜನಿಕರು ಸಹ ಧಾರ್ಮಿಕವಾದ ದಾನ ದತ್ತಿಗಳನ್ನು ನೀಡಿರುವುದನ್ನು ಇವರ ಕಾಲದ ಶಾಸನಗಳಲ್ಲಿ ದಾಖಲೆಯಾಗಿವೆ. ಜೊತೆಗೆ ಧರ್ಮ ಕಾರ್ಯಗಳಿಗಾಗಿ ಧರ್ಮಶಾಲೆಗಳು, ಅನ್ನಸತ್ರಗಳು, ತಟಾಕಗಳನ್ನು ನಿರ್ಮಿಸಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಈ ಕಾಲದ ಇನ್ನೂ ಕೆಲವು ಶಾಸನಗಳು ಸರಿಯಾದ ತೇದಿಗಳನ್ನು ಹೊಂದಿರದೆ ದಾನ ದತ್ತಿಗಳನ್ನು ನೀಡಿರುವ ಪಟ್ಟಿಯೇ ಇವರ ಕಾಲದಲ್ಲಿ ದೊಡ್ಡದಾಗಿದ್ದು ಧಾರ್ಮಿಕ ಪರಿಸ್ಥಿತಿಯು ಉತ್ತಮ ಸ್ಥಿತಿಯಲ್ಲಿತ್ತೆಂದು ಹೇಳಬಹುದಾಗಿದೆ. ಮತ್ತು ವಾಸ್ತು ಮತ್ತು ಮೂರ್ತಿಶಿಲ್ಪಗಳ ರಚನೆಗಳನ್ನು ನೋಡಿದಾಗ ಧಾರ್ಮಿಕತೆಯ ಭಾವನೆಗಳಿಗೆ ಸ್ಪಂದಿಸಿರುವುದು ತಿಳಿಯುತ್ತದೆ. ಆ ಹಿನ್ನೆಲೆಯಲ್ಲಿ ದೇವಾಲಯ ಮಂಟಪಗಳು ನೆಲಗೊಂಡಿದ್ದು ಧಾರ್ಮಿಕ ಕೊಡುಗೆ ಹಾಗೂ ಪರಿಸ್ಥಿತಿಗಳು ನಿರಂತರವಾದ ಚಲನಶಕ್ತಿ ಪಡೆದಿದ್ದುವು. ಒಟ್ಟಾರೆಯಾಗಿ ಹೇಳುವುದಾದರೆ ಕೇಂದ್ರಿಕೃತ ಸಮಾಜ ವ್ಯವಸ್ಥೆಯಡಿಯಲ್ಲಿಯೇ ವಿಕೇಂದ್ರೀಕೃತ ಸಮಾಜ ರಚನೆಗೊಂಡಿದ್ದು, ಅದರ ಹಿನ್ನೆಲೆಯಲ್ಲಿ ರೂಪ ತಳೆದವು. ಇವನ್ನು ಧಾರ್ಮಿಕ ರಿವಾಜು ಕೊಡುಗೆ, ಪರಿಸ್ಥಿತಿ ಹಾಗೂ ಸಂಘಟನೆ ಇತ್ಯಾದಿ ಎನ್ನಬೇಕು. ಮುಂದೆ ವಿಜಯನಗರ ಸಾಮ್ರಾಜ್ಯ ಪತನವಾದರೂ, ಸ್ಥಳೀಯ ಸರ್ಕಾರವಾದ ಯಲಹಂಕನಾಡಿನ ಗಡಿ ಗೆರೆಗಳು ವಿಸ್ತಾರವಾದಂತೆ ರಾಜಕೀಯ, ಆಡಳಿತ ಜೊತೆಗೆ ಧಾರ್ಮಿಕ ಚಟುವಟಿಕೆಗಳು ಅವ್ಯಾಹತವಾಗಿ ನಡೆದುಕೊಂಡೇ ಬಂದವು. ನಂತರ ರಾಜಕೀಯವಾಗಿ ಏರಿಳಿತಗಳು ಕಂಡುಬಂದಿದ್ದರೂ ನಿರಂತರವಾದ ಅವರ ಧಾರ್ಮಿಕ ಕೊಡುಗೆಗಳನ್ನು, ಆಳ್ವಿಕೆಯನ್ನು ಮುಂದುವರೆಸಿಕೊಂಡು ಬಂದ ರಾಜತ್ವ ಯಲಹಂಕನಾಡ ಅರಸರದಾಗಿತ್ತು.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಸೂರ್ಯನಾಥ ಕಾಮತ್., (ಬೆಂಗಳೂರು–ಒಂದು ಲೇಖನ) **ಬೆಂಗಳೂರು ದರ್ಶನ,** ೧೯೭೫. ಹ.ಕ. ರಾಜೇಗೌಡ, ಕೆಂಪೇಗೌಡನ ಜೀವನ ಚರಿತ್ರೆ, **ಯಲಹಂಕ ನಾಡಪ್ರಭುಗಳು ಒಂದು ಅಧ್ಯಯನ,** ಪ್ರ.ಸಂ. ಡಾ. ರಾಮೇಗೌಡ, ಪುಟ ೯೬.

೨. ಎಂ. ಫಜ್ಲುಲ್ ಹಸನ್., ಕೆಂಪೇಗೌಡನ ಕಾಲಕ್ಕೂ ಹಿಂದಿನ ಬೆಂಗಳೂರಿನ ಇತಿಹಾಸ, ಪು. ೧. (ಇದೊಂದು ಬಿಡಿ ಲೇಖನ, ಕೃಪೆ : ಡಾ. ಎಂ. ಚಿದಾನಂದಮೂರ್ತಿ)

೩. ಎಂ. ಫಜ್ಲುಲ್ ಹಸನ್., ಪೂರ್ವೋಕ್ತ, ಅದೇ ಪುಟ (ಇ.ಸಿ. ೯. ಬಿ–೬೮)

೪. **ಕೆಂಪೇಗೌಡನ ಜಯ ಪ್ರಶಸ್ತಿ,** ಸಂ. ಕರ್ಲಮಂಗಲಂ ಶ್ರೀಕಂಠಯ್ಯ, ಮುನ್ನುಡಿ, ಪು. ೩೬.

೫. ಇಲ್ಲಿ ಪ್ರಸ್ತಾಪವಾಗಿರುವ ಗುಮ್ಮಳಾಪುರವು ಆನೇಕಲ್ಲಿನಿಂದ ೮ ಕಿ.ಮೀ. ದೂರದಲ್ಲಿದ್ದು ಇದು ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಯ ಡೆಂಕಣಿಕೋಟೆ ತಾಲ್ಲೂಕಿಗೆ ಸೇರಿದೆ. ಇಂದಿಗೂ ಕೂಡ ಇಲ್ಲೊಂದು ವೀರಶೈವ ಗುರುವರ್ಗದ ಮಠವಿದ್ದು, ಇದು ಬಾಳೇಹೊನ್ನೂರು ಪೀಠ ಪರಂಪರೆಗೆ ಸೇರಿದುದಾಗಿದೆ. ಡಾ. ದೇವರಕೊಂಡಾರೆಡ್ಡಿಯವರ ಸ್ವಂತ ಸಂಗ್ರಹದಲ್ಲಿ ಈ ಮೇಲೂರಿನ ಶಾಸನದ ಬಗೆಗೆ ವಿಶೇಷ ಬೆಳಕು ಚೆಲ್ಲಲಾಗಿದೆ. (ನೋಡಿ : **ಇತಿಹಾಸ ದರ್ಶನ,** ಸಂ. ೪–೧೯೮೯. ಪು. ೧೧೮.)

೬ **ಕೆಂಪೇಗೌಡನ ಜಯ ಪ್ರಶಸ್ತಿ,** ಸಂ. ಕರ್ಲಮಂಗಲಂ ಶ್ರೀಕಂಠಯ್ಯ, ಕಾವ್ಯ ಭಾಗ. ಪುಟ ೭ ಮತ್ತು ೧೮.

೭. ಎಂ.ಜಿ. ನಾಗರಾಜ್., 'ಕೆಂಪೇಗೌಡ ದೊರೆಗಳು – ಜೀವನ ಸಂಗತಿಗಳು'. **ಬೆಳ್ಳಿ ಬಾಗಿನ,** ೧೯೯೪. (ಪ್ರ.ಸಂ., ಡಿ. ಲಿಂಗಯ್ಯ, ಬೆಂಗಳೂರು. ಪು. ೧೬೩–೬೫.

೮. i ಇ.ಸಿ. ೯, ಮಾಗಡಿ–೨.

ii **ನಿರಂಜನ ವಂಶ ರತ್ನಾಕರ,** ಸಂ.ಫ.ಗು. ಹಳಕಟ್ಟಿ, ವಿಜಾಪುರ ೧೯೩೨. ಪು. ೫೮.

೯. **ಕರ್ನಾಟಕ ಗ್ರಾಮ ಸೂಚಿ,** ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ ೧೯೦–೧೯೪. (ಪುರ : ಹಿಂದಿನಿಂದಲೂ ವೀರಭದ್ರನ ನೃತ್ಯ ಮಾಡುವವರನ್ನು ಪುರವಂತರೆಂದು ಕರೆಯಲಾಗುತ್ತಿದೆ. ಇಂತಹ ಪುರವಂತರು, ಶಿವಶರಣರು, ವೀರಮಹೇಶ್ವರರುಗಳಿಗೆ ಬಿಟ್ಟ ದತ್ತಿ ಗ್ರಾಮಗಳಿಗೆ ಪುರಗಳೆಂದೇ ಕರೆಯಲಾಗುತ್ತಿತ್ತು.)

೧೦. ಇ.ಸಿ. ೯, ಮಾಗಡಿ, ೨.

ಶ್ರೀಮತಿ ಇಂದಿರಾ ಹೆಗ್ಗಡೆ*

# ಕುಲಶೇಖರ ಆಳುಪೇಂದ್ರನ ಶಾಸನದಲ್ಲಿ ಅಳಿಯ ಸಂತಾನ ಕುಟುಂಬ ಪದ್ಧತಿ

ಕರ್ನಾಟಕದ ಕರಾವಳಿ ಭಾಗದ ತುಳುನಾಡು ಸಾಂಸ್ಕೃತಿಕ ಮತ್ತು ಸಾಮಾಜಿಕ ಪದ್ಧತಿಯಲ್ಲಿ ಕರ್ನಾಟಕದ ಹಾಗೂ ಭಾರತದ ಇತರ ಭಾಗಕ್ಕಿಂತ ಭಿನ್ನವಾಗಿ ವಿಶಿಷ್ಟತೆಯನ್ನು ಪಡೆದಿದೆ. ಅಲ್ಲಿಯ ಒಂದು ವಿಶಿಷ್ಟ ಸಾಮಾಜಿಕ ಪದ್ಧತಿ ಎಂದರೆ ಅಳಿಯ ಸಂತಾನ ಕುಟುಂಬ ಪದ್ಧತಿ ಅಥವಾ ಮಾತೃವಂಶೀಯ ಕುಟುಂಬ ಪದ್ಧತಿ. ಮಾತೃವಂಶೀಯ ಪದ್ಧತಿಯಲ್ಲೂ ರಾಜ್ಯವನ್ನು ಆಳುವ ಅರಸ ಪುರುಷನೇ. ಹೀಗಾಗಿ ಒಬ್ಬ ಅರಸ ಸತ್ತ ಅನಂತರ ಅವನ ಸೋದರಳಿಯ ಆ ಸಿಂಹಾಸನಕ್ಕೆ ವಾರಸುದಾರನಾಗುತ್ತಾನೆ. ಆದ್ದರಿಂದ ಅಳಿಯ ಸಂತಾನ ಪದ್ಧತಿ ಎನ್ನುವ ರೂಢಿ ಬೆಳೆದಿದೆ. ಆದರೆ ವಂಶದ ವಿಷಯದಲ್ಲಿ ಆತನ ತಾಯಿಯ ಮೂಲವನ್ನು ನೋಡುವುದರಿಂದ ಮಾತೃವಂಶೀಯ ಕುಟುಂಬ ಪದ್ಧತಿ ಎನ್ನುತ್ತಾರೆ. ವಾಸ್ತವವಾಗಿ ಇವೆರಡೂ ಒಂದೇ.

ಅಳಿಯ ಸಂತಾನ ಪದ್ಧತಿಯ ಬಗ್ಗೆ ಶಾಸನಾಂಕಿತ ದಾಖಲೆ ಸಿಗುವುದು. ಕ್ರಿ.ಶ. ಹತ್ತನೆಯ ಶತಮಾನದ ತಳಂಗರೆಯ ಜಯಸಿಂಹನ ಶಾಸನಗಳಲ್ಲಿ. ಆ ಆಸ್ತಿಯ ಉತ್ತರಾಧಿಕಾರವು ಹೆಣ್ಣುಮಕ್ಕಳಿಗಲ್ಲದೆ ಗಂಡುಮಕ್ಕಳಿಗೆ ಹೋಗಸಲ್ಲದು ಎಂದು ಜೋಗವ್ವೆಯು ಶಾಸನೀಕರಿಸಿದ್ದಾಳೆ. ಈ ಆಸ್ತಿಯು ಆಕೆಯ ತಾಯಿಯ ಮೂಲದಿಂದ (ಮಾತೃ ಮೂಲ) ಬಂದ ಆಸ್ತಿಯಾಗಿರದೆ ಆಕೆಯ ಸ್ವಯಾರ್ಜಿತ (ಕನ್ಯಾದಾನವಾಗಿ) ಆಸ್ತಿಯಾಗಿದೆ. ಹೀಗಾಗಿ ಆಕೆಗೆ ಶಾಸನಾಂಕಿತಗೊಳಿಸುವ ಅಗತ್ಯ ಬಂದಿರಬೇಕು. ೧೦ನೆಯ ಶತಮಾನಕ್ಕಾಗಲೇ ತುಳುವ ರೂಢಿ ಪದ್ಧತಿಯಂತೆ ಹೆಣ್ಣುಮಕ್ಕಳಿಗೆ ತಾಯಿಯ/ಮಾತೃಮೂಲದ ಆಸ್ತಿ ಸಲ್ಲುತ್ತಿದ್ದು ಇತರ ಮೂಲಗಳ ಆಸ್ತಿಯಲ್ಲಿ ಗಂಡುಮಕ್ಕಳೂ ಪಾಲು ಪಡೆಯುತ್ತಿದ್ದಿರಬೇಕು. ಹೀಗಾಗಿ ಜೋಗವ್ವೆ ತನ್ನ ಆಸ್ತಿ ಹೆಣ್ಣು ಸಂತಾನಕ್ಕೆ ಮಾತ್ರ ಹೋಗಬೇಕೆಂದೂ ಹೆಣ್ಣು ಮಕ್ಕಳಿಲ್ಲವಾದರೆ ಗಂಡು ಮಕ್ಕಳಿಗೆ ಹೋಗಬಹುದೆಂದು ಶಾಸನ ಬರೆಸಿರಬೇಕು. ತಳಂಗೆರೆ ಆಳುಪರಸರ ಆಳ್ವಿಕೆಡಕ್ಕೆ ಸೇರಿದ ಭಾಗ.

ತುಳುನಾಡಿನ ಅಳಿಯಸಂತಾನ ಅಥವಾ ಮಾತೃವಂಶೀಯ ಪದ್ಧತಿಯಲ್ಲಿ ಪುರುಷ ಮತ್ತು ಅವನ ಒಡಹುಟ್ಟಿದವರು, ಅವನ ತಾಯಿ ಹಾಗೂ ಆಕೆಯ ಒಡಹುಟ್ಟಿದವರು ಒಂದು ವಂಶಕ್ಕೆ/ಕುಟುಂಬಕ್ಕೆ, ಒಂದು ಗೋತ್ರಕ್ಕೆ ಸೇರುತ್ತಾರೆ. ಈ ಕುಟುಂಬದ ಸಿಂಹಾಸನದ ಹಕ್ಕು, ಆಸ್ತಿಯ ಉತ್ತರಾಧಿಕಾರತ್ವದ ಹಕ್ಕು ಆತನ ಕುಟುಂಬದ ಸದಸ್ಯರಿಗೆ ಸೇರುತ್ತದೆ. ಒಬ್ಬ ಪುರುಷನ ಮಡದಿ ಮತ್ತು ಆಕೆಯ ಹೆಣ್ಣು ಮತ್ತು ಗಂಡು ಮಕ್ಕಳು, ಆ ಹೆಣ್ಣು ಮಕ್ಕಳ ಹೆಣ್ಣು ಮತ್ತು ಗಂಡು ಮಕ್ಕಳು–ಹೀಗೆ ಇವರು ಮತ್ತೊಂದು ವಂಶಕ್ಕೆ ಸೇರುತ್ತಾರೆ. ಈ ಬಗ್ಗೆ ಸ್ಪಷ್ಟ ಮಾಹಿತಿಯನ್ನು ಪಿ.ಎನ್. ನರಸಿಂಹಮೂರ್ತಿಯವರು ಸಂಪಾದಿಸಿರುವ (ಕುಂದನಾಡಿನ ಶಾಸನಗಳು ಶಾ.ಸ. ೩೦–೨೦೦೭) ಕ್ರಿ.ಶ. ೧೧೬೨ರ ಕೂರ್ಸಿಯ ಶಾಸನವು ನೀಡುತ್ತದೆ.

"ಸಮಸ್ತ ಭುವನ ವಿಖ್ಯಾತ ಸೋಮಕುಳತಿಳಕ ಪಾಣ್ಡ್ಯ ಮಹಾರಾಜಾಧಿರಾಜ ಪರಮೇಸ್ವರ ಪರಮ ಭಟ್ಟಾರಕ" ಎಂಬ ಬಿರುದಾಂಕಿತ ಶ್ರೀ ಮತ್ಪಾಂಡ್ಯ ಚಕ್ರವರ್ತಿ ಕುಲಶೇಖರಾಳ್ವೇಂದ್ರ ದೇವರು ರಾಜಧಾನಿ ಬಾರಕನ್ಯಾಪುರದರಮನೆಯಲ್ಲು ಸ್ಥಿರ ಸಿಂಹಾಸನದೊಳಿರಲು ಅವರಳಿಯ ಶ್ರೀ ಮತ್ಪಾಂಡ್ಯ ಪಟ್ಟಿಗದೇವರುಂ (ನೋಡಿ : ಸೋದರಮಾವನೂ ಪಾಂಡ್ಯ ವಂಶ, ಸೋದರಳಿಯನೂ ಪಾಂಡ್ಯ ವಂಶ) ಬಲ್ಲಹದೇವರು ಕುಲಶೇಖರ ದೇವರಂ ಕೀರ್ತಿದೇವರುಂ ಪಟ್ಟಮಹಾದೇವಿಯರುಂ ಬಮ್ಮಲದೇವಿಯರುಂ ಅವರ ಬಸುರಲಿ ಬಂದ ಕುಮಾರ ಬಂಕಿದೇವನುಂ ಸಾಂತರದೇವನುಂ ಅವರ ಕೂಡೆ ಹುಟ್ಟಿದ ಗಂಡು ಹೆಣ್ಣುಂಗಳು ಸಗೋತ್ರಾ ಸಹಿತ ಕೂಡಿ ಏಕಮಾತೃರಾಗಿ ಬರೆದು ನಿಲ್ಲಿಸಿದ ಶಾಸನ." ಇವರೆಲ್ಲ ಸಗೋತ್ರಿಗಳು. ಒಂದು ವಂಶದವರು. ಈ ಶಾಸನದ ಆರಂಭದಲ್ಲಿ ಕೂಡಾ ಬಲ್ಲ ಮಹಾದೇವಿಯನ್ನು ಪಟ್ಟಮಹಾದೇವಿ ಎನ್ನುತ್ತದೆ. ಆದರೆ ಈಕೆ ಕುಲಸೇಖರನ ಮಡದಿಯಲ್ಲ, ಸೋದರಿ. ಕುಲಸೇಖರನ ಸೋದರಿಯಾಗಿದ್ದರೂ ಅವನಳಿಯ ಪಾಂಡ್ಯ ಪಟ್ಟಿಗದೇವರು ಬಲ್ಲಹದೇವರು ಕುಲಶೇಖರ ದೇವರುಂ ಕೀರ್ತಿದೇವರುಂ– ಇವರ ತಾಯಿಯಲ್ಲ. "ಪಟ್ಟಮಹಾದೇವಿಯರುಂ ಬಮ್ಮಲದೇವಿಯರುಂ ಅವರ ಬಸುರಲ್ಲಿ ಬಂದ ಕುಮಾರ

* ೬, ಕೃಷ್ಣಾ ರೆಸಿಡೆನ್ಸಿ, ೪ನೆಯ ತಿರುವು, ಅಮರಜ್ಯೋತಿ ನಗರ, ವಿಜಯನಗರ, ಬೆಂಗಳೂರು – ೫೬೦ ೦೪೦.

ಬಂಕಿದೇವನುಂ ಸಾಂತರದೇವನುಂ ಅವರ ಕೂಡೆ ಹುಟ್ಟಿದ ಗಂಡು ಹೆಣ್ಣುಂಗಳು:" (ಅರ್ಥಾತ್ ಇವರ ಸೋದರ-ಸೋದರಿಯರು ಇವರೆಲ್ಲ ಸಗೋತ್ರ ಅಂದರೆ ಒಂದು ಕುಟುಂಬ ಒಂದು ವಂಶ/ಬಳಿಯವರು)

ಈ ಶಾಸನದ ಪ್ರಕಾರ ಆತನಿಗೆ ಇಬ್ಬರು ಸೋದರಿಯರು ಇದ್ದರು. ಹಿರಿಯ ಸೋದರಿಯ ಮಕ್ಕಳು 'ಶ್ರೀ ಮತ್ಪಾಂಡ್ಯಪಟ್ಟಿಗದೇವರುಂ ಬಲ್ಲಹದೇವರು ಕುಲಶೇಖರ ದೇವರುಂ ಕೀರ್ತಿದೇವರುಂ'. ಇವರೆಲ್ಲ ಪ್ರಾಯ ಪ್ರಬುದ್ಧರಾಗಿದ್ದು ಶಾಸನ ಭಾಷೆ ಇವರಿಗೆ ಬಹುವಚನವನ್ನು ಪ್ರಯೋಗಿಸಿದೆ. ಆದರೆ ಪಟ್ಟ ಮಹಾದೇವಿ ಬಮ್ಮಲದೇವಿಯ ಮಕ್ಕಳನ್ನು ಏಕವಚನದಿಂದ ಲಿಖಿಸಿದೆ. ಇಲ್ಲಿ ಒಂದೋ ಶ್ರೀ ಮತ್ಪಾಂಡ್ಯಪಟ್ಟಿಗದೇವರುಂ ಬಲ್ಲಹದೇವರು ಕುಲಶೇಖರ ದೇವರುಂ ಕೀರ್ತಿದೇವರುಂ-ಇವರ ತಾಯಿ ತೀರಿಹೋಗಿರ ಬೇಕು. ಇಲ್ಲವೇ ಹಿರಿಯಾಕೆಗಿಂತ ಮೊದಲು ಕಿರಿಯಾಕೆ ಮಕ್ಕಳನ್ನು ಹೆತ್ತಿರಬಹುದು. ಇಲ್ಲಿ ಪಾಂಡ್ಯ ಪಟ್ಟಿಗದೇವನು ಕುಲಸೇಖರನ ಉತ್ತರಾಧಿಕಾರಿ ಎಂಬ ಸೂಚನೆ ಸಿಗುತ್ತದೆ. ತುಳು ಸಾಮಾಜಿಕ ವ್ಯವಸ್ಥೆಯ ಪ್ರಕಾರ ಪಟ್ಟ ಮಹಾದೇವಿ ಆಳುವ ಅರಸನ ಅರ್ಥಾತ್ ಕುಲಶೇಖರಾಳುಪೇಂದ್ರನ ತಾಯಿಯೇ ಆಗಬೇಕಾಗಿಲ್ಲ. ಮುಂದಿನ ಭಾಗದಲ್ಲಿ ಬಗ್ಗೆ ಶಾಸನ ದಾಖಲೆಯನ್ನೂ ನೀಡಲಾಗಿದೆ. ಆತನ ಹಿರಿತಾಯಿ, ಅಥವಾ ತಾಯಿಯ ಹಿರಿಯಕ್ಕ-ಹೀಗೆ ಕುಟುಂಬದ ಹಿರಿಯ ಹೆಣ್ಣು ಆಗಲೂಬಹುದು. ವಯಸ್ಸಿನಲ್ಲಿ ಹಿರಿಯಾಕೆಗೆ ಪಟ್ಟ. ಆಕೆಯನ್ನು 'ಪೆರಿಯಪ್ಪ(ಬ್ಬ), ಪಟ್ಟಾದಾರ್ತಿ' ಎಂದು ಕರೆಯುವ ರೂಢಿ ಈಗಲೂ ಇದೆ.

ಕುಲಶೇಖರದೇವಾಳುಪೇಂದ್ರ ಅರಸನಾದರೂ ಉತ್ತರಾಧಿಕಾರ ಮತ್ತು ಆಸ್ತಿಯ ಹಕ್ಕು ಆತನ ಮಾತೃಕುಟುಂಬದ ಎಲ್ಲಾ ಸದಸ್ಯರಿಗೂ ಸೇರಿತ್ತು ಎನ್ನುವುದನ್ನು ಈ ಶಾಸನ ಸ್ಪಷ್ಟಪಡಿತ್ತದೆ. ಈಗಲೂ ತುಳುನಾಡಿನ ನೆಲದ ಸಂಸ್ಕೃತಿಯಲ್ಲಿ ಈ ಪದ್ಧತಿ ಜಾರಿಯಲ್ಲಿದೆ.

ಈ ಶಾಸನದಲ್ಲಿ ಇರುವ ಇನ್ನೊಂದು ಕುಟುಂಬ ವೀರ ಕುಲಶೇಖರನ ಅಷ್ಟಾಂಗ ಲಕ್ಷ್ಮಿಯರು – ಚಂದಲದೇವಿ ಮತ್ತು ಪದುಮಲದೇವಿ ಅವರ ಬಸಿರಲ್ಲಿ ಹುಟ್ಟಿದ ಕುಮಾರಿ ಅರಸಿಲದೇವಿ, ಸಗ್ಗಲ ದೇವಿ ಚಂದಲದೇವಿ ಮತ್ತು ಅಕ್ಕಾ ದೇವಿ ಹಾಗೂ ಅವರ ಗಂಡು ಹೆಣುಬಗಳು ಒಂದು ಗೋತ್ರ ಒಂದು ಕುಟುಂಬ-ಅವನ ಅಷ್ಟಾಂಗ ಲಕ್ಷ್ಮಿಯರ ಕುಟುಂಬ. (ಈತ ಅಕ್ಕ ತಂಗಿಯರನ್ನು ಮದುವೆಯಾಗಿದ್ದರೆ ಅವರು ಒಂದೇ ಕುಟುಂಬ ಆಗುತ್ತಾರೆ. ಇಲ್ಲವಾದಲ್ಲಿ ಅವರು ಎರಡು ಕುಟುಂಬ ಆಗುತ್ತಾರೆ. ಮಾತೃವಂಶೀಯ ಪದ್ಧತಿಯ ಪ್ರಕಾರ ಕುಲಸೇಖರನ ಮಡದಿಯರು ಮತ್ತು ಅವರ ಮಕ್ಕಳು ಕುಲಶೇಖರನ ವಂಶಕ್ಕೆ ಸೇರುವುದಿಲ್ಲ. ಮಡದಿಯ ವಂಶಕ್ಕೆ ಸೇರುತ್ತಾರೆ.) ಆಳುಪ ಕುಲಶೇಖರನ ಕುಟುಂಬದ ಎಲ್ಲ ಸದಸ್ಯರೂ ಸೇರಿ ಮಾತೃಕುಟುಂಬದ ಆಸ್ತಿಯಾಗಿರುವ ಕೂರ್ಸಿಯನ್ನು ಮೇಲೆ ತಿಳಿಸಿದ ಕುಲಶೇಖರನ ಅಷ್ಟಾಂಗಲಕ್ಷ್ಮಿಯರಾದ ಚಂದಲದೇವಿ ಮತ್ತು ಸುಗ್ಗಲದೇವಿ ಹಾಗೂ ಅವರ ನಾಲ್ಕು ಹೆಣ್ಣು ಮಕ್ಕಳಿಗೆ ಹಾಗೂ ನಾಲ್ಕು ಹೆಣ್ಣುಮಕ್ಕಳು ಹೆತ್ತ ಹೆಣ್ಣು ಗಂಡು ಮಕ್ಕಳಿಗೆ ವಂಶಪಾರಂಪರ್ಯವಾಗಿ ಅನುಭೋಗಿಸಲು ಕನ್ಯಾದಾನವಾಗಿ ಕೊಡುತ್ತಾರೆ. ಇದು **ಮದುವೆಯ ಸಂದರ್ಭದಲ್ಲಿ ನೀಡುವ ಕನ್ಯಾದಾನ** ಅಲ್ಲ. **ಭೂಮಿದಾನದಲ್ಲಿ ಬರುವ ರೂಢಿ ಪದ.** ಇತರ ಒಂದೆರಡು ಶಾಸನಗಳಲ್ಲಿ ಕನ್ಯಾದಾನದ ಬಗ್ಗೆ ಇದೆ.

ಇಲ್ಲಿ ಅಳಿಯ ಸಂತಾನ ಕುಟುಂಬ ಪದ್ಧತಿಯನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದು. ಕುಲಸೇಖರ ತಾನು ಅರಸನಾದರೂ ತನ್ನ ಮಾತೃ ಕುಟುಂಬದ ಆಸ್ತಿಯ ಒಂದು ಭಾಗವನ್ನು ಮಡದಿ ಮಕ್ಕಳಿಗೆ ನೀಡಲು ತನ್ನ ತಾಯಿಯ ಕುಟುಂಬದ ಸದಸ್ಯರ ಅನುಮತಿ ಪಡೆಯುತ್ತಾನೆ. ಕ್ರಿ.ಶ. ೧೫೪೨ರ ಶಾಸನದಲ್ಲಿ ಮುಲ್ಕಿಯ ಕನ್ನಿಕಾ ಸಾಮಂತರ ಅಳಿಯ ದುಗ್ಗಣ ಸಾವಂತನು ದಾನ ನೀಡುವಾಗ ತನ್ನ ಅಕ್ಕ ಚೆನ್ನಮ್ಮದೇವಿಯ ಅನುಮತಿಯನ್ನು ಪಡೆಯುತ್ತಾನೆ. (ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ **ತುಳುನಾಡಿನ ಶಾಸನಗಳು**, ಸಂ. ೮೫) ತುಳುನಾಡಿನಲ್ಲಿ ಅನೇಕ ಶಾಸನಗಳು ಮಾತೃಕುಟುಂಬದ ಸದಸ್ಯರ ಅನುಮತಿ ಪಡೆದು ಭೂಮಿದಾನ ಪಡೆಯುವ ಬಗ್ಗೆ ಮಾಹಿತಿ ನೀಡುತ್ತದೆ. ಕ್ರಿ.ಶ. ೧೧೮೨ರ ಹೊತ್ತಿಗೆ ಅಳಿಯ ಸಂತಾನ ಪದ್ಧತಿ ಇಷ್ಟು ಗಟ್ಟಿಯಾಗಿ ರೂಢಿಯಲ್ಲಿ ಇರಬೇಕಾದರೆ ಈ ಪದ್ಧತಿ ಬಹು ಹಿಂದಿನಿಂದಲೇ ಜಾರಿಯಿಂದ ಬಂದಿರಬೇಕು.

ವರಾಂಗದ ಶಾಸನದ ಪ್ರಕಾರ ಕುಲಸೇಖರಾಳ್ವೆಂದ್ರನಿಗೆ ಜಾಕಮಲಾದೇವಿ ಎಂಬ ರಾಣಿಯೂ ಇದ್ದಳು. ಕ್ರಿ.ಶ. ೧೨೦೪ರ ವೀರ ಕುಲಶೇಖರನ ಮಂಗಳೂರು ಶಾಸನವು ಮಂಗಲಾಪುರದ ಭುವನಾಶ್ರಯದ ಮೊಗಸಾಲೆಯಲ್ಲಿ ನಡೆದ ರಾಜಸಭೆಯಲ್ಲಿ ಅಳಿಯ ವೀರ ಬಂಕಿದೇವನಿಗೆ ಮುಗುರುನಾಡಿನ ರಾಜಭಾರವನ್ನು ಬಿಟ್ಟುಕೊಟ್ಟ ಬಗ್ಗೆ ಉಲ್ಲೇಖ ನೀಡುತ್ತದೆ. ಶಾಸನದ ಕೊನೆಗೆ "ಯೀ ಧರ್ಮವನ್ನು ಶಿಲಾಶಾಸನಂಗೆಯಿದು ಕೊಟ್ಟ ಮಾವ ಕುಲಸೇಖರ ದೇವರ್ಗೆ ಅಳಿಯಂದಿರು ಬಂಕಿದೇವರು, ಬಂಮದೇವರು ಕುಲಸೇಖರ ದೇವರರ್ಗೆ ಮಂಗಳ ಮಹಾ......" (ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, **ತುಳುನಾಡಿನ ಶಾಸನಗಳು** ಸಂ. ೩೭) ಎಂದಿದೆ. ಕೂರ್ಸಿ ಶಾಸನ ಬರೆದ ೪೩ ವರ್ಷಗಳ ಬಳಿಕ ಮಂಗಳೂರು

ಶಾಸನವನ್ನು ಬರೆಯಲಾಗಿದೆ. ೧೧೮೨ರಲ್ಲಿ ಕೂರ್ಸಿಯ ಭೂಮಿಯನ್ನು ದಾನ ನೀಡುವಾಗ ಕುಲಸೇಖರನ ಕುಟುಂಬದಲ್ಲಿ ಇದ್ದ ಇತರ ಆತನ ಸೋದರಳಿಯ ಪಾಂಡ್ಯ ಪಟ್ಟಿಗದೇವರುಂ, ಬಲ್ಲಹದೇವರುಂ, ಕುಲಶೇಖರ ದೇವರುಂ, ಕೀರ್ತಿದೇವರುಂ–ಇವರೆಲ್ಲರ ಪ್ರಸ್ತಾಪ ಮಂಗಳೂರಿನ ಮೇಲಿನ ಶಾಸನದಲ್ಲಿ ಇಲ್ಲ. ಬಂಕಿದೇವನ ಸೋದರ ಸಾಂತರ ದೇವನ ಪ್ರಸ್ತಾಪ ಕೂಡಾ ಇಲ್ಲಿ ಇಲ್ಲ. 'ಅಳಿಯಂದಿರು ಬಂಕಿದೇವರು, ಬಂಮದೇವರು ಕುಲಸೇಖರ ದೇವರಗೇ' ಎಂದಿದೆ. ಸಾಂತರ ದೇವ ಆ ಸಂದರ್ಭದಲ್ಲಿ ರಾಜ ಸಭೆಯಲ್ಲಿ ಇಲ್ಲದೆ ಹೋಗಿರಬಹುದು. ಆದರೆ ಕುಲಶೇಖರನ ಉತ್ತರಾಧಿಕಾರಿಯಾಗಬೇಕಾಗಿದ್ದ ಪಾಂಡ್ಯ ಪಟ್ಟಿಗದೇವ ಏನಾದ ? ಬಹುಶಃ ಮುಗುರುನಾಡನ್ನು ಬಂಕಿದೇವನಿಗೆ ಕೊಟ್ಟು ಹಿರಿಯ ಅಳಿಯ ಪಾಂಡ್ಯ ಪಟ್ಟಿಗದೇವನು ಆಳುಪ ಸಿಂಹಾಸನಕ್ಕೆ ಕುಲಶೇಖರನ ಉತ್ತರಾಧಿಕಾರಿಯಾಗಿದ್ದಿರಬೇಕು. ಈ ಮೂಲಕ ಆತ ತನ್ನ ಇಬ್ಬರು ಸೋದರಿಯರಲ್ಲಿ ರಾಜ್ಯವನ್ನು ಹಂಚಿರಬೇಕು. ತುಳುನಾಡಿನ ಅಳಿಯ ಸಂತಾನ ಪದ್ಧತಿಯಲ್ಲಿ ಎಲ್ಲಾ ಹೆಣ್ಣು ಮಕ್ಕಳಿಗೆ ಸಮಾನ ಭಾಗ ದೊರಕುತ್ತದೆ. ಮೂಲ ಭಾಗ ಹಿರಿಯವಳಿಗೆ ಸೇರುತ್ತದೆ.

ವರಾಂಗದ ೧೩ನೆಯ ಶತಮಾನದ ಶಾಸನದಲ್ಲಿ ಆಳುಪ ಪಟ್ಟಿಯೊಡೆಯ, ಪಾಂಡ್ಯ ಪಟ್ಟಿಯೊಡೆಯ, ಕವಿಯಾಳುಪ ಮತ್ತು ಪಟ್ಟಿಯೊಡೆಯ ಕುಲಶೇಖರ ಇವರುಗಳ ಹೆಸರು ಕ್ರಮವಾಗಿ ಬಂದಿದೆ. ಶಾಸನದ ಕೊನೆಯ ಭಾಗದಲ್ಲಿ "ತ್ರಿಭುವನ **ಶಾನ್ತರನ್ನು ಹೊಗಳುತ್ತಾ** ಇವನಿಗೆ **'ಶಾಂತರನೆಂಬಸ್ವರ್ಥ ಸಂಜ್ಞೆಯ(ಂ)'** ಎನ್ನುವುದಲ್ಲದೆ ಇವನನ್ನು 'ವೀರ ಭೂಪಾಲ' ಎನ್ನುತ್ತದೆ. "ರಿಪುರಾಯರ ತೂಳ್ದಿ ಧರ್ಮವಂ ಪಾಳಿಸಿ ರಾಜ್ಯಲಕ್ಷ್ಮಿಯುಂ ಮಿಳಿಸಿ ರಾಜ್ಯಂಗೈಯ್ಯುತ್ತಿರಲಾ ಮಹೀಭುಜ ನಿಜಾನುಜನ ಪಾರೋದರ ಶೌರ್ಯಚಾರ ವೀರಭೂಪಾಳನಿಂ ಕಿರಿಯನಪ್ಪ ಕುಂಡಣಕ್ಷೋಣೀಪಾಳನಖಿಲ ದಿಕ್ಪಾಳ ನಿಳಯಮಂ ನಿಜಕೀರ್ತಿಯಿಂ ಧವಳಿಸಿ ಜಗತ್ಪ್ರಸಿದ್ಧ ವಿದ್ಯಾ ವಿಳಾಸಿನೀ ಸ್ವರ್ಣಕರ್ಣ್ಣಕುಂಡಲಾಭರಣನಪ್ಪ(ದ).........ಪಂಡಿತ ಪಾಂಡ್ಯನೆನೆನಿಸಿ ಪಾಂಡ್ಯ ದನಂಜಯ ನಪ್ಪ....... ." (ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, **ತುಳುನಾಡಿನ ಶಾಸನಗಳು** ಸಂ. ೩೯) ಹೀಗೆ ಶಾಸನ ಪಾಠ ಮುಂದುವರಿಯುತ್ತದೆ. ಈ ಶಾಸನದಲ್ಲಿ ಬರುವ ಕುಲಸೇಖರನೇ ಕೂರ್ಸಿ ಶಾಸನದ ಕುಲಶೇಖರ. ಇಲ್ಲಿ ಬರುವ ಬಂಕಿದೇವನಿಗ ಮೊಗರುನಾಡಿನ ರಾಜ್ಯವನ್ನು ಕುಲಶೇಖರ ಬಿಟ್ಟುಕೊಟ್ಟಿದ್ದ. (ಅದೇ. ಸಂ. ಆದರೆ ಮುಂದಿನ ಇತಿಹಾಸಗಳ ಪುಟದಲ್ಲಿ ಮುಗುರುನಾಡಿನ ಬಂಕಿದೇವನ ಪ್ರಸ್ತಾಪ ಕಾಣಬರುವುದಿಲ್ಲ.

ಕುಂಡಣನ ಶಾಸನದಲ್ಲಿ ಮೇಲಿನ ಅರಸರನ್ನು 'ನಲ್ಲಿಂ' ಬಳಿಯವರು ಎನ್ನಲಾಗಿದೆ. ಮುಂದೆ ಆಳುಪ ಸಿಂಹಾಸನ ದತ್ತಾಳುಪ ಬಳಿಯರಿಗೆ ಸೇರುತ್ತದೆ. ವೀರ ಪಾಂಡ್ಯನ ಅಳಿಯ ಬಂಕಿದೇವ ದತ್ತಾಳುಪ ಬಳಿಯವನೆಂದು ಹೇಳಲಾಗಿದೆ. (SII, Vol. 27, No, 216, 1281 A.D.) ಹೀಗಾಗಿ ಬಂಕಿದೇವನ ಸೋದರಮಾವನಾದ ವೀರಪಾಂಡ್ಯನೂ ದತ್ತಾಳುಪ ಬಳಿಯವನು ಆಗುತ್ತಾನೆ. ವೀರಪಾಂಡ್ಯದೇವಾಳು ಪೇಂದ್ರನ ಕಾಲ ಕ್ರಿ.ಶ. ೧೨೫೦–೧೨೭೫.

ಕ್ರಿ.ಶ. ೧೨೦೦ಳರಲ್ಲಿ ನಲ್ಲಿ ಬಳಿಯ ಕುಲಸೇಖರ ಮಂಗಳಾಪುರದಿಂದ ಆಳುತ್ತಿದ್ದ. ಮುಂದೆ ಆಳುಪ ಸಿಂಹಾಸನದಲ್ಲಿ ತ್ರಿಭುವನ ಸಾಂತರ ಮತ್ತು ಕುಂಡಣರು ಕಾಣಬರುತ್ತಾರಾದರೂ ಇವರ ಕಾಲ ೧೩ನೆಯ ಶತಮಾನ ಎಂದಿದೆ. ದತ್ತಾಳುಪೇಂದ್ರ ಶ್ರೀ ಮಾರ ಒಡ್ಡಮದೇವ ಕೆಲವು ಕಾಲ ಆಳಿರಬಹುದು. ಕ್ರಿ.ಶ. ೧೨೫೦ರಲ್ಲಿ ದತ್ತಾಳುಪ ಬಳಿಯ ವೀರ ಪಾಂಡ್ಯದೇವ ಮಂಗಳೂರಿನಿಂದ ಆಳುತ್ತಾನೆ. ಇಲ್ಲಿಯ ಸುಮಾರು ೮೫ ವರುಷಗಳ ಅವಧಿಯ ರಾಜಕೀಯ ಇತಿಹಾಸ ಕತ್ತಲೆಯಲ್ಲಿ ಉಳಿದಿದೆ.

ವೀರ ಪಾಂಡ್ಯಾಳುಪೇಂದ್ರನ ಶಾಸನದಲ್ಲೂ ಆತನ ತಾಯಿಯನ್ನು ಸ್ಮರಿಸಲಾಗಿದೆ. ತಂದೆಯನ್ನಲ್ಲ : "ಶ್ರೀ ಮತ್ಪಟ್ಟದ ಪಿರಿಯರಸಿ ಪಟ್ಟಮಹಾದೇವಿಯ ಸುಪುತ್ರರಹ ಶ್ರೀಮತು ಪಾಂಡ್ಯ ಚಕ್ರವರ್ತಿ ಅರಿರಾಯ ಗಜಕೇಸರಿ ವೀರ ಪಾಂಡ್ಯ ದೇವಾಳುಪೇಂದ್ರ ದೇವರಸರು......ತನ್ನ ರಾಣಿ ಬಲ್ಲಮಹಾ ದೇವಿಯೊಂದಿಗೆ ಬಾರಹ ಕನ್ಯಾಪುರದಿಂದ ಆಳುವ ಮಾಹಿತಿ ಸಿಗುತ್ತದೆ. (SII., Vol. 27, No. 213, 13th century') ವೀರಪಾಂಡ್ಯದೇವಾಳುಪೇಂದ್ರನನ್ನು ಪಟ್ಟದ ಪಿರಿಯರಸಿ ಪಟ್ಟಮಹಾದೇವಿಯ ಪುತ್ರ ಎಂದಿದೆ. ಕೂರ್ಸಿಯ ಶಾಸನದಲ್ಲಿ ಕುಲಶೇಖರನ ಸೋದರಿ ಬಮ್ಮಲದೇವಿಯನ್ನು 'ಪಟ್ಟಮಹಾ ದೇವಿ' ಎನ್ನಲಾಗಿದೆ. ಕ್ರಿ.ಶ. ೧೯೨೨ರ ಶಾಸನದಲ್ಲಿಯೂ ನಾಗದೇವರಸನನ್ನು 'ಪಿರಿಯರಸಿ ಬಲ್ಲಮಹಾದೇವಿಯ ಪುತ್ರ' ಎನ್ನಲಾಗಿದೆ. (A.R.S.I.E 1927 & 28 Appx B.No. 415) ಈ ರೀತಿ ಪಿರಿಯರಸಿ ಪಟ್ಟಮಹಾದೇವಿಯ ಪುತ್ರ ಎನ್ನುವುದು ಮತ್ತು ಪಿರಿಯರಸಿ ಪಟ್ಟಮಹಾದೇವಿಯರು ವಡ್ಡೋಗಲದಲ್ಲಿ ಭಾಗಿಯಾಗುವುದು ತುಳುನಾಡಿನ ಮಾತೃಪ್ರಧಾನ ಪರಂಪರೆಯಲ್ಲಿ ಮಾತ್ರ ಸಾಧ್ಯ. ಇಲ್ಲವಾದಲ್ಲಿ ಇಲ್ಲಿಯ ಶಾಸನಗಳು ತಂದೆಯನ್ನು ಹೆಸರಿಸಬೇಕಿತ್ತು. ತುಳುವರಲ್ಲಿ ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಆಗುವುದಿಲ್ಲ. ಇಲ್ಲಿ ಕನ್ಯಾದಾನ ಇಲ್ಲ. ಹೀಗಾಗಿ ಕಿಕ್ಕಾಯಿ ತಾಯಿ ೩ನೆಯ ಹೊಯ್ಸಳ ಬಲ್ಲಾಳನ ಪಟ್ಟದ ಪಿರಿಯರಸಿ ಆಗಿದ್ದರೂ ಆಕೆ ತನ್ನ ಸೋದರಮಾವ ಸೋಯಿದೇವ ಆಳುಪೇಂದ್ರನು

ಆಳಿದ್ದಿರಬಹುದಾದ ಬಾರ್ಕೂರಿನಿಂದಲೇ ಆಳುತ್ತಾಳೆ. ಹೊಯ್ಸಳರು ತುಳುನಾಡಿನ ಮೇಲೆ ಪ್ರಭುತ್ವ ಸಾಧಿಸಿದ್ದರೂ ಆಳುಪ ರಾಜಕುಮಾರಿ ಕಿಕ್ಕಾಯಿತಾಯಿಯೊಂದಿಗೆ ೩ನೆಯ ಬಲ್ಲಾಳನ ಮದುವೆ ಆಗುವುದರ ಮೂಲಕ ಎರಡೂ ಮನೆತನದೊಳಗೆ ಬಂಧುತ್ವ ಬೆಸೆದಿತ್ತು. ರಾಜಕೀಯ ದ್ವೇಷ ಕೊನೆಗೊಂಡಿತ್ತು. ಹೀಗಾಗಿ ಮಾತೃವಂಶೀಯ ತುಳು ಸಂಪ್ರದಾಯದಂತೆ ಕಿಕ್ಕಯಿತಾಯಿ ಮತು ಆಕೆಯ ಮಗ ಹೊಯ್ಸಳ ಬಲ್ಲಾಳನ ರಾಜ್ಯಕ್ಕೆ ಹೋಗದೆ ತುಳುನಾಡಿನಲ್ಲಿ ಉಳಿದು ಹಿರಿಯುರ ರಾಜ್ಯಕ್ಕೆ (ಕ್ರಿ.ಶ. ೧೩೩೬) ರಾಣಿಯಾಗುತ್ತಾಳೆ. ಈ ಕಾಲದಲ್ಲ ಅಳಿಯ ಸಂತಾನ ಅರ್ಥಾತ್ ಮಾತೃವಂಶೀಯ ಕುಟುಂಬ ಪದ್ಧತಿ ರೂಢಿಯಲ್ಲಿ ಇತ್ತು ಎನ್ನುವುದಕ್ಕೆ ಇದೂ ಆಧಾರವಾಗುತ್ತದೆ.

ಕ್ರಿ.ಶ. ೧೩೦೨ಕ್ಕೆ ವೀರಪಾಂಡ್ಯದೇವಾಳುಪೇಂದ್ರನ ಅಳಿಯ ಬಂಕಿದೇವ ಬಂಕಿದೇವಾಳುಪೇಂದ್ರನಾಗಿ ರಾಜಧಾನಿ ಮಂಗಳಾಪುರದಿಂದ ಆಳುತ್ತಾನೆ. ಕುಲಸೇಖರ ಮಂಗಳಾಪುರದರಮನೆಯ ಮೊಗಸಾಲೆಯಲ್ಲಿ ಕುಳಿತು ನಡೆಸಿದ ಒಡ್ಡೋಲಗವನ್ನು ಈತ ನಡೆಸುತ್ತಾನೆ. ( ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ **ತುಳುನಾಡಿನ ಶಾಸನಗಳು**, ಸಂ. ೪೫) ಈತನ ಅಕ್ಕ ವೋಚಮಲಾ ದೇವಿಗೆ ಈತ ವಾಮನನ ಕೈಯಲ್ಲಿ ನೀರದೇವಾಲಯದಲ್ಲಿ ಪಿಂಡಪ್ರಧಾನ ಮಾಡಿಸುತ್ತಾನೆ. ಹೀಗಾಗಿ ಬಂಕಿದೇವನಿಗೆ ವಾಮನನೆಂಬ ಅಳಿಯನಿದ್ದ ಎಂದಾಗುತ್ತದೆ. ಸತ್ತವರ ಗಂಡು ಮಕ್ಕಳ ಕೈಯಲ್ಲಿ ಪಿಂಡ ಪ್ರಧಾನಮಾಡುವುದು ಪದ್ಧತಿ.

ಮುಂದೆ ಬರುವ ಅರಸರ ಸಾಮಾಜಿಕ ಪದ್ಧತಿ ಯಲ್ಲಿಯೂ ಮಾತೃವಂಶೀಯ, ಮಾತೃಪ್ರಧಾನ, ಅಳಿಯ ಸಂತಾನ ಪದ್ದತಿಯನ್ನು ಕಾಣಬಹುದು. 'ಕ್ರಿ.ಶ. ೧೪೫೫ರ ಶಾಸನವು 'ಶ್ರೀ ಚಂದಲ ದೇವಿಯರ ಕುಮಾರ ಅರಿರಾಯ ಗಂಡರಧಾವಣಿ ಶ್ರೀ ವೀರ ಪಾಂಡ್ಯಪೊಡೆಯರು.' (ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, **ತುಳುನಾಡಿನ ಶಾಸನಗಳು**, ಸಂ. ೮೬) ಎಂಬಲ್ಲಿ ತಾಯಿಯೇ ಪ್ರಧಾನಳಾಗುತ್ತಾಳೆ. ಕಿರಿತಾಯಿಗೂ ಇಲ್ಲಿ ಅಧಿಕಾರ ಇರುತ್ತದೆ. ಕ್ರಿ.ಶ. ೧೫೪೬ರ ಕುಂದಾಪುರ ತಾಲೂಕಿನ ಹಾಡುವಳ್ಳಿ ಶಾಸನದಲ್ಲಿ "....ಚಿಕ್ಕ ಅರಮನೆಯ ಕಿರಿತಾಯಿ ಬಸವನಾಯಕತಿ ಹಾಕಿಸಿದ ಕಲ್ಲು ಎಂದಿದೆ. (ಡಾ. ಪಿ.ಎನ್. ನರಸಿಂಹಮೂರ್ತಿ, **ಕುಂದನಾಡಿನ ಶಾಸನಗಳು**. ಸಂ. ೫೬) 'ಶ್ರೀ ಮದ್ಭೈರವರಾಜ ತುಂಗ ಭಗಿನೀ ಶ್ರೀ ಗುಮ್ಮಟಾಂಬಸುತ...' ಎಂದು ಭೈರವರಾಜನ ಅಳಿಯ ತನ್ನನ್ನು ಕರೆದುಕೊಳ್ಳುತ್ತಾನೆ. (ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, **ತುಳುನಾಡಿನ ಶಾಸನಗಳು**, ಸಂ. ೮೮) ಅನೇಕ ಶಾಸನಗಳು ತಾಯಿಯ ಮೂಲಕವೇ ಅರಸನನ್ನು ಹೆಸರಿಸುತ್ತವೆ.

ಪಿತೃವಂಶೀಯ ವ್ಯವಸ್ಥೆಯಲ್ಲಿ ತಂದೆಯ ಅನಂತರ ಮಗನ ಆಳ್ವಿಕೆಯಲ್ಲಿಯೇ ಆ ರಾಜ್ಯ ಉಳಿದು ಬರುತ್ತದೆ ಯೆಂದು ಹೇಳಲಾಗದು. ಅಂತಯೇ ಮಾತೃವಂಶೀಯ ವ್ಯವಸ್ಥೆಯಲ್ಲಿ ಸೋದರಮಾವನ ಅನಂತರ ಸೋದರಳಿಯ ನಲ್ಲಿ ಮಾತ್ರವೇ ಉಳಿಯುವುದು ಎಲ್ಲಾ ಸಂದರ್ಭದಲ್ಲೂ ಸಂಭವವಲ್ಲ. ರಾಜ್ಯಕ್ಕಾಗಿಯೇ ಯುದ್ಧ ನಡೆಯುತ್ತಿರುವಾಗ ಇಂತಹ ನಿರೀಕ್ಷೆಗಳೇ ತಪ್ಪಾಗುತ್ತವೆ. ಎಂಟನೆಯ ಶತಮಾನದಲ್ಲಿ ಉದ್ಯಾವರದ ಆಳುಪ ಸಿಂಹಾಸನಕ್ಕಾಗಿ ರಣಸಾಗರ, ಚಿತ್ರವಾಹನ, ಶ್ವೇತವಾಹನ ಇವರೊಳಗೆ ನಡೆದ ಯದ್ಧವನ್ನೂ ಗಮನಿಸಬಹುದು. ಹಿಂದಿನ ಅರಸರ ಉತ್ತರಾಧಿಕಾರಿಯಾಗಿ ಬಂದವರು ಮಗನೇ ಎಂದು ತುಳುನಾಡಿನ ಯಾವ ಶಾಸನಗಳಲ್ಲೂ ಸ್ಪಷ್ಟ ಮಾಹಿತಿ ಇಲ್ಲ. ಹೀಗಿರುವಾಗ ನಾನು ಮೇಲೆ ತೋರಿಸಿದ ಮಾತೃಪ್ರಧಾನ ಪದ್ಧತಿಯನ್ನು ಆಧಾರಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಸಿಂಹಾಸನದ ಉಪನಾಮ ಪಟ್ಟಾಭಿಷೇಕ ಆದವರಿಗೆ ಅಧಿಕೃತವಾಗಿ ನೀಡುವ ಪಟ್ಟದ ಹೆಸರು. ಅಲ್ಲಿ ಮಗ ಕೂತರೂ ಅಳಿಯ ಕೂತರೂ ಅಥವಾ ಇವರಿಬ್ಬರಿಗೂ ಸಂಬಂಧ ಪಡದ ಮೂರನೆಯ ವ್ಯಕ್ತಿ ಕೂತರೂ ಆತ ಸಿಂಹಾಸನದ ಪೂರ್ವ ಪರಂಪರೆಯ ಹೆಸರನ್ನು ಪಡೆಯುತ್ತಾನೆ.

ಪಿತೃಪ್ರಧಾನ, ಪಿತೃವಂಶೀಯ ವ್ಯವಸ್ಥೆಯು ಮಾತೃ ಪ್ರಧಾನ, ಮಾತೃವಂಶೀಯ ವ್ಯವಸ್ಥೆಯಾಗಿ ಪಲ್ಲಟಗೊಂಡ ಉದಾಹರಣೆ ಇಡಿಯ ವಿಶ್ವದಲ್ಲಿ ಎಲ್ಲೂ ಕಾಣದು ಎನ್ನುತ್ತಾರೆ ಮಾನವ ಶಾಸ್ತ್ರಜ್ಞರು. ಮಾತೃಪ್ರಧಾನ, ಮಾತೃವಂಶೀಯ ವ್ಯವಸ್ಥೆಯೇ ವಿಶ್ವದ ಮೊದಲ ಸಮಾಜ ವ್ಯವಸ್ಥೆಯಾಗಿದ್ದು ಅದು ಪಿತೃಪ್ರಧಾನತೆಗೆ ಪರಿವರ್ತನೆಗೊಂಡುದೇ ಹೆಚ್ಚು ಅಥವಾ ಇವೆರಡರ ಮಧ್ಯೆ ಇತ್ತು ಎನ್ನುವುದು ಅವರ ಅಭಿಪ್ರಾಯ.

ಕುಲಶೇಖರ ಆಳುಪೇಂದ್ರ – ೧೧೬೨ ಮಾರ್ಚಿ (ಕ್ರಿ.ಶ. ೧೧೬೦-೧೨೨೦)

ಸೋದರಳಿಯ ಪಾಂಡ್ಯ ಪಟ್ಟಿಗದೇವ, ಬಲ್ಲಹದೇವರುಂ,
ಕುಲಶೇಖರ ದೇವರುಂ, ಕೀರ್ತಿದೇವ, ಪಟ್ಟಮಹಾದೇವಿ, ಬಮ್ಮಲದೇವಿ,

ಮಗ ಬಂಕಿದೇವ, ಸಾಂತರ ದೇವ

ಇವರ ಕೂಡೆ ಹುಟ್ಟಿದ ಗಂಡು ಹೆಂಣುಂಗಳು
ಅರ್ಥಾತ್ ಇವರ ಸೋದರ ಸೋದರಿಯರು
– ಸಗೋತ್ರ ಕುಟುಂಬ ಒಂದು ವಂಶ/ಬಳಿಯ ಕುಟುಂಬ ಸೇರಿ
(ವರಾಂಗದ ಶಾಸನದ ಪ್ರಕಾರ ನಲ್ಲಿಂ ಬಳಿ) ಅಷ್ಟಾಂಗ ಲಕ್ಷ್ಮಿಯರು

ಕುಲಶೇಖರ ಆಳುಪೇಂದ್ರ
–೧೧೬೨ ಮಾರ್ಚಿ –

ಅವನ ಅಷ್ಟಾಂಗ ಲಕ್ಷ್ಮಿಯರು
ಚಂದಲದೇವಿ ಮತ್ತು ಪದುಮಲದೇವಿ

ಕುಮಾರಿ ಅರಸಿಲ ದೇವಿ | ಸುಗ್ಗಲ ದೇವಿ | ಚಂದಲದೇವಿ | ಅಕ್ಕಾದೇವಿ

ಹಾಗೂ
ಅವರ ಗಂಡು ಹೆಂಣಿಗಂ
–ಅವರ ವಂಶ ವಂಶಾವಳಿಗೆ ನೀಡಿದ ಕನ್ಯಾದಾನ

ಡಾ. ಮಲ್ಲಿಕಾರ್ಜುನ ಕುಂಬಾರ*

# ರೋಣದ ವೀರಗಲ್ಲು ಶಾಸನ : ರಾಷ್ಟ್ರಕೂಟರ ಮೇಲೆ ಹೊಸ ಬೆಳಕು

ಅಂದಿನ ಧಾರವಾಡ ಜಿಲ್ಲೆಯು ಉತ್ತರ ಕರ್ನಾಟಕದ ಪ್ರತಿಷ್ಠಿತ ಭಾಗದಲ್ಲಿತ್ತು. ಬೆಳ್ವಲ – ೩೦೦ನ್ನು ತನ್ನ ಒಡಲಿನಲ್ಲಿಟ್ಟುಕೊಂಡ ಇಂದಿನ ಗದಗ ಜಿಲ್ಲೆಯ ರೋಣ ನಗರವು ತನ್ನದೇ ಆದ ಐತಿಹಾಸಿಕ ಮಹತ್ವ ಪಡೆದದ್ದಾಗಿದೆ. ಈ ನಗರಕ್ಕೆ ರೋಣ ಎಂಬ ಹೆಸರು ಬರಲು ಕಾರಣಗಳನ್ನು ವಿದ್ವಾಂಸರು ಹಲವಾರು ರೀತಿಯಲ್ಲಿ ಚರ್ಚಿಸಿದ್ದಾರೆ. ಕೆಲವರು ಮಹಾಭಾರತದ ದ್ರೋಣಾಚಾರ್ಯರಿಂದ ಈ ಹೆಸರು ಬಂದಿರಬಹುದೆಂದು ಹೇಳಿ, ಅದಕ್ಕೆ ಆಧಾರವಾಗಿ ಇಲ್ಲಿರುವ ಮೂರ್ತಿಯೊಂದು ದ್ರೋಣಾಚಾರ್ಯರದೆಂದು ಹೇಳುತ್ತಾರೆ. ಆದರೆ ಇದು ದ್ರೋಣಾಚಾರ್ಯರ ಮೂರ್ತಿ ಅಲ್ಲ; ಅದು ಯೋಗೀಶ್ವರನ ಮೂರ್ತಿ ಎನ್ನುತ್ತಾರೆ. ಈ ಪ್ರದೇಶದ ಭೂಗರ್ಭವು ರೋಣಗಲ್ಲುಗಳಿಂದ ಕೂಡಿದ್ದರಿಂದ ರೋಣ ಎಂದು ಹೆಸರು ಬಂತೆಂದು ಇತಿಹಾಸಕಾರರಾದ ಡಾ. ಎಚ್.ಆರ್. ರಘುನಾಥ ಭಟ್ಟರು ಅಭಿಪ್ರಾಯ ಪಡುತ್ತಾರೆ. ಅಗ್ರಹಾರ ಸಂಸ್ಕೃತಿಯ ಪರಂಪರೆ ಹೊಂದಿದ ಈ ನಗರವು ಅನೇಕ ಅರಸರಿಂದ ಆಳಿಸಿಕೊಂಡಿದೆ. ಇಲ್ಲಿ ಒಟ್ಟು ೧೫ ಶಾಸನಗಳು ದೊರೆತಿವೆ. ಇವುಗಳಲ್ಲಿ ೫ ರಾಷ್ಟ್ರಕೂಟ ಅರಸರಿಗೆ, ೮ ಕಲ್ಯಾಣ ಚಾಲುಕ್ಯರಿಗೆ ಉಳಿದ ಎರಡು ಶಾಸನಗಳು ವಿಜಯನಗರ ಅರಸರ ಕಾಲಕ್ಕೆ ಸೇರಿವೆ. ಅಗ್ರಹಾರ ಸಂಸ್ಕೃತಿಯನ್ನು ತುಳಿಯಲು ಯತ್ನಿಸಿದಾಗ ಇಲ್ಲಿನ ಜನರು ಸಿಡಿದೇಳುತ್ತಿದ್ದರು. ಈ ನಗರವು ಸಾಧುಗೆ ಸಾದು, ಮಾಧುರ್ಯಂಗೆ ಮಾಧುರ್ಯ್ಯದ ರೀತಿಯಲ್ಲಿ ಇಲ್ಲಿನ ಜನರು ಹೂವಿನಂತೆ ಮೃದುವಾಗಿದ್ದರೂ ಕೆಲವು ಸಲ ವಜ್ರದಂತೆ ಕಠಿಣರಾಗುತ್ತಿದ್ದರು.

ಸುಮಾರು ಏಳನೇ ಶತಮಾನದ ಬಾದಾಮಿ ಶಾಸನದಲ್ಲಿ ಇಲ್ಲೊಂದು ಶಿವದೇವಾಲಯವಿದ್ದ ಬಗ್ಗೆ ಉಲ್ಲೇಖವಿದೆ. ಮುಂದೆ ಬರುವ ರಾಷ್ಟ್ರಕೂಟ ಅರಸರ ಕಾಲಕ್ಕೆ ರೋಣದ ಮಹಾಜನರು ಅಗ್ರಹಾರ ಸಂಸ್ಕೃತಿಯನ್ನು ಅಭಿವೃದ್ಧಿ ಪಡಿಸುತ್ತಾ ಪ್ರಭಾವ ಶಾಲಿಗಳಾದರು. ಈ ಅಗ್ರಹಾರದಲ್ಲಿ ಕ್ರಿ.ಶ. ೭೭೧ರಲ್ಲಿ ೮೪ ಜನರಿದ್ದ ಅಗ್ರಹಾರವು ಕ್ರಿ.ಶ. ೯೭೬ರಲ್ಲಿ ಈ ಮಹಾಜನರ ಸಂಖ್ಯೆ ೧೦೪ಕ್ಕೆ ಏರಿತು. ಕ್ರಿ.ಶ. ೧೧೧೧ರ ಹೊತ್ತಿಗೆ ಇದು ತರ್ಕಶಾಸ್ತ್ರ ಪರಿಣಿತದಿಂದ ಖ್ಯಾತಿ ಪಡೆದರೆ, ಹೈಂಗಕುಲದ ನಾಗವಿಷ್ಣುಮಯ್ಯನು ರೋಣದಲ್ಲಿ ವ್ಯಾಖ್ಯಾನ ಶಾಲೆ ಕಟ್ಟಿಸಿ ಅದಕ್ಕೆ ಭೂದಾನ ನೀಡಿದ್ದು ಉಲ್ಲೇಖಾರ್ಹಕವಾಗಿದೆ.

ಇಲ್ಲಿನ ಶಾಸನವೊಂದರಲ್ಲಿ ಕ್ರಿ.ಶ. ೯೪೨ರ ರಾಷ್ಟ್ರಕೂಟರ ಅರಸ ಮುಮ್ಮಡಿ ಕೃಷ್ಣನ ಭಾವ ಗಂಗ ಬೂತುಗನು ರೋಣದ ಅಗ್ರಹಾರದ ಮೇಲೆ ದಾಳಿ ಮಾಡುತ್ತಾನೆ. ಆದರೆ ರೋಣದ ಕೌಂಡಿನ್ಯ ಗೋತ್ರದ ಜೈನ ಬ್ರಾಹ್ಮಣನಾದ ಪಂಪಯ್ಯ ಎಂಬವನು "ನಾನೊಂದು ಅಕ್ಷತೆಯನಪ್ಪಂದ ವೀಯೆನೆಂದು" ನಿರ್ಧರಿಸಿ ಅವನೊಂದಿಗೆ ಹೋರಾಡಿ ವೀರ ಮರಣವನ್ನಪ್ಪು



* 'ವಚನ' ರಾಜೂರ, ತಾ. ರೋಣ, ಜಿ. ಗದಗ, – ೫೮೨ ೨೩೦

ತ್ತಾನೆ. ಅವರು ತಾವು ಅಳಿದರೂ ಅಗ್ರಹಾರವನ್ನು ಉಳಿಸಲು ಬಹಳಷ್ಟು ಪ್ರಯತ್ನಿಸುತ್ತಿದ್ದರಲ್ಲದೆ ಅದಕ್ಕಾಗಿ ರಕ್ತಹರಿಸಿದರು. ಪಂಪಯ್ಯ ಮಡಿದ ನಂತರ ಈ ಪ್ರತಿಭಟನೆ ಅಷ್ಟಕ್ಕೆ ನಿಲ್ಲದೇ ಅದು ಫಿನಿಕ್ಸ್ ಹಕ್ಕಿಯಂತೆ ಪುನರ್ಜನ್ಮ ತಾಳುತ್ತದೆ. ಪಂಪಯ್ಯನಂತೆ ಮತ್ತೊಬ್ಬ ವೀರನು ಅದೇ ಹಾದಿ ತುಳಿದು ವೀರಮರಣ ಪಡೆಯುತ್ತಾನೆ. ಈ ಬಗೆಗಿನ ಅಪೂರ್ವ ಶಾಸನಶಿಲ್ಪವೊಂದು ರೋಣದ ಹಾಲಣ್ಣವರ ಮನೆಹತ್ತಿರದ ಶಿವದೇವಾಲಯವೊಂದರ ಎದರು ಇದೆ, (ಅದು ಪಕ್ಕದ ಮನೆಯವರು ಅಡಿಪಾಯ ತೋಡುವಾಗ ದೊರೆತ ಶಾಸನ ಶಿಲ್ಪವಾಗಿದೆ.) ಕರಿಯಕಲ್ಲಿನಲ್ಲಿ ಕೆತ್ತಿದ ತುಂಬಾ ಕಲಾತ್ಮಕವಾದ ಈ ಶಿಲ್ಪ ಮೂರು ಹಂತದಲ್ಲಿದ್ದು ಈ ವೀರಗಲ್ಲಿನ ತಳಭಾಗ ನಾಶವಾಗಿ ಹೋಗಿದೆ. ವೀರನ ಮರಣ ಸ್ಪಷ್ಟವಾಗಿದ್ದು ಕೆತ್ತನೆ ತುಂಬಾ ಕುಸುರಿನಿಂದ ಕೂಡಿದೆ. ೬೨ ಸಾಲಿನ ಈ ಶಾಸನವು ಬಹಳಷ್ಟು ತ್ರುಟಿತವಾಗಿದೆ. ಇದು ರೋಣದ ಇತಿಹಾಸದ ಮೇಲೆ ಬಹಳಷ್ಟು ಬೆಳಕು ಚಲ್ಲುತ್ತದೆ.

ಪಂಪಯ್ಯನು ವೀರಮರಣವನ್ನಪ್ಪಿದ ೩೪ ವರ್ಷಗಳ ನಂತರ ರಾಚಗಿವರ್ಮಯ್ಯನೆಂಬವನು ಕೂಡಾ ಅರಸ ನೊಂದಿಗೆ ಹೋರಾಡಿ ವೀರಮರಣವನ್ನುಪ್ಪುತ್ತಾನೆ. ಇದು ವೀರಶಿಲ್ಪದಲ್ಲಿನ ಶಾಸನದ ಸಾರ. ಆದರೆ ಈ ಶಾಸನಕ್ಕೆ ಇತರ ಶಾಸನಕ್ಕಿಂತ ಬಹಳಷ್ಟು ಐತಿಹಾಸಿಕ ಮಹತ್ವವಿದೆ. ಪಂಪಯ್ಯ ಸೋಮಯಾಜಿಯ ಮಗನಾದ ರಾಚಂಗಿ ವರ್ಮಯ್ಯ ನೆಂಬವನು ರಾಷ್ಟ್ರಕೂಟ ಅರಸರ ಡಂಬಾಚಾರದ ವರ್ತನೆ ಯಿಂದ ಬೇಸತ್ತು ಅವರೊಂದಿಗೆ ಅಗ್ರಹಾರದ ಉಳಿವಿಗಾಗಿ ಹೋರಾಡಿ ಮಡಿಯುತ್ತಾನೆ. ಈ ಶಾಸನವು ಶೈವಪರವಾದ ಶಾಸನವಾಗಿದ್ದು ಈ ಅಗ್ರಹಾರದಲ್ಲಿದ್ದ ೧೦೪ ಜನ ಶೈವ ಬ್ರಾಹ್ಮಣರನ್ನು ರಾಷ್ಟ್ರಕೂಟ ಅರಸ ಖೊಟ್ಟಿಗನ ಮಗನಾದ ಕನ್ನರನೆಂಬ ಅರಸನು ದೀನದಲಿತರನ್ನು ಕರೆದು ಸಹಾಯ ಮಾಡುತ್ತಾನೆ, ಬುದ್ದಿ ಹೇಳುತ್ತಾನೆ. ಆಗ ರೋಣದಲ್ಲಿರುವ ಕಾಶ್ಯಪ ಗೋತ್ರದ ಬಳಗವಟ್ಟವಂಶದ ಪಂಪಯ್ಯ ಸೋಮಯಾಜಿಯ ಮಗನಾದ ರಾಚಿಂಗಿ ವರ್ಮಯ್ಯನು ಧರ್ಮ ಕಾರ್ಯಗಳಾದ ದೇವಾಲಯ, ಕೆರೆ ನಿರ್ಮಾಣದಲ್ಲಿ ದಾನ ದತ್ತಿಗಳನ್ನು ನೀಡುವಲ್ಲಿ ನಿರತನಾದ ಧರ್ಮವಂತ ನಾಗಿದ್ದನು. ಇವನಿಗೆ ಕನ್ನರದೇವನೆಂಬ ಅರಸನ ವರ್ತನೆಯು ಮೋಸದ್ದು ಮತ್ತು ಡಂಬಾಚಾರದ್ದೆಂದು, ಈ ಅಗ್ರಹಾರದ ಮೇಲೆ ಅಪ್ರತ್ಯಕ್ಷವಾದ ದಾಳಿ ಎಂದು ತಿಳಿದು ಅರಸನ ವರ್ತನೆಯನ್ನು ಪ್ರತಿಭಟಿಸಿ ಮಡಿಯುತ್ತಾನೆ. ಇದು ನಡೆದದ್ದು ಕ್ರಿ.ಶ. ೯೭೭ರ ಈಶ್ವರ ನಾಮ ಸಂವತ್ಸರದಲ್ಲಿ ಭಾದ್ರಪದ ಶುದ್ಧನವಮಿಯ ಆದಿತ್ಯವಾರದ ದಿನ ಎಂದು ಶಾಸನದಲ್ಲಿ ಉಲ್ಲೇಖಿತವಾಗಿದೆ. ಬಹಳಷ್ಟು ತ್ರುಟಿತವಾದ ಈ ಶಾಸನದ ಕೊನೆಯಲ್ಲಿ "ಸಸಿನ ಬರದಪಂ" ಎಂದು ಇರವುದರಿಂದ ಈ ಶಾಸನವನ್ನು ಯಾರೋ ಬರೆದಿರಬೇಕು. ಇದು ಈ ಶಾಸನದಲ್ಲಿನ ವಿವರಣೆಯನ್ನು ಇದನ್ನು ಶೋಧಿಸಿದ ವಿದ್ವಾಂಸರಾದ ಡಾ. ಎಚ್.ಆರ್. ರಘುನಾಥ ಭಟ್ಟರು ಕ್ರಿ.ಶ. ೯೪೨ರಲ್ಲಿನ ಮಡಿದ ಪಂಪಯ್ಯನೆಂದೂ ಈಗಿನ ಈ ಶಾಸನೋಕ್ತನಾದ ಪಂಪಯ್ಯನ ಮಗನೆ ರಾಚಿಂಗಿವರ್ಮಯ್ಯ ಎಂದೂ ಅಭಿಪ್ರಾಯಪಡುತ್ತಾರೆ. ಕ್ರಿ.ಶ. ೯೪೨ರ ಶಾಸನೋಕ್ತ ಪಂಪಯ್ಯನು ಕೌಂಡಿನ್ಯ ಗೋತ್ರದ ವಾಜಿಕುಲದ ಜೈನ ಬ್ರಾಹ್ಮಣನಾಗಿದ್ದಾನೆ. ಆದರೆ ಈಗ ದೊರೆತ ಶಾಸನೋಕ್ತ (ಕ್ರಿ.ಶ. ೯೭೬) ಪಂಪಯ್ಯಸೋಮಯಾಜಿಯು ಕಾಶ್ಯಪ ಗೋತ್ರದಲ್ಲಿ ಪ್ರಸಿದ್ಧನಾದ "ಬಳಗವಟ್ಟ" ವಂಶದವನು ಅಲ್ಲದೇ ಈತನು ಶೈವ ಬ್ರಾಹ್ಮಣನಾಗಿದ್ದಾನೆ. ಇದರಿಂದ ಇಲ್ಲಿನ ಪಂಪಯ್ಯ ಮತ್ತು ಈ ಶಾಸನದಲ್ಲಿರುವ ಪಂಪಯ್ಯ ಸೋಮಯಾಜಿ ಭಿನ್ನರಾಗಿದ್ದಾರೆ. ಈ ಇಬ್ಬರೂ ಒಬ್ಬರೇ ಆಗಿದ್ದರೆ ಕ್ರಿ.ಶ. ೯೭೬ರ ಶಾಸನದಲ್ಲಿ ಅಂದು ಮಡಿದ ಪಂಪಯ್ಯನ ಬಗ್ಗೆ ಶಾಸನಕಾರರು ಉಲ್ಲೇಖಿಸದೇ ಇರುತ್ತಿರಲಿಲ್ಲ ಹೀಗಾಗಿ ಈ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳಾಗಿದ್ದಾರೆ. ರಾಷ್ಟ್ರಕೂಟ ಅರಸರ ಹಾಗೂ ಅವರ ಅಧಿಕಾರಿಗಳ ದೌರ್ಜನ್ಯವನ್ನು ಸಾಮಾನ್ಯರಾದ ಅಗ್ರಹಾರ ದವರು ಪ್ರತಿಭಟಿಸಿ ಸಿಡಿದ ನಿದರ್ಶನಗಳು ಇತಿಹಾಸದ ತುಂಬಾ ವಿರಳವಾದರೂ, ರೋಣದ ಜನರ ಈ ರೊಚ್ಚು ಮಾತ್ರ ನಮ್ಮ ಗಮನ ಸೆಳೆಯುತ್ತದೆ.

ಈ ಶಾಸನವು ಬಹಳಷ್ಟು ಐತಿಹಾಸಿಕ ಮಹತ್ವವನ್ನು ಪಡೆದಿದೆ ರಾಷ್ಟಕೂಟ ಅರಸರ ಖೊಟ್ಟಿಗನ ಮಗನಾದ ಕನ್ನರನ ಬಗ್ಗೆ ಹೇಳುವ ಶಾಸನಗಳು ಬಹಳ ವಿರಳವಾಗಿವೆ. ರಾಷ್ಟ್ರಕೂಟರು ಸೋತು ನಾಲ್ಕನೆಯ ಇಂದ್ರನು ಬಂಕಾಪೂರಕ್ಕೆ ಬಂದಾಗ ಅಲ್ಲಿದ್ದ ಅಜಿತ ಸೇನಮುನಿಗಳು "ಶ್ರವಣ ಬೆಳಗೊಳಕ್ಕೆ ಹೋಗು, ಅಲ್ಲಿ ಇನ್ನೂ ಜೈನ ಧರ್ಮಾವಲಂಬಿ ಗಳಾದ ಗಂಗರಿದ್ದಾರೆ" ಎಂದು ಹೇಳಿ ಕಳಿಸಿದರು. ಈ ಹಿನ್ನೆಲೆಯಲ್ಲಿ ರಾಷ್ಟ್ರಕೂಟರ ಆಳ್ವಿಕೆ ಕ್ರಿ.ಶ. ೯೭೨-೭೪ರಲ್ಲಿ ಮುಕ್ತಾಯವಾಗದೆ ಮುಂದುವರಿಯಿತು. ಈ ಶಾಸನದಲ್ಲಿ ಕನ್ನರ ದೇವನು ಕ್ರಿ.ಶ. ೯೭೬ರಲ್ಲಿದ್ದ ಬಗ್ಗೆ ಹೇಳುವದರಿಂದ, ರಾಷ್ಟ್ರಕೂಟರ ಆಳ್ವಿಕೆ ಕ್ರಿ.ಶ. ೯೭೪ಕ್ಕೆ ಮುಗಿಯದೇ ಅವರು ಕ್ರಿ.ಶ. ೯೭೬ರವರೆಗೆ ಇದ್ದ ಬಗ್ಗೆ ಈ ಶಾಸನವು ಬೆಳಕು ಚೆಲ್ಲುತ್ತದೆ. ಇದರಿಂದ ಇದು ಬಹಳಷ್ಟು ಮಹತ್ವ ಪೂರ್ಣವಾಗಿದ್ದು, ರಾಷ್ಟ್ರಕೂಟ ಅರಸರ ಆಳ್ವಿಕೆಯ ಮೇಲೆ ಇದು ಬೆಳಕನ್ನು ಚಲ್ಲುತ್ತದೆ.

ರೋಣದ ಜನರ ಬಗ್ಗೆ ಕ್ರಿ.ಶ. ೧೦೨೨ರ ಶಾಸನ ವೊಂದರಲ್ಲಿ ಅಲ್ಲಿದ್ದ ಮಾಚಿಮಯ್ಯನ ಎಂಬವನ ಸಜ್ಜನತೆ, ಭಕ್ತಿ ಬಗ್ಗೆ ಅವನ ದಾನಗುಣದ ಬಗ್ಗೆ "ಭೂಮಿಯೊಳ್

ಸಚ್ಚಾರಿತ್ರವಂತನೆಂದು" ಹೊಗಳುತ್ತದೆ. ಹೀಗೆ ಒಂದೆಡೆ ಪ್ರತಿಭಟನೆ ಮನೋಭಾವದ ಧೀಮಂತರಿದ್ದರೆ, ಮತ್ತೊಂದೆಡೆ ಯಲ್ಲಿ ಚರಿತ್ರಾರ್ಹರಾದ ವ್ಯಕ್ತಿಗಳು ರೋಣ ದಲ್ಲಿದ್ದರೆಂದು ಈ ಎಲ್ಲ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಆದರೆ ಇಲ್ಲಿರುವ ಅನೇಕ ಶಾಸನಗಳು ದುಸ್ಥಿತಿಯಲ್ಲಿವೆ. ಇವುಗಳ ಚಾರಿತ್ರಿಕ ಮಹತ್ವವನ್ನು ಜನರು ಅರಿತು ಅವುಗಳ ಸಂರಕ್ಷಣೆಗೆ ಎಂದಿಗಿಂತ ಇಂದು ಮುಂದಾಗುವದು ಅವಶ್ಯಕವಾಗಿದೆ. ಈ ಅಪೂರ್ವ ವೀರಗಲ್ಲಿನ ಶಾಸನವನ್ನು ವಿದ್ವಾಂಸರು ಗಮನ ಹರಿಸಬೇಕಾಗಿದೆ.

### ಶಾಸನದ ಪಾಠ

೧ ಸ್ವಸ್ತಿ ॥ ಶಕ ವರ್ಷ ೮೯೮ನೆಯ ಈಶ್ವರ ಸಂವತ್ಸರದ ಭಾದ್ರಪದ ಶುದ್ಧ ನವಮಿಯು ಮಾದಿತ್ಯವಾರದಂದು ಕನ್ದರ್ಪ್ಪ
೨ ಹರಮೂರ್ತಿಗಳ್ ವಿಪ್ರೇಶ್ವರರಂ ಶ್ರೀನೂಱನಾಲ್ವರಂ ಕನ್ನರನೆಂಬರಸಂ ಬರಸಿ ಕರಂ ಪತಿತರನೊಶಕೊಳ - ವೇಳ್ಕುಮೆ
೩ ನ್ನುನಿಗ್ರ
೪ ಹಿಪಾಗಳ್
೫ ಪಾತ್ರಂಪ್ರ
೬ ಸಿದ್ಧ ಕಾ
೭ ಶ್ಯಪಗೊಂ
೮ ತ್ರಂ ನುತ
೯ ಬಳಗ
೧೦ ವಟ್ಟವಂ
೧೧ ಶಂ ವಿಳಸ
೧೨ ದ್ಗೋತ್ರಂ ವಿಚಿ
೧೩ ತ್ರನಂಬುಜ
೧೪ ನೇತ್ರ ಪಂಪ
೧೫ ಯ್ಯಸೋಮಯಾ
೧೬ ಜಿಯ ಪು
೧೭ ತ್ರ ರಾಚಗಿಂ
೧೮ ವಮ್ಮಯ್ಯ
೧೯ ನೆಂಬೊಂ ಕು
೨೦ ಮಾರಕ
೨೧ ನಾಂಲ್ಲಿಸೆ (ಗೆ)
೨೨ ರಗುಗೆ
೨೩ ಮ್ಧಿನಪ್ಪೆಡೆ
೨೪ ವೃತ್ತಿಲೋಪ
೨೫ ಮುಕ್ಕುಂ ಸ್ಥಾನದ ಪೆಂಪು ಮೆನ್ನೊಳ್ಪುಂ ಪೊಸಗುಮೆನ್ನಿರ ಲಾಗದೆನ್ನುದತ ದ್ವಿಜರಾಜ ಸಭೆಗಳೆರಡುಂಜೀಯ ಮನೆ ತನ್ನುಣ್ಕುಂ ನೋಡದ ಪರಿ
೨೬ ಚ್ಛೇದವೆನ್ನದಿದು ಮಹಾಜನಕ್ಕೆ ಹೆದ ಮಟ್ಟು ಕಟ್ಟಿದ ಪಱ ಅಲಗಂ ತೊಟ್ಟನೆ ಕಿಱ್ತು ಕೊಣ್ಣರಸಂಗೆ ಕಟ್ಟಿದಿರಾಗಿನಿಳ್ದು ॥

೨೭ (ಪ ತಂ)
೨೮ . . . . . . . . . .
೨೯ . . . . . . . . . .
೩೦ . . . . . . . . . .
೩೧ . . . . . . . . . .
೩೨ . . . . . . . . . .
೩೩ ದ್ವಿಪೊಜ್ಜ
೩೪ ಕೀರ್ತಿಗೆ
೩೫ ಗುಜೆಯಾ
೩೬ ಗಿರೋಣ
೩೭ ದ ಚ (ಲ)
೩೮ . .......
೩೯ ದ್ಧರಣೀ ವಿಭಾಗ
೪೦ ದೊಳ್ ॥ ಇಂತುಜ
೪೧ ಸಕ್ಕೆ ನೊನ್ತಣುಗ
೪೨ ನೊಳ್ಮನ ಕ್ಷತ್ರಂ ಸ
೪೩ ನ್ತತ ಮಾಳ್ವಮಾಣ್ದು
೪೪ ಬೆಸನಂ ಗಳ್ಗಂನು
೪೫ ತ್ತಮಾ ಸತ್ರಮವು
೪೬ ನೋಜನ್ತಕ ಗೇಹ
೪೭ ಮುನ್ನತ ತಟಾಕ
೪೮ ಮನೇಕ ವಿಧಸ್ವ
೪೯ ಧರ್ಮ ಮೆನ್ದಿನ್ತಿವ
೫೦ ನೆಯ್ದು ನಿರ್ವಹಿಸಿ
೫೧ ದಯ್ಯ ಮನೇಂ ಸು
೫೨ ಕೃತಾರ್ತ್ಥ ನಾದನು ॥
೫೩ ಸಾಯಿಸ ಹೋದ
೫೪ ರಂ ಓಡಿದು ದಾಯ
೫೫ ಸ ಮೆಸ್ಟ ವನರ್ತ್ಥ
೫೬ ಮಂಪಲ ಚ್ಛೆಯ
೫೭ ನೆ ಕೊಣ್ಡ ಪಾತ್ರಮ್
೫೮ (ನಿ) ಹಾಯದಿಗಿಯ
೫೯ (ಅ) ಜಿಲ್ಲಿ ಪಾತದ ಜೀ
೬೦ ಯನ್ ತನ್ನ ಸತಿ
೬೧ (ನ)ಂ ಬರ (ದಪಂ)...

ಶ್ರೀಮತಿ ಹನುಮಾಕ್ಷಿ ಗೋಗಿ*

# ಲಕ್ಷ್ಮೇಶ್ವರದ ಹೊಸ ಶಾಸನಗಳು

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ದೊಡ್ಡ ಊರು ಲಕ್ಷ್ಮೇಶ್ವರ. ಸುಮಾರು ಹನ್ನೆರಡನೆಯ ಶತಮಾನದಲ್ಲಿ ನಿರ್ಮಾಣಗೊಂಡ ಲಕ್ಷ್ಮಣೇಶ್ವರ ದೇವಾಲಯದ (ಇಂದಿನ ಲಕ್ಷ್ಮಿಲಿಂಗನ ಗುಡಿ) ಕಾರಣದಿಂದಾಗಿ ಪ್ರಾಚೀನ ಪುಲಿಗೆರೆ ಹೆಸರಿನ ಈ ಊರು ಲಕ್ಷ್ಮೇಶ್ವರ ಎಂದು ಕರೆಸಿಕೊಂಡು ಇಂದಿಗೂ ಅದೇ ಹೆಸರಿನಿಂದ ಕರೆಸಿಕೊಳ್ಳುತ್ತಿದೆ. ಪ್ರಾಚೀನ ಕಾಲದ ಎರಡರುನೂರರ ನಾಡು ಎಂದು ಕರೆಸಿಕೊಂಡ ಈ ನಾಡಿನಲ್ಲಿ ಬೆಳ್ವೊಲ ೩೦೦ ಮತ್ತು ಪುಲಿಗೆರೆ ೩೦೦ ಪ್ರಾಂತಗಳು ಸಮಾವೇಶಗೊಳ್ಳುತ್ತವೆ. ಈ ಪುಲಿಗೆರೆ ೩೦೦ ಪ್ರಾಂತದ ರಾಜಧಾನಿ ಇದೇ ಪುಲಿಗೆರೆ. ಬಸವ ಪೂರ್ವ ಯುಗದ ಶರಣ ಆದಯ್ಯ ಇದೇ ಊರಲ್ಲಿದ್ದ ಸುರಹೊನ್ನೆ ಬಸದಿಯನ್ನು ಮಾರ್ಪಡಿಸಿ, ಸೌರಾಷ್ಟ್ರದಿಂದ ಸೋಮನಾಥನನ್ನು ತಂದು ಇಲ್ಲಿ ಪ್ರತಿಷ್ಠಾಪಿಸಿದನೆಂಬ ಉಲ್ಲೇಖಗಳು ಕಾವ್ಯಗಳಲ್ಲಿವೆ. ಶಿರಸ್ಸು ಪವಾಡ ಮೆರೆದ ಅಬ್ಬಲೂರಿನ ಏಕಾಂತದ ರಾಮಯ್ಯ ಪವಾಡದ ಸಂಚಾರ ಕಾಲದಲ್ಲಿ ಇದೇ ಪುಲಿಗೆರೆಯ ಸೋಮನಾಥನ ದರ್ಶನ ಪಡೆದಿದ್ದ. ಇದೇ ಸೋಮನಾಥನ ಹೆಸರನ್ನು ಕಳಚೂರ್ಯ ಬಿಜ್ಜಳ ತನ್ನ ಮಗನಿಗೆ ಸೋಮದೇವನೆಂದು ಇಟ್ಟಿದ್ದು, ಆತ ರಾಯಮುರಾರಿ ಸೋವಿದೇವನೆಂದು ಪ್ರಖ್ಯಾತಿಯನ್ನು ಹೊಂದಿದ. ಪುರಾಣ ಕಾಲದ ಸಪ್ತರ್ಷಿಗಳಲ್ಲಿ ಒಬ್ಬನಾದ ಅಗಸ್ತ್ಯ ಮಹರ್ಷಿ ಇಲ್ಲಿ ತಂಗಿದ್ದನೆಂದು ಅವನ ಹೆಸರಿನಲ್ಲಿ ಅಗಸ್ತ್ಯತೀರ್ಥ ನಿರ್ಮಾಣವಾಯಿತೆಂದೂ ಪ್ರತೀತಿಯಿದ್ದು ಶಾಸನ ಉಲ್ಲೇಖಗಳೂ ಇವೆ.

ಬಾದಾಮಿ ಚಾಲುಕ್ಯ ಅರಸ ವಿನಯಾದಿತ್ಯನಿಂದ ಆರಂಭಿಸಿ ವಿಜಯನಗರದ ಅರಸರಿಂದಲೂ ದಾನ ಪಡೆದ ಶಂಖಬಸದಿಯೂ ಇಲ್ಲಿದೆ. ಬೌದ್ಧ, ಜೈನ, ಶೈವ, ವೈಷ್ಣವ ಈ ಎಲ್ಲ ಚತುಸ್ಸಮಯಗಳು ನೆಲೆನಿಂತ ಊರಿದು. ಶುದ್ಧಶೈವರು ಬಹುಕಾಲ ಪ್ರಭಾವ ಬೀರಿ ನೂರಾರು ಶಿವ ದೇವಾಲಯಗಳನ್ನು ನಿರ್ಮಾಣ ಮಾಡಿದ ನಾಡಿದು. ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ, ಕಳಚೂರ್ಯ, ಯಾದವ, ವಿಜಯನಗರದ ಅರಸರು, ಮುಸಲ್ಮಾನರ ಆಡಳಿತಕ್ಕೆ ಒಳಪಟ್ಟ ನೆಲವಿದು. ವಾಣಿಜ್ಯ ವ್ಯವಹಾರಗಳನ್ನು ನಡೆಸಿದ ಉಲ್ಲೇಖಗಳಿಗೂ ಇಲ್ಲಿ ಕೊರತೆಯಿಲ್ಲ.

ಇಂತಹ ಬಹುವಿಧ ಕಾರ್ಯಚಟುವಟಿಕೆಗಳಿಗೆ ನೆಲೆಯಾಗಿ ಇತಿಹಾಸ ಸಂಸ್ಕೃತಿಗಳಿಂದ ಸಮೃದ್ಧವಾದ ಈ ಊರಿನಲ್ಲಿ ಧಾರವಾಡ ಜಿಲ್ಲೆಯ ಶಾಸನಸೂಚಿಯಲ್ಲಿ ಕಾಣಿಸಿರುವಂತೆ ಒಟ್ಟು ೬೫ ಶಾಸನಗಳು ದೊರೆತಿವೆ. ಇದರಲ್ಲಿ ೫೪ ಶಾಸನಗಳು ಪ್ರಕಟಿತಗೊಂಡಿದ್ದರೆ ೧೧ ಶಾಸನಗಳು ಪ್ರಕಟಗೊಂಡಿಲ್ಲ. ಎಸ್‌ಐಐ ೨೦ ಶಾಸನ ಸಂಪುಟದಲ್ಲಿ ೪೧ ಶಾಸನಗಳು, ಐಎ ೭ರಲ್ಲಿ ೪ ಶಾಸನಗಳು, ಇಐ ೬ರಲ್ಲಿ ೩, ಇಐ ೪ರಲ್ಲಿ ೧, ಇಐ ೧೪ರಲ್ಲಿ ೧, ಇಐ ೧೬ರಲ್ಲಿ ೪ ಶಾಸನಗಳು ಪ್ರಕಟಗೊಂಡಿವೆ. ಅಪ್ರಕಟಿತವಾದ ೧೧ ಶಾಸನಗಳ ವಿವರಗಳು ಎಆರ್‌ಎಸ್‌ಐಇ ವರದಿಗಳಲ್ಲಿವೆ.

ಲಕ್ಷ್ಮೇಶ್ವರದಲ್ಲಿ ದೊರೆತ ಶಾಸನಗಳ ಕಾಲವ್ಯಾಪ್ತಿ ಕ್ರಿ.ಶ. ೬೮೩ ರಿಂದ ೧೭ನೆಯ ಶತಕದವರೆಗೆ ವ್ಯಾಪಿಸಿದೆ. ಇವುಗಳಲ್ಲಿ ಬಾದಾಮಿ ಚಾಲುಕ್ಯರ ೬ ಶಾಸನಗಳಿವೆ. ವಿನಯಾದಿತ್ಯನ ೧, ಪುಲಿಕೇಶಿಯ ೧, ವಿಜಯಾದಿತ್ಯನ ೨, ಇಮ್ಮಡಿ ವಿಕ್ರಮಾದಿತ್ಯನ ೨ ಶಾಸನಗಳು ಸೇರಿವೆ. ರಾಷ್ಟ್ರಕೂಟರ ೩ ಶಾಸನಗಳಿದ್ದು, ೩ನೇ ಗೋವಿಂದನ ಕಾಲದ ೧, ಮೂರನೆಯ ಇಂದ್ರನ ಕಾಲದ ೨ ಶಾಸನಗಳಿವೆ. ಗಂಗ ಮಾರಸಿಂಹನ ೧ ಶಾಸನವಿದೆ. ಕಲ್ಯಾಣ ಚಾಲುಕ್ಯರ ಕಾಲದ ೧೯ ಶಾಸನಗಳಿದ್ದು, ಮೊದಲನೆಯ ಸೋಮೇಶ್ವರನ ೧, ಎರಡನೆಯ ಸೋಮೇಶ್ವರನ ೧, ೬ನೆಯ ವಿಕ್ರಮಾದಿತ್ಯನ ೧೦, ೩ನೆಯ ಸೋಮೇಶ್ವರ ೩, ಎರಡನೆಯ ಜಗದೇಕಮಲ್ಲನ ೨, ಮೂರನೆಯ ತೈಲನ ೧, ನಾಲ್ಕನೆಯ ಸೋಮೇಶ್ವರನ ೧ ಶಾಸನಗಳು ಸೇರಿವೆ. ಕಳಚೂರ್ಯ ಅರಸರ ಕಾಲದ ೪ ಶಾಸನಗಳಿದ್ದು, ಇವುಗಳಲ್ಲಿ ೩ ಬಿಜ್ಜಳನದ್ದಾಗಿದ್ದರೆ, ೧ ಸಂಕಮನ ಕಾಲದ್ದಾಗಿದೆ. ಯಾದವ ಚಕ್ರವರ್ತಿಗಳ ಕಾಲದ ೮ ಶಾಸನಗಳಿದ್ದು, ಇವುಗಳಲ್ಲಿ ಮೊದಲನೆಯ ಸಿಂಘಣನ ಶಾಸನಗಳು ಎರಡಾದರೆ ಎರಡನೆಯ ಸಿಂಘಣನ ೩ ಶಾಸನಗಳು, ಕನ್ನರನ ೧ ಹಾಗೂ ರಾಮಚಂದ್ರನ ೨

* ಎಚ್.ಐ.ಜಿ.-೨೭, ಕಾರ್ತಿಕಶ್ರೀ, ನವನಗರ, ಹುಬ್ಬಳ್ಳಿ.

ಶಾಸನಗಳಿವೆ. ವಿಜಯನಗರದ ಅರಸರ ಕಾಲದ ೫ ಶಾಸನಗಳು ದೊರೆತಿದ್ದು, ಸಾವಣ್ಯ ಒಡೆಯನ ೧, ಮೊದಲನೆಯ ದೇವರಾಯನ ೧, ಸದಾಶಿವರಾಯನ ೩ ಶಾಸನಗಳು ದೊರೆತಿವೆ. ಹಾಗೆಯೇ ೩ ಶಾಸನಗಳು ಮುಸಲ್ಮಾನರ ಆಡಳಿತ ಕಾಲದ್ದಾಗಿವೆ.

ಪ್ರಕಟಿತ ೫೪ ಶಾಸನಗಳಲ್ಲಿ ೧೫ ಜೈನ ಶಾಸನಗಳು, ೩೧ ಶೈವ ಶಾಸನಗಳು, ೨ ವೈಷ್ಣವ ಶಾಸನಗಳು, ೧ ವಾಗ್ದೇವಿಯ ಶಾಸನ – ಹೀಗೆ ೪೯ ಶಾಸನಗಳು ದಾನ ಶಾಸನಗಳಾಗಿವೆ. ೧ ನಿಷಧಿ ಶಾಸನವಿದ್ದು, ೪ ವೀರಗಲ್ಲುಗಳು ಸೇರಿವೆ. ಮಾಸ್ತಿ ಶಾಸನಗಳು ಇಲ್ಲಿ ದೊರೆತಿಲ್ಲ.

ಈಗ ಹೊಸದಾಗಿ ಇನ್ನೂ ೧೫ ಶಾಸನಗಳು ದೊರೆತಿವೆ. ೧೪ ಕನ್ನಡ ಲಿಪಿಯಲ್ಲಿದ್ದರೆ, ೧ ದೇವನಾಗರಿ ಲಿಪಿಯಲ್ಲಿದೆ. ೧೩ ಕನ್ನಡ ಭಾಷೆಯಲ್ಲಿದ್ದರೆ ೨ ಸಂಸ್ಕೃತ ಭಾಷೆಯಲ್ಲಿವೆ. ಇವುಗಳಲ್ಲಿ ೪ ಶಾಸನಗಳ ಪಠ್ಯವನ್ನು ದಕ್ಷಿಣಭಾರತ ಇತಿಹಾಸ ಸಮ್ಮೇಳನದಲ್ಲಿ ೨೦೦೬ರ ಜನವರಿಯಲ್ಲಿ ನಾನು ಮಂಡಿಸಿದ್ದೇನೆ. ಇತಿಹಾಸ ಅಕಾಡೆಮಿ ಸಮ್ಮೇಳನದಲ್ಲಿ ಡಾ. ಪರಶಿವಮೂರ್ತಿಯವರು ಗೌರಲೆಯ ಶಾಸನ ಕುರಿತು ಪ್ರಬಂಧವನ್ನು ಮಂಡಿಸಿದ್ದಾರೆ. ಇನ್ನುಳಿದ ೧೦ ಶಾಸನಗಳ ಪಠ್ಯವನ್ನು ಈ ಪ್ರಬಂಧದಲ್ಲಿ ನೀಡಲಾಗಿದೆ.

**೧. ಶಂಖ ಬಸದಿಯ ಆವರಣದ ನಿಷಧಿ ಶಾಸನ ; ಸುಮಾರು ೧೧ನೆಯ ಶತಮಾನ.**

೮" ಅಗಲ ೨೪" ಎತ್ತರದ ಕರಿಕಲ್ಲಿನ ಈ ನಿಷಧಿ ಶಾಸನದ ನಾಲ್ಕು ಭಾಗಗಳು ಪ್ರಕಟಿತಗೊಂಡಿವೆ. ಶಾಸನದ ಮೇಲ್ಭಾಗದಲ್ಲಿ ಶಿಷ್ಯನೊಬ್ಬ ಕೈ ಮುಗಿದು ಕುಳಿತ ಉಬ್ಬುಶಿಲ್ಪವಿದೆ. ಶಿಷ್ಯನ ಮುಂದೆ ಅಟ್ಟವಣೆ ಕೋಲಿದೆ.

ಸುಮಾರು ೧೧ನೆಯ ಶತಮಾನದ ಅಕ್ಷರಗಳಲ್ಲಿ ಸಂಸ್ಕೃತದಲ್ಲಿರುವ ಈ ಶಾಸನದಲ್ಲಿ ಪಾಣ್ಡ್ಯದೇಶ, ತೀರ್ಥ, ಮುನಿ ಎಂಬ ಶಬ್ದಗಳನ್ನು ಗುರುತಿಸಬಹುದಾಗಿದೆ.

೧ ತಃ ಪಾಣ್ಡ್ಯದೇಶೇ
೨ ತೀರ್ತ್ಥೇ ಮುನಿನಾಂ ವ
೩ ಣನುತ ಸ್ತುತ ತೇ
೪ ತ್ರಿಸ್ನ . ಳಿ
೬ . ಶೊ . ತೆ
೭ . . ನರಿ . . *

* ಶಾಸನದ ನಾಲ್ಕೂ ಮುಖಗಳು ಒಡೆದಿವೆ.

**೨. ಆರ್.ಎಫ್. ಪುರಾಣಿಕಮಠ ಅವರ ತೋಟದ ಬಾವಿ ದಂಡೆಯ (ನಂದೆಮ್ಮನ ಬಾವಿ) ಶಾಸನ; ಸುಮಾರು ೧೧ನೆಯ ಶತಮಾನ**

೪' ಎತ್ತರ ೧' ಅಗಲದ ಚೌಕಾಕಾರದ ಕಂಬದಂತಿದ್ದು, ಮೇಲೆ ತ್ರಿಕೋನಾಕಾರವಾಗಿದೆ. ಮೇಲಿನ ಭಾಗ ಸಂಪೂರ್ಣ ಸವೆದಿದೆ, ಅಕ್ಷರಗಳು ಕಾಣುವುದಿಲ್ಲ. ೧೧ನೆಯ ಶತಮಾನದ ಅಕ್ಷರಗಳೆಂದು ಲಿಪಿಸಾದೃಶ್ಯದಿಂದ ಗುರುತಿಸಬಹುದಾಗಿದೆ.

ಕುಮಾರಣ್ಣನ್ದಿ ಎನ್ನುವ ಜೈನಯತಿಯೊಬ್ಬರ ವರ್ಣನೆಯಿದ್ದು, ಅವರು ಶಂಖಜಿನಾಲಯದಲ್ಲಿ ಸನ್ಯಸನ ವಿಧಾನದಿಂದ ಮುಡಿಪಿ ಮೋಕ್ಷವನ್ನು ಹೊಂದಿದರೆಂದು, ಅವರ ಶಿಷ್ಯ ಗುಣಣನ್ದಿ ಭಟಾರರು ತಮ್ಮ ಗುರುಗಳ ಪರೋಕ್ಷ ನಿಮಿತ್ತವಾಗಿ ನಿಸಿದಿಗೆಯ ಶಾಸನವನ್ನು ನಿಲ್ಲಿಸಿದರೆಂದು ಶಾಸನ ಉಲ್ಲೇಖಿಸುತ್ತದೆ ಹಾಗೂ ಈ ನಿಷಿಧಿ ಶಾಸನವನ್ನು ಕೇತೋಜ ರಚಿಸಿದನೆಂದೂ ತಿಳಿಸುತ್ತದೆ.

ಶಾಸನದಲ್ಲಿ ಮಿತಿಯನ್ನು ಹೇಳಿದ್ದರೂ ಅಸ್ಪಷ್ಟವಿರುವುದರಿಂದ ಖಚಿತವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಕ್ರಿ.ಶ. ೯೬೮ ಮತ್ತು ೧೦೨೮ರಲ್ಲಿ ವಿಭವ ಸಂವತ್ಸರವಿದ್ದರೂ ಉಳಿದ ವಿವರಗಳು ಹೊಂದುವುದಿಲ್ಲ. ಲಭ್ಯವಿರುವ ಶಾಸನದ ಪಾಠವಿಂತಿದೆ –

೧ ರ್ಯ್ಯಗುಣ ದ್ವಿಮುಕನಾ ವಿಭುಗಳೆನೆ
೨ ಭುವನ ವ್ಯಾಪಿತ ಕೀರ್ತ್ತಿ ಕುಮರಣ
೩ ನ್ದಿ ಮುನೀನ್ದ್ರ . . ಹತ್ಸಾಸನ ದಿವಾ
೪ ಕರಣನ್ದಿ ಸಮಾನರಖಿಳ ಗುಣಗಣ
೫ ನಿಳಯರ್ ಪರಹಿತರ್ ಮಯೂಕರ್ ಪರ
೬ ಮ ತಪರ್ ಕುಮರಣನ್ದಿ ಗುರುಗಳ್ ಧರೆಯೊ
೭ ಳ್ ॥ ಸ್ವಸ್ತಿ ಸಕವರ್ಷ . ೯ . . ನೆಯ ವಿಭವ ಸಂ
೮ ವತ್ಸರದ ಮಾರ್ಗ್ಗಸಿರ ಮಾಸದ ಸುದ್ಧ ಪಞ್ಚ
೯ ಮಿ ಸುಕ್ರವಾರದನ್ದು (ವ) ತದ ಕುಮಾರಣ
೧೦ ನ್ದಿ ವಿಮುಕ್ತ ಭಟಾರರೆ ಸಂಕ ಜಿನಾಲಯದೊ
೧೧ ಳ್ಸನ್ಯಸನ ವಿಧನದಿಂ ಮುಡಿಪಿ ಮೋಕ್ಷ
೧೨ ಕ್ರಮದೆ ಕೊಣ್ಡ ॥ ಇವರ ಸಿ
೧೩ ಷ್ಯರ್ ಗುಣಣನ್ದಿ ಭಟಾರರ್ ತಂಮ್ಮ ಗು
೧೪ ರುಗಳ್ಗೆ ಪರೋಕ್ಷವಿನಯ ನಿಸಿಧಿ
೧೫ ಗೆಯ ಕಲ(ಲ್ಲ) ನಿಜೆಸಿದರ್ ॥ ಕೇತೋಜ
೧೬ ನ ಬೆಸ

### ೩. ಸೋಮೇಶ್ವರ ದೇಗುಲದ ಆವರಣದಲ್ಲಿ ಸಿಕ್ಕ ಕೇಸಿಮಯ್ಯನ ಶಾಸನ ; ಸುಮಾರು ೧೧ನೆಯ ಶತಮಾನ

೫೨" ಉದ್ದ ೧೧" ಅಗಲದ ಕಲ್ಲಿನಲ್ಲಿ ೩೮" ಗಳವರೆಗಿನ ಭಾಗದಲ್ಲಿ ಶಾಸನವಿದೆ. ಶಾಸನದ ಕಲ್ಲನ್ನು ಸಮಭಾಗವಾಗಿ ಒಡೆಯಲಾಗಿದೆ. ಈಗ ದೊರೆತಿರುವುದು ಕೇವಲ ಅರ್ಧಭಾಗ ಮಾತ್ರ ಎನ್ನುವುದನ್ನು ಗಮನಿಸಬೇಕು.

ಸುಮಾರು ೧೧ನೆಯ ಶತಮಾನದ ಅಕ್ಷರಗಳೆಂದು ಲಿಪಿಸಾದೃಶ್ಯದಿಂದ ಗುರುತಿಸಬಹುದಾಗಿದೆ. ಶಾಸನ ಬಹುಪ್ರಮಾಣದಲ್ಲಿ ತ್ರುಟಿತಗೊಂಡಿರುವುದರಿಂದ ವಿವರಗಳು ಲಭ್ಯವಿಲ್ಲ. ಮಹಾಪ್ರಚಣ್ಡ ದಣ್ಡನಾಯಕ ಕೇಸಿಮಯ್ಯ, ಮನುಮಾರ್ಗ ಜಯಕೇಶಿದೇವ, ಪುರಿಕರನಗರ, ಪುಲಿಗೆಜೆ ನಾಡುಗಳ ಉಲ್ಲೇಖವಿದ್ದು, ಸೋಮೇಶ್ವರದೇವರ ಪೂಜೆಗೆ ಭೂದತ್ತಿ ನೀಡಿದುದನ್ನು ತಿಳಿಸುತ್ತದೆ. ಶಾಸನದ ಲಭ್ಯವಿರುವ ಪಾಠ ಕೆಳಗಿನಂತಿದೆ :–

೧ . . . . . ತ್ರಮ ಕದ . . . . . .
೨ . . . . . ಯಾನಿಕದಂ . . . . . .
೩ . . . . . ಯನಂ ಯುಗ್ಮಕ್ಕೆರೆಪ . . . .
೪ . . . . . ಕೇಶವನದಟ ಚಮೂಪಾ . . .
೫ . . . . . ಮನ್ದಿದ ಚಿಂತಾಮಣಿ ಬಿಳೆಯ . .
೬ . . . . . ವೃತಂ ನಂಗೀಕೃತಗಾಮಿನಿ ಪ್ರಿಯರ . .
೭ . . . . . ರುಂ@ ಸ್ವಸ್ತಿ ಸಮಸ್ತ ಪ್ರಶಸ್ತಿಸಹಿತಂ . .
೮ . . . . . ಹಾಪ್ರಚಣ್ಡ ದಣ್ಡನಾಯಕಂ ಕೇಸಿಮಯ್ಯ . .
೯ . . . . . ಗೆಯ್ಯುತ್ತಮಿರೆ ॥ @ ತತ್ಪಾದ ಪಯೋಜ ಮರಾಕರ . .
೧೦ . . . . . ವೃ । . ಣಿಪಾಳ ಮೂದಮಿಳ ಜಳಮಾ ರಾಮ . .
೧೧ . . . . . ಶೌರ್ಯ್ಯನೆನಲ್ಕೆ ಪೋಲ್ವರೆ . ರಶ್ರೀತಾಕರಂ . . ಜೀಯ . .
೧೨ . . . . . ರ್ಥ ನಯಮಂಯೆನಿಪ್ಪಣರಿ . ಪದ್ಮತಯೆ. ಮಾಜಾಸ
೧೩ . . . . . ನಯರಸದಂತಂ ಕೊಳಾಹಿ ಯಸ್ಯ ತಾರಸ್ರ . ೦ . . . . .
೧೪ . . . . ಮನ್ಮಥಾಚಾರನನ್ಯವಧೂಪುತ್ರನ ತದ್ಯಗೋತ್ರ . . . .
೧೫ . . . . . ಳಳು ಹಸುಗೆ ದರ್ಪ್ಪಿತಾಫಳಂ ನುಡಿವೀಗಡಿನ ಮನು ತೆ . . . .
೧೬ . . . . . . . ಯರೆಸೆದಣ್ಡಿದಮೀಶ ನವೋತ್ಪಳ ಚಂದ್ರಲೆ ನೆಗಳೆ ವಸು . .
೧೭ . . . . . ಬೂದ್ವೀಪಮ ಭೋಗಿದೇವ ಸಯಿತಮಂ ತಲ್ಲಸದ್ವಾರತ . .
೧೮ . . . . . ನದಿ ಕಾಸಾರುಳಿಕಜೀಪುದ್ಯ ಪುರಿಕರ ಖ್ಯಾತದೆ . .
೧೯ . . . . . . . ರಿದೇವನೆಸೆದಂ ಜಸದಿಂ ॥ ವೃ ॥ ವನಿತಾ ಚಿತ್ತ ಚಮತ್ಕೃತಿ ವದಾ . .
೨೦ . . . . . ಜ ಸಾವಾನ್ಯನೇ ಮನುವಾರ್ಗ್ಗ ಜಯಕೇಶಿದೇವನದಟಿಂ ಕ್ಷತ್ರಾ . . .
೨೧ . . . . . . ದೊಳಾಯ್ದಾ ಪುರಿಕರನಗರಂ ॥ ನನ್ದಿಯು ಮಹಿಭೂ . .
೨೨ . . . . . . . ಮಹಾಮಹಿಮನೆ ಪ್ರಮಥಗಣಂಗಳುಂ . . . . .
೨೩ . . . . . . . ರಿಗಂ ಜಟವಿಟಕ ಬ್ರಹ್ಮಸೂತ್ರಾಕ್ಷಮಾಳಾ ವಿಧೃತಮ . . . .
೨೪ . . . . . . . ಲ್ವತ್ತೆಂಟು ಸಹಸ್ರ ಭೂಮಿಯೊಳಗಣ ಕ್ರಪಿಷ್ಟಂ ಚಾಳುಕ . . . .
೨೫ . . . . . . . . ರಣಂ ಪುಲಿಗೆಜೆನಾಡ ಪೆರ್ಗ್ಗಡೆ ದಣ್ಡನಾಯಕ ಮೆಚಳ . . .
೨೬ . . . . . . . . ವಾರ ದಕ್ಷಿಣಾಯಣ ಸಂಕ್ರಮಣ ವ್ಯತೀಪಾತ ಕೂಡಿದ . . .
೨೭ ಪ್ರಚಣ್ಡ ದಣ್ಡನಾಯಕಂ ಕೇಸಿಮಯ್ಯಂಗಳ್ಗೆ . . . . ಬಿನ್ನಪಂಗೆಯ್ದು . . . .
೨೮ . . . . . ಹಾರಮುಮಾಗಿ ಬಿಟ್ಟರ್ @ ತದ್ವ ೃತ್ತ ಪರಿಸಂಖ್ಯಾ ನದ್ರಮ್ . . . .
೨೯ . . . . . . . ಮೇಶ್ವರದೇವರ್ಗ್ಗೆ ಸೋಮವಾರದ ಗದ್ದುಗೆಗಂ ಪೂಜೆಗಂ ವೃತ್ತಿಯೊ . . . .
೩೦ . . . . . . . ತದ್ವ ೃತ್ತಿಯೊಳಂ . . . . . . . . ರೊಳಗಕ್ಕೆಯಂ ವನ್ದು . . . .
೩೧ . . . . . . . . ನಾರಾರಲ್ಲಿಂ . . . . . . . . ಕ್ಷರಾದಿನಿತ . . . .
೩೨ . . . . . . . . . . . . . . . . . . ದು । ಸರಮೇರಂ . . . .
೩೩ . . . . . . . . . . . . . . . . . . . . . . .ತಿಯೊಂ . . . .

### ೪. ಅಗಸ್ತ್ಯ ತೀರ್ಥದಲ್ಲಿಯ ಶಾಸನ ; ಕ್ರಿ.ಶ. ಸು. ೧೧೦೦

೫೮" ಉದ್ದ ೪೧" ಅಗಲದ ಕರಿಕಲ್ಲಿನ ಮೇಲಿನ ದೀರ್ಘಶಾಸನವಿದಾಗಿದೆ. ಅರ್ಧ ವೃತ್ತಾಕಾರದ ಕರಿಕಲ್ಲಿನ ಮೇಲ್ಭಾಗದಲ್ಲಿ ಮೇಲೆ ಸೂರ್ಯ ಚಂದ್ರರಿದ್ದು ಕುಳಿತ ನಂದಿ, ಶಿವಲಿಂಗ, ಖಡ್ಗ, ಕರುವಿಗೆ ಹಾಲುಣಿಸುತ್ತಿರುವ ಆಕಳಿನ ಉಬ್ಬು ಶಿಲ್ಪಗಳಿವೆ. ನಂತರದ ೩" ಪಟ್ಟಿಕೆಯಲ್ಲಿ ೩ ಸಾಲಿನ ಶಾಸನವಿದೆ. ಅದರ ಕೆಳಗಿನ ಶಿಲಾಫಲಕದ ಮೇಲೆ ಸುದೀರ್ಘವಾದ ಶಾಸನವನ್ನು ಕೆತ್ತಲಾಗಿದೆ.

೪೩ ಸಾಲುಗಳವರೆಗೆ ಸುಸ್ಥಿತಿಯಲ್ಲಿರುವ ಶಾಸನ ನಂತರದ ೬೧ ಸಾಲುಗಳವರೆಗೆ ಕಾಲನ ಪ್ರಭಾವದಿಂದಾಗಿ ಅಲ್ಲಲ್ಲಿ ಚಕ್ಕಳೆ ಹಾರಿದ್ದು ಓದಲು ಕಷ್ಟಸಾಧ್ಯವಾಗಿದೆ. ಅಕ್ಷರಗಳನ್ನು ತುಂಬಾ ಸುಂದರವಾಗಿ ೧" ಗಾತ್ರದಲ್ಲಿ ಆಳವಾಗಿ ಕೆತ್ತಲಾಗಿದೆ. ಅಲ್ಲಲ್ಲಿ ಶಕಟ ರೇಫವನ್ನು ಬಳಸಲಾಗಿದೆ. ಪುಟ್ಟ ಚಂಪೂ ಕಾವ್ಯದಂತಿರುವ ಶಾಸನದಲ್ಲಿ ಖ್ಯಾತ ಕರ್ನಾಟಕ ವೃತ್ತಗಳನ್ನು, ಕಂದಗಳನ್ನು ಮತ್ತು ಗದ್ಯವನ್ನು ಸುಂದರವಾಗಿ ಬಳಸಲಾಗಿದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳಲ್ಲಿ ಅತಿ ದೀರ್ಘಕಾಲ ಆಳಿದ ಸುಪ್ರಸಿದ್ಧ ದೊರೆ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯ ಈತನ ಕಾಲದಲ್ಲಿ ಬರೆಸಿದ ಶಾಸನವಿದಾಗಿದ್ದು, ಪ್ರಾರಂಭದ ಶಿವಸ್ತುತಿಪರ ಶ್ಲೋಕಗಳ ನಂತರ ನೇರವಾಗಿ ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳ ವಂಶಾವಳಿಯನ್ನು ನೀಡುತ್ತದೆ:

ಈ ಸೋವಿದೇವ ದಂಡಾಧೀಶ ಬನವಸೆ ಪನ್ನಿರ್ಚ್ಛಾಸಿರವನ್ನು ಮತ್ತು ಎರಡರುನೂರು ಪ್ರಾಂತಗಳನ್ನು ಆಳುತ್ತ ಪುಲಿಗೆರೆಯ ಅರಮನೆಯಲ್ಲಿ ಒಡ್ಡೋಲಗದಲ್ಲಿ ಕುಳಿತಿದ್ದಾಗ ಆತನ ಅಧೀನ ಅಧಿಕಾರಿ ನಾಗವರ್ಮ ಚಮೂಪತಿ ಅಗಸ್ತ್ಯತೀರ್ಥದ ಕುರಿತು ವಿವರಗಳನ್ನು ತಿಳಿಸುತ್ತಾನೆ. ವಿಂಧ್ಯಪರ್ವತದ ದಕ್ಷಿಣಕ್ಕಿರುವ ಪ್ರಾಂತದಲ್ಲಿ ವಾತಾಪಿಯೆಂಬ ರಾಕ್ಷಸನನ್ನು ಜೀರ್ಣಿಸಿಕೊಂಡ ಅಗಸ್ತ್ಯ ಋಷಿ ತೆಂಕಣ ರಾಜಧಾನಿ ಪುಲಿಗೆರೆಗೆ ಬಂದನಂತೆ. ಈ ಊರು ಕೃತಯುಗದಲ್ಲಿ ಗಿರಿನಗರ, ತ್ರೇತಾಯುಗದಲ್ಲಿ ಬಲಿನಗರ, ದ್ವಾಪರಯುಗದಲ್ಲಿ ಶ್ವೇತನಗರ, ಕಲಿಯುಗದಲ್ಲಿ ಪುರಿಕರನಗರವೆಂಬ ಹೆಸರನ್ನು ಪಡೆಯಿತಂತೆ. ಕಮಲ, ಮಾತುಳಂಗ, ಮಾವು, ನಾರಂಗ, ಕದಳಿ, ನಾಗವಲ್ಲಿ ಇತ್ಯಾದಿ ಗಿಡ-ಮರಗಳಿಂದ ಕೂಡಿದ ಉದ್ಯಾನಗಳು, ಅಂಗಡಿಗಳು, ಬ್ರಾಹ್ಮಣರ ಮನೆಗಳು, ಶತ್ರ ಶಾಲೆಗಳು, ವಾರಾಂಗನಾ ಕೇರಿಗಳು, ಕೂಟ ಕೋಟಿಗಳು, ಸುಂದರ ಕಳಸಗಳು, ದೇವಭವನಗಳು, ಚೈತ್ಯಾಲಯಗಳು, ವಿಷ್ಣುಗೃಹಗಳು, ಬೌದ್ಧಾಲಯುಗಳ ಸಮೂಹಗಳಿಂದ ಕೂಡಿತ್ತಂತೆ. ಅಗಸ್ತ್ಯಮುನಿಯ ಕಮಂಡಲದ ನೀರಿನಿಂದ ದಿವ್ಯತೀರ್ಥ ಹಾಗೂ ತ್ರೇತಾಗ್ನಿಕುಂಡದಿಂದ ದಿವ್ಯಲಿಂಗಗಳು ಊರಿನ ಆಗ್ನೇಯ ಭಾಗದಲ್ಲಿ ಉದ್ಭವವಾದುವಂತೆ.

ಈ ಅಗಸ್ತ್ಯತೀರ್ಥ ಮತ್ತು ಶಿವಾಲಯುಗಳ ಖಂಡಸ್ಫುಟಿತ ಜೀರ್ಣೋದ್ಧಾರ, ಅಲ್ಲಿ ಪೂಜಿಸುವ ಪೂಜಾರಿ, ಗೊರವರು ಹಾಗೂ ವಿದ್ಯಾರ್ಥಿಗಳ ಆಹಾರದಾನಕ್ಕಾಗಿ ದಾನ ನೀಡಲು ನಾಗವರ್ಮ ಚಮೂಪತಿ ಕೇಳಿಕೊಂಡಾಗ, ಸೋವಿದೇಶ ದಂಡಾಧೀಶ ಪುರಿಕರ ವಿಷಯಾಧಿಕಾರಿ ಎನಿಸಿದ ಗೋವಿಂದರಸ, ಅಮ್ಮರಸರಿಗೆ ದತ್ತಿ-ದಾನಗಳನ್ನು ನೀಡಲು ಆದೇಶಿಸಿದನಂತೆ. ನಾಗವರ್ಮ ಮತ್ತು ಸೋದರರು ರಾಮ-ಲಕ್ಷ್ಮಣ-ಶತ್ರುಘ್ನರಂತಿದ್ದರು ಎಂದು ಶಾಸನ ತಿಳಿಸುತ್ತ, ಕಿರಿಯ ಸೋದರ ಚಟ್ಟದಂಡನಾಥನನ್ನೂ ಹೆಸರಿಸುತ್ತದೆ. ಈ ಚಟ್ಟ ದಂಡನಾಥ ಕವಿ, ಗಮಕ, ವಾದಿ, ವಾಗ್ಮಿ, ಚತುರ್ವೇದ ಪಾರಂಗತ, ಕರಣ, ತರ್ಕ, ನಿರುತ, ಕಾವ್ಯ, ನಾಟಕ, ಚಾಣಕ್ಯ, ವಾತ್ಸಾಯನ, ಭರತರ ಸಕಲ ಶಾಸ್ತ್ರಗಳನ್ನು, ಚಾರ್ವಾಕ, ನ್ಯಾಯ, ವೈಶೇಷಿಕಗಳನ್ನು ಬಲ್ಲವನಾಗಿದ್ದನಂತೆ. ಶಾಸನದ ಮುಂದಿನ ಭಾಗ ತ್ರುಟಿತಗೊಂಡಿರುವುದರಿಂದ ವಿವರಗಳು ಲಭ್ಯವಿಲ್ಲ. ಯಾವುದೋ ೧೨ ಹಳ್ಳಿಗಳ ಪ್ರಾಂತದಲ್ಲಿಯ ಬಾಡವೊಂದನ್ನು ದಾನವಾಗಿ ನೀಡಿದುದನ್ನು ತಿಳಿಸುತ್ತದೆ. ಅಲ್ಲದೆ ಹಲವಾರು ಜನ ಉಪಾಧ್ಯಾಯರಾಗಿದ್ದ ಭಟ್ಟರುಗಳಿಗೆ ಬಿಟ್ಟ ಭೂದತ್ತಿಯನ್ನು ವಿವರಿಸುತ್ತದೆ. ಮುಂದಿನ ಚಕ್ಕಳೆ ಹಾರಿರುವ ಭಾಗ ಉತ್ತಮ ಸ್ಥಿತಿಯಲ್ಲಿದ್ದಿದ್ದರೆ ಶಿಕ್ಷಣ ವಿಧಾನದ ಬಹುಮುಖ್ಯ ವಿವರಗಳನ್ನು ಪಡೆಯಬಹುದಾಗಿತ್ತು.

ಕರ್ನಾಟಕದಲ್ಲಿ ಇದುವರೆಗೆ ಬೌದ್ಧ ಧರ್ಮದ ಅವಶೇಷಗಳನ್ನು ಹೊಂದಿದ ಮತ್ತು ಬೌದ್ಧ ಚೈತ್ಯಾಲಯಗಳಿದ್ದವು ಎನ್ನುವ ಉಲ್ಲೇಖವನ್ನು ಒದಗಿಸುವ ಊರುಗಳೆಂದರೆ ಸನ್ನತಿ, ಕದ್ರಿ, ಬಳ್ಳಿಗಾವೆ, ಕೊಪ್ಪ, ಐವೂರು, ಕೋಳಿವಾಡ, ಡಂಬಳ, ರಾಜಘಟ್ಟಗಳಾಗಿದ್ದವು. ಈ ಪಟ್ಟಿಗೆ ಈಗ ಲಕ್ಷ್ಮೇಶ್ವರವನ್ನು ಸೇರಿಸುವುದಕ್ಕೆ ಈ ಶಾಸನ ದಾಖಲೆಯನ್ನು ಒದಗಿಸುತ್ತದೆ. ಶಾಸನದ ಪೂರ್ಣಪಾಠವಿಂತಿದೆ-

೧ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ
ಮೂಳಸಂಭಾಯ ಶಂಭವೇ ॥ ನಮಶ್ಶಾಶ್ವತಿಕಾನಂದ ಜ್ಞಾನೈಶ್ವರ್ಯ ಮಯಾತ್ಮನೆ ಸಂಕಲ್ಪ ಸಪಳ್ಳೆ ಬ್ರಹ್ಮಸ್ತಂಭ ರಂಭಾಯ ಶಂಭವೇ ॥

೨ ಅವನೀಶಾಗ್ರಣಿ ತೈಲನಾತನ ಮಗಂ ಸತ್ಯಾಶ್ರಯಂ ತತ್ತನೂಭವನಾ ವಿಕ್ರಮನಾತನಿಂದ ಕಿಜೆಯಂ ಸಂದೈಯ್ಯಣಂ ತತ್ಸಹೋದ್ಭವನಾತಂ ಜಯಸಿಂಗನಾತನ ಮಗಂ ತ್ರೈಲೋಕ್ಯಮಲ್ಲಾಂ -

೩ ಕನಾಹವಮಲ್ಲಂ ಭುವನೈಕಮಲ್ಲಮಹಿಪಂ ಸೋಮೇಶ್ವರಂ ತತ್ಸುತಂ॥ ಆ ನೃಪರತ್ನನಿಂ ಕಿಜೆಯನಾಹವ ಧೀರನೆನಿಪ್ಪ ವೀರ ಪೆರ್ಮಾನಡಿ ವಿಕ್ರಮಾಂಕ ಮಹಿಪಂ ರಿಪು . . . . . ದ್ಭುತಂ ಆ

೪ ನಿಜಚಕ್ರವರ್ತ್ತಿ ತಿಳಕಂ ವಿಭುಮಾ . . ಚೇರ ಚೋಳ ಪಾಂಡ್ಯಾನತ ಮೌಳಿರತ್ನ ರುಚಿರೋದ್ಗಮಂ ರಂಜಿತ ಪಾದಪಲ್ಲವ [೦ ॥ *]

ಜಯುಲಕ್ಷ್ಮೀಪತಿ ಚಕ್ರವರ್ತ್ತಿತಿಳಕಂ ಭೂಪಾಳ ಸರ್ವ್ವಜ್ಞನುದ್ಘ ಯಶೋವ್ಯಾವೃತ ದಿಗ್ವಿಭಾ -

೫ ಗಸ . . ಸುಹೃನ್ನತ ಭೃತ್ಯೈ ಶಣಾದಯ ವಜ್ರಂ ವಿನತ ಕ್ಷಮಾಪತಿ ಶಿರೋರತ್ನ [೦*] ಪ್ರಭಾದೋತ ಪಾದಯುಗಂ

ವಿಕ್ರಮ ಚಕ್ರವರ್ತ್ತಿ ನೆಗಟ್ದಂ ಚಾಲುಕ್ಯ ನಾರಾಯಣಂ॥ ಉಲ್ಲಸಿತ ಕೀರ್ತ್ತಿ ಪರನೃಪಮಲ್ಲಂ ಸು –

೬ ಖಿಸಂಕಥಾ ವಿನೋದಂ ಪೃಥುವೀವಲ್ಲಭನೆಸೆದಂ ತ್ರಿಭುವನ ಮಲ್ಲಂ ಚಾಳುಕ್ಯ ಚಕ್ರವರ್ತ್ತಿ ನರೇಂದ್ರಂ ॥ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕಂ ಸತ್ಯಾಶ್ರವೇ (ಯ)–

೭ ಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನ ಮಲ್ಲ ದೇವರ ವಿಜೆಯ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧ್ಧಮಾನಮಾಚಂದ್ರರ್ಕ್ಕತಾರಂ ಸಲುತ್ತಮಿರೆ ತತ್ಪಾದ ಪದ್ಮೋ ಪಜೀವಿ ॥ ಸಕಳೋರ್ವ್ವೀತಳ ಮಣ್ಡನಂ ಸ –

೮ ಕಳ ಲಕ್ಷಂ ಲಕ್ಷಿತ ದಂಡನಾಯಕ ಚೂಡಾಮಣಿ ದಣ್ಡನಾಯಕ ಮುಖಶ್ರೀದರ್ಪ್ಪಣಂ ದಣ್ಡನಾಯಕ ರಕ್ಷಾಮಣಿ ದಣ್ಡನಾಥತಿಳಕಂ ತಾನೆಂದು ಕೈಗ್ರ್ಯೊಳಾ ಸಕಳಂ ಶ್ರೀಪತಿ ದಣ್ಡನಾಥನನೆ ದಲ್ ಕೈಕೊಣ್ಡು ಕೊಣ್ಡಾಡುಗು[ಂ*] ॥ ಮುಳಿದಂ

೯ ಶ್ರೀಪತಿ ದಣ್ಡನಾಥನೆವಗೆಂದಾ ಸಂಕೆಯಿಂ ಶತ್ರು ಸಂಕುಳಮಂಬೋಧಿಯನೋಡಿ ಪೊಕ್ಕಡೆ ನಿಜ ಕ್ರೋಧಾನಳಂ ಬಾಡವಾನಳನೆಂಬೊಂದಭಿದಾನದಿಂದ ಜಳಧಿಯಂ ಬರ್ದಪ್ಪುದಿಂನುಂ ನಿರರ್ಗ್ಗಳಮಿಂತಲ್ಲದೆ ನಿರ್ಗ್ಗಮಗ್ನಿಗದುವಮಂತೇಂ ಪೊರ್ದ್ದಮೇ ಸಂಮ್ಮದ [ಂ*]॥

೧೦ ದಾಳಿಟ್ಟು ರತ್ನಪುರ [ಮಂ] ಚಾಳಿಸಿ ಮಾಳವಮನುರಿಪಿ ಗಾಂಗೇಯ ಮಹೀಪಾಳನ ಸರ್ವ್ವಸ್ವಮನುತ್ಕೀಳಿಸಿದಂ ದಂಡನಾಥ ಚೂಡಾರತ್ನಂ ॥ ಆ ವಿಭುವಿಂದಂ ಕಿಜೆಯಂ ಭೂವಿನುತಂ ಸಕಳ ಜನಮನೋವಲ್ಲಭನಾ ಶ್ರೀ ವಲ್ಲಭ

೧೧ ಪದಪಂಕಜ ಸೇವಾಪರನರತಂತ್ರನೀಶ್ವರದೇವ ॥ ಸಕಳಗುಣಾವಳಂಬನೆ ನಿಪೀಸ್ವರದೇವ ಚಮೂಪನನ್ಯ ರಾಜಕಥನ ಸೈನ್ಯ ದಾವದಹನಂ ರಿಪು ವೀರಕಬನ್ಧ ಬೃಂದನಾಟಕ ನವಸೂತ್ರಧಾರನಕಳಂಕ ವಿನೂ –

೧೨ ತ ದಿಗಂತ ಕೀರ್ತ್ತಿ ಚೋಳ ಕಟಕ ಸೂಜೆಕಾಱನೆನಲು ನೆಗಳ್ದಂ ಜಯದಂಕಕಾಱನಂ [ಂ ॥*] ಬನವಸೆ ಪಂನಿರ್ಚ್ಛಾಸಿರವುನದೆರಡುಱುನೂಱುವೆರಸು ಪಾಳಿಸಿದಂ ಪೆಂಪಿನ ಖಣಿ ಮಹಾಪ್ರಧಾನಂ ಮನೆವೆರ್ಗ್ಗಡೆ ದಂಡನಾ

೧೩ ಥನೀಶ್ವರದೇವ [ಂ*] ॥ ಆ ಮಹಿಮಾಪರನನುಜಂ ರಾಮಾನುಜನಂತೆ ನೆಗಳ್ದ ಲಕ್ಷ್ಮೀಧರನುದ್ದಾಮ ಗುಣಂ ಶಕ್ತಿತ್ರಯಧಾಮಂ ಶ್ರೀಸೋವಿದೇವದಣ್ಡಾಧೀಶ [ಂ*]॥ ಪ್ರಜೆಯ [ಂ*] ಪಾಳಿಸಿ ಮಾನ್ಯರಂ ಮನದೆಗೊಣ್ಡ ತ್ಥಾರ್ತ್ಥಿ –

೧೪ ಗಳ್ಗಿತ್ತುಸಿಷ್ಟಜನಕ್ಕಾಶ್ರಯಮಾಗಿ ನಿರ್ಮ್ಮಳ ಯಶಶ್ರೀ ಲೀಲೆಯುಂ ತಾಳ್ದಿ ಮಿಕ್ಕ ಜಯಶ್ರೀಯುಮನಾದಿ ರಾಜಚರಿತಕ್ಕಂ ಮಿಕ್ಕನೆಂದರ್ತ್ತಿಯಿಂದೆ ಜಗಂ ಬಣ್ಣಿಸೆ ಸೋವಿದೇವನೆಸೆದಂ ಗಂಭೀರ ನಿರಾಕರ [ಂ*] ॥ ಜನಕಂ

೧೫ ಮಾಯಿಪ ದಣ್ಡನಾಥನವನೀ ವಿಖ್ಯಾತೆ ತಾಯ್ಮಾಯಿ ದೇವಿ ನಿಜಾಗ್ರಾನುಜರುತ್ತರೋತ್ತರ ಮಹಾಮಾತ್ಯ ಪ್ರಸಿದ್ಧರ್ಜ್ಜಗದ್ವಿನುತಂ ಶ್ರೀಪತಿದೇವನೀಶ್ವರಚಮೂಪಂ ಸ್ವಾ(ಮಿ) ಚಾಳುಕ್ಯರಾಮನೃಪಂ ಕೇಶವವಿಷ್ಣುದೇವ್ಯ–

೧೬ ಮೆನಲಾರ್ತ್ತೀಸೋವಿದೇವಂಬರ [ಂ*] ॥ ಕುಳರತ್ನ ನಾಯಕಂ ನಿರ್ಮ್ಮಳ ವಿಳಸತ್ಕೀರ್ತ್ತಿ ಕೌಮುದಿ ವ್ಯಾಪ್ತ ಮಹೀವಳೆಯಂ ಸೇನಾಪತಿ ಮುಖತಿಳಕಂ ಶ್ರೀ ಸೋವಿದೇವ ದಂಡಾಧೀಶಾ ॥ ವಚನ ॥ ಆ ಮಹಾನು ಭಾವಂ ಬನವಸೆ ಪಂ–

೧೭ ನಿರ್ಚ್ಛಾಸಿರಮುಮನೆರಡಱುನೂಱುಮಂ ವಡ್ಡರಾವುಳ ಮುಮಮದುತ್ತಮ ಛತ್ತಗ್ರಾಮಂಗಳ್ಮಂ ಸುಖದಿಂ ಪ್ರತಿಪಾಳಿಸುತ್ತಮಿರ್ದ್ದೊಂದು ದೆವಸಂ ಪುರಿಗೆಜೆಯರ ಮನೆಯೋಳ್ವಡ್ಡೋಲಗದೊಳಿರೆ ತತ್ಪ್ರರೀಪ್ರಪಂಚ ಕಥನ–

೧೮ ಪ್ರಸ್ತಾವನವಮಾದಲ್ಲಿ ॥ ವ್ಯಾಕಿತ ದಿಗಂತ ಕೀರ್ತ್ತಿ ಚಮೂಪತಿ ತಿಳಕಂಗೆ ಸೋವಿದೇವಂಗೆ ವಚಶ್ರೀಪತಿ ಸಕಳ ಕಳಾ ವಿದ್ಯಾಪತಿಯೆನಿಸಿರ್ದ್ದ ನಾಗವರ್ಮ್ಮ ಚಮೂಪ [ಂ*] ॥ ವೃತ್ತ ॥ ನಯಮಂ ಪಾಳಿಸಿತೋಜೆ ಪೆಂಪು ಮುಗಿಲಂ ಮು–

೧೯ ಟ್ಟಿತ್ತು ವಿದ್ವಜ್ಜನಾಶ್ರಯಮಾಯ್ತೊಪ್ಪುವ ಲಕ್ಷ್ಮಿ ನಿರ್ಮ್ಮಳ ಯಶ ಜ್ಯೋತ್ಸ್ನಾವಿಳಾಸಂ ಜಗತ್ರಯಮಂ ಬಾಸಣಿಸಿತ್ತು ಸತ್ಪುರುಷರಂ ಕೈಯ್ಯಾನಿಸುತ್ತಿತ್ತು ತನ್ನಯ ದಾನೋಂನತಿ ನಾಗವರ್ಮ್ಮನೊಳೆನಲ್ ಲೋಕೋತ್ತರಂ ಮಾಂ –

೨೦ ತನ [ಂ*] ॥ ತನಗೇಕಾಯಿತ್ತಮೀವುಂನತಿ ಸಹಜಗುಣಂ ಶೌಚಂಗೀಕೃತಂ ಮಾಂತನಮೇಕಚ್ಛತ್ರಮಾ ಪಾಂಡರ ವಿಶದ ಯಶಂ ಮಿಕ್ಕ ಚಾತುರ್ಯ್ಯ ಸಿಂಹಾಸನ ಮೇಕಾಧಿಷ್ಠಿತಂ ತಾನೆನಲೆಸೆದುದು ಸೌಜನ್ಯ ಸಾಮ್ರಾಜ್ಯಮಂ ಧನ್ಯನೊ

೨೧ ಗಾಂಭೀರ್ಯಾಬ್ಧಿ ಸಂವೇಷ್ಟಿತ ನಿಖಿಳ ಮಹೀ ಮಂಡಳಂ ನಾಗವರ್ಮ್ಮಂ ॥ ಕಂ ॥ ಎನೆ ನೆಗಳ್ದ ನಾಗವರ್ಮ್ಮಂ ಮನುಚರಿತಂ ಸೋವಿದೇವ ಸೇನಾಪತಿಗಂದನು ನಯದಿಂ ಬಿನ್ನವಿಸಿದನೆನೆಸುಂ ಕಿಜೆದಜೊಳಗಸ್ತ್ಯತೀರ್ಥ ಕ್ರಮಮ[ಂ*] ॥ ಅದೆಂ –

೨೨ ತೆಂದೊಡೆ ॥ ನೆಲನೋರಣ್ಡನಮಾಗೆ ಬಂದು ನಿಲೆ ತೆಂಕಲ್ತಾಂ ಸಮಂತಾಯ್ತು ಭೂವಳೆಯಂ ವಿಂಧ್ಯ ನಗೇಂದ್ರವಾಜ್ಞೆಗೆ ಕುನಿಂಗೆಂತಪ್ಪಿ ಗಂಡೂಷ ಕೋಮಳಮಾಯಿತ್ತು ಧರಾಗ್ನಿಯಿಂ ದೇವದನುಜಂ ವಾತಾಪಿ ಬೆಂದ –

೨೩ ಕ್ಕಿದಂ ಬಲಮಿಂನೆಂದಡಗಸ್ತ್ಯನೊಂದಳವನಿಂನೇ ವಣ್ಣಿಪಂ ಬಣ್ಣಿಪ [ಂ*] ॥ ಕಂ ॥ ಇಂತೆನಿಪಗಸ್ತ್ಯಮುನಿ ನಿಶ್ಚಿಂತ ಮುದದ್ದು ಚರೋಪ ಚರ್ವಣಾರ್ತ್ಥಕೃತ ಸ್ವಾಂತಂ ಮುದದಿಂ ಬಂದಿರ್ದ್ದಂ ತೆಂಕಣ ರಾಜಧಾನಿಯೊಳ್ಪು ಲಿಗೆಱಿಯೊಳ್ ॥

೨೪ ಅದೆಂತೆನೆ ॥ ತರದೆ ಕೃತ ತ್ರೇತಾ ದ್ವಾಪರ ಕಲಿಯುಗದಲು ನಾಲ್ಕು ಪೆಸರಾದವುಂ ಗಿರಿನಗರಂ ಬಲಿನಗರಂ ಪರಿವಿಡಿಯಿಂ ಶ್ವೇತನಗರ ಪುರಿಕರನಗರ [ಂ*] ॥ ವಿದಳತ್ಪಂಕೇಜ ಷಣ್ಡಂ ಫಲಬರವಿನಮ –

೨೫ ನ್ಮಾತುಳುಂಗಂ ಮನೋಜಾಸ್ಪದ ಚೂತಬ್ರಾತ ಮುಜ್ರಿಂಬಿತ ಕುಮುದವನಾ ಪಕ್ವ ನಾರಂಗ ರಾಗಂ ಕದಳೀಮಾಳಾಭಿ ರಾಮಂ ಪರಿಣತಫಳ ಪೂಗದ್ರುಮಂ ನಾಗವಲ್ಲಿ ಚ್ಛದ ದೂರಿಂ ಚೂತಂ ಬಾಣಾ ಪ್ರಚಮೆನಲೆಸೆ –

೨೬ ಗುಂ ತತ್ಪುರೋದ್ಯಾನಮೆತ್ತಂ ॥ ಅಂಗಡಿಗಳಿಂ ದ್ವಿಜನ್ಮ ಗೃಹಂಗಳಿನೆಸೆದಿಪ್ಪ ಶತ್ರ ಶಾಲೆಗಳಿಂ ವಾರಾಂಗನೆಯರ ಕೇರಿಗಳಿಂ ಸಂಗತ ಶೋಭಾ ನಿಧಾನಮಾ ಪುರಮೆಸಗು [೦*] ॥ ವೃ ॥ . . ನಿರುಪಮಕೂಟ ಕೋಟಿಗಳಿನುಂ

೨೭ ದಿನಭಂಭರಮೆಯ್ದನಿಟ್ಟು ಭಾಸುರ ಕಳಸಂಗಳಿಂದೆ ಸೆದುವು ತ್ರಿಕೆಯಿಂ ಪರಿಶೋಭೆವೆತ್ತು ಬಂಧುರಕರಮಪ್ಪ ನೀನರ್ಕರ ತೋರಣದಿಂ ಕಡುಚೆಲ್ವನಾಳ್ದು ತತ್ಪುರ ದೊಳನೇಕ ದೇವಭವನಂ ಭುವನಸ್ತುತಮಾದಂತೊ-

೨೮ ಪ್ಪುಗು [೦*] ॥ ಪಲವುಂ ದೇವಕುಲಂಗಳಿಂದೆ ಪಲವುಂ ಚೈತ್ಯಾಲಯಬ್ರಾತದಂ ಪಲವುಂ ವಿಷ್ಣುಗೃಹಂಗಳಿಂದೆ ಪಲವುಂ ಬೌದ್ಧಾಲಯಾನೀಕದಿಂ ಪಲವುಂ ಬ್ರಾಹ್ಮಣ ವೇದಶಾಸ್ತ್ರ ಪಠನ ವ್ಯಾಖ್ಯಾನ ವಿಖ್ಯಾತಿ –

೨೯ ಯಿ [೦*] ಪಲವಾರ್ತಿಜ್ಯ ಪದಪ್ರವೀಣರಿನನೂನಂ ಶೋಭಿಕಾ ತತ್ಪುರ [೦*] ॥ ಆ ಪುರದಾಗ್ನೇಯ ದೊಳಮರಾಪಗೆಯ[೦*] ವಾರಣಾಸಿಯಿಂ ಮೀಕೂಪ ದ್ವ್ಯಾಪಕವೆನೆ ಮಾಡಿದನವ್ಯಾಪಂನಂ ದಿವ್ಯತೀರ್ಥಮುಂ ದೇವರು –

೩೦ ಮಂ ॥ ವ ॥ ಅವಜುತ್ತತ್ತಿಯೆನ್ನೆನೆ ॥ ವೃ ॥ ನವಗಂಗೋದಕ ಬೃತ್ಕಮಂಡಳ ಝಳ ಪ್ರಸ್ಯಂದ ಸಂಪೂರ್ಣಮಾಹವ ನೀಯಾಮು ನುತ ದಕ್ಷಿಣಾಗ್ನಿಯುರಡಾ ಸತ್ಪುಣ್ಯ ತೀರ್ಥಂಗಳಾದವು ಪಾಶ್ಚಾತ್ಯದ ಗಾಹಪ –

೩೧ ತ್ಯದೊಳಗಿಂದಂ ದಿವ್ಯಲಿಂಗಂ ಸಮುದ್ಭವಿಸಿತ್ತಾ ಮುನಿಯಗ್ನಿಹೋತ್ರ ವಿಹರ ತ್ರೇತಾಗ್ನಿ ಕುಂಡಂಗಳೊಳ್॥ ಕಂ ॥ ಯದ್ಯದಾಸೀತ ಮಹಾದ್ಬಿಸತದೇವತೀರ್ಥಂ ಪ್ರಚಕ್ಷತೆಯಂಬುದದಾದುದು ಪುರಿಕರನಗ –

೩೨ ರದೊಳೊಪ್ಪುವಗಸ್ತ್ಯ ತೀರ್ಥಮಾ ಮುನಿಯಿರವಿ [೦*]॥ ಅಂತಾ ತೀರ್ಥಕೆ ॥ ಯಿದು ವಿದ್ಯಾರ್ಥಿಗೆ ಪೂಜಿಪಂಗೆ ಗೊರವಂಗಾಹಾರದಾನಕ್ಕೆ ತಾವಿದು ತತ್ತೀರ್ಥ ಶಿವಾಲಯ ಸ್ಫುಟಿತ ಜೀರ್ಣ್ಣೋದ್ಧಾರಣಕೆಂದೆ ಮಾಡಿದನಾ

೩೩ ಪಾದರಿಗೇರಿಯಂ ಕಳಸಜಂ ಮುಂನಂ ಬಳಿಕಾಂತೆ ನಿಂದುದು ಕಾಲಕ್ರಮದಿ[೦*] ದೇವರಿಗ ವೃದ್ಧಮುನಿಗಳ್ದಾನ ದತ್ತಿಯಿಂ ॥ ಕಂ ॥ ಯಂದಜೆಪ ತನಗೆ ನುತ ಬೃತ ಬೃಂದನದಂ ಮನದೆಗೊಂಡು ಪೂರ್ವ್ವ ಕ್ರಮದಂದ ದೊಳೇ ನಿಮ್ಮಗ್ರ –

೩೪ ಜನೇನೆಂದಡೆ ಮಾಡಿಮೆಂದು ಸಮುಖದಿನಾಗಳುಂ॥ ಕರೆದು ಯತೋಚಿತದಿಂದಂ [೦*] ಪುರಿಕರ ವಿಷಯಾಧಿ ಕಾರಿಯೆನಿಸಿದ ಗೋವಿಂದರಸಂಗಂ ತದನುಜನಮ್ಮರ ಸಂಗಂ ಬೆಸಸಿದಂ ಚಮೂಪತಿ ತಿಳಕ [೦*] ॥ ಅಂತವರ್ಗಳ ॥

೩೫ ಭೀಮನ ಪಾರ್ಥನ ಮುಂನಿನ ರಾಮನ ಲಕ್ಷ್ಮಣನ ಭರತ ಶತೃಜ್ಞರ ಮೇಲ್ತಾಮೆನಿಸಿ ನೆಗಳ್ದರವರೇಂ ಸಾಮಾನ್ಯರೆ ಶಸ್ತ್ರ ಶಾಸ್ತ್ರ ವಿದ್ಯಾನಿರತರ [೦*] ॥ ಅಲ್ಲಿ॥ ದೊರೆವೆತ್ತಂಮೆರಸರಿಗೆ ತಾಂ ಪಿರಿಯನೇಂಜೀ ಯೊಂದೆದ –

೩೬ ಲ್ತಾರಿಗಂ ಪಿರಿಯಂ ಮಾಂತನದೊಳ್ಪ ರಣದೊಳ ಸತ್ಕೀರ್ತಿಯೊಳ್ಪೆಂಪಿನೊಳಪ್ಪಿರಿಯಂ ಸತ್ಯದ ಶೌಚದುಂ ನತಿಕೆಯೊಳ್ಕ್ಕಾರ್ಪ್ಪಿನೊ ಕೂರ್ಪ್ಪಿನೊಳ್ಪಿರಿಯಂ ಭಾವಿಸೆ ನಾಗವರ್ಮ್ಮನನುಜಂ ಗೋವಿಂದ ದಂಡಾ –

೩೭ ಧಿಪ ॥ [೦*] ಜಯಲಕ್ಷ್ಮೀ ಸಿಂಹಿಕಂ ಕಟ್ಟಿತಳಿ ಮಜಸಿ ಕರಂ ಭಾರತೀ ಶ್ರೀನದೀ ಸಂಪ್ರಿಯ ಲೀಲಾಲಾಸ್ಯರಾಗ ಸ್ಮಿತ ಮುಖಕಮಳಂ ಪ್ರವದ್ಯಾ ರಾಜ್ಯಹಂಸೀ ನಿಯತಂ ಕ್ರೀಡಾ ಸರೋಜಾಕರ ವಿಪುಳತರೋರಸ್ತ –

೩೮ ಳಂ ವ್ಯಾಪ್ತ ಕುಂದೇಂದು ಯಶಸ್ವೀ ಚಂದ್ರಿಕಾವರ್ದ್ಧನ ವಿವಿಧ ಕಳಾ . . ಗೋವಿಂದರಾಜ [೦*] ॥ ಜನತಾನಂದ ಕರಂ ಚರಿತ್ರಮಖಿಳೋ ಹನಂಮೂರ್ತಿ ಚಂದ್ರನಿಭಂ ಕಿತ್ತಿರಿಪ ಪ್ರಜಾಕ್ಷಯಕರಂ ದೋರ್ವ್ವಿಕ್ರ-

೩೯ ಮಂ ಮಿಕ್ಕ ಸಜ್ಜನಂ ಸೇವ್ಯಾ ವಿನಯ್ರಂ ಪರಾರ್ಥಚರಿತಂ ಕೀರ್ತಿಪೂರ್ಪ್ಪಮೆಂದೀ ಜಗಜ್ಜನಯುಲ್ಲಂ ಪೊಗಳಲ್ಕೆ ಪೆಂಪುವಡೆದಂ ಗೋವಿಂದ ದಣ್ಣಾಧಿಪ [೦*] ॥ ಕದನ ಪ್ರಾರಂಭಮಂ ಬಿಟ್ಟೆಜಿಗಿದೊಡಜೆಯಿಂ ಮೀಜೆ ಮಾಜಿಂ ತಂದಾ ಸಿಂಗದ ಕೋಪಾ –

೪೦ ಟೋಪವು[೦*] ವಾರಿಯು ಮುಸಕವುನ್ತಾ ಮಹಾಭ್ಯೆರವಾಕಾರದಗುರ್ವ್ವಂ ರಾವಣಾದಂ . ಗದೆಸಕಮನೇಂ ತೋಜಿಸರೆ ವೈರಿ ವರ್ಗಕಿದಿರೊಳರೆ ಭೂರೀಶ್ರಮನೆಸೆದನಾ ಗೋವಿಂದ ದಂಡಾಧಿನಾಥ [ಮ*] ॥ @ ಸ್ವಸ್ತಿ ಸಮ –

೪೧ ಧಿಗತ ಪಂಚಮಹಾಶಬ್ದ ಮಹಾ ಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕಂ ವಿಪ್ರಜನ ಮನೋರತ ಫಳಪ್ರದಾಯಕಂ ನಿಜ ಕುಳ ಕುವಳಯಾನಂದ ಚಂದ್ರ ವಿಭವಾಮರೇಂದ್ರಂ ಚಂ –

೪೨ ದ್ರ ಚೂಡವಾ . . ರಣವದ ಚಂಚಚ್ಚಂಚರೀಕಂ ಸುಧಾ ಸಣ್ಡಪಾಂಡರ ಯಶಪ್ಪ್ರತಾಕ ದುಷ್ಟದರ್ಪದ ಮದಿತೋತಾರಾತಿ ಗಿರಿ ವಜ್ರದಂಡಂ ವಿಜಯಲಕ್ಷ್ಮೀ ಲಕ್ಷಿತ ದಕ್ಷಿಣಭುಜಾದಂಡಂ ।

೪೩ ಸೌಜನ್ಯ ಸಾರ್ವ್ವಭೌಮ ವಿಷಮ ಸಂಗ್ರಾಮ ಭೀಮ । ಸತ್ಯರಾಧೇಯ ಸೌಚ ಗಾಂಗೇಯಂ ಶ್ರೀ ಮನ್ಮಹಾ ಪ್ರಧಾನಂ ದಂಡನಾಯಕಂ ಗೋವಿಂದಮಯ್ಯಗಳು॥ @ ತದನುಜನಶೇಷ ವಿದ್ಯಾಸ –

೪೪ ದನಂ ಕವಿಗಮಕ ವಾದಿ ವಾಗ್ಮಿತ್ವ ಚತುರ್ವ್ವದನಂ ನೆಗಟ್ದವರ್ಗನೋಜ್ಜಟ್ಟದಂಡನಾಥಂ ಸಮಸ್ತ ಗುಣಗಣನಿಳೆಯಂ ॥ ವೃ ॥ . . . . . . . . . ಗುಳುಮಾ ಕರಣಮುಮ ನಿರುತರ್ಕ್ಕಮುಂ ಕಾವ್ಯಮುಂ

೪೫ ನಾಟಕಮುಂ ಚಾಣಕ್ಯ ವಾತ್ಸಾಯನ ಭರತ ಯತಾ . . ಶಾಸ್ತ್ರ . . ಸಕಳ ಶಾಸ್ತ್ರಗಳುಂ ತಯ . . . . . . . . ನ ಕುಮಾರ ಪ್ರಾಯದೊಳ್ವಿದ್ಯೆಗಳನನಿತು

೪೬ ಮಂ ತಾಟಿದಂ ತನ್ಮಹಾತ್ಮದಾಮಾ ತಾಂಬೋಜದಂ
.......ವಿದ್ಯಾಭಿಮಾನಂ ಸುಸಾಂಕ್ಯ ........
......ವ್ವಾರ ಚಾರ್ವಾಕ ಗರ್ಮ್ಮಿದ್ದಾಮಂ ತಾಂ

೪೭ ನ್ಯಾಯ ವೈಶೇಷಿಕ ...ಚಂದ್ರ ನೆಮ್ಮಂ ..ಮಂ ಚ
ಶ್ರೀ ಘನಕುಚ ಯುಗ ...............ತಿ
ವಿದ್ಯೆಯೊಳಮಳಜಂ

೪೮ ಸಂದಕ್ಷಪಾದ ಬೃ .....ದೊಳ ..ಗವ .....
ಗಕಂ ಪೆಂಪುವೆತ್ತ ..............ಮ್ಮಂಮಣ

೪೯ ಭಟ್ಟನಂ ...ವ ..............ಪ ....
ನಾಭಿರಾಮ ಚಲ್ವಂಗ ..................
..ರಸಿ ॥ ವಚನ ॥

೫೦ ಅಂತವರ್ಪ್ಪುರಿಗೆರೆ ............. ಪ್ರತಿ ಪ .
....ಸತ್ರಮಿ ಸತ್ರ ..................ಪ್ಪುರಿ

೫೧ ..........................
..........................

೫೨ ..........................
..........................

೫೩ ಸೋಮವಾರ ಸಂಕ್ರಮಣ ವ್ಯತಿಪಾತಂ ........
..........................
ಪೂರ್ವ್ವ

೫೪ .............ರು ೧೨ ಐ ಬಳಿಯ ಬಾಡ ಪಾ
........... ಯ ................
ಧರ್ಮ್ಮ

೫೫ ಟ್ಟನ ..............ತಪೋಧನರ ವಿದ್ಯಾರ್ಥಿಗಳ
ದೇಶಾಂತರಿಗರಾಹಾರ ದಾನ .............ಪಂ
... ತ್ರಕರ್ಗ್ಗೆ ತಾ

೫೬ .................ಯ್ದ ವರ್ಷ ಪ್ರತಿ
ವೈಶಾಖಮಾಸದಲು ದೇವರ್ಗ್ಗೆ .............
..... ......ಯ್ಯ ...ಯ್ಯಗಲ

೫೭ ವಿಪ್ಪತ್ತು ..............ಯ್ಯಗಲದ ೧೨
ಕಯ್ಸೀಳದ ಬಣಜೆಯೊಟ್ಟಿಯಲು ..........
........ತಿಯೊಳಂ ತೆಂಕಲು ಕೊ

೫೮ ಟ್ಟ ಮತ್ತ ....................
ಬ್ರಹ್ಮದೇವ ಭಟ್ಟರ್ಗ್ಗೆ ಮತ್ತರೆ ಪ್ಪತ್ತು ಮನಿಕ್ಕುವ ಭಟ್ಟರ್ಗ್ಗೆ
ಮತ್ತರು

೫೯ ....................
ಋಗ್ವೇದಿಯಪ್ಪಣಭಟ್ಟರ್ಗ್ಗೆ ಮತ್ತರು ೩ ಪಿರಿಯ ...
..............ದಾ

೬೦ ................. ಣದಿಂದುಂಡಿರ್ಪರ ಮ
...೪ ..ತಿ ಯುಲ್ಲಿ ಯೇನುಂ ಸಾ ........
.............ಜಂಗಿ

೬೧ ............. ॥ ಮತ್ತಂ ಕರ ......
ಯೊಂದಿಂತಿ .....ಸಲು ಶ್ರೀ

*ಮುಂದೆ ಇನ್ನೂ ೪ ಸಾಲುಗಳಿದ್ದು, ಸಂಪೂರ್ಣ ಚಕ್ಕಳೆ ಹಾರಿದೆ.

## ೫. ಸೋಮೇಶ್ವರ ದೇವಾಲಯದ ಆವರಣದಲ್ಲಿಯ ಶಾಸನ ಕ್ರಿಶ. ೧೧೪೨.

ಈ ಶಾಸನ ಎರಡು ತುಂಡಾಗಿದ್ದು, ದ್ವಾರಬಂಧದ ಹಿಂಭಾಗದಲ್ಲಿ ಇದನ್ನು ಕೆತ್ತಲಾಗಿದೆ. ಈ ಶಾಸನದಲ್ಲಿ ಕಲ್ಯಾಣ ಚಾಲುಕ್ಯಚಕ್ರವರ್ತಿ ಇಮ್ಮಡಿ ಜಗದೇಕಮಲ್ಲ ಆಳುತ್ತಿರುವಾಗ, ಮಹಾಪ್ರಧಾನ ಸೇನಾಧಿಪತಿಯಾದ ಮಹಾದೇವರಸ ಎರಡರುನೂರನ್ನು (ಬೆಳ್ವೊಲ ೩೦೦ ಮತ್ತು ಪುಲಿಗೆರೆ ೩೦೦ ಪ್ರಾಂತಗಳು) ಪಾಲಿಸುತ್ತಿದ್ದನಂತೆ. ಅವರ ಅಧೀನಾಧಿಕಾರಿಯಾಗಿ ಮಹಾಪ್ರಧಾನ ದಂಡನಾಯಕ ಕಂಬರಸ ಪುಲಿಗೆರೆ ೩೦೦ನ್ನು ಆಳುತ್ತಿದ್ದನು. ಆ ಕಾಲದಲ್ಲಿ ಮಹಾಮಂಡಳೇಶ್ವರ ಜಯಕೇಸಿದೇವರಸ ಮತ್ತು ಸಾಯಿರ ಪರಿಗ್ರಹಂಗಳು ಸೇರಿ ರಾಜಧಾನಿ ಪಟ್ಟಣ ಪುಲಿಗೇಜೆಯಲ್ಲಿಯ ಬ್ರಹ್ಮಪುರಿಯ ೧೨೦ ಜನ ಮಹಾಜನರ ಕೈಯಿಂದ ಭೂಮಿಯನ್ನು ಪಡೆದು, ದಕ್ಷಿಣ ಸೋಮನಾಥನ ಅಂಗಭೋಗಕ್ಕೆ ಸರ್ವನಮಸ್ಯವಾಗಿ ಸರ್ವಭಾಧಾ ಪರಿಹಾರ ಮಾಡಿ, ಅಲ್ಲಿಯ ಸ್ಥಾನಾಚಾರ್ಯರಾದ ಜ್ಞಾನಸೋಮಪಂಡಿತ ದೇವರಿಗೆ ಧಾರಾಪೂರ್ವಕವಾಗಿ ನೀಡಿದ ಭೂದತ್ತಿಯನ್ನು ವಿವರಿಸುತ್ತದೆ ಹಾಗೂ ಅದರ ಸೀಮೆಗಳನ್ನು ಗುರುತಿಸುತ್ತದೆ.

ಈ ಶಾಸನವು ದಾನ ನೀಡಿದ ಕಾಲವು ೧೧೪೨ ಫೆಬ್ರವರಿ ೨೭ ಆಗಿದೆ.

ಈ ಶಾಸನದಲ್ಲಿ ಉಲ್ಲೇಖಿತನಾದ ಚಕ್ರವರ್ತಿ ಜಗದೇಕಮಲ್ಲದೇವ. ಭೂಲೋಕಮಲ್ಲ ಸರ್ವಜ್ಞ ಚಕ್ರವರ್ತಿ ಮೂರನೆಯ ಸೋಮೇಶ್ವರನ ಮಗ. ನಾಡಿನ ಹಲವಾರು ಕಡೆ ದೇವಾಲಯಗಳನ್ನು ಕಟ್ಟಿಸಿ ಭೂದಾನವನ್ನು ನೀಡಿದಾತ. ಆತನ ಮಹಾಮಂಡಳೇಶ್ವರನಾಗಿ ಶಾಸನ ಚಕ್ರವರ್ತಿಗಳ ಪ್ರಭಾವಕ್ಕೆ ಉಚಿತವಾಗಿ ಶತ್ರುಗಳ ರುಂಡವನ್ನು ಚೆಂಡಾಡಿದವನು, ಸಗರ ಮಾರ್ತಣ್ಡನೆಂದು ಬಿರುದಾಂಕಿತನಾದವನು ಜಯಕೇಸಿದೇವರಸ. ಎರಡರುನೂರು ಪ್ರಾಂತವನ್ನು ಆಳುತ್ತಿದ್ದ ಮಹಾಪ್ರಧಾನ, ಕರಿತುರೆಯ ಪಟ್ಟಸಾಹಣಿ ಸೇನಾಧಿಪತಿ ದಣ್ಡನಾಯಕ ಮಹಾದೇವರಸನಾದರೆ ಪುಲಿಗೆರೆ ಮುನ್ನೂರನ್ನು ಆಳುತ್ತಿದ್ದಾತ ಮಹಾಪ್ರಧಾನ ದಣ್ಡನಾಯಕ ಕಂಬರಸ ಎಂದು ಶಾಸನ ತಿಳಿಸುತ್ತದೆ. ಇಲ್ಲಿ ಮಹಾದೇವರಸ ಮತ್ತು ಕಂಬರಸರ ಬಿರುದುಗಳಲ್ಲಿ ಬಹಳಷ್ಟು ಸಾಮ್ಯತೆಯಿದೆ. ಇಬ್ಬರೂ ಮಹಾಪ್ರಧಾನರು, ಇಬ್ಬರೂ ದಂಡನಾಯಕರು. ಆದರೆ ಕರಿತುರೆಯ ಪಟ್ಟಸಾಹಣಿ, ಸೇನಾಧಿಪತಿ ಎಂದು ಕರೆಯಿಸಿಕೊಂಡ ಮಹಾದೇವರಸ

ಎರಡು ಪ್ರಾಂತಗಳನ್ನಾಳಿದರೆ ಕಂಬರಸ ಒಂದೇ ಪ್ರಾಂತವನ್ನು ಆಳುತ್ತಾನೆ, ಎಂದರೆ ಕಂಬರಸ ಮಹಾದೇವರಸ ಅಧೀನ ಅಧಿಕಾರಿ ಎಂದು ತೋರುತ್ತದೆ.

ಪುಲಿಗೆಜೆ ರಾಜಧಾನಿ ಪಟ್ಟಣವಾಗಿತ್ತು ಮತ್ತು ೧೨೦ ಜನ ಮಹಾಜನರಿರುವ ಬ್ರಹ್ಮಪುರಿಯನ್ನೂ ಹೊಂದಿತ್ತು ಎಂದು ತಿಳಿದುಬರುತ್ತದೆ. ಉತ್ತರದಲ್ಲಿ ಸೌರಾಷ್ಟ್ರದ ಸೋಮನಾಥ ಪ್ರಸಿದ್ಧನಾಗಿರುವಂತೆ ದಕ್ಷಿಣಭಾರತದ ಪುಲಿಗೆರೆಯ ಸ್ವಯಂಭು ಸೋಮನಾಥನು ದಕ್ಷಿಣ ಸೋಮನಾಥನೆಂದು ಪ್ರಸಿದ್ಧಿ ಹೊಂದಿದ್ದ. ಇಲ್ಲಿಯ ಸ್ಥಾನಾಚಾರ್ಯ ಶೈವಧರ್ಮದ ಕಾಳಾಮುಖ ಪಂಥದ ಯತಿಯಾಗಿದ್ದನೆಂಬುದು ಸುಷ್ಪಷ್ಟ. ಗಡಿಂಬದ ಗಳೆ ಎನ್ನುವ ಅಳತೆ ಕೋಲು ಗಮನಾರ್ಹ. ದತ್ತಿಯ ಮೇರೆಗಳನ್ನು ಹೇಳುವಾಗ ಭೋಗೇಸ್ವರ, ರಾಜಿಮಯನ ಬಸದಿ, ಲಕ್ಷ್ಮಣೇಶ್ವರ ಎಂಬ ದೇವಾಲಯಗಳನ್ನು ಗುರುತಿಸುವುದು ಕುತೂಹಲಕಾರಿ.

ಪುಲಿಗೆಜೆ, ಹುಲಿಗೆರೆ ಎಂದು ಎರಡೂ ಹೆಸರುಗಳನ್ನು ಲಕ್ಷ್ಮೇಶ್ವರಕ್ಕೆ ಬಳಸಿದೆ. ಇಲ್ಲಿಯ 'ಲಕ್ಷ್ಮಣೇಶ್ವರ' ದೇವಾಲಯ ದಿಂದಾಗಿ ಕಾಲಕ್ರಮೇಣ ಊರಿಗೆ 'ಲಕ್ಷ್ಮೇಶ್ವರ' ಎಂಬ ಹೆಸರು ಬಂದಿರಬೇಕು. ನೂರಿಪ್ಪದಿಂಬರು ಎಂಬ ಪದಪ್ರಯೋಗ ಹಾಗೂ 'ಳ' ಸಂಖ್ಯೆಯ ಬಳಕೆಯನ್ನು ಗಮನಿಸಬೇಕು. ಶಾಸನದ ಪಠ್ಯ ಕೆಳಗಿನಂತಿದೆ :

**ಮೇಲಿನ ಚಿಕ್ಕಪಟ್ಟಿಕೆ**

೧ @ ನಮಸ್ತುಂಗ ಶಿರಶ್ಚುಂಬಿ ಚನ್ದ್ರ ಚಾಮರ ಚಾರವೇ ತ್ರೈಲೋಕ್ಯ ನಗ

೨ ರಾರಂಭ ಮೂಳಸ್ತಂಭಾಯ ಶಂಭವೇ @

**ಕೆಳಗಿನ ತ್ರುಟಿತ ಫಲಕ**

೩ ಸ್ವಸ್ತಿ ಶ(ಸ)ಮಸ್ತ ಭೂ(ಭು)ವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಾ(ಮ)ಹಾರಾಜಾಧಿರಾಜ ಪರಮೇಸ್ವರ ಪ

೪ ರಮ ಭಟ್ಟಾರಕಂ ಸತ್ಯಾಸ್ರ(ಶ್ರ)ಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀಮಜ್ಜಗದೇಕಮಲ್ಲ

೫ ದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರದ್ಧಿ ಪ್ರವರ್ಧ ಮಾನಮಾಚಂದ್ರಾರ್ಕ್ಕ ತಾರಂ

೬ ಬರಂ ಸಲುತ್ತಮಿರೆ ತತ್ಪಾದಪದ್ಮೋಪಜೀವಿ ॥ ಸ್ವಸ್ತಿ ಸಮಸ್ತ ಪ್ರಶಸ್ತಿ ಶ(ಸ)ಹಿತಂ ಶ್ರೀಮ

೭ ನ್ಮಹಾಪ್ರಧಾನಂ ಕರಿತುರೆಯ ಪಟ್ಟಸಾಹಣಿ ಸೇನಾಧಿಪತಿ ದಣ್ಣನಾಯಕ ।

೮ ಮಹಾದೇವರಸರೆರಡುಋನೂಋಮಂ ಸುಖದಿನಾಳ್ದ ರಸುಗೆಯುತ್ತಮಿರೆ ॥

೯ ಅವರ ದೆಸೆಯಿಂ ಸ್ವಸ್ತಿ ಸಮಸ್ತ ಪ್ರಸಸ್ತಿ ಸಹಿತಂ ಶ್ರೀಮ್ಮನುಮಹಾಪ್ರಧಾನಂ ದಣ್ಡನಾ

೧೦ ಯಕಂ ಕಂಬರಸರು ಹುಲಿಗೆರೆ ಮೂನೂಋಮಂ ದುಷ್ಟನಿಗ್ರಹ ವಿಸಿಷ್ಟ ಪ್ರತಿ

೧೧ ಪಾಳನೆಯಿಂ ಸುಖದಿನಾಳುತ್ತಮಿರೆ । ಸ್ವಸ್ತ್ಯನೇಕ ರಿಪುನ್ರಿಪತಿ ಶಿರಶೇಖರ ಪ್ರ

೧೨ ಭಾವ ಪ್ರಸಿದ್ಧ ನಿಜವಿಜೆಯ ಷಾ(ಶಾ)ಸನ ಚಕ್ರವರ್ತ್ತಿ ಪ್ರಭಾವೋಚಿತ ರಾಜ್ಯಚಿಹ್ನಾಧಿ

೧೩ ಪತಿ ಶ್ರೀಮನ್ಮಮಹಾಮಂಣ್ಡಳೇಸ್ವರಂ ಸಗರ ಮಾರ್ತ್ತಣ್ಡಂ ಜಯಕೇಸಿದೇವರಸ

೧೪ ರುಂ ಸಾಯಿರ ಪರಿಗ್ರಹಂಗಳುಂ ॥ ಸ್ವಸ್ತಿ ಶ್ರೀಮಚ್ಚಾಳುಕ್ಯ ಜಗದೇಕಮಲ್ಲಕಾಲದ ೪

೧೫ ನೆಯ ದುರ್ಮ್ಮತಿ ಸಂವತ್ಸರದ ಫಾಲ್ಗುಣದಮಾವಾಸ್ಯೆ ಆದಿವಾರ ಸಂಕ್ರಮಣ ಬ್ಯತಿಪಾತ

೧೬ ಸೂರ್ಯ್ಯಗ್ರಹಣದಂದು ಶ್ರೀ ರಾಜಧಾನಿಪಟ್ಟಣಂ ಪುಲಿಗೆಜೆಯ ಬ್ರಹ್ಮಪುರಿಯ

**ಫಲಕದ ಇನ್ನೊಂದು ತುಣುಕು**

೧೭ ಮಹಾಜನ ನೂಜೆಪ್ಪದಿಂಬರ ಕಯ್ಯಲು ಶ್ರೀ ಸ್ವಯಂಭು ದಕ್ಷಿಣ ಸೋಮನಾಥದೇವರ ಸ್ಥಾ

೧೮ ನಾಚಾರ್ಯ್ಯ ಜ್ಞಾನಸೋಮಪಣ್ಡಿತದೇವರು ದ್ರಬ್ಯ ನಿವೇದನಗೆಯ್ದು ದೇವರ ಭೋಗ

೧೯ ಧಾರಾಪೂರ್ಬ್ಬಕ ಸರ್ಬ್ಬನಮಸ್ಯಂ ಸರ್ಬ್ಬಬಾಧಾ ಪರಿಹಾರಮಾಗೆ ಪಡೆದ ಭೂಮಿ

೨೦ ಯ ಪ್ರಮಾಣಮೂರಿಂ ವಾಯಬ್ಯದ ಪೊಲದೊಳಗೆ ಗಡಿಂಬದ ಗಳೆಯ ಮತ್ತ ನಾ

೨೧ ಲ್ಕದಕ್ಕೆ ಸೀಮೆ ಮೂಡಲು ಪಾರ್ಶ್ವಪೊಲಂ ಮೇರೆ ತೆಂಕಲು ಭೋಗೇಸ್ವರದ ಪೊಲ ಮೇರೆ ಪ

೨೨ ಡುವಲು ರಾಜಿಮಯನ ಬಸದಿಯ ಪೊಲಂ ಮೇರೆ ಬಡಗಲು ಲಕ್ಷ್ಮಣೇಸ್ವ

೨೩ ರದ ಪೊಲ ಮೇರೆ ॥ ಮತ್ತಂ ನಾಲ್ಕುಂ ಗೊಂಟಿನೊಳು ಲಿಂಗಮೂರ್ತ್ತಿಯ ಕಲ್ಲು ॥ ಸ್ವ

೨೪ ದತ್ತಾಂ ಪರದತ್ತಾಂ ವಾಯೋ ಹರೇತ ವಸುನ್ಧರಾಂ ಷಷ್ಟಿರ್ವರ್ಷ ಸಹಸ್ರಾಣಿ

೨೫ ವಿಷ್ಟಾಯಾಂ ಜಾಯತೇ ಕ್ರಿಮಿಃ ॥ @@

### ೬. ಸೋಮೇಶ್ವರ ದೇವಾಲಯದ ಆವರಣದಲ್ಲಿಯ ಇನ್ನೊಂದು ಶಾಸನ ಕ್ರಿಶ. ೧೧೪೫

ಈ ಶಾಸನವು ಕಲ್ಯಾಣ ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲನ ಕಾಲದ್ದಾಗಿದ್ದು, ಸೇನಾಧಿಪತಿ ಬರ್ಮದೇವ ದಂಡಾಧೀಶನ ಅಧೀನಾಧಿಕಾರಿಯಾಗಿ ಪುಲಿಗೆಜೆ ೩೦೦ನ್ನು ವಾಮದೇವರಸ ಪಾಲಿಸುತ್ತಿದ್ದ. ಇವನಿಗೆ ಅಧಿದೈವ ವಿಷ್ಣುವಾದರೆ ಆಳ್ದನಾಗಿದ್ದಾತ ಬರ್ಮ ದಂಡಾಧೀಶ. ತಂದೆ ನಾಗದೇವನಾದರೆ, ತಾಯಿ ನನ್ನವ್ವೆ, ತಮ್ಮ ಸೋವಿದೇವ. ಇವನೊಂದಿಗೆ ಜಯಕೇಸಿದೇವ ಮತ್ತು ಮೇದಿರಾಜ ದಂಡಾಧೀಶರಿದ್ದರು. ಈ ಮೇದಿರಾಜ ದಂಡಾಧೀಶನ ತಂದೆ ಬರ್ಮದೇವ ವಿಭುವಾದರೆ ತಾಯಿ ಚೌಂಡಿಯಕ್ಕ ಎನ್ನುವವಳು. ಪೆರ್ಜುಂಕ, ವಡ್ಡರಾವುಳ ಸುಂಕ ವಿಧಿಸುವ ಸುಂಕಾಧಿಕಾರಿಯೂ ದಂಡನಾಯಕನೂ ಆದ ಮೇದಿರಾಜಯ್ಯ ಪುಲಿಗೆರೆಯ ಸ್ವಯಂಭೂ ಶ್ರೀ ದಕ್ಷಿಣ ಸೋಮನಾಥದೇವರ ನೈವೇದ್ಯಕ್ಕೆ ಎರಡರುನೂರರಲ್ಲಿಯ ಒಕ್ಕಲುದೆರೆ, ಒಡ್ಡರಾವುಳ, ಪೆರ್ಜುಂಕ, ಬಿಲ್ಕೊಡೆ ಇತ್ಯಾದಿ ಸುಂಕಗಳಿಂದ ಬರುವ ಆದಾಯವನ್ನು ದಾನವಾಗಿ ಆ ಕ್ಷೇತ್ರದ ಸ್ಥಾನಾಚಾರ್ಯರಾದ ಮಹಾವ್ರತಿ ಜ್ಞಾನಸೋಮಪಂಡಿತರ ಕಾಲ್ತೊಳೆದು ದಾನವಾಗಿ ನೀಡಿದರೆಂದು ತಿಳಿಸುತ್ತದೆ.

ಈ ದಾನವನ್ನು ಕ್ರಿಶ. ೧೧೪೫ರ ಜೂನ್ ೨೨ರಂದು ನೀಡಿದೆ. ಅಂದು ಸೂರ್ಯ್ಯಗ್ರಹಣವೂ ಇತ್ತು. ಶಾಸನದ ಪೂರ್ಣ ಪಾಠ ಇಂತಿದೆ–

೧ . . . . . . . . . . . . . . . . . . . . . . . . . . . . . . . . . . . .
ಕುಳತಿಳಕಂ ಚಾಲುಕ್ಯಾ

೨ . . . . . . . . . . . . . . . . . . . . . . . . . . . . . . . . . . . .
ಕಮಲ್ಲದೇವರ ವಿಜಯರಾಜ್ಯಮು

೩ . . . . . . . . . . . . . . . . . . . . . . . . . . . . . . . . . . . .
ಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ॥ ತತ್ಪಾದ ಪ

೪ . . . . . . . . . . . . . . . . . . . . . . . . . . . . . . . . . . . .
ಶುದ್ಧಂ ನಯಮಯನಿಪುಣಂ ಚಾಳುಕ್ಯರಾಜ್ಯ ನಿಸ್ತರ

೫ . . . . . . ನ್ತ ಸೇನಾಧಿಪತಿಳಕಂ ಬರ್ಮ್ಮದೇವ ದಣ್ಣಾಧೀಶಂ ॥ ತತ್ಪಾದಾರಾಧಕಂ ॥ ವೃ

೬ . . . . ಣೀಶ ಜಗದೇಕಮಲ್ಲಗರುಡಂಗುಗ್ರಾಜಿಯೊಳ್ ವೈರಿಭೀಕರ ಚಂಚುಪ್ರತಿಮಂ

೭ ಪ್ರತಾಪನೃಪ ಚಂಚತ್ಪೂಜ್ಯ ರಾಜ್ಯೈಕ ನಿಸ್ತರಣಂ ಬರ್ಮ್ಮರಸಂಗೆ ಕಟ್ಟಿದಲಗಿರ್ಪ್ಪಂತಿರ್ದ್ದ ಪರಿ

೮ ವಾಮುದೇವರಸಂ ಮೆಯ್ಗಲಿ ದಣ್ಣನಾಯಕ ಶಿರೋರತ್ನಂ ಜಗನ್ಮಣ್ಣನಂ ॥ ವನಜಾಕ್ಷಂ ದೈಯ್ವ

೯ ಮಾಳ್ದಂ ಪ್ರಕಟಿತ ಮಹಿಮಂ ಬರ್ಮ್ಮದಣ್ಣಾಧಿಪಂ ಭೂವಿನುತಂ ಶ್ರೀ ನಾಗದೇವಂ ಜನಕನ

೧೦ ಮಳಗೋತ್ರ ಪ್ರಶಸ್ತ ಪ್ರಭಾಭಾಮಿನಿ ತಾಯಿ ನನ್ನವ್ವೆ ತಮ್ಮಂ ನಿಜಕುಳತಿಳಕಂ ಸೋವಿದೇವಂ

೧೧ ದಲೆನ್ದಂದನವದ್ಯ ಖ್ಯಾತಿವೆತ್ತಂ ಪ್ರಕಟಿತ ಮಹಿಮಂ ವಾಮದಣ್ಣಾಧಿನಾಥ ॥ ಆ ಮಹಾನು

೧೨ ಭಾವ ಪುಲಿಗೆಜೆಯ ಮೂನೂಱಂ ದುಷ್ಟನಿಗ್ರಹ ವಿಶಿಷ್ಟ ಪ್ರತಿಪಾಳನೆಯಿಂದಾಳ್ದನು ಭವಿಸು

೧೩ ತ್ತಿರೆ ॥ ಕ ॥ ಅಗಣಿತ ಗುಣಗಣನಿಳಯಂ ಸಗರ ಕ್ಷತ್ರಾನ್ವಯಾಬ್ಜ ಮಾರ್ತ್ತಣ್ಡಂ ವಾರ್ಧಿಪಾಲದೇವ ಗ

೧೪ ಭೀರನೆನಿಸಿ ನೆಗರ್ದ್ದ ಜಗದೊಳ್ ಜಯಕೇಸಿದೇವ ನೃಪನತುಳಬಳಂ ॥ @ ಪತಿ ಪಾಲದೇವ

೧೫ ಸೇನಾಪತಿ ಜನಕ ಬರ್ಮ್ಮದೇವ ವಿಭು ಜನನಿ ಜನಸ್ತುತೆ ಚೌಂಡಿಯಕ್ಕನೆನಲುನ್ನತಿವೆತ್ತಂ

೧೬ ಮೇದಿರಾಜ ದಣ್ಣಾಧೀಶಂ ॥ ವೃ ॥ ಪಂಕಜಾಸನ ವಾನ್ವಯ ವಿರಾಜಿತನುದ್ಧತ ವೀರವೈರಿ ನಿಶ್ಶಂಕನ

೧೭ ಪಾರ ಪೌರುಷಗುಣಂ ನೃತವಾಕ್ಯನು ಮಾಧವಾಂಘ್ರಿ ಸತ್ಪಂಕಜ ಸೇವ್ಯಸೇವಕ ಶಿಳೀಮುಖ

೧೮ ನೆಂಬುದು ಧಾತ್ರಿ ಕೂರ್ತ್ತು ಪೆರ್ಜ್ಜುಂಕದ ವಡ್ಡರಾವುಳದಧೀಶ ಚಮೂಪತಿ ಮೇದಿರಾ

೧೯ ಜನಂ ॥ @ ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮದ್ದಣ್ಣ ನಾಯಕಂ ಮೇದಿರಾಜೈಯ್ಯಂಗ

೨೦ ಳು ಪುಲಿಗೆಜೆಯು ಸ್ವಯಂಭು ಶ್ರೀ ದಕ್ಷಿಣ ಸೋಮನಾಥದೇವರ ನೈವೇದ್ಯಕ್ಕೆ ಚಂದ್ರಾರ್ಕ್ಕ

೨೧ ತಾರಂ ನಡೆವನ್ತಾಗಿ ಸ್ವಸ್ತಿ ಶ್ರೀಮತ್ಪ್ರತಾಪ ಚಕ್ರವರ್ತ್ತಿ ಜಗದೇಕಮಲ್ಲವರ್ಷದ ೮ನೆಯ ಕ್ರೋಧ

೨೨ ನ ಸಂವತ್ಸರದ ಜ್ಯೇಷ್ಠದಮವಾಸ್ಯೆ ಸೋಮವಾರದಂದು ನನ್ದಿಯುಂಡಿಗೆಯ ಎತ್ತಯ್ವತ್ತಱ ನಾನಾಭ

೨೩ ಣ್ಡ ದವಸಧಾನ್ಯದ ಹೇಱಯ್ವತ್ತಕ್ಕೆರಡಱು ನೂಱಱೊಳ ಗೊಕ್ಕಲುದೆಱೆ ಪೆರ್ಜ್ಜುಂಕ ಬಿಲ್ಕೊಡೆ ಠಾಣೊಪ್ಪು ಸ

೨೪ ಹಿತಂ ಸರ್ವ್ವನಮಶ್ಯಮುಂ ಸರ್ವ್ವಬಾಧಾ ಪರಿಹಾರಮಾಗಿ ಸೋಮೇಶ್ವರ ಸ್ಥಾನಾಚಾರ್ಯ್ಯಂ ಮಹಾವ್ರ

೨೫ ತಿ ಜ್ಞಾನಸೋಮಪಣ್ಡಿತರ ಕಾಲಂ ಕರ್ಚ್ಚಿ ಧಾರಾ ಪೂರ್ವ್ವಕಂ ಮಾಡಿ ಬಿಟ್ಟರೀ ಧರ್ಮ್ಮಮಂ ಪ್ರತಿಪಾಳಿಸಿದಂಗೆ ಸ್ವ

೨೬ ರ್ಗ್ಗಸುಖಮಿದನಳಿದಂ ಪಂಚಮಹಾಪಾತಕನಕ್ಕುಂ ॥

## ೭. ಸೋಮೇಶ್ವರ ದೇವಾಲಯದ ಆವರಣದಲ್ಲಿಯ ಮತ್ತೊಂದು ಶಾಸನ ಕ್ರಿ.ಶ. ೧೧೪೫

೩೨" ಉದ್ದ ೨೦" ಅಗಲದ ಗುಲಾಬಿವರ್ಣ ಮಿಶ್ರಿತ ಉಸುಕುಕಲ್ಲಿನ ಮೇಲೆ ಬರೆದ ಶಾಸನ ಇದಾಗಿದ್ದು, ಮೇಲಿನ ಭಾಗ ಅರ್ಧ ವೃತ್ತಾಕಾರವಾಗಿದೆ. ಮೇಲ್ಭಾಗದ ೮" ನಲ್ಲಿ ನಂದಿ, ಶಿವಲಿಂಗ, ಕರುವಿಗೆ ಹಾಲೂಡಿಸುತ್ತಿರುವ ಆಕಳಿನ ಉಬ್ಬು ಶಿಲ್ಪಗಳಿವೆ.

ಸುಮಾರು ೧೨ನೆಯ ಶತಮಾನದ ೧" ಗಾತ್ರದ ಅಕ್ಷರಗಳನ್ನು ಆಳವಾಗಿ ಕೆತ್ತಲಾಗಿದೆ. ಶಕಟರೇಫವನ್ನು ಬಳಸಲಾಗಿದೆ. ಅರ್ಕಾವಳಿ ಬರುವಲ್ಲೆಲ್ಲ ಹಿಂದಿನ ಅಕ್ಷರ ದ್ವಿತ್ವವಾಗಿದೆ. ವ ಬರಬೇಕಾದಲ್ಲೆಲ್ಲ ಬ ಬಳಸಲಾಗಿದೆ. ಉದಾಹರಣೆಗೆ – ಧಾರಾಪೂರ್ಬ್ಬಕ, ಸರ್ಬ್ಬಬಾಧಾ, ಹನ್ನಿರ್ಬ್ಬಗ್ಗಾ‍ವುಂಡು ಇತ್ಯಾದಿ.

ಕಲ್ಯಾಣಚಾಲುಕ್ಯ ಚಕ್ರವರ್ತಿ ಇಮ್ಮಡಿ ಜಗದೇಕಮಲ್ಲ ಆಳುತ್ತಿರುವಾಗ, ಆತನ ಅಧೀನವಾಗಿ ಯಾದವ ವಂಶಜನಾದ ಆಚರಸ ಆಳುತ್ತಿದ್ದನು. ಅವನ ಪತ್ನಿ ಜಿನಧರ್ಮಿಯಾದ ಲೀಲಾದೇವಿ ಎನ್ನುವವಳಿದ್ದಳು. ಆತನ ತಮ್ಮ ಕಲಿಯಮರಸನೂ ಖ್ಯಾತಿಯನ್ನು ಹೊಂದಿದ್ದನು. ಆಚನೃಪನ ಅಧೀನನಾಗಿ ಮಾಚಿದೇವರಸನು ಬೆಳ್ಳಿಟ್ಟಗೆ ೧೨ ಪ್ರಾಂತವನ್ನು ಆಳುತ್ತಿರುವಾಗ, ರಾಜಧಾನಿ ಪಟ್ಟಣವೆನಿಸಿದ ಪುಲಿಗೆಱೆಯ ಸ್ವಯಂಭು ದಕ್ಷಿಣ ಸೋಮನಾಥದೇವರ ನಂದಾದೀವಿಗೆಗೆ ಅಲ್ಲಿಯ ಆಚಾರ್ಯ ಜ್ಞಾನಸೋಮಪಂಡಿತದೇವರ ಕಾಲ್ತೊಳೆದು ಸುಂಕ ದಾನಗಳನ್ನು ನೀಡಿದುದನ್ನು ಶಾಸನ ತಿಳಿಸುತ್ತದೆ. ಇಲ್ಲಿಯ ನಿಬಂಧ, ಆಯದಾಯ, ಕಾಣಿಕೆ, ಕಿರುಕುಳ, ಪಂಚಕಾರುಕ, ಬೀರವಣ ಎಂಬ ಸುಂಕಗಳು ; ಹನ್ನಿರ್ಬ್ಬಗ್ಗಾ‍ವುಂಡುಗಳು, ಸಮಸ್ತ ಪರಿಗ್ರಹ ಎನ್ನುವ ಶಬ್ದಗಳನ್ನು ಗಮನಿಸಬೇಕು. ಬೆಳ್ಳಿಟ್ಟಗೆ ೧೨ ಎಂಬ ಪ್ರಾಂತವನ್ನು ಪುಲಿಗೆರೆ ೩೦೦ ಒಳಗೊಂಡಿತ್ತು ಮತ್ತು ಅದರ ರಾಜಧಾನಿ ಪಟ್ಟಣವಾಗಿ ಪುಲಿಗೆರೆ ಇತ್ತು ಎನ್ನುವುದನ್ನು ಶಾಸನ ಸ್ಪಷ್ಟಪಡಿಸುತ್ತದೆ. ಆಚರಸ, ಲೀಲಾದೇವಿ ಮತ್ತು ಮಾಚಿದೇವರ ವರ್ಣನೆಗಳು ಗಮನ ಸೆಳೆಯುತ್ತವೆ. ಬೆಳ್ಳಿಟ್ಟಗೆ ಎನ್ನುವುದು ಇಂದಿನ ಶಿರಹಟ್ಟಿ ತಾಲೂಕಿನ ಬೆಳ್ಳಟ್ಟಿಯಾಗಿದೆ. ಪುಲಿಗೆರೆ ಅದೇ ತಾಲೂಕಿನ ಇಂದಿನ ಲಕ್ಷ್ಮೇಶ್ವರವಾಗಿದ್ದು, ಪ್ರಸ್ತುತ ಶಾಸನ ಅಲ್ಲಿಯೇ ದೊರೆತಿದೆ.

ಶಾಸನದಲ್ಲಿರುವ ಮಿತಿಯು ಕ್ರಿ.ಶ. ೧೧೪೫ರ ಮಾರ್ಚ್ ೨೭ಕ್ಕೆ ಸರಿ ಹೊಂದುತ್ತದೆ. ಶಾಸನದ ಪೂರ್ಣ ಪಾಠ ಕೆಳಗಿನಂತಿದೆ :

೧ ನಮಸ್ತುಂಗ ಶಿರಶ್ಚುಂಬಿ ಚನ್ದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂ

೨ ಳ ಸ್ತಂಭಾಯ ಶಂಭವೇ ॥ ಗಣಪತ್ಯಾಯ ನಮಃ ॥

೩ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜಂ ಪ

೪ ರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀ

೫ ಮಜ್ಜಗದೇಕಮಲ್ಲದೇವರ ವಿಜಯರಾಜ್ಯಮುತ್ತ ರೋತ್ತರಾಭಿವೃದ್ಧಿ ಪ್ರವ

೬ ರ್ಧಮಾನಮಾಚಂದ್ರಾರ್ಕ್ಕ ತಾರಂ ಸಲುತ್ತಮಿರೆ ॥ ತತ್ಪಾದಪದ್ಮೋಪಜೀವಿ ॥ ಧರಣೀಸ್ತು

೭ ತಂ ಯಾದವಕುಳ ಸರೋಜಿನೀಭಾನು ಮದನೃಪಕರಿ ಸಂಹರಣಂ ಹರಿಸ್ತಾನ

೮ ಖಚರೇಶ್ವರನೆನೆ ನೆಗಳ್ದಂ ಧರಾಧಿಪತಿಯಾಚರಸಂ ॥ ಮೇದಿನಿ ಪೊಗಳ್ಗುಂ ಜಿನ ಧರ್ಮೋದಧಿ ಶಶಿ

೯ ಲೇಖೆ ಪತಿಹಿತ ಬ್ರತ ನುತ ಸೀತಾದೇವಿಯೆಂದು ಸಲೆ ಲೀಲಾದೇವಿಯಂ ನೃಪ ಮನೋವಲ್ಲಭೆಯಂ॥

೧೦ ಆ ನೃಪನನುಜಂ ವಿಶ್ವಮಹೀನುತನಾದ್ಯವನೀಶ ಚರಿತ ಕೀರ್ತ್ತಿಶ್ರೀನಿಳಯನೆನಿಸಿದಂ ವನಿತಾನಂಗಂ ಕ

೧೧ ಲಿಯಮರಸನವತನೀಳದೊಳು ॥ ಆಚನೃಪಾತ್ಮಜನಖಿಳ ಮಹೀಚಕ್ರ ಸ್ತುತ್ಯನಾತಸತ್ಯಂ

೧೨ ವಿದ್ವಿಟ್ಕೀಚಕ ವೈಕೋದರಂ ವಿಮಳಾಚರಣಂ ಮಾಚಿದೇವ ನ್ರುಪಂ ನೆಗಳ್ಟಂ ॥ ಅನ್ತನೂನ ಸತ್ಯನಿಧಿಯೆ

೧೩ ನಿಸಿದ ಮಾಚಿದೇವರಸರ್ ಬೆಳ್ಳಿಟ್ಟಗೆ ಹನ್ನೆರಡುಮಂ ಸುಖಸಂಕಥಾ ವಿನೋದದಿಂ ಪ್ರತಿಪಾ

೧೪ ಳಿಸುತ್ತಿರ್ದ್ದು ಶ್ರೀಮಜ್ಜಗದೇಕಮಲ್ಲವರ್ಷದ ೧೨ನೆಯ ಪ್ರಭವ ಸಂವತ್ಸರದ ಚೈ

೧೫ ತ್ರ ಶುದ್ಧ ಪಂಚಮಿಯಾದಿವಾರದೊಳುತ್ತರಾಯಣ ಸಂಕ್ರಾನ್ತಿ ನಿಮಿತ್ತಂ ಶ್ರೀಮದ್ರಾಜ

೧೬ ಧಾನಿ ಪಟ್ಟಣಂ ಪುಲಿಗೆಱೆಯ ಶ್ರೀ ಸ್ವಯಂಭು ದಕ್ಷಿಣ ಸೋಮನಾಥದೇವರ ನನ್ದಾ

೧೭ ದೀವಿಗೆಗೆ ದೇವಭೋಗ ನಿಟ್ಟೂರಲಿ ರಾಳ್ವನಿಭನ್ದ ಯಾಯದಾಯಂ ಕಾಣಿಕೆ ಕಿಱುಕುಳಂ

೧೮ ಪಂಚಕಾರುಕ ಬೀರವಣವೊಳಗಾಗಿ ತಮ್ಮ ನಿಬನ್ದಿಯೆಲ್ಲವಂ ಸರ್ಬ್ಬಬಾಧಾ ಪರಿಹಾರವಾ

೧೯ ಗಿ ಹನ್ನಿರ್ಬ್ಬಗಾರ್ಗ್ಗವುಂಡುಗಳುಂ ಸಮಸ್ತ ಪರಿಗ್ರಹಮುಮಿರ್ದ್ದು ತತ್ಸ್ಥಾನದಾಚಾರ್ಯ್ಯ

೨೦ ರಪ್ಪ ಜ್ಞಾನಸೋಮಪಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು ॥ ಸ್ವದತ್ತಂ

೨೧ ಪರದತ್ತಂ ವಾಯೋಹರೇತ ವಸುನ್ಧರಾಂ ಷಷ್ಟಿರ್ವರ್ಷ ಸಹಶ್ರಾಣಿ ವಿಷ್ಟಾಯಾಂ ಜಾ

೨೨ ಯತೇ ಕ್ರಿಮಿಃ ॥

**೮. ಶಂಖ ಬಸದಿಯ ಕಪೋತದಲ್ಲಿರುವ ಶಾಸನ; ಸುಮಾರು ೧೨ನೆಯ ಶತಮಾನ.**

೨" ಎತ್ತರ ೫೬" ಉದ್ದದ ಭಾಗದಲ್ಲಿ ಶಂಖ ಬಸದಿಯ ಮುಂಭಾಗದ ಹೊರಭಿತ್ತಿಯ ಬಲಮೂಲೆಯಲ್ಲಿ ಈ ಶಾಸನವಿದೆ.

ಶ್ರೀ ಸ್ವಯಂಭೂ ಶಂಖದೇವರ ದಿವ್ಯವಾದ ಪದಕಮಲಗಳನ್ನು ಆರಾಧಿಸುವವನಾದ ಮುದ್ದಿಸೆಟ್ಟಿ ಎನ್ನುವ ವ್ಯಕ್ತಿಯೊಬ್ಬನ ತಮ್ಮ ಜಿನಿಸೆಟ್ಟಿ ಎನ್ನುವಾತ ಪಾದಶಿಲೆಗಳನ್ನು ಮಾಡಿಸಿದನೆಂದು ಉಲ್ಲೇಖಿಸುತ್ತದೆ. ಲಕ್ಷ್ಮೇಶ್ವರದ ಹಲವಾರು ಶಾಸನಗಳಲ್ಲಿ ಮುದ್ದಿಸೆಟ್ಟಿಯ ಹೆಸರು ಪ್ರಸ್ತಾಪಗೊಂಡಿದೆ ಎಂಬುದನ್ನು ಗಮನಿಸಬಹುದು.

೧) ಶ್ರೀ ಸ್ವಯಂಭೂ ಸಂಖದೇವರ ದಿಬ್ಯ ಶ್ರೀಪಾದ ಪದ್ಮಾರಾಧಕನುಮಪ್ಪ ಮುದ್ದಿಸೆಟ್ಟಿಯ ತಮ್ಮ ಜಿನಿಸೆಟ್ಟಿ ಮಾಡಿಸಿದ ಪಾದಸಿಲೆ ಮಂಗಳ ಮಹಾ ಶ್ರೀ

**೯. ಪಾಟೀಲ ಕುಲಕರ್ಣಿ ಬಾವಿ ಹತ್ತಿರದ ವೀರಗಲ್ಲು; ಸುಮಾರು ೧೨ನೆಯ ಶತಮಾನ**

೪೮" ಎತ್ತರ ೨೧" ಅಗಲದ ಕರಿಕಲ್ಲಿನ ಮೇಲೆ ಈ ವೀರಗಲ್ಲನ್ನು ಕೆತ್ತಲಾಗಿದೆ. ಅತ್ಯಂತ ಕೆಳಗಿನ ಪಟ್ಟಿಕೆಯಲ್ಲಿ ಕುದುರೆಯನ್ನೇರಿ ಛತ್ರವನ್ನು ಹಿಡಿದ ವೀರನೊಬ್ಬ ಕುಳಿತಿದ್ದು, ಕುದುರೆಯ ಎದುರಿಗೆ ಪದ್ಮಾಸನದಲ್ಲಿ ಕುಳಿತ ಇನ್ನೊಬ್ಬ ವೀರನಿದ್ದು, ಆತನ ತಲೆ ಕತ್ತರಿಸಿ ಕೆಳಗೆ ಬಿದ್ದಿದೆ. ವೀರನ ಪಕ್ಕದಲ್ಲಿ ಖಡ್ಗವನ್ನು ಹಿರಿದುನಿಂತ ವೀರನೊಬ್ಬನಿದ್ದಾನೆ. ಕುದುರೆಯು ಸಕಲ ಆಭರಣಗಳಿಂದ ಭೂಷಿತವಾಗಿದೆ. ಕುದುರೆಯ ಮೇಲೆ ಕುಳಿತ ವೀರ ಮತ್ತು ಖಡ್ಗ ಹಿಡಿದು ನಿಂತ ವೀರನೂ ಕೂಡ ಕಡಗ, ಕಂಕಣ, ಕಂಠಹಾರ, ಭುಜಕೀರ್ತಿ, ಕಾಲಿಗೂ ಆಭರಣಗಳನ್ನು ಧರಿಸಿದ್ದಾರೆ. ಇದರ ಮೇಲಿನ ೨" ಪಟ್ಟಿಕೆಯಲ್ಲಿ ಒಂದು ಸಾಲಿನ ಶಾಸನವಿದ್ದು, ಮೂರನೆಯ ಪಟ್ಟಿಕೆಯಲ್ಲಿ ಮಂಟಪಾಕಾರದ ಪಲ್ಲಕ್ಕಿಯಲ್ಲಿ ವೀರನೊಬ್ಬ ಪದ್ಮಾಸನಸ್ಥನಾಗಿ ಕೈ ಮುಗಿದು ಕುಳಿತಿದ್ದು, ಎಡ-ಬಲಗಳಲ್ಲಿ ಚಾಮರಧಾರಿಣಿಯರಿದ್ದಾರೆ. ನಾಲ್ಕನೆಯ ಪಟ್ಟಿಕೆಯಲ್ಲಿ ಮತ್ತೆ ಎರಡು ಸಾಲುಗಳ ಶಾಸನವಿದೆ. ಅದರ ಮೇಲ್ಭಾಗದ ಪಟ್ಟಿಕೆಯಲ್ಲಿ ಕುಂಭ, ಗೋಪುರಗಳಿಂದ ಕೂಡಿದ ಮಂಟಪವಿದ್ದು ಕೆಳಗೆ ಶಿವಲಿಂಗ, ಶಿವಲಿಂಗದ ಮುಂದೆ ನದಿ ಮತ್ತು ಗಂಟೆ ಧೂಪಾರತಿಗಳನ್ನು ಹಿಡಿದು ಪೂಜೆ ಮಾಡುತ್ತಿರುವ ಅರ್ಚಕನಿದ್ದು, ಶಿವಲಿಂಗದ ಮುಂದೆ ವೀರ ಕೈಮುಗಿದು ಕುಳಿತಿದ್ದಾನೆ. ತುಂಬ ಸುಂದರವಾದ ವೀರಗಲ್ಲು ಇದಾಗಿದ್ದು, ಸುಮಾರು ೧೨ನೆಯ ಶತಮಾನದ ಅಕ್ಷರಗಳೆಂದು ಲಿಪಿ ಸಾದೃಶ್ಯದಿಂದ ಗುರುತಿಸಬಹುದಾಗಿದೆ.

೧ ಶ್ರೀಮತು ಮಲದೇವನ ಡಿಂಗರಿಗ ಕೊ

೨ ಪಯ ಜಾವಮ ಲೊವೆಯ ಕಾ

**ಎರಡನೆಯ ಪಟ್ಟಿಕೆ**

೩ ಲ ಕೆಳಗೆ ತಲೆಯ ತಿವಿಶಿಕೊಂಡ

**೧೦. ಸೋಮೇಶ್ವರ ದೇವಾಲಯದ ಆವರಣದಲ್ಲಿಯ ಗುಡಿಯಲ್ಲಿ ಶಾಸನ ; ಸು. ೧೨ನೆಯ ಶತಮಾನ**

ಉತ್ತರ ದ್ವಾರದ ಎಡಭಾಗದಲ್ಲಿರುವ ಗುಡಿಯಲ್ಲಿಯ ಶಿವಲಿಂಗದ ಪೀಠದಲ್ಲಿ ಈ ಶಾಸನವನ್ನು ಕಂಡರಿಸಲಾಗಿದೆ. ಪೀಠದ ಸುತ್ತಲು "ಶ್ರೀ ದಂಡೇಶ್ವರದೇವರು" ಎಂದು ಸುಮಾರು ಹನ್ನೆರಡನೆಯ ಶತಮಾನದ ಅಕ್ಷರಗಳಲ್ಲಿ ಕೆತ್ತಲಾಗಿದೆ.

೧ ಶ್ರೀ ದಂಡೇಶ್ವರದೇವರು

**೧೧ ದಕ್ಷಿಣ ದ್ವಾರದಲ್ಲಿ ಮೂರ್ತಿಯ ಕೆಳಗೆ** 'ಗುಜಳ ಪರಿಸುನಾಯ್ಕ' ಎಂದಿದೆ.

**೧೨ ದಕ್ಷಿಣ ದ್ವಾರದಲ್ಲಿ ಮೂರ್ತಿಯ ಕೆಳಗೆ** 'ಶಿವರಾವ ವೊಡೆಯರು । ಶ್ರೀ ಸೋಮನಾಥದೇವರು । ಪೂಜಾರಿ ಚಿಕ್ಕಣ' ಎಂದಿದೆ. ಕೊನೆಯ ಎರಡು ಶಾಸನಗಳು ಅಪ್ರಕಟಿತ ಶಾಸನಗಳಾಗಿವೆ.

ಡಾ. ಎ.ಕೆ. ಶಾಸ್ತ್ರಿ*

# ಇನವಳಿ ಗ್ರಾಮದ ಶಿಲಾಶಾಸನ ಪ್ರತಿ

ಸನಾತನ ಧರ್ಮದ ಪ್ರತೀಕವೆನಿಸಿದ ಶೃಂಗೇರಿ ಮಠದಲ್ಲಿ, ಕಾಲನ ದವಡೆಗೆ ಸಿಲುಕಿ ಸಹಸ್ರಾರು ಕಾಗದಪತ್ರಗಳು[೧], ಕಡತಗಳು[೨], ಶಾಸನಗಳು[೩], ತಾಡೋಲೆಗಳು[೪] ಮತ್ತು ಅಮೂಲ್ಯವಾದ ಗ್ರಂಥಗಳು[೫] ನಶಿಸಿದ್ದರೂ, ಚಾರಿತ್ರಿಕ ಮಹತ್ವವುಳ್ಳ ಅನೇಕ ಆಕರ ಸಾಮಗ್ರಿಗಳು ಇನ್ನೂ ಉಳಿದುಕೊಂಡು ಬಂದಿರುವುದು ಒಂದು ವಿಶೇಷ. ವಿಜಯನಗರ ಕಾಲದಿಂದ ಇಂದಿನವರೆಗೆ, ಈ ಆಕರಗಳು, ಮುಖ್ಯವಾಗಿ, ಶೃಂಗೇರಿ ಧರ್ಮಸಂಸ್ಥಾನದ ಮತ್ತು ಕರ್ನಾಟಕದ ಚರಿತ್ರೆಯ ಮೇಲೆ ಬೆಳಕು ಬೀರುವುದರ ಜೊತೆಗೆ, ದೇಶದ ಚರಿತ್ರೆಯನ್ನು ಅರಿಯಲೂ ಉಪಯುಕ್ತ. ವಿಜಯನಗರದ ಸಮ್ರಾಟರು, ಕೆಳದಿ ನಾಯಕರು, ಮೈಸೂರಿನ ಒಡೆಯರು, ಹೈದರಾಬಾದಿನ ನಿಝಾಮರು, ಮೈಸೂರಿನ ಹೈದರಲಿ ಮತ್ತು ಟೀಪುಸುಲ್ತಾನ, ಮರಾಠಾ ಪೇಶ್ವೆ ಮತ್ತು ಸಂಸ್ಥಾನಿಕರು, ದೇಶದ ಅನೇಕ ರಾಜಮಹಾರಾಜರು, ಆಂಗ್ಲರು, ಪಾಳೆಯಗಾರರು ಮತ್ತು ಪ್ರಜೆಗಳು ಶೃಂಗೇರಿ ಮಠವನ್ನು ಮತ್ತು ಜಗದ್ಗುರುಗಳನ್ನು ಗೌರವಿಸಿದ್ದು ಮತ್ತು ಅದೊಂದು ಧರ್ಮಸಂಸ್ಥಾನವಾಗಿ ಬೆಳೆದು ಬಂದಿದ್ದು, ಆಕರಸಾಮಗ್ರಿಗಳಿಂದ ತಿಳಿದುಬರುತ್ತದೆ.[೬] ಮೂಲ ಶಿಲಾ ಮತ್ತು ತಾಮ್ರಶಾಸನಗಳನ್ನು ಮತ್ತು ಕಾಗದ ಪತ್ರಗಳನ್ನು ಕಡತಗಳಲ್ಲಿ ಪ್ರತಿ ಮಾಡಲಾಗಿದ್ದು, ಅನೇಕ ಮೂಲ ಶಾಸನಗಳು ಮತ್ತು ಕಾಗದಪತ್ರಗಳು ಕಾಲ ಸರಿದಂತೆ ನಶಿಸಿದ್ದರಿಂದ, ಕಡತಗಳಲ್ಲಿ ದಾಖಲಿಸಲಾದ ಅವುಗಳ ಪ್ರತಿಗಳು ಬಹು ಉಪಯಕ್ತವೆನಿಸಿವೆ. ಪ್ರತಿಗಳನ್ನು ಮಾಡುವಾಗ, ಲಿಪಿಕಾರರು ಕೆಲವು ದೋಷಗಳನ್ನು ಮಾಡಿದ್ದು ಕಂಡುಬರುತ್ತದೆ. ಆದರೂ, ಕಡತಗಳಲ್ಲಿಯ ದಾಖಲೆಗಳ ಸತ್ಯತೆಯನ್ನು ತಳ್ಳಿಹಾಕುವಂತಿಲ್ಲ. ಪ್ರಸ್ತುತ ಲೇಖನವು ಶೃಂಗೇರಿ ಮಠದ ಕಡತದಲ್ಲಿ ದಕ್ಷಿಣ ಕನ್ನಡಕ್ಕೆ ಸಂಬಂಧಿಸಿದ ಶಾಸನದ ಪ್ರತಿಗೆ ಸೀಮಿತವಾಗಿರುವುದರಿಂದ, ಅದನ್ನು ಕುರಿತು ಮಾತ್ರ ವಿವೇಚಿಸಲಾಗಿದೆ. ಮಂಗಳೂರು ರಾಜ್ಯದೊಳಗಿನ ಯಿನವಳಿ ಗ್ರಾಮದ ಶಿಲಾಶಾಸನ[೭] ಪ್ರತಿಯೊಂದು ಶೃಂಗೇರಿ ಮಠದ ಕಡತವೊಂದರಲ್ಲಿ ಲಭಿಸಿದ್ದು, ಅದರಲ್ಲಿಯ ಕೆಲವು ಮುಖ್ಯ ಅಂಶಗಳನ್ನು ಗಮನಿಸಬಹುದಾಗಿದೆ.

ಶಾಲಿವಾಹನ ಶಕವರ್ಷ ೧೩೭೧ (ಕ್ರಿ.ಶ. ೧೪೪೮)ನೆಯ ವಿಭವ ಸಂವತ್ಸರದ ಕಾರ್ತಿಕ ಶು. ೧೨ರಂದು, ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಪ್ರೌಢದೇವರಾಯರ ರಾಜ್ಯಾಭ್ಯುದಯ ಕಾಲದಲ್ಲಿ, ಅವರ ಆಜ್ಞಾಧಾರಕರಾದ ಶ್ರೀಮನ್ ಮಹಾಪ್ರಧಾನ ದೇವಪಂಣಾಯಕರ ನಿರೂಪದಿಂದ ಫಾಯಂಣಗಳು ಮಂಗಳೂರು ರಾಜ್ಯವನ್ನು ಪಾಲಿಸುತ್ತಿದ್ದ ಕಾಲದಲ್ಲಿ, ಆ ದೇವರಾಯ ಮಹಾರಾಯರಿಗೆ ಮತ್ತು ಅವರ ಸಂತತಿಗೆ ಶತ್ರುಕ್ಷಯ ಮತ್ತು ಮಿತ್ರರಿಂದಾಗಿ ಏಳ್ಗೆಯಾಗಲೆಂದು, ಶೃಂಗೇರಿಯ ಶ್ರೀ ವಿದ್ಯಾಶಂಕರ ದೇವರ ಅಮೃತಪಡಿ, ನಂದಾದೀಪ್ತಿ, ಮೊದಲಾದ ವಿನಿಯೋಗಗಳಿಗೋಸ್ಕರ, ಫಾಯಂಣಗಳು ಉತ್ಥಾನ ದ್ವಾದಶಿಯ ಪುಣ್ಯಕಾಲದಲ್ಲಿ, ಒಟ್ಟು ಕಾಟಿ ೩೪೦ ಹೊನ್ನಿನ, ಮಂಗಳೂರು ರಾಜ್ಯದೊಳಗಿನ ಯಿನಳಿ, ಬೊಳಂತೂರು, ರೊಣಾಜ ಮತ್ತು ಕೊಪ್ಪರಿಗೆ ಗ್ರಾಮಗಳನ್ನು ಮಂಗಳೂರಿನ ೪೦ ಮಂದಿ ಕಟಲೆಯವರು, ಬಂಗರು, ಚಉಟರು, ಮೊದಲಾದವರು ಸಮರ್ಪಿಸಿದ ಭೂಮಿಧರ್ಮಶಾಸನದ ಪ್ರತಿಯನ್ನು ಕಡತದಲ್ಲಿ ಉಲ್ಲೇಖಿಸಲಾಗಿದೆ. "ಶ್ರೀ ಗಣಾಧಿಪತಯೆ ನಮಃ ನಮಸ್ತುಂಗ", ಎಂಬ ಪ್ರಾರ್ಥನಾ ಶ್ಲೋಕದೊಂದಿಗೆ ಶಾಸನದ ಪಾಠ ಪ್ರಾರಂಭವಾಗುತ್ತದೆ. ಆದರೆ ಪೂರ್ಣಶ್ಲೋಕವನ್ನು ಪ್ರತಿಯಲ್ಲಿ ಉಲ್ಲೇಖಿಸಿಲ್ಲ. ಒಟ್ಟೂ ೩೪೦ ಹೊನ್ನಿನ ಭೂಮಿಗೆ ಸಂಬಂಧಿಸಿದ ಹುಟ್ಟುವಳಿ, ಗ್ರಾಮನಷ್ಟ, ಕುಳದ ಮುಡಿ, ಹೊಳೆಯ ಸುಂಕ, ಮುಂತಾದವುಗಳ ವಿವರಣೆಯನ್ನು ಶಾಸನದಲ್ಲಿ ನಮೂದಿಸಲಾಗಿದೆ. ಆಚಂದ್ರಾರ್ಕಸ್ಥಾಯಿಗಳಾಗಿ ಅನುಭವಿಸುವಂತೆ ಧರ್ಮಶಾಸನವನ್ನು ಸಮರ್ಪಿಸಲಾಯಿತೆಂದು ಕಾಣಿಸಲಾಗಿದೆ. ಸಾಮಾನ್ಯವಾಗಿ ಇನ್ನುಳಿದ ಶಾಸನಗಳಂತೆ, 'ದಾನಪಾಲನ' ಎಂಬ ಗ್ರಂಥದೊಂದಿಗೆ ಶಾಸನವು ಮುಕ್ತಾಯಗೊಳ್ಳುತ್ತದೆ. ಅಂತ್ಯದಲ್ಲಿ 'ಯಥಾಪ್ರತಿ' ಎಂದೂ ಬರೆಯಲಾಗಿದೆ.

ಕಡತದಲ್ಲಿ ನಮೂದಿಸಲಾದ ಶಾಸನದ ಈ ಪ್ರತಿಯನ್ನು ಓದಿದಾಗ, ಸ್ವಾಭಾವಿಕವಾಗಿ, ಒಂದೆರಡು ಸಂದೇಹಗಳು

* ೬೩, ಎಸ್.ಎಸ್. ರೈಸ್ ಮಿಲ್ ಕೆಳಗೆ, ಸಿರಸಿ (ಉ.ಕ.)

ಮೂಡುತ್ತವೆ. ಕ್ರಮವಾಗಿ, ಇಮ್ಮಡಿದೇವರಾಯ (ಕ್ರಿ.ಶ. ೧೪೨೪–೧೪೪೬) ಮತ್ತು ಮಲ್ಲಿಕಾರ್ಜುನ (ಕ್ರಿ.ಶ. ೧೪೪೬–೧೪೬೫) ವಿಜಯನಗರದ ಅರಸರು, ಶಾಸನದಲ್ಲಿ ಉಲ್ಲೇಖಿಸಿದಂತೆ, ಕ್ರಿ.ಶ. ೧೪೪೮ ರಲ್ಲಿ ಮಲ್ಲಿಕಾರ್ಜುನ ಅರಸನಾಗಿದ್ದನೇ ಹೊರತು, ಪ್ರೌಢದೇವರಾಯನಲ್ಲ ಅಥವಾ ಕ್ರಿ.ಶ. ೧೪೪೮ರಲ್ಲಿ ಪ್ರೌಢದೇವರಾಯನು ಇನ್ನೂ ರಾಜ್ಯಭಾರ ನಡೆಸುತ್ತಿದ್ದನೇ ? ಅದೇ ರೀತಿ ಶೃಂಗೇರಿ ಗುರುಪರಂಪರೆಯಲ್ಲಿ ೧೫ನೆಯವರಾದ ಪ್ರಥಮ ಶ್ರೀ ಪುರುಷೋತ್ತಮ ಭಾರತೀ (ಕ್ರಿ.ಶ. ೧೪೦೮–೧೪೪೮) ಮತ್ತು ೧೬ನೆಯವರಾದ ಶ್ರೀ ಶಂಕರಭಾರತೀ (ಕ್ರಿ.ಶ. ೧೪೪೮–೧೪೫೪) ಸ್ವಾಮಿಗಳು ಜಗದ್ಗುರು ಪೀಠವನ್ನು ಅಲಂಕರಿಸಿದವರು. ಶಾಸನದಲ್ಲಿ ಗುರುಗಳ ಹೆಸರನ್ನು ಉಲ್ಲೇಖಿಸಿಲ್ಲ. ಹೀಗಾಗಿ ಈ ಸಂಕ್ರಮಣ ಕಾಲದಲ್ಲಿ ಯಾವ ಗುರುಗಳು ಪೀಠದಲ್ಲಿದ್ದರೆಂದು ನಿರ್ದಿಷ್ಟವಾಗಿ ಹೇಳುವದು ಕಠಿಣ. ಏನಿದ್ದರೂ, ಶಾಸನದಲ್ಲಿ ಉಲ್ಲೇಖಿಸಲಾದ ಇನ್ನುಳಿದ ಅಂಶಗಳು ಗಮನಾರ್ಹವಾಗಿವೆ. ಕಡತದಲ್ಲಿ ಉಲ್ಲೇಖಿಸಲಾದ ಯಿನವಳಿ ಗ್ರಾಮದ ಶಿಲಾಶಾಸನದ ಪ್ರತಿಯ ಪಾಠವು ಇಂತಿದೆ:

ಪು. ೫೭

ಸಾಲು

೧ "ಮಂಗಲ್ಲೂರ್‍ರ್‍ರಾಜ್ಯದ ವಳಗಣ । ಯಿನವಳಿ ।

೨ ಗ್ರಾಮದ ಸಿಲಾ ಶಾಸನ ಪ್ರತ್ತಿ ।

೩ ಶ್ರೀಗಣಾಧಿಪತ್ತಯೆ ನಮಃ ನಮಸ್ತುಂಗ ಯಂಬ ಗ್ರಂತ್ತ ಬರದು ।

೪ ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರ್‍ರುಶ ೧೩೭೧ ನೆಯ ।

೫ ವಿಭವ ಸಂವತ್ಸರದ । ಕಾರ್ತಿಕ ಶು ೧೨ಲ್ಲು ಶ್ರೀಮದ್ರಾಜಾದಿರಾಜ ।

೬ ರಾಜಪರಮೆಶ್ವರ । ಶ್ರೀ ವಿರಪ್ರತಾಪ । ಪ್ರಹುಡ ದೆವರಾಯರ

೭ ರಾಜ್ಯಾಭ್ಯುದಯ ಕಾಲದಲ್ಲು । ಅವರ ಆಗ್ನಾದಾರಕ ।

೮ ರುಮಪ್ಪ । ಶ್ರೀಮಂಮ್ನಹಾಪ್ರದಾನ । ದೆವಪಂಣಾಯಕರು ನಿ

೯ ರೂಪದಿಂದ । ಫಾಯಂಣಗಳು ಮಂಗಲ್ಲೂರ । ರಾಜ್ಯವಂನ್ನು ಪಾಲಿ

೧೦ ಸುತ್ತಿಹ ಕಾಲದಲ್ಲು ಆ ದೆವರಾಯು । ಮಹಾರಾಯರಿಗೂ । ಅವರ

೧೧ ಸಂತತ್ತಿಗು ಶತ್ತುಕ್ಷಯಮಿತ್ತೊರ್ಜಿತ ವಹಂತಾಗಿ । ಶ್ರಿಂಗೆರ್‍ರಿ

೧೨ ಶ್ರೀ ವಿದ್ಯಾಶಂಕರ ದೆವರ । ಅಮ್ರುತಪಡ್ಡಿ ನಂದಾದಿಪ್ತಿ ಮೊದಲಾ

೧೩ ದ ವಿನಿಯೊಗಕ್ಕೆ ಫಾಯಂಣಗಳು । ಉತ್ತಾನ ದ್ವಾದಶಿ

೧೪ ಪುಂಣ್ಯಕಾಲದಲ್ಲಿ ಧಾರೆನೆರದು । ವಿಂಗಡಿಸಿಕೊಟ ಧರ್ಮಶಾಸನ

೧೫ ದ ಕ್ರಮವೆಂತೆಂದರ್‍ರೆ ಮಂನೆಯದ ಗ್ರಾಮದ ವಳಗಣ । ಮೂಡಗ

೧೬ ಡಿಯಲ್ಲಿ ಯಿನಂತವನ ಬಾಳಿ–ಯ ವಳಗೆ । ಮುಂನೂರ್‍ರು ಮು

ಪು. ೫೮

ಸಾಲು

೧ ಡ್ಡಿ ಕಾಟಿಯ ಕುಳದ ಭೂಮಿಗೆ । ಆ ಗ್ರಾಮದ ಹಸರಣೆ ಪ್ರಮಾ

೨ ಣೆನಲ್ಲಿ ಬಹಾದು ಪ್ರತ್ತಿ ಮುಡ್ಡಿ ಕೆದ್ದೆ ೧ ಕಂ ಹಸರಣೆ ಕಾಟಿ । ಗ ೧

೩ ಲೆಖದಲ್ಲು । ಕುಳದ ಮುಡ್ಡಿ ಕೆಡೆ ೩೦೦ ಕಂ । ರೊಖ ಕಾಟಿ ೧೫೦ ದರದ ಆ

೪ ಕಾಟಿ ೩೦೦ ಕಂ । ಗ್ರಾಮ ನಷ್ಟವಾದ ಸಮಂಧಾ ಪ್ರತ್ತಿಪದಕಾಟಿ ೧೦ ಕಂ । ರೊ

೫ ಖ ಕಾಟಿ । ಗ ೩ ಲೆಖದಲು । ಕಾರ್ಟಿಂ ಉಭಯಂ । ರೊಖ । ಕಾಟಿ ೨೪೦ ಯಿನವ

೬ ಳಿಯ ಹೊಳೆಯ ಸುಂಕ । ಕಂ । ಪ್ರಾಶು ರೆಖೆಕಾಟಿ । ಗ ೨೬೫ ಕಂ । ಹು

೭ ಟುವಳಿ ಕಾಟಿ ೧೦೦ ಉಭಯಂ ಕಾಟಿ ೩೪೦ ಅಕ್ಷಾರದಲು ಕಾಟಿ ।

೮ ಮುಂನೂರ್‍ರು ನಾಲ್ವತ್ತು ಹೊಂನಿಗೆ ಸಲೂವ ಗ್ರಾಮ ಯಿನವಳಿ ।

೯ ಬೊಳಂತ್ತೂರು । ರೊಣಾಜ । ಕೊಪ್ಪರಿಗೆ । ಗ್ರಾಮ ಸಹಾ ಕಾರ್ತಿಕ ।

೧೦ ಶು ೧೨ ಪುಂಣ್ಯಕಾಲದಲ್ಲಿ । ದಾನಧಾರಾ ಪೂರ್ವಕವಾಗಿ । ಮಂಗಲೂರ ನಾ

೧೧ ಲ್ವತು ಮಂದಿ ಕಟಲೆಯವರ್‍ರು ಬಂಗರ್‍ರು ಚಉಟಂರ್‍ರು ಮುಂತ್ತಾಗಿ । ಶ್ರೀ

೧೨ ವಿದ್ಯಾಶಂಕರ ದೆವರ ಅಮ್ರುತಪಡ್ಡಿ ನಂದಾದಿಪ್ತಿ ಮದಲಾದ ವಿನಿಯೊ

೧೩ ಗಕೆ । ಧಾರೆಯನೆರದು ಕೊಟ್ಟೆವಾಗಿ । ಆ ಭೂಮಿಗೆ। ವಸಗೆ ।

೧೪ ಉತ್ಸಹ ನಟು ಬೆಟ್ಟು ಆಉದು ಸಲ್ಲದು ಸುಂಕಕೆ । ಸ್ತಾನ ಮಾ

೧೫ ಂನ್ಯ । ಪೂರ್ವ ಮರಿಯಾದೆಯಲ್ಲಿ ಯೆನು ಉಂಟಾದಂನ್ನು

೧೬ ಪಾಲಿಸಿಕೊಂಡು । ಆಚಂದ್ರಾರ್ಕಸ್ತಾಯಿಗಳಾಗಿ । ಶ್ರೀ ವಿದ್ಯಾಶಂಕ

೧೭ ರ ದೇವರ ವಿನಿಯೊಗಕೆ । ನೆಡದು ಬಹಂತ್ತಾಗಿ । ಸಮರ್ಪಿಸಿ ಕೊಟು ।

೧೮ ಯಿಾ ಭೂಮಿ ದರ್ಮಶಾಸನ । ದಾನಪಾಲನ ಯಂಬ ಗ್ರಂಥ ।

೧೯ ಘಾಯಂಣಗಳು ಬದಲಿತ್ವದ ಶಾಸನ ೧

೨೦ ಯಥಾಪ್ರತ್ತಿ । ಪಸ್ತುಕಕೆ ಬರೆತ್ತ"

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. Dr. A.K. Shastry., *The Records of the Sringeri Dharmasamsthana* (Unpub.), U.G.C. New Delhi, 2007.

೨. ಉದ್ದನೆ ಬಟ್ಟೆಗೆ ಅಂಟುಮಿಶ್ರಿತ ಹುಣಸೆಪುಡಿಯನ್ನು ಹಚ್ಚಿ, ಕಾಡಿಗೆ ಲೇಪಿಸಿ, ಗಾರೆಗಲ್ಲು ಅಥವಾ ಗಣಪೆಕಾಯಿಂದ ತಿಕ್ಕಿ, ಒಣಗಿಸಿ, ನಂತರ ಪುಸ್ತಕ ರೂಪದಲ್ಲಿ ಮಡಿಚಿ, ಆ ಹಾಳೆಗಳ ಮೇಲೆ ಸೀಸದಂಥ ಬಳಪದ ಕಲ್ಲಿನ ಪೆನ್ಸಿಲ್‌ನಿಂದ ಬರೆಯಲಾಗುತ್ತಿತ್ತು. ಹಾಳೆಯಲ್ಲಿ ೩–೪ ಪದರುಗಳಿರುವುದು ಕಂಡುಬಂದಿದೆ. ಕಡತಗಳ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಕನ್ನಡದಲ್ಲಿ ಕಡತಗಳು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೭ ಮತ್ತು 'ಶೃಂಗೇರಿ ಮಠದ ಕಡತಗಳಲ್ಲಿಯ ಆಯ್ದ ಚಾರಿತ್ರಿಕ ದಾಖಲೆಗಳು', ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ಸಂ. ೧, ೨೦೦೩ ಮತ್ತು ಸಂ. ೨, ೨೦೦೬, ಓದಿರಿ. ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಕೆಳದಿಯಲ್ಲಿ ಒಂದು ಬಿಳಿ ಕಡತವೂ

೩. i) *Selections from the records of the Sringeri Mutt,* Govt. Press, Mysore, 1927.
ii) *Epigraphia Carnatica,* VI, Old edition.

೪. ಧರ್ಮಶಾಸ್ತ್ರ, ಮಂತ್ರ, ಜ್ಯೋತಿಷ, ಸಾಹಿತ್ಯ, ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ಸಹಸ್ರಾರು ತಾಡೋಲೆಗಳನ್ನು ಶೃಂಗೇರಿ ಮಠದ ಅದ್ವೈತ ಸಂಶೋಧನ ಕೇಂದ್ರದಲ್ಲಿ ವ್ಯವಸ್ಥಿತವಾಗಿ ಇರಿಸಲಾಗಿದೆ.

೫. ಅದ್ವೈತ ಸಂಶೋಧನ ಕೇಂದ್ರ,

೬ ಶೃಂಗೇರಿ ಧರ್ಮಸಂಸ್ಥಾನದ ಚರಿತ್ರೆಗೆ ಸಂಬಂಧಿಸಿ, ಲೇಖಕರ ಈ ಕೆಳಗಿನ ಕೃತಿಗಳನ್ನು ಓದಿರಿ.
i) *A History of Srinigeri*, Prasaranga, Karnatak University, Dharwad, Frist ed. 1982, Second ed. 1998.
ii) **ಶೃಂಗೇರಿ ಧರ್ಮಸಂಸ್ಥಾನ,** ಶೃಂಗೇರಿ ಮಠ, ೧೯೮೩.

೭. Dr. A.K. Shastry., *The Historical records relating to the Kanara Districts,* (Unpub.), U.G.C., New Delhi, 2003, No. 2, Kd. 195, R. 30.

ಡಾ. ಎಂ.ಪಿ. ಮಹದೇವಯ್ಯ*

# ಚುಂಚನಕಟ್ಟೆಯಲ್ಲೊಂದು ಹೊಸ ಶಾಸನ

ಮೈಸೂರು ಜಿಲ್ಲೆ ಕೆ.ಆರ್. ನಗರ ತಾಲ್ಲೂಕಿನ ಚುಂಚನಕಟ್ಟೆಯಲ್ಲಿ ದೊರೆತ ಕ್ರಿ.ಶ. ಸುಮಾರು ೨೦ನೇ ಶತಮಾನಕ್ಕೆ ಸೇರಿಸಬಹುದಾದ 'ಶಿಲಾಶಾಸನ' ಅಂದಿನ ಕಾಲದ ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಪರಿಸ್ಥಿತಿಯ ಮೇಲೆ ಬೆಳಕು ಚೆಲ್ಲುವ ವಿಶಿಷ್ಟ ದಾಖಲೆಯನ್ನು ಒದಗಿಸುತ್ತದೆ. ಸುಮಾರು ೫೧ ಸೆಂ.ಮೀ. ಉದ್ದ ೪೭ ಸೆಂ.ಮೀ. ಅಗಲವಿರುವ ಈ ಶಿಲಾಶಾಸನ ಹತ್ತು ಸಾಲುಗಳನ್ನು ಹೊಂದಿದೆ. ಲಿಪಿ ಮತ್ತು ಭಾಷೆ ಕನ್ನಡ

ಶಾಸನದ ಮೇಲ್ಭಾಗದಲ್ಲಿ ತಿರುನಾಮದ ಉಬ್ಬು ಕೆತ್ತನೆ ಇದೆ.

ಶ್ರೀರಾಮ ಕ್ರುಪ

ಶಂಖ, ಚಕ್ರ ಸಹಿತ ತಿರುನಾಮ ಇರುವುದು ಪ್ರಾಯಶಃ ಶ್ರೀವೈಷ್ಣವ ಪಂಥದ ಪ್ರಭಾವವನ್ನು ಸೂಚಿಸುತ್ತದೆ.

### ಶಾಸನ ಪಾಠ

೧ ಮೈಸೂರು ಸಿಟಿ ಚಾಮರಾಜಮೊಹಲ ಶ್ರೀಗಂಧ ದೊ
೨ ಡ್ಡಬೀದಿ ಇಲಿರುವ ಅದಿಕರ್ನಾಟಕದ ಮತಾಬಿ
೩ ಮಾನರಾದ ಮನನೀಯರಶೀ ಅದಿಚುಂ
೪ ಚನಕಟ್ಟೆ ಕ್ಷೇತ್ರದಲ್ಲಿ ಕಟ್ಟಡವನು ಮಾ
೫ ಡಿಸಿ ಇರುವರು [ಇ] ಅದಿಕರ್ನಾಟಕಪು
೬ ರದಲ್ಲಿರುವ ಪುಟ್ಟಯಾಲಕ್ಕಯ್ಯನ ಮಗ
೭ ಯಾಲಕ್ಕಯ್ಯನ ಸೇವಾರ್ಥ ಕಂಚಯ್ಯನ ಮ
೮ ಗ ಯಾಲಕ್ಕಯ್ಯ ಕರಿಚಿಟ್ಟಯ್ಯ ಕರಿಸಿದ್ದ
೯ ಯ್ಯನ ಬೀದಿ ಬೋರಯ್ಯ ಇದಕ್ಕೆ ಸೇರಿದ ಇ
೧೦ ನ್ನು ಮುಂತಾದವರು

ಮೈಸೂರು ನಗರದಲ್ಲಿರುವ ಚಾಮರಾಜಮೊಹಲ್ಲ ಆದಿಕರ್ನಾಟಕಪುರ=ಅಶೋಕಪುರಂಗಳ ಉಲ್ಲೇಖದೊಡನೆ ಆದಿಕರ್ನಾಟಕ ಜನಾಂಗದ–ಯಾಲಕ್ಕಯ್ಯ–ಬೋರಯ್ಯ ಮತ್ತು ಇತರರು ಚುಂಚನಕಟ್ಟೆಯಲ್ಲಿ ಕಟ್ಟಡ ನಿರ್ಮಿಸಿದ ದಾಖಲೆಯನ್ನು ಶಾಸನದ ಪಾಠದಿಂದ ತಿಳಿಯಬಹುದಾಗಿದೆ. 'ಶ್ರೀರಾಮಕ್ರುಪ' ಎಂಬ ಸಾಲು ಪ್ರಾಯಶಃ ಶ್ರೀರಾಮ ಮಂದಿರ ವನ್ನು ಉಲ್ಲೇಖಿಸುತ್ತಿದ್ದಿರಬಹುದು.

ವಿಶೇಷವೆಂದರೆ ಶಾಸನದಲ್ಲಿ–ಆದಿಕರ್ನಾಟಕಪುರ–ಶ್ರೀಗಂಧ ದೊಡ್ಡಬೀದಿ ಎಂದು ಹೇಳಿರುವುದು ಈ ಭಾಗದಲಿ ಮೈಸೂರು ಮಹಾರಾಜರು ಶ್ರೀಗಂಧದ ಎಣ್ಣೆ ಕಾರ್ಖಾನೆಯನ್ನು ಪ್ರಾರಂಭಿಸಿದ್ದರು. ಹೀಗಾಗಿ ಆ ಪ್ರದೇಶ ಶ್ರೀಗಂಧದ ದೊಡ್ಡ ಬೀದಿ ಎಂದು ಪ್ರಸಿದ್ಧಿಯಾಗಿದೆ. ಅಲ್ಲದೆ ಇಂದು ಆ ಭಾಗಕ್ಕೆ 'ವುಡ್‌ಯಾರ್ಡ್' ಎಂದು ಕರೆಯಲಾಗುತ್ತಿದೆ.

ಈ ಶಾಸನದ ಮುಖ್ಯ ಅಂಶವೆಂದರೆ ಸಮಾಜದಲ್ಲಿ ತೀರ ಕೆಳವರ್ಗದವರೆಂದು ತಿಳಿಯಲಾಗುವ ಅಸ್ಪೃಶ್ಯ ಅಥವಾ ಆದಿಕರ್ನಾಟಕದವರು ಅಂದಿನ ಸಮಾಜದಲ್ಲಿ ದಾನ ನೀಡುವಷ್ಟು ಮುಂದುವರೆದಿದ್ದರೇ ಎಂಬ ವಿಷಯ, ನಾವು ಅಂದಿನ ಸಾಮಾಜಿಕ ಘಟನಾವಳಿಗಳನ್ನು ಮೆಲಕು ಹಾಕಿದಾಗ ಸಮಾಜದ ಪ್ರತಿಯೊಂದು ವರ್ಗ ತನ್ನದೇ ಆದಂತಹ ಜವಾಬ್ದಾರಿಗಳನ್ನು ಹೊಂದಿತ್ತು. ಒಂದು ವರ್ಗದ ಮೇಲೆ ಮತ್ತೊಂದು ಅವಲಂಬನೆ ಹೊಂದುವುದು ಆಂತರಿಕವಾಗಿ ಎಲ್ಲ ವರ್ಗಗಳೂ ಅವಲಂಬಿತರೇ ಆಗಿದ್ದರು. ಹೀಗಾಗಿ ಆರ್ಥಿಕವಾಗಿ ಆದಿಕರ್ನಾಟಕ ಮತಸ್ಥರಾದ ಶಾಸನದಲ್ಲಿ ಉಲ್ಲೇಖಿತ ಯಾಲಕ್ಕಯ್ಯ ಮತ್ತಿತರರು, ಕಟ್ಟಡ ನಿರ್ಮಾಣ ಮಾಡುವಷ್ಟು ಸಬಲರಾಗಿದ್ದುದು ಅಂದಿನ ಆರ್ಥಿಕ ಪ್ರಗತಿಯನ್ನು ಬಿಂಬಿಸುತ್ತದೆ. ಈ ಶಾಸನ ನಿಸ್ಸಂದೇಹವಾಗಿ ಅಂದಿನ ಸಾಮಾಜಿಕ ಸ್ತರದ ಮೇಲೆ ಬೆಳಕು ಚೆಲ್ಲುತ್ತದೆ.

* ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮೈ.ವಿ.ವಿ., ಮೈಸೂರು – ೫೭೦ ೦೦೬

ಡಾ॥ ಎಂ.ಎಸ್. ನರೇಗಲ್ಲ*

# ಯಾದವ ದೊರೆ ೨ನೇ ಸಿಂಘಣದೇವನ ಅಪ್ರಕಟಿತ ಶಾಸನ
## ಕ್ರಿ.ಶ. ೧೨೨೩

ಸಿಂಘಣ ದೇವನ ಈ ಶಾಸನವು ೩೧ ಸಾಲುಗಳಿಂದ ಕೂಡಿದೆ. ಅಲ್ಲಲ್ಲಿ ಶಾಸನದ ಅಕ್ಷರಗಳು ತ್ರುಟಿತಗೊಂಡಿವೆ. ಸಿಂಘಣನ ಸಾಧನೆಯ ಬಗ್ಗೆ ಸೋಮೇಶ್ವರನ "ಕೀರ್ತಿ ಕೌಮುದಿಯಲ್ಲಿ" ಉಲ್ಲೇಖವಿದೆ. ಕನ್ನಡ ಸಾಹಿತ್ಯ ಕೃತಿಗಳಾದ ಕಮಲಭವನ, ಶಾಂತೇಶ್ವರಪುರಾಣ, ರಾಜಾದಿತ್ಯನ ವ್ಯವಹಾರ ಗಣಿತ ಕೃತಿಗಳಲ್ಲಿ ಯಾದವರ ಉಲ್ಲೇಖವಿದೆ.

ಸುಮಾರು ೫೦೦ಕ್ಕೂ ಶಾಸನಗಳು ಯಾದವರ ಇತಿಹಾಸದ ಮೇಲೆ ಬೆಳಕನ್ನು ಚೆಲ್ಲಿವೆ. ಗದಗ ಜಿಲ್ಲೆಯಾದ್ಯಂತ ೨೫ಕ್ಕೂ ಹೆಚ್ಚು ಶಾಸನಗಳು ಯಾದವರ ಕುರಿತ ವಿಷಯವನ್ನು ತಿಳಿಸುತ್ತವೆ. ಗದಗ ಜಿಲ್ಲೆ ಮುಂಡಗಿ ತಾಲ್ಲೂಕಿನ ಶಿಂಗಟಾರಾಯನ ಕೆರೆ ತಾಂಡಾದಿಂದ ಪಶ್ಚಿಮಕ್ಕೆ ಸುಮಾರು ೨ ಕಿ.ಮೀ. ಅಂತರದಲ್ಲಿ ಶ್ರೀ ಸಂಕಣ್ಣವರ ಭಾವಿಯ ಮೇಲೆ ದೊರೆತ ಶಾಸನವು ಯಾದವ ದೊರೆಯ ೨ನೇ ಸಿಂಘಣನ ಇತಿಹಾಸಕ್ಕೆ ಹೆಚ್ಚು ಬೆಳಕನ್ನು ನೀಡಿದೆ. ಗದಗ ಪರಿಸರದಲ್ಲಿನ ಪ್ರಕಟಿತ ಶಾಸನಗಳಲ್ಲಿ ಸಿಂಘಣನ ದಿಗ್ವಿಜಯವನ್ನು ಕುರಿತು ವಿಷಯವನ್ನು ತಿಳಿಸುವ ಶಾಸನಗಳು ವಿರಳ. ಆದರೆ ಈ ಶಾಸನದಲ್ಲಿ ಗೋವಾ ಕದಂಬ ದೊರೆ ಜಯಕೇಶಿಯನ್ನು ಬೆನ್ನತ್ತಿ (ಬೆನ್ನೊಂಡ) ಸೋಲಿಸಿದನೆಂದು ಹಾಗೂ ಮಾಳವದ ಮೇಲಿನ ವಿಜಯದ ಉಲ್ಲೇಖವಿದೆ.

*ತ್ರಿಭುವನಮಲ್ಲ ಮನೋಹರನಭಿನವ ಚಕ್ರೇಶ ಮೂರ್ತಿನೃಪಕುಳ ತಿಳಕಂ ವಿಭವಗುಣಾನ್ವಿತನೀತಂ ಪ್ರಭವಿಸಿದಂ ಸಾಮಾರ್ಥ್ಯದಿಂದ ಸಿಂಹಣದೇವಂ ತಲೆಗೊಂಡಂ ತೆಲುರಾಯನಾ ಪೊದರ್ಪಿಂ ಬಾಜಮೆತ್ತಿಬಾಳ್ದಲುಗೊಂಡ ಜಯಕೇಶಿಂ ಬದರಿಂ ಬೆಂಕೊಂಡಂ ಪ್ರಚಂಡಾವನೀತಳನಾಗ್ರಣಿಯಪ್ಪ ಮಾಳವನ ರಾಜ್ಯಶ್ರೀಯನ್ ಇಳ್ಕೊಂಡನ್ ಅಸ್ಖಳಿತಂ ತಾನೆನೆ ಮಾ . ದಿಮೈತಳೆ . ಯೊಳಾ ಶ್ರೀಸಿಂಹಣ ಭೂಪಾಳಂ ॥*

ಮೇಲಿನ ಶಾಸನದ ಸಾಲುಗಳಲ್ಲಿ ಸಿಂಘಣದ ದಿಗ್ವಿಜಯ ಸ್ಪಷ್ಟವಾಗಿ ಕಂಡು ಬರುತ್ತದೆ. ಈ ಶಾಸನವು ಸಿಂಘಣನನ್ನು ಸಮಸ್ತ ಭುವನಾಶ್ರಯ, ಶ್ರೀ ಪೃಥ್ವಿವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಯಾದವ ಕುಳತಿಳಕ ಪ್ರಥಮ ಚಕ್ರವರ್ತಿ ಎಂಬ ಬಿರುದುಗಳಿಂದ ವರ್ಣಿಸಿದೆ. ಶಾಸನದ ಕೊನೆಯ ಭಾಗದಲ್ಲಿ

*ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ದಾರಣ ಮೋನಾನುಷ್ಠಾನ ಸಮಾಧಿ ಸೀಲಗುಣಸಂಪನ್ನರಪ್ಪ ಬೆಳ್ಳಿಯ ಮಠದ ಸಿವಸಕ್ತಿದೇವ . . ಪಾದ ಪಚ್ಚಕ ಮಾಡಿಕೊಟರು ॥ ಸ್ವಸ್ತಿ ಶ್ರೀಮತಯಾದವನಾರಾಯಣಂ ಪ್ರತಾಪ ಚಕ್ರವರ್ತಿ ಸಿಂಹಣ ದೇವ ವರ್ಷದ ೨೪ನೇ ಸ್ವಭಾನು ಸಂವತ್ಸರದ ಚೈತ್ರ ಶುದ್ಧ ಉತ್ತರಾಯಣ ಸಂಕ್ರಾಂತಿ ಭ್ಯುತಿಪಾತ ಸೂರ್ಯಗ್ರಹಣಂ ಆದಿವಾರದಲು ಮೂಡಗೆರೆಯಲು ಶ್ರೀಧರ ದೇವರ್ಗೆ ಲೊಕ್ಕಿಗುಂಡಿಯ ಚಿನ್ನಗಣಿಕದ ಸಮಸ್ತ ನಖರಂಗಳು ಮುಖ್ಯವಾಗಿ ಹಿರಿಯಕಂಮಟಕಂ ಬಹ (ಬೆಳ್ಳಿಯ) ಬಟರು ತಾವು ತಂದ ಬಂಗಾರವಂ ಬೇಡಿದ ಹಂಗನೂಱ ಕೆಱೆಗೆಂದು॥ ಬಿಟ್ಟರು ಮತ್ತ ಮೂಡುಗೆಱೆಯ ಪೂರಮುಂದಣ ಹಳ್ಳದಿಂ ತೆಂಕಲು ಪಡುವಲು ಬಿಟ್ಟಕೇಯಿ ಮೂಡಲಿಂ ಮೂಲೆಯ ಬಿಟ್ಟಕೇಯಿ ಮತ್ತರು ಹಾ೧೨ ಬಳ್ಳಾವೂರ ಮೂರು ಕೇಯಿ ತೆಂಕಣ ಹಳ್ಳದಿಂ ಬಳಿಯಿಂ ಮೂಡಲು ಬ್ರಾಹ್ಮಣರಿಗೆ ಬಿಟ್ಟ ಕೇಯಿ ಮತ್ತರು ಎರಡು ಯಲಿಯ ಗದ್ದೆಯ ಪಾಲಿಸುವ ॥* ಎಂದು ಇದೆ.

ಸಿಂಘಣ ದೇವನ ಆಳ್ವಿಕೆಯ ೨೪ನೇ ವರ್ಷದ ಅಂದರೆ ಕ್ರಿ.ಶ. ೧೨೨೩ ಮಾರ್ಚ್೧೨ ಭಾನುವಾರ ಸ್ವಭಾನು ಸಂವತ್ಸರದ ಚೈತ್ರ ಶುದ್ಧ ಉತ್ತರಾಯಣ ಸಂಕ್ರಾಂತಿ ಎಂದು ಸೂರ್ಯ ಗ್ರಹಣದಲ್ಲಿ ಮೂಡಗೆರೆಯ ಶ್ರೀಧರ ದೇವರಿಗೆ ಲಕ್ಕುಂಡಿಯ ಚಿನ್ನಗಣಿಕದ ಹಾಗೂ ಸಮಸ್ತ ನಖರಂಗಳು ಮುಖ್ಯವಾಗಿ ಹಿರಿಯ ಕಮ್ಮಟದಿಂದ ಅಂದರೆ ನಾಣ್ಯ ಟಂಕಶಾಲೆಯಿಂದ ಬರುವ ಉತ್ಪನ್ನವನ್ನು ಹೊಂಗನೂರ ಕೆರೆಗೆ ದಾನ ನೀಡಿದರು. ಮತ್ತು ಮೂಡಗೆರೆಯ ಊರ ಮುಂದಿನ ಹಳ್ಳದಿಂದ ದಕ್ಷಿಣಕ್ಕೆ, ಪಶ್ಚಿಮಕ್ಕೆ ಹಾಗೂ ಪೂರ್ವದ ಮೂಲೆಯ ೧೨ ಮತ್ತರು ಭೂಮಿಯನ್ನು ಹಾಗೂ ದಕ್ಷಿಣ ದಿಕ್ಕಿನ ಹಳ್ಳದ ಬಳಿ ಇರುವ ಎರಡು ಮತ್ತರ ಭೂಮಿಯನ್ನು ಬ್ರಾಹ್ಮಣರಿಗೆ ದಾನ ಬಿಟ್ಟರು.

### ಶಾಸನದ ಪ್ರಮುಖ ಅಂಶಗಳು

೧ ಯಾದವ ಸಿಂಘಣ ದೇವನ ಇತಿಹಾಸಕ್ಕೆ ಹೊಸದೊಂದು ಶಾಸನ ಸೇರ್ಪಡೆ

*ಮುಖ್ಯಸ್ಥರು, ಇತಿಹಾಸ ವಿಭಾಗ, ಕೆ.ಎಸ್.ಎಸ್. ಮಹಾವಿದ್ಯಾಲಯ, ಗದಗ.



೨ ಲಕ್ಕಿಗುಂಡಿಯ ಚಿನ್ನದ ವ್ಯಾಪಾರಿಗಳ ಸಮೂಹ ಹಾಗೂ ಇಲ್ಲಿನ ಠಂಕಶಾಲೆಯ ಉಲ್ಲೇಖ

೩ ಹೊಂಗನೂರು ಕೆರೆಗೆ ಬಂಗಾರದ ಹಾಗೂ ಭೂಮಿಯ ದಾನ ಬಿಡುವ ಉಲ್ಲೇಖ

೪ ಸಿಂಘಣದ ದಿಗ್ವಿಜಯ ಹೇಳುವ ಗದಗ ಪರಿಸರದ ಪ್ರಮುಖ ಶಾಸನ

೫ ಈ ಶಾಸನದಲ್ಲಿ ಬೆಳ್ಳಿಯ ಮಠದ ಶಿವಶಕ್ತಿ ದೇವರ ಉಲ್ಲೇಖವಿದೆ ಆದರೆ ಈ ಬೆಳ್ಳಿಯ ಮಠ ಎಲ್ಲಿದೆ ಎಂಬುದು ಹಾಗೂ ಈ ಮಠಕ್ಕೂ ಮತ್ತು ಹಿರಿಯ ಕಮ್ಮಟಕ್ಕೆ ಬರುವ ಬೆಳ್ಳಿಯ ಭಟರ ನಡುವೆ ಯಾವ ಸಂಬಂಧವಿತ್ತೆಂದು ತಿಳಿದು ಬರುತ್ತಿಲ್ಲ.

೬ ಈ ಶಾಸನದಲ್ಲಿ ತಿಳಿಸುವ ಹಿರಿಯಕಮ್ಮಟ ಮತ್ತು ಅದಕ್ಕೆ ಆಗಮಿಸುತ್ತಿದ್ದ ಬೆಳ್ಳಿಯ ಭಟರ ಉಲ್ಲೇಖ ಬಹಳ ಮುಖ್ಯವಾಗಿದೆ. ಲಕ್ಕಿಗುಂಡಿಯ ಈ ಕಮ್ಮಟ ಹಿರಿಯ ಕಮ್ಮಟ, ದೊಡ್ಡ ಕಮ್ಮಟ ಅಥವಾ ಪ್ರಾಚೀನ ಕಮ್ಮಟವಾಗಿತ್ತೆಂದು ಇದಕ್ಕೆ ನಾನಾ ಸ್ಥಳಗಳಿಂದ ಚಿನ್ನ ಹಾಗೂ ಬೆಳ್ಳಿಯನ್ನು ತಂದು, ಅಚ್ಚು ಹಾಕಿಸಿಕೊಂಡು ಹೋಗುತ್ತಿದ್ದರೆಂಬ ಮಹತ್ವದ ವಿಷಯ ತಿಳಿದು ಬಂದಿದೆ. ಹೀಗೆ ಕಮ್ಮಟಕ್ಕೆ ಬರುತ್ತಿದ್ದ ಬೆಳ್ಳಿಯ ಭಟರು ತಾವು ತಂದ ಬಂಗಾರವನ್ನು ಕೆರೆಯ ನಿರ್ಮಾಣಕ್ಕೆ ದಾನ ಬಿಟ್ಟು ವಿಷಯ ಶಾಸನದಲ್ಲಿ ಉಲ್ಲೇಖಿಪಿದೆ. ಶಾಸನದಲ್ಲಿ ಉಲ್ಲೇಖವಾದ ಮೂಡಗೆರೆ ಗ್ರಾಮವೇ ಈಗಿನ ಶಿಂಗಟರಾಯನ ಕೇರಿ ಇರಬಹುದು. ಇಲ್ಲವೇ ಸಿಂಘಣನ ಹೆಸರಿನಿಂದ ಈ ಊರಿಗೆ ಶಿಂಗಟರಾಯನ ಕೇರಿ ಎಂದು ಹೆಸರು ಬಂದಿರಬಹುದು. ಒಟ್ಟಿನಲ್ಲಿ ಈ ಶಾಸನ ೨ ಸಿಂಘಣನ ಚರಿತ್ರೆಗೆ ಒಂದು ಪ್ರಮುಖ ಆಕರವಾಗಿದೆ.

(ಈ ಶಾಸನವನ್ನು ನನ್ನ ಗಮನಕ್ಕೆ ತಂದ ವಿದ್ಯಾರ್ಥಿ ಕುಮಾರ ದೇವರಪ್ಪ ಹದ್ಲಿ ಹಾಗೂ ಈ ಶಾಸನವನ್ನು ಓದಿ ಅರ್ಥೈಸಲು ಸಹಾಯ ನೀಡಿದ ಕನ್ನಡ ವಿಶ್ವವಿದ್ಯಾಲಯ ಹಂಪಿ, ಶಾಸನಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ. ಡಿ.ವಿ. ಪರಮಶಿವಮೂರ್ತಿ ಅವರಿಗೆ ಕೃತಜ್ಞತೆಗಳು.)

## ಯಾದವ ದೊರೆ ೨ನೇ ಸಿಂಘಣ ದೇವನ ಅಪ್ರಕಟಿತ ಶಾಸನ ಪಾಠ

೧ ನಮಸ್ತುಂಗ ಸಿರಸುಂ ಚಂದ್ರಚಾಮರ ಚಾರವೇತ್ರ

೨ ಯಳೋಕ್ಯ ನಗರಾರಂಭ ಮೂಲ ಸ್ತಂಬಾಯ ಸಂಬವೇ ॥

೩ ತ್ರೀಭುವನಮಲ್ಲ ಮನೋಹರನಭಿನವ ಚಕ್ರೇಶ ಮೂರ್ತಿ ನೃಪ ಕುಳ ತಿಳಕಂ ವಿ

೪ ಭವಗುಣಾನ್ವಿತ ನೀತಂ ಪ್ರಭವಿಸಿದಂ ಸಾಮರ್ಥ್ಯದಿಂದ ಸಿಂಹಣ ದೇವಂ

೫ ತಲೆಗೊಂಡಂ ತೆಲುರಾಯನಾ ಪೊದರ್ಪಿಂ ಭಾಜ ಮೆತ್ತಿ ಬಾಳ್ದಲುಗೊಂಡ

೬ ಜಯಕೆಸಿಂ ಬುದಱು ಬೆಂಕೊಂಡಂ ಪ್ರಚಂಡಾವ ನೀತಳನಾಗ್ರಣಿಯ

೭ ಪ್ಪವಮಾಳವನ ರಾಜ್ಯಶ್ರೀಯನಿಳ್ಕೊಂಡನಸ್ಪಳಿತಂ ತಾನೆನೆಮಾ .

೮ ದಿ ಮೈತಳೆ .ಯೊಳಾ ಶ್ರೀ ಸಿಂಹಣ ಭೂಪಾಳಕಂ ॥ ಸ್ವಸ್ತಿ

೯ ಸಮಸ್ತ ಭುವನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಂ

೧೦ ಪರಮೇಶ್ವರಂ ಯಾದವ ಕುಳಥಿಳಕಂ ಪ್ರತಾಪ ಚಕ್ರ (ವ) ರ್ತಿ ಶ್ರೀ ಸಿಂ

೧೧ ಹಣ ದೇವ ವಿಜಯ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾ

೧೨ ನಮಾಚಂದ್ರಾರ್ಕ ತಾರಂಭರಂ ಸಲುಮಿತ್ತಮಿರೆ ॥ ಸ್ವಸ್ತಿ ಯಮನಿ

೧೩ ಯಮ ಸ್ವಾಧ್ಯಾಯಧ್ಯಾನ ಧಾರಣ ಮೋನಾನುಷ್ಠಾನ ಪಾರಾಯಣರು ॥

೧೪ ಶ್ರೀ ವೀರದೇವರ ಮುದದಿಂದಾರು ಗುಣನಿಧಿ . . .

೧೫ ವಂಶ ಶ್ರೀ ಮಾಧವದೇವಂ ಎರಬೆ ಮಾಡಿಸಿ ಅ . ಯ ನಿರುಪ . . (ನಾಣಗೆ)

೧೬ ಲೊಕ್ಕಿಗುಂಡಿ ಪುರದೊಳು ॥ ಮಾನಿವ ಧರ್ಮವಿಳ ಸಂನ್ಮಾನಂ ಗುಣ . . .

೧೭ ವೈಷ್ಣವೋತ್ತಮನದರಿಂ ಮಾನವರೊಳಧೀಕ ಪುಣ್ಯಂ ಭೂನೂತಣಣುದ . .

೧೮ ನೆಗಳ .ಕಮದೇವಂ ಶ್ರೀವಧುವಿಂಗಗ್ಗಳ ಮೆನಲಿದು ಚತುರ ಮಾ . . .

೧೯ ಧನಕ್ಷಿವತಿತೆ ಕತನ ಸತಿ ಸೀಲವತಿಯನೆ ಉಂಮು ಬಾಯಿಗಂ ಪಱಿರ

೨೦ ಳವ ॥ ಸ್ವಸ್ತಿಯಮ ನಿಯಮ ಸ್ವಾದ್ಯಾಯ ಧ್ಯಾನ ದಾನದಾರಣಮೋನಾನುಷ್ಠಾನ

೨೧ ಸಮಾಧಿ ಸೀಲಗುಣ ಸಂಪನ್ನರಪ್ಪ ಬೆಳ್ಳಿಯ ಮಠದ ಸಿವಸಕ್ತಿದೇವ . .

೨೨ ಪಾದಪಚ್ಚಕ ಮಾಡಿಕೊಟರು ॥ ಸ್ವಸ್ತಿಶ್ರೀಮತು ಯಾದವನಾರಾಯಣಂ ಪ್ರ

೨೩ ತಾಪ ಚಕ್ರವರ್ತಿ ಸಿಂಹಣದೇವ ವರ್ಷದ ೨೪ ನೆಯ ಸ್ವಭಾನು ಸಂವತ್ಸ(ರ)ದ

೨೪ ಚೈತ್ರ ಶುದ್ಧ ಉತ್ತರಾಯಣ ಸಂಕ್ರಾಂತಿ ಭ್ಯತಿಯ ಪಾತ ಸೂರ್ಯಗ್ರಹ

೨೫ ಣಂ ಯಾದಿವಾರದಲು ಮೂಡಗೆರೆಯಲು ಶ್ರೀಧರ ದೇವರ್ಗೆ ಲೊಕ್ಕಿಗುಂಡಿ

೨೬ ಯ ಚನ್ನಗಣಿಕದ ಸಮಸ್ತ ನಖರಂಗಳು ಮುಖ್ಯವಾಗಿ ಹಿರಿಯ ಕಂಮ

೨೭ ಟಕಂ ಬಹ (ಬೆಳ್ಳಿಯ) ಬಟರು ತಾವು ತಂದ ಬಂಗಾರವಂ ಬೇಡಿದ ಹೊಂಗನೂಱ

೨೮ ಕೆಱೆಗುಂ ॥ ಬಿಟ್ಟರು ಮತ್ತಮುಡುಗೆಱೆಯು ವೂರಮುಂದಣ ಹಳ್ಳದಿಂ ತೆಂಕಲು

೨೯ ಪಡುವಲು ಬಿಟ್ಟಕೇಯಿ ಮೂಡಲಿಂ ಮೂಲೆಯ ಬಿಟ್ಟಕೇಯಿ ಮತ್ತರು ಹಾ ೧೨ ಬಳಾ (ಳ)

೩೦ ವೂರ ಮೂರು ಕೇಯಿ ತೆಂಕಣ ಹಳ್ಳದಿಂ ಬಳಯಿಂ ಮೂಡಲು ಬ್ರಾಹ್ಮಣರಿಗೆ ಬಿ

೩೧ ಟ್ಟ ಕೇಯಿ ಮತ್ತರು ಎರಡು ಯಲಿಯ ಗದ್ದೆಯ ಪಾಲಿಸುವ ॥

ಡಾ. ಎನ್. ನಂದೀಶ್ವರ*

# ಸಿರಾ ತಾಲ್ಲೂಕಿನ ಕೆಲವು ಅಪ್ರಕಟಿತ ಶಾಸನಗಳು

ತುಮಕೂರು ಜಿಲ್ಲೆಯ ಸಿರಾ ತಾಲ್ಲೂಕಿನಲ್ಲಿ ಈಚೆಗೆ ರತ್ನಸಂದ್ರ, ಹಾಲೇನಹಳ್ಳಿ, ಬರಗೂರು, ಬುಕ್ಕಾಪಟ್ಟಣ, ಓಜಗುಂಟೆ ಗ್ರಾಮಗಳಲ್ಲಿ ಹಾಗೂ ಸಿರಾ ಪಟ್ಟಣದಲ್ಲಿ ಕೆಲವು ಅಪ್ರಕಟಿತ ಶಾಸನಗಳು ಕಂಡುಬಂದಿವೆ. ಈ ಶಾಸನಗಳು ೧೪ನೇ ಶತಮಾನದಿಂದ ೨೦ನೇ ಶತಮಾನದ ಕಾಲದ್ದಾಗಿವೆ.

**ರತ್ನಸಂದ್ರದ ೧೪ನೇ ಶತಮಾನದ ಶಾಸನಗಳು :** ರತ್ನಸಂದ್ರ ಗ್ರಾಮವು ಸಿರಾ-ಅರೇಹಳ್ಳಿ-ಬ್ರಹ್ಮಸಂದ್ರ ಮಾರ್ಗದಲ್ಲಿ ತಾಲ್ಲೂಕು ಕೇಂದ್ರದಿಂದ ಪೂರ್ವಕ್ಕೆ ೧೦ ಕಿ.ಮೀ. ದೂರದಲ್ಲಿದೆ. ರತ್ನಸಂದ್ರದ ರಂಗನಾಥ ದೇವಸ್ಥಾನವನ್ನು ಮೈಸೂರು ಹನುಮಂತಪ್ಪ ಧರ್ಮ ಪತ್ನಿ ಶ್ರೀಮತಿ ಬಸಮ್ಮನವರು ೯-೯-೧೯೫೬ರಲ್ಲಿ ಜೀರ್ಣೋದ್ಧಾರ ಮಾಡಿಸುವಾಗ ಬರಹವಿರುವ ಕಲ್ಲುಗಳು ಕಂಡುಬಂದವೆಂದು ಜನರು ಆಸಕ್ತಿಯಿಂದ ದೇವಸ್ಥಾನದ ಆಗ್ನೇಯ ಮೂಲೆಯಲ್ಲಿ ಇಟ್ಟು ಕೆಲಕಾಲ ಪೂಜೆಯೂ ಮಾಡುತ್ತಿದ್ದರು. ಇಲ್ಲಿ ಮೂರು ಕಲ್ಲುಗಳಿದ್ದು ಎರಡರ ಮೇಲೆ ಅಪ್ರಕಟಿತ ಶಾಸನಗಳು ಕಂಡುಬರುತ್ತವೆ. ಮೊದಲ ಕಲ್ಲಿನ ಮೇಲಿನ ಶಾಸನವು ನಾಲ್ಕು ಸಾಲುಗಳನ್ನು ಒಳಗೊಂಡಿದೆ. ಕಲ್ಲಿನ ಮೇಲ್ಭಾಗದಲ್ಲಿ ಚಂದ್ರ, ಶಂಕು, ಸೂರ್ಯರ ಚಿತ್ರವನ್ನು ಬಿಡಿಸಲಾಗಿದೆ. ಶಾಸನವು ಲಿಪಿಯ ದೃಷ್ಟಿಯಿಂದ ೧೪ನೇ ಶತಮಾನದ್ದಾಗಿದೆ. ಅದು ತಿಪಯನ ಮಗ ಲೋಕರಸನು ಸರ್ವಮಾನ್ಯ ನೀಡಿದ್ದನ್ನು ತಿಳಿಸುತ್ತದೆ. ಅಂದರೆ ರತ್ನಸಂದ್ರದ ರಂಗನಾಥಸ್ವಾಮಿ ದೇವಸ್ಥಾನದಲ್ಲಿ ಯಾವುದೋ ದೇವ ಕಾರ್ಯ (ಸರ್ವಮಾನ್ಯ ನೀಡಿದ) ಮಾಡಿಸಿದ ವಿಷಯ ತಿಳಿಸುವಂತಿದೆ. ಶಾಸನವನ್ನು ತಿಮ್ಮರಸನು ಬರೆದಿರುವನು.

**ಶಾಸನದ ಪಾಠ**

೧ ತಿಪಯನ ಮಗನ

೨ ಸರ್ವಮಾನ್ಯ ಶ್ರೀ

೩ ಲೋಕರಸ ಮಾ[ಡಿ]ದಮು

೪ ತಿಮ್ಮರಸ ಬಾರ[ಹ]



ಅದೇ ಸ್ಥಳದ ಮತ್ತೊಂದು ಕಲ್ಲಿನ ಮೇಲಿನ ಶಾಸನವು ಐದು ಸಾಲುಗಳನ್ನು ಒಳಗೊಂಡಿದೆ. ಲಿಪಿಯ ದೃಷ್ಟಿಯಿಂದ ಇದು ಸಹ ೧೪ನೇ ಶತಮಾನದ್ದಾಗಿದೆ. ಇದು ರಾಮರಾಜಯನು ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿದ ವಿಷಯ ತಿಳಿಸುತ್ತದೆ. ಸಾಮಾನ್ಯವಾಗಿ ರಂಗನಾಥಸ್ವಾಮಿ ದೇವಸ್ಥಾನದಲ್ಲಿ ಯಾವುದೋ ಜೀರ್ಣೋದ್ಧಾರ ಕಾರ್ಯ ಮಾಡಿಸಿದ ಸೇವೆಗಾಗಿ ಈ ಶಾಸನ ಬರೆಸಿದಂತಿದೆ.

**ಶಾಸನದ ಪಾಠ**

೧ ೦ಖರಸಂವತ್ಸರದ

೨ ಕಾರ್ತಿಕಬ೧೧ ಸೋಮವಾರ[ರಶ್ರೀ]

೩ ಮತು ರಾಮರಾಜಯ

* ಪ್ರಾಂಶುಪಾಲರು, ಎಸ್.ಎಮ್.ಆರ್.ಪಿ.ಯು. ಕಾಲೇಜು, ಕಳ್ಳಂಬೆಳ್ಳ, ಸಿರಾ ತಾಲ್ಲೂಕು, ತುಮಕೂರು ಜಿಲ್ಲೆ.

೪ ಮೇಗಲುಪ್ಪ ಮಾಡಿಸಿದರು
೫ . . ಡ . ರು



**ಹಾಲೇನಹಳ್ಳಿಯ ಶಾಸನಸಹಿತ ವೀರಗಲ್ಲು :** ಹಾಲೇನಹಳ್ಳಿಯ ಸಿರಾ – ತುಮಕೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ಚಿಕ್ಕನಹಳ್ಳಿಯಿಂದ ಎಡಭಾಗಕ್ಕೆ ೨ ಕಿ.ಮೀ. ದೂರದಲ್ಲೂ, ಸಿರಾದಿಂದ ೧೨ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಈ ಗ್ರಾಮದ ಹೆಚ್.ವಿ. ಪ್ರಕಾಶ್‌ರ ಅಡಿಕೆ ತೋಟದಲ್ಲಿ ಶಾಸನ ಸಹಿತ ವೀರಗಲ್ಲು ಇರುತ್ತದೆ. ಭೂಮಿಯಲ್ಲಿ ಹೂತಿದ್ದ ವೀರಗಲ್ಲು ಅಡಿಕೆ ತೋಟವನ್ನು ಉಳುಮೆ ಮಾಡುತ್ತಿದ್ದಾಗ ಯಾವಾಗಲೂ ನೇಗಿಲಿಗೆ ತಗಲುತ್ತಿದ್ದುದರಿಂದ ಅದನ್ನು ತೆಗೆದು ನಿಲ್ಲಿಸಿರುವರು. ವೀರಗಲ್ಲು ಒಂದೂವರೆ ಅಡಿ ಅಗಲ, ಎರಡು ಅಡಿ ಎತ್ತರವನ್ನು ಹೊಂದಿದೆ. ವೀರಗಲ್ಲಿನಲ್ಲಿ ವೀರನು ಶತ್ರುಗಳೊಡನೆ ಬಹುಶಃ ಹೊಯ್ಸಳರೊಡನೆ ಕಠಾರಿಯನ್ನು



ಆಯುಧವಾಗಿ ಧರಿಸಿ ಹೋರಾಡಿ ವೀರ ಮರಣ ಹೊಂದಿದಂತೆ ತಿಳಿದುಬರುತ್ತದೆ. ಬಲಭಾಗದ ವೀರನು ಕೈಯಲ್ಲಿ ಕಠಾರಿಯನ್ನು ಕೆಳಮುಖವಾಗಿ ಹಿಡಿದು ನಿಂತಿರುತ್ತಾನೆ. ವೀರನ ಪಕ್ಕದಲ್ಲಿ ಇದೇ ವೇಷಭೂಷಣದಲ್ಲಿ ಕಠಾರಿಯನ್ನು ಮೇಲೆತ್ತಿ ಹಿಡಿದು ನಿಂತಿರುತ್ತಾನೆ. ಇಬ್ಬರು ವೀರರು ಎಡಗೈಗಳನ್ನು ಸೊಂಟದ ಮೇಲಿಟ್ಟಿರುತ್ತಾರೆ. ವೀರನು ತಲೆಗೆ ಕಿರೀಟ, ತೋಳಬಂದಿ, ಕೈಗಳಿಗೆ ಕಪ್ಪ, ಕೊರಳಿಗೆ ಕಂಠಾಭರಣ, ಸೊಂಟದಲ್ಲಿ ಕಟಿಸೂತ್ರವನ್ನು ಹಾಗೂ ಸಮರೋಚಿತವಾದ ಉಡುಪನ್ನು ಧರಿಸಿರುವನು. ಇಬ್ಬರು ವೀರರ ಹಿಂಭಾಗದಲ್ಲಿ ಹಗ್ಗದೋಪಾದಿಯಲ್ಲಿ ಅಲಂಕರಣವಿದೆ. ಕಲ್ಲಿನ ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಬಿಡಿಸಲಾಗಿದೆ. ಈ ವೀರಗಲ್ಲು ಶಿಲ್ಪವಿನ್ಯಾಸದ ದೃಷ್ಟಿಯಿಂದ ೧೨–೧೩ನೇ ಶತಮಾನಕ್ಕೆ ಸೇರಿದ್ದಾಗಿದೆ. ಈ ವೀರಗಲ್ಲು ಶಾಸನವು ಒಂದು ಸಾಲನ್ನು ಒಳಗೊಂಡಿದೆ. ಶಾಸನವು ಶ್ರೀಮತ್ ಜಡವಿಗೊಂಡನ ಮಗ ನಾಗ್ರೆ ಯುದ್ಧದಲ್ಲಿ ಹೋರಾಟ ಮಾಡಿ ಮಡಿದನೆಂದು ತಿಳಿದುಬರುತ್ತದೆ.

**ಶಾಸನದ ಪಾಠ**

೧ ಶ್ರೀಮತ್ ಜಡವಿಗೊಂಡನ ಮಗ ನಾಗ್ರೆ

**ಸಿರಾದ ದುರ್ಗಮ್ಮನ ಮೆರವಣಿಗೆ ದೇವಸ್ಥಾನದ ಬಾಗಿಲುವಾಡದ ಮೇಲಿನ ಶಾಸನ :** ಸಿರಾ ಪಟ್ಟಣದ ದುರ್ಗಮ್ಮನ ಮೆರವಣಿಗೆ ದೇವಸ್ಥಾನವು ಗ್ರಾಮ ದೇವತೆಯಾಗಿದೆ. ಈಗಾಗಲೇ ಇದೇ ದೇವಸ್ಥಾನದಲ್ಲಿ ಎರಡು ಶಾಸನಗಳು ಪ್ರಕಟಿತವಾಗಿರುತ್ತವೆ. ದುರ್ಗಮ್ಮನ ಗರ್ಭಗುಡಿಯ ಬಾಗಿಲವಾಡದ ಮೇಲಿನ ಹಿತ್ತಾಳೆ ತಗಡಿನ ಮೇಲಿನ ಶಾಸನವು ಮೂರು ಸಾಲುಗಳಿವೆ. ಶಾಸನವು ಶಿರಾದ ದುರ್ಗಮ್ಮ ದೇವರಿಗೆ ಕ್ರಿ.ಶ. ೧೮೮೯ರಲ್ಲಿ ಶ್ರೀ ಬಲಸಿಂಗರ ಮಗ ಇಸ್ಪೆಟ್ಟರ್ ಕೃಷ್ಣಸಿಂಗರು ಮಾಡಿಸಿಕೊಟ್ಟ ಹಿತ್ತಾಳೆ ಬಾಗಿಲುವಾಡದ ಸೇವೆಯ ಬಗ್ಗೆ ತಿಳಿಸುತ್ತದೆ.



**ಶಾಸನದ ಪಾಠ**

೧ ಸ್ವಸ್ತಿ ಶ್ರೀ ಶಾಲಿವಾಹನ ಶಕ ೧೮೧೧ನೇ ವಿರೋದಿ ಸಂ। ಬಾದ್ರಪದ ಶು

೨ ೧೩ನೆ ಯಲ್ಲು ಶಿರ್‍ಯದ ದುರ್ಗದ ದೇವಿಗೆ ಶ್ರೀ ಬಲಸಿಂಗರ ಕುಮಾರು

೩ ಯಿನಸ್ಪೆಕ್ಟ್ರು ಕೃಷ್ಣಶಿಂಗರ ಬಾಗಿಲುವಾಡದ ಶೇವೆ–ಶ್ರೀ



**ಸಿರಾದ ನಗರಸಭೆಯ ಪಕ್ಕದ ಸಮಾಧಿ ಶಾಸನ :** ಸಿರಾದ ನಗರಸಭೆಯ ಪಕ್ಕದ ಚಿನ್ನಭಕ್ತಚಾರ್ ಕಲ್ಲಿನ ಸಮಾಧಿಯಾಗಿದೆ. ಈ ಕಲ್ಲಿನ ಸಮಾಧಿಯನ್ನು ಹಾಸುಗಲ್ಲಿನಿಂದ ಸುಂದರವಾಗಿ ನಿರ್ಮಿಸಿರುವರು. ಈ ಸಮಾಧಿ ಮೇಲಿನ ಕಲ್ಲಿನ ತುಳಸಿಕಟ್ಟೆಯ ದಕ್ಷಿಣಕ್ಕೆ ಶಾಸನವಿದೆ. ಶಾಸನವು ಏಳು ಸಾಲುಗಳಿವೆ. ಈ ಶಾಸನವು ೧೯ನೇ ಶತಮಾನದ ಕೊನೆಯ ಅಥವಾ ೨೦ನೇ ಶತಮಾನದ ಆದಿ ಭಾಗದ್ದಾಗಿದೆ. ಶಾಸನವು ಚಿನ್ನಭಕ್ತ ಚಾರ್ಯರು ಸಮಾಧಿಯಾಗಿರುವ ಜಾಗದಲ್ಲಿ ಅವರ ಧರ್ಮಪತ್ನಿ ಪಾರ್ವತಮ್ಮನವರು ಸಮಾಧಿ ಜೀರ್ಣೋದ್ಧಾರ ಮಾಡಿದ್ದರ ಬಗ್ಗೆ ತಿಳಿಸುತ್ತದೆ.

**ಶಾಸನದ ಪಾಠ**

೧ ಶ್ರೀ
೨ ವಿಶ್ವಬ್ರಾಹ್ಮಣ ॥ ಅ
೩ ನಾಶ ॥ ಕಂ ॥ ಚಿನ್ನಾ
೪ ಭಕ್ತಾಚಾರ್ಯ ಸಮಾ
೫ ಧಿಃ ಶದ್ ನಪ್ರಿಃ ಪಾರ್ವ
೬ ತಮ್ಮ ನಾಮ್ನಾಃ
೭ ಜಿರ್ನೋದ್ಧಾರಃ

ಬರಗೂರಿನ ಬ್ರಿಟೀಷರ ಸಮಾಧಿ ಶಾಸನ :

ಬರಗೂರು ಗ್ರಾಮವು ಸಿರಾ-ಅಮರಾಪುರ ಮಾರ್ಗದಲ್ಲಿ ಸಿರಾದಿಂದ ೨೫ ಕಿ.ಮೀ. ದೂರದಲ್ಲಿ ದಕ್ಷಿಣಕ್ಕಿರುವ ಗ್ರಾಮವಾಗಿದೆ. ಈ ಪ್ರಾಚೀನ ಗ್ರಾಮವು ಐತಿಹಾಸಿಕ ಮಹತ್ವ ಹೊಂದಿದ ಸ್ಥಳವಾಗಿದೆ. ಈ ಗ್ರಾಮದ ಹೊರಭಾಗದ ಬೈರಂಗಿಸ್ವಾಮಿ ದೇವಸ್ಥಾನದ ಪಕ್ಕ ಬ್ರಿಟೀಷರ ಸಮಾಧಿ ಮೇಲೆ ಅಪ್ರಕಟಿತ ಶಾಸನವಿದೆ. ಬ್ರಿಟಿಷರ ಕಾಲದ ಈ ಶಾಸನವು ಇಂಗ್ಲೀಷ್ ಭಾಷೆಯಲ್ಲಿ, ಹತ್ತು ಸಾಲುಗಳನ್ನು ಒಳಗೊಂಡಿದೆ. ಮದ್ರಾಸ್ ವೈದ್ಯಕೀಯ ಸಂಸ್ಥೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿದ್ದ ಸಿ.ಹೆಚ್. ಔಚಿಲ್ ಎಕ್ಕೆಸ್‌ರವರು ಈ ಸ್ಥಳದಲ್ಲಿ ಮರಣಿಸಿದ್ದರಿಂದ, ಅವರನ್ನು ೩೮ನೇ ಸೈನ್ಯದ ತುಕಡಿಯಲ್ಲಿ ಸೇವೆ ಸಲ್ಲಿಸುತ್ತಿದ್ದ ಅವರ ಸೋದರ ಅಧಿಕಾರಿಗಳು ಸಮಾಧಿ ಮಾಡಿ, ಈ ಸ್ಮಾರಕದ ಕಲ್ಲನ್ನು ಹಾಸಿರುತ್ತಾರೆ.

**ಶಾಸನದ ಪಾಠ**

1 TO THE MEMORY
2 OF
3 C.H. AUCHINL ECKESO M.D.
4 OF THE MADRAS
5 MEDICAL ESTABLISHMENT
6 ERECTED BY
7 HIS BROTHER OFFICER
8 OF THE 38th REGIMENT M.N.I
9 AS A. MARK OF THEIRS ESTEEM
10 Nelson, Sculptur Bangalore

**ಬುಕ್ಕಾಪಟ್ಟಣದ ಕಾಲುವೆ ರಂಗನಾಥಸ್ವಾಮಿ ದೇವಸ್ಥಾನದ ಶಾಸನಗಳು :** ಸಿರಾ – ಹುಳಿಯಾರು ರಸ್ತೆಯಲ್ಲಿ ಸಿರಾದಿಂದ ಪಶ್ಚಿಮಕ್ಕೆ ೨೧ ಕಿ.ಮೀ. ದೂರದಲ್ಲಿ ಬುಕ್ಕಾಪಟ್ಟಣ ಗ್ರಾಮವಿದೆ. ಇಲ್ಲಿನ ಕಾಲುವೆರಂಗನಾಥಸ್ವಾಮಿ ದೇವಸ್ಥಾನದ ಕಂಬಗಳಲ್ಲಿ, ನವರಂಗ (ವಿತಾನ)ದಲ್ಲಿ ಹಾಗೂ ದೇವರ ಪ್ರಭಾವಳಿಯಲ್ಲಿ ಶಾಸನಗಳು ಕಂಡುಬರುತ್ತವೆ. ನವರಂಗದ ಮೊದಲ ಕಂಬದ



ಉತ್ತರ ಭಾಗದಲ್ಲಿ ಶಾಸನವು ಇರುತ್ತದೆ. ಇದು ಲಿಪಿಯ ದೃಷ್ಟಿಯಿಂದ ೧೯ನೇ ಶತಮಾನದ್ದಾಗಿದೆ. ಲಕ್ಷ್ಮಣಜೀರು ಎಂದು ಶಾಸನ ಬರೆದಿರುತ್ತದೆ. ಶಾಸನವು ಒಂದೇ ಪದದಲ್ಲಿದ್ದರೂ ಕಂಬದಲ್ಲಿರುವುದರಿಂದ ಎರಡು ಸಾಲುಗಳಲ್ಲಿ ಬರೆಯಲ್ಪಟ್ಟಿದೆ. ಅಂದರೆ ಲಕ್ಷ್ಮಣಜೀರುರವರು ದೇವಸ್ಥಾನ ವನ್ನು ಕಟ್ಟಿಸಿದರೆಂದು ಅರ್ಚಕರು ತಿಳಿಸುತ್ತಾರೆ. ಆದ್ದರಿಂದಲೇ

ಈ ಬರಹದ ಕೆಳಗೆ ಅವರ ಪ್ರತಿಮೆಗಳನ್ನು ದಂಪತಿ ಸಮೇತ ಇಬ್ಬರು ಕೈಮುಗಿದು ನಿಂತಿರುವ ಚಿತ್ರ ಬಿಡಿಸಲಾಗಿದೆ.

**ಶಾಸನದ ಪಾಠ**

೧ ಲಕ್ಷ್ಮಣ

೨ ಜೀರು

ನವರಂಗದ ಎರಡನೇ ಕಂಬದ ಉತ್ತರ ಭಾಗದಲ್ಲಿ ಮತ್ತೊಂದು ಶಾಸನವು ಇರುತ್ತದೆ. ಶಾಸನವು ಲಿಪಿಯ ದೃಷ್ಟಿಯಿಂದ ೧೯ನೇ ಶತಮಾನದ್ದಾಗಿದೆ. ಶಾಸನವು ಮೂರು ಸಾಲುಗಳಲ್ಲಿ ಬರೆಯಲ್ಪಟ್ಟಿದೆ. ಅಂದರೆ ಶ್ರೀ ಕಾಲೆ(ಲುವೆ) ರಂಗನಾಥ ಅರ್ಚಕ ಶಠಗೋಪ್ಪಯ್ಯನವರ ಸೇವೆ ಎಂದು ತಿಳಿಸುತ್ತದೆ. ಈ ಬರಹದ ಕೆಳಗೆ ಅರ್ಚಕರ ಪ್ರತಿಮೆಗಳನ್ನು ದಂಪತಿ ಸಮೇತ ಇಬ್ಬರು ಕೈಮುಗಿದು ನಿಂತಿರುವ ಚಿತ್ರ ಬಿಡಿಸಲಾಗಿದೆ.



**ಶಾಸನದ ಪಾಠ**

೧ ಶ್ರೀ ಕಾಲೆರಂನಾಥನಾ

೨ ಅರ್ಚಕ ಶಠಗೊ

೩ ಪ್ಪಯ್ಯನ ಶೇವೆ

ದೇವಸ್ಥಾನದ ನವರಂಗದ ವಿತಾನದಲ್ಲಿ ಮತ್ತೊಂದು ಶಾಸನ ಕೆತ್ತಿರುತ್ತಾರೆ. ಇದು ಸಹ ೧೯ನೇ ಶತಮಾನದ್ದಾಗಿದೆ. ಶಾಸನವು ಮೂರು ಸಾಲುಗಳಲ್ಲಿ ಬರೆಯಲ್ಪಟ್ಟಿದೆ. ಶಾಲಿವಾಹನ ಶಕವರುಷ ೧೭೭೭ನೆ ರಾಕ್ಷಸ ಸಂವತ್ಸರ ಎಂದಿರುವುದರಿಂದ ಅಂದರೆ ಕ್ರಿ.ಶ. ೧೮೮೫ನೇ ಕಾಲಕ್ಕೆ ಸೇರಿದ್ದಾಗಿದೆ. ಕ್ರಿ.ಶ. ೧೮೮೫ರಲ್ಲಿ ಕಾಲುವೆ ರಂಗನಾಥಸ್ವಾಮಿ ದೇವಸ್ಥಾನವನ್ನು ಲಕ್ಷ್ಮಣಜೀರುರವರು ದೇವಸ್ಥಾನವನ್ನು ಕಟ್ಟಿಸಿ ಶಾಸನ ಬರೆಸಿರುವರೆಂದು ತಿಳಿದುಬರುತ್ತದೆ.

**ಶಾಸನದ ಪಾಠ**

೧ ಶಾಲಿವಾಹನ ಶಾಖಬ್ದ

೨ ೧೭೭೭ನೆ ರಾಕ್ಷಸ ಸಂವತ್ಸರಂ

೩ ಗಾ ಕಟ್ಟಿದೂ



ಕಾಲುವೆರಂಗನಾಥಸ್ವಾಮಿ ದೇವಸ್ಥಾನದ ಗರ್ಭಗುಡಿಯ ಬಾಗಿಲಿಗೆ ಇಟ್ಟಿದ್ದ ಹಿತ್ತಾಳೆಯ ಬಾಗಿಲುವಾಡವನ್ನು ಈಗ ಬೇರೆ ಇತ್ತೀಚೆಗೆ ತೆಗೆದು ಬೇರೆ ಹಿತ್ತಳೆಯ ಬಾಗಿಲುವಾಡವನ್ನು ಮಾಡಿಸಿಟ್ಟಿರುತ್ತಾರೆ. ಹಳೆಯ ತೆಗೆದಿಟ್ಟಿರುವ ಬಾಗಿಲುವಾಡದ ಹಿತ್ತಾಳೆ ತಗಡಿನ ಎರಡೂ ಕಡೆಯ ಕೆಳಭಾಗದಲ್ಲಿ ಶಾಸನ ಬರೆದಿದೆ. ಬಾಗಿಲುವಾಡದ ಬಲಭಾಗದಲ್ಲಿ ಎರಡು ಸಾಲು ಶಾಸನ ಬರೆದು ಅದರ ಮುಂದಿನ ಭಾಗವನ್ನು ಎಡಭಾಗದಲ್ಲಿ ಮೂರು ಸಾಲು ಬರೆಯಲಾಗಿದೆ. ಇದು ಲಿಪಿಯ ದೃಷ್ಟಿಯಿಂದ ೧೯ನೇ ಶತಮಾನದ ಕೊನೆಯ ಭಾಗದ್ದಾಗಿದೆ. ಬುಕ್ಕಾಪಟ್ಟಣ ಕಾಲುವೆ ರಂಗನಾಥ ದೇವಸ್ಥಾನದ ಅರ್ಚಕರಾದ ನರಸಿಂಹ್ಮಚಾರ್ಯರ ತಂಗಿ ಲಕ್ಷನರಸಂಮನ ಮಗಳು ಶಬಂಯನು ಮಾಡಿಸಿದ ಬಾಗಿಲವಾಡ ಎಂದು ಬರೆಸಿರುವರು. ಕೆಳಗೆ ಬಕ್ತ ಎಂದು ಬರೆದಿರುವುದು.



**ಶಾಸನದ ಪಾಠ**

೧ ದುರ್ಮುಖಿ ಸಂ ॥ ಭಾದ್ರಪದ ಶು ೧೫ಯಲು ಬುಕ್ಕಾಪಟ್ನದ ಶ್ರೀ

೨ ಕಾಲ್ವೆ ರಂಗಸ್ವಮಿ ಪಾದಕ್ಕೆ ಶ್ರಿ ಶಿ ಚ ದೇವಸ್ಥನದ ಅರ್ಚ

೩ ಕ ನರಸಿಂಹ್ಮಚಾರ್‍ಯರ ತಂಗಿ ಲಕ್ಷನರಸಂಮನ ಮಗ

೪ ಳು ಶಬಂಯನು ಸಮವಪಿಸಿದ ಬಾಗಿಲವಾಡ

೫ ಬಕ್ತ

**ಓಜಗುಂಟೆಯ ಜಯರೇಖೆ ಶಾಸನ :** ಓಜಗುಂಟೆ ಗ್ರಾಮವು ಸಿರಾ – ಅಮರಾಪುರ ಮಾರ್ಗವಾಗಿ ಓಜಗುಂಟೆ ಗೇಟ್‌ನಿಂದ ಬಲಭಾಗಕ್ಕೆ ೧ ಕಿ.ಮೀ. ಸಿರಾದಿಂದ ೪ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಗ್ರಾಮದಲ್ಲಿ ಕುಂಚಿಟಿಗರ

ಕುಲದ ಮನೆದೇವರು ಮಲ್ಲೇಶ್ವರ ದೇವಸ್ಥಾನ ಇದೆ. ಈ ದೇವರ ಅರ್ಚಕರಾದ ಮಲ್ಲೇಶಪ್ಪನವರ ಹತ್ತಿರ ಅವರ ದೇವರ ಭಕ್ತಾದಿಗಳು ನೀಡಿದ ಜಯರೇಖೆ ಇದೆ. ಈ ಜಯರೇಖೆಯು ೧೩ ಸೆಂಟೀಮೀಟರ್ ಉದ್ದ, ೯.೫



ಸೆಂಟೀಮೀಟರ್ ಅಗಲವನ್ನು ಹೊಂದಿದೆ. ಜಯರೇಖೆಯು ಲಿಪಿಯ ದೃಷ್ಟಿಯಿಂದ ೧೮-೧೯ನೇ ಶತಮಾನಕ್ಕೆ ಸೇರಿದ್ದಾಗಿದೆ. ಶಾಸನವು ಒಂಭತ್ತು ಸಾಲುಗಳನ್ನು ಒಳಗೊಂಡಿದೆ. ಶಾಸನದ ಭಾಷೆಯು ಅಸ್ಪಷ್ಟವಾಗಿದೆ. ಜಯರೇಖೆಯ (ತಾಮ್ರ ಶಾಸನ) ಮೇಲ್ಭಾಗದ ಮಧ್ಯದಲ್ಲಿ ಶ್ರೀ ಎಂದು ಇದ್ದು ಅಕ್ಕ ಪಕ್ಕ ಸೂರ್ಯ, ಚಂದ್ರ ಇದರ ಪಕ್ಕ ವೃಷಭ, ಲಿಂಗವಿದೆ. ಕಡಿಮೆ ಪ್ರಮಾಣದ ಶಬ್ದಗಳಲ್ಲಿ ವಿವಾದವನ್ನು ಬಗೆಹರಿಸಿದ್ದು, ಅಪರೂಪವಾದವಾದ ಶಾಸನವಾಗಿದೆ. ಹಿರೆಕಟ್ಟೆ ಜಡೆಸ್ವಾಮಿಗಳ ವಿಚಾರಣೆ ನಡೆದಿರುತ್ತದೆ. ವಿವಾದ ಬಗೆಹರಿದ ನಂತರ ರುದ್ರಾಕ್ಷಿ, ಬೆತ್ತದ ಕೋಲು, ಕಪ್ರ(ವೀರಶೈವ ಯತಿಗಳಿಗೆ ಕೊಡುತ್ತಿದ್ದ ಕಾಣಿಕೆ), ಮುಳವಿಗೆ ಕೊಟ್ಟಿರುತ್ತಾರೆ. ನೀವು ಅಣ್ಣ ತಮ್ಮಗಳು ಬೇರೆಯಲ್ಲ ಎಂದು ತೀರ್ಮಾನಿತವಾಗಿರುತ್ತದೆ.

**ಶಾಸನದ ಪಾಠ**

೧ ಯಿರೆಕತ್ತಿ ಜಡೆಸ್ವಮಿಗಳು ವುಣೆಶಿ
೨ ಶೆಟ್ಟಿ ಮಟ್ಟಿ ಮಲ್ಲೇಶ್ವರ ಸ್ವಾಮಿಲ್ಲಿಗ
೩ ೧೦೧ ನೆಲಗ್ರಮ ರುದ್ರಕ್ಷಿ ಬೆತ್ತದ ಕೊ
೪ ಲುವಂ ಗಂಟಿ ಕಪ್ರ ಮುಳಅವಿಗೆ
೫ ಸಹ ಕೊಟ್ಟು ಅಶಿರ್ವದ ಕ್ವೊ ವೊ
೬ ಗಿ ಯಿರು ತರ್ರೆ ಅಪ್ಪೆಯನವರ ಪು
೭ ಜರ್ರಿ ಕಮ ಶಟ್ಟಪ್ಪ ಗುರುಸ್ವಮಿಗೆ
೮ ಕಮ ಜೆನಿನ ಬಸವನ ಕೊಟ್ಟು ಯಿ(ರು)ತರ್ರೆ
೯ ನಿವು ಅಣತಮಗಳು ಜೇವಯಿಲ್ಲಾ

**ಕುರುಬರರಾಮನಹಳ್ಳಿಯ ಮಾರಮ್ಮನ ಪೌಳಿ ಮುಂದಿನ ಬಂಡೆಯ ಮೇಲೆ :** ಸಿರಾ–ಅಮರಾಪುರ ರಸ್ತೆಯಲ್ಲಿ ಕುರುಬರರಾಮನಹಳ್ಳಿ ಗೇಟ್‌ನಿಂದ ಬಲಭಾಗಕ್ಕೆ ೧ ಕಿ.ಮೀ. ದೂರದಲ್ಲಿ, ಸಿರಾದಿಂದ ೨೦ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಈ ಶಾಸನವು ಲಿಪಿಯ ದೃಷ್ಟಿಯಿಂದ ೧೯ ಶತಮಾನದ್ದಾಗಿದೆ. ಮಾರಮ್ಮನ ದೇವಸ್ಥಾನವನ್ನು ರಾಜಪ್ಪನು ನಿರ್ಮಿಸಿದನೆಂದು ತಿಳಿಸುತ್ತದೆ.

**ಶಾಸನದ ಪಾಠ**

೧ ಶ್ರಾವಣ ಪಂಚಮಿ ಗುರುವಾರ
೨ ಮಾರಮ್ಮ ದೇವರ ಗುಡಿ ಕಟ್ಟಿಸಿದ್ದು
೩ ರಾಜಪ್ಪ

**ಮೂಗನಹಳ್ಳಿಯ ಕಾವಲ್ಲೇಶ್ವರಿ ದೇವಸ್ಥಾನದ ಪ್ರವೇಶ ದ್ವಾರದ ಆನೆಯ ಮೇಲೆ :** ಸಿರಾ – ಮಧುಗಿರಿ ಮಾರ್ಗದಲ್ಲಿ ಸಿರಾದಿಂದ ಪೂರ್ವಕ್ಕೆ ಗುಳಿಗೆನಹಳ್ಳಿಯಿಂದ ಬಲಭಾಗಕ್ಕೆ ೧ ಕಿ.ಮೀ. ದೂರದಲ್ಲೂ, ಸಿರಾದಿಂದ ೧೨ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಶಾಸನವು ೧೫ನೇ ಶತಮಾನದ ಲಿಪಿಯನ್ನು ಹೋಲುತ್ತದೆ. ಹೆಚ್ಚಿನ ವಿವರ ಶಾಸನದಲ್ಲಿ ಕೆತ್ತಿರುವುದಿಲ್ಲ.

**ಶಾಸನದ ಪಾಠ**

೧ ವರಾ ೧೧

(ಶಾಸನ ಓದಲು ನೆರವಾದ ಡಾ. ಪಿ.ವಿ. ಕೃಷ್ಣಮೂರ್ತಿ, ಎಸ್.ಎನ್. ಸ್ವಾಮಿ ಹಾಗೂ ಜಯರೇಖೆ ಓದಲು ನೆರವಾದ ಡಾ. ಬಿ. ರಾಜಶೇಖರಪ್ಪನವರಿಗೆ ಕೃತಜ್ಞತೆಗಳು)

## ಆಧಾರಸೂಚಿ

೧. ಡಾ. ಆರ್. ಶೇಷಶಾಸ್ತ್ರಿ., ೨೦೦೯, **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೨. ಡಾ. ಬಸವರಾಜ ಕಲ್ಗುಡಿ., **ಮಹಾಸತಿ ಆಚರಣೆ ಒಂದು ಅಧ್ಯಯನ**, ಪ್ರಸಾರಾಂಗ, ಬೆಂಗಳೂರು.
೩. **ಎಪಿಗ್ರಾಫಿಯ ಕರ್ನಾಟಿಕ**, ಸಂಪುಟ ೧೨, ತುಮಕೂರು.
೪. ಡಾ. ಡಿ.ವಿ. ಪರಮಶಿವಮೂರ್ತಿ., ೧೯೯೯, **ಕನ್ನಡ ಶಾಸನಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಪಿ.ಎನ್. ನರಸಿಂಹಮೂರ್ತಿ *

# ಕಾರ್ಕಳದ ಒಂದು ಪ್ರಮುಖ

ಕರಾವಳಿ ಜಿಲ್ಲೆಯಾದ ಉಡುಪಿಯ ಒಂದು ತಾಲೂಕು ಕಾರ್ಕಳ. ಸಹ್ಯಾದ್ರಿಯ ಬೆಟ್ಟ ಶ್ರೇಣಿಗಳೊಳಗೆ ಸಂಪೂರ್ಣವಾಗಿ ಹುದುಗಿರುವ ಇದು ಅಪ್ಪಟ ಮಲೆನಾಡಿನ ಸ್ವರೂಪ ಹೊಂದಿದೆ. ಹೆಬ್ಬಂಡೆ ಬೆಟ್ಟಗಳು, ದಟ್ಟ ಕಾನನಗಳು, ದುರ್ಗಮ ಪ್ರದೇಶಗಳು, ಅಸಂಖ್ಯ ಹೊಳೆ, ತೊರೆ, ಝರಿಗಳು, ಅಧಿಕ ಮಳೆ, ಅಧಿಕ ತಾಪಮಾನ ಎಲ್ಲವೂ ಇಲ್ಲಿಯ ವಿಶೇಷಗಳು. ಪ್ರಾಗಿತಿಹಾಸ ಕಾಲದಿಂದ ಸ್ವಾತಂತ್ರ್ಯ ಹೋರಾಟ ಕಾಲದವರೆಗೆ ಅವಿಚ್ಛಿನ್ನವಾಗಿದೆ. ಇದರ ಇತಿಹಾಸ. ದೀರ್ಘ ಕಾಲದವರೆಗೆ ಆಳುಪರ ಆಳ್ವಿಕೆಗೆ ಒಳಪಟ್ಟಿದ್ದ ಇದು ಅವರ ನಂತರ ಸಾಂತರ ಮೂಲದ ಅರಸರ ಆಳ್ವಿಕೆಗೆ ಒಳಪಟ್ಟಿತು. ಇವರು ಕಳಸ ಮತ್ತು ಕಾರ್ಕಳ ಎರಡು ರಾಜಧಾನಿಗಳಿಂದ ಆಳ್ವಿಕೆ ನಡೆಸಿದ ಕಾರಣ ಇವರನ್ನು ಲೂಯಿ ರೈಸ್ **'ಕಳಸ–ಕಾರ್ಕಳದ ಅರಸರು'** ಎಂದು ಕರೆದರು[೧] ಭೈರವ ಮತ್ತು ಪಾಂಡ್ಯ ಎಂಬ ಎರಡು ಹೆಸರುಗಳು ಇವರಿಗೆ ಪಟ್ಟಾಭಿಷೇಕದ ನಂತರ ಬಂದ ಹೆಸರುಗಳಾದ್ದರಿಂದ ಇವರು ಕಾರ್ಕಳದ ಭೈರರಸರೆಂದೇ ಖ್ಯಾತರಾದರು[೨] ಕರಾವಳಿಯ ಇತಿಹಾಸಕ್ಕೆ ಈ ಅರಸರ ಕಾಣಿಕೆ ಮಹತ್ತರವಾದ್ದರಿಂದ ಹಲವು ಮಂದಿ ಇತಿಹಾಸಕಾರರು ಈ ವಂಶದ ಬಗ್ಗೆ ತಮ್ಮದೇ ಆದ ಚಿಂತನೆ ಮಾಡಿದ್ದಾರೆ[೩]. ಸಂಸ್ಕೃತಿಯ ಬೆಳವಣಿಗೆಗೆ ಈ ರಾಜವಂಶದ ಕೊಡುಗೆ ಅಪಾರ[೪].

ಘಟ್ಟದ ಮೇಲಿನ ಕಳಸ[೫]ದಿಂದ ಘಟ್ಟದ ಕೆಳಗಣ ಕಾರ್ಕಳಕ್ಕೆ ಇವರು ತಮ್ಮ ರಾಜಕೀಯ ಕಾರ್ಯಾಚರಣೆಯನ್ನು ವಿಸ್ತರಿಸಿದಾಗ[೬] ಕೆರವಾಸೆ ಇದರ ಪ್ರಥಮ ರಾಜಧಾನಿಯಾಯಿತು. ಕೆರವಾಸೆಯನ್ನು ಶಾಸನಗಳಲ್ಲಿ ಮಹಾ ರಾಜಧಾನಿ ಎಂದು ಕರೆಯಲಾಗಿದೆ[೭]. ಕೆರವಾಸಿ ರಾಜಧಾನಿಯಾದರೂ ಕಾರ್ಕಳ ಆಡಳಿತದ ಮುಖ್ಯ ಸುಂದರ ವರ್ಣನೆಯನ್ನು ನಮಗೆ ಕೊಟ್ಟಿದ್ದಾನೆ[೮] ಈ ವೈಭವಕ್ಕೆ ತಕ್ಕಂತೆ ದೇವಾಲಯ ಬಸದಿಗಳು ಹುಟ್ಟಿಕೊಂಡವು. ಇವುಗಳಿಗೆ ಮಾಡಿದ ದಾನಗಳನ್ನು ರಾಜರು ಶಾಸನಾಂಕಿತ ಮಾಡಿದರು[೯].

ಈ ಅರಸರ ಬಗ್ಗೆ ನಾನು ಕೈಗೊಂಡ ಕ್ಷೇತ್ರ ಕಾರ್ಯ ಸಮಯದಲ್ಲಿ ಹಲವು ಹೊಸ ಶಾಸನಗಳು[೧೦] ಲಭ್ಯವಾದವು. ಇವುಗಳಲ್ಲಿ ಪ್ರಸಕ್ತ ಅಧ್ಯಯನಕ್ಕೆ ಒಂದನ್ನು ಆಯ್ಕೆ ಮಾಡಿಕೊಂಡಿದ್ದೇನೆ.[೧೧]

ಈ ಶಾಸನ ಕಾರ್ಕಳ ನಗರಕ್ಕೆ ಸಮೀಪವೇ ಇರುವ ಜಾರ್ಕಳ ಗ್ರಾಮದ ಮುಂಡ್ಲಿ ಎಂಬ ಸ್ಥಳದಲ್ಲಿ ಇದೆ. ಹೊಳೆಯ ಬದಿಯ ಗದ್ದೆಯ ಒಂದು ಪಾರ್ಶ್ವದಲ್ಲಿ ಈ ಶಾಸನಕಲ್ಲು ಶಕವರ್ಷ ೧೩೩೬ನೆಯ ಜಯ ಸಂವತ್ಸರದ ಮಾಘ ಬಹುಳ ೭ ಗುರುವಾರದಂದು ಶ್ರೀ ಮಲ್ಲಲಿತಕೀರ್ತಿ ಭಟ್ಟಾರಕ ದೇವರ ನಿರೂಪದಿಂದ ಪಟ್ಟಿ ಪೊಂಬುಚ್ಚಪುರವರಾಧೀಶ್ವರ ಜಿನದತ್ತಾನ್ವಯ ಸಂಭೂತ ಭೈರರಸ್ಸವೊಡೆಯರ ಕುಮಾರ ಪಾಂಡ್ಯದೇವರಸೊಡೆಯರು ಅವರು ಕಾರಕಳದಲ್ಲಿ ಮಾಡ್ಸಿದ ನೇಮಿನಾಥ ಸ್ವಾಮಿಗಳ್ಗೆ **ಮಂಡುದಲ** ಎಂಬ ಊರನ್ನು ಧಾರಾಪೂರ್ವಕವಾಗಿ ಕೊಟ್ಟ ವಿಚಾರ ಈ ಶಾಸನದಲ್ಲಿ ಉಕ್ತವಾಗಿದೆ.

ದಾನ ಮಾಡಿದ ಭೂಮಿಯ ಗಡಿ ವಿವರವನ್ನು ಶಾಸನದಲ್ಲಿ ಕೊಡಲಾಗಿದೆ. ಮೂಡಕೆರವಸೆಯ ಹೊಳೆ, ತೆಂಕಹೊಳೆಯ ಹೊಲ, ಪಡುವ ಹೆರಿಮುಂಡೆ ಮತ್ತು ಬಡಗ ಕುಕ್ಕಜೆಯ ಗಡಿ – ಈ ಚತುಸ್ಸೀಮೆಯೊಳಗಿದ್ದ ಕ್ಷೇತ್ರದಲ್ಲಿದ್ದ (ವಾಸವಿದ್ದ) ಮೂವತ್ತೊಕ್ಕಲು ಸಹಿತವಾಗಿ ರಾಜ ನೇಮಿಶ್ವರ ಬಸದಿಗೆ ದಾನ ಮಾಡಿದ. ಈ ದಾನವನ್ನು ಸರ್ವಮಾನ್ಯವೆಂದು ಘೋಷಿಸಿದ.

ಕೇವಲ ಹನ್ನೊಂದು ಸಾಲು ಬರಹ ಇರುವ ಈ ಶಾಸನ ಹಲವು ಮುಖ್ಯ ವಿಷಯಗಳನ್ನು ತನ್ನಲ್ಲಿರಿಸಿ ಕೊಂಡಿರುವ ಕಾರಣ ಕಾರ್ಕಳದ ಇತಿಹಾಸಕ್ಕೆ ಇದೊಂದು ಪ್ರಮುಖ ದಾಖಲೆ.

ಶಾಸನದಲ್ಲಿರುವ ತೇದಿ ವಿವರ ಶಕವರ್ಷ ೧೩೩೬. ಜಯಸಂವತ್ಸರ, ಮಾಘ ಬ. ೭ ಗುರುವಾರವು ಕ್ರಿ.ಶ. ೧೪೧೫ ಫೆಬ್ರವರಿ ೧ಕ್ಕೆ ಸರಿಹೊಂದುತ್ತದೆ. ಆದರೆ ವಾರ ಮಾತ್ರ ಶುಕ್ರವಾರ (ಗುರುವಾರವಲ್ಲ).

ರಾಜನನ್ನು **'ಪಟ್ಟಿಪೊಂಬಚ್ಚ ಪುರವರಾಧೀಶ್ವರ ಜಿನದತ್ತಾನ್ವಯ ಸಂಭೂತ ಭೈರರಸ್ಸವೊಡೆಯ'** ಎಂದು ಹೆಸರಿಸಿದೆ.

* 'ಗುರುಕೃಪ' ನಂ. ೨೦೩೧, ೧೧ನೇ ಕ್ರಾಸ್, ಕಲ್ಲಹಳ್ಳಿ, ವಿ.ವಿ. ನಗರ, ಮಂಡ್ಯ – ೫೭೧ ೪೦೧.

ಇದು ಸಾಂತರ ರಾಜರಿಗಿದ್ದ ಬಿರುದಾವಳಿ ಪ್ರಶಸ್ತಿ. ಕಾರ್ಕಳದ ಅರಸರೂ ಸಾಂತರ ಮೂಲದವರಾದ ಕಾರಣ ಅವರಿಗೂ ಈ ಪ್ರಶಸ್ತಿಗಳಿದ್ದವು. ಲೋಕನಾಥದೇವರಸನ ಹಿರಿಯ ಗಡಿಶಾಸನ[೧೨] ಭೈರರಸ ವೊಡೆಯನ ಹೆರ್ಮುಂಡೆ[೧೩] ಮತ್ತು ಮರ್ಣೆ[೧೪] ಶಾಸನಗಳಲ್ಲಿ ಪ್ರಶಸ್ತಿಯ ಪೂರ್ಣ ಪಾಠಗಳು ಉಲ್ಲೇಖಿಸಲ್ಪಟ್ಟಿವೆ. ಈ ಶಾಸನಗಳು ಮುಂಡ್ಲಿ ಶಾಸನ ಕಾಲಕ್ಕಿಂತಲೂ ಮುಂಚಿನವುಗಳಾದ್ದರಿಂದ ಪ್ರಸಕ್ತ ಶಾಸನದಲ್ಲಿ ಹ್ರಸ್ವಗೊಂಡಿರುವ ಪ್ರಶಸ್ತಿಯನ್ನು ಗುರುತಿಸಿ ಅರ್ಥೈಸಲು ಯಾವ ಅಡ್ಡಿಯೂ ಇಲ್ಲ.

ಈ ಅರಸರು **'ಜಿನದತ್ತಾನ್ವಯ'**ರು ಅಂದರೆ ಜಿನದತ್ತನೆಂಬ ಮೂಲ ಪುರುಷನ ವಂಶದವರು, **'ಪಟ್ಟಿಪೊಂಬುಚ್ಚ ಪುರವರಾಧೀಶ್ವರ'**ರು. ಬಹಳ ಕಾಲದವರೆಗೆ ವಿದ್ವಾಂಸರು **'ಪಟ್ಟಿಪೊಂಬುಚ್ಚಪುರ'** ಎನ್ನುವುದು ಘಟ್ಟದ ಮೇಲಿನ ಸಾಂತರರ ರಾಜಧಾನಿ ಪೊಂಬುಚ್ಚ (ಇಂದಿನ ಹುಮ್ಚ)ಕ್ಕೆ ಅನ್ವಯಿಸಿದ್ದು ಎಂದು ಪರಿಗಣಿಸಿ ಇವರನ್ನು ಹೊಂಬುಚ (ಪೊಂಬುಚ)ದ ಒಡೆಯರೆಂದು ಕರೆದರು[೧೫]. ಆದರೆ ಇಲ್ಲಿ ಹೆಸರಿಸಿರುವುದು ಎರಡು ನಗರಗಳನ್ನು ಒಂದನ್ನಲ್ಲ ಎಂದು ನಾನು ಈ ಹಿಂದೆಯೇ ತೋರಿಸಿಕೊಟ್ಟಿದ್ದೇನೆ. ಇಲ್ಲಿ ಹೆಸರಿಸಿರುವ ಪಟ್ಟಿ ಪಟ್ಟಿಯ ನಗರ ಇದು ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನಲ್ಲಿದೆ. ಇಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ಶಾಸನವೊಂದರಲ್ಲಿ ಇದನ್ನು ಪಟ್ಟಿಯ ನಗರ ಎಂದೇ ಹೆಸರಿಸಿದೆ[೧೬] ಹಾಗಾಗಿ ಸಾಂತರರು ಎರಡು ನಗರ [ಪಟ್ಟಿಯನಗರ ಮತ್ತು ಪೊಂಬುಚ್ಚ) ಗಳಿಂದ ಆಳಿದರು ಎಂದು ಮೇಲಿನ ಪ್ರಶಸ್ತಿಯ ಅರ್ಥ.

ಭೈರರಸ ವೊಡೆಯನನ್ನು ಹೆಸರಿಸುವ ಮೂರನೆಯ ಶಾಸನ ಮುಂಡ್ಲಿಯದು. ಇದಕ್ಕೆ ಮೊದಲು ಕ್ರಿ.ಶ. ೧೩೯೫ರ ಹೆರ್ಮುಂಡೆ ಶಾಸನ[೧೭] ಮತ್ತು ಕ್ರಿ.ಶ. ೧೪೦೮ರ ಮರ್ಣೆ (ಕೊರಗ) ಶಾಸನ[೧೮] ಗಳಲ್ಲಿ ಭೈರರಸನ ಉಲ್ಲೇಖವಿದೆ. ಈತ ಕ್ರಿ.ಶ. ೧೩೯೦–೧೪೨೦ರವರೆಗೆ ಕಳಸ–ಕಾರ್ಕಳ ರಾಜ್ಯವನ್ನಾಳಿದ ಒಂದನೆಯ ಭೈರರಸ[೧೯] ಕ್ರಿ.ಶ. ೧೫೨೨ರ ವರಾಂಗಶಾಸನ[೨೦]ದ ಪ್ರಕಾರ ಈ ಭೈರರಸ ವೊಡೆಯ ಕಾರ್ಕಳದಲ್ಲಿ ನೇಮಿಶ್ವರ ಬಸದಿಯನ್ನು ಕಟ್ಟಿಸಿದನು. ಮರ್ಣೆ ಶಾಸನದ ಪ್ರಕಾರ ಬಾರಕೂರಿನಲ್ಲಿ ಒಂದು ಚೈತ್ಯಾಲಯ ನಿರ್ಮಿಸಿ ಅದಕ್ಕೆ ಮರ್ಣೆಯನ್ನು ದಾನವಾಗಿ ಕೊಟ್ಟನು. ಪ್ರಸಕ್ತ ಮುಂಡ್ಲಿ ಶಾಸನದ ಪ್ರಕಾರ ಕಾರ್ಕಳದ ನೇಮಿಶ್ವರ ಬಸದಿಯನ್ನು ಭೈರರಸ ವೊಡೆಯ ಮತ್ತು ಅವನ ಮಗ ಪಾಂಡ್ಯದೇವರಸ ಕೂಡಿ ರಚಿಸಿದರು. ಸರಿಸುಮಾರು ಒಂದೇ ಕಾಲಕ್ಕೆ ಎರಡು ಪ್ರಮುಖ ಸ್ಥಳಗಳಲ್ಲಿ ಚೈತ್ಯಾಲಯಗಳ ನಿರ್ಮಾಣ ಕಾರ್ಯವನ್ನು ಕಳಸ–ಕಾರ್ಕಳದ ರಾಜ ಭೈರರಸವೊಡೆಯ ಕೈಗೊಂಡ ಎಂದು ಹೇಳಬಹುದು. ಈ ರಾಜ ಕ್ರಿ.ಶ. ೧೩೯೦ ರಲ್ಲಿ ಅಧಿಕಾರಕ್ಕೆ ಬಂದ[೨೧]. ಕ್ರಿ.ಶ. ೧೩೯೫ರಲ್ಲಿ ಹೆರ್ಮುಂಡೆಯ ವಿಷ್ಣುಮೂರ್ತಿ ದೇವರಿಗೆ ಭೂದಾನವನ್ನು ಮಾಡಿದ[೨೨] ಅಧಿಕಾರಕ್ಕೆ ಬಂದ ಒಂದೆರಡು ವರ್ಷಗಳಲ್ಲೇ ಕಾರ್ಕಳದ ನೇಮೀಶ್ವರ ಬಸದಿಯ ನಿರ್ಮಾಣ ಕಾರ್ಯ ಪ್ರಾರಂಭಿಸಿರಬೇಕು. ಎತ್ತರವಾದ ಗುಡ್ಡೆಯ ಪೂರ್ವ ಇಳಿಜಾರಿನಲ್ಲಿ ಗುಡ್ಡೆ ಕಡಿದು ಸಮತಟ್ಟು ಮಾಡಿದ ವಿಶಾಲವಾದ ಕ್ಷೇತ್ರದಲ್ಲಿ ಇದನ್ನು ನಿರ್ಮಿಸಲಾಗಿದೆ. ಈ ಪ್ರಾಥಮಿಕ ಕಾರ್ಯವೇ ಹೆಚ್ಚು ಕಾಲದ್ದಾದ್ದರಿಂದ ಬಸದಿಯ ನಿರ್ಮಾಣ ಕಾರ್ಯ ನಿಧಾನಗತಿಯಲ್ಲಿ ನಡೆದಿರಬೇಕು. ಈ ನಡುವೆ ಮಹಾರಾಜಧಾನಿ ಬಾರಕೂರಿನ ಜೈನಸಮುದಾಯ ಮತ್ತು ವರ್ತಕರು ತಮ್ಮ ಉಪಯೋಗಕ್ಕಾಗಿ ಆ ನಗರದಲ್ಲಿ ಚೈತ್ಯಾಲಯವನ್ನು ನಿರ್ಮಿಸಿಕೊಡಬೇಕೆಂಬ ಬೇಡಿಕೆ ಈ ರಾಜನಲ್ಲಿ ವಿನಂತಿಸಿರಬೇಕು[೨೩]. ಇದನ್ನು ಆಧರಿಸಿ ರಾಜ್ಯಪಾಲನ (ಅಥವಾ ವಿಜಯನಗರಿಯ ಚಕ್ರವರ್ತಿಯ) ಅನುಮತಿಯೊಂದಿಗೆ ಭೈರರಸ ಬಾರಕೂರಿನಲ್ಲಿ ಬಸದಿ ನಿರ್ಮಿಸಿದ. ಎರಡೂ ಬಸದಿಗಳ ನಿರ್ಮಾಣ ಕಾರ್ಯ ಯಾವಾಗ ಮುಕ್ತಾಯವಾಯಿತು ಎಂಬುದು ತಿಳಿಯುವುದಿಲ್ಲ. ಆದರೆ ಇವುಗಳಿಗೆ ದಾನ ಮಾಡಿದ ಕಾಲಗಳು (ಬಾರಕೂರು ಕ್ರಿ.ಶ. ೧೪೦೮, ಕಾರ್ಕಳ ಕ್ರಿ.ಶ. ೧೪೧೫) ಬೇರೆ ಬೇರೆಯಾಗಿರುವುದರಿಂದ ಪ್ರಾಯಶಃ ಬಾರಕೂರಿನ ಬಸದಿ ನಿರ್ಮಾಣ ಬೇಗ ಆಗಿರಬೇಕು. ಕಾರ್ಕಳದ ಹಿರಿಯ ಗಡಿಯಲ್ಲಿ ಉನ್ನತವಾದ ಸ್ಥಳದಲ್ಲಿ ಪೂರ್ವಾಭಿಮುಖವಾಗಿ ಕಟ್ಟಲ್ಪಟ್ಟಿರುವ ನೇಮಿಶ್ವರ ಬಸದಿಯನ್ನು ಗಮನಿಸಿದರೂ ಇದು ಹಲವು ಹಂತಗಳಲ್ಲಿ ಕಟ್ಟಲ್ಪಟ್ಟಿದ್ದು ಎಂಬುದು ತಿಳಿಯುತ್ತದೆ. ಪ್ರಾಯಶಃ ಮೂಲ ಗರ್ಭಗುಡಿ ಮೊದಲು ನಿರ್ಮಾಣವಾಗಿ ಜಿನಪ್ರತಿಷ್ಠೆ ಮತ್ತು ಪೂಜಾ ಕಾರ್ಯಗಳು ಪ್ರಾರಂಭವಾಗಿರಬೇಕು. ಜಿನಾಲಯದ ಎಲ್ಲ ಭಾಗಗಳ ನಿರ್ಮಾಣ ಪೂರ್ಣಗೊಂಡ ನಂತರ ಅಲ್ಲಿ ಪೂಜಾದಿ ಕಾರ್ಯಗಳಿಗೆ ನಿಯಮಗಳನ್ನು ರಚಿಸಿ ಅದರ ವೆಚ್ಚ ಭರಿಸಲು ಭೂದಾನ ಮಾಡಲಾಯಿತು.

ಮುಂಡ್ಲಿ ಶಾಸನದ ಪ್ರಕಾರ ಭೈರರಸ ವೊಡೆಯ ಮತ್ತು ಆತನ ಮಗ ಪಾಂಡ್ಯ ದೇವರಸ ಈರ್ವರೂ ಕೂಡಿ ಕಾರ್ಕಳದ (ಹಿರಿಯಂಗಡಿಯಲ್ಲಿರುವ) ನೇಮಿಶ್ವರ ಚೈತ್ಯಾಲಯದ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದರು. ಆನಂತರ ಅದಕ್ಕೆ ಹಿರಿದಾದ ಭೂದಾನ ಮಾಡಿದರು. ಮರ್ಣೆ ಶಾಸನದಲ್ಲಿ ಪ್ರಥಮ ಬಾರಿಗೆ ಪಾಂಡ್ಯ ದೇವರಸನು ತನ್ನ ತಂದೆಯೊಂದಿಗೆ ಆಡಳಿತದಲ್ಲಿ ಭಾಗಿಯಾಗಿದ್ದ ಎಂಬ ವಿಷಯ ಬೆಳಕಿಗೆ ಬಂದಿದೆ. ಬಾರಕೂರು ಬಸದಿಗೆ ರಾಜಭೈರರಸವೊಡೆಯನು ಮಾಡಿದ ಗ್ರಾಮದಾನದಲ್ಲಿ ಈತನ ಪಾತ್ರವೂ ಇರಬಹುದು.

ಭೈರರಸವೊಡೆಯನ ವೊಡೆಯನ ಕುರಿತಾಗಿ ಸದ್ಯಕ್ಕೆ ದೊರೆತಿರುವ ಅತ್ಯಂತ ಪ್ರಾಚೀನ ಶಾಸನವೆಂದರೆ **ಕ್ರಿ.ಶ. ೧೩೯೫ರ ಹೆರ್ಮುಂಡೆ ಶಾಸನ**. ಈ ಶಾಸನ ದೊರೆತದ್ದರಿಂದ ಭೈರರಸವೊಡೆಯನ ಆಳ್ವಿಕೆ ಕಾಲ ಹದಿಮೂರು ವರ್ಷಗಳಷ್ಟು (ಕ್ರಿ.ಶ. ೧೪೦೮ ರಿಂದ ಕ್ರಿ.ಸ. ೧೩೯೫) ಹಿಂದಕ್ಕೆ ಹೋಯಿತು. ಈ ಆಧಾರ ಮತ್ತು ಪೂರಕ ಮಾಹಿತಿ ಆಧಾರ ದಲ್ಲಿ ಭೈರರಸವೊಡೆಯನು ಕ್ರಿ.ಶ. ೧೩೯೦ರಲ್ಲಿ ಪಟ್ಟಕ್ಕೆ ಬಂದಿರಬಹುದೆಂದು ಬೇರೆಡೆಯಲ್ಲಿ ನಾನು ಹೇಳಿದ್ದೇನೆ.[೨೪] ಹೆರ್ಮುಂಡೆ ಶಾಸನದಲ್ಲಿ ಪಾಂಡ್ಯದೇವರಸನ ಉಲ್ಲೇಖ ಇಲ್ಲ. ಪ್ರಾಯಶಃ ಈತ ತಂದೆಯೊಂದಿಗೆ ೧೪೦೦–೧೪೦೫ರ ಸುಮಾರಿನಿಂದ ಆಡಳಿತದಲ್ಲಿ ಭಾಗಿಯಾದ. ಅಲ್ಲಿಂದ ಕ್ರಿ.ಶ. ೧೪೨೦ರವರೆಗೆ ತಂದೆಯೊಂದಿಗೆ ಯುವರಾಜತ್ವದೊಂದಿಗೆ ಆಡಳಿತದಲ್ಲಿ ಒಳ್ಳೆಯ ತರಬೇತಿಯನ್ನು ಪಡೆದ. ಆನಂತರ ಸುಮಾರು ಮೂವತ್ತೈದು ವರ್ಷಗಳಷ್ಟು ದೀರ್ಘಕಾಲದವರೆಗೆ (ಕ್ರಿ.ಶ. ೧೪೨೦–೧೪೫೪) ರಾಜ್ಯವಾಳಿದ.[೨೫]

ಪಾಂಡ್ಯದೇವರಸನು ಸಿಂಹಾಸನಕ್ಕೆ ಬರುವ ವೇಳೆಗೆ ಒಳ್ಳೆಯ ಶಿಕ್ಷಣ ಮತ್ತು ಆಡಳಿತದಲ್ಲಿ ತರಬೇತಿ ಪಡೆದ ರಾಜಕೀಯ ಮುತ್ಸದ್ದಿಯಾಗಿದ್ದ. ಕಾರ್ಕಳದ ಇತಿಹಾಸದಲ್ಲಿ ಇವನ ಸ್ಥಾನ ಚಿರಸ್ಥಾಯಿಯಾಗಿ ರಾರಾಜಿಸುತ್ತಿದೆ. ಕಾರ್ಕಳದ ಹಿರಿಯಂಗಡಿಯಲ್ಲಿ ನೇಮಿನಾಥ ಜಿನಾಲಯ ನಿರ್ಮಿಸಿದ ನಂತರ ಈತ ಅಂತಹುದೇ ಮಹತ್ಸಾಧನೆಗಳನ್ನು ಮಾಡಿದ್ದಾನೆ. ಕಾರ್ಕಳದ ತೆಳ್ಳಾರು ರಸ್ತೆಯಲ್ಲಿರುವ ಸೂರ್ಯನಾರಾಯಣ ಮಠಕ್ಕೆ, ವಿನಾಯಕಬೆಟ್ಟಿನ ವಿನಾಯಕ ದೇವರಿಗೆ, ಪೆರುವಾಜೆಯ ಮಹಾಲಿಂಗೇಶ್ವರ ದೇವರಿಗೆ, ಪರ್ಪತಿ ಗುಡ್ಡದ ವೇಣುಗೋಪಾಲ ದೇವರಿಗೆ, ಕಳಸದ ಕಳಸೇಶ್ವರ ಇತ್ಯಾದಿ ದೇವರುಗಳಿಗೆ ಭೂಮಿ ಮತ್ತು ಹಿರಣ್ಯದಾನಗಳನ್ನು ಮಾಡಿದ[೨೬].

ಇದಕ್ಕೆಲ್ಲಾ ಮಿಗಿಲಾದ ಕಾರ್ಯವೆಂದರೆ ಕಾರ್ಕಳದ ಪಾಂಡ್ಯನಗರಿಯ ಬೃಹದ್ ಬಂಡೆ ಬೆಟ್ಟದ ಮೇಲೆ ಗುರು ಲಲಿತಕೀರ್ತಿ ಮುನಿಗಳ ಉಪದೇಶದ ಮೇರೆಗೆ ಬಾಹುಬಲಿಯ ಅಭೂತ ಪೂರ್ವವಾದ ಏಕಶಿಲಾ ವಿಗ್ರಹವನ್ನು ನಿರ್ಮಿಸಿ ಪ್ರತಿಷ್ಠಾಪಿಸಿರುವುದು ಈ ಪ್ರತಿಷ್ಠಾಪನಾ ಕಾರ್ಯ ಕ್ರಿ.ಶ. ೧೪೩೨ರ ಫೆಬ್ರವರಿ ೧೩ರಂದು ನೆರವೇರಿತು ಎಂದು ವಿಗ್ರಹದ ಎಡ ಬಲಗಳಲ್ಲಿರುವ ಶಾಸನಗಳು ತಿಳಿಸುತ್ತವೆ.[೨೭] ಇದಾದ ನಾಲ್ಕು ವರ್ಷಗಳಲ್ಲಿ ಅಂದರೆ ಕ್ರಿ.ಶ. ೧೪೩೬ರಲ್ಲಿ ಸುಂದರ ಬ್ರಹ್ಮದೇವರ ವಿಗ್ರಹ ಹೊತ್ತ ಬ್ರಹ್ಮ ದೇವಸ್ತಂಭವನ್ನು ಬಾಹುಬಲಿ ವಿಗ್ರಹದ ಎದುರು ಪ್ರತಿಷ್ಠಾಪಿಸಿದ. ಈ ಮಾಹಿತಿ ಕೊಡುವ ಶಾಸನ ಸ್ತಂಭದಲ್ಲಿದೆ.[೨೮] ಈ ಕಾರ್ಯ ಮಾಡಿದ್ದರಿಂದ ಈತ **ಅಭಿನವ ಚಾಮುಂಡರಾಯ** ಎಂಬ ಅಭಿದಾನಕ್ಕೆ ಪಾತ್ರನಾದ.[೨೯]

ರಾಜಧಾನಿ ಕೆರವಾಸೆಗೆ ಅತಿ ಸಮೀಪ ಇರುವ ಸ್ಥಳ **'ಮುಂಡುದಲೆ'** ಇದನ್ನು ಹೊಸದಾಗಿ ನಿರ್ಮಿತವಾದ ನೇಮಿಶ್ವರ ಬಸದಿಗೆ (ಪೂಜಾ ಕಾರ್ಯಗಳಿಗಾಗಿ) ದಾನ ಮಾಡಿದ ರಾಜ ಪಾಂಡ್ಯದೇವರಸ. ಈ **ಮುಂಡುದಲೆ** ಈಗ ಮುಂಡ್ಲಿ ಆಗಿದೆ. ಅಂತೆಯೇ ಇದರ ಗಡಿಭಾಗಗಳೆಂದು ಹೆಸರಿಸಿರುವ **ಕೆರವಸೆ, ಹೆಂಮುಂಡೆ** ಮತ್ತು **ಕುಕ್ಕಜೆ**ಗಳು ಈಗಲೂ ಇವೆ. ಹೆಂಮುಂಡೆ ಈಗ **ಹೆರ್ಮುಂಡೆ** ಮತ್ತು **ಕುಕ್ಕಜೆ**ಯು ಕುಕ್ಕುಜೆಯಾಗಿ ರೂಪಾಂತರಗೊಂಡಿದೆ. ಕೆರವಸೆ ಕೆರವಾಸೆಯಾಗಿದೆ. ಮೂಡಭಾಗದ ಹೊಳೆ ಮತ್ತು ತೆಂಕಭಾಗದ ಹೊಳೆಯ ಹೊಲಗಳು ಈಗಲೂ ಇವೆ. ಮಳೆ ಆಧಾರಿತ ಕೃಷಿ ಭೂಮಿ ಇದಾದರೂ ಆ ಕಾಲದಲ್ಲಿ ಹೊಳೆಯಿಂದಲೂ ನೀರನ್ನೆತ್ತಿ ವ್ಯವಸಾಯ ಮಾಡಿದ್ದಿರಬಹುದು.

ಈ ವಿಸ್ತಾರವಾದ ಭೂಪ್ರದೇಶದಲ್ಲಿ ಮೂವತ್ತು ಒಕ್ಕಲುಗಳು ಕೃಷಿಯಿಂದ ಜೀವನ ಸಾಗಿಸಿದ್ದವು. ದಾನ ಮಾಡಿದಾಗ ಇವರನ್ನು ಸ್ಥಾನಪಲ್ಲಟ ಮಾಡದೆ ಇವರ ಸಹಿತವಾಗಿ ರಾಜ ಭೂಮಿಯನ್ನು ಸರ್ವಮಾನ್ಯವಾಗಿ ಮಾಡಿ ದಾನ ಮಾಡಿದ. ಇದರಿಂದ ಒಕ್ಕಲುಗಳು ತೆರಿಗೆ ಭೀತಿಯಿಂದ ಮುಕ್ತರಾದರಷ್ಟೇ ಅಲ್ಲದೆ ತಮ್ಮ ನೆಲೆಗಳನ್ನು ಉಳಿಸಿಕೊಂಡು ಗೇಣಿಯನ್ನು ಮಾತ್ರ ಪ್ರತಿ ವರ್ಷ ತಪ್ಪದೆ ಬಸದಿಗೆ ಕೊಡುವಂತಾಯಿತು. ಇಲ್ಲಿ ರಾಜ ತನ್ನ ರಾಜಧರ್ಮದೊಂದಿಗೆ ಸಾಮಾಜಿಕ ನ್ಯಾಯವನ್ನು ಕಾಪಾಡಿ ಧರ್ಮಭೀರುತನದಿಂದ ಮೆರೆದಿದ್ದಾನೆ.

ಭೈರರಸ ವೊಡೆಯ ಮತ್ತು ಆತನ ಮಗ ಪಾಂಡ್ಯ ದೇವರಸರು ಚೈತ್ಯಾಲಯ ನಿರ್ಮಿಸಿ ಅದಕ್ಕೆ ಭೂಮಿದಾನ ಕೊಡುವದಕ್ಕೆ ಮೂಲ ಪ್ರೇರಣೆ ಅವರ ಗುರುಗಳಾದ **ಶ್ರೀ ಲಲಿತಕೀರ್ತಿ ಭಟ್ಟಾರಕ ದೇವರು**. ಶಾಸನದ ಪ್ರಾರಂಭಕ್ಕೆ ಇವರ ನಿರೂಪವನ್ನು ಸ್ಮರಿಸಲಾಗಿದೆ. ಇದೇ ಮುನಿಗಳ ಉಪದೇಶದಿಂದ ಬಾಹುಬಲಿ ಪ್ರತಿಮೆಯನ್ನು ರಾಜ ಸ್ಥಾಪಿಸಿದ್ದು.

ಬಾಹುಬಲಿ ಪ್ರತಿಮೆಯ ಬಲಭಾಗದಲ್ಲಿರುವ ಶಾಸನದಲ್ಲಿ–

> **ಶ್ರೀ ಮದ್ದೇಶೀಗಣೆಖ್ಯಾತೇ ಪನಸೋಗೇವಲೀಶ್ವರಃ ।**
> **ಯೋ ಭೂ ಲ್ಲಲಿತ ಕೀರ್ತ್ಯಾಖ್ಯಸ್ತನ್ಮುನೀಂದ್ರೋಪದೇಶತಃ॥**
> [ಶಾಸನ ಪಾಠ ಸಾಲು ೧–೫]

ಎಂದಿದೆ. ಅಂದರೆ ಶ್ರೀ ಲಲಿತ ಕೀರ್ತಿ ಭಟ್ಟಾರಕರು ದೇಶೀಗಣ ಮತ್ತು ಪನಸೋಗೇ ಬಳಿಗೆ ಸೇರಿದವರು. ಇಷ್ಟರವರೆಗೆ ಈ ಪ್ರತಿಮಾ ಶಾಸನವೇ ಕ್ರಿ.ಶ. ೧೪೩೨][೩೦] ಕಾರ್ಕಳದ ಜೈನ ಮಠದ ಲಲಿತಕೀರ್ತಿ ಭಟ್ಟಾರಕರ ಬಗ್ಗೆ ಮಾಹಿತಿ ಕೊಡುವ ಪ್ರಥಮ ಶಾಸನವಾಗಿತ್ತು. ಕ್ರಿ.ಶ. ೧೪೧೫ಕ್ಕೆ ಸೇರುವ

ಮುಂಡ್ಲಿಯ ಹೊಸ ಶಾಸನವು ಈ ಮಾಹಿತಿಯ ಕಾಲವನ್ನು ೧೭ ವರ್ಷಗಳಷ್ಟು ಹಿಂದಕ್ಕೆ ಹಾಕಿರುವುದಲ್ಲದೆ ಕಾರ್ಕಳ ಭಾಗದಲ್ಲಿ ಸದ್ಯಕ್ಕೆ ಇದೇ ಪ್ರಥಮ ಶಾಸನವಾಗಿದೆ. ಇದರಿಂದ ವ್ಯಕ್ತವಾಗುವುದೇನೆಂದರೆ ಆ ವೇಳೆಗಾಗಲೇ ಲಲಿತಕೀರ್ತಿ ಭಟ್ಟಾರಕ ಪರಂಪರೆಗೆ ಸೇರಿದ ಜೈನಮಠ ಕಾರ್ಕಳದಲ್ಲಿ ಇತ್ತು ಎಂಬುದು. ರಾಜಗುರುಗಳಾಗಿ ಈ ಭಟ್ಟಾರಕರು ಉತ್ತಮವಾದ ಕೆಲಸಗಳನ್ನು ಮಾಡಿಸಿದ್ದರು ಎಂಬುದು ಪಾಂಡ್ಯದೇವರಸನ ಮತ್ತು ಅವನ ನಂತರ ಪಟ್ಟಕ್ಕೆ ಬಂದ ಅರಸರ ಶಾಸನಗಳಿಂದ ವ್ಯಕ್ತವಾಗುತ್ತದೆ.[೩೧]

ಆಶ್ಚರ್ಯವೆಂದರೆ ಈ ಮಠದ ಹುಟ್ಟಿನ ಬಗೆಗೆ ವಿವರ ನೀಡುವ ಒಂದು ತಾಮ್ರಶಾಸನ[೩೨] ಮೂಡಬಿದುರೆ ಯಲ್ಲಿರುವುದು. ಈ ಶಾಸನದ ನೈಜತೆಯ ಬಗ್ಗೆ ನಾನು ಈಗಾಗಲೇ ಪ್ರಶ್ನಿಸಿದ್ದೇನೆ.[೩೩] ಇದರಲ್ಲಿರುವ ತೇದಿ ವಿವರಗಳು ಒಂದಕ್ಕೊಂದು ಸರಿಯಾಗಿ ತಾಳೆಯಾಗುವುದಿಲ್ಲ.[೩೪] ಇದರಲ್ಲಿರುವ ಘಟನೆಗಳ ವಿವರ ಮತ್ತು ಹೆಸರುಗಳು ವಿಶ್ವಾಸಾರ್ಹವಲ್ಲ. ಇಲ್ಲಿ ಬಳಕೆಯಾಗಿರುವ ಭಾಷೆ ಮತ್ತು ರೂಢಿಯ ಹಲವು ಪದಗಳು ತೀರ ಅರ್ವಾಚೀನ ಮತ್ತು ಅಶುದ್ಧ.[೩೫] ಇದರ ಲಿಪಿಯು ಅರ್ವಾಚೀನ. ಇದು ಶಾಸನ ಕೊಡುವ ತೇದಿ ವಿವರದ ಕಾಲದ ಶಾಸನಗಳೊಂದಿಗೆ ಹೊಂದಿಕೆ ಆಗುವುದೇ ಇಲ್ಲ[೩೬].

ಇದಾವುದನ್ನೂ ತರ್ಕಿಸದೆ ಹಲವಾರು ಮಂದಿ ವಿದ್ವಾಂಸರು ಕಾರ್ಕಳವನ್ನು ಲಲಿತಕೀರ್ತಿ ಭಟ್ಟಾರಕ ಸಂಪ್ರದಾಯದ ಮಠ ಕ್ರಿ.ಶ. ೧೫೦೪ರಲ್ಲಿ ಸ್ಥಾಪನೆಯಾಯಿತು ಎಂದು ಹೇಳಿದ್ದಾರೆ[೩೭].

ಡಾ. ಪಿ. ಗುರುರಾಜಭಟ್ಟರು ಈ ಬಗ್ಗೆ ಬರೆಯುತ್ತಾ ಹೀಗೆ ಹೇಳಿದ್ದಾರೆ. "At Karkala an independent matha was found sometime in the 16th century. Sri Lokanatha Sastri writes that. the Lalitha Kirthi matha at Karkala was founded in A.D. 1405 according to a copper plate inpscription of Bhairava raya" Here he has quoted the above record[38] ಲೋಕನಾಥಶಾಸ್ತ್ರಿಗಳು ಈ ತಾಮ್ರ ಶಾಸನದ ಆಧಾರದಲ್ಲಿ ಮಠದ ಸ್ಥಾಪನೆ ಕಾಲವನ್ನು ಕ್ರಿ.ಶ. ೧೫೦೪ ಎಂದು ಹೇಳಿದ್ದಾರೆ. ಆದರೆ ಗುರುರಾಜ ಭಟ್ಟರು ಇದನ್ನು ತದ್ವಿರುದ್ಧ ಮಾಡಿದ್ದಾರೆ[೩೯]. ಅಲ್ಲದೆ ತಾಮ್ರಶಾಸನದ ನೈಜತೆಯ ಪರಾಮರ್ಶನೆ ಮಾಡಿಲ್ಲ. ಇದಕ್ಕೆ ಮೊದಲು ಗುರುರಾಜಭಟ್ಟರು ಡಿ. ಪುಟ್ಟಸ್ವಾಮಯ್ಯ ಅವರನ್ನು ಇದೇ ವಿಷಯಕ್ಕಾಗಿ ಉಲ್ಲೇಖಿಸಿದ್ದಾರೆ[೪೦]. ಒಂದು ಕಡೆ ಕಾರ್ಕಳದ ಅರಸರ ವಂಶಾವಳಿ ೧೩ನೆಯ ಶತಮಾನದಿಂದ ೧೭ನೆಯ ಶತಮಾನದವರೆಗೆ ಅವಿಚ್ಛಿನ್ನವಾಗಿದೆ ಎಂದು ಹೇಳುವ[೪೧] ಇವರು ಈ ರಾಜರ ವಂಶಾವಳಿಯನ್ನು ಕೊಡುವಾಗ ಕ್ರಿ.ಶ. ೧೪೭೫ರ ನಂತರ ಕ್ರಿ.ಶ. ೧೫೦೧ರವರೆಗೆ ಯಾರು ಆಳಿದರೆಂಬುದಕ್ಕೆ ಮಾಹಿತಿ ಇಲ್ಲ.[೪೨] ಎಂದು ಹೇಳಿ ವಿಷಯವನ್ನು ಇವರು ಗೋಜಲು ಮಾಡಿದ್ದಾರೆ. ವಾಸ್ತವವಾಗಿ ಈ ಅವಧಿಯಲ್ಲಿ ಮೂರು ಜನ ರಾಜರು ಆಳಿದರು. ಅವರುಗಳೆಂದರೆ ಎರಡನೆಯ ಭೈರವ ಐದನೆಯ ಪಾಂಡ್ಯ ಮತ್ತು ಮೂರನೆಯ ಭೈರವ[೪೩].

ಹೀಗೆ ಗಣಪತಿರಾವ್ ಐಗಳ್ ಅವರಿಂದ ಹಿಡಿದು ಪಾದೇಕಲ್ಲು ವಿಷ್ಣುಭಟ್ಟ ಅವರ ಕಾಲದವರೆಗೆ ವಿದ್ವಾಂಸರು ಮೂಡಬಿದುರೆ ತಾಮ್ರಶಾಸನದ ಕಥೆಯನ್ನೇ ಉಲ್ಲೇಖಿಸಿ ಕಾರ್ಕಳ ಲಲಿತಕೀರ್ತಿ ಭಟ್ಟಾರಕ ಮಠ ಸ್ಥಾಪನೆಯಾದುದನ್ನು ತಿಳಿಸುತ್ತಾರೆ.[೪೪]

ಆಶ್ಚರ್ಯವೆಂದರೆ ಕ್ರಿ.ಶ. ೧೫೦೪ಕ್ಕೆ ಮೊದಲು ಕಾರ್ಕಳದಲ್ಲಿ ದೊರೆತಿರುವ ಶಾಸನಗಳ ಆಧಾರದಲ್ಲಿ ಮೂಡಬಿದುರೆ ಶಾಸನ ವಿಮರ್ಶೆಯನ್ನು ಇವರಾರೂ ಮಾಡೇ ಇಲ್ಲ. ಕನಿಷ್ಠ ಆ ಬಗ್ಗೆ ಇವರಿಗೆ ಯಾವದೇ ರೀತಿಯ ಸಂದೇಹ ಬಂದಂತೆ ಕಾಣುವುದಿಲ್ಲ. ಒಬ್ಬರು ವಿದ್ವಾಂಸರು ತಾಮ್ರಶಾಸನದ ನೈಜತೆಯನ್ನು ಸಮರ್ಥಿಸಿಕೊಳ್ಳುವ ಸಲುವಾಗಿ ಹಲವು ನಿದರ್ಶನಗಳ ಮೊರೆ ಹೊಕ್ಕಿದ್ದಾರೆ. ಅದರಲ್ಲಿ ಒಂದು ಕವಿಚದುರ ಚಂದ್ರಮ ತನ್ನ ಕಾವ್ಯದಲ್ಲಿ ಕಾರ್ಕಳದ **'ದಾನಶಾಲೆ ಮಠವನ್ನು'** ಹೆಸರಿಸಿಲ್ಲ. ಕಾರಣ ಆ ಕಾಲಕ್ಕೆ ಮಠ ಇರಲಿಲ್ಲ. ಹಾಗಾಗಿ ಶಾಸನ ಹೇಳುವ ರೀತಿಯಲ್ಲಿ ಮಠ ಸ್ಥಾಪನೆ ನಂತರವೇ ಆದುದು.[೪೫] ಚಂದ್ರಮ ಕವಿಯ **"ಕಾರ್ಕಳದ ಗೋಮಟೇಶ್ವರ ಚರಿತೆ"** ಕಾಲ ಕ್ರಿ.ಶ. ೧೬೪೬ ಆದರೆ ಈ ವಿದ್ವಾಂಸರು ಕಾರ್ಕಳದಲ್ಲಿ ಮಠ ಸ್ಥಾಪನೆಯ ಕಾಲವನ್ನು ಮೊದಲು ಕ್ರಿ.ಶ. ೧೫೦೪ ಎಂದೂ ಆನಂತರ ಕ್ರಿ.ಶ. ೧೪೮೪ ಎಂದೂ ಹೇಳಿದ್ದಾರೆ[೪೬] ಹೀಗಿರುವಾಗ ಕ್ರಿ.ಶ. ೧೬೪೬ರ ಗ್ರಂಥದಲ್ಲಿ ಈ ವಿಚಾರ ಪ್ರಸ್ತಾಪವಾಗಿಲ್ಲ (ಆರ್ಥಾತ್ ಮಠದ ಹೆಸರು ಉಲ್ಲೇಖವಾಗಿಲ್ಲ) ಎಂಬ ಸಮರ್ಥನೆ ಎಷ್ಟು ಸಮಂಜಸವಾದುದು ?

ಇಲ್ಲಿ ಒಂದು ವಿಷಯವನ್ನು ವಿವೇಚಿಸುವುದು ಸೂಕ್ತ. ಕ್ರಿ.ಶ. ೧೪೭೫ರವರೆಗೆ (ಹಾಗೂ ಆನಂತರದ ಕಾಲಕ್ಕೆ ಸೇರಿದಂತೆ) ಕಾರ್ಕಳದಲ್ಲಿ ದೊರೆತಿರುವ ಶಾಸನಗಳ[೪೭] ಪ್ರಕಾರ ಕಾರ್ಕಳದ ಅರಸು ಯಾವುದೇ ಧಾರ್ಮಿಕ ಕಾರ್ಯವನ್ನು ತಮ್ಮ ಗುರುಗಳಾದ ಲಲಿತಕೀರ್ತಿ ಭಟ್ಟಾರಕರ ಉಪದೇಶದ ಮೇರೆಗೆ ನಡೆಸಿದ್ದಾರೆ. ನೇಮಿನಾಥ ಬಸದಿಯ ನಿರ್ಮಾಣ ಮತ್ತು ಅದಕ್ಕೆ ದಾನ, ಬಾಹುಬಲಿ ಪ್ರತಿಮೆ ನಿರ್ಮಾಣ ಮತ್ತು ಸ್ಥಾಪನೆ. ಬ್ರಹ್ಮದೇವ ಸ್ತಂಭ ನಿರ್ಮಾಣ ಮತ್ತು ಸ್ಥಾಪನೆ ಅಂತೆಯೆ ಮಾನಸ್ತಂಭದ ನಿರ್ಮಾಣ ಮತ್ತು ಸ್ಥಾಪನೆ

ಮತ್ತು ಹಿರಿಯಂಗಡಿಯ ಬಸದಿಗೆ ದಾನ ಇವುಗಳು ಅತಿ ಸೂಕ್ತವಾದ ಉದಾಹರಣೆಗಳಾಗಿವೆ. ಇದು ಹೀಗಿರುವಾಗ ರಾಜನೋರ್ವ ತನ್ನ ಗುರುಗಳ ಉಪದೇಶವಿಲ್ಲದೆಯೆ ಹೇಗೆ ತಾನು ಸೌಭಾಗ್ಯ ನೋಂಪಿಯನ್ನು (ಸೌಭಾಗ್ಯ ವ್ರತವನ್ನು) ಮಾಡುವುದೆಂದು ನಿಶ್ಚಯಿಸಿದ ? ಒಂದು ಒಳ್ಳೆಯ ಪರಂಪರೆಯ ನೆಲೆಗಟ್ಟಿನಲ್ಲಿ ಬೆಳೆದು ಬಂದಿದ್ದ ರಾಜವಂಶದ ಒಬ್ಬ ಅರಸು ತಮ್ಮ ಗುರುಗಳಿಗೆ ತಿಳಿಸದೆಯೆ ಹಾಗು ಅವರ ಅನುಮತಿ ಪಡೆಯದೆಯೇ ಸ್ವಯಂ ನಿರ್ಧಾರ ಕೈಗೊಂಡು ಮನೆತನದ ಅದೂ ರಾಜವಂಶದ ಪದ್ಧತಿಗೆ ಅಪಚಾರವೆಸಗಲು ಸಾಧ್ಯವೆ ? ಅಧಿಕಾಧಿಕ ಸಂಖ್ಯೆಯಲ್ಲಿ ಅರಸು ಮನೆತನಗಳು ಕರಾವಳಿಯಲ್ಲಿದ್ದುವು. ಈ ಮನೆತನಗಳು ತಮ್ಮ ಆಚಾರ, ವಿಚಾರ, ನಡೆ, ನುಡಿ ಎಲ್ಲವನ್ನು ಚಾಚೂ ತಪ್ಪದೆ ಉಳಿಸಿ ಬೆಳೆಸಿಕೊಂಡು ತನ್ಮೂಲಕ ಒಂದು ಭವ್ಯ ಪರಂಪರೆಯನ್ನು ಬೆಳೆಸಿದರು. ಇದರಿಂದ ಹುಟ್ಟಿತು ಕರಾವಳಿಯ ಉನ್ನತ ಸಂಸ್ಕೃತಿ. ಈ ಪರಂಪರೆ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಕಾರ್ಕಳದ ಭೈರರಸರ ಕೊಡುಗೆಯೂ ಅಪಾರವಾಗಿದೆ. ರಾಷ್ಟ್ರ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಕಲಾಕಾಣಿಕೆಗಳ ವಿಮರ್ಷೆ ಆಗಿದೆ. ಇದೆಲ್ಲವನ್ನೂ ಕಾರ್ಕಳದ ಭೈರರಸರು ತಮ್ಮ ಗುರುಗಳಾದ ಲಲಿತಕೀರ್ತಿ ಭಟ್ಟಾರಕರ ಉಪದೇಶದ ಮೇರೆಗೆ ಸಾಧಿಸಿದ್ದು. ಇಂತಹ ಪರಂಪರೆ ಮತ್ತು ಸಂಸ್ಕೃತಿಯ ಪ್ರತಿಪಾದಕರಾಗಿದ್ದ ಕಾರ್ಕಳದ ಅರಸರು ನೋಂಪಿಯ ಬಗ್ಗೆ ಸ್ವಯಂ ನಿರ್ಧಾರ ಕೈಗೊಂಡು ಗುರುಗಳಿಗಾಗಿ ಹುಡುಕಿ ಕೊನೆಗೆ ಮೂಡಬಿದುರೆಗೆ ಪತ್ರ ಬರೆದರೆಂಬುದು ಒಂದು ಪ್ರಹಸನ ಅಷ್ಟೆ.

ಈ ಮಠದ ವಯೋವೃದ್ಧರೂ, ಜ್ಞಾನಿಗಳೂ ಆಗಿದ್ದರಿಂದ ಹಿಂದಿನ ಪೀಠಾಧಿಪತಿಗಳಾದ ಪೂಜ್ಯ ಲಲಿತಕೀರ್ತಿ ಭಟ್ಟಾರಕ ಸ್ವಾಮಿಗಳವರು ಈ ಬಗ್ಗೆ ಬಹಳ ದೀರ್ಘವಾದ ಚಿಂತನೆ ಮಾಡಿದ್ದರು. ಈ ಸಂಬಂಧ ಹಲವಾರು ಗ್ರಂಥಗಳಲ್ಲಿ ಓದಿ ವಿಷಯವನ್ನು ಮನನ ಮಾಡಿಕೊಂಡಿದ್ದರು. ಶಾಸನ ಗ್ರಂಥಗಳನ್ನು ನನ್ನಿಂದ ಪಡೆದು ಓದಿದರು. ಮನಸ್ಸಿನಲ್ಲಿ ವಿಷಯವನ್ನು ಗಾಢವಾಗಿ ಪರೀಕ್ಷಿಸಿಕೊಂಡ ಮೇಲೆ ನನ್ನೊಡನೆ ಹಲವಾರು ಬಾರಿ ಚರ್ಚಿಸಿದರು. ತಮ್ಮ ಮಠದ ಇತಿಹಾಸವನ್ನು ಅರಿಯಲು ಸ್ವಾಮಿಗಳಿಗೆ ಇದ್ದ ಆಸಕ್ತಿ ಮತ್ತು ಕುತೂಹಲವನ್ನು ಕಂಡು ನನಗೆ ಬಹಳ ಸಂತೋಷವಾಯಿತು. ಅದಕ್ಕಿಂತ ಹೆಚ್ಚಾಗಿ ಈ ವಿಷಯ ಕುರಿತ ಅವರ ಆಳವಾದ ಅಧ್ಯಯನ ಹಾಗು ಆ ಬಗೆಗಿನ ಅವರ ಪ್ರಶ್ನೆಗಳು ನನ್ನನ್ನು ಚಕಿತನನ್ನಾಗಿ ಮಾಡಿತು. ಸ್ವಲ್ಪ ಸಮಯದ ನಂತರ ಅರಿವಾಯಿತು. ಈ ಮಠ ಸ್ಥಾಪನೆಯ ಕುರಿತಾಗಿ ಇದ್ದ ಮೂಲ ಆಕರದ ಬಗ್ಗೆಯೇ ಅವರಲ್ಲಿ ಸಂಶಯ ಇದ್ದುದು. ವೀರ ಚೆನ್ನರಸ ಮತ್ತು ಆತನ ಸೋದರ ಪಾಂಡ್ಯದೇವರಸರ ಆಳ್ವಿಕೆ ಕಾಲದಿಂದ ಕಾರ್ಕಳ ಮತ್ತು ಕೆರವಾಸೆಗಳು ಸಾಂತರರ ಆಡಳಿತ ಕೇಂದ್ರಗಳಾಗಿ ಪ್ರಾಮುಖ್ಯತೆ ಪಡೆದವು. ರಾಜರು ತಮ್ಮ ವಾಸಸ್ಥಾನವನ್ನು ಕ್ರಮೇಣ ಇಲ್ಲಿಗೇ ಬದಲಾಯಿಸಿಕೊಂಡರು. ತಮ್ಮೊಂದಿಗೆ ತಮ್ಮ ಗುರುಗಳೂ ತಮ್ಮ ವಾಸಸ್ಥಾನವನ್ನು ಕಳಸದಿಂದ ಕಾರ್ಕಳಕ್ಕೆ ಬದಲಾಯಿಸಿಕೊಳ್ಳುವಂತೆ ಅವರ ಮನವೊಲಿಸಿ ಜಯಶೀಲರಾದರು. ವೀರಭೈರರಸ ಮತ್ತು ಅವನ ಮಗ ಪಾಂಡ್ಯದೇವರಸನ ಕಾಲಕ್ಕೆ ಈ ಗುರುಗಳು ಬಂದು ಕಾರ್ಕಳದಲ್ಲಿ ನೆಲಸಿ ಆಗಿತ್ತು. ಅವರು ಸಕ್ರಿಯವಾಗಿ ರಾಜರಿಗೆ ಮಾರ್ಗದರ್ಶನ ಮಾಡುತ್ತಿದ್ದರು ಎಂಬುದಕ್ಕೆ ಗೊಮ್ಮಟ ಬೆಟ್ಟದ ಶಾಸನ ಸಾಕ್ಷಿ ಎಂದು ನಾನು ಇತಿಹಾಸದ ಬೆಳವಣಿಗೆಯ ವಿಚಾರ ಹೇಳಿದಾಗ ತಮ್ಮ ಮಠ ೧೪ನೆಯ ಶತಮಾನದ ಉತ್ತರಾರ್ಧದಲ್ಲೆ ಕಾರ್ಕಳದಲ್ಲಿ ಅಸ್ತಿತ್ವದಲ್ಲಿತ್ತು ಅಷ್ಟೆ ಹೊರತು ಆನಂತರ ಇದನ್ನು ಯಾರು ಸ್ಥಾಪಿಸಿದ್ದಲ್ಲ ಎಂದು ಸ್ವಾಮೀಜಿ ಹೇಳಿದರು. ಮುಂದುವರೆದು ಹೇಳಿದರು 'ಶಾಸನದಲ್ಲಿರುವ ಕಥೆ ಒಂದು ದುರದೃಷ್ಟಕರವಾದ ಕಟ್ಟುಕಥೆ. ಯಾವುದೋ ಸ್ವಹಿತಾಸಕ್ತ ಶಕ್ತಿ ಇದಕ್ಕಾಗಿ ಶ್ರಮಿಸಿರಬೇಕು. ಅದರ ಕಾರ್ಯದ ಫಲ ಈ ಶಾಸನ[೪೮].

ಸ್ವಾಮೀಜಿ ಮತ್ತು ನನ್ನ ನಡುವೆ ನಡೆದ ಈ ದೀರ್ಘ ವಿಚಾರ ವಿನಿಮಯ ಬಹಳ ಕಾಲ ನನ್ನಲ್ಲೆ ಉಳಿದುಹೋಗಿತ್ತು. ಅವರು ಎಲ್ಲಾದರೂ ಇದನ್ನು ದಾಖಲಿಸುತ್ತಿದ್ದರೇನೋ ಆದರೆ ಆಗಲೇ ವಯೋವೃದ್ಧರಾಗಿದ್ದ ಅವರು ಸ್ವಲ್ಪ ಕಾಲದಲ್ಲೇ ಮುಕ್ತರಾದರು. ಶಾಸನಾಧಾರಿತ ಮಠ ಸ್ಥಾಪನೆಯ ಚರ್ಚೆ ಇತ್ತೀಚೆಗೆ ಬಹಳ ನಡೆದಿರುವ ಕಾರಣ ಹಿರಿಯ ಸ್ವಾಮಿಗಳಿಗೆ ಈ ಬಗ್ಗೆ ಇದ್ದ ಭಾವನೆ ಮತ್ತು ಶಾಸನದ ನೈಜತೆ ಬಗೆಗಿನ ಅವರ ನಿಲುವುಗಳನ್ನು ದಾಖಲಿಸುವುದು ಸೂಕ್ತ ಎಂಬ ಅಭಿಪ್ರಾಯದಲ್ಲಿ ಇಲ್ಲಿ ದಾಖಲಿಸಿದ್ದೇನೆ.[೪೯]

೧೬ನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಅಸ್ಥಿರ ರಾಜಕೀಯ ಪರಿಸ್ಥಿತಿ ಮತ್ತು ಕಾರ್ಕಳದ ರಾಜವಂಶದ ಅವಸಾನ ಇಂತಹ ಒಂದು ಕಾರ್ಯಕ್ಕೆ ಪ್ರಚೋದನೆ ನೀಡಿರಬೇಕು. ಗೋವಿಂದ ಪೈಗಳು ಈ ಬಗ್ಗೆ ವ್ಯಕ್ತಪಡಿಸಿರುವ ಅಭಿಪ್ರಾಯ ಮೂಡಬಿದುರೆಯ ಚೌಟರಿಗೂ ಮತ್ತು ಕಾರ್ಕಳದ ಭೈರರಸರಿಗೂ ಇದ್ದ ಬದ್ಧದ್ವೇಷ ಮತ್ತು ಕಾರ್ಕಳದ ಅರಸರು ಎಂದೂ ಮೂಡಬಿದುರೆಯ ಚಾರುಕೀರ್ತಿಗಳನ್ನು ತಮ್ಮ ಗುರುಗಳೆಂದು ಮಾನ್ಯ ಮಾಡದಿರುವುದು ಇಲ್ಲಿ ಉಲ್ಲೇಖನೀಯ[೫೦].

ಒಟ್ಟಿನಲ್ಲಿ ಕ್ರಿ.ಶ. ೧೪೧೫ಕ್ಕೆ ಸೇರುವ (ಹೊಸದಾಗಿ ಪತ್ತೆಯಾಗಿರುವ) ಮುಂಡ್ಲಿ ಶಾಸನದ ಆಧಾರದಲ್ಲಿ ಕ್ರಿ.ಶ.

೧೫೦೪ರದ್ದೆಂದು ಹೇಳಲಾಗುತ್ತಿರುವ ಮೂಡಬಿದುರೆ ತಾಮ್ರಶಾಸನದ ವಿಷಯ ಕಾರ್ಕಳದ ಜೈನ ಮಠದ ಹಿರಿಯ (ಈಗ ಮುಕ್ತರಾಗಿರುವ) ಸ್ವಾಮಿಗಳು ಹೇಳಿದಂತೆ "**ಒಂದು ದುರದೃಷ್ಟಕರವಾದ ಕಟ್ಟುಕಥೆ**".

**'ಭಟ್ಟಾರಕ'** ಎನ್ನುವುದು ಜೈನಮಠದ ಆಚಾರ್ಯ ಮುಖ್ಯರನ್ನು ಇತರ ಯತಿಗಳಿಂದ ಪ್ರತ್ಯೇಕಿಸಿ ಸಂಬೋಧಿಸುವ ಪದನಾಮ. ಜೈನಯತಿಯೋರ್ವರು ಮಠಾಧಿಪತಿಯಾಗಿ ಪಟ್ಟಾಭಿಷಿಕ್ತರಾದಾಗ ಪಡೆದುಕೊಳ್ಳುವ ನೂತನ ಹೆಸರಿನೊಂದಿಗೆ 'ಭಟ್ಟಾರಕ' ಎಂಬ ಪದನಿಮಿತ್ತ ಅಧಿಕಾರ ಸೂಚಕ ಹೆಸರೂ ಸೇರಿಕೊಳ್ಳುತ್ತದೆ. ಉದಾಹರಣೆಗೆ ಶ್ರವಣಬೆಳಗೊಳದ ಜೈನಮಠದ ಪೀಠಾಧಿಪತಿಗಳಾದ ಚಾರುಕೀರ್ತಿ ಭಟ್ಟಾರಕರು. ಕಾರ್ಕಳ ಜೈನಮಠದ ಪೀಠಾಧಿಪತಿಗಳಾದ ಲಲಿತಕೀರ್ತಿ ಭಟ್ಟಾರಕರು, ಅಂತೆಯೇ ಮೂಡಬಿದುರೆ ಸಿಂಹನಗದ್ದೆ (ನರಸಿಂಹರಾಜಪುರ) ಮತ್ತು ಹೊಂಬುಚ ಜೈನಮಠಗಳ ಪೀಠಾಧಿಪತಿಗಳಾದ ಚಾರುಕೀರ್ತಿ ಭಟ್ಟಾರಕರು, ಲಕ್ಷ್ಮೀಸೇನ ಭಟ್ಟಾರಕರು ಮತ್ತು ದೇವೇಂದ್ರಕೀರ್ತಿ ಭಟ್ಟಾಕರು. ಕ್ರಿ.ಶ. ೧೪೧೫ಕ್ಕೆ ಸೇರುವ ಮುಂಡ್ಲಿ ಶಾಸನದಲ್ಲಿ **"ಶ್ರೀ ಮಲ್ಲಲಿತಕೀರ್ತಿ ಭಟ್ಟಾರಕ ದೇವರ ನಿರೂಪದಿಂ"** ಎಂಬ ಸ್ಪಷ್ಟ ಮಾಹಿತಿ ಇದೆ. ಅಂದರೆ ಶಾಸನದಲ್ಲಿ ಹೆಸರಿಸಿರುವ **ಲಲಿತಕೀರ್ತಿ**ಗಳು ಕಾರ್ಕಳದ ಮಠಾಧಿಪತಿಗಳು ಎಂಬುದು ಸ್ಪಷ್ಟ. ಹನಸೋಗೆಯಿಂದ ಕಳಸಕ್ಕೆ ನಾನಾ ಕಾರಣಗಳಿಂದಾಗಿ ವಲಸೆ ಬಂದ ಈ ಮುನಿಪರಂಪರೆಯ ಮಠಕ್ಕೆ ರಕ್ಷಣೆ ನೀಡಿ ತಮ್ಮ ಗುರು ಮಠವನ್ನಾಗಿ ಮಾಡಿಕೊಂಡರು ಆಗ ರಾಜಧಾನಿ ಕಳಸದಿಂದ ಆಳುತ್ತಿದ್ದ ಸಾಂತರ ವಂಶಜರು.[೫೦] ಕಾರ್ಕಳ ಭಾಗದ ಸುತ್ತೆಲ್ಲಾ ಘಟ್ಟದ ಕೆಳಗೆ ತಮ್ಮ ರಾಜ್ಯವನ್ನು ವಿಸ್ತರಿಸಿ ಕೆರವಾಸೆ, ಕಾರ್ಕಳಗಳಿಗೆ ತಮ್ಮ ಆಡಳಿತ ಮತ್ತು ವಾಸ್ತವ್ಯದ ನೆಲೆಗಳನ್ನು ಕ್ರಮೇಣ ಬದಲಿಸಿದ ಇವರು ತಮ್ಮ ಗುರು ಮಠವೂ ಕಳಸದಿಂದ ಕಾರ್ಕಳಕ್ಕೆ ವರ್ಗಾವಣೆ ಗೊಳ್ಳುವಂತೆ ಭಕ್ತಿಪೂರ್ವಕವಾಗಿ ಗುರುಗಳಲ್ಲಿ ವಿನಂತಿಸಿ ಆ ಮೂಲಕ ಸದಾ ತಮಗೆ ಕಾರ್ಕಳದಲ್ಲಿ ಗುರುಗಳ ದರ್ಶನ ಮತ್ತು ಮಾರ್ಗದರ್ಶನ ಲಾಭ ದೊರೆಯುವಂತೆ ಮಾಡಿಕೊಂಡರು. ಪ್ರಾಯಶಃ ಶ್ರೀ ಲಲಿತಕೀರ್ತಿ ಭಟ್ಟಾರಕ ಜೈನಮಠ ಮತ್ತು ಅದರ ಪೀಠಾಧಿಪತಿಗಳು ವೀರಭೈರರಸನ ಆಳ್ವಿಕೆ ಪ್ರಾರಂಭಕ್ಕೆ ಕ್ರಿ.ಶ. ೧೫೬೦ ಕಾರ್ಕಳಕ್ಕೆ ಬಂದು ನೆಲಸಿರಬೇಕು.[೫೧] ಇವರ ಉಪದೇಶದಿಂಧ ವೀರಭೈರರಸ ಮತ್ತು ಆತನ ಮಗ ಪಾಂಡ್ಯದೇವರಸರು ಕೂಡಿ ಕಾರ್ಕಳದಲ್ಲಿ ಪ್ರಾಯಶಃ ನೆರವೇರಿಸಿದ ಕಾರ್ಯ ಹಿರಿಯಂಗಡಿಯಲ್ಲಿನ ಉನ್ನತ ಸ್ಥಳದಲ್ಲಿ ನೇಮಿಶ್ವರ ಜನಾಲಯದ ನಿರ್ಮಾಣ. ಇದರ ಇಂದಿನ ಸ್ಥಿತಿಯನ್ನು ನೋಡಿದರೆ ನಿಜಕ್ಕೂ ಇದು ರಾಜಕಾರ್ಯ. ಗುರುಗಳ ಉಪದೇಶಾಮೃತ ಧಾರೆಯಿಂದ ರೂಪುಗೊಂಡಿದ್ದು ಎಂಬ ಅಂಶ ಸಾಬೀತಾಗುತ್ತದೆ. ಇದೇ ಗುರುಗಳ ಉಪದೇಶದಿಂದ ಇಮ್ಮಡಿ ಪಾಂಡ್ಯರಾಯ ಕ್ರಿ.ಶ. ೧೪೫೭ರಲ್ಲಿ ಉತ್ತುಂಗವೂ, ಅದ್ಭುತ ಕಲಾಕೃತಿಯೂ ಆದ ಏಕಶಿಲಾ ಮಾನಸ್ತಂಭವನ್ನು ಈ ಚೈತ್ಯಾಲಯದ ಮುಂದೆ ಪ್ರತಿಷ್ಠಾಪಿಸಿದ.[೫೨]

## ಈ ಮಠ ದಾನಶಾಲೆ ಆದದ್ದು

ಕಾರ್ಕಳದ ಜೈನಮಠವನ್ನು ದಾನಶಾಲೆ ಮಠ ಎಂದೇ ಈಗ ಕರೆಯಲಾಗುತ್ತಿದೆ. ಇದಕ್ಕೆ ಹಿಂದೆ ಈ ಹೆಸರೇನೂ ಇರಲಿಲ್ಲ. ಕಾರ್ಕಳ ಗೋಮಟೇಶ್ವರ ಚರಿತೆಯನ್ನು ಬರೆದ ಚದುರ ಚಂದ್ರಮ ತನ್ನ ಕಾವ್ಯದಲ್ಲಿ ಕಾರ್ಕಳ ನಗರದ ವರ್ಣನೆಯನ್ನು ಮಾಡಿದ್ದಾನಾದರೂ[೫೪] ಅದರಲ್ಲಿ ದಾನಶಾಲೆ ಮಠದ ಉಲ್ಲೇಖ ಇಲ್ಲ. ಅಂದರೆ ಕ್ರಿ.ಶ. ೧೬೪೬ರ ವರೆಗೆ ಕಾರ್ಕಳ ಮಠವನ್ನು 'ದಾನಶಾಲೆ ಮಠ' ಎಂದು ಕರೆಯುವ ರೂಢಿ ಬೆಳೆದಿರಲಿಲ್ಲ. ಪ್ರಾಯಶಃ ೧೭ನೆಯ ಶತಮಾನದ ಉತ್ತರಾರ್ಧದಿಂದ ಹೀಗೆ ಕರೆಯುವ ರೂಢಿ ಬೆಳೆದಿರಬೇಕು. ಆದರೆ ಈ ಹೆಸರು ಹೇಗೆ ಬಂದಿರಬೇಕು ? ಇದಕ್ಕೊಂದು ಶಾಸನ ಮಾಹಿತಿಯನ್ನು ಇಲ್ಲಿ ಕೊಡಬಹುದು.

ಕ್ರಿ.ಶ. ೧೫೭೬ಕ್ಕೆ ಸೇರುವ ಕಾರ್ಕಳ ಹಿರಿಯಂಗಡಿಯ ಶಾಸನವೊಂದು[೫೫] ಬಹಳ ಮುಖ್ಯವಾದ ಮಾಹಿತಿಯೊಂದನ್ನು ನೀಡುತ್ತದೆ. ಕಾರ್ಕಳದ ಜೈನಸಮಾಜ ೫೦೦೦ ಹಲರು ಶಾಸ್ತ್ರದಾನಕ್ಕಾಗಿ ೫೦೦ ಗದ್ಯಾಣಗಳನ್ನು **ಲಲಿತ ಕೀರ್ತಿ ಭಟ್ಟಾರಕರ** ಶಿಷ್ಯರಾದ ಶಾಂತಿಕೀರ್ತಿ ಮುನಿಗಳ ವಶಕ್ಕೆ ಕೊಟ್ಟರು. ಈ ಹಣದಿಂದ ಬರುವ ಬಡ್ಡಿಯಿಂದ ಒಂದು ಶಾಲೆಯನ್ನು ನಡೆಸಬೇಕೆಂದು ವಿನಂತಿಸಿದರು. "ಅಷ್ಟೇ ಅಲ್ಲ. ರಾಜ ತನ್ನ ಮಕ್ಕಳು ಮತ್ತು ಅಳಿಯಂದಿರನ್ನು ಇಲ್ಲಿಗೇ ವಿದ್ಯಾಭ್ಯಾಸಕ್ಕಾಗಿ ಕಳುಹಿಸಬೇಕೆಂದು ಮುನಿಜನರೊಡಗೂಡಿ ತೀರ್ಮಾನಿಸಿ ವಿನಂತಿಸಿದರು. ಶಾಲೆ ಹಿರಿಯಂಗಡಿಯಲ್ಲಿ ಪ್ರಾರಂಭವಾಯಿತು. ಈ ದಾನದಿಂದ ಹುಟ್ಟಿದ ಶಾಲೆ 'ದಾನಶಾಲೆ' ಆಯಿತು. ಇದನ್ನು ಶಾಶ್ವತವಾಗಿ ಕಾಯ್ದುಕೊಂಡು ಬರುವ ಜವಾಬ್ದಾರಿಯನ್ನು ಜೈನ ಮಠದ ಲಲಿತಕೀರ್ತಿ ಭಟ್ಟಾರಕ ಮತ್ತು ರಾಜ ಭೈರರಸವೊಡೆಯರ ಮೇಲೆ ಹೇರಲಾಯಿತು.[೫೬] ಹೀಗೆ ಕಾರ್ಕಳದ ಜೈನಮಠ **ದಾನಶಾಲೆ**ಯನ್ನು ನಡೆಸುವ ಕರ್ತವ್ಯ ಪಡೆಯಿತು. ರಾಜವಂಶ ೧೮ನೆಯ ಶತಕದ ಉತ್ತರಾರ್ಧದಲ್ಲಿ ಅಂತ್ಯವಾಯಿತು. ಆದರೆ ಮಠ ಉಳಿದಿತ್ತು. ಹಾಗಾಗಿ ಶಾಲೆಯ ಜವಾಬ್ದಾರಿ ಸಂಪೂರ್ಣವಾಗಿ ಅದರದೇ ಆಯಿತು. ಇದು ಮಠಕ್ಕೊಂದು ಹೊಸ ಹೆಸರು ಬರುವುದಕ್ಕೆ ಕಾರಣವಾಯಿತು. ಶಾಲೆ ಮಠದಲ್ಲೇ ಇದ್ದ

ಕಾರಣ ಜನ ಮಠವನ್ನು **ದಾನಶಾಲೆ ಮಠ** ಎಂದು ಸಂಬೋಧಿಸಲು ಪ್ರಾರಂಭಿಸಿದರು. ಈಗ **ದಾನಶಾಲೆ** ಒಂದು ಸ್ಥಳದ ಹೆಸರಾಗಿದೆ. ಹಾಗಾಗಿ ದಾನಶಾಲೆ ಒಂದು ಅರ್ವಾಚೀನ ಹೆಸರು. ಇದಕ್ಕೆ ಹಿಂದೆ ಪಾಂಡ್ಯನಗರಿ ಎಂಬ ಹೆಸರಿತ್ತು. ಅದಕ್ಕೂ ಮೊದಲು ಇದು ಬೆಟ್ಟದಂಗಡಿಯಾಗಿತ್ತು. ಚದುರ ಚಂದ್ರಮನ ಮಾತಿನಲ್ಲಿ ಹೇಳುವುದಾದರೆ–

> **ಸೊಗಸುವ ಬೆಟ್ಟದಂಗಡಿಯನು ಶ್ರೀ ಪಾಂಡ್ಯ**
> **ನಗರಿಯೆಂದೆಂಬರು ಬುಧರು ॥**
> **ಅಗಣಿತ ಮಂತ್ರಿ ಮಾಂಡಲೀಕರ ಗೃಹವಲ್ಲಿ ।**
> **ಮುಗಿಲ ಮುಟ್ಟುವದೇನನೆಂಬೆ ॥**[೫೭]

ಹೀಗೆ ಹಲವಾರು ವಿಷಯಗಳನ್ನು ಕುರಿತು ಚರ್ಚಿಸುವ ಅವಕಾಶ ಮಾಡಿಕೊಟ್ಟಿದೆ ಮುಂಡ್ಲಿಯ ಈ ಶಾಸನ. ಇದು ಚಿಕ್ಕದಾದರೂ ಅಪಾರ ಶಕ್ತಿಯನ್ನು ಹೊಂದಿದೆ. ವೀರಭೈರರಸ, ಅವನ ಮಗ ಪಾಂಡ್ಯದೇವರಸ ಇವರ ಆಳ್ವಿಕೆ, ವೈಯ್ಯಕ್ತಿಕ ಸಾಧನೆಗಳು, ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಚಿಂತನೆಗಳು, ಸಾಂಸ್ಕೃತಿಕ ಅಭಿರುಚಿ, ಮಹೋನ್ನತ ಕಲಾ ಕಾಣಿಕೆಗಳು ಈ ಸಾಧನೆಗಳ ಹಿಂದಿನ ಶಕ್ತಿಯಾಗಿದ್ದ ಲಲಿತಕೀರ್ತಿ ಭಟ್ಟಾರಕರು[೫೮] ಎಲ್ಲವೂ ರೋಚಕ ಅನುಭವವನ್ನು ಕೊಡುವ ವಿಷಯಗಳು. ಮುಂಡ್ಲಿ ಶಾಸನ ಈ ನಿಟ್ಟಿನಲ್ಲಿ ತನ್ನ ಪ್ರಾಮುಖ್ಯತೆಯನ್ನು ಕಾಯ್ದುಕೊಂಡಿದೆ.

**ಶಾಸನಪಾಠ**

೧ 卐 ಶ್ರೀ ಮಲ್ಲಲಿತ ಕೀರ್ತಿ ಭಟ್ಟಾರಕ ದೇವರ ನಿರೂಪ ದಿಂ ಪಟ್ಟಿಪೊಂಬು

೨ ಚ್ಚ ಪುರವರಾಧೀಶ್ವರ ಜಿನದತ್ತಾನ್ವಯ ಸಂಭೂತ ಭೈರರ್ಸ ವೊಡೆ

೩ ಯರ ಕುಮಾರ ಪಾಂಡ್ಯ ದೇವರಸೊಡೆಯರು ಅವರು ಕಾರಕಳ

೪ ದಲ್ಲಿ ಮಾಡ್ಸಿದ ನೇಮಿನಾಥ ಸ್ವಾಮಿಗಳ್ಗೆ ಶಕವರ್ಷ ೧೩೩೯ನೆಯ ಜಯ ಸಂ

೫ ವತ್ಸರದ ಮಾಘ ಬ ೭ ಗುಲು ಮುಂಡುದಲೆಂಬೂರನೂ ಧಾರಾ ಪೂ

೬ ರ್ವಕವಾಗಿ ಕೊಟ್ಟರು ಅದಕ್ಕೆ ಸಲುವುದು ಮೂಡ ಕೆರವಸೆಯ ಹೊ

೭ ಳೆ ತೆಂಕ ಹೊಳೆಯ ಹೊಲ ಪಡುವ ಹೆಂಮುಂಡೆ ಬಡಗ ಕುಕ್ಕಜೆ ಎ (ಯ) ಗಡಿ

೮ ಯಿಂತಿವು ಚತುಸ್ಸೀಮೆಗಳು ಆ ಮುಂಡ್ಲುದೇಲ ಮೂವತ್ತೊಕ್ಕಲ ಕು

೯ ಳ ಸಹ ಸರ್ವ್ವಮಾನ್ಯವಾಗಿ ಕೊಟ್ಟರು ಈ ದಮ್ಮಕ್ಕಳಿಪಿದವರು ವಾರಾ

೧೦ ಣಸಿಯಲ್ಲಿ ಗೋರೆಶುಭೂಪಿ ಬ್ರಾಹ್ಮರು ಸ್ತ್ರಿ ವಧೆಗಳ ಮಾಡಿದೋಷಕ್ಕೆ ಹೋ

೧೧ ಹರೂ[।*] ವರ್ದ್ಧತಾಂ ಜೈನ ಶಾಸನಂ ಶ್ರೀ ಶ್ರೀ [॥*]

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. Ep. Carn. Vo. VI (Rice) Introduction.

೨. Ibid., P. Gururaja Bhatt., *Studies in Tuluva History and Culture*, (1976), Kallianpur, P. 81, [Hereafter P. G. BHat, STHC], P.N. Narasimha Murthy., *Jainism on the Kanara Coast*, (1983) Ph.D. Thesis (Type script) P. 136.

೩. ಗಣಪತಿರಾವ್ ಐಗಳ್., **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ** [೧೯೨೩/೨೦೦೪] .
**ಕೇಶವಕೃಷ್ಣ ಕುಡ್ವ., ದಕ್ಷಿಣ ಕನ್ನಡದ ಇತಿಹಾಸ** (೧೯೪೮).
B.A. Saletora., *Ancient Karnataka,* Vol I. History of Tuluva (1936).
K.V. Ramesh., *A History of South Kanara,* (1970) - (ASHK).
P.G. Bhat., STHC (1976).
Suryanath Kamath., *Tuluva in Vijayanagara Times.*
K.G. Vasanta Madhava., *The Political Histiry of Kanara from 1565-1763.*
P.N. Narashimha Murthy., *Jainism on the Kanara Coast,* [JKC].
ಹೇರಂಜೆ ಕೃಷ್ಣಭಟ್ಟ., ಸಂ. **ತುಳು ಕರ್ನಾಟಕ ಅರಸು ಮನೆತನಗಳು,** (೨೦೦೦).
ಎಸ್.ಡಿ. ಶೆಟ್ಟಿ., ಸಂ. **ತುಳು ಕರ್ನಾಟಕ ಅರಸು ಮನೆಗಳು,** (೨೦೦೦)

೪. ಪಿ.ಎನ್. ನರಸಿಂಹಮೂರ್ತಿ., (ಇತರರೊಂದಿಗೆ) : **ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ.** (೧೯೮೫).
P.N.N. Murthy., *JKC.,* P.G. Bhat., *SJHC.,* Suryanath Kamat., *Tuluva in V.N.Times.*

೫. ಕಳಸ ಈಗ ಒಂದು ಗ್ರಾಮ. ಚಿಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕಿನಲ್ಲಿದೆ.

೬. ಇವರು ಕಾರ್ಕಳಕ್ಕೆ [illegible] ಬಂದು ನೆಲೆಸಿದರು ಎನ್ನಲಾಗಿದೆ. ನೋಡಿ ಡಾ. ಪಾದೇಕಲ್ಲು ವಿಷ್ಣುಭಟ್ಟ ಲೇಖನ – ತುಳು ಕರ್ನಾಟಕ ಅರಸು ಮನೆತನಗಳು – ಗ್ರಂಥದಲ್ಲಿ.
೭. ವರಂಗ ಮತ್ತು ಮರ್ಣೆ ಶಾಸನಗಳು [ARSIE. Nos. 529 & 530 of 1928-29]
೮. ಚದುರ ಚಂದ್ರಮ., ಕಾರ್ಕಳದ ಗೋಮಟೇಶ್ವರ ಚರಿತೆ. [ಚಂದ್ರಶೇಖರನ್ ಸಂ. ೧೯೫೫] ಮೊದಲ ಸಂಧಿ.
ಪಿ.ಎನ್. ನರಸಿಂಹಮೂರ್ತಿ., ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ. ಪು. ೩೫–೩೬.
೯. Ep. Ind Vol. VII pp 109-111 and Vol. VIII P. 109 ff S.I.I Vol VII Nos 242-248 etc DR 529, 530 of 1928-29 etc
೧೦. ಹಿರಿಯಂಗಡಿ ಪರ್ಪಲೆ ಗುಡ್ಡೆ, [illegible], ನಲ್ಲೂರು ಬಂಡೆ, ನಕ್ರೆ, ಮಾಳ, [illegible], [illegible], ಜಾರ್ಕಳ, ಎಣ್ಣೆಹೊಳೆ, ಅಜೆಕಾರು, ಅಂಡಾರು, ಹೆರ್ಮುಂಡೆ, ಕೆರವಾಸೆ ಇತ್ಯಾದಿ ಸ್ಥಳಗಳಲ್ಲಿ ದೊರೆತ ಹೊಸ ಶಾಸನಗಳು.
೧೧. ಮುಂಡ್ಲಿ ಶಾಸನ, ಮುಂಡ್ಲಿ – ಜಾರ್ಕಳ ಗ್ರಾಮ.
೧೨. S.I.I. Vol. VII No. 247.
೧೩. ಇದು ನಾನು ಪತ್ತೆ ಮಾಡಿರುವ ಶಾಸನ – P.N.N., *J.K.C.* P. 137-38.
೧೪. S.I.I. Vol. XXVII No. 251. ಇವುಗಳಲ್ಲದೆ ಇನ್ನೂ ಅನೇಕ ಶಾಸನಗಳಲ್ಲಿ ಈ ಪ್ರಶಸ್ತಿ ಇದೆ.
೧೫. K.V. Ramesh., *A.H.S.K.*
೧೬. ಪಿ.ಎನ್. ನರಸಿಂಹಮೂರ್ತಿ., **ಹಟ್ಟಿಯಂಗಡಿ ಒಂದು ಐತಿಹಾಸಿಕ ಅವಲೋಕನ,** (೧೯೮೬).
*Hattiyangadi Sri. Siddhivinayaka* (2002).
೧೭. ಈ ಎರಡೂ ಶಾಸನಗಳನ್ನು ನಾನು ಬೇರೆ ಬೇರೆ ಕಾಲಗಳಲ್ಲಿ ಪತ್ತೆ ಮಾಡಿದ್ದೇನೆ.
೧೮. ARSIE No. 251 of 1928-29.
೧೯. ಪಿ.ಎನ್. ನರಸಿಂಹಮೂರ್ತಿ, ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ (೧೯೮೫) ಪು. ೧೩.
P.N.N. Murthy J.K.C. PP. 136-142.
೨೦. ARSIE No. 252 of 1928-29.
೨೧. P.N.N. Murthy : J.K.C. P. 137. also. **ಕಾರ್ಕಳ ಪ್ರಾದೇಶಿಕ ಅಧ್ಯಯನ,** (ಇತಿಹಾಸ)
೨೨. Ibid. P. 136-38. ಕಾರ್ಕಳ ಪ್ರಾ, ಅಧ್ಯಯನ.
೨೩. ಮರ್ಣೆ ಶಾಸನದಲ್ಲಿ ಇದರ ಪ್ರಸ್ತಾಪ ಇಲ್ಲ. ಬಾರಕೂರು ವಿಜಯನಗರ ಚಕ್ರವರ್ತಿ ಆಳ್ವಿಕೆಗೆ ಒಳಪಟ್ಟ ರಾಜ್ಯದ ರಾಜಧಾನಿಯಾದ್ದರಿಂದ ಕಾರ್ಕಳದ ರಾಜನಿಗೆ ಇಲ್ಲಿ ನೇರ ಕಾರ್ಯಕ್ಕೆ ಅವಕಾಶವಿರಲಿಲ್ಲ. ಜನರ ವಿನಂತಿಯನ್ನು ಆಧರಿಸಿ ಚಕ್ರವರ್ತಿ ಹಾಗೂ ರಾಜ್ಯಪಾಲನ ಅನುಮತಿಯ ಮೇರೆಗೆ ಅವರು ಕೊಟ್ಟ ಸ್ಥಳದಲ್ಲಿ ಈ ಬಸದಿಯ ನಿರ್ಮಾಣವಾಗಿರಬೇಕು.
೨೪. P.N.N. Murthy., *J.K.C.* P. 137.
೨೫. Ibid. PP. 142-145. ಕಾರ್ಕಳ ಪ್ರಾದೇಶಿಕ ಅಧ್ಯಯನ. ಪು. ೧೪–೧೫ [ಕಾರ್ಕಳ].
೨೬. Ibid ಕಾರ್ಕಳ, ಪು. ೧೪–೧೫ ಮತ್ತು ನಾನು ಪತ್ತೆ ಮಾಡಿರುವ ಹೊಸ ಶಾಸನಗಳು.
೨೭. ಕೆ.ವಿ. ರಮೇಶ, ಎಂ.ಜೆ. ಶರ್ಮ., **ತುಳು ನಾಡಿನ ಶಾಸನಗಳು.** (೧೯೭೮) ಸಂ. ೬೬ (**ತುನಾಶಾ**). Ep. Ind. Vol. VII PP. 109-111
೨೮. ತುನಾಶಾ. ಸಂ. ೬೮ ; JKC. P. 142-145 ; ಕಾರ್ಕಳ, ೧೪–೧೫.
೨೯. S.I.I. Vo. XXVII No. 252.
೩೦. ತುನಾಶ ಸಂ. ೬೬
೩೧. S.I.I. Vol. VII Nos. 238, 241, 243, 244, 246, 248 etc.
೩೨. ARSIE APX A. No. 5 0f 1940-41.
೩೩. P.N.N. JKC PP. 398-400.
೩೪. ಶಕವರ್ಷ ೧೪೨೬ನೆಯ ಸಂದ ವರ್ತಮಾನ ಕ್ರೋಧಿ ಸಂವತ್ಸರದ ಆಶ್ವೀಜ ಬ. ಪಂಚಮಿ ಎಂದಿದೆ. ಇಲ್ಲಿ ಶಕವರ್ಷ ೧೪೨೬ಕ್ಕೆ ಇದ್ದುದು ರಕ್ತಾಕ್ಷಿ ಸಂವತ್ಸರ. ಶಕವರ್ಷ ೧೪೦೬ ಮತ್ತು ೧೪೬೬ ರಲ್ಲಿ ಕ್ರೋಧಿ ಸಂವತ್ಸರ ಇಲ್ಲಿ ಶಕವರ್ಷವನ್ನು ೨೦ ವರ್ಷ ಹಿಂದೆ ಹಾಕಿ ಕ್ರೋಧಿ ಸಂವತ್ಸರಕ್ಕೆ ಸರಿಹೊಂದಿಸಬೇಕೇ? ಇಲ್ಲಾ ಶಕವರ್ಷ ೧೪೨೬ಕ್ಕೆ ಬರುವ ಸಂವತ್ಸರವನ್ನು ರಕ್ತಾಕ್ಷಿ ಎಂದು ಬದಲಿಸಿಕೊಳ್ಳಬೇಕೇ ? ಎರಡರ ನಿಲುವು ತಪ್ಪಾಗುತ್ತದೆ.
೩೫. P.N.N. Murthy, **J.K.C.** P. 398-400.
Also **ಉಡುಪಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ೨೦೦೮** ರ ಜನವರಿಯಲ್ಲಿ ನಡೆದ ವಿಚಾರ ಸಂಕಿರಣದ ಪ್ರಬಂಧ. **'ಕಾರ್ಕಳದ ಲಲಿತ ಕೀರ್ತಿ ಭಟ್ಟಾರಕ ಮಠ'.**
೩೬. Ibid.
೩೭. ಲೋಕನಾಥಶಾಸ್ತ್ರಿ., **ಮೂಡಬಿದುರೆಯ ಚರಿತ್ರೆ** (೧೯೩೭).
ಡಿ. ಪುಟ್ಟಸ್ವಾಮಯ್ಯ., **ಕಾರ್ಕಳದ ಚರಿತ್ರೆ**
P.G. Bhatt., STHC P. 87. etc.
೩೮. P.B. Bhatt., STHC P. 433.

೩೯. **ಲೋಕನಾಥಶಾಸ್ತ್ರಿ., ಮೂಡಬಿದುರೆಯ ಚರಿತ್ರೆ,** ಪು. ೪೦.
೪೦. P.G. Bhatt., STHC. P. 87.
೪೧. Ibid : P. 84, from 16.
೪೨. Ibid : PP. 90-91.
೪೩. P.N.N. Murthy., *JKC* PP. 149-152, ಕಾರ್ಕಳ, ಪು. ೧೬.
ಹೇರಂಜೆ ಕೃಷ್ಣ ಭಟ್ಟ., ಸಂ. **ತುಳು ಕರ್ನಾಟಕದ ಅರಸು ಮನೆತನಗಳು**. ಪು. ೬೨, ೬೫.
ಎಸ್.ಡಿ. ಶೆಟ್ಟಿ., ಸಂ. **ತುಳು ಕರ್ನಾಟಕದ ಅರಸು ಮನೆತನಗಳು,** ಪು. ೬೨, ೬೫.
K.V. Ramesh., AH.S.K. PP. 187-88 and 236.
೪೪. ಗಜಾಪತಿರಾವ್ ಐಗಳ್., ಕೇಶವಕೃಷ್ಣ ಕುಡ್ವ, ಲೋಕನಾಥಶಾಸ್ತ್ರಿ, ಡಿ. ಪುಟ್ಟಸ್ವಾಮಯ್ಯ.
ಗೋವಿಂದ ಪೈ., **ಸಂಶೋಧನ ಸಂಪುಟ** (೧೯೯೫) ಪು ೬೭೬-೭೭.
[ಸಂಪಾದಕ ಹೇರಂಜೆ ಕೃಷ್ಣಭಟ್ಟ ಮತ್ತು ಮುರಳೀಧರ ಉಪಾಧ್ಯ].
ಪಾದೇಕಲ್ಲು ವಿಷ್ಣುಭಟ್ಟರ ಲೇಖನ : **'ತುಳು ಕರ್ನಾಟಕದ ಅರಸು ಮನೆತನಗಳು'** ಸಂಪುಟದಲ್ಲಿ.
೪೫. **'ತಾಮ್ರ ಶಾಸನದ ನೈಜತೆ ಸಾಬೀತು'** ಲೇಖನ ಉದಯವಾಣಿ, ೧೩-೧೨.೨೦೦೪.
೪೬ ಅದೇ.
೪೭. ವರಂಗ, ಮರ್ಣೆ, ಗೊಮ್ಮಟಬೆಟ್ಟ, ಹಿರಿಯಂಗಡಿ, ಆನೆಕೆರೆ, ಚತುರ್ಮುಖ ಬಸದಿ ಇತ್ಯಾದಿ ಶಾಸನಗಳು.
೪೮. ಪೂಜ್ಯ ಸ್ವಾಮಿಗಳೊಂದಿಗಿನ ಸಂವಾದ ನನಗೊಂದು ಅಪೂರ್ವ ಅನುಭವ ಕೊಟ್ಟಿತು. ತಮ್ಮ ಶಿಷ್ಯರಲ್ಲಿ ಕೆಲ ಹಿರಿಯರು (ಪುಟ್ಟಸ್ವಾಮಯ್ಯ ಮತ್ತು ಲೋಕನಾಥ ಶಾಸ್ತ್ರಿಗಳ ಬರಹವನ್ನು ಆಧರಿಸಿ) ಈ ಬಗ್ಗೆ ತಮ್ಮೊಡನೆ ಚರ್ಚಿಸಿದ್ದು, ಉಳಿದವರು ಈ ಬಗ್ಗೆ ನಿರ್ಲಿಪ್ತರಾಗಿದ್ದು ಅವರಿಗೆ ನೋವಿನ ಸಂಗತಿಗಳಾಗಿದ್ದವು. ಆದರೆ ತಮ್ಮ ಮಠವನ್ನು ಯಾವುದೇ ರಾಜ (ಅಥವಾ ವ್ಯಕ್ತಿ) ಸ್ಥಾಪಿಸಿದ್ದಲ್ಲ, ಬದಲಾಗಿ ಅತ್ಯಂತ ಪ್ರಾಚೀನ ಕಾಲದಿಂದ ಸ್ವತಂತ್ರವಾಗಿ ಮಹಾತಪಸ್ವಿಗಳ ಕಾರ್ಯ ಫಲವಾಗಿ ಇದು ಹುಟ್ಟಿ ಬೆಳೆದದ್ದು, ಈಗ ಕಾರ್ಕಳದಲ್ಲಿದೆ ಎಂಬ ಅಚಲವಾದ ನಂಬಿಕೆ ಸ್ವಾಮಿಜಿಯವರಲ್ಲಿತ್ತು.
೪೯. ಇದು ಕೇವಲ ನಮ್ಮಿಬ್ಬರ ನಡುವಿನ ಸಂವಾದವಾದ್ದರಿಂದ ಎಲ್ಲೂ ಇದನ್ನು ಅವರ ಜೀವಿತ ಕಾಲದಲ್ಲಿ ಪ್ರಕಟಪಡಿಸಲಿಲ್ಲ. ಆದರೆ ಆ ಮಠದ ಇಂದಿನ ಪೀಠಾಧಿಪತಿಗಳ ಪಟ್ಟಾಭಿಷೇಕ ಮಹೋತ್ಸವ ಸಮಯದಲ್ಲಿ ಉಪಸ್ಥಿತರಿದ್ದ ಮಿತ್ರರಾದ ಎಸ್.ಡಿ. ಶೆಟ್ಟಿಯವರ ಗಮನಕ್ಕೆ ಮಠದ ಪ್ರಾಚೀನತೆ ಬಗ್ಗೆ ಹೇಳಿ ಶಾಸನದ ನೈಜತೆ (?) ಬಗ್ಗೆ ಗಮನಸೆಳೆದಿದ್ದೆ. (ಮುಂದ್ಲಿ ಶಾಸನ ದೊರೆಯದಿದ್ದುದು ಚರ್ಚೆ ಮುಂದುವರೆಯಲು ಅವಕಾಶ ಕೊಟ್ಟಿತು).
೫೦. **ಗೋವಿಂದ ಪೈ ಸಂಶೋಧನ ಸಂಪುಟ,** (೧೯೯೫) ಪು./ ೬೭೬-೭೭.
೫೧. P.N.N. Murthy., JKC, PP. 398-400.
೫೨. Ibid, P. 137.
೫೩. S.I.I. Vol. **XXVII** No. 252.
೫೪. **ಗೋಮಟೇಶ್ವರ ಚರಿತ್ರೆ,** ಮೊದಲ ಸಂಧಿ, ಪದ್ಯ ೬೩-೧೪೬.
೫೫. S.I.I. Vol. VII, No. 243.
೫೬ ಅದೇ ಶಾಸನ.
೫೭. **ಕಾರ್ಕಳದ ಗೋಮಟೇಶ್ವರ ಚರಿತ್ರೆ,** (೧೯೫೩) ಮೊದಲ ಸಂಧಿ, ಪದ್ಯ ೮೬.
೫೮. **ಕಾರ್ಕಳದ ಲಲಿತಕೀರ್ತಿ ಭಟ್ಟಾರಕರ ಜೈನಮಠ** ಕುರಿತಾಗಿ ಡಾ. ಎಸ್.ಡಿ. ಶೆಟ್ಟಿಯವರ ಲೇಖನ, **ಉಡುಪಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ** ಸಂಪುಟದಲ್ಲಿದೆ.

ಡಾ. ಅಪ್ಪಣ್ಣ ಎನ್. ಹಂಜೆ*

# ಕುಂದಗೋಳ ತಾಲೂಕಿನ ಜೈನಾವಶೇಷಗಳು

**ಪ್ರಾಸ್ತಾವಿಕೆ :** ಧಾರವಾಡ ಜಿಲ್ಲೆಯ ಕುಂದಗೋಳ ತಾಲ್ಲೂಕವು ಉತ್ತರ ಅಕ್ಷಾಂಶ ೧೫° ೧೬' ರಿಂದ ೧೫° ೫೭'ರ ವರೆಗೆ ಮತ್ತು ಪೂರ್ವ ರೇಖಾಂಶ ೭೫° ೧೯' ರಿಂದ ೭೫° ೨೬'ರವರೆಗಿನ ಚೌಕಟ್ಟಿನಲ್ಲಿ ಒಟ್ಟು ೬೪೮.೫ ಚ.ಕಿ.ಮೀ. ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದೆ. ಇದು ಸಮುದ್ರ ಮಟ್ಟದಿಂದ ೬೩೦.೧೧ ಮೀ. ಎತ್ತರದಲ್ಲಿದೆ. ಈ ತಾಲ್ಲೂಕಿನಲ್ಲಿ ಒಟ್ಟು ೫೭ ಗ್ರಾಮಗಳಿವೆ.[1] ಈ ತಾಲ್ಲೂಕಿನ ಮೇರೆಗಳಾಗಿ ಪೂರ್ವದಲ್ಲಿ ಶಿರಹಟ್ಟಿ, ಪಶ್ಚಿಮದಲ್ಲಿ ಹುಬ್ಬಳ್ಳಿ ಮತ್ತು ಕಲಘಟಗಿ, ಉತ್ತರದಲ್ಲಿ ಹುಬ್ಬಳ್ಳಿ ಮತ್ತು ನವಲಗುಂದ. ದಕ್ಷಿಣದಲ್ಲಿ ಶಿಗ್ಗಾಂವ ಮತ್ತು ಸವಣೂರು ತಾಲ್ಲೂಕುಗಳಿವೆ. ಈ ತಾಲ್ಲೂಕಿನ ಪ್ರಾಕೃತಿಕ ಲಕ್ಷಣಗಳು (ಫಲವತ್ತಾದ ಭೂಮಿ, ಹಳ್ಳಗಳು, ಕೆರೆಗಳು, ಬೆಟ್ಟ-ಗುಡ್ಡ, ಶಿಲೆಗಳು ಇತ್ಯಾದಿ) ಪ್ರಾಚೀನ ಮಾನವನನ್ನು ತನ್ನೆಡೆಗೆ ಆಕರ್ಷಿಸಿವೆ. ಇದನ್ನು ಈ ತಾಲ್ಲೂಕಿನ ಗುಡಗೇರಿಗ್ರಾಮದ ಪರಿಸರದಲ್ಲಿ ಬೆಳಕಿಗೆ ಬಂದಿರುವ ಇತಿಹಾಸ ಆರಂಭ ಕಾಲದ ಮಾನವನ ವಸತಿ ನೆಲೆಗಳು ದೃಢಪಡಿಸುತ್ತವೆ.[2] ಇದರಿಂದ ಈ ತಾಲ್ಲೂಕಿನಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಮಾನವನ ಚಟುವಟಿಕೆಗಳು ಜರುಗುತ್ತ ಬಂದಿರುವುದು ಸ್ಪಷ್ಟವಾಗುತ್ತದೆ. ಈ ತಾಲ್ಲೂಕಿನ ಪರಿಸರದಲ್ಲಿ ಆಳ್ವಿಕೆ ಕೈಗೊಂಡಿದ್ದ ಅರಸು, ಮಹಾಮಂಡಳೇಶ್ವರ, ಮಹಾಸಾಮಂತ, ಗಾವುಂಡ ಮೊದಲಾದ ಮನೆತನಗಳು ಜೈನ ಧರ್ಮದ ಜಿನಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಷ್ಠಾಪನೆ ಇತ್ಯಾದಿ ಸಾಂಸ್ಕೃತಿಕ ಚಟುವಟಿಕೆಗಳಿಗೆ ಉದಾರವಾಗಿ ಆಶ್ರಯ-ಪ್ರೋತ್ಸಾಹ ಕೊಡುವುದರೊಂದಿಗೆ ದಾನ-ದತ್ತಿಗಳನ್ನು ನೀಡಿರುವುದು ಸ್ಥಳೀಯ ಜೈನಾವಶೇಷಗಳಿಂದ ಮನದಟ್ಟಾಗುತ್ತದೆ. ಪ್ರಸ್ತುತ ಈ ತಾಲ್ಲೂಕಿನಲ್ಲಿರುವ ಜೈನ ಶಾಸನಗಳು, ಜಿನಾಲಯುಗಳು, ಶಿಲ್ಪಗಳು, ಸ್ಮಾರಕಗಲ್ಲುಗಳು ಮೊದಲಾದ ಅವಶೇಷಗಳ ಕುರಿತು ಚರ್ಚಿಸುವುದು ಈ ಸಂಲೇಖನದ ಉದ್ದೇಶವಾಗಿದೆ.

**ಕುಂದಗೋಳ ತಾಲ್ಲೂಕಿನ ಜೈನಾವಶೇಷಗಳು :** ಇತ್ತೀಚೆಗೆ ಈ ತಾಲ್ಲೂಕಿನ ಒಟ್ಟು ೫೬ ಗ್ರಾಮಗಳಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಂಡಿದ್ದ ಸಂದರ್ಭದಲ್ಲಿ ಕೇವಲ ೧೦ ಗ್ರಾಮಗಳಲ್ಲಿ ಜೈನಾವಶೇಷಗಳು ಕಂಡುಬಂದಿವೆ. ಅವುಗಳಲ್ಲಿ ಕುಂದಗೋಳ, ಗುಡಗೇರಿ, ಗುಡೇನಕಟ್ಟಿ, ಭೂಕೊಪ್ಪ, ಬೇಟದೂರ, ಯರಗುಪ್ಪಿ, ರಾಮನಕೊಪ್ಪ, ಸಂಶಿ, ಹರಲಾಪುರ ಗ್ರಾಮಗಳಲ್ಲಿ ಜೈನ ಧರ್ಮೀಯರ ವಾಸ್ತವ್ಯವಿದೆ. ಒಟ್ಟು ೨೪೫ ಕುಟುಂಬಗಳು ಮತ್ತು ೧,೮೨೦ ಶ್ರಾವಕ-ಶ್ರಾವಿಕೆಯರಿದ್ದಾರೆ.

**ಕಮಡೊಳ್ಳಿ :** ಈ ಗ್ರಾಮವು ಕುಂದಗೋಳದಿಂದ ದಕ್ಷಿಣಕ್ಕೆ ೮ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಶ್ರೀ ಪಿ.ಜಿ. ಕುರ್ತಕೋಟಿ ಅವರ ಹೊಲದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ಇದು ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಶಿರದ ಮೇಲೆ ಏಳು ಹೆಡೆಗಳ ಸರ್ಪವಿದೆ. ಈ ಗ್ರಾಮದಲ್ಲಿ ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದಲ್ಲಿ ಪಾರ್ಶ್ವನಾಥನ ಜಿನಾಲಯ ಅಸ್ತಿತ್ವದಲ್ಲಿತ್ತೆಂಬುದನ್ನು ಈ ಶಿಲ್ಪವು ದೃಢಪಡಿಸುತ್ತದೆ. ಆ ಜಿನಾಲಯವು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ. ಇತ್ತೀಚೆಗೆ ಈ ಗ್ರಾಮದಲ್ಲಿ ನಿಷಿಧಿಗಲ್ಲು ದೊರೆತಿದೆ. ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಈ ಶಿಲೆಯ ಮೇಲ್ಭಾಗದ ಶಿಲ್ಪಪಟ್ಟಿಕೆಯಲ್ಲಿ ಪರ್ಯಂಕಾಸನದಲ್ಲಿರುವ ಜಿನ, ಸಲ್ಲೇಖನ ವ್ರತವನ್ನು ಬೋಧಿಸುತ್ತಿರುವ ಮುನಿ, ವ್ರತವನ್ನು ಆಲಿಸುತ್ತಿರುವ ಮುನಿ/ಶ್ರಾವಕರ ಉಬ್ಬುಶಿಲ್ಪಗಳಿವೆ.

**ಕುಂದಗೋಳ :** ತಾಲ್ಲೂಕು ಕೇಂದ್ರವಾದ ಇದು ಧಾರವಾಡದಿಂದ ಆಗ್ನೇಯಕ್ಕೆ ೨೬ ಕಿ.ಮೀ. ಅಂತರದಲ್ಲಿದೆ. ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದ ಶಾಸನಗಳಲ್ಲಿ ಕುಂಧಾಗಲ್ಲ, ಕುಂದಗೋಳ್, ಕುಂದಗೋಳ ಎಂದು ಉಲ್ಲೇಖಿತವಾಗಿದೆ. ಇದು ರಾಮದತ್ತ ಅನಾದಿ ಅಗ್ರಹಾರವಾಗಿದ್ದು, ಇಲ್ಲಿ ಸಾವಿರ ಮಹಾಜನರು ನೆಲೆಸಿದ್ದರು. ಇದು ಬೆಳ್ವೊಲ-೩೦೦ ಆಡಳಿತ ವಿಭಾಗದಲ್ಲಿ ಅಂತರ್ಗತವಾಗಿತ್ತು.[3] ಸ್ಥಳೀಯ ಅಗಸರ ಓಣಿಯಲ್ಲಿ ೧೯೯೯ರಲ್ಲಿ ಅಗೆಯುತ್ತಿದ್ದ ಸಂದರ್ಭದಲ್ಲಿ ಪಾರ್ಶ್ವನಾಥ

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನವಲಗುಂದ - ೫೮೨ ೨೦೮.

ತೀರ್ಥಂಕರನ ಶಿಲ್ಪ ದೊರೆತಿದೆ. ಇದು ಈಗ ರೇಲ್ವೆ ನಿಲ್ದಾಣದ ಹತ್ತಿರ ರೈತ ಸಂಪರ್ಕ ಕೇಂದ್ರದ ಮುಂಭಾಗದಲ್ಲಿದೆ. ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದ ಈ ಶಿಲ್ಪವು ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿ ಪಾರ್ಶ್ವನಾಥನ ಶಿರದ ಮೇಲೆ ಏಳು ಹೆಡೆಗಳ ಸರ್ಪವಿದೆ. ಸರ್ಪದ ಮೇಲೆ ಕೊಡೆಯಿದೆ. ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ದ್ವಿಭಂಗಿಯಲ್ಲಿ ನಿಂತಿದ್ದಾರೆ. ಈ ನಗರದಲ್ಲಿ ಪಾರ್ಶ್ವನಾಥನ ಜಿನಾಲಯ ಅಸ್ತಿತ್ವದಲ್ಲಿತ್ತೆಂಬ ವಿಚಾರವನ್ನು ಈ ಶಿಲ್ಪವು ದೃಢಪಡಿಸುತ್ತದೆ. ಸ್ಥಳೀಯ ನ್ಯಾಯಾಲಯದ ಪರಿಸರದಲ್ಲಿ ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದ ವಾಸ್ತು ಅವಶೇಷಗಳು ಹರಡಿಕೊಂಡಿವೆ. ಅವು ಪ್ರಾಯಶಃ ಸಮಕಾಲೀನ ಪಾರ್ಶ್ವನಾಥನ ಜಿನಾಲಯಕ್ಕೆ ಸಂಬಂಧಿಸಿರುವ ಸಾಧ್ಯತೆಯಿದೆ.

**ಕುಯಿಬಾಳ** : ಈ ಗ್ರಾಮವು ಕುಂದಗೋಳದಿಂದ ಆಗ್ನೇಯಕ್ಕೆ ೮ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಜುಮ್ಮಾ ಮಸೀದೆಯ ಆವರಣದಲ್ಲಿರುವ ಕಲ್ಯಾಣದ ಚಾಳುಕ್ಯ ಮನೆತನದ ಇಮ್ಮಡಿ ಸೋಮೇಶ್ವರನ ಕ್ರಿ.ಶ. ೧೧೪೮ರ ಶಾಸನದಲ್ಲಿ ಗಾವುಂಡರು, ಹಿಟ್ಟುಕಾರರು, ಸೆಟ್ಟಿಗುತ್ತರು, ಅರುವತ್ತೊಕ್ಕಲರು, ಒಕ್ಕಲಿಗರು, ವಡ್ಡರಾವುಳದ ದಂಡನಾಯಕರು, ಹೆಗ್ಗಡೆ ಮಾದಿರಾಜ, ಆದಿತ್ಯನಾಯಕ, ಮಹಾಮಂಡಳೇಶ್ವರ ಜಯಕೇಶಿ, ಮಲ್ಲಿಸೆಟ್ಟಿ ಮೊದಲಾದವರು ಕುಂಯ್ಯಬಾಳದ ಬಸದಿಗೆ ದವಸ-ಧಾನ್ಯಗಳನ್ನು ಮತ್ತು ಹಣವನ್ನು ದಾನ ಮಾಡಿದ ವಿವರಗಳಿವೆ.[೪] ಇದರಿಂದ ಈ ಗ್ರಾಮದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ಜಿನಾಲಯ ಅಸ್ತಿತ್ವದಲ್ಲಿತ್ತೆಂಬ ವಿಚಾರ ಸ್ಪಷ್ಟವಾಗುತ್ತದೆ. ಆದರೆ ಅದು ಯಾವ ತೀರ್ಥಂಕರನ ಬಸದಿ ಎಂಬುದು ಸ್ಪಷ್ಟವಿಲ್ಲ. ಅದು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ.

**ಗುಡಗೇರಿ** : ಈ ಗ್ರಾಮವು ಕುಂದಗೋಳದಿಂದ ಈಶಾನ್ಯಕ್ಕೆ ೨೬ ಕಿ.ಮೀ. ಮತ್ತು ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರದಿಂದ ಪಶ್ಚಿಮಕ್ಕೆ ೧೨ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಮತ್ತು ಇತರೆಡೆಯ ಶಾಸನಗಳಲ್ಲಿ ಗುಡ್ಡಗೆರೆ, ಗುಡ್ಡತಟಾಕ ಎಂದು ಉಲ್ಲೇಖಿತವಾಗಿದೆ. ಇದು ಪುಲಿಗೆರೆ-೩೦೦ ಆಡಳಿತ ವಿಭಾಗದಲ್ಲಿ ಅಂತರ್ಗತವಾಗಿತ್ತು. ಶಿಗ್ಗಾಂವದ ಕ್ರಿ.ಶ. ೭೦೮ರ ತಾಮ್ರಪಟ ಶಾಸನದಲ್ಲಿ ಬಾದಾಮಿ ಚಲುಕ್ಯ ಮನೆತನದ ವಿಜಯಾದಿತ್ಯನು ತನ್ನ ಸಹೋದರಿ ಮತ್ತು ಅಲುಪ ಮನೆತನದ ಚಿತ್ರವಾಹನನ ಪಟ್ಟದರಸಿ ಕುಂಕುಮ ಮಹಾದೇವಿ ಪುಲಿಗೆರೆಯಲ್ಲಿ (ಲಕ್ಷ್ಮೇಶ್ವರ) ನಿರ್ಮಿಸಿದ್ದ ಆನೆಸೆಜ್ಜೆ ಬಸದಿಗೆ ಗುಡ್ಡಿಗೆರೆ ಗ್ರಾಮವನ್ನು ದಾನ ಮಾಡಿದ ವಿವರಗಳಿವೆ.[೫] ಇದರಿಂದ ಈ ಗ್ರಾಮದಲ್ಲಿ ಬಾದಾಮಿ ಚಲುಕ್ಯ ಮನೆತನದ ಕಾಲಾವಧಿಯಿಂದಲೇ ಜೈನ ಧಾರ್ಮಿಕ ಚಟುವಟಿಕೆಗಳು ಜರುಗುತ್ತ ಬಂದಿರುವುದು ಸ್ಪಷ್ಟವಾಗುತ್ತದೆ. ಸ್ಥಳೀಯ ಪರ್ವತ ದೇವಾಲಯದ ಆವರಣದಲ್ಲಿರುವ ಕ್ರಿ.ಶ. ಸುಮಾರು ೮ನೆಯ ಶತಮಾನದ ಗೋಸಾಸಗಲ್ಲು ಶಾಸನದಲ್ಲಿ ರಾಷ್ಟ್ರಕೂಟ ಮನೆತನದ ಅಮೋಘವರ್ಷ ನೃಪತುಂಗನ ಆಳ್ವಿಕೆಯ ಸಂದರ್ಭದಲ್ಲಿ ಜೈನಾಚಾರ್ಯ ಶುಭಚಂದ್ರ ಪಂಡಿತನ ಸನ್ನಿಧಿಯಲ್ಲಿ ಇಂದಮ್ಮನು ದಾನ ಮಾಡಿದ ಉಲ್ಲೇಖವಿದೆ.[೬] ಈ ದಾನವು ಯಾವ ಉದ್ದೇಶಕ್ಕೆ ಕೊಡಲ್ಪಟ್ಟಿತ್ತೆಂಬುದು ಸ್ಪಷ್ಟವಿಲ್ಲ.



ಸ್ಥಳೀಯ ಮಹಾವೀರನ ಜಿನಾಲಯವು ಕ್ರಿ.ಶ. ಸುಮಾರು ೧೧ನೆಯ ಶತಮಾನದಲ್ಲಿ ನಿರ್ಮಾಣವಾಗಿದೆ. ದಕ್ಷಿಣಾಭಿಮುಖವಾಗಿರುವ ಇದರ ತಲವಿನ್ಯಾಸವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪದಿಂದ ಕೂಡಿದೆ. ಗರ್ಭಗೃಹದ ನಾಲ್ಕೂ ಮೂಲೆಗಳಲ್ಲಿ ನಾಲ್ಕು ಭಿತ್ತಿಗಂಬಗಳಿವೆ. ವಿತಾನವು ಸಮತಲವಾಗಿದೆ. ದ್ವಾರಬಂಧವು ಸರಳವಾಗಿದೆ. ಅಂತರಾಳವು ಜೀರ್ಣೋದ್ಧಾರವಾಗಿದೆ. ನವರಂಗದ ಮಧ್ಯದಲ್ಲಿ ನಾಲ್ಕು ಸ್ವತಂತ್ರ (ಮುಕ್ಕಾಲು ಭಾಗ) ರುದ್ರಕಾಂತ ಶೈಲಿಯ ಸ್ತಂಭಗಳಿವೆ. ಇವು ಕ್ರಮವಾಗಿ ಪೀಠ, ಪಾದ, ದಂಡ, ಕಲಶ, ತಾಟಿಕಾ, ಘಟ, ಮಂಡಿ, ಫಲಕ, ಗ್ರೀವ, ವೀರಕಂಠ, ಬೋದಿಗೆಯಿಂದ ಕೂಡಿವೆ. ವಿತಾನದ ಮಧ್ಯದಲ್ಲಿ ಪದ್ಮಮಂಡಲದ ಅಲಂಕಾರವಿದೆ. ದ್ವಾರಬಂಧದಲ್ಲಿ ಬಳ್ಳಿ, ಸ್ತಂಭ, ರತ್ನ ಶಾಖಾಲಂಕೃತ ಪಟ್ಟಿಕೆಗಳಿವೆ. ಲಲಾಟ ಪಟ್ಟಿಯಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಪೇದ್ಯಾಪಿಂಡದಲ್ಲಿ ಜೈನ ದ್ವಾರಪಾಲಕರ (ಪ್ರತಿಹಾರರು) ಸ್ಥಾನಕ ಉಬ್ಬುಶಿಲ್ಪಗಳಿವೆ. ಜಿನಾಲಯದ ಹೊರಗಿನ ಭಾಗಗಳು ಜೀರ್ಣೋದ್ಧಾರವಾಗಿದ್ದು



ಹೀಗಾಗಿ ಇದರ ಊರ್ಧ್ವಮುಖ ವಾಸ್ತು ರಚನಾ ಕ್ರಮವು ಸ್ಪಷ್ಟವಾಗುವುದಿಲ್ಲ. ಈ ಜಿನಾಲಯವನ್ನು ಇತ್ತೀಚೆಗೆ ಸ್ಥಳೀಯ ಬಸ್ತಿ ಮನೆತನವರು ಸಂಪೂರ್ಣ ಜೀರ್ಣೋದ್ಧಾರ ಪಡಿಸಿದ್ದಾರೆ.

ಈ ಜಿನಾಲಯದ ಗರ್ಭಗೃಹದಲ್ಲಿ ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದ ತೀರ್ಥಂಕರನ ಶಿಲ್ಪವಿದೆ. ಸಿಂಹಪೀಠದ ಮೇಲೆ ಪರ್ಯಂಕಾಸನದಲ್ಲಿರುವ ತೀರ್ಥಂಕರನು ಧ್ಯಾನಮುದ್ರೆಯಲ್ಲಿದ್ದಾನೆ. ಅದೇ ಸ್ಥಳದಲ್ಲಿ ಸಮಕಾಲೀನ ಆದಿನಾಥ ತೀರ್ಥಂಕರನ ಶಿಲ್ಪವಿದೆ. ಪರ್ಯಂಕಾಸನದಲ್ಲಿರುವ ಆದಿನಾಥನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಇಕ್ಕೆಲಗಳಲಿ ಇಬ್ಬರು ದ್ವಿಭುಜ ಚಾಮರಧಾರರು ದ್ವಿಭಂಗಿಯಲ್ಲಿ ನಿಂತಿದ್ದಾರೆ. ಆದಿನಾಥನ ಕೇಶರಾಸಿ ಭುಜಗಳ ಪಾರ್ಶ್ವಗಳಲ್ಲಿ ಇಳಿಬಿದ್ದಿದೆ. ಶಿಲ್ಪದ ಮೇಲರ್ಧದ ಸುತ್ತಲೂ ಬಳ್ಳಿಯಿಂದ ರೂಪಿತವಾದ ಪ್ರಭಾವಳಿಯಿದೆ. ಅದೇ ಸ್ಥಳದಲ್ಲಿ ಸಮಕಾಲೀನ ಚೌವ್ವೀಸ (ಇಪ್ಪತ್ನಾಲ್ಕು) ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥನ ಶಿಲ್ಪವಿದೆ. ಕಾಯೋತ್ಸರ್ಗದಲ್ಲಿರುವ ಆದಿನಾಥನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಕಾಲುಗಳ ಇಕ್ಕೆಲಗಳಲ್ಲಿ ಗೋಮುಖ ಯಕ್ಷ ಮತ್ತು ಚಕ್ರೇಶ್ವರಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ವಸ್ತ್ರಾಭರಣಗಳನ್ನು ಧರಿಸಿ ಸುಖಾಸನದಲ್ಲಿ ಆಸೀನರಾಗಿದ್ದಾರೆ. ಶಿಲ್ಪದ ಸುತ್ತಲೂ ಪರ್ಯಂಕಾಸನದಲ್ಲಿರುವ ೨೩ ತೀರ್ಥಂಕರರ ಸಾಲು ಶಿಲ್ಪಕ್ಕೆ ಪ್ರಭಾವಳಿಯನ್ನು ರೂಪಿಸಿದಂತಿದೆ. ಅದೇ ಸ್ಥಳದಲ್ಲಿ ಸಮಕಾಲೀನ ಪದ್ಮಾವತಿಯ ಶಿಲ್ಪವಿದೆ. ತ್ರಿಭಂಗಿಯಲ್ಲಿ ನಿಂತಿರುವ ಪದ್ಮಾವತಿ ಚತುರ್ಭುಜೆಯಾಗಿದ್ದು, ಬಲಬದಿಯ ಕೆಳಗಿನ ಕೈ ಅಭಯಮುದ್ರೆಯಲ್ಲಿದೆ. ಉಳಿದ ಕೈಗಳಲ್ಲಿ ಕ್ರಮವಾಗಿ ಪದ್ಮ, ಪದ್ಮ ಮತ್ತು ಬೀಜಪೂರವನ್ನು



ಹಿಡಿದುಕೊಂಡಿದ್ದಾಳೆ. ಶಿರದ ಮೇಲ್ಭಾಗದಲ್ಲಿ ಒಂದು ಹೆಡೆಯ ಸರ್ಪವಿದೆ. ಕಿರೀಟಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕಟವಸ್ತ್ರ, ತೋಳಬಂದಿ, ಕೈಗಡಗ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾಳೆ.

ಗುಡಗೇರಿಯಿಂದ ಲಕ್ಷ್ಮೇಶ್ವರಕ್ಕೆ ಹೋಗುವ ದಾರಿಯಲ್ಲಿ ನಾಗರಾಳ ಹಳ್ಳದ ಹತ್ತಿರ ಶ್ರೀ ಬಸವನಗೌಡ ಹರವಿ ಅವರ ಹೊಲದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ಈ ಶಿಲ್ಪದ ಕೆಳ ಅರ್ಧಭಾಗವು ಭೂಮಿಯಲ್ಲಿ ಹೂಳಲ್ಪಟ್ಟಿದೆ. ಪಾರ್ಶ್ವನಾಥನ ಶಿರದ ಮೇಲೆ ಏಳು ಹೆಡೆಗಳ ಸರ್ಪವಿದೆ. ಸ್ಥಳೀಯ ರೈಲು ನಿಲ್ದಾಣದ ಹತ್ತಿರ ಶ್ರೀ ಧನಪಾಲಪ್ಪ ಜೈನ ಅವರು ೧೯೭೩ರಲ್ಲಿ ಪದ್ಮಾವತಿಯ ಜಿನಾಲಯವನ್ನು ನಿರ್ಮಿಸಿದ್ದಾರೆ. ಈ ಮೇಲಿನ ನಾಗರಾಳ ಹಳ್ಳದ ಹತ್ತಿರ ಇರುವ ಪಾರ್ಶ್ವನಾಥ ತೀರ್ಥಂಕರನ ಶಿಲ್ಪದ ಪರಿಸರದಲ್ಲಿ ೧೯೭೪ರಲ್ಲಿ ಜ್ವಾಲಾಮಾಲಿನಿ ಶಿಲ್ಪ ದೊರೆತಿದೆ. ಅದು ಈಗ ಪದ್ಮಾವತಿಯ ಜಿನಾಲಯದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದೆ. ಈ ಮೇಲಿನ ಪ್ರಾಚೀನ ಶಿಲ್ಪಗಳೆಲ್ಲವೂ ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ.

ಸ್ಥಳೀಯ ಮಹಾವೀರ ಜಿನಾಲಯದ ಮುಂಭಾಗದಲ್ಲಿ ಕಲ್ಯಾಣದ ಚಾಳುಕ್ಯ ಮನೆತನದ ಇಮ್ಮಡಿ ಸೋಮೇಶ್ವರನ ಕ್ರಿ.ಶ. ೧೦೭೨ರ ಶಾಸನವಿದೆ. ಇರಲ್ಲಿ ಇಮ್ಮಡಿ ಸೋಮೇಶ್ವರ ಪಟ್ಟದರಸಿ ಕಂಚಲ ಮಹಾದೇವಿಯ ಮುಳಗುಂದ ನೆಲೆವೀಡಿನಲ್ಲಿ ಅರಸುಗೈಯುತ್ತಿದ್ದ ಸಂದರ್ಭದಲ್ಲಿ ಮಹಾಪ್ರಧಾನ ದಂಡನಾಯಕ ರುದ್ರಭಟ್ಟೋಪಾಧ್ಯಾಯರು ದೇವಭೋಗದಿಂದ ಗುಡಿಗೇರಿಯಲ್ಲಿ ಆಳುತ್ತಿದ್ದನು. ದಂಡನಾಯಕ ಈಶ್ವರಭಟ್ಟನು ವಿಷಯಾಧಿಕಾರಿಗೈಯುತ್ತಿದ್ದನು. ಇವರು ಮತ್ತು ಸಮಸ್ತ ಪ್ರಧಾನರು, ಕಂಚಲ ಮಹಾದೇವಿ ಹಾಗೂ ಇಮ್ಮಡಿ ಸೋಮೇಶ್ವರನ ಮನೆವೆರ್ಗ್ಗಡೆ ದಂಡನಾಯಕ ಭಾಸ್ಕರಭಟ್ಟೋಪಾಧ್ಯಾಯ ಜೊತೆಗೂಡಿ ಪುಲಿಗೆರೆಯಲ್ಲಿ ಬಾದಾಮಿ ಚಲುಕ್ಯ ಮನೆತನದ ವಿಜಯಾದಿತ್ಯನ ಸಹೋದರಿ ಕುಂಕುಮ ಮಹಾದೇವಿ ನಿರ್ಮಿಸಿದ್ದ ಆನೆಸೆಜ್ಜೆ ಬಸದಿಗೆ ಗುಡಿಗೆರೆಯನ್ನು ಪುನರ್ದತ್ತಿಯಾಗಿ ನಂದಿಪಂಡಿತದೇವ ಮುನಿಯ ಸನ್ನಿಧಿಯಲ್ಲಿ ದಾನ ಮಾಡಿದ ವಿವರಗಳಿವೆ.[೭] ಅದೇ ಸ್ಥಳದಲ್ಲಿ ಕ್ರಿ.ಶ. ೧೦೭೮ರ ಶಾಸನವಿದೆ. ಇದರಲ್ಲಿ ಪೆರ್ಗ್ಗಡೆ ಪ್ರಭಾಕರಯ್ಯ, ಆತನ ಪುತ್ರ ರುದ್ರಯ್ಯ, ೧೨ ಜನ ಗಾವುಂಡರು, ಸೇನಬೋವ ಸಿಂಗಣ್ಣ, ಸೇನಬೋವ ಹಬ್ಬಣ್ಣ, ಮೂಕಿಯರ ಕಾವಣ್ಣ, ಕಂತಿಯರ ನಾಕಯ್ಯ ಮೊದಲಾದವರು ನಂದಿಪಂಡಿತದೇವ ಮುನಿಯ ಸನ್ನಿಧಿಯಲ್ಲಿ ಪಾರ್ಶ್ವನಾಥ ತೀರ್ಥಂಕರನ ಪೂಜೆಗೆ, ಶಾಂತಿನಾಥ ಜಿನಾಲಯಕ್ಕೆ ಮತ್ತು ಬಾದಾಮಿ ಚಲುಕ್ಯ ಮನೆತನದ ವಿಜಯಾದಿತ್ಯನ ಸಹೋದರಿ ಕುಂಕುಮ ಮಹಾದೇವಿ ಪುಲಿಗೆರೆಯಲ್ಲಿ ನಿರ್ಮಿಸಿದ್ದ ಆನೆಸೆಜ್ಜೆ ಬಸದಿಗೆ ಗುಡಿಗೆರೆಯಲ್ಲಿ ಭೂಮಿ, ಹಣ ಮೊದಲಾದವುಗಳನ್ನು ದಾನ ಮಾಡಿದ ವಿವರಗಳಿವೆ.[೮] ಅದೇ ಜಿನಾಲಯದ ನವರಂಗದ ಸ್ತಂಭದ ಮೇಲಿರುವ ಕ್ರಿ.ಶ. ಸುಮಾರು ೧೨-೧೩ನೆಯ ಶತಮಾನದ ಶಾಸನದಲ್ಲಿ ಗುಡಿಗೆರೆಯ ಮುರೆಯ ಬಸದಿಗೆ ಜವನಿಸೆಟ್ಟಿಯ ಪುತ್ರ ಕೇತಯಣ್ಣನು ಸ್ಥಳೀಯ ಗಾಣದಿಂದ ಎಣ್ಣೆಯನ್ನು ದಾನ ಮಾಡಿದ ವಿವರಗಳಿವೆ.[೯]

**ಬಾಗವಾಡ** : ಈ ಗ್ರಾಮವು ಕುಂದಗೋಳದಿಂದ ಪೂರ್ವಕ್ಕೆ ೬ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಬಸವಣ್ಣ ದೇವಾಲಯದ ಮುಂಭಾಗದಲ್ಲಿ ತೀರ್ಥಂಕರನ ಶಿಲ್ಪವಿದೆ. ಕ್ರಿ.ಶ. ಸುಮಾರು ೧೧ನೆಯ ಶತಮಾನದ ಈ ಶಿಲ್ಪವು ಕಪ್ಪು



ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಿಂಹಪೀಠದ ಮೇಲೆ ಪರ್ಯಂಕಾಸನ ದಲ್ಲಿರುವ ತೀರ್ಥಂಕರನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಇಕ್ಕೆಲಗಳಲ್ಲಿ ಇಬ್ಬರು ದ್ವಿಭುಜ ಚಾಮರಧಾರರ ಸ್ಥಾನಕ ಶಿಲ್ಪಗಳಿವೆ. ಪ್ರಸ್ತುತ ಬಸವಣ್ಣ ದೇವಾಲಯದ ಸ್ಥಳದಲ್ಲಿಯೇ ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದಲ್ಲಿ ಜಿನಾಲಯವಿತ್ತು. ಅದು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ. ಈ ತೀರ್ಥಂಕರನ ಶಿಲ್ಪ ಆ ಜಿನಾಲಯದ ಮೂಲ ನಾಯಕ ಶಿಲ್ಪವಾಗಿದೆ.



**ಭೂಕೊಪ್ಪ** : ಈ ಗ್ರಾಮವು ಕುಂದಗೋಳದಿಂದ ದಕ್ಷಿಣಕ್ಕೆ ೧೨ ಕಿ.ಮೀ. ಅಂತರದಲ್ಲಿದೆ. ೨೦೦೩ರಲ್ಲಿ ನಿರ್ಮಾಣವಾದ ಸ್ಥಳೀಯ ಪಾರ್ಶ್ವನಾಥ ಜಿನಾಲಯದ ಮುಂಭಾಗದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ಇದು ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಏಳು ಹೆಡೆಗಳ ಸರ್ಪವಿದೆ. ಸರ್ಪದ ಮೇಲೆ ಕೊಡೆಯಿದೆ. ಕಾಲುಗಳ ಇಕ್ಕೆಲಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ಸುಖಾಸನದಲ್ಲಿ ಆಸೀನರಾಗಿದ್ದಾರೆ. ಶಿಲ್ಪದ ಮೇಲರ್ಧದ ಸುತ್ತಲೂ ಬಳ್ಳಿಯಿಂದ ರೂಪಿತವಾದ ಪ್ರಭಾವಳಿಯಿದೆ. ಪ್ರಸ್ತುತ ಜಿನಾಲಯದ ಸ್ಥಳದಲ್ಲಿಯೇ ಪ್ರಾಚೀನ ಜಿನಾಲಯವಿತ್ತು. ಅದು ಭಗ್ನವಾದ ತರುವಾಯ ನೂತನ ಜಿನಾಲಯವನ್ನು ನಿರ್ಮಿಸಲಾಗಿದೆ.

**ಮಳಲಿ** : ಈ ಗ್ರಾಮವು ಕುಂದಗೋಳದಿಂದ ಆಗ್ನೇಯಕ್ಕೆ ೧೪ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಕೆರೆಯ ಏರಿಯ ಮೇಲಿರುವ ಹನುಮಂತನ ದೇವಾಲಯದ ಮುಂಭಾಗದಲ್ಲಿ ತೀರ್ಥಂಕರನ ಶಿಲ್ಪವಿದೆ. ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದ ಈ ಶಿಲ್ಪವು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪರ್ಯಂಕಾಸನ ದಲ್ಲಿರುವ ತೀರ್ಥಂಕರನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದೆ. ಪಾರ್ಶ್ವಗಳಲ್ಲಿ ಇಬ್ಬರು ದ್ವಿಭುಜ ಚಾಮರಧಾರಿಣಿಯರಿದ್ದಾರೆ. ಶಿಲ್ಪದ ಮೇಲರ್ಧವು ಒಡೆದಿದೆ. ಪ್ರಾಯಶಃ ಪ್ರಸ್ತುತ ಹನುಮಂತನ ದೇವಾಲಯದ ಸ್ಥಳದಲ್ಲಿ ಜಿನಾಲಯವಿದ್ದು, ಕಾಲಾಂತರದಲ್ಲಿ ಸಮೂಲನಾಶವಾದಂತೆ ತೋರುತ್ತದೆ.

**ಯರಗುಪ್ಪಿ** : ಈ ಗ್ರಾಮವು ಕುಂದಗೋಳದಿಂದ ಈಶಾನ್ಯಕ್ಕೆ ೮ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಲ್ಲಿ ೧೯೭೫ರಲ್ಲಿ ಅಗೆಯುತ್ತಿದ್ದ ಸಂದರ್ಭದಲ್ಲಿ ಕ್ರಿ.ಶ. ಸುಮಾರು ೧೨-೧೩ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪ ದೊರೆತಿದೆ. ಇದನ್ನು ಸಮೀಪದ ಹುಬ್ಬಳ್ಳಿ ತಾಲ್ಲೂಕಿನ ಶಿರುಗುಪ್ಪಿ ಗ್ರಾಮದಲ್ಲಿ ಜಿನಾಲಯವನ್ನು ನಿರ್ಮಿಸಿ ಅದರ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಲಾಗಿದೆ. ಇದರಿಂದ ಯರಗುಪ್ಪಿ ಗ್ರಾಮದಲ್ಲಿ ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದಲ್ಲಿ ಪಾರ್ಶ್ವನಾಥನ ಜಿನಾಲಯ ಅಸ್ತಿತ್ವದಲ್ಲಿತ್ತೆಂಬ ವಿಚಾರ ಸ್ಪಷ್ಟವಾಗುತ್ತದೆ.

**ಶಿರೂರ** : ಈ ಗ್ರಾಮವು ಕುಂದಗೋಳದಿಂದ ಈಶಾನ್ಯಕ್ಕೆ ೪ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಅಂಗನವಾಡಿ ಕೇಂದ್ರದಲ್ಲಿ ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥನ ಶಿಲ್ಪವಿದೆ. ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದ ಈ ಶಿಲ್ಪವು ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಆದಿನಾಥನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಪಾರ್ಶ್ವಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಕಾಲುಗಳ ಇಕ್ಕೆಲಗಳಲ್ಲಿ ಗೋಮುಖ ಯಕ್ಷ ಮತ್ತು ಚಕ್ರೇಶ್ವರಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ವಸ್ತ್ರಾಭರಣಗಳನ್ನು ಧರಿಸಿ ಸುಖಾಸನದಲ್ಲಿ ಆಸೀನರಾಗಿದ್ದಾರೆ. ಶಿಲ್ಪದ ಸುತ್ತಲೂ ಪರ್ಯಂಕಾಸನದಲ್ಲಿರುವ ೨೪ ತೀರ್ಥಂಕರರ ಸಾಲು ಶಿಲ್ಪಕ್ಕೆ ಪ್ರಭಾವಳಿಯನ್ನು ರೂಪಿಸಿದಂತಿದೆ.

ಅದೇ ಸ್ಥಳದಲ್ಲಿ ಸಮಕಾಲೀನ ಪಾರ್ಶ್ವನಾಥನ ತೀರ್ಥಂಕರನ ಶಿಲ್ಪವಿದೆ. ಇದು ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಶಿರದ ಮೇಲೆ ಏಳು ಹೆಡೆಗಳ ಸರ್ಪವಿದೆ.



ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ಸರ್ವಾಲಂಕೃತರಾಗಿ ಸುಖಾಸನದಲ್ಲಿ ಆಸೀನರಾಗಿದ್ದಾರೆ. ಶಿಲ್ಪದ ಸುತ್ತಲೂ ಬಳ್ಳಿಯಿಂದ ರೂಪಿತವಾದ ಪ್ರಭಾವಳಿಯಿದೆ. ಈ ಶಿಲ್ಪದ ಪಾದಪೀಠದ ಮೇಲಿರುವ ಶಾಸನದಲ್ಲಿ ಯಾಪನೀಯ ಸಂಘದ ವೃಕ್ಷಮೂಲಗಣದ ಸಿರಿಯೂರದ (ಶಿರೂರ) ಕುಸುಮ ಜಿನಾಲಯಕ್ಕೆ ಒರೆಯೂರದ ಕಾಳಿಸೆಟ್ಟಿ ಪಾರ್ಶ್ವನಾಥ ತೀರ್ಥಂಕರನ ಪ್ರತಿಮೆಯನ್ನು ಮಾಡಿಸಿಕೊಟ್ಟ ವಿವರಗಳಿವೆ. ಇದರಿಂದ ಈ ಗ್ರಾಮಗಳಲ್ಲಿ ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದಲ್ಲಿ ಕುಸುಮ ಎಂಬ ಹೆಸರಿನ ಜಿನಾಲಯ ಇತ್ತೆಂಬುದು ಸ್ಪಷ್ಟವಾಗುತ್ತದೆ. ಅದು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ. ಈ ಮೇಲಿನ ಎರಡೂ ಶಿಲ್ಪಗಳು ಮೂಲತಃ ಕುಸುಮ ಜಿನಾಲಯದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದವು. ಆ ಜಿನಾಲಯವು ಪ್ರಾಯಶಃ ಪಾರ್ಶ್ವನಾಥನ ಜಿನಾಲಯವಾಗಿತ್ತು.

**ಹರಲಾಪುರ :** ಈ ಗ್ರಾಮವು ಕುಂದಗೋಳದಿಂದ ಈಶಾನ್ಯಕ್ಕೆ ೨೩ ಕಿ.ಮೀ. ಅಂತರದಲ್ಲಿದೆ. ೧೯೪೦ರಲ್ಲಿ ನಿರ್ಮಾಣವಾಗಿರುವ ಸ್ಥಳೀಯ ಪಾರ್ಶ್ವನಾಥ ಜಿನಾಲಯದಲ್ಲಿ ಸಮಕಾಲೀನ ಪಾರ್ಶ್ವನಾಥ, ಆದಿನಾಥ, ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥ, ಪದ್ಮಾವತಿಯ ಶಿಲ್ಪಗಳಿವೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಶಿರದ ಮೇಲೆ ಏಳು ಹೆಡೆಗಳ ಸರ್ಪವಿದೆ. ಸರ್ಪದ ಮೇಲೆ ಕೊಡೆಯಿದೆ. ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ಸುಖಾಸನದಲ್ಲಿ ಆಸೀನರಾಗಿದ್ದಾರೆ. ಶಿಲ್ಪದ ಮೇಲರ್ಧದ ಸುತ್ತಲೂ ಬಳ್ಳಿಯಿಂದ ರೂಪಿತವಾದ ಪ್ರಭಾವಳಿಯಿದ್ದು, ಮೇಲ್ಭಾಗದಲ್ಲಿ ಕೀರ್ತಿಮುಖದ ಅಲಂಕಾರವಿದೆ. ಪರ್ಯಂಕಾಸನದಲ್ಲಿರುವ ಆದಿನಾಥನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದೆ. ಆತನ ಕೇಶರಾಶಿ ಭುಜಗಳ ಇಕ್ಕೆಲಗಳಲ್ಲಿ ಹರಡಿಕೊಂಡಿದೆ. ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥನ ಶಿಲ್ಪದಲ್ಲಿ ಆದಿನಾಥನು ಕಾಯೋತ್ಸರ್ಗದಲ್ಲಿದ್ದಾನೆ. ಶಿಲ್ಪದ ಸುತ್ತಲೂ ಪರ್ಯಂಕಾಸನ ದಲ್ಲಿರುವ ೨೩ ತೀರ್ಥಂಕರರ ಸಾಲು ಶಿಲ್ಪಕ್ಕೆ ಪ್ರಭಾವಳಿಯನ್ನು ರೂಪಿಸಿದಂತಿದೆ. ಸವ್ಯಲಲಿತಾಸನ ದಲ್ಲಿರುವ ಪದ್ಮಾವತಿ ಚತುರ್ಭುಜೆಯಾಗಿದ್ದು, ಬಲಬದಿಯ ಕೆಳಗಿನ ಕೈ ಅಭಯಮುದ್ರೆಯಲ್ಲಿದೆ. ಉಳಿದ ಕೈಗಳಲ್ಲಿ ಕ್ರಮವಾಗಿ ತ್ರಿಶೂಲ, ಸರ್ಪ, ಬೀಜಪೂರವನ್ನು ಹಿಡಿದುಕೊಂಡಿದ್ದಾಳೆ. ಶಿರದ ಮೇಲೆ ಏಳು ಹೆಡೆಗಳ ಸರ್ಪವಿದೆ. ಶಿಲ್ಪದ ಸುತ್ತಲೂ ಬಳ್ಳಿಯಿಂದ ರೂಪಿತವಾದ ಪ್ರಭಾವಳಿಯಿದೆ. ಈ ಜಿನಾಲಯದ ಮುಂಭಾಗದಲ್ಲಿ ೧೯೮೬ರಲ್ಲಿ ಮಾನಸ್ತಂಭವನ್ನು ನಿರ್ಮಿಸಲಾಗಿದೆ. ಇದನ್ನು ಪರಮಪೂಜ್ಯ ೧೦೮ ಶ್ರೀ ಸುಧರ್ಮಸಾಗರಮುನಿ ಮಹಾರಾಜರ ಪ್ರೇರಣೆಯಿಂದ ದಿವಂಗತ ಪಾಯನಗೌಡ ನಾಗನಗೌಡ ಪಾಟೀಲ ಅವರ ಪರೋಕ್ಷ ವಿನಯಾರ್ಥವಾಗಿ ಅವರ ಧರ್ಮಪತ್ನಿ ಶ್ರೀಮತಿ ಸರಸ್ವತಿಬಾಯಿ ಮತ್ತು ಅವರ ಪುತ್ರ ಶ್ರೀ ವಿದ್ಯಾಧರ ಅವರು ಕಟ್ಟಿಸಿದ್ದಾರೆ. ಈ ಸ್ತಂಭದ ಮೇಲ್ಭಾಗದ ಮಂಟಪದಲ್ಲಿ ಪ್ರತಿಷ್ಠಾಪಿತವಾಗಿರುವ ಚತುರ್ಮುಖ ತೀರ್ಥಂಕರರ ಶಿಲ್ಪವನ್ನು ದಿವಂಗತ ಶ್ರೀಮತಿ ಇಂದುಮತಿ ಪಾಟೀಲ ಅವರ ಪರೋಕ್ಷ ವಿನಯಾರ್ಥವಾಗಿ ಅವರ ಪತಿ ಶ್ರೀ ರಾಮನಗೌಡ ಅನಂತಗೌಡ ಪಾಟೀಲ ಅವರು ದಾನ ಮಾಡಿದ್ದಾರೆ. ಸ್ಥಳೀಯ ಶ್ರಾವಕರು ೧೯೨ರಲ್ಲಿ ಪರಮಪೂಜ್ಯ ೧೦೮ ಶ್ರೀ ಸುಧರ್ಮಸಾಗರಮುನಿ ಮಹಾರಾಜರ ಹೆಸರಿನಲ್ಲಿ ಗುರುಕುಲವನ್ನು ಪ್ರಾರಂಭಿಸಿದ್ದಾರೆ. ಈ ಗುರುಕುಲದ ಆವರಣದಲ್ಲಿ ಆದಿನಾಥ ಜಿನಾಲಯ,

ಸುಧರ್ಮಸಾಗರ ಮುನಿಗಳ ಪಾದುಕೆಗಳು ಮತ್ತು ಬಡ ವಿದ್ಯಾರ್ಥಿಗಳಿಗಾಗಿ ನಿರ್ಮಿಸಿರುವ ವಸತಿ ನಿಲಯಗಳಿವೆ.

ಇದುವರೆಗಿನ ಸಮೀಕ್ಷೆಯಿಂದ ಕುಂದಗೋಳ ತಾಲ್ಲೂಕಿನಲ್ಲಿ ಕ್ರಿ.ಶ. ಸುಮಾರು ೮ನೆಯ ಶತಮಾನದಿಂದಲೂ ಜೈನ ಧರ್ಮದ ಸಾಂಸ್ಕೃತಿಕ ಚಟುವಟಿಕೆಗಳು ಜರಗುತ್ತ ಬಂದಿರುವುದು ಸ್ಪಷ್ಟವಾಗುತ್ತದೆ. ಈ ತಾಲ್ಲೂಕಿನಲ್ಲಿ ಬಹು ಅಪರೂಪದ ಜೈನಾವಶೇಷಗಳಿವೆ. ಇವು ಈ ತಾಲ್ಲೂಕಿನ ಸಮಕಾಲೀನ ಸಾಂಸ್ಕೃತಿಕ ಇತಿಹಾಸದ ವಿವಿಧ ಮುಖಗಳ ಅಧ್ಯಯನಕ್ಕೆ ತುಂಬಾ ಉಪಯುಕ್ತವಾಗಿವೆ. ಮಳಲಿಯ ತೀರ್ಥಂಕರ, ಬಾಗವಾಡದ ತೀರ್ಥಂಕರ, ಗುಡಗೇರಿಯ ಆದಿನಾಥ ತೀರ್ಥಂಕರ ಶಿಲ್ಪಗಳು ಅಷ್ಟವಿಧ ಮಹಾಪ್ರಾತಿಹಾರ್ಯಗಳಿಂದ (ಚೈತ್ಯವೃಕ್ಷ, ಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಸಿಂಹಾಸನ, ಪ್ರಭಾಮಂಡಲ,ದುಂದುಭಿ, ಮುಕ್ಕೊಡೆ) ಶೋಭಿತವಾಗಿವೆ. ಇವು ಆಯಾ ತೀರ್ಥಂಕರರು ಕೇವಲಜ್ಞಾನದ ತರುವಾಯ ಸಮವಸರಣ ಮಂಟಪದಲ್ಲಿ ಸಕಲ ಜೀವಿಗಳನ್ನುದ್ದೇಶಿಸಿ ಧರ್ಮೋಪದೇಶದಲ್ಲಿ ತೊಡಗಿರುವ ಪರಿಕಲ್ಪನೆಯಲ್ಲಿ ಮೂಡಿಬಂದಿದೆ. ಕಮಡೊಳ್ಳಿಯ ಪಾರ್ಶ್ವನಾಥ, ಕುಂದಗೋಳದ ಪಾರ್ಶ್ವನಾಥ, ಭೂಕೊಪ್ಪದ ಪಾರ್ಶ್ವನಾಥ, ಶಿರೂರದ ಪಾರ್ಶ್ವನಾಥ ತೀರ್ಥಂಕರರ ಶಿಲ್ಪಗಳು ಪಾರ್ಶ್ವನಾಥನ ಕೇವಲಜ್ಞಾನ ಕಲ್ಯಾಣದ ಪರಿಕಲ್ಪನೆಯಲ್ಲಿವೆ. ಈ ತಾಲ್ಲೂಕಿನಲ್ಲಿ ಪಾರ್ಶ್ವನಾಥ ತೀರ್ಥಂಕರನ ಜಿನಾಲಯಗಳು ಮತ್ತು ಶಿಲ್ಪಗಳು ಅಧಿಕವಾಗಿ ಗೋಚರಿಸುತ್ತವೆ. ಇದರಿಂದ ಈ ಪರಿಸರದಲ್ಲಿ ಯಾಪನೀಯ ಸಂಘದ ಮುನಿಗಳ ಪ್ರಭಾವ ದಟ್ಟವಾಗಿತ್ತೆಂಬ ವಿಚಾರ ಮನದಟ್ಟಾಗುತ್ತದೆ. ಗುಡಗೇರಿಯ ಶಾಸನಗಳೋಕ್ತ ಪಾರ್ಶ್ವನಾಥ, ಶಾಂತಿನಾಥ ಮತ್ತು ಮುರೆಯ ಜಿನಾಲಯಗಳಲ್ಲಿ ಇಂದು ಮುರೆಯ ಪರಂಪರೆಯ ಜಿನಾಲಯ ಮಾತ್ರ ಉಳಿದಿದೆ. ಉಳಿದವುಗಳು ಕ್ರಿ.ಸ. ಸುಮಾರು ೧೧ನೆಯ ಶತಮಾನದಿಂದೀಚೆಗೆ ಜರುಗಿದ ಮತೀಯ ಘರ್ಷಣೆಗಳಲ್ಲಿ ಮತ್ತು ರಾಜಕೀಯ ದಾಳಿಗಳಲ್ಲಿ ಸಮೂಲನಾಶವಾಗಿವೆ. ಮಹಾವೀರ ಜಿನಾಲಯವು ಮೂಲತಃ ಆದಿನಾಥನ ಜಿನಾಲಯವಾಗಿದೆ. ಶಾಸನೋಕ್ತ ಪಾರ್ಶ್ವನಾಥ ಜಿನಾಲಯವು ಪ್ರಾಯಶಃ ಸ್ಥಳೀಯ ನಾಗರಾಳ ಹಳ್ಳದ ಪರಿಸರದಲ್ಲಿದ್ದಂತೆ ತೋರುತ್ತದೆ. ಪ್ರಸ್ತುತ ಜಿನಾಲಯದಲ್ಲಿರುವ ಪದ್ಮಾವತಿ ಶಿಲ್ಪವು ಪ್ರತಿಮಾ ಲಕ್ಷಣಗಳ ಅಧ್ಯಯನದ ದೃಷ್ಟಿಯಿಂದ ಬಹು ಅಪರೂಪದ್ದಾಗಿದೆ. ಒಟ್ಟಾರೆ ಕುಂದಗೋಳ ತಾಲ್ಲೂಕಿನ ಜೈನಾವಶೇಷಗಳು ಕನ್ನಡ ನಾಡಿನಲ್ಲಿ ಜೈನ ಧರ್ಮದ ಪ್ರಾದೇಶಿಕ ಅಧ್ಯಯನಕ್ಕೆ ಬಹು ಅಪರೂಪದ ಆಕರಗಳಾಗಿವೆ.

## ಆಧಾರಸೂಚಿ


೧. **ಧಾರವಾಡ ಜಿಲ್ಲಾ ಗೆಜೆಟಿಯರ್**, (೧೯೯೫), ಸೂರ್ಯನಾಥ ಕಾಮತ್, (ಸಂ.), ಪು. ೩.

೨. ಶಿವತಾರಕ್ ಕೆ.ಬಿ., (೨೦೦೧), **ಕರ್ನಾಟಕದ ಪುರಾತತ್ವ ನೆಲೆಗಳು**, ಪು. ೩೪೮.

೩. ಎಸ್.ಐ.ಐ. ಸ. XX, ಶಾ.ಸಂ. ೨೯, ೭೦, ೯೬,೧೬೩, ೧೯೯, ೨೧೩, ೨೩೪, ೩೨೮, ೪೦೫.

೪. ಅದೇ, ಶಾ. ಸಂ. ೧೧೮, ಪು. ೫೫-೧೫೬.

೫. ಎ.ಐ. ಸಂ. XXXII, ಶಾ. ಸಂ. ೩೮, ಪು. ೩೧೭-೩೨೪.

೬ ಇ.ಐ. ಸಂ. VI, ಶಾ. ಸಂ. ೨೪/ಬಿ, ಪು. ೨೫೩-೨೫೭.

೭. ಎಸ್.ಐ.ಐ. ಸಂ. XX, ಶಾ. ಸಂ. ೪೬, ಪು. ೫೧-೫೩.

೮. ಐ.ಎ. ಸಂ. XVIII, ಶಾ. ಸಂ. ೧೭೩, ಪು. ೩೫-೪೦.

೯. ಎಸ್.ಐ.ಐ. ಸಂ. ಶಾ. ಸಂ. XX, ೩೨೬, ಪು. ೩೪೯.

೧೦. ಅದೇ, ಶಾ. ಸಂ. ೩೨೫, ಪು. ೩೪೯.

ಪ್ರೊ. ಕೆ.ಸಿ. ಮಲ್ಲಿಗವಾಡ*

# ಶ್ರೀ ಕಾಳಿಕಾದೇವಿಯ ತೇರು : ಕಂಚಿನ ದಾನ ಪತ್ರ

ಧಾರವಾಡ ಜಿಲ್ಲೆ ಕುಂದಗೋಳ ತಾಲುಕಿನ ರೊಟ್ಟಿಗವಾಡ ಗ್ರಾಮದಲ್ಲಿ ಮನೆಯಿಂದ ಮನೆಗೆ ತಿರುಗುತ್ತಿದ್ದ ಮಲ್ಲಯ್ಯ ಎಂಬ ವ್ಯಕ್ತಿ ಪ್ರತಿದಿನ ನವಲಗುಂದ ತಾಲೂಕಿನ ನಲವತಿ ಗ್ರಾಮದಿಂದ ನನ್ನಲ್ಲಿಗೆ ಬಂದು ಪತ್ರ ತೋರಿಸಿ ಈ ಪತ್ರದಲ್ಲಿ ನಮ್ಮ ಮನೆ ಇತಿಹಾಸ ಇದೆ. ನಿಮ್ಮ ವಂಶವು ಹಾಗೂ ಜಾತಿಯ ಬಗ್ಗೆ ಮಾಹಿತಿ ಇದೆ. ಕಾರಣ ನಿಮಗೆ ಇದರಿಂದ ಕಲ್ಯಾಣವಾಗುವುದು ಅದಕ್ಕೆ ಹಣ ಕೊಡಿರಿ ಎಂದು ಹೇಳುತ್ತಾ ಹಣ ವಸೂಲಿ ಮಾಡುತ್ತಿದ್ದ. ಆಗ ನಾನು ಅದನ್ನು ಅವನಿಂದ ಪಡೆದು ಮಾಹಿತಿ ಸಂಗ್ರಹಿಸಿದ್ದೇನೆ ಅದರ ವಿವರ ಈ ಕೆಳಗಿನಂತಿದೆ.

ಇದೊಂದು ಬ್ರಹ್ಮಕಲ್ಪದ ಶಾಸನಪತ್ರ, ಕಂಚಿನ ಪತ್ರವು ಪಂಚಗೊಲ್ಲರ ಪಂಚಳದವರ ಮಕ್ಕಳ ಬಗ್ಗೆ ವಿವರ ನೀಡುತ್ತಾ ಸಾಗಿದೆ. ಇದನ್ನು ಯಾದವ ಕಾಲದ ಮಾಳ್ವದಲ್ಲಿದ್ದ ಪ್ರಮುಖ ವನ್ನಿರಾಯ ಹೊರಡಿಸಿದ್ದಾನೆ. ಕಂಚಿ ಗ್ರಾಮದಲ್ಲಿ ಶ್ರೀ ಕಾಳಿಕಾದೇವಿ ಜಾತ್ರೆಯ ತೇರು ಸಾಗದೇ ಹಾಗೇ ನಿಂತಿತ್ತು. ಆ ತೆಲಗು ಗೊಲ್ಲರು ಆಗ ಮೂರು ಜನ ಗರ್ಭಿಣಿ ಸ್ತ್ರೀಯರನ್ನು ಪೂಜ್ಯ ಕಂಚಿ ಕಾಳೇಶ್ವರಿಗೆ ಆಹುತಿ ಕೊಟ್ಟರು. ಆನಂತರ ಅಲ್ಲಿನ ವಕ್ಷನಿ ಜಾತ್ರೆ ಸರಿಯಾಗಿ ನಡೆಯಿತು. ಮುಂದೆ ಕಾಳಮ್ಮನೆಂಬ ಸ್ತ್ರೀಗೆ ಹಸಿರು ಕುಪ್ಪಸ ತೊಡಿಸಿ, ಹಸಿರು ಸೀರೆ ಉಡಿಸಿ ದೇವರಲ್ಲಿ ಹರಕೆ ಹೊತ್ತರು. ಅದೇನೆಂದರೆ ಅವಳಿಗೆ ಗಂಡು ಮಕ್ಕಳಾಗಲೆಂಬುದೇ ಅವರ ಇಚ್ಛೆ.

ಕಂಚಿ ಗೊಲ್ಲ ಕುಲದ ಪಂಚಾಳದವರ ಮಕ್ಕಳು ಉತ್ತಮ ನಡತೆ ಉಳ್ಳವರು. ಕಳ್ಳತನ ಮಾಡುವುದಿಲ್ಲ, ಸುಳ್ಳು ಹೇಳುವವರಲ್ಲ. ಹಿಂದೆ ಕಂಚಿ ಕಾಳಮ್ಮನ ತೇರು ಸಾಗದೇ ಇದ್ದಾಗ ಡಂಗೂರ ಸಾರಿದ್ದರು. ಏನೆಂದರೆ ತೇರನ್ನು ನಡೆಸಿಕೊಟ್ಟವರಿಗೆ ಆಳುದ್ದ ಬಂಗಾರ (ಅವರ ತೂಕದಷ್ಟು, ಎತ್ತರದಷ್ಟು) ಮತ್ತು ೩ ಬಂಟೆ ಗಾತ್ರದ ಬಂಗಾರದ ನಾಣ್ಯ ಕೊಡುವುದಾಗಿ ತಿಳಿಸಿದ್ದರು. ಆದರೆ ಗ್ರಾಮಸ್ಥರು ಕೇವಲ ಈ ಕಂಚಿನ ಪತ್ರ ಬರೆಯಿಸಿಕೊಟ್ಟಿರುವುದರಲ್ಲಿ ಈ ಪತ್ರದ ವಿವರವಿದ್ದು ಇಲ್ಲಿ ನಾಗರಿಕರು ಕಂಚಿ ಗೊಲ್ಲರಿಗೆ ಮೋಸ ಮಾಡಿದ ವಿವರ ಸ್ಪಷ್ಟವಾಗಿ ಗೋಚರಿಸುತ್ತದೆ. ಬಂಗಾರ, ಹಣ ನೀಡದೆ ಇದನ್ನು ಹೊರಡಿಸುತ್ತಿರುವದು ಸ್ಪಷ್ಟ.

ಕಂಚಿನ ಪತ್ರದ ಕಾಲಮಾನವನ್ನು ಸ್ವಸ್ತಿ ವಿಜಯಂಬವಂ ಶಾಲಿವಾಹನ ಶಕೆ (೬೩) ಪ್ರಭವನಾಮ ಸಂವತ್ಸರ ಕಾರ್ತೀಕ ಶುದ್ಧ ಒಂದು ಶುಕ್ರವಾರ ಹಸ್ತನಕ್ಷತ್ರ ಶುಭಯೋಗ ಶುಬಕರಣದಲ್ಲಿ ಇದನ್ನು ಹೊರಡಿಸಲಾಗಿದೆ. ಇದನ್ನು ಕ್ರಿ.ಶ.ಕ್ಕೆ ಹೋಲಿಸಿ ನೋಡಲಾಗಿ ಕಾಲಮಾನ ಸರಿಹೊಂದುವುದಿಲ್ಲ. ಬಹುತೇಕ ಇದೊಂದು ಕೃತಕ ಶಾಸನವಾಗಿದ್ದು ದಾಖಲೆಗೊಂಡಿದೆ.

ಈ ಪತ್ರವನ್ನು ಬರೆಯಿಸಿಕೊಟ್ಟವರು ಅಗ್ನಿಯಲ್ಲಿ ಜನಿಸಿದ ಅಂಬುವಿರಿಯಾನ ವ್ಯಾಘ್ರಧ್ವಜ ಹೊಂದಿದ ವನ್ನಿರಾಯನೆಂಬ ಇವನು ರಜಪೂತ ಗೊಲ್ಲ ಕುಲದವನಾದ ಮಾಳವರಾಯರು ಅವರು ದೇವೇಂದ್ರ ಪದವಿಯನ್ನು ಹೊಂದಿದ ಪಂಚಾನನ ಅಧಿಕಾರಿಗಳಾದಂತಹ ಜಗದ್ಗುರುಗಳಾದ ಸಿಂಹ ವಿಕ್ರಮ ಪರಾಕ್ರಮಗಳಾದಂತಹ ಸೂರ್ಯ ವಂಶದ ಉದ್ದಾರಕರಾದಂಥ ಹಾಗೂ ಧಾರಾನಗರದ ಧರ್ಮಗುರುಗಳಾದ ಶಿವಾಚಾರ ಸಂಪನ್ನರಾದ ಗೊಲ್ಲಕುಲದ ನರಗೋಪಾಲ ವಂಶ ಮಣಿ ಅರಸ ಮಾನವ ಕುಲದ ಅಧಿಪತಿಗಳು ಮತ್ತು ಕಾರ್ಯ ಕೈಕೊಳ್ಳುವವರಾದ ದೇವಾಂಗದವರಾದ ಬಾಲಮಾಧವ ಕುಲದ ಪಟ್ಟಭದ್ರ ಹಿತಾಸಕ್ತರಾದ ವೆಯಾ ಕುಲದವರು ಅಂದರೆ ಸಮುದ್ರ ದಂಡೆಯ ಮೇಲೆ ವಾಸಿಸುವವರು ಹಾಗು ಮುತ್ತುರಾಶಿಗಳ ವ್ಯಾಪಾರಸ್ಥರಾದ ಗವಿತ್ತಿನಿಬ್ಬರ ಗಂಡು ವೀರ ಕನ್ನಪ್ಪ ಇವನು ದೇವರ ವರಪ್ರಸಾದಿಕರಾದಂತವರು ಮತ್ತು ಗೋಸಂಗಿಗ ಳಾದವರು ಅಂದರೆ ಬಣ್ಣ ಬದಲಾಯಿಸುವ ಇವರು ನಾಲ್ಕು ಸಮುದ್ರದ ಮಧ್ಯದಲ್ಲಿ ಇರುವಂತಹ ಅಂದರೆ ಹಿಂದು ಮಹಾಸಾಗರ ಬಂಗಾಳಕೊಲ್ಲಿ ಅರಬಿ ಸಮುದ್ರ ಶಾಂತಿನಗರದ ಹಿರಿಯರನ್ನು ಗಣ್ಯರನ್ನು ಶ್ರೀ ಕಾಳಿದೇವಿಯ ಸನ್ನಿಧಿಯಲ್ಲಿ ಕೂಡ್ರಿಸಿ ಜೊತೆಗೆ ಪಂಚಾಳ ಕುಲದವರನ್ನು ಕೂಡಿಸಿ ಗಣ್ಯ ನಾಗರಿಕರೆಲ್ಲರು ಸೇರಿ ಕಂಚಿನ ರಥವನ್ನು ಎಳೆಯುವಾಗ ತೇರಿನ ಹಣೆಯ ಮುಂಭಾಗದಲ್ಲಿದ್ದ ಸಿಂಹದ ಮುಖ,

* ಜಿ.ಪಿ.ಇ.ಸಿ.ಜಿ.ಕೆ.ಡಿ. ಹೀರೆಗೌಡರ ಪ.ಪೂ. ಕಾಲೇಜು, ರೊಟ್ಟಿಗವಾಡ, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ.

ಹುಲಿಕಣ್ಣು ವಿದ್ಯೆಯನ್ನು ಹೊಂದಿದ ಸಿಂಹ ರಥವು ಮುಂದೆ ಸಾಗಲಿಲ್ಲ. ಅದು ಭೂಮಿಗೆ ಹತ್ತಿಕೊಂಡು ಭೂಗರ್ಭದಲ್ಲಿ ಹೋಗತೊಡಗಿತು. ಆಗ ಎಚ್ಚೆತ್ತು ಗೊಲ್ಲ ಕುಲದ ಜನಾಂಗದವರು ಪಣದವರು ಗುಪ್ತವಾಗಿ ಸೇರಿಕೊಂಡು ಚರ್ಚಿಸಿ ಆಲೋಚನೆ ಮಾಡಿ ನಮ್ಮ ಜನಾಂಗದಲ್ಲಿ ತ್ಯಾಗ ಮಾಡುವ ಪಣಗಳು ಜನರು ಯಾರಿದ್ದಾರೆ ಎಂಬುದನ್ನು ವಿಚಾರಿಸುತ್ತಿರುವಾಗ ಅವರ ನೆನಪಿಗೆ ಬಂದದ್ದು ಸ್ತ್ರೀಮಂಡಲದಲ್ಲಿರುವ ಅಂದರೆ ಈಗಿನ ಕೇರಳ ರಾಜ್ಯದಲ್ಲಿರುವ ಮಲಯಾಳ ದೇಶದ ಗೊಲ್ಲರಾದಂತಹ ಹುಲಿಗಜಾರಿ ವಂಶಿಕರಿದ್ದಾರೆ. ಅವರೇ ಈ ಕಂಚಿನ ರಥವನ್ನು ಸಾಗಿಸಲು ಯೋಗ್ಯರೆಂದು ತಿಳಿದು ನಂಬಿದ್ದರು. ಹತ್ತಾರು ಜನರು ಇದು ಸಮ್ಮತವೆಂದು ಹೇಳಿದರು.

ಆಗ ಇದಕ್ಕೆ ಸಾಕ್ಷಿ ಆಧಾರವಾಗಿ ಒಂದು ಪತ್ರ ಬರೆದು ನಮ್ಮ ಕೀರ್ತಿ ತಂದ ಕುಲದ ಪಣದವನಿಗೆ ಅವರು ಏನು ಕೇಳುತ್ತಾರೆಯೇ ಅದನ್ನೇ ಕೊಡುತ್ತೇವೆ. ಆದ್ದರಿಂದ ಪಣ ನಡೆಸಬೇಕಾದುದನ್ನು ಕೇಳಿದರೆಂದು ಪತ್ರ ಬರೆದು ಕಳಿಸಿಕೊಟ್ಟರು. ಒಬ್ಬ ವೀರನು ಆಗ ತನ್ನ ಮನೆಯಲ್ಲಿದ್ದ ತನ್ನ ಹೆಂಡತಿ ಗರ್ಭಿಣಿ ಸ್ತ್ರೀಯನ್ನು ಕರೆದು ತಂದು ನಿಲ್ಲಿಸಿದನು. ತನ್ನ ವಿದ್ಯಾ ಬಲದಿಂದ ವಿಚಾರಿಸಿ ನೋಡಿದಾಗ ಈ ರಥವು ನರಗರ್ಭ ಹೊತ್ತ ಅಂದರೆ ತುಂಬು ಗರ್ಭಿಣಿ ಸ್ತ್ರೀಯನ್ನು ಬಲಿ ಕೇಳುತ್ತದೆಂದು ತಿಳಿಸಿದನು. ಆಗ ಅಲ್ಲಿ ಕುಳಿತ ಹತ್ತಾರು ಜನರು ಒಮ್ಮೆಲೇ ಅದು ಸಾಧ್ಯವಿಲ್ಲ. ಹುಲಿಯ ಹಾಲನ್ನಾದರೂ ಬೇಡಿದರೂ ತಂದುಕೊಡುತ್ತೇವೆ. ಆದರೆ ಗರ್ಭಿಣಿ ಸ್ತ್ರೀಯರನ್ನು ಎಲ್ಲಿಂದ ತರಬೇಕು ಎಂದು ಒಮ್ಮೆಲೇ ತಿರಸ್ಕಾರದಿಂದ ಹೇಳಿದರು. ಆಗ ಆ ವೀರ ಈಗಾಗಲೇ ತನ್ನ ಮನೆಯಲ್ಲಿದ್ದ ಗರ್ಭಿಣಿ ಸ್ತ್ರೀಯನ್ನು ಆ ಕಂಚಿನ ರಥದ ಹತ್ತಿರ ತಂದು ನಿಲ್ಲಿಸಿ ಖಡ್ಗದಿಂದ ಬಲಿ ಕೊಟ್ಟನು. ಆ ತಕ್ಷಣವೇ ನೆಲಕ್ಕೆ ಹತ್ತಿಕೊಂಡಿದ್ದ ರಥವು ಕುಲು ಕುಲು ಎದ್ದು ಚಲಿಸಿ ಹೊರಟಿತು. ಹೋಗುವಾಗ ಬಲಿಯಾದ ಗರ್ಭಿಣಿಯ ನರವನ್ನು ರಥದ ಕಾಲಿಗೆ ಹಾಗೂ ಸಿರಸ್ಸಿಗೆ ಕಟ್ಟಲಾಯಿತು. ಇಲ್ಲಿಗೆ ಈ ಕಂಚಿನ ಪತ್ರದ ಮುಖಪುಟದ ಪಾಠ ಮುಕ್ತಾಯವಾಯಿತು.

ಮುಂದಿನ ಪಾಠದಲ್ಲಿ ಕಂಚಿನ ಪತ್ರದ ೨ನೇ ಪುಟದ ಹಿಂಬದಿಯ ಪಾಠದ ಸಾರಾಂಶದಲ್ಲಿ ಹಿಂದಿನ ಪುಟದಿಂದ ಮುಂದುವರೆದು ರಥಕ್ಕೆ ಬಲಿ ಕೊಟ್ಟ ಗರ್ಭಿಣಿಯ ರಕ್ತವನ್ನು ಸಿದ್ದಿಗೆ ಅಂದರೆ ಎಣ್ಣೆ ತುಪ್ಪ ತುಂಬುವ ಚೀಲಕ್ಕೆ ತುಂಬಿ ಅವಳ ಮುಂಡದಿಂದ ನೀರು ತರುಹಿಸಿಟ್ಟರು. ನಂತರ ನಾಡಿನಾದ್ಯಂತ ವಾಸಿಸುತ್ತಿದ್ದ ೧೨ ಅಯ್ಯನವರಿಗೆ ತಿಳಿಸಿ ಆ ಗೊಲ್ಲರವನು ತನ್ನ ಮೂಗಿಗೆ ಬೆಳ್ಳಿಯ ಮೂಗುದಾರ, ಹಣ ಮತ್ತು ಬಂಗಾರದ ಸರಪಳಿ ಹಾಕಿಕೊಂಡು ಕಂಚಿನ ರಥವನ್ನು ಎರಡು ಬೀದಿಗಳಲ್ಲಿ ಸಂಚರಿಸಿ ಎಳೆದು ತಿರುಗಿಸಿಟ್ಟನು. ಆಮೇಲೆ ಕಂಚು ಗೊಲ್ಲರ ಸಿಂಹ ಪುಲಿಯನ್ನು ಹಾಕಿಸಿ ರಥವನ್ನು ತಂದು ನಿಲ್ಲಿಸಿದ. ಮುಂದೆ ನಾಲ್ಕು ಸಮುದ್ರದ ಮಧ್ಯ ಅಂದರೆ ಹಿಂದೂ ಮಹಾಸಾಗರ, ಬಂಗಾಳಕೊಲ್ಲಿ, ಅರಬಿಸಮುದ್ರ, ಶಾಂತಿಸಾಗರ ಇವುಗಳ ಮಧ್ಯದಲ್ಲಿರುವಂತಹ ಪಣದವರಿಗೆ ಕೀರ್ತಿ ತಂದಂತಹ ವೀರ ಹಿರಿಯ ಮಗನಾಗಿದ್ದಾನೆ. ಆದುದರಿಂದ ಇವನು ನೆರವೇರಿಸಿದ ಕಾರ್ಯ ಸ್ತುತ್ಯಾರ್ಹವಾಗಿದೆ. ಕಾರಣ ಇಂತಹ ಮಹಾನ್ ಸಾಧನೆ ಗಂಭೀರ ಕೆಲಸ ಮಾಡಿದವನಿಗೆ ಏನಾದರೊಂದು ನೆನಪಿನ ಕಾಣಿಕೆ ಕೊಡಬೇಕೆಂದು ಆಲೋಚಿಸಿದಾಗ ಇವನಿಗೆ ಏನು ಕೊಟ್ಟರು ಹೆಸರು ಉಳಿಯುವುದಿಲ್ಲ. ಇಲ್ಲಿ ಉದಾಹರಣೆ ನೀಡಿದ್ದಾರೆ ಹತ್ತೂ ಜನರು ಕೂಡಿ ವಿಚಾರಿಸಿ ಈ ವ್ಯಕ್ತಿಗೆ ರಾಜ್ಯ ಕೊಟ್ಟರೆ ಅದು ಉಳಿಯುವುದಿಲ್ಲ.

ಏಕೆಂದರೆ ಈ ವ್ಯಕ್ತಿಯು ಮಹಾನ್ ಪವಾಡಪುರುಷ. ಇವನು ಮನುಷ್ಯನನ್ನು ಹುಲಿಯಾಗಿ ಮಾಡುವು ದುಂಟು. ಹುಲಿಯು ಮನುಷ್ಯನನ್ನಾಗಿ ಮಾಡುವುದುಂಟು. ಇಂತಹ ವಿದ್ಯೆಯನ್ನು ಕಲಿತ ಮೇಧಾವಿ ಸಾಧಕನಾದ ಇಂತಹ ಮಹಾನುಭಾವನಿಗೆ ಶಾಶ್ವತವಾಗಿ ಉಳಿಯುವ ಬ್ರಹ್ಮಕಲ್ಪವಾಣಿ ಶಾಸನ ಪತ್ರವನ್ನು ಬರೆಯಿಸಿಕೊಟ್ಟರೆ ಅದು ಪೂರ್ಣವಾಗಿ ಸೂರ್ಯ ಚಂದ್ರರು ಇರುವವರೆಗೂ ನಿಲ್ಲಬಹುದು ಎಂದು ಆಲೋಚಿಸಿ ವನ್ನಿರಾಯರಿಗೆ ಅಂದರೆ ಅರಸನಿಗೆ ತೆರೆದ ಬಾಗಿಲಿಗೆ ಏಳು ರೂಪಾಯಿ ದೇವೇಂದ್ರ ಎಂಬ ವಾರಿನ ಪಳ್ಳಿಯವರಿಗೆ ರೂ. ೪, ಪಂಚಾಳದವರಿಗೆ ರೂ. ೪ ಹಾಗೂ ಸದರಿಯವರ ಮನೆಯಲ್ಲಿ ಶುಭ ಶೋಬನ ನಡೆದರೆ ಇವನು ತಂದೆ (ಪಿತೃ) ಎಂಬ ಪೂಜ್ಯಭಾವನೆ ಹೊಂದಿ ಬರುವಂತಹ ಮಕ್ಕಳಿಗಾಗಿ ಗೌರವದಿಂದ ಮಾನಮರ್ಯಾದೆ ನೀಡಿ ಕಳುಹಿಸಬೇಕು ಮತ್ತು ನಗರಾಧಿಪತಿ ತೆರೆದ ಬಾಗಿಲಿಗೆ ೪ ರೂಪಾಯಿ, ಪ್ರಾಚೀನ ನಗರದ ಅರಸನಿಗೆ ೪ ರೂಪಾಯಿ, ಸಮುದ್ರದಲ್ಲಿ ಚಿಪ್ಪುಗಳನ್ನು ಸಂಗ್ರಹಿಸುವ ಕವಡಿ ಗೊಲ್ಲರಿಗೆ ೪ ರೂಪಾಯಿ, ಸುದ್ದಿ ಮುಟ್ಟಿಸುವ ವಾಲಿಕೆಗೆ ಪಟ್ಟಭದ್ರರ ಪಾದಕ್ಕೆ ೪ ರೂಪಾಯಿ ಮತ್ತು ದೇವಾಂಗದವರ ಮಗ್ಗಕ್ಕೆ (ಬಣದವರಿಗೆ) ೪ ರೂಪಾಯಿ, ಸಂಬೂತರಾದ ಮುಖ್ಯಸ್ಥರು ವಾಸಿಸುವ ಮೇಟಿಗೇರಿ, ಹಿರಿಯವರು ಗಣ್ಯರು ವಾಸಿಸುವ ಓಣಿಗೆ ೨ ರೂಪಾಯಿ, ಮುತ್ತುರತ್ನಗಳ ವ್ಯಾಪಾರಿಗಳಿಗೆ ೪ ರೂಪಾಯಿ, ವೀರ ಕಣ್ಣಪ್ಪ ದೇವರಿಗೆ ೪ ರೂಪಾಯಿ, ಮಾದಿಗರ ಬಳಗಕ್ಕೆ ಕೊಡಲಿಗೆ ೪ ರೂಪಾಯಿ ಮತ್ತು ಮಾದಿಗರ ಓಣಿಗೆ ಒಂದು ಕುರಿ ಬ್ಯಾಟಿ ಕೊಡಬೇಕು.

ಇದು ಸತ್ಯವಾಗಿದೆಂದು ಹೇಳಿ ಇದಕ್ಕೆ ಸಾಕ್ಷಿಯಾಗಿ ೪ ಸಮುದ್ರದ ದುರ್ಗಾಶಕ್ತಿ ಕಾಳಿಕಾದೇವಿ ಮಧ್ಯದಲ್ಲಿರುವಂತಹ ಪುಟ್ಟ ಕಾಳಿಕಾದೇವಿಯೇ ಸಾಕ್ಷಿ, ಕಮಟೇಶ್ವರಿ ತಾಯಿ ಸಾಕ್ಷಿ, ಭೂದೇವಿ ಸಾಕ್ಷಿ, ಆಕಾಶವಾಣಿ ಸಾಕ್ಷಿ, ಸೂರ್ಯ ಚಂದ್ರರು ಸಾಕ್ಷಿ, ಶಿವಕಂಚಿ, ಏಕಾಂಬರೇಶ್ವರ ಸನ್ನಿಧಿಗೆ ಕನಕಮಯವಾಗಿ ನೇರವೇರಿಸಿದಂಥ ಗಾಂಭೀರ್ಯವರನ ನಾದ ಮೇರುಕೀರ್ತಿ ತಂದಿರುವ ವೀರ ಹಿರಿಯ ಮಗ ಇವನಾಗಿದ್ದಾನೆ. ಆದುದರಿಂದ ಇವನಿಗೆ ಒಂದು ಬಿರುದು ನೀಡಬೇಕೆಂದು ನಿರ್ಣಯಿಸಿ ೧೦ ಜನಗಳು ಸೇರಿ ಹೇಳಲಾಗಿ ವೀರನ ಸ್ಮರಣಾರ್ಥ ನಡುವೆ ವೀರಗಲ್ಲು, ಮುತ್ತಿನಕಲ್ಲ ತುರಾಯಿಗರಿ, ಪಣಿಗೆ (ಹಣೆಗೆ) ಬಾಸಿಂಗ, ಸೂರಟಿ, ಹೂವು, ಸುರೇಪಾನ ಎಂಬಿರಣ್ಣಿ, ಹೊಕ್ಕಳಗಂಟಿ, ಹುಲಿಚರ್ಮದ ನಗಾರಿ, ಒಂಬತ್ತು ಎತ್ತುಗಳು, ಕಹಳೆ, ತಾಳೆ, ಕರ್ನಿ, ಡಮರುಗ ಮೊದಲಾದವುಗಳನ್ನು ಮತ್ತು ಆಯುಧಗಳಾದ ಅಂಕುಶ, ಖಡ್ಗ ಮಾತ್ರ ಕೀಟಕ ಮಕರ ಮೀನ ಮತ್ಸ ಸಿಂಹ, ಹುಲಿ (ಶಾರ್ದೂಲ) ಹಾಗೂ ಗಂಡಭೇರುಂಡ, ಗಗನ ಮಂಜರಿ, ಹನಮನಾಳ ಚೀತಾಳ, ಕೀತಕಮುಖ ತರಹದ ಕಲ್ಲು ಪಂಚವರ್ಣದ ಜಲ್ಲಿ ಒಂಟಿನಗಾರಿ ವೃಷಭಧ್ವಜ, ಗರುಡಧ್ವಜ, ಹಂಸಧ್ವಜ, ಹಸ್ತಿಧ್ವಜ (ಆನೆ), ಹಯಧ್ವಜ (ಕುದುರೆ) ಸಿಂಹಧ್ವಜ ಮತ್ತು ಕಾಲಿಗೆ ಗಗ್ಗರಿ ಜಂಗರಿ ನೆಲಸರವಿ ಗೆಜ್ಜೆ ಈ ಎಲ್ಲ ಬಿರುದುಗಳನ್ನು ಪಡೆದು ನಮ್ಮ ಫಣದವರಿಗೆ ಕೀರ್ತಿ ತಂದಿರುವವನು. ಹಾಗೂ ನಮ್ಮ ಮಗನಾಗಿದ್ದರಿಂದ ಕನಕಮಯವಾಗಿ ನೇರವೇರಿಸಿದ ಹಿರಿಯ ಕಾರ್ಯ ಮಾಡಿದ ಗಂಭೀರನಾದವನಿಗೆ ಮೇಲೆ ಬರೆದ ಸಾಮಾನುಗಳನ್ನು ಇವನಿಗೆ ಬಿರುದಾವಳಿ ಕೊಟ್ಟಿದ್ದರಿಂದ ಪಂಚಾನನದವರಿಗೆ ಇವನೊಬ್ಬ ಧೀರ ಮಗನೆನಿಸಿಕೊಂಡಿದ್ದಾನೆ ಎಂದು ಎಲ್ಲ ಬಿರುದನ್ನು ಕಂಚಿನ ಪತ್ರದಲ್ಲಿ ಬರೆದು ಅವನಿಗೆ ಕೊಡಲಾಗಿದೆ. ಇವೆಲ್ಲ ಬಿರುದಾವಳಿಗತ ಧ್ವಜಗಳನ್ನು ಹೊಂದಿರುವವವನು ಶಿವನ ಅವತಾರದವನಾದ್ದರಿಂದ ಪಂಚಾನನ ಕುಲದವರು. ತಮ್ಮ ಹರಕೆಯ ರೂಪದಲ್ಲಿ ಈ ಕಂಚಿನ ಪತ್ರವನ್ನು ಹೊರಡಿಸಿರುವುದು ಬಹು ಮುಖ್ಯ.

**ಈ ಕಂಚಿನ ಪತ್ರಕ್ಕೆ ಸಹಿ ಮಾಡಿದವರ ಹೆಸರು**

ಇಲ್ಲಿಯ ದೇವರ ಸಾಕ್ಷಿಯಾಗಿಟ್ಟುಕೊಂಡು ಬರೆಯಲಾಗಿದೆ. ಆದರೆ ಈ ಪತ್ರಿಕೆ ಪ್ರತ್ಯಕ್ಷವಾಗಿ ಸಾಕ್ಷಿಯಾಗಿ ಇದ್ದವರ ಹೆಸರನ್ನು ಬರೆದು ಈ ಸಾಕ್ಷಿ ಸುಳ್ಳೆಂದು ಹೇಳಿದರೆ ಶಿಶು ಹತ್ಯೆ ಮಾಡಿದ ಪಾಪ, ಗೋಹತ್ಯೆ ಮಾಡಿದ, ಬ್ರಹ್ಮಹತ್ಯೆ ಮಾಡಿದ ಮತ್ತು ಸ್ವಂತ ಮಕ್ಕಳನ್ನು ಕೊಂದು ತಿಂದಂಥ ಪಾಪ ಬರುತ್ತದೆಂದು ಹೇಳಿ ಇದನ್ನು ಗೌರವದಿಂದ ಕಂಡು ಪೂಜಿಸಬೇಕೆಂದು ತಿಳಿಸಲಾಗಿದೆ. ಈ ಪತ್ರ ಬರೆದು ಅವರೆಲ್ಲ ಸಮಕ್ಷಮ ಸಾಕ್ಷಿಯಾಗಿದ್ದರು ಅವರ ಹೆಸರುಗಳೆಂದರೆ–

೧) ಕುಂಬಾರ ವೀರಭದ್ರಪ್ಪ, ೨) ಬಡಿಗೇರ ಕಾಳಪ್ಪ, ೩) ಕಂಚುಗಾರ ಶೇಕಪ್ಪ, ೪) ಅಕ್ಕಸಾಲಿಗ ರಾಮಪ್ಪ, ೫) ಕಂಚಿರಾಮಪ್ಪ ಹಟಗಾರ, ೬) ಬೇಡರಕನಕಪ್ಪ, ೭) ಜಾಂಬುವುಲಪ್ಪ ಮೊದಲಾದವರು ಸಹಿ ಹಾಕಿರುವುದು ಸ್ತುತ್ಯಾರ್ಹ. ಮತ್ತೊಂದು ವೈಶಿಷ್ಟ್ಯಪೂರ್ಣವಾದ ಮಾಹಿತಿಯನ್ನು ಇದು ನೀಡುತ್ತಿದೆ.

ಪ್ರಮಾಣದ ಒಬ್ಬ ತಪಸ್ವಿಯ ಪವಾಡವನ್ನು ಇದರಲ್ಲಿ ಬರೆಯಲಾಗಿದೆ. ಏನಾಂದಾನಿ ಅರಳ ಹುಚ್ಚಿ ಆದಿ ಜಾಂಬುಮುನಿಯ ನಾಲ್ಕು ಸಮುದ್ರದೊಳಗಿನ ನಾಲ್ಕು ಜಡೆಯನ್ನು ಬಿಟ್ಟು ತಪಸ್ಸು ಮಾಡುವ ಕಾಲಕ್ಕೆ ಪಶು ಪಕ್ಷಿಗಳು ತಮ್ಮ ವಂಶಾಭಿವೃದ್ಧಿಗಾಗಿ ಮರಿಗಳನ್ನು ಎಬ್ಬಿಸುವಾಗ ಸಮುದ್ರದಲ್ಲಿರುವ ಮುತ್ತಿನ ಶಂಕಿನಲ್ಲಿ ಬಸವೇಶ್ವರನು ಜನಿಸಿದನು. ಆಜಿಗಿ ತುಳಿಯಿತು. ಅದಕ್ಕೆ ೨ ಗೊರಟಿ ಒಡೆದು ಟಿಸಿಳಾದವು ಜಾಂಬು ಮುನಿ ಅರಳಯ್ಯನವರಿಗೆ ಮಕ್ಕಳು (ಏಳು) ಹುಟ್ಟಿದರು. ಭೂಮಿಗೆ ಹೆಪ್ಪ ಕೊಟ್ಟಿರುವ ಜಾಂಬುಮುನಿಯ ತಂದೆ ವಾಯುದೇವ ತಾಯಿ ಕನಸಾಯಿ ಮತ್ತು ಜಾಂಬುನ ಇಬ್ಬರು ಹೆಂಡರು, ಅಮರ ಕಲ್ಯಾಣಿ, ಶಿರ್ಜಾಕಲ್ಯಾಣಿ ಇವರು ಲಗ್ನವಾಗುವ ಕಾಲಕ್ಕೆ ೧೨ ಗೂಟಿಗಳ ಹಂದಿರ ೫ ಎಲೆ ಕಳಸ ೧ ತೆನಿ ಇಟ್ಟು ಕೆಂದ ಕುದುರೆಯ ಮೇಲೆ ಹನುಮಂತದೇವರ ಗುಡಿಗೆ ಮೆರುನಿಗೆ ಹೋಗುವ ಕಾಲಕ್ಕೆ ಗುಜ್ಜಲವ್ವನು ಲಗಾಂ ಓಡಿಬೇಕು ವಾದ್ಯಗಳಾದ ರಣಹಲಗೆ ಏಳು ಎತ್ತಿನ ಚರ್ಮ ಹುರಿ ಹೊಯ್ದು ಅದರ ಪಪಮಾನ ತಿರುಗಿ ಹನುಮಂತ ದೇವರಿಗೆ ಬರಬೇಕು ಹೀಗೆ ಮೆರವಣಿಗೆ ಬರುವಾಗ ಯಾರೂ ಅಡ್ಡ ಬರಬಾರದು. ಒಂದು ವೇಳೆ ಯಾರಾದರೂ ಅಡ್ಡ ಬಂದರೆ ಅತೀ ಕಷ್ಟಪಡುತ್ತಿದ್ದರೆಂದು ಬರೆದ ವಚನದ ಈ ಕಂಚಿನ ಪತ್ರದ ಸಾರಾಂಶವನ್ನು ಸಮಾಪ್ತಗೊಳಿಸಲಾಗಿದೆ. ಕಂಚಿನ ಪತ್ರದ ಹಿಂಭಾಗದ ಪುಟದಲ್ಲಿ ಕೆಳಗೆ ಕಂಚಿನ ರಥ ಎಳೆಯುತ್ತಿರುವ ೨ ಜನರನ್ನು ಮುದ್ರಿಸ ಲಾಗಿದೆ.

**ಕಂಚಿನ ಪತ್ರದ ಕಾಲಮಾನ** : ಇದು ಸ್ವಸ್ತಿ ಭೂಮಿಯ ಶಾಲಿವಾಹನ ಶಕೆ ೬೩ ಪ್ರಭುನಾಮ ಸಂವತ್ಸರ ಕಾರ್ತಿಕ ಶುದ್ಧ ಶುಕ್ರವಾರ ಹಸ್ತನಕ್ಷತ್ರ ಶುಭಯೋಗ ಶುಭಕರಣದಲ್ಲಿ ಇದನ್ನು ಹೊಡಿಸಲಾಗಿದೆ) ಆದರೆ ಶಾಲಿವಾಹನ ಶಕೆ ಕ್ರಿಸ್ತಶಕೆಗೆ ಹೋಲಿಸಿ ನೋಡಿದಾಗ ಅದು ಸರಿ ಹೊಂದುವಂತಿರಲಿಲ್ಲ. ಕಾರಣ ಇದು ಕೃತಕವಾಗಿ ಕೊಟ್ಟ ಪತ್ರವಾಗಿದೆ. ಮಧ್ಯದಲ್ಲಿ ಬರೆದಿರುವ ಪತ್ರವಾಗಿರುವುದು ಸ್ಪಷ್ಟ ಅಕ್ಷರಗಳ ಮಾಟ

ಶೈಲಿ ಕಲೆ ಮೊದಲಾದವುಗಳು ೧೮-೧೯ನೇ ಶತಮಾನದ ಕಾಲದವುಗಳು ಆಗಿರಬಹುದು.

ಆದರೆ ಯಾದವ ಕುಲಾದಿಪತಿ ಎಂಬ ನಾಮಾಂಕಿತ ದಿಂದ ಪ್ರಾರಂಭವಾಗಿರುವ ಈ ಕಂಚಿನ ಪತ್ರ ಇದರಲ್ಲಿ ಅರಸರ ಹೆಸರುಗಳನ್ನು ತಿಳಿಸಿದ್ದರಿಂದ ಅದರ ಆಧಾರವಾಗಿ ಅಂದರೆ ಮಾಳ್ವರು ಅರಸರು ಆದರೆ, ಇದರಲ್ಲಿರುವ ವನ್ನರಾಯನೆಂಬುವನು ಮುಖ್ಯ ರಾಜನಾಗಿರುವದರಿಂದ ಅವನ ಹೆಸರು ಬರೆಯಲಾಗಿದೆ. ಇವನ ಕಾಲವಾಗಿ ಕೃತಕವಾಗಿರುವುದು ಸ್ಪಷ್ಟ.

**ಕಂಚಿನ ಪತ್ರದಲ್ಲಿ ಬರುವ ಕುಲಗಳು**

೧) ತೆಲಗರಿಗೊಲ್ಲರು, ೨) ಕಂಚಿಗೊಲ್ಲರು, ೩) ಪಂಚ್ಯಾಳರು, ೪) ಪಂಚಾನನಕುಲ, ೫) ಸೂರ್ಯನ ವಂಶೋದ್ಯಮದವರು, ೬) ಶಿವಾಚಾರ ಸಂಪನ್ನರು, ೭) ಗೊಲ್ಲಕುಲ, ೮) ನರಗೋಪಾಲ ವಂಶಾಮಣಿ, ೯) ದೇವಾಂಗದವರು, ೧೦) ಪಟ್ಟಭ'ದ್ರರು, ೧೧) ವೆಯಾಕುಲದವರು, ೧೨) ಗೊಸಂಗಿ ಕುಟುಂಬ ದವರು, ೧೩) ಪಣದವರು, ೧೪) ಮಲಯಾಳಗೊಲ್ಲರು, ೧೫) ೧೨ ಅಂಯ್ಯನವರು, ೧೬) ಸಿಂಗಪುರಿ, ೧೭) ದೇವೇಂದ್ರಪಳಿಯರು, ೧೮) ಪಂಚಳದ ವಂಶ, ೧೯) ಕವಾಡಿ ಗೊಲ್ಲರಿಗೆ, ೨೦) ವಾಲಿಯರಾಶಿ, ೨೧) ದೇವಾಂಗದವರು, ೨೨) ವೋಟಿಗೇರಿ, ೨೩) ಮುತ್ತುರಾಶಿಯವರು, ೨೪) ಮಾದಿಗರ ಕೊಡತಿ, ೨೫) ಮಾದಿಗರ ಗಲ್ಲಿ, ೨೬) ಕಂಚಿ ಏಕಾಂಬರೇಶ್ವರ, ೨೭) ಬಾಲಿಂದ್ರ ಕುಲದವರು, ೨೮) ಮಾಳ್ವರು.

**ಧ್ವಜಗಳು :** ವೃಷಭಧ್ವಜ, ಗರುಡಧ್ವಜ, ಹಂಸಧ್ವಜ, ಹಸ್ತದಧ್ವಜ, ಹಯಧ್ವಜ, ಸಿಂಹಧ್ವಜ, ಜಂಗು, ನೆಲಸರವಿಗೆಜ್ಜೆ, ವ್ಯಾಘ್ರಧ್ವಜ.

**ಆಭರಣಗಳು :** ಬಾಸಿಂಗ, ಮುತ್ತಿನ ಕಲ್ಕತುರಾಯಿ, ಸುರೇಪಾನ, ಹೊಕ್ಕಳಗಂಟಿ, ಹುಲಿಚರ್ಮ, ನಗಾರಿ, ಕಾಳಿ, ಕರ್ಣಿ, ಹಣೆಕಟ್ಟು.

**ಆಯುಧಗಳು :** ಖಡ್ಗ, ಯುದ್ಧಕಿರೀಟ, ಮಕರ, ಮೀನ (ಮತ್ಸ್ಯ) ಸಿಂಹ, ಹುಲಿ, ಶಾರ್ದೂಲ, ಪಕ್ಷಿ, ಗಂಡಭೇರುಂಡ, ಗಗನಮಂಜರಿ, ಹನುಮನಾಳ, ಬೇತಾಳ, ಪಂಚವರ್ಣದ ಜಲ್ಲಿ.

**ವಾದ್ಯಗಳು :** ರಣಹಲಗೆ, ಹುಲಿಯಿಂದ ತಯಾರಿಸಿದ ಹಲಗಿ, ಜಗ್ಗಲಿಗೆ, ನಗಾರಿ, ಹೊಕ್ಕತಗಂತಿ, ಹುಲಿ ಚರ್ಮದ ನಗಾರಿ, ಕಹಳೆ, ಡಮರು, ಕರ್ಣಿ, ಡಗ್ಗಾ, ತಬಲಾ.

ಕಂಚಿನ ಪತ್ರವನ್ನು ಕಂಚು ಹಾಗೂ ಸೀಸದಿಂದ ತಯಾರಿಸಲಾಗಿದೆ. ನೋಡಲು ಆಕರ್ಷನೀಯವಾಗಿದ್ದು ಇದನ್ನು ಶಾಸನ ಪತ್ರ ಬ್ರಹ್ಮಕಲ್ಪ ಎಂಬುದಾಗಿ ಕರೆಯಲಾಗಿದೆ. ಇದು ಸುಮಾರು ೩೪ ಸೆಂ.ಮೀ. ಎತ್ತರ ಹಾಗೂ ಅಗಲ ೨೩ ಸೆಂ.ಮೀ. ಇದೆ. ಇದರ ಮುಖಪುಟದ ಮೇಲ್ಭಾಗದಲ್ಲಿ ವೃತ್ತಾಕಾರವಾಗಿ ಸುಮಾರು ೧೭ ಸೆಂ.ಮೀ. ಎತ್ತರವಾದ ಕಮಾನಿನಾಕಾರವಾಗಿ ತುಂಡರಿಸಲ್ಪಟ್ಟಿದೆ. ಇದರಲ್ಲಿ ಕಾಳಿಕಾ ದೇವಿಯ ಸುತ್ತಲೂ ಪ್ರಭಾವಳಿ ಇದ್ದು ಎಡ ಬಲಭಾಗದಲ್ಲಿ ವಿವಿಧ ಚಿತ್ರಾವಳಿಗಳನ್ನು ಕರೆಯಲಾಗಿದೆ. ಬಲಭಾಗದಲ್ಲಿ ಗೊಲ್ಲರ ಕುಲದ ಸ್ತ್ರೀಯನ್ನು ಹತ್ಯೆಗೈಯ್ಯುವ ಚಿತ್ರವಿದ್ದು ಒಬ್ಬ ವೀರ ೨ ಹಸ್ತಗಳನ್ನು ಮೇಲೆತ್ತಿ ಆಯುಧದಿಂದ ರುಂಡ ಬೇರ್ಪಡಿಸುವ ಚಿತ್ರವಿದೆ. ಎಡಭಾಗದಲ್ಲಿ ಪೂಜ್ಯಶ್ರೀ ಹನುಮಂತದೇವರ ವಿಗ್ರಹವಿದೆ. ಇವೆರಡರ ಮೇಲ್ಭಾಗದಲ್ಲಿ ಸೂರ್ಯಚಂದ್ರರ ಚಿತ್ರಗಳನ್ನು ಮುದ್ರಿಸಲಾಗಿದೆ. ಕೆಳಗಿನ ೩ನೇ ಪಟ್ಟಿಕೆಯಲ್ಲಿ ಎಡಭಾಗದಲ್ಲಿ ಕಂಚಿನ ತೇರು ಮುಂಭಾಗದಲ್ಲಿ ಜನರು ತೇರನ್ನು ಎಳೆಯುತ್ತಿದ್ದಾರೆ. ಅವನ ಪಕ್ಕದಲ್ಲಿ ಮಧ್ಯಭಾಗದಲ್ಲಿ ಗರ್ಭಿಣಿ ಸ್ತ್ರೀಯನ್ನು ಬಲಿಕೊಟ್ಟ ವೀರನಿಗೆ ಸನ್ಮಾನಿಸಿ ಅವನಿಗೆ ಶಾಸನ ಪತ್ರವನ್ನು ಕೊಟ್ಟಿರುವ ಮಹತ್ತರವಾದ ಚಿತ್ರಣವನ್ನು ಕೊರೆಯಲಾಗಿದೆ. ಮಧ್ಯದಲ್ಲಿ ವೀರ ಎಡಬಲಗಳಲ್ಲಿ ಸಮಸ್ತ ಗ್ರಾಮಸ್ಥರು ಗೊಲ್ಲ ಕುಲದವರು ಎಡಕ್ಕೆ ೫, ಬಲಕ್ಕೆ ೫ ಜನ ಭಕ್ತರೆಲ್ಲರೂ ಕೈ ಮುಗಿದು ನಿಂತಿದ್ದಾರೆ. ಎಡಭಾಗದ ಇನ್ನೊಂದು ಚಿತ್ರದಲ್ಲಿ ಜಾಂಬು ಮುನಿ ಜೊತೆ ಹುಲಿಯ ಮೇಲೆ ಸವಾರಿ ಮಾಡುತ್ತ ಇಬ್ಬರು ಮುನಿಗಳು ಬರುವ ದೃಶ್ಯ.

ಮಧ್ಯಭಾಗದಲ್ಲಿದ್ದ ಶ್ರೀಕಾಳಿಕಾದೇವಿ ವಿಗ್ರಹ ಕುಳಿತ ಭಂಗಿಯಲ್ಲಿದ್ದು ಬಲಗಾಲು ಇಳಿಬಿಟ್ಟು ಎಡಭಾಗದ ಕಾಲನ್ನು ಮಡಿಸಿ ಕುಳಿತಿರುವುದು. ಚತುರ್ಭುಜಗಳಿದ್ದು, ಬಲಕ್ಕೆ ಅಭಯಹಸ್ತ, ಎಡಭುಜದಲ್ಲಿ ಕಳಸವಿದ್ದು, ಇನ್ನೊಂದಕ್ಕೆ ಪಾಶವಿದೆ. ಮೈಗೆ ಮಡಿಯಂತಿರುವ ವಸ್ತು ಧರಿಸಿದ್ದು ಸಿಂಹಾಸನಾರೂಡನಾದ ತಾಯಿ ಕಾಳಿಕಾದೇವಿ ತಲೆಯ ಮೇಲೆ ಕೀರೀಟಧಾರಿಣಿಯಾಗಿದ್ದು ಕೊರಳಹಾರ ಕಂಠಹಾರ ಧರಿಸಿ ಮೂಗಿನಲ್ಲಿ ಕಾಲಲ್ಲಿ ಕಾಲ್ಗಡಗ ಹಣೆಯಲ್ಲಿ ಕುಂಕುಮ ಕಿವಿಯೋಲೆ ಕೇಶಪಟ್ಟ ಗನ್ನ ಧರಿಸಿದ್ದಾಳೆ.

ಕಮಾನಿನ ಸುತ್ತಲೂ ಸರಪಳಿ ಮಕಾನದಲ್ಲಿ ತನ್ನದೇ ಆದ ಕಲಾತ್ಮಕವಾದ ಹಗ್ಗದ ಹುರಿಯಂತಿರುವ ಕಲಾಸುರುಳಿ ಯನ್ನು ಮಾಡಲಾಗಿದೆ. ಇದರ ಮಧ್ಯದಲ್ಲಿ ಪುಷ್ಪಗಳನ್ನು ಬಿಡಿಸಲಾಗಿದೆ. ಅತೀ ಸೂಕ್ಷ್ಮವಾಗಿ ಸುಂದರವಾಗಿ ಕೊರೆಯಲ್ಪಟ್ಟಿರುವುದು ಚಿತ್ತಾಕರ್ಷಕವಾಗಿ ಕಂಡುಬರುತ್ತದೆ.

ಹುಲಿ ಹಾಗೂ ವೀರರ ಚಿತ್ರಗಳನ್ನು ನಯನಮನೋಹರವಾಗಿ ಬಿಡಿಸಲಾಗಿದೆ. ಎಲ್ಲೆಂದರಲ್ಲಿ ಚಿಕ್ಕ ಚಿಕ್ಕ ಅಷ್ಟರೇಖಾಕೃತಿಯಲ್ಲಿ ಬಿಡಿಸಿದ ಪ್ರಭಾವಳಿಯ ಚಿತ್ರಕಾರವಾಗಿದ್ದು ಇದರ ಕೆಲ ಭಾಗದಲ್ಲೂ ಸ್ವಸ್ತಿವಿಜಯ, ಭೂಶಾಲಿವಾಹನ ಶಕೆ ಪ್ರಾರಂಭಿಕ ವಾಗಿ ತಿಕ್ಷ ನಕ್ಷತ್ರ ಕರಣ ಮಾಸ ಪಕ್ಷ ಕಂಚಿ ಕಾಳೇಶ್ವರನಿಂದ ತೀರಿಸಲಾಗದೆ ನಿಂತಿತ್ತು ಎಂದು ಬರೆದು ೩ ಜನ ಗರ್ಭಿಣಿಯರನ್ನು ಬಲಿ ಕೊಟ್ಟು ರಥವಾಗಿಸಿ ಈ ದೇವಿಯ ಮನಸಂತೋಷಗೊಳಿಸಲಾಗಿದೆ.

ಮತ್ತು ಕಾಳಿಕಾಗೆ ಹಸಿರು ಸೀರೆ, ಕುಪ್ಪಸ, ಹಸಿರು ಬಳೆ, ಕುಂಕುಮವಿಟ್ಟು ಉಡಿ ತುಂಬಿ ಗಂಡುಮಕ್ಕಳಾಗಲೆಂದು ಹರಿಸಿದ ವಿವರ ಈ ಪತ್ರದಲ್ಲಿ ಬರೆದಿರುವುದ ಶ್ಲಾಘನೀಯ.

ಮೊದಲಿನ ನುಡಿಯಲ್ಲಿ ೩ ಜನ ಗರ್ಭಿಣಿ ಸ್ತ್ರೀಯರನ್ನು ಬಲಿ ಕೊಟ್ಟು ವಕ್ಷನಿ ಜಾತ್ರೆ ನಡೆಸಿದಾಗ ಮೊದಲು ಡಂಗುರ ಸಾರಿದಂತೆ ಆಳುದ್ದ ಬಂಗಾರ, ಧನ ಕನಕವನ್ನ ಕೊಡುವುದಾಗಿ ಹೇಳಿ ಅವುಗಳನ್ನು ಕೊಡದೆ ವಂಚಿಸಿದ ಕೇವಲ ಈ ಕಂಚಿನ ಪತ್ರವನ್ನು ಮಾತ್ರ ಕೊಟ್ಟಿರುವ ಘಹನವಾದ ವಿಚಾರ ತಿಳಿದು ಬರುತ್ತದೆ.

(ಈ ವಿಷಯ ಮಂಡಿಸಲು ಸಹಕರಿಸಿದ ಕಾಲೇಜಿನ ಪ್ರಾಚಾರ್ಯ ಶ್ರೀ ಎ.ಎಚ್. ಪೊಲೀಸ ಪಾಟೀಲ, ಚೇರಮನ್ ಶ್ರೀ ಜಿ.ಎಸ್. ಪಾಟೀಲರಿಗೆ, ಡಾ. ರಾಜಶೇಖರಪ್ಪ, ಡಾ. ಸಿ. ನಾಗರಾಜರಿಗೆ, ಪ್ರೊ. ವೈ.ಎಸ್. ನಾಯ್ಕರ, ಪ್ರೊ. ಮಲ್ಲಿಕಾರ್ಜುನ ಕುಂಬಾರ, ನನ್ನ ಧರ್ಮಪತ್ನಿ ಶ್ರೀಮತಿ ಗಿರಿಜಾ ಮಲ್ಲಿಗವಾಡ, ನಮ್ಮ ಕಾಲೇಜಿನ ಎಲ್ಲ ವೃತ್ತಿಬಾಂಧವರಿಗೆ, ನಲವಡಿ ಗ್ರಾಮದ ಬಿ.ಟಿ. ಮಂಟೂರ, ಉಮಚಗಿ, ಎಸ್.ಆರ್. ರೇವಣಕರ, ಶ್ರೀ ಎಂ.ಬಿ. ಪಾಟೀಲ, ಎಸ್.ಎಂ. ಮಣ್ಣೂರ, ಶ್ರೀ ವೇ. ಮಲ್ಲಿಗವಾಡ, ಫಾರೆಸ್ಟ್ ಇಲಾಖೆ, ಪ್ರೊ. ಎಂ.ವಿ. ಯಾವಗಲ್ ಮೊದಲಾದವರಿಗೆ ಋಣಿಯಾಗಿರು ತ್ತೇನೆ.)

## ಕಂಚಿನ ಪತ್ರದ ಪಾಠ

೧ ಶ್ರೀ ಕಾಳಿಕಾದೇವಿ ಪ್ರಸನ್ನ ಕಂಚಿ ಕಾಳೇಶ್ವರಿಯ ತೇರು ಸಾಗದೆ (೩) ವರ್ಷ ಪಡಬಿದ್ದಿರಲಾಗಿ ಅಗ್ಗ ತೆಲಗು ಗೊಲ್ಲರು (೩) ಮಂದಿಗ

೨ ರ್ಬದ ಸ್ತ್ರೀಯರನ್ನು ಕಂಚಿ ಕಾಳೇಸ್ವರಿಗೆ ಆಹುತಿ ಕೊಟ್ಟರು. ಆವಾಗ್ಗೆ ವಕ್ಷನಿ ಜಾತ್ರೆ ನಡೆಯಿತು. ನಂತರ ಹಸರು ಕುಪ್ಪಸ ಹಸರು ಸೀರಿ ಉಡಿಸಿ ಕಾಳಮ್ಮ

೩ ನಿಗೆ ಗಂಡು ಮಕ್ಕಳಾಗಲೆಂದು ಬೇಡಿಕೊಂಡರು. ಕಂಚಿ ಗೊಲ್ಲ ಕುಲಾ ಪಂಚ್ಯಾಳದವರ ಮಕ್ಕಳಿಯವರು ಕಳ್ಳರಲ್ಲಾ ಸುಳ್ಳರಲ್ಲಾ ಕಂಚಿ ಕಾಳಮ್ಮನ ತೇರು ನಡೆಸಿದ

೪ ವರಿಗೆ ಆಳುದ್ದ ಬಂಗಾರ (೩) ಒಂಟಿ ಒಜ್ಯ ದ್ರವ್ಯ ಕೊಡತಿವಿ ಅಂತ ಡಂಗುರ ಹೊಡೆಸಿದರು. ಅದನ್ನು ಕೊಡಲಾರದೆ ಕಂಚಿನ ಪತ್ರ ಹೊಡಿಸಿಕೊಟ್ಟಿದ್ದಾರೆ ಸಸ್ತಿ ವಿಜಯಾ

೫ ಭೂ ಶಾಲಿವಾಹನ ಶಕೆ (೬೩) ಪ್ರಭುನಾಮ ಸಂವತ್ಸರದ ಕಾರ್ತಿಕ ॥ ೧ ॥ ಶುಕ್ರವಾರ ಹಸ್ತನಕ್ಷತ್ರ ಶುಭಯೋಗ ಶುಭಕರಣದಲ್ಲಿ ಯಾರೆಂದರೆ ಅಗ್ನಿಯ

೬ ಲ್ಲಿ ಜನಿಸಿದ ಅಂಬು . ಮಿ. ಯಾನ ವ್ಯಾಘ್ರ ಧ್ವಜವನ್ನಿ ರಾಯನೆಂಬುದಾಗಿ ಪೆಸರು ಪೊಂದಿ ಮಾಳವರಾಯರನ್ನು ದೇವೇಂದ್ರ ಪದವಿಯನ್ನು ಪಂ

೭ ಚಾನನದಪನಾಧಿಕಕ್ಕೆ ಅಧಿಕಾರಿಗಳಾಂದಂಥ ಜಗದ್ಗುರುಗಳಾದ = ಶಿಂಹ ವಿಕ್ರಮ ಪರಾಕ್ರಮಿಗಳಾದಂಥ = ಸೂರ್ಯ ವಂಶೋದ್ಭವರಾದಂಥ =

೮ ಅವರವರ ಗುರುಗಳ ಧರ್ಮ = ಶಿವಾಚಾರ ಸಂಪನ್ನರಾದಂಥ = ಗೊಲ್ಲಕುಲದ = ನರಗೋಪಾಲವಂಶಾಮಣಿ= ಯಾಧವ ಕುಲಾ

೯ ಧಿಪತಿಗಳಾದಂಥ = ಕೈಕೊಳ್ಳವವರನ್ನು = ದೇವಾಂಗದವರಾದರೂ ಬಾಲಯಾ ಕುಲದವರನ್ನು = ಪಟ್ಟಿ = ಭಾದ್ರದವರನ್ನು = ವಯಾಕುಲದಂದವರನ್ನು ಮು

೧೦ ತ್ತು ರಾಶಿಗಳವರಾದಾಗ್ಯೂ = ಗುತ್ತಿನಿಬ್ಬರಗಂಡ = ವೀರಕನ್ನಪ್ಪ = ದೇವರ = ವರಪ್ರಸಾದಕರಾದಂಥ = ಗೋಸಂಗಿಗಳಾದಂಥ = ನಾಲ್ಕು ಸಮುದ್ರ

೧೧ ಮಧ್ಯದಲ್ಲಿರುವಂಥ = ನ್ನುಗರೇಶ್ವರರನ್ನು = ಕಾಳಿಕಾದೇವಿಯಲ್ಲಿ = ನಮ್ಮ ಫಣದವರು ಕೂಡಿ ಕಂಚು ರಥವನ್ನು ನಡೆಸುವಾಗ್ಗೆ = ಹಣಿಯಸಿಂಹ

೧೨ ಪುಲಿಕನ್ನ ಬಿದ್ದವನ್ನು ಹೊಂದಿ = ಶಿಂಪರಥವು ನಡಿಯದೆ = ಭೂಮಿಗೆ ಹತವಾಗಿ = ಮುಳುಗಿಸುವಾಗ್ಗೆ = ನಮ್ಮ ಫಣದವರೆಲ್ಲರೂ ಕೂಡಿ ಮ
೧೩ ಹತ್ತಾಗಿ ವ್ಯಸನ ಪಡುವಾಗ್ಗೆ ನಮ್ಮ ನಮ್ಮ ಫಣ ಯಾರು ಯಿದ್ದಾರೆ ಎಂಬುದಾಗಿ ವಿಚಾರಿಸುವಾಗ್ಗೆ ಸ್ತ್ರೀ ಮಂಡ್ಲದಲ್ಲಿ ನಿತ್ಯನಾಡು
೧೪ ಮಲಿಯಾಳದಲ್ಲಿ ಗೊಲ್ಲರೆಂಬದಾಗಿ ಹುಲಿಗಚಾರಿ ಕುಶರಿದ್ದಾರೆ ಅವರಾದರೂ ಈ ಕಂಚಿನ ರಥವನ್ನು ನಡಿಸುವರು
೧೫ ಮಂಬುದಾಗಿ ಹತ್ತು ಜನಗಳು ಹೇಳುವಾಗ್ಗೆ ಕೆಲವರು ಕಾಗದ ಬರೆದು ನಮ್ಮ ಫನದವರಿಗೆ ಕೀರ್ತಿ ತಂದವರಿ
೧೬ ಗೆ ನಾವು ಕೊಟ್ಟೆವು ಫನಾ ನಡೆಸಿ ಬೇಕಾದ್ದು ಕೇಳಿರೆಂದು ಪತ್ರ ಬರೆದು ಕಳುಹಿಸಿದರು ಆಗ್ಗೆ ತನ್ನ ಮನಿಲ್ಲಿದ್ದ ಗರ್ಬ
೧೭ ಣಿ ಸ್ತ್ರೀಯನ್ನು ಕರೆತಂದು ತನ್ನ ವಿದ್ಯ ಬಲದಿಂದ ನೋಡಲಾಗಿಯಿ ರಥವು ನರಗರ್ಭ ಸ್ತ್ರೀಯನ್ನು ಬಲಿಯಾಗಿ ಕೇಳುತ್ತದೆ
೧೮ ಯೆಂಬುದಾಗಿ ಹೇಳಿದನು ಅಲ್ಲಿದ್ದವರು ಹುಲಿ ಹಾಲನ್ನಾದರೂ ತಂದು ಕೊಟ್ಟೇವು ಗರ್ಬನಿ ಸ್ತ್ರೀಯನ್ನು ಎಲ್ಲಿಂದ
೧೯ ತರಬೇಕು ಎಂದು ಹೇಳಿದರು ಆಗ್ಗೆ ಅವನು ತನ್ನ ಮನಿಯಲ್ಲಿದ್ದ ಗರ್ಬನಿ ಸ್ತ್ರೀಯನ್ನು ಆ ರಥಕ್ಕೆ ಬಲಿಯಾಗಿ
೨೦ ಕೊಟ್ಟನು ಆಗ್ಗೆ ನೆಲಕ್ಕೆ ಹತವಾಗಿರುವ ರಥವು ಕಲ ಕಲನೆ ನಗುತ್ತ ಎದ್ದು ನರವನ್ನು ಕಾಲಿಗೂ ಶಿರಸ್ಸಿಗೂ ಕಟ್ಟಿ
೨೧ ರಕ್ತವನ್ನು ಸಿದ್ಧಿಗೆ ತುಂಬಿ ಮುಂಡದಿಂದ ನೀರು ತರು
೨೨ ಹಸಿ ಹನ್ನೆರಡು ಅಯ್ಯನವರಿಗೆ ಕೇಳಿ ಆ ಗೊಲ್ಲರವನು ತನ್ನ ಮೂಗಿಗೆ ಬೆ
೨೩ ಳ್ಳಿಯ ಗಾಣ – ಬಂಗಾರ ಸರಪಳಿ ಹಾಕಿಕೊಂಡು ಲು ಕಂಚಿನ ರಥವನ್ನು (೨) ಬೀದಿಗಳಲ್ಲಿ
೨೪ ತಿರುಗಿಸಿ ಕಂಚುಗೊಲ್ಲರ ಸಿಂಗ ಪುಲಿ ಹಾಕಿಸಿ ರಥವನ್ನು ನಿಲ್ಲಿಸಿದ್ದಾನೆ (೪) ಸಮುದ್ರ ಮಧ್ಯದಲ್ಲಿರುವಂಥ
೨೫ ಫನದವರಿಗೆ ಕೀರ್ತಿ ತಂದಂಥ ಜಿರಿದು ಮಗನಾದ್ದರಿಂದ ಬಂಗಾರ ಮಯವಾಗಿ ನೆರವೇರಿಸಿದಂಥ ಗಾಂಭಿ
೨೬ ರ್ಯನಾದಂಥ ಇವನಿಗೆ ಏನು ಕೊಟ್ಟರೂ ಹೆಸರು ಉಳಿಯುವುದಿಲ್ಲ ಎಂದು ಹತ್ತು ಜನಗಳು ರಾಜ್ಯ ಕೊಟ್ಟ
೨೭ ರೆ ನಿಲ್ಲದು ಮಾನ್ಯರು ಹೆಸರು ನಿಲ್ಲದು ಎಷ್ಟು ದ್ರವ್ಯ ಕೊಟ್ಟರೂ ಹೆಸರು ನಿಲ್ಲದು ಇವನು ಮನುಷ್ಯನನ್ನು ಹುಲಿಯಾ
೨೮ ಗಿ ಮಾಡುವದುಂಟು ಹುಲಿಯನ್ನು ಮನುಷ್ಯನನ್ನಾಗಿ ಮಾಡುವದುಂಟು ಯಿಂಥವನಿಗೆ ಶಾಶ್ವತ ಬ್ರಹ್ಮಕಲ್ಪವಾ
೨೯ ಗಿ ಶಾಸನ ಪತ್ರವನ್ನು ಕೊಟ್ಟರೆ ಹೆಸರು ನಿಂತೀತು ಎಂದು ಆಲೋಚಿಸಿ ವನ್ನಿರಾಯರಿಗೆ ತೆರದ ಬಾಕಲಿಗೇಳರೂಪಾ
೩೦ ಯಿ ದೇವೇಂದ್ರ ಪಳಿಯರಿಗೆ (೪) ಪಂಚಾಳದವರಿಗೆ (೪) ಮತ್ತು ಸದರಿಯವರ ಮನಿಯಲ್ಲಿ ಶುಭಶೋಬನ ಕಾರ್ಯ
೩೧ ಆದರೆ ತಂದೆಯೆಂದು ಬಾಪಿಸಿ ಬಂದವನಿಗೆ ಮಕ್ಕಳಿಗೆ ಮಾನ ಮರ್ಯಾದೆಯಿಂದ ಕಳುಹಿಸಬೇಕು ನಗರಾ
೩೨ ಧಿಪತಿ ತೆರೆದ ಬಾಗಿಲಿಗೆ (೪) ರೂಪಾಯಿ ಪೂತಿನಗರ ದೊರಿಗೆ (೪) ಕವಾಡಿ ಗೊಲ್ಲರಿಗೆ (೪) ರೂಪಾಯಿ
೩೩ ವಾಲಿಯಾಕಿ ಪಟ್ಟ ಬದ್ರರೆಡಿಗ್ಗೆ (೪) ದೇವಾಂಗದವರ ಮಗ್ಗಕ್ಕೆ (೪) ರು ಮೇಟಿಗೇರಿಗೆ (೨) ರೂಪಾಯಿ
೩೪ ಮುತ್ತು ರಾಶಿಯವರಿಗೆ (೪) ರೂ ವೀರಕನ್ನಪ್ಪ ದೇವರಿಗೆ (೪) ರೂ ಮಾದಿಗರ ಕೊಡತಿಗೆ (೪) ರೂಪಾಯಿ
೩೫ ಅವರ ಗಲ್ಲಿಗೆ (೧) ಬ್ಯಾಟಿಕೊಡಬೇಕು ಇದು ಸತ್ಯವೆಂಬುದಾಗಿ (೪) ಸಮುದ್ರ ಮದ್ಯದಲ್ಲಿರುವಂಥಾ
೩೬ ಕಾಳಿಕಾ ಸಾಕ್ಷಿ ಕಮಟೇಶ್ವರಿ ಸಾಕ್ಷಿ ಭೂದೇವಿ ಸಾಕ್ಷಿ ಆಕಾಶವಾಗಿ ಸಾಕ್ಷಿ ಸೂರ್ಯ ಚಂದ್ರ ಸಾಕ್ಷಿ ಶಿವ ಕಂಚಿ ಕಾಂಬರೇಶ್ವರನ
೩೭ ಸನ್ನಿಧಿಗೆ ಕನಕಮಯವಾಗಿ ನೆರವೇರಿಸಿದಂಥಾ ಗಾಂಭಿರ್ಯನಾದ ಕೀರ್ತಿ ತಂದ ಜಿರಿದು ಮಗನು ಇವನಿಗೆ ಬಿರಿದು
೩೮ ಗಳನ್ನು ಕೊಡಬೇಕೆಂಬುದಾಗಿ (೧೦) ಜನಗಳು ಹೇಳುವಾಗ್ಗೆ ಮುತ್ತಿನ ಕಲ್ಕಿ ತುರಾಯಿ ಪಣೆಗೆ ಬಾಸಿಂಗ ಸುರ ಟ ಸುರೆಂಪಾ
೩೯ ನ ಎಂಬಿರಂಜ್ಞು ಯೊಕ್ಕಳಗಂಟ ಹುಲಿಚರ್ಮ ನಗಾರಿ ನವ ಬತ್ತು ಕಾಳೆಕರ್ನಿ ಡಮುರಗ ಮೊದಲಾದ ವಾದ್ಯಗಳು

೪೦ ಅಂಕುಶ ಖಡ್ಗ ಕೀಟಕ ಮಕರ ಮತ್ಸ ಸಿಂಹ ಶಾರ್ದೂಲ ಗಂಡಬೇರುಂಡ ಗಗನ ಮಂಜರಿ ಹನಮನಾಳ ಬೇತಾಳ ಕೀರ್ತಿ

೪೧ ಮುಖಂ ಪಂಚವರ್ನರ ಜಿಲ್ಲಿ ಒಂಟಿ ನಾಗಾರಿ ವೃಷಧ್ವಜ ಗರುಡ ಧ್ವಜ ಹಂಸಧ್ವಜ ಹಸ್ತಿಧ್ವಜ ಹಯಧ್ವಜ ಸಿಂಹಧ್ವಜ

೪೨ ಕಾಲಿಗೆ ಗಗ್ಗರಿ ಜಂಗು ನೆಲಸರವಿ ಗೆಜ್ಜೆ ಈ ಸರ್ವ ಬರಿದುಗಳನ್ನು ಯಿವನು ನಮ್ಮ ಘನದವರಿಗೆ ಕೀರ್ತಿ ತಂದದ್ದರಿಂದ

೪೩ ಮತ್ತು ನಮ್ಮ ಮಗನಾದ್ದರಿಂದ ಕನಕಮಯವಾಗಿ ನೆರವೇರಿಸಿದ ವೈರಿಯ ಕಾರ್ಯ ಗಾಂಭೀರ್ಯನಾದವನಿಗೆ

೪೪ ಮೇಲೆ ಬರೆದ ಸಾಮಾನುಗಳನ್ನು ಯವನಿಗೆ ಬಿರದಾವಳಿ ಕೊಟ್ಟು ಪಂಚಾನದವರಿಗೆ ಮಗನೆನಿಸಿಕೊಂಡಿದ್ದಾನೆ =

೪೫ ಅರಳಹುಟ್ಟಿ ಆದಿ ಜಾಂಬುಮುನಿಯಾಗಿ (೪) ಸಮುದ್ರದೊಳಗೆ (೪) ಜಡಿಯನ್ನು ಬಿಟ್ಟು ತಪಸ್ಸು ಕಾಲಕ್ಕೆ ಹಕ್ಕಿ ಪಕ್ಕಿ ಮರಿಯಬ್ಬಿಸು

೪೬ ವಾಗ್ಗೆ ಮುತ್ತಿನ ಶಂಕಿನಲ್ಲಿ ಬಸವೇಶ್ವರ ಹುಟ ಆ ಜದಿ ತುಳಿಯಿತು ಅದಕ್ಕು (೨) ಗೊರಚಿವಡೆದುಸಿಟಲಾದವು ಜಾಂಬುಮುನಿ ಅರ

೪೭ ಳಯ್ಯನ ಮಕ್ಕಳು (೭) ಮಂದಿ ಹುಟ್ಟಿದರು ಭೂಮಿಗೆ ಹೆಪ್ಪ ಕೊಟ್ಟರು ಜಾಂಬುನ ತಂದಿ ವಾಯದೆವತಾಯಿ ಕನಸಾಯಿ

೪೮ ಹೆಂಡರ ಹೆಸರು ಅಮರಕಲ್ಯಾನಿ ಗಿರ್ಜಕಲ್ಯಾನಿ ಲಗ್ನವಾಗು ಕಾಲಕ್ಕೆ ೧೨ ಕಾಲಿನ ಹಂದ್ರ ೫ ಎಲೆ ಕಳಸ ೧ ತನಿ ಇಟ್ಟು

೪೯ ಕೆಂದಕುದುರೆಯ ಮೇಲೆ ಹನ್ಮಂತ ದೇವರ ಗುಡಿಗೆ ಮೆರುಣಿಗೆ ಹೋಗು ಕಾಲಕ್ಕೆ ಗುಜ್ಜಲವ್ವನು ಲಗಾಂ ಓಡಿಬೇಕು ಪಾದ್ಯ

೫೦ ರಣಹಲಗೆ ೭ ಎತ್ತಿನ ಚಮ್ಮ ಹುರಿ ಕೊಯ್ದು ಅದರ ಪಪಮಾನ ತಿರುಗಿ ಹನ್ಮಂತ ದೇವರಿಗೆ ಬರಬೇಕು ಯಾ

೫೧ ರೂ ಅಡ್ಡಾಗ ಬಾರದು ಆದರೆ ಅತಿ ಕಷ್ಟಪಡುವಿರೆಂದು ಬರೆದ ವಚನ ಸಮಾಪ್ತಿ

**ಸಹಿ ಮಾಡಿದವರ ಹೆಸರು**

೧. ಕಂಬಾರ ವಿರಬದ್ರಪ್ಪಾ, ೨) ಬಡಿಗೇರ ಕಾಳಪ್ಪ, ೩) ಕಂಚುಗಾರ ಶೇಷಪ್ಪಾ, ೪) ಅಕ್ಕಸಾಲಿಗ ರಾಮಪ್ಪಾ, ೫) ಕಂಚಿ ರಾಮಪ್ಪಾ ಹಟಗಾರ, ೬) ಬೇಡರ ಕನಕಪ್ಪ, ೭) ಜಾಂಬುಮಲಪ್ಪಯಿಷ್ಟು ಜನರ ಸಹಿ ಈ ಮಸುಳ್ಗಂದವರಿಗೆ ಶಿಸುಹತ್ಯೆ, ಸ್ತ್ರೀಹತ್ಯೆ, ಗೋಹತ್ಯೆ, ಬ್ರಹ್ಮಹತ್ಯೆ ನಿಮ್ಮ ಮಕ್ಕಳ ಕೊಂದು ತಿಂದಿಷ್ಟು ಪಾಪ ಬಿರುವದು.

ಡಾ. ಶ್ರೀನಿವಾಸ್ ವ್ಹಿ. ಪಾಡಿಗಾರ*
ಆರ್. ರಂಗಸ್ವಾಮಿ**

# ಕುಂದನಹಳ್ಳಿಯ ಹೊಸ ಶಾಸನ

ಪೀಠಿಕೆ : ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ಕುಂದನಹಳ್ಳಿ ಗ್ರಾಮ ಕೆ.ಆರ್. ಪೇಟೆಯಿಂದ ವಾಯವ್ಯಕ್ಕೆ ೬ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದ ಈಶ್ವರ ದೇವಾಲಯದ ಮುಂಭಾಗದಲ್ಲಿ ನಮ್ಮ ಕ್ಷೇತ್ರಕಾರ್ಯದಲ್ಲಿ ಒಂದು ಹೊಸ ಶಾಸನ ಬೆಳಕಿಗೆ ಬಂತು. ಈ ಶಾಸನವು ೫೯ ಸೆ.ಮೀ. ಅಗಲ ಮತ್ತು ೧೨೫ ಸೆ.ಮೀ. ಎತ್ತರವಿದೆ.

ಎಪಿಗ್ರಾಫಿಯ ಕರ್ನಾಟಿಕ ೬ನೆಯ ಸಂಪುಟದಲ್ಲಿ ಕೆ.ಆರ್. ಪೇಟೆ ತಾಲೂಕಿನ ೧೧೧ಳ ಶಾಸನಗಳು ದಾಖಲೆಯಾಗಿವೆ. ಇದಾದನಂತರ ಇತರ ವಿದ್ವಾಂಸರ ಪ್ರಯತ್ನಗಳಿಂದ ೮ ಹೊಸ ಶಾಸನಗಳು ಗುರುತಿಸಲ್ಪಟ್ಟವು. ನಮ್ಮ ಕ್ಷೇತ್ರ ಕಾರ್ಯದಲ್ಲಿ ಇನ್ನೂ ನಾಲ್ಕು ಶಾಸನಗಳು ಹೊಸದಾಗಿ ಶೋಧಿತವಾದವು. ಈ ಹೊಸ ಶೋಧನೆಗಳಲ್ಲಿ ಹರಿನಹಳ್ಳಿಯಲ್ಲಿ ದೊರೆತ ೨, ಊಗಿನಹಳ್ಳಿಯಲ್ಲಿ ದೊರೆತ ೧ ಮತ್ತು ಕುಂದನಹಳ್ಳಿಯಲ್ಲಿ ದೊರೆತ ೧ ಶಾಸನ ಸೇರಿವೆ. ಈ ತಾಲೂಕಿನಲ್ಲಿ ಈವರೆಗೆ ವರದಿಯಾಗಿರುವ ಶಾಸನಗಳಲ್ಲಿ ಕುಂದನಹಳ್ಳಿ ಹೊಸ ಶಾಸನ ೧೨೬ನೆಯದು.

ಉತ್ತಮವಾಗಿ ತಯಾರಿಸಿರುವ ಶಿಲಾಫಲಕದ ಮೇಲೆ ಈ ಶಾಸನವನ್ನು ಬರೆದಿವೆ. ಆದರೆ ರಾಸಾಯನಿಕ ಕ್ರಿಯೆಗಳಿಂದಾಗಿ ಈಗ ಫಲಕ ಮಚ್ಚೆಗಳಿಂದ ತುಂಬಿದೆ. ಬರವಣಿಗೆ ಆಳವಾಗಿ ಸ್ಪಷ್ಟವಾಗಿದೆ. ಶಿಲಾಫಲಕದ ಮೇಲ್ಭಾಗದಲ್ಲಿರುವ ಶಿಲ್ಪದಲ್ಲಿ ಕುಳಿತ ನಂದಿ, ಪೂಜಾರಿ, ಶಿವಲಿಂಗ, ಆಕಳು-ಕರು ಮತ್ತು ಚಂದ್ರ ಸೂರ್ಯರ ಸಂಕೇತಗಳಿವೆ. ಈ ಶಿಲ್ಪವನ್ನು ಕಮಾನಿನೊಳಗೆ ಮಾಡಲಾಗಿದ್ದು ಅದರ ನೆತ್ತಿಯಲ್ಲಿ ಪೂರ್ಣಕಲಶವಿದೆ. ಕಮಾನಿನಗುಂಟ ಎರಡು ಸಾಲು ತ್ರುಟಿತ ಕನ್ನಡ ಅಕ್ಷರಗಳಿವೆ. ಇವೆರಡು ಸಾಲುಗಳನ್ನು ಬಿಟ್ಟು, ಫಲಕದ ಮೇಲೆ ಬರೆದಿರುವ ಮೊದಲ ೨೨ ಸಾಲುಗಳು (ಮೊದಲ ಸಂಸ್ಕೃತ ಪದ್ಯವನ್ನು ಹೊರತುಪಡಿಸಿ) ಕನ್ನಡ ಭಾಷೆ ಮತ್ತು ೧೨ನೇ ಶತಮಾನದ ಕನ್ನಡ ಅಕ್ಷರಗಳಲ್ಲಿವೆ. ಇದರ ಕೆಳಗೆ ಕೆಲವು ಸಾಲುಗಳು ತಮಿಳು ಅಥವಾ ಪೂರ್ವಭಾವಿ ಮಲೆಯಾಳಂ ಲಿಪಿಯಲ್ಲಿವೆ. ಪ್ರಸ್ತುತ ಶಾಸನ ಹೊಯ್ಸಳ ಬಿಟ್ಟಿಗ ಹೊಯ್ಸಳದೇವ, ಅಂದರೆ ವಿಷ್ಣುವರ್ಧನನ ಕಾಲದ್ದು. ಉಲ್ಲಿಖಿತ ತೇದಿ ಶಕವರ್ಷ ೧೦೩೫, ಅಂದರೆ ಕ್ರಿ.ಶ. ೧೧೧೩. ಉಳಿದ ವಿವರ ನಂದನ ಸಂವತ್ಸರ, ಆಶ್ವಿಜ ಶುದ್ಧ ೫.

ಛಾಯಾಚಿತ್ರದ ಸಹಾಯದಿಂದ ಶಾಸನವನ್ನು ಓದಲಾಗಿದ್ದು, ತಮಿಳು ಅಥವಾ ಪೂರ್ವಭಾವಿ ಮಲೆಯಾಳಂ ಭಾಗವನ್ನು ಇನ್ನೂ ಓದಲಾಗಿಲ್ಲ. ಈ ಲೇಖನ ಪ್ರಸ್ತುತ ಶಾಸನವನ್ನು ಪರಿಚಯಿಸುವ ಉದ್ದೇಶ ಹೊಂದಿದೆ. ಮಂಡ್ಯ ಜಿಲ್ಲೆಯ ಗ್ಯಾಸೆಟಿಯರಿನಲ್ಲಿ ಈ ದೇಗುಲದ ಸಮೀಪದ ಗಿಡಗಂಟಿಗಳ ಮಧ್ಯ ಶಾಸನವಿರಬಹುದೆಂದು ಸೂಚನೆಯಿದೆ. ನಮಗೆ ತಿಳಿದ ಮಟ್ಟಿಗೆ ಶಾಸನದ ಪಾಠ ಅಥವಾ ಸಾರಾಂಶ ಈವರೆಗೆ ಪ್ರಕಟವಾಗಿಲ್ಲ.

**ಶಾಸನದ ಸಾರಾಂಶ :** "ನಮಸ್ತುಂಗ..." ಇತ್ಯಾದಿ ಶಿವಸ್ತುತಿಯೊಂದಿಗೆ ಶಾಸನ ಆರಂಭವಾಗಿದೆ. ಮುಂದೆ ಹರ ಓಂ ನಮಶ್ಶಿವಾಯ ಶ್ರಿ ಕೈಳಾಸವಾಸಿ ಶ್ರೀ ಕೇದಾರದೇವರು..." ಎಂಬ ಉಲ್ಲೇಖವಿದೆ. ತದನಂತರ ದ್ವಾರಾವತೀ ಪುರವರಾಧೀಶ್ವರ, ಯಾದವಕುಲಾಂಬರದ್ಯುಮಣಿ, ಸಮ್ಯಕ್ತ್ವ ಚೂಡಾಮಣಿ, ಮಲಪರೊಳ್ಗಂಡ ಮುಂತಾದ ನಾಮಾವಳಿ ಗಳುಳ್ಳ ಮಹಾಮಂಡಳೇಶ್ವರ ತ್ರಿಭುವನಮಲ್ಲ ಬಿಟ್ಟಿಗ ಹೊಯ್ಸಳದೇವನು ರಾಜ್ಯವಾಳುತ್ತಿದ್ದ ಪ್ರಸ್ತಾಪವಿದೆ. ಉಲ್ಲೇಖಿತ ತೇದಿಯಂದು ಚವುಂಡಾಡಿಯಾದ (?) ದಸಪಾಲರು ಪಟ್ಟಣದ ಮೇಲಾಳ್ಕೆ ಹೊಂದಿದ್ದಾಗ, ಪಂಅಂಡಿ (?) ಸೆಟ್ಟಿಯ ಮಗ ಧರ್ಮಸೆಟ್ಟಿಯು ಧರ್ಮವಟ್ಟಣವೆಂದು ಊರಿಗೆ ಹೆಸರಿಟ್ಟು, ಅಲ್ಲಿ ಕೆನ್ನೆಗೆಜೆಯನ್ನು ಕಟ್ಟಿಸಿ ಅದಕ್ಕೆ ಮಲ್ಲಸಮುದ್ರ ವೆಂದು ಹೆಸರಿಟ್ಟು, ಅದರ ಕೀಳೇರಿಯಲ್ಲಿ ಮಹಾದೇವರನ್ನು ಪ್ರತಿಷ್ಠೆ ಮಾಡಿ, ಗುಡಿಯನ್ನು ಕಟ್ಟಿಸಿ, ಅದರ ಪೂರ್ವಕ್ಕಿದ್ದ ಗದ್ದೆ, ಐಯ್ದು ಹಾಗವನ್ನು ಬೆದ್ದಲೆ ಭೂಮಿಯನ್ನು ದೇವರಿಗೆ ನಿವೇದ್ಯಕ್ಕೆ ಕೊಟ್ಟನೆಂಬುದು ಶಾಸನದಲ್ಲಿರುವ ವಿಷಯ. ಅದೇ ಕೆರೆಯ ಕೀಳೇರಿಯಲ್ಲಿದ್ದ ಛತ್ರ ಮತ್ತು ಅದಕ್ಕೆ ನೀಡಿದ ಸಮೀಪದ ಕಾಡು (?) ಭೂಮಿಯ ಉಲ್ಲೇಖವೂ ಇದೆ.

* ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನಶಾಸ್ತ್ರ ವಿಭಾಗ, ಕ.ವಿ.ವಿ. ಧಾರವಾಡ.
** ಆಯ್ಕೆ ಶ್ರೇಣಿ ಇತಿಹಾಸ ಉಪನ್ಯಾಸಕರು, ಮಹಾರಾಣಿ ಮಹಿಳಾ ಕಲಾ ಮತ್ತು ವಾಣಿಜ್ಯ ಕಾಲೇಜು, ಮೈಸೂರು.

ಇದಾದ ತರುವಾಯ ಸಾಮಾನ್ಯವಾಗಿ ಶಾಸನಗಳಲ್ಲಿ ಕಾಣುವ ಕನ್ನಡ ಮತ್ತು ಸಂಸ್ಕೃತ ಫಲಶ್ರುತಿಯಿದೆ. ತಮಿಳು ಅಥವಾ ಪ್ರಾಚೀನ ಮಲೆಯಾಳಂ ಭಾಗದಲ್ಲಿ ಪ್ರಾಯಶಃ ಇದೇ ವಿಷಯವಿರಬಹುದು. ಉಲ್ಲಿಖಿತ ಶೆಟ್ಟಿಗಳ ಹೆಸರು ಗಮನಿಸಿದರೆ ಅವರು ಕನ್ನಡೇತರ ಪ್ರದೇಶದವರೆಂದು ಅನಿಸುತ್ತದೆ. ಮಲೆಯಾಳಿಗಳಾಗಿರಬಹುದು. ಧರ್ಮಸೆಟ್ಟಿಯು 'ಮಲೆಯಾಂಡಿಯಾದ ಸಿವಪಾದಧೂಳಿ' ಎಂದು ವರ್ಣಿತನಾಗಿರುವದರಿಂದ 'ಮಲೆಯಾಳಂಪಂಡಿತ'ನ ಶಿಷ್ಯನಾಗಿರುವ ಸಾಧ್ಯತೆಯಿದೆ. ಶಾಸನದ ವಿವರವಾದ ಅಧ್ಯಯನ ಇನ್ನೂ ಆಗಬೇಕಿದೆ. ವಿಷ್ಣುವರ್ಧನನ ಹೊಸತೊಂದು ಶಾಸನವಾಗಿರುವದಿಂದ ಇದರ ಮಹತ್ವ ಹೆಚ್ಚಿದೆ.



**ಶಾಸನದ ಪಾಠ**

೧ [ನ]ಮಸ್ತುಂಗ ಸಿವಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾ

೨ [ಯ]ಸಂಭವೇ ॥ ಹರ ಓಂ ನಮಸ್ಸಿವಾಯ ಶ್ರೀಕೈಳಾಸವಾಸಿ ಶ್ರೀಕೇದಾರದೇವರು ಶ್ರೀ . . ಭಿಮುತ್ತಸ್ವಾ[ಮಿ?]

೩ @ ಸ್ವಸ್ತಿ ಸಮಧಿಗತಪಂಚಮಹಾಶಬ್ದಮಹಾ ಮಂಡಳೇಶ್ವರಂ ದ್ವಾರಾವತಿ ಪು

೪ ರವರಾಧೀಶ್ವರಂ ಯಾದವಕುಲಾಂಬರದ್ಯುಮಣಿ ಸಂಮ್ಯಕ್ತಚೂಡಾಮ

೫ ಣಿ ಮಲಪರೊಳ್ಗಂಡಿತ್ಯನೇಕ ನಾಮಾವಳಿಸಮಾಳಂಕೃತ ರಪ್ಪ ಶ್ರೀಮನ್ಮ

೬ ಹಾಮಂಡಳೇಶ್ವರಂ ತ್ರಿಭುವನಮಲ್ಲ ಬಿಟ್ಟಿಗಹೊಯ್ಸಳ ದೇವರು ಸು

೭ ಖಸಂಕತಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ [ಚ] ವುಂಡಾಂಡಿಯಾದ ದಶಪಾಲ

೮ ರು . ಪಟ್ಟಣದ ಮೇಲಾಳ್ಕೆಯಂದು ಸಖವರಿಷ ಸಾಸಿರದ ಮೂವತ್ತಯ್ದ

೯ ನೆಯ ನಂದನ ಸಂವತ್ಸರದ [ಆಸ್ವಿ]ಜ ಸು ॥ ೫ ॥ ಸು । ಸ್ವಸ್ತಿ ಸಮಸ್ತಪ್ರಸಸ್ತಿ

೧೦ ಸಹಿತರಪ್ಪ ಶ್ರೀಮತು[ಪಂ?]ಅಂಡಿಸೆಟ್ಟಿಯರ ಮಗಂ ಸಮಸ್ತಗುಣಸಂಪನ್ನರ

೧೧ ಪ್ಪ ಶ್ರೀಮತು ಮಲೆಯಾಂಡಿಯಾದ ಸಿವಪಾದಧೂಳಿ ದೇಸಿಯಭಯವಚನ

೧೨ ಮಾಣಿಕ ಧಂರ್ಮ್ಮಸೆಟ್ಟಿ ಧರ್ಮ್ಮ . . ರಂಡನಾಗಿಡೆಸೆ ಧರ್ಮ್ಮವಟ್ಟಣ @

೧೩ ದಲು ಕನ್ನೆಗೆಱೆಯ ಕಟ್ಟಿಸಿ ಮಲ್ಲಸಮುದ್ರವೆಂದು ಪೆಸರನಿಟ್ಟು

೧೪ ಕೀಳೇರಿಯಲು ಮಹಾದೇವರ ಪ್ರತಿಷ್ಠೆ ಮಾಡಿ ಕ[ಳಗೆ?] ನಿರ್ಬಾಣವಾಗಿರೆ ದೇ

೧೫ ಗುಲವನೆತ್ತಿಸಿ ದೇವರಿಗೆ ನೆಟ್ಟನೆ ಮೂಡಲು ದೇವಸ್ವಕ್ಕೆ ಬಿಟ್ಟ ಗರ್ದ್ದೆ [ಅ]ಯ್ದುಂ @

೧೬ ಹಾಗಂ . ಳ ಬೆದ್ದಲೆ ಮೂವತು ಕೊಳಗ . ದೇವರಿಗೆ ನಿತ್ಯ ನಿವೇದ್ಯವಂ ಕೊಟ್ಟ

೧೭ ಸದಾ ಕಾಲ ಇ ಕೆಱೆಯ ಕೀಳೇರಿಯ ಚತ್ರದವಟ್ಟವಂ ಕೆಳಗೆ ಕಾಡುಮದು ಕೊ

೧೮ ಟ್ಟೀಧರ್ಮ್ಮಮಂ ಸಲ್ವುವರಿ . . . . . . ಕಾವಪುರುಷಂ ಗಾಯು

೧೯ ಜಯಶ್ರೀಯುಮಕ್ಕು . . . . . ಗೆ ವಾಣರಾಸಿ

೨೦ ಯೊಳು ಕೋಟಿ ಮುನೀಂದ್ರರಂ . . . . ಬ್ರಹ್ಮೇತಿಯುಂ ಸಾಸಿ

೨೧ ರ್ವರು ಸಾಱಿದಪುದೀ ಸೈಳಾಕ್ಷರಂ ಧಾತ್ರಿಯೊಳು [॥*] ಸ್ವದತ್ತಂ ಪರದತ್ತಂ ವಾ ಯೋ ಹ

೨೨ ರೇತ ವಸುಂಧರಾಂ . . . .

ಇಲ್ಲಿಂದ ಮುಂದೆ ತಮಿಳು/ಪೂರ್ವಭಾವಿ ಮಳೆಯಾಳಂ ಬರಹವಿದೆ. ಶಾಸನದ ಪಾಠವನ್ನು ಛಾಯಾಚಿತ್ರದ ಸಹಾಯದಿಂದ ತಯಾರಿಸಿದೆ.

(ಕೃತಜ್ಞತೆಗಳು : ಕುಂದನಹಳ್ಳಿಯ ಗ್ರಾಮಸ್ಥರು ಈ ಶಾಸನದ ಅಧ್ಯಯನಕ್ಕೆ ಬಹಳಷ್ಟು ಸಹಕರಿಸಿದ್ದಾರೆ. ಅದಕ್ಕಾಗಿ ಅವರಿಗೆಲ್ಲ ವಂದನೆಗಳು ಸಲ್ಲುತ್ತದೆ.)

ಡಾ. ಜಗದೀಶ *

# ಹೊಂಬುಚ ಸಾಂತರರ ಎರಡು ಹೊಸ ಶಾಸನಗಳು

ಶಿವಮೊಗ್ಗ ಜಿಲ್ಲೆ ಸಾಗರ ತಾಲೂಕಿನ ಬೇಸೂರು ಗ್ರಾಮದಲ್ಲಿ ಮತ್ತು ಹೊಸನಗರ ತಾಲೂಕು ಅಮೃತ ಗ್ರಾಮದ ಬಳಿ ಇರುವ ಸುಣ್ಣದ ಬಸ್ತಿಯ ಗೋಡೆಯಲ್ಲಿ ಹೊಸ ಶಾಸನಗಳು ಪತ್ತೆ ಆಗಿವೆ.

**ಬೇಸೂರು, ಸಾಗರ ತಾಲೂಕು**

**ಮುಂಭಾಗ**

೧--ಸ್ವಸ್ತ್ಯ [ನವದ್ಯ ದರ್ಶನ] ಮಹೋಗ್ರಕುಲತಿಲ

೨--ಕ ನಯೆ ಪ್ರತಾಪ . ನ್ನ . ಚ್ಚರಂ . .

೩--ದನೊಲಂ ಮಲೆಗಳಜಾಜ್ಯಕ್ರಿರದಿಪ್ಪಿರಂ

೪--ಶ್ರೀಮತ್ ನನ್ನಿಸಾನ್ತರಂ ಕಲಿಯಮ್ಮ ಗೋಪಸೆ

೫--ಟರ ಕಿಱುದೆಱಿಂ ವೊಗೊಡಗಿಸಿಱಿ

೬--ಯ ಈಯೊಳಗಾಗಿ ರಣೇಶ್ವರ ಸಿದ್ದಿಯಾ

೭--ಗೆ ಚನ್ದ್ರಸ್ಯಯ್ಯ ಬರಂ ಪುತ್ರಯ್ಯನ ಕನ್ನರ ದೇ

೮--ವ ನಿನ್ಮಿತ್ಯಟಕೆಪಂ ನನ್ನಿಸಾನ್ತರಂ ಕೊಟು ಕ

೯--ಲಂ ನಿಟಿಸಿದ ಯಿದಂ ಕಾದಾತಂ ಸಾಯಿಱ ಕ

೧೦--ವಿಲೆಯಂ ದಾನಂಗೊಟ್ಟ ಫಲಂ ಮಟಿವು ಕೊಂ

೧೧--ನ್ದಾತಂ ಸಾಯಿರ ಕವಿಲೆಯ ಕೊನ್ದ ಪಾತಕ

೧೨--ಸೇನಬೋವ ಜಕಯ್ಯ ಬರೆದಾತ

೧೩--ಕಮ್ಮಱ ಸಾನ್ತಿಗಂ ಕಲಳಕ್ಷರಂ ಬೋ . .

೧೪--ತ ತದವಾಜ ಕಲ್ಲಣ ಬಾಗ . ಗಿಸಿ ಯಂ

೧೫--ಕಟದಾ

**ಹಿಂಭಾಗ**

೧೬-- . . . . . . . . . . .

೧೭-- ಕಲಿಯಮ್ಮ ನಿರವ

೧೮-- ಸಂಪಾತ ದತ್ತ । ವಾನ್ ।

೧೯--ಕನ್ನರದೇವನಂ . . . ಸ ವ್ರಿತ್ತಿಯಂ ಕೊ (ಟ್ಟರು. .)

೨೦--ಗೆ ಗೊಟ್ಟನಾತನಿ ಬಿಱಕೆ ಕಲಿಯಮ್ಮಂನ ಕ

೨೧--ನಯ್ಯಂಗಂ ಕೊಟ್ಟಂ ಮಂ [ಗ] ಳ

ಬೇಸೂರು ಗ್ರಾಮದ ಶಾಸನವು ರಾಷ್ಟ್ರಕೂಟ ಅರಸ ಮೂರನೆಯ ಕೃಷ್ಣನ ಕಾಲದಲ್ಲಿ ಹೊರಡಿಸಲಾಗಿದ್ದು ನನ್ನಿ ಸಾನ್ತರನನ್ನು ಉಲ್ಲೇಖಿಸಿದೆ. ಇದೇ ತಾಲೂಕು ಹಿರೆಮತ್ತೂರು ಗ್ರಾಮದ ಸರ್ವೆ ನಂ ೮೩ ರಲ್ಲಿರುವ ಕಾನಿನಲ್ಲಿನ ಕ್ರಿ.ಶ. ೯೮೫ರ ಶಾಸನದಲ್ಲಿ ಕೊಟಿಯಮ್ಮನ ಅಳಿಯ ಚಪ್ಪಯ್ಯನ ಮಗ ಪುನ್ನಗೋಸಾಸಿಯ ಮತ್ತು ಜಕ್ಕಯ್ಯನ ಉಲ್ಲೇಖವಿರುವ ಶಾಸನದ ಅಕ್ಷರಗಳು ತ್ರುಟಿತವಾಗಿವೆ. ಕೊಟಿಯಮ್ಮ ಮತ್ತು ಕಲಿಯಮ್ಮ ಒಂದೇ ಆಗಿರುವ ಸಾಧ್ಯತೆ ಇದೆ. ಅಲ್ಲಿನ ಜಕ್ಕಯ್ಯ ಈಗಿನ ಶಾಸನೋಕ್ತ ಸೇನಬೋವ ಆಗಿದ್ದಾನೆ. ಪ್ರಸ್ತುತ ಶಾಸನದಲ್ಲಿ ಕನ್ನರನ ಉಲ್ಲೇಖವಿರುವ ಕಾರಣ ಈ ಶಾಸನವನ್ನು ಮೂರನೆಯ ಕನ್ನರದೇವನ ಕ್ರಿ.ಶ. ೯೩೯ ರಿಂದ ೯೬೭ ಕ್ಕೆ ಸೇರಿಸಬಹುದಾಗಿದೆ.

**ಸುಣ್ಣದ ಬಸ್ತಿ ಸಿದ್ದಾಪುರ (ಅಮೃತ), ಹೊಸನಗರ ತಾಲೂಕು**

೧. ಸ್ವಸ್ತಿ ಶ್ರೀ ಸಾನ್ತರ ಕಲ್ಲದುಗ್ಗಾ ಆಗ ॥

೨. ಚನ್ದ್ರಜಿನಾಲಯ . . ನೆತ್ತಿದ

ಸುಣ್ಣದ ಬಸ್ತಿಯ ಶಾಸನದಲ್ಲಿ ಕಲ್ಲದುಗ್ಗವೊಂದರ ಪ್ರಸ್ತಾಪವಿದೆ. ಪ್ರಾಯಶಃ ಕಲ್ಲುದುರ್ಗವನ್ನು ಗೆದ್ದ ಸಾನ್ತರ ದೊರೆಯೊಬ್ಬ ಚಂದ್ರನಾಥ ಜಿನಾಲಯ ಕಟ್ಟಿಸಿದ ಉಲ್ಲೇಖವಾಗಿರಬೇಕು. ಈ ಶಾಸನವು ಗರ್ಭಗೃಹದ ಒಳಭಾಗದಲ್ಲಿದೆ. ದೇವಾಲಯವು ಬರೀ ಗರ್ಭಗೃಹ ಹೊಂದಿದ್ದು, ಅಲ್ಲಿ ಬೆಳೆದಿರುವ ಮರದಿಂದ ಶಿಖರವು ಹಾಳಾಗಿ ಕೆಳಗೆ ಬಿದ್ದಿದೆ. ಶಾಸನವು ೯ನೆಯ ಶತಮಾನದ ಪೂರ್ವಾರ್ಧಕ್ಕೆ ಸೇರಿಸಬಹುದಾಗಿದೆ.

**ಹೊಸನಗರ ತಾಲೂಕು ಹುಂಚ ಗ್ರಾಮದ ಗುಡ್ಡದ ಬಸ್ತಿ ಹೊರಗೋಡೆ ಮೇಲೆ ಶಾಸನ ನಂ ೬೦**

ಸಾಲು ೧೫--ಕಷ್ಟವಿಟ್ಟಿ ಬಿದಿರನ್ತೆ ಕುಲ ಕ್ಷಯಮಾಗುಗಂ

ಹೊಸನಗರ ತಾಲೂಕು ಹುಂಚ ಗ್ರಾಮದ ಗುಡ್ಡದ ಬಸ್ತಿ ಹೊರಗೋಡೆ ಮೇಲೆ ಶಾಸನ ನಂ ೬೦ ಶಾಸನದಲ್ಲಿ ಬಿದಿರು

* ಎಂ.ಹೆಚ್. ಅಗಸಿಬಾಗಲವರ, # ೬೬, ೧ನೇ ಅಡ್ಡರಸ್ತೆ, ಹೊಸಮನೆ ಬಡಾವಣೆ, ಶಿವಮೊಗ್ಗ – ೫೭೭ ೨೦೧.

ನಾಶದ ಉಲ್ಲೇಖವಿದೆ. ಇದನ್ನು ಶಾಸನವೊಂದರ ಶಾಪಾಶಯದಲ್ಲಿ ಬಳಸಿರುವುದು ವಿಶೇಷವಾಗಿದೆ. ಮಲೆನಾಡಿನಲ್ಲಿ ಬಿದುರು ಹಿಂಡು ಸುಮಾರು ೬೦-೭೦ ವರ್ಷಕ್ಕೊಮ್ಮೆ ಹೂ ಬಿಟ್ಟು ಬಿದರ ಬೀಜ (ಬಿದಿರಕ್ಕಿ) ಉದುರಿಸಿ ನಾಶ ಹೊಂದುತ್ತದೆ. ಈ ಪ್ರಕ್ರಿಯೆಯನ್ನು ಸ್ಥಳೀಯರ ಕಟ್ಟೆರೋಗವೆಂದು ಗುರ್ತಿಸುತ್ತಾರೆ. ಕಟ್ಟೇರೋಗ ಮಲೆನಾಡಿನಲ್ಲಿ ಬಾಳೆಯ ತೋಟಕ್ಕೆ ಮತ್ತು ಬಿದಿರು ಹಿಂಡಿಗೆ ಬರುವುದು ಸ್ವಾಭಾವಿಕ. ಆಗ ಇಡೀ ಬಾಳೆ ತೋಟ ಮತ್ತು ಬಿದಿರು ಹಿಂಡು ಸಂಪೂರ್ಣ ನಾಶವಾಗುತ್ತದೆ. ಹೊಸ ಬಿದಿರು ಹುಟ್ಟುವುದಕ್ಕೆ ಕನಿಷ್ಠ ೩-೪ ವರ್ಷ ಬೇಕಾಗುತ್ತದೆ. ಈ ಸಮಯದಲ್ಲಿ ಬಿದಿರೇ ಕಾಣದಂತಾಗುತ್ತದೆ. ಪ್ರಾಯಶಃ ಇದನ್ನು ಕಂಡ ಆಗಿನ ಶಾಸನ ರೂವಾರಿ ಇದನ್ನು ಶಾಪಾಶಯದಲ್ಲಿ ಬಳಸಿದ್ದಾನೆ. ಇದು ಹಳೆ ಬಿದಿರು ಹೊಸ ಬಿದಿರಿಗೆ ಅನುವು ಮಾಡಿಕೊಡುವ ಸ್ವಯಂ ಕೆಲಸವಾದರೂ ಅದು ಪ್ರಾಕೃತಿಕವಾಗಿ ನಾಶವಾದಂತೆ ತೋರುತ್ತದೆ. ಹೀಗಾಗಿ ಇದನ್ನು ಶಾಸನದಲ್ಲಿ ಶಾಪಾಶಯದ ರೂಪದಲ್ಲಿ ಅಳವಡಿಸಿರಬೇಕು. ಈ ವರ್ಷ ಬಿದಿರ ಕಟ್ಟೇರೋಗ ಬಂದಿರುವುದನ್ನು ಗಮನಿಸಬಹುದಾಗಿದೆ.

**ಅದೇ ಗ್ರಾಮದ ಗುಡ್ಡದಬಸ್ತೀ ಹೊರಗೋಡೆ ಮೇಲೆ**
**ಪ್ರಮಾಣ ೨'೬' X ೨'೫ (ಎ.ಕ. ಸಂ. ೮, ಹೊಂಬುಚ ೬೦)**

[೧]ಸ್ವಸ್ತ್ಯನವದ್ಯರ್ಕನಮಹೋಗ್ರಕ
[೨]ಲತಿಲಕನಯವ್ರಕಟಸಂಪನ್ನಂವರ
[೩]ಚಕ್ರಗಣ್ಡಂಗೊಣ್ಡಂಬಲ್ಲಾತಂ ಕಾರ್ಮ್ಮುಕರಾಮ ಶ್ರೀ
[೪]ಮತ್ತೂಲಾಪುರುಷ ವಿಕ್ರಮಾದಿತ್ಯಶಾನ್ತರಂ ಕವರ್ಷಮೆ
[೫]ಣ್ಬುನೂಱಿಪ್ಪತ್ತನೆಯ ವರ್ಷಂಪ್ರವರ್ತ್ತಿಸುತ್ತಿರೆ ಶ್ರೀಮತ್
[೬]ಕೊಂಡಕುಂದಾನ್ವಯದ ಮೋನಿಸಿದ್ಧಾಂತಭಟಾರರ್ಗ್ಗೆಕಲ್ಲ
[೭]ಬಸದಿಯ ಮಾಡಿಸಿ ಯದಕ್ಕವೊಂಬುಳ್ಚದಮ್ಬಳ್ಳಣೊ
[೮]ಡಗೆಟಿಯ ಕೆಟಿಗಣ ಕುಂಭಾರರೆಬಯಲೂ
[೯]ಮೇಗಣಪಿರಿಯವರವರಿರುವೊಱಗೊ
[೧೦]ಮಹಾಪಾತಕಮುಮಂಗೆಯ್ವೊನ.....
[೧೧]ದೊಳ್ಬಿಟ್ಟುಬಳಿಕ ಪಞ್ಚವಟದೊಳ್ಬುವಾಗಿ ನಮೆ
[೧೨]ಗುಂ ಇಷ್ಟನೊರ್ವ್ವನಧಿದೇವತಗೆನ್ತೊ ಸದಿತ್ತುದಂ
[೧೩]ಮಷ್ಟನೊರ್ವ್ವನದಱದಲಮಂತವತಿಂಬವಂ
[೧೪]ಸಿಷ್ಟಿಮೇಲೆವರಾತ್ಮನೆಟಿನ್ದೊಡಗಾವುಂಡಂ
[೧೫]ಕಷ್ಟೆವಿಙ್ದಬೆದಿರನ್ತೆ ಕುಲಕ್ಷಯಮಾಗುಗುಂ

ಎಂ.ಎಸ್. ಪ್ರಭಾಕರ್*

# ಮೂರ್ತಿಶಿಲ್ಪ - ವಿಷಯಾನುಪೂರ್ವಿ ಟಿಪ್ಪಣಿಗಳು

ಬಹುದೇವತೋಪಾಸನೆ, ವಿಗ್ರಹಾರಾಧನೆ ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗ. ಇದು ಮೂರ್ತಿ ಶಿಲ್ಪದ ಅಧ್ಯಯನಕ್ಕೆ ಅಡಿಪಾಯವನ್ನೊದಗಿಸಿದೆ. ವೈಯಕ್ತಿಕ ಹಿನ್ನೆಲೆಯಲ್ಲಿ ರೂಪುಗೊಂಡ ಉಪಾಸನಾ ಪದ್ಧತಿ ಸಾಮಾಜಿಕವಾಗಿ ಮನ್ನಣೆ ಗಳಿಸಿ, ದೇವಾಲಯಗಳ ಬೆಳವಣಿಗೆಗೆ ಕಾರಣ ಮೂಲವೆನಿಸಿತು. ದೇವಾಲಯಗಳು ಸ್ವಸ್ಥ ಸಮಾಜದ ಭಾಗವೆನಿಸಿ, ಇದರೊಂದಿಗೆ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಗಳೂ ಸೇರಿ, ದೇವಾಲಯ ಸಂಸ್ಕೃತಿಗೆ ನಾಂದಿಯಾಯಿತು. ದೇವಾಲಯಗಳು ಬೆಳೆದಂತೆ ಆಗಮಶಾಸ್ತ್ರ, ಪ್ರತಿಮಾಶಾಸ್ತ್ರ, ಪ್ರತಿಮಾ ಮಾನಶಾಸ್ತ್ರಗಳೂ ಬೆಳೆದವು. ಇವುಗಳ ಅಧ್ಯಯನದಲ್ಲಿ ವಿಶ್ವಸೃಷ್ಟಿ, ಜೀವಸೃಷ್ಟಿ, ದೈವಸೃಷ್ಟಿಗಳನ್ನೂ ಗುರುತಿಸಬಹುದಾಗಿದೆ. ದೇವರು ಹಾಗೂ ದೈವತ್ವದ ತಾತ್ವಿಕ ಚಿಂತನೆಗಳನ್ನೂ ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಪರಿಶೀಲಿಸಬಹುದಾಗಿದೆ.

ಆಗಮಶಾಸ್ತ್ರಗಳಲ್ಲಿ ಮೇಲ್ಕಂಡ ವಿಚಾರಗಳ ಪ್ರಸ್ತಾಪವಿದೆ. ಆದರೆ ಮೂಲ ಸ್ರೋತಸ್ಸಿನ ವಿಷಯ, ವಿವೇಚನೆಗಳು ಹೆಚ್ಚು ವಿಶದವಾಗಿ ಚರ್ಚೆಗೊಳಗಾಗಿಲ್ಲ. ಆಗಮಗಳೆಂದರೆ ದೇವಾಲಯ, ದೇವಾಲಯ ವಾಸ್ತುರಚನೆ, ದೇವತಾಶಿಲ್ಪ, ಸ್ವೀಕೃತ ರೂಪ-ಲಾವಣ್ಯ, ಆರಾಧನಾ ವಿಧಿ-ವಿಧಾನ, ಪ್ರತಿಷ್ಠಾಪನಾ ವಿಧಿ, ಉತ್ಸವ ಇತ್ಯಾದಿ ಹಲವು ಬಗೆಯ ವಿವರಗಳನ್ನೊಳಗೊಂಡಿದೆ. ಆಗಮಪದಕ್ಕೆ ದೈವಪರವಾದ ಜನಪ್ರಿಯ ವಿವರಣೆಯೊಂದು ಹೆಚ್ಚು ಪ್ರಚಲಿತದಲ್ಲಿದೆ.

**ಆಗತಂ ಪಂಚವಕ್ತ್ರಾಸ್ತು ಗತಂ ಚೈವ ಗಿರಿಜಾನನೇ**
**ಮತಂ ಚ ವಾಸುದೇವಸ್ಯ ತಸ್ಮಾದಾಗಮಮುಚ್ಯತೇ**[1]

ಆಗಮಗಳ ರಚನೆ ಅಪೌರುಷೇಯ ಎಂದು ಸೂಚಿಸುವುದೇ ಇದರ ಗುರಿಯಾಗಿದ್ದು, ದೈವಪರ ಹೇಳಿಕೆಯನ್ನು ಈ ಶ್ಲೋಕ ಸಮರ್ಥಿಸುತ್ತದೆ. ಆಗಮಗಳೆಂದರೆ ತದನಂತರ ಬಂದದ್ದು ಎಂದಷ್ಟೇ ಅರ್ಥ. ಇಂದು ಲಭ್ಯವಿರುವ ಸಂಸ್ಕೃತ ಸಾಹಿತ್ಯದಲ್ಲಿ ವೇದಗಳಿಗೆ ಅತಿಪ್ರಾಚೀನ ಸ್ಥಾನ ಲಭ್ಯವಿದೆ. ತದನಂತರದ ಸ್ಥಾನ ಆಗಮಗಳಿಗೆ ಸಿಕ್ಕಿದೆ. ವೈದಿಕ ವಾಙ್ಮಯ ಹಾಗೂ ಆಗಮಶಾಸ್ತ್ರಗಳ ವಿಚಾರದಲ್ಲಿ ಆಗಮಗಳ ವಿವರಣೆಗಳು ಹೆಚ್ಚು ಜನಪ್ರಿಯ. ವೇದಗಳಲ್ಲಿರುವ ವಿಷಯಗಳು ಸುಲಭವಾಗಿ ಗ್ರಾಹ್ಯವೆನಿಸಿಲ್ಲ. ಆಗಮಗಳಿಗೆ ವೈದಿಕ ಮೂಲವನ್ನು ಗುರುತಿಸಬಹುದು. ಆಗಮಗಳ ವಿಧಿವಿಧಾನಗಳು, ಆಚರಣೆಗಳು ಹೆಚ್ಚು ಜನಪರ ಎನ್ನಿಸಿವೆ.

ಪಾದ್ಮಸಂಹಿತೆ ಮತ್ತು ಶಬ್ದಕಲ್ಪದ್ರುಮ ಗ್ರಂಥಗಳು ಆಗಮಗಳ ಲಕ್ಷಣಗಳನ್ನು ಗುರುತಿಸಿವೆ.

**ಸೃಷ್ಟಿಶ್ಚ ಪ್ರಲಯಶ್ಚೈವ ದೇವತಾನಾಂ ತಥಾರ್ಚನಂ**
**ಸಾಧನಂ ಚೈವ ಸರ್ವೇಷಾಂ ಪುರಶ್ಚರಣ ಮೇವಚ**
**ಷಟ್ಕರ್ಮಸಾಧನಂ ಚೈವ ಧ್ಯಾನಯೋಗಶ್ಚತುರ್ವಿಧಃ**
**ಸಪ್ತಭಿರ್ಲಕ್ಷಣೈರ್ಯುತಂ ತ್ವಾಗಮಂ ತದ್ವಿದುರ್ಬುಧಃ**[2]

ಸೃಷ್ಟಿ, ಪ್ರಳಯ, ದೇವತಾರ್ಚನೆ, ಮಂತ್ರ ಸಾಧನೆ, ಪುರಶ್ಚರಣ, ಷಟ್ಕರ್ಮ ಸಾಧನೆ, ಯೋಗಸಾಧನೆ ಇವು ಆಗಮಗಳ ವಿಷಯವೆನಿಸಿವೆ. ಈ ಎಲ್ಲಾ ವಿಷಯಗಳನ್ನೊಳಗೊಂಡ ಆಗಮ ಗ್ರಂಥಗಳು ಇಲ್ಲವೆಂದೇ ಗುರುತಿಸಬಹುದು. ಸಾಮಾನ್ಯವಾಗಿ ಆಗಮ ಗ್ರಂಥಗಳಲ್ಲಿ ಜ್ಞಾನ, ಯೋಗ, ಕ್ರಿಯಾ, ಚರ್ಯಾ ಎಂಬ ನಾಲ್ಕು ಭಾಗಗಳಿವೆ.

**ಜ್ಞಾನ ಯೋಗ ಕ್ರಿಯಾ ಚರ್ಯಾ ಚತುಷ್ಪಾದ ಸಮನ್ವಿತಂ**[3]

ಇವುಗಳಲ್ಲಿ ಹೆಚ್ಚಿನ ಮಾಹಿತಿ ಲಭ್ಯವಿರುವುದು ಕ್ರಿಯಾ ಹಾಗೂ ಚರ್ಯಾಭಾಗಗಳಲ್ಲಿ ಮಾತ್ರ. ವಿಗ್ರಹಾರಾಧನೆ, ಬಹುದೇವತೋಪಾಸನೆಗಳು ಪ್ರಾಮುಖ್ಯತೆ ಪಡೆದು ಈ ಭಾಗಗಳು ವಿಸ್ತರಿಸಲ್ಪಟ್ಟವು. ಇನ್ನಿತರ ಭಾಗಗಳು ಗೌಣವೆನಿಸಿತು. ಜ್ಞಾನಪಾದ ಅಥವಾ ಜ್ಞಾನಕಾಂಡದ ವಿಷಯ ನಿರೂಪಣೆ ಬ್ರಹ್ಮಜ್ಞಾನವನ್ನು ಕುರಿತದ್ದು. ಇದರೊಂದಿಗೆ ಸೃಷ್ಟಿ, ಸ್ಥಿತಿ, ಲಯಗಳ ವಿಚಾರವನ್ನೂ, ಯೋಗಪಾದದಲ್ಲಿ ಯೋಗವಿಚಾರಗಳನ್ನೂ ಚರ್ಚಿಸಲಾಗಿದೆ. ಈ ಭಾಗಗಳು ಕ್ರಿಯಾ ಹಾಗೂ ಚರ್ಯಾಪಾದಗಳಿಗೆ ಹೋಲಿಸಿದಲ್ಲಿ ತೀರಾ ಚಿಕ್ಕವು.

ಈಶಾನ ಶಿವಗುರು ಪದ್ಧತಿ ಗ್ರಂಥದಲ್ಲಿ, ಸಾಮಾನ್ಯಪಾದ, ಮಂತ್ರಪಾದ, ಕ್ರಿಯಾಪಾದ ಮತ್ತು ಯೋಗಪಾದಗಳಿವೆ. ಇವುಗಳಲ್ಲಿ ಮಂತ್ರಪಾದ ಮತ್ತು ಕ್ರಿಯಾಪಾದಗಳೇ ಪ್ರಾಧಾನ್ಯ. ಕಾಲ, ದೇಶ, ಆಚರಣೆಗಳಿಗೆ ತಕ್ಕಂತೆ ಈ ರೀತಿ ಪ್ರಾಮುಖ್ಯತೆ

* ಪದ್ಮಪ್ರಭಾ, ೪೨, ಬ್ಲಾಕ್ : ೧೭, ಶ್ರೀರಾಮಪುರ ೨ನೇ ಹಂತ, ಮೈಸೂರು - ೫೭೦ ೦೨೩.

ದಕ್ಕಿದೆ. ಮಹಾಕಾವ್ಯಗಳಲ್ಲಿ ಅಷ್ಟಾದಶವರ್ಣನೆಗಳು ಸ್ಥಾನ ಪಡೆದಂತೆ, ಆಗಮಗಳಲ್ಲಿ ಜ್ಞಾನ ಮತ್ತು ಯೋಗ ಭಾಗಗಳಿಗೆ ಸ್ಥಾನ ದಕ್ಕಿದೆ. ಮೈತ್ರೇಯ್ಯುಪನಿಷತ್ತು ವಿಗ್ರಹಾರಾಧನೆಯನ್ನು ಭೋಗಾಪೇಕ್ಷೆಯ ಸಾಧನವೆಂದು ಗುರುತಿಸುತ್ತದೆ.

> **ಪಾಷಾಣ ಲೋಹ ಮಣಿ ಮೃಣ್ಮಯ ವಿಗ್ರಹೇಷು ಪೂಜಾ**
> **ಪುನರ್ಜನನ ಭೋಗಕರೀ ಮುಮುಕ್ಷೋಃ**
> **ತಸ್ಮಾದ್ಯತಿಃ ಸ್ವಹೃದಯಾರ್ಚನ ಮೇವ ಕುರ್ಯಾತ್**
> **ಬಾಹ್ಯಾರ್ಚನಂ ಪರಿಹರೇದ ಪುನರ್ಭವಾಯ**[೪]

ಪೂಜೆಯಲ್ಲಿ ನಿತ್ಯ, ನೈಮಿತ್ತಿಕ, ಕಾಮ್ಯ ಎಂಬ ಪ್ರಭೇದಗಳಿವೆ. ಫಲಾಪೇಕ್ಷೆ ಮತ್ತು ಭೋಗಾಪೇಕ್ಷೆಯಿಂದ ಕೂಡಿದ್ದು ಕಾಮ್ಯವೆನಿಸಿದೆ. ಶ್ರೀಸಾಮಾನ್ಯನ ಹೆಚ್ಚಿನ ಅಪೇಕ್ಷೆ ಐಹಿಕ ಭೋಗವೇ ಆಗಿದೆ. ಐಹಿಕ ಚಿಂತೆಯಲ್ಲಿರುವವನಿಗೆ ಪುನರ್ಜನ್ಮದ ಬಗ್ಗೆ ಗಮನವಿಲ್ಲ. ಮೋಕ್ಷದ ಚಿಂತೆಯೂ ಇಲ್ಲ. ಪೂಜೆಯಲ್ಲಿ ಸ್ವಾರ್ಥ ಮತ್ತು ಪರಾರ್ಥಗಳೆಂಬ ಭೇದಗಳು ಸ್ವಾರ್ಥವೆಂದಲ್ಲಿ ತನಗಾಗಿ ಮಾಡುವ ಪೂಜೆ.

> **ಯಜನಂ ಸ್ವಾರ್ಥಮಾಖ್ಯಾತಂ ಸ್ವಸ್ಯೇಷ್ಟ ಫಲದಂಯತಃ**[೫]
> ಪರಾರ್ಥದಲ್ಲಿ–**ಲೋಕಾಃಸಮಸ್ತಾಃ ಸುಖಿನೋಭವಂತು,**

ಎಂಬ ಧ್ಯೇಯವಿದೆ. ಪರಾರ್ಥ ಪೂಜೆಯೇ ದೇವಾಲಯ ಗಳ ಬೆಳವಣಿಗೆಗೆ ಕಾರಣ ಎಂದು ಗಮನಿಸಬೇಕು.

> **ಸ್ವಯಂಭೂ ದೈವ ಬಾಣ ಆರ್ಷಲಿಂಗಯುಕ್ತೋ ಶಿವಾಲಯೇ**
> **ಮನುಜೈಸ್ಥಾಪಿತೇ ಲಿಂಗೇ ಪರಾರ್ಥ ಯಜನಂ ಸ್ಮೃತಂ**
> **ನೃಪತೇರಾಯುರಾರೋಗ್ಯ ಜಯ ಸಂಪದ್ ವೃದ್ಧಯೇ**
> **ಗ್ರಾಮಾದೀನಿ ವಿವೃದ್ಧ್ಯರ್ಥಂ ಪರಾರ್ಥೇಜ್ಯಾ ಪ್ರಯುಜ್ಯತಾ**[೬]

ದೇವಾಲಯಗಳ ನಿರ್ವಹಣೆ, ಅಭಿವೃದ್ಧಿಗಳಿಗೆ ರಾಜಾಶ್ರಯ ದೊರಕಿದ್ದು ಈ ರೂಪದಿಂದ. ರಾಜಮಹಾರಾಜರೂ ತಮ್ಮ ವರ್ಚಸ್ಸು ಬೆಳೆಸುವುದಕ್ಕಾಗಿ, ಅಧಿಕಾರದ ಸಂಕೇತವಾಗಿ ದೇವಾಲಯಗಳನ್ನು ಪೋಷಿಸಿದರು.

ಅರ್ಚನೆಗಾಗಿ ದೇವತಾಮೂರ್ತಿಗಳಿದ್ದುದನ್ನು ಪಾಣಿನಿಯ ಕಾಲದಿಂದಲೂ ಗುರುತಿಸಬಹುದು.

> **ಮೌರ್ಯೈ ಹಿರಣ್ಯಾರ್ಥಿಭಿಃ ಅರ್ಚಾ ಪ್ರಕಲ್ಪಿತಾ**[೭]

ಪಾಣಿನಿಯ ಸೂತ್ರದಲ್ಲಿರುವ ಈ ವಾಕ್ಯ ಅರ್ಚಾ ಮೂರ್ತಿಗಳನ್ನೂ ಮೌರ್ಯರನ್ನೂ ಹೆಸರಿಸಿದೆ. ಪಾಣಿನಿಯ ಕಾಲ ಕ್ರಿಪೂ. ಐದನೆಯ ಶತಮಾನ. ಈ ಕಾಲದಲ್ಲಿ ಬ್ರಾಹ್ಮಣರು (ಮೌರ್ಯರು) ದಕ್ಷಿಣೆಯ ಸಲುವಾಗಿ (ಹಿರಣ್ಯಾರ್ಥಿ) ಪೂಜಾಮೂರ್ತಿಗಳನ್ನು ಕೊಂಡೊಯ್ದು ಪೂಜಾದಿಗಳನ್ನು ನೆರವೇರಿಸಿ, ಸುಪ್ರೀತರಾದ ಜನರಿಂದ ದಕ್ಷಿಣೆಗಳನ್ನು ಪಡೆಯುತ್ತಿದ್ದರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಅರ್ಚಾ, ಬಿಂಬ, ವಿಗ್ರಹ, ಮೂರ್ತಿ, ಪ್ರತಿಮಾ ಇವೆಲ್ಲವೂ ಸಮಾನಾರ್ಥಕ ಪದಗಳಾಗಿ ಬಳಕೆಯಲ್ಲಿವೆ.

ಶ್ವೇತಾಶ್ವತರೋಪನಿಷತ್ತಿನಲ್ಲಿ 'ಬಿಂಬ' ಪದದ ಪ್ರಯೋಗವಿದೆ. ಈ ಶ್ಲೋಕಪೂರ್ವದಲ್ಲಿ ಯೋಗಸಾಧನೆಯ ವಿವರಗಳಿವೆ.

> **ಯಥೈವ ಬಿಂಬಂ ಮೃದಯೋಪಲಿಪ್ತಂ**
> **ತೇಜೋಮಯಂ ಭ್ರಾಜತೇ ತತ್ ಸುಧಾಂತಂ**[೮]

ಯೋಗಸಾಧನೆಯ ಮೂಲಕ ಯೋಗಿಯ ದೇಹವು ಆತ್ಮತತ್ವದಿಂದ ಪ್ರಕಾಶಗೊಳ್ಳುವುದನ್ನು ಈ ಶ್ಲೋಕವು ಮಣ್ಣಿನಿಂದ ಮುಚ್ಚಲ್ಪಡುವ ಬಿಂಬವು ಶುದ್ಧಿಗೊಂಡಾಗ ಹೊಳೆಯುವಂತೆ ಎಂದು ಬಣ್ಣಿಸಿದೆ. ವಿಗ್ರಹ ರಚನೆಯ ಸೂಕ್ಷ್ಮ ವಿವರವೂ ಇಲ್ಲಿದೆ ಎಂದು ಗಮನಿಸಬಹುದು.

ವಿಗ್ರಹ ಪದವನ್ನು ಗಮನಿಸಬೇಕು. ವಿ + ಗೃ = ವಿಶೇಷೇಣ ಗೃಹ್ಯತೇ ಇತಿ ವಿಗ್ರಹ. ಬಿಗಿಯಾಗಿ ಹಿಡಿದು ಕೊಳ್ಳುವುದು ಎಂದರ್ಥ. ಅಮೂರ್ತ ಭಾವವನ್ನು ಮನಸ್ಸಿನಲ್ಲಿ ಬಿಗಿಯಾಗಿ ಹಿಡಿದುಕೊಳ್ಳಲು ನೆರವಾಗುವ ಪ್ರಾತಿನಿಧಿಕ ರೂಪ ವಿಗ್ರಹ. ಸಮೂರ್ತಾರ್ಚನದ ಪ್ರಸಕ್ತಿ ಪ್ರಾರಂಭವಾಗುವುದೇ ಇಲ್ಲಿಂದ.

> **ದೇವತಾರ್ಚನಂ ದ್ವಿಧಾಪ್ರೋಕ್ತಂ ಅಮೂರ್ತಂ ಚ ಸಮೂರ್ತಕಂ**[೯]

ಸಮೂರ್ತಾರ್ಚನಾಧಿಕಾರವು ಅರ್ಚನೆಯಲ್ಲಿ ಅಮೂರ್ತ ಮತ್ತು ಸಮೂರ್ತ ಎಂದು ಎರಡು ವಿಧಗಳನ್ನು ಹೆಸರಿಸಿದೆ. ಸಮೂರ್ತ ಬೇರೆ ಪೂಜನಂ ವಿಗ್ರಹಾರಾಧನೆಯೇ ಬೇರೆ ಪೂಜೆ. ಅಮೂರ್ತ ಪೂಜೆಯ ವಿಧಿ ವಿಧಾನಗಳೇನು?

> **ಅಜ್ಞಾನಾಂ ಭಾವನಾರ್ಥಾಯ ಪ್ರತಿಮಾಕಲ್ಪಿತಾ**[೧೦]

ಜಾಬಾಲ ಉಪನಿಷತ್ತಿನ ಈ ವಾಕ್ಯವನ್ನು ಟಿ.ಎ. ಗೋಪಿನಾಥರಾವ್ ಗುರುತಿಸಿದ್ದಾರೆ. 'ಅಜ್ಞಾನಾಂ ಸಾಕ್ಷಾದ್ ಭಗವತ್ ಪೂಜಯಾ ಕರ್ತುಂ ಅಶಕ್ಯತ್ವೇನ ಪ್ರತಿಮಾ ಮೇವ ಕರ್ತವ್ಯತ್ವಾತ್ – ತದರ್ಥಂ ಪ್ರತಿಮಾ ನಿರ್ಮಿತವ್ಯಾ' ಇದು ಮಧ್ವಾಚಾರ್ಯರ ತಂತ್ರಸಾರದ ಟೀಕೆ.

ಮೂರ್ತಿ ಶಿಲ್ಪದ ಮೂಲವನ್ನು ಶೋಧಿಸುವಲ್ಲಿ ಜ್ಞಾನ ಹಾಗೂ ಯೋಗ ಭಾಗಗಳ ವಿಸ್ತೃತ ಅಧ್ಯಯನವೂ ಅವಶ್ಯಕ. ಜ್ಞಾನವೆಂದಲ್ಲಿ ಬ್ರಹ್ಮಜ್ಞಾನ. ಪಾದ್ಮಸಂಹಿತೆಯಲ್ಲಿ ಬ್ರಹ್ಮಜ್ಞಾನದ ಸ್ವರೂಪದ ವಿವರಗಳಿವೆ.

> **ಆನಂದ ಲಕ್ಷಣಂ ಬ್ರಹ್ಮನಾದ ರೂಪಮವಿಕ್ರಯಂ**
> **ಕ್ಲೇಷಾದಿ ಭಾರ ಸಂಸ್ಪೃಷ್ಟಂ ನಿಷ್ಕ್ರಿಯಂ ನಿರ್ವಿಕಲ್ಪಕಂ**
> **ಅದ್ವಂದ್ವ ಮನವಚ್ಛಿನ್ನಂ ಸ್ವಸಂವೇದ್ಯಂ ನಿರಂಜನಂ**
> **ಸುಸೂಕ್ಷ್ಮಂ ಸ್ವವಶಂ ಸ್ವೈರಂ ಸ್ವಯಂಜ್ಯೋತಿರನಾಮಯಂ**

ಅನಂತಮಕ್ಷಯಂ ಶಾಂತಮದೃಷ್ಟಾಂತ ಮವೃದ್ಧಿಮತ್
ದ್ವಯಮೇಕಂ ಸದಾನಂದಂ ಚಿದ್ರೂಪಂ ಸರ್ವಸಂಪದಂ[೧೧]

ಬ್ರಹ್ಮಜ್ಞಾನದ ವಿವರಗಳು ಕಬ್ಬಿಣದ ಕಡಲೆಯೇ. ಇದನ್ನು ತಿಳಿಯುವುದೆಂತು ? ಈ ಜ್ಞಾನವು ಸತ್ವಾಖ್ಯ ಮತ್ತು ಕ್ರಿಯಾತ್ಮಕ ಎಂದು ಎರಡು ವಿಧಗಳೆಂದು ಗುರುತಿಸಲ್ಪಟ್ಟಿದೆ.

ಜ್ಞಾನಂ ದ್ವಿವಿಧಮಾಖ್ಯಾತಂ ಸತ್ವಾಖ್ಯಂ ಕ್ರಿಯಾತ್ಮಕಂ[೧೨]

ಸತ್ವ ಅಥವಾ ತತ್ವಗಳನ್ನೊಳಗೊಂಡದ್ದು ಜ್ಞಾನ. ಕ್ರೀಯೆಯನ್ನೊಳಗೊಂಡದ್ದು ಸಾಧನ. ಇವೆರಡೂ ಒಂದೇ ನಾಣ್ಯದ ಎರಡು ಮುಖಗಳು. ಒಂದು ಶಾಸ್ತ್ರ ಮತ್ತೊಂದು ಆಚಾರ. ಪ್ರತಿ ಹಂತದಲ್ಲಿಯೂ ಈ ರೀತಿ ಗುರುತಿಸಬಹುದು. ಶಾಸ್ತ್ರವೆಂದಲ್ಲಿ ಬೌದ್ಧಿಕ ಚಿಂತನೆ, ಆಚಾರವೆಂದಲ್ಲಿ ಅನುಷ್ಠಾನ ಭಾಗ. ಇದನ್ನೇ Doctrine ಅಥವಾ Theory ಎಂದೂ, Practice ಅಥವಾ Technique ಎಂದು ಕ್ರಮವಾಗಿ ಗುರುತಿಸಲು ಸಾಧ್ಯವಿದೆ. ಬ್ರಹ್ಮ ಸ್ವರೂಪವನ್ನು ತಿಳಿಯುವಲ್ಲಿ ಶಾಸ್ತ್ರ ಭಾಗವೊಂದೇ ಸಾಲದು, ಸಾಧನ ವೆಂಬ ಶಿಸ್ತು ಅವಶ್ಯಕ. ಬ್ರಹ್ಮಜ್ಞಾನವನ್ನು ಪಡೆಯುವಲ್ಲಿ ಯೋಗವು ಸಾಧನ ಮಾರ್ಗವೆನಿಸಿದೆ. ಯೋಗದ ವಿಸ್ತೃತ ವಿವರಣೆಯಲ್ಲಿ ಪುನಃ ಶಾಸ್ತ್ರ ಆಚಾರಗಳ ಇಬ್ಭಾಗ ಅವಶ್ಯಕ.

ಸಾಧನ ಮಾರ್ಗ ಗಹನವೆನಿಸಿದ್ದನ್ನು ಸರಳಗೊಳಿಸುವ ಯತ್ನ ಹಾಗೂ ಸಮಾಜದ ವಿವಿಧ ಸ್ತರಗಳನ್ನು ತಲಪುವ ಪ್ರಯತ್ನ. ಕ್ರಿಯಾ ಹಾಗೂ ಚರ್ಯಾಪಾದಗಳಲ್ಲಿ ಚರ್ಯಾಪಾದವು ಸಾಧನೆಯ ಭಾಗವೆನಿಸಿದೆ. ಕ್ರಿಯಾಪಾದವು ಶಾಸ್ತ್ರವೆನಿಸುತ್ತದೆ. ಯೋಗ ಹಾಗೂ ಕ್ರಿಯಾಪಾದಗಳ ಅಧ್ಯಯನದಲ್ಲಿ ಯೋಗವು ಶಾಸ್ತ್ರವೆನಿಸಿದ್ದು ಕ್ರಿಯಾಭಾಗವು ಆಚಾರ ಸಂಹಿತೆಯಾಗಿ ರೂಪುಗೊಂಡಿದೆ. ಈ ರೀತಿಯ ಸರಳೀಕರಣ ವಿಗ್ರಹಾರಾಧನೆ ಬೆಳೆದುಬಂದ ಹಾದಿಯನ್ನು ಗುರುತಿಸಲು ನೆರವಾಗುತ್ತದೆ. ಮಾನವನ ಬೌದ್ಧಿಕ ಮಟ್ಟ, ಸಂಸ್ಕಾರ ಮತ್ತು ಸಂಸ್ಕೃತಿಗಳಿಗೆ ಅನುಗುಣವಾಗಿ ಮೂರು ಹಂತಗಳ ಜನರನ್ನು ವಿದ್ವಾಂಸರು ಗುರುತಿಸಿದ್ದಾರೆ. ಮೊದಲ ಹಂತದ ಜನರು ಪ್ರಜ್ಞೆ ಹಾಗೂ ವಿವೇಕ ಶಕ್ತಿಗಳಿಂದ ಗಹನವಾಗಿ ಆಲೋಚನೆ ಮಾಡುವವರು ಹಾಗೂ ತರ್ಕಬದ್ಧವಾದ ತತ್ವಜ್ಞಾನದಲ್ಲಿ ಆಸಕ್ತಿಯುಳ್ಳವರು. ಎರಡನೆಯ ಹಂತದ ಜನರಿಗೆ ಭಾವವೇ ಪ್ರಧಾನ. ಗಹನವಾಗಿ ಯೋಚಿಸಬಲ್ಲರು. ಆದರೆ ಸ್ವಲ್ಪಮಟ್ಟಿಗೆ ಮಾತ್ರ, ವಾಸ್ತವಿಕ ಹಾಗೂ ತಾಂತ್ರಿಕ ನೆರವನ್ನು ಪಡೆಯಬಲ್ಲರು. ಇವರಿಗಾಗಿ ಭಕ್ತಿಮಾರ್ಗವಿದೆ. ದೇವರನ್ನು ಅರಿಯಲು ನೆರವಾಗುವ ಭಾವನಾಮಾರ್ಗ, ಇವರ ತೃಪ್ತಿಯನ್ನು ಆಗಮಶಾಸ್ತ್ರ ಕ್ರಿಯೆಗಳು ಪೂರೈಸುತ್ತವೆ. ಮೂರನೆಯ ಹಂತದ ಜನರು ಮಕ್ಕಳಂತೆ ಮುಗ್ಧರು ಆಲೋಚಿಸಲಾರರು. ಭಾವನೆಗಳೂ ವಿಕಾಸ ಗೊಂಡಿರುವುದಿಲ್ಲ. ವ್ಯವಸ್ಥಿತವಾದ ಶಿಕ್ಷಣ ತರಬೇತಿಗಳಿಂದ ಕೊಂಚ ಬೆಳವಣಿಗೆ ಸಾಧ್ಯ[೧೩]

ಭಗವದ್ಗೀತೆಯಲ್ಲಿ ವಾಕ್ಯವೊಂದಿದೆ. ತೇಸಕೃತ್ಸ್ನವಿದೋ ಮಂದಾಕೃತ್ಸ್ನ ವಿಚಾಲಯೇತ್–[೧೪]

ಅಜ್ಞಾನಿಗಳು ಅಂಧಶ್ರದ್ಧೆಯನ್ನು ಹಾಳು ಮಾಡಬಾರದು. ವಿಗ್ರಹಾರಾಧನೆಯಲ್ಲಿ ಕಾಣುವ ಅಂತಿಮ ಹಂತವಿದು.

ರೂಪಂರೂಪವಿವರ್ಜಿತಸ್ಯಭವತೋ ಧ್ಯಾನೇನ ಯತ್ ಕಲ್ಪಿತಂ – ರೂಪವಿಲ್ಲದ ನಿನಗೆ ಧ್ಯಾನಸೌಕರ್ಯಕ್ಕಾಗಿ ರೂಪವನ್ನು ಕೊಟ್ಟಿದ್ದೇನೆ. ಕ್ಷಂತವ್ಯಂ ಜಗದೀಶಾ ತದ್ವಿಕಲತಾ[೧೫] ನನ್ನ ಈ ತಪ್ಪನ್ನು ಕ್ಷಮಿಸು. ಇದು ಮೂರ್ತಿ ಪೂಜೆ ಬೆಳೆದು ಬಂದ ವ್ಯವಸ್ಥೆಯನ್ನು ವಿವರಿಸುತ್ತದೆ.

ನಮ್ಮ ಐತಿಹಾಸಿಕ ಅಧ್ಯಯನಗಳು ಆರಂಭಗೊಳ್ಳುವುದು ಹರಪ್ಪ ಮಹೇಂಜೋದಾರೋ ಉತ್ಖನನಗಳಿಂದ. ಈ ಉತ್ಖನನಗಳಲ್ಲಿ ದೊರೆತ ಮುದ್ರೆಗಳಲ್ಲಿ ದೇವತೆಗಳೆಂಬ ಸ್ಪಷ್ಟ ಚಿತ್ರಣವನ್ನು ಗುರುತಿಸುವುದು ದುಸ್ತರವೇ ಆಗಿದೆ.

ಪಶುಪತಿ ಎಂದು ವಿದ್ವಾಂಸರಿಂದ ಗುರುತಿಸಲ್ಪಟ್ಟ ಮೂರು ಕೊಂಬಿರುವ ಶಿರೋಭೂಷಣವಿರುವ ಮಾನವಾಕೃತಿಯನ್ನು ದೇವತೆಯೆಂದು ಗುರುತಿಸುವುದೆಂತು? ಈ ಮುದ್ರೆಯಲ್ಲಿ ಪಶುಸಂಕುಲವನ್ನು ಕಾಣಬಹುದು. ಇತಿಹಾಸ ಪೂರ್ವದ ಗುಹಾಲಯಗಳಲ್ಲಿ ಚಿತ್ರಿಸಲ್ಪಟ್ಟ ಭಾವಾಭಿವ್ಯಕ್ತಿಗೆ ಸಮನಾದುದು ಎಂದು ಹೇಳುವುದಕ್ಕಿಂತ ಹೆಚ್ಚು ನಿಖರವಾಗಿ ಗುರುತಿಸಲು ಸಾಧ್ಯವಾಗದು. ಇದು ಸಾಧ್ಯವಾಗುವುದು ಆ ಕಾಲದ ಲಿಪಿಯನ್ನು ಸಮರ್ಥವಾಗಿ ಓದಿದ ನಂತರವೇ.

ಕೆಲವು ಬುಡಕಟ್ಟು ಜನಾಂಗದಲ್ಲಿ ಇತಿಹಾಸಪೂರ್ವದ ಕಲ್ಲಿನ ಆಯುಧಗಳನ್ನು ದೇವರ ಪ್ರತೀಕವಾಗಿ ಪೂಜೆಗೊಳ್ಳುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಸುಟ್ಟ ಮಣ್ಣಿನಿಂದ ರೂಪಿಸಲ್ಪಟ್ಟ ಮಾತೃದೇವತೆಯನ್ನು ಸಿಂಧೂ ಸಂಸ್ಕೃತಿಯಲ್ಲಿ ಕಾಣಬಹುದಾಗಿದೆ. ಶಿಷ್ಟ ಹಾಗೂ ಜನಪದ ಸಂಸ್ಕೃತಿಗಳು ಸಮ್ಮಿಲನಗೊಂಡು ಮೂರ್ತಿ ಶಿಲ್ಪಕ್ಕೆ, ಪ್ರತಿಮಾ ಶಾಸ್ತ್ರಕ್ಕೆ ಕೊಡುಗೆ ನೀಡಿವೆ ಎನ್ನುವುದು ಉಲ್ಲೇಖನೀಯ. ಈ ಸಾಮರಸ್ಯದ ಸಿಕ್ಕುಗಳನ್ನು ಬಿಡಿಸುವುದೇ ಸಮಸ್ಯೆ.

ದೈವ ಅಥವಾ ದೈವತ್ವದ ಉಪಾಸನೆಯ ಹಂತಗಳನ್ನು ಪ್ರಮುಖವಾಗಿ ನಾಲ್ಕು ಹಂತಗಳಲ್ಲಿ ಗುರುತಿಸಬಹುದು. ಒಂದು ಯಜ್ಞಯಾಗಾದಿಗಳ ಮೂಲಕ ಉಪಾಸನೆ, ಎರಡು, ಧ್ಯಾನ, ಯೋಗಗಳ ವಿವಿಧ ಸ್ತರಗಳ ಆಚರಣೆ, ಮತ್ತೊಂದು ಜಪ, ತಪಗಳ ಮೂಲಕ ಪರಮಾತ್ಮನ ಸಾನಿಧ್ಯದ ಅಪೇಕ್ಷೆ,

ಇನ್ನೊಂದು ಸಾರ್ವತ್ರಿಕವಾಗಿ ಬಳಕೆಯಲ್ಲಿರುವ ವಿಗ್ರಹಾರಾಧನೆ. ಈ ಉಪಾಸನೆಗಳಲ್ಲಿ ಪರಸ್ಪರ ಅವಲಂಬನೆಯೂ ಇದೆ. ಆದರೆ ಬೇರ್ಪಡಿಸುವುದು ಕಷ್ಟ. ಈ ಉಪಾಸನೆಗಳಲ್ಲಿ ತಾರತಮ್ಯವನ್ನು ಗುರುತಿಸಬಹುದು.

**ಉತ್ತಮೋ ಬ್ರಹ್ಮ ಸದ್ಭಾವೋ ಧ್ಯಾನಭಾವಸ್ತು ಮಧ್ಯಮಃ**
**ಸ್ತುತಿರ್ಜಪೋ ಅಧಮೋ ಭಾವೋ ಬಹಿಃ ಪೂಜಾ**
**ಅಧಮಾಧಮಾ**[೧೬]

ಮೇಲ್ಕಂಡ ಟಿಪ್ಪಣಿಗಳು ಮೂರ್ತಿಶಿಲ್ಪದ ಅಧ್ಯಯನಕ್ಕೆ ಮುನ್ನುಡಿ ಎಂದು ಭಾವಿಸುತ್ತೇನೆ.

## ಆಧಾರಸೂಚಿ


೧. **ತಂತ್ರ ಸಮುಚ್ಚಯ,** ಟಿ. ಗಣಪತಿಶಾಸ್ತ್ರಿ ಮತ್ತು ಡಾ. ಎನ್.ಪಿ. ಉನ್ನಿ (ಸಂ.) ನಾಗ್ ಪ್ರಕಾಶನ, ದೆಹಲಿ – ೭ (೧೯೯೦) ಪು. ೩.
೨. ಅದೇ.,
೩. **ಶ್ರೀಪಾದ್ಮಸಂಹಿತಾ,** ಜಿ.ಆರ್. ಜೋಸ್ಯರ್ (ಸಂ.) ಮೈಸೂರು (೧೯೬೯) ಪು. ೧೨. ಅ. ೨, ಶ್ಲೋ. ೨.
೪. ಕೆ. ನಾರಾಯಣಸ್ವಾಮಿ ಐಯ್ಯರ್ (ಭಾ.), **ಥರ್ಟಿ ಮೈನರ್ ಉಪನಿಷದ್ಸ್,** ಪರಿಮಲ್ ಪಬ್ಲಿಕೇಷನ್ಸ್, ದೆಹಲಿ (೨೦೦೨) ಪು. ೨೧೯, ಅ. ೨, ಶ್ಲೋ. ೨೬.
೫. ಸ್ವಾಮಿನಾಥ ಶಿವಾಚಾರ್ಯ., (ಪ್ರ.) **ಕಾಮಿಕಾಗಮಂ** (ಪೂರ್ವಭಾಗ), ದಕ್ಷಿಣಭರತಾರ್ಚಕ ಸಂಘ, ಮದ್ರಾಸ್, (೧೯೭೬), ಪು. ೨೫, ಅ. ೪, ಶ್ಲೋ. ೪.೫.
೬ ಅದೇ., ಅ. ೪, ಶ್ಲೋ. ೨.
೭. ಎಸ್.ಕೆ. ರಾಮಚಂದ್ರರಾವ್., **ವಾಸ್ತು–ಶಿಲ್ಪ–ಕೋಶ (ದ್ವಿತೀಯ ಸಂಪುಟ),** ಕಲ್ಪತರು ರೀಸರ್ಚ್ ಅಕಾಡೆಮಿ, ಬೆಂಗಳೂರು (೨೦೦೨), ಪು. ೧೫೦, (೫.೩.೯).
೮. ಸ್ವಾಮಿ ಆದಿದೇವಾನಂದ., **ಶ್ವೇತಾಶ್ವತರೋಪನಿಷತ್,** ಶ್ರೀರಾಮಕೃಷ್ಣಾಶ್ರಮ, ಮೈಸೂರು, (೨೦೦೨), ಪು. ೨೭, ಅ. ೨, ಶ್ಲೋ. ೧೪.
೯. **ಸಮೂರ್ತಾರ್ಚನಾಧಿಕಾರ,** ಅ. ೧, ಶ್ಲೋ. ೨೭
೧೦. ಟಿ.ಎ. ಗೋಪಿನಾಥರಾವ್., **ಹಿಂದೂ ಐಕನೋಗ್ರಫಿ,** ಸಂ. ೧, ಭಾಗ ೧, (೧೯೮೫), ಪು. ೨೬.
೧೧. **ಶ್ರೀ ಪಾದ್ಮ ಸಂಹಿತಾ,** ಪು. ೨೭, ಅ. ೫, ಶ್ಲೋ. ೨೯–೩೧.
೧೨. ಅದೇ., ಶ್ಲೋ. ೨೪.
೧೩. **ಯುಗಯಾತ್ರೀ ಭಾರತೀಯ ಸಂಸ್ಕೃತಿ,** (ನಾಲ್ಕನೇ ಸಂಪುಟ), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ (೧೯೮೮), ಪು. ೩೫೧.
೧೪. **ಭಗವದ್ಗೀತೆ,** ಅ. ೩, ಶ್ಲೋ. ೨೯.
೧೫. **ಯುಗಯಾತ್ರೀ ಭಾರತೀಯ ಸಂಸ್ಕೃತಿ,** ಪು. ೩೩೯.
೧೬. ಅದೇ., ಪು. ೩೩೮.

ಡಾ. ಕೂ.ಸ. ಅಪರ್ಣ*

# ವೈಷ್ಣವ ದೇವಾಲಯಗಳ ಪರಿವಾರ ದೇವತೆಗಳು ಹಾಗೂ ಪರಿವಾರಾಲಯಗಳು

ಒಂದು ದೇವಾಲಯದ ಪ್ರಧಾನ ಗರ್ಭಗೃಹದಲ್ಲಿ ಸ್ಥಾಪಿತವಾಗುವ ದೇವರಿಗೆ ಪರಿವಾರ ದೇವತೆಗಳಿದ್ದು, ಆ ದೇವತೆಗಳಿಗಾಗಿ ಪರಿವಾರಾಲಯಗಳನ್ನು ಕಟ್ಟುವುದುಂಟು. ಮೂಲ ದೇವರ ಕುಟುಂಬದವರು, ದ್ವಾರಪಾಲಕರು, ಭಕ್ತರು, ಆ ದೇವರಿಗೆ ಸಂಬಂಧಿಸಿದ ಇತರ ದೇವತೆಗಳು – ಎಲ್ಲರೂ ಪರಿವಾರ ದೇವತೆಗಳೆನಿಸುತ್ತಾರೆ. ವೈಷ್ಣವ ದೇವಾಲಯಗಳಲ್ಲೂ ವಿಷ್ಣುವಿಗೆ ಸಂಬಂಧಿಸಿದಂತೆ ಈ ದೇವತೆಗಳಿದ್ದು, ಅವರಿಗಾಗಿ ಪರಿವಾರಾಲಯಗಳಿರುವುದುಂಟು. ವೈಷ್ಣವ ದೇವಾಲಯಗಳಲ್ಲಿ ನಾಲ್ಕರಿಂದ ಮೂವತ್ತೆರಡು ಅಥವಾ ಅದಕ್ಕೂ ಹೆಚ್ಚು ಪರಿವಾರಾಲಯಗಳಿರುತ್ತವೆ ; ಅಷ್ಟು ಪರಿವಾರ ದೇವತೆಗಳಿರುತ್ತಾರೆ. ಈ ಪರಿವಾರ ದೇವತೆಗಳ ಬಗ್ಗೆ, ಪಾದ್ಮಸಂಹಿತೆಯ ಕ್ರಿಯಾಪಾದದ ೧೧ನೇ ಅಧ್ಯಾಯ, ವಿಮಾನಾರ್ಚನಕಲ್ಪದ ೧೨ನೇ ಪಟಲ, ಮಾನಸಾರದ ೩೨ನೇ ಅಧ್ಯಾಯ ಮತ್ತು ಮಯಮತದ ೨೩ನೇ ಅಧ್ಯಾಯಗಳಲ್ಲಿ ವಿವರಗಳಿವೆ. ಇಷ್ಟೇ ಅಲ್ಲದೆ, ರಾಮಚಂದ್ರರಾಯರು ನೀಡಿರುವಂತೆ, ಪಾರಮೇಶ್ವರ ಸಂಹಿತಾ (ಅ. ೧೧), ಕಪಿಂಜಲ ಸಂಹಿತಾ (ಅ. ೧೨), ಈಶ್ವರಸಂಹಿತಾ (ಅ. ೯), ಭಾರ್ಗವತಂತ್ರ ಮತ್ತು ಸನತ್ಕುಮಾರ ಸಂಹಿತೆಯಲ್ಲಿ ವಿವರಗಳಿರುವುದಾಗಿ ತಿಳಿದುಬರುತ್ತದೆ.

ದೇವಾಲಯಗಳಲ್ಲಿರುವ ಪರಿವಾರ ದೇವತೆಗಳ ಸಂಖ್ಯೆಯ ಆಧಾರದ ಮೇಲೆ ಅದನ್ನು ಬೇರೆ ಬೇರೆ ಸ್ಥಾನಗಳಿಂದ ಗುರುತಿಸುತ್ತಾರೆ. ಅದರಂತೆ, ಹನ್ನೆರಡು ಪರಿವಾರ ದೇವತೆಗಳಿದ್ದರೆ 'ಉತ್ತಮ', ಆರು ಪರಿವಾರ ದೇವತೆಗಳಿದ್ದರೆ 'ಮಧ್ಯಮ', ನಾಲ್ಕು ಪರಿವಾರ ದೇವತೆಗಳಿದ್ದರೆ 'ಅಧಮ' ಎಂದು ಸನತ್ಕುಮಾರ ಸಂಹಿತೆಯು ವಿಂಗಡಿಸಿರುವುದಾಗಿ ತಿಳಿದುಬರುತ್ತದೆ.[1] ಯಾವುದೇ ವೈಷ್ಣವ ದೇವಾಲಯದಲ್ಲೂ ಮುಖ್ಯ ದೇವತೆಗೆ ಅಭಿಮುಖವಾಗಿ ಗರುಡನೂ, ದೇವರ ಬಲಕ್ಕೆ ಲಕ್ಷ್ಮೀ, ಎಡಕ್ಕೆ ಭೂದೇವಿ ಇರಬೇಕು.

ಸನತ್ಕುಮಾರ ಸಂಹಿತೆಯ ಪ್ರಕಾರ ವಿಷ್ಣುವಿನ ೪ ಪರಿವಾರ ದೇವತೆಗಳೆಂದರೆ, ಭೃಗು, ನಾರದಮುನಿಗಳು, ಸೂರ್ಯ ಮತ್ತು ಚಂದ್ರ. ೬ ಪರಿವಾರ ದೇವತೆಗಳನ್ನು ಸ್ಥಾಪಿಸುವಾಗ, ಇವರುಗಳೊಂದಿಗೆ ಇಬ್ಬರು ದೇವಿಯರನ್ನು ಅಂದರೆ, ಸಾವಿತ್ರೀ ಮತ್ತು ಸರಸ್ವತಿಯನ್ನು ಸ್ಥಾಪಿಸಬೇಕು (ಆದರೆ, ಇವರನ್ನು ಎಲ್ಲಿ ಸ್ಥಾಪಿಸಬೇಕೆಂದು ತಿಳಿದಿಲ್ಲ). ಇದರಂತೆ, ಅಷ್ಟಪರಿವಾರಾಲಯಗಳೂ ಇರುವುದುಂಟು.

**(ಅ) ಅಷ್ಟ ಪರಿವಾರಾಲಯಗಳು** : ಗ್ರಂಥಗಳು ಹೇಳುವಂತೆ, ಅಷ್ಟಪರಿವಾರಾಲಯಗಳನ್ನು ಮೊದಲ ಪ್ರಾಕಾರದಲ್ಲಿ ಸ್ಥಾಪಿಸಬೇಕು.[2] ಈ ಅಷ್ಟಪರಿವಾರದಲ್ಲಿರುವ ದೇವತೆಗಳೆಂದು ಗ್ರಂಥಗಳು ಗುರುತಿಸಿರುವುವೆಂದರೆ :

ಪಟ್ಟಿಯಲ್ಲಿ ತೋರಿಸಿರುವಂತೆ ೮ ದೇವತೆಗಳನ್ನು ಗ್ರಂಥಗಳು ಬೇರೆ ಬೇರೆ ರೀತಿಯಲ್ಲಿ ಹೇಳಿವೆ ; ಪಾದ್ಮಸಂಹಿತಾ ಮತ್ತು ಭಾರ್ಗವ ತಂತ್ರಗಳು ಮಾತ್ರ ಒಂದೇ ರೀತಿಯಾಗಿ ಹೇಳಿವೆ. ಪೂರ್ವ, ನೈಋತ್ಯ ಮತ್ತು ಆಗ್ನೇಯ ದಿಕ್ಕನ್ನು

| ಕ್ರ.ಸಂ. | ದಿಕ್ಕುಗಳು | ಪಾದ್ಮಸಂಹಿತಾ | ವಿಶ್ವಾಮಿತ್ರಸಂಹಿತಾ | ಭಾರ್ಗವತಂತ್ರ | ಮಯಮತ | ಮಾನಸಾರ |
|---|---|---|---|---|---|---|
| ೧. | ಪೂರ್ವ | ರವಿ | ವ್ಯಾಪ್ತಿ | ರವಿ (ಪೂ)<br>ಬಲಕ್ಕೆ ಚಂದ್ರ | ವೈನತೇಯ | – |
| ೨. | ಆಗ್ನೇಯ | ಕಾಮ | ಕಾಂತಿ | ವಿಶ್ವಕ್ಸೇನ/ಕಾಮ | ಗಜಮುಖ | (ಮೃಗಾಲಯ) |
| ೩. | ದಕ್ಷಿಣ | ಬ್ರಹ್ಮ | ತೃಪ್ತಿ | ಬ್ರಹ್ಮ | ಪಿತಾಮಹ | [illegible] |
| ೪. | ನೈಋತ್ಯ | ಗಣೇಶ | ಶ್ರದ್ಧಾ | ಗಣೇಶ | ಮಾತೃ | ವಿನಾಯಕ |
| ೫. | ಪಶ್ಚಿಮ | ಷಣ್ಮುಖ | ವಿದ್ಯಾ | ಸ್ಕಂದ | ಗುಹಾ | ಅನಂತ |
| ೬. | ವಾಯವ್ಯ | ದುರ್ಗಾ | ದಯಾ | ದುರ್ಗಾ | ದುರ್ಗಾ | [illegible] |
| ೭. | ಉತ್ತರ | ಕುಬೇರ | ಕ್ಷಮಾ | ಕುಬೇರ | ಧನಾಧಿಪ | ಧನದ ಶಂಕರ |
| ೮. | ಈಶಾನ್ಯ | ರುದ್ರ | ಶಕ್ತಿ | ಶಿವ ಮತ್ತು<br>ಕ್ಷೇತ್ರಪಾಲ | ಸೇನಾಪತಿ | ಭಾಸ್ಕರ |

* ೧೬೭೬, ೫ನೇ 'ಎ' ಅಡ್ಡರಸ್ತೆ, ೧೦ನೇ ಮುಖ್ಯರಸ್ತೆ, ಬನಶಂಕರಿ ಎರಡನೇ ಬ್ಲಾಕ್, ೧ನೇ ಹಂತ, ಬೆಂಗಳೂರು.

ಬಿಟ್ಟರೆ, ಮಯಮತವೂ ಅದೇ ದೇವತೆಗಳನ್ನು ಹೇಳಿದೆ. ವಿನಾಯಕ ಮತ್ತು ಸೂರ್ಯ ದೇವತೆಗಳನ್ನು ಮಾತ್ರ, ಒಂದು ಬಿಟ್ಟು (ವಿಶ್ವಾಮಿತ್ರ ಸಂಹಿತಾ) ಎಲ್ಲ ಗ್ರಂಥಗಳೂ ಹೇಳಿವೆ. ವಿಶ್ವಾಮಿತ್ರ ಸಂಹಿತೆಯು ಹೇಳುವ ಎಂಟು ಪರಿವಾರ ದೇವತೆಗಳ ಹೆಸರುಗಳು ತೃಪ್ತಿ, ದಯಾ ಮುಂತಾದ ಭಾವನೆಗಳನ್ನು ಹೇಳುತ್ತಿರುವುದು ಗಮನಾರ್ಹವಾಗಿದೆ. ಮಯಮತವು ಈ ಪರಿವಾರ ದೇವತೆಗಳ ಸ್ಥಾನವನ್ನು ವಾಸ್ತುದೇವತಾ ಸ್ಥಾನಗಳ ಹೆಸರಿನಲ್ಲಿ ಹೇಳಿದ್ದು, ಆ ಮೂಲಕ ಪರಿವಾರ ದೇವತೆಗಳ ದಿಕ್ಕನ್ನು ಗುರುತಿಸಿಕೊಳ್ಳಬಹುದಾಗಿದೆ. ಕಪಿಂಜಲ ಸಂಹಿತೆಯು, ಇಂದ್ರ (ಆಗ್ನೇಯ), ಸಪ್ತಮಾತೃಕಾ (ದ), ಗಣೇಶ (ನೈ), ಅನಂತ (ಪ) ಈ ನಾಲ್ಕು ದೇವತೆಗಳನ್ನು ಮಾತ್ರ ಹೇಳುತ್ತಿದ್ದರೂ, ವಿದಿಕ್ಕಿನ ದೇವತೆಗಳನ್ನು ಹೇಳಿರುವುದರಿಂದ, ಇಲ್ಲಿ ಅಷ್ಟ ಪರಿವಾರವನ್ನು ಹೇಳುವ ಉದ್ದೇಶವಿರಬಹುದೇ ಎಂಬ ಅನುಮಾನವಿದೆ. [೩೨ ಪರಿವಾರ ದೇವತೆಗಳಿದ್ದಾಗ, ದಶಾವತಾರದ ಮೂರ್ತಿಗಳು

| ಕ್ರ.ಸಂ. | ಸನತ್ಕುಮಾರ ಸಂಹಿತಾ | ವಿಶ್ವಾಮಿತ್ರ ಸಂಹಿತಾ | ಮಯಮತ |
|---|---|---|---|
| ೧. | ಕಪಿಲ | ಶ್ರೀವತ್ಸ | |
| ೨. | ಕಾಶ್ಯಪ | ವನಮಾಲಾ | ೧ ರಿಂದ ೮ ರವರೆಗಿನ ದೇವತೆಗಳು ಅಷ್ಟಪರಿವಾರದಲ್ಲಿದ್ದಂತೆ. |
| ೩. | ದಕ್ಷ | ಯೋಗಮಾಯಾ | |
| ೪. | ರುದ್ರ | ವೈಷ್ಣವೀ | |
| ೫. | ವಹ್ನಿ | ವಿಮಲಾ | |
| ೬. | ಮನು | ಸೃಷ್ಟೀಶಕ್ತಿ | |
| ೭. | ಸಾವಿತ್ರೀ | ಉತ್ಕರ್ಷಿಣೀ | |
| ೮. | ಸರಸ್ವತಿ | ಜ್ಞಾನಶಕ್ತಿ | |
| ೯. | ಭೃಗು | ಸತ್ಯಶಕ್ತಿ | ಚಕ್ರ (ವಿಷ್ಣುವಿನ ಎದುರು) |
| ೧೦. | ನಾರದ | ಈಶಾನ್ಯ | ಗರುಡ (ಸ್ವಲ್ಪ ಎಡಕ್ಕೆ) |
| ೧೧. | ಸೂರ್ಯ | ಅನುಕಂಪಕಾ | ಶಂಖ (ಉ) (ಮೂರ್ತ ರೂಪದಲ್ಲಿ ಹೊರಮುಖಿಯಾಗಿರಬೇಕು) |
| ೧೨. | ಚಂದ್ರ | ಪಿತಾಮಹೀ | ಸೂರ್ಯ – ಚಂದ್ರ (ಮಹಾದ್ವಾರದ ಅಕ್ಕ ಪಕ್ಕ ಒಳಮುಖಿಯಾಗಿರಬೇಕು) |

ಮೊದಲ ಪ್ರಾಕಾರದಲ್ಲಿರುತ್ತವೆಂದು ಮಾನಸಾರವು ಸೂಚಿಸಿದೆ.] ಈ ದೇವತೆಗಳನ್ನು ಯಾವ ರೀತಿ ಬಿಡಿಸಬೇಕೆಂಬುದರ ಬಗ್ಗೆಯೂ ಗ್ರಂಥಗಳಲ್ಲಿ ವಿವರಗಳಿವೆ.

**(ಆ) ದ್ವಾದಶ ಪರಿವಾರ ದೇವತೆಗಳು** : ಹನ್ನೆರಡು ಪರಿವಾರ ದೇವತೆಗಳ ಬಗ್ಗೆಯೂ ಗ್ರಂಥಗಳಲ್ಲಿ ವಿವರಗಳಿವೆ. ಇವರನ್ನು ಎಲ್ಲಿ ಸ್ಥಾಪಿಸಬೇಕೆಂಬುದರ ಬಗ್ಗೆ ತಿಳಿಯುವುದಿಲ್ಲ. ಬಹುಶಃ ಮೊದಲನೇ ಪ್ರಾಕಾರದಲ್ಲಿ ಆ ೮ ದೇವತೆಗಳ ಬದಲು ಸ್ಥಾಪಿಸಬಹುದೆಂದು ತೋರುತ್ತದೆ. ಆ ಹನ್ನೆರಡು ದೇವತೆಗಳೆಂದರೆ,[೩೫]

ಇಲ್ಲಿಯೂ ಗ್ರಂಥ-ಗ್ರಂಥಗಳ ನಡುವೆ ದೇವತೆಗಳ ಪಟ್ಟಿಯಲ್ಲಿ ವ್ಯತ್ಯಾಸವಿದೆಯಲ್ಲದೆ, ಅಷ್ಟ ಪರಿವಾರದ ದೇವತೆಗಳಿಗೂ, ಹನ್ನೆರಡು ಪರಿವಾರದ ದೇವತೆಗಳಿಗೂ ವ್ಯತ್ಯಾಸವಿದೆ. ಆದರೆ, ಮಯಮತವು ಮಾತ್ರ, ಆ ೮ ಪರಿವಾರ ದೇವತೆಗಳೊಂದಿಗೇ ಇನ್ನೂ ನಾಲ್ಕು ದೇವತೆಗಳನ್ನು ಸೇರಿಸಿದೆ. ಹಿಂದಿನಂತೇ ಇಲ್ಲೂ ಕೂಡಾ ವಿಶ್ವಾಮಿತ್ರ ಸಂಹಿತೆಯು ಹೇಳುವ ದೇವತೆಗಳಲ್ಲಿ ಕೆಲವು ಶಕ್ತಿ/ಭಾವನೆಗಳನ್ನು ಪ್ರತಿನಿಧಿಸುತ್ತಿದೆ. ಇವೆಲ್ಲವೂ ವಿಷ್ಣುವು ನಿಂತಿರುವ ಪದ್ಮದೊಳಗಿನ ಶಕ್ತಿದೇವತೆಗಳು ('ದ್ವಾದಶ ಶಕ್ತ್ಯಾಃ') ಎಂದು ಗುರುತಿಸಲಾಗಿದೆ.[೪] ಇವೂ ಪರಿವಾರ ದೇವತೆಗಳೇ ಎಂಬುದು ಸ್ಪಷ್ಟವಿಲ್ಲ.

**(ಇ) ಷೋಡಶ ಪರಿವಾರ ದೇವತೆಗಳು** : ಮಾನಸಾರ ಮತ್ತು ಮಯಮತಗಳಲ್ಲಿ, ಷೋಡಶ (೧೬) ಪರಿವಾರ ದೇವತೆಗಳ ವಿವರವಿದೆ. ಈ ದೇವತೆಗಳು ಎರಡನೇ ಪ್ರಾಕಾರದಲ್ಲಿರುತ್ತಾರೆಂದು ಸೂಚ್ಯವಾಗಿದೆ. ಗ್ರಂಥಗಳಿಂದ[೫] ತಿಳಿದುಬರುವಂತೆ ಷೋಡಶ ಪರಿವಾರದ ದೇವತೆಗಳೆಂದರೆ,

ಮಾನಸಾರ ಮತ್ತು ಮಯಮತದ ನಡುವೆ ಪರಿವಾರ ದೇವತೆಗಳಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಬಹುದಾಗಿದೆ. ಮಾನಸಾರವು, ಅಷ್ಟಪರಿವಾರದ ದೇವತೆಗಳನ್ನೇ ಈ ಸಂದರ್ಭದಲ್ಲಿ ಉಳಿಸಿಕೊಂಡಿದ್ದರೆ, ಮಯಮತವು, ಅದಕ್ಕಿಂತ

| ಕ್ರ.ಸಂ. | ಮಾನಸಾರ | ಮಯಮತ |
|---|---|---|
| ೧-೮ | ೧ ರಿಂದ ೮ ರವರೆಗಿನ ದೇವತೆಗಳು ಅಷ್ಟ ಪರಿವಾರದಲ್ಲಿದ್ದಂತೆ | ೧ ರಿಂದ ೮ರವರೆಗಿನ ದೇವತೆಗಳು – ಅಷ್ಟದಿಕ್ಪಾಲಕರು[೭] |
| ೯. | ಗಣೇಶ (ಪ) | ಆದಿತ್ಯ |
| ೧೦. | ಬಲಭದ್ರ (ದ. – ಆ.ದ ಮಧ್ಯೆ) | ಭೃಗು |
| ೧೧. | ಚಕ್ರಧರ (ದ. – ನೈ.ದ ಮಧ್ಯೆ) | ಅಶ್ವಿನೀ ದೇವತೆ |
| ೧೨. | ಗುಹಾ/ಬುದ್ಧ (ನೈ) | – " – |
| ೧೩. | ಮಹಾಲಕ್ಷ್ಮೀ (ವಾ) | ಸರಸ್ವತಿ |
| ೧೪. | ವಿಷ್ಣು (ಉ. – ವಾ.ದ ಮಧ್ಯೆ) | ಪದ್ಮಾ |
| ೧೫. | ಶಂಕರ (ಉ. – ಈ. ದ ಮಧ್ಯೆ) | ಪೃಥ್ವೀ |
| ೧೬. | ಸುದರ್ಶನ (ಈ) | ಸಚಿವ (=ಬೃಹಸ್ಪತಿ/ಮುನಿಗಳು) |
| ೧೭. | ಅನಂತ/ಪೌತ್ರಿಕಾ (ಈ. ದ ಕೆಳಗೆ)೬ | [೯ ರಿಂದ ೧೬ರವರೆಗಿನ ದೇವತೆಗಳನ್ನು ಎಂಟು ದಿಕ್ಕುಗಳ ಮಧ್ಯೆ, ದ್ವಾರಪಾಲಕರ ಮಧ್ಯೆ ಸ್ಥಾಪಿಸಬೇಕು] |

ಭಿನ್ನವಾಗಿ, ದಿಗ್ದೇವತೆಗಳನ್ನು ಹೇಳಿದೆ. ಎರಡೂ ಗ್ರಂಥಗಳು ಈ ದೇವತೆಗಳ ಸ್ಥಾನವನ್ನು, ದಿಕ್ಕಿನ ಬದಲು, ವಾಸ್ತುದೇವತೆಗಳ (ಸ್ಥಾನದ) ಹೆಸರಿನಲ್ಲಿ ಹೇಳಿವೆ. (ವಿಶ್ವಾಮಿತ್ರ ಸಂಹಿತೆಯು ಮೂವತ್ತೆರಡು ದೇವತೆಗಳ ಬಗ್ಗೆ ಹೇಳುವಾಗ ಮೊದಲ ಮತ್ತು ಎರಡನೇ ಪ್ರಾಕಾರದಲ್ಲಿರುವುವೆಂದು ಗುರುತಿಸಿರುವ ದೇವತೆಗಳನ್ನೇ ಬಹುಶಃ ಷೋಡಶ ಪರಿವಾರದ ದೇವತೆಗಳೆಂದು ಗುರುತಿಸಬಹುದೆನಿಸುತ್ತದೆ.

**(ಈ) ದ್ವಾತ್ರಿಂಶತ್ ಪರಿವಾರ ದೇವತೆಗಳು :** ೩೨ ಪರಿವಾರ ದೇವತೆಗಳನ್ನು ಸ್ಥಾಪಿಸುವಲ್ಲಿ ಒಂದರಿಂದ ಐದನೇ ಪ್ರಾಕಾರದವರೆಗೂ ಪರಿವಾರ ದೇವತೆಗಳಿರುತ್ತಾರೆ. ಗ್ರಂಥಗಳು[೮] ಹೇಳುವಂತೆ, ಆ ದೇವತೆಗಳ ಪಟ್ಟಿ ಇಂತಿದೆ :

ಮಯಮತವು ಈ ಬಗ್ಗೆ ಹೆಚ್ಚಿನ ವಿವರಗಳನ್ನು ನೀಡದೆ, ೩೨ ದೇವತೆಗಳನ್ನು ಸಂದರ್ಭಕ್ಕೆ ತಕ್ಕಂತೆ ಸ್ಥಾಪಿಸಬೇಕೆಂದು ಹೇಳಿದೆ. ವಿಶ್ವಾಮಿತ್ರ ಸಂಹಿತೆಯು ೩೨ ದೇವತೆಗಳಿಗೆ ನಿಶ್ಚಿತ

| ವಿಶ್ವಾಮಿತ್ರ ಸಂಹಿತೆ | ಮಾನಸಾರ | |
|---|---|---|
| ೧ ರಿಂದ ೮ರವರೆಗಿನ ದೇವತೆಗಳು (ಮೊದಲ ಪ್ರಾಕಾರದಲ್ಲಿ) | ೧೭ ರಿಂದ ೨೪ರವರೆಗಿನ ದೇವತೆಗಳು (ಮೂರನೇ ಪ್ರಾಕಾರದಲ್ಲಿ) | ೨೪ ವಿಷ್ಣುವಿನ ಮೂರ್ತಿಗಳು |
| ವ್ಯಾಪ್ತಿ ಇತ್ಯಾದಿ ಅಷ್ಟಪರಿವಾರದ ದೇವತೆಗಳು | ೧೭. ಪಾಂಚಜನ್ಯ | ೮ ದಿಕ್ಪಾಲಕರು |
| | ೧೮. ಮುಸಲ | ೧೦ ಅವತಾರಗಳು |
| ೯ ರಿಂದ ೧೬ರವರೆಗಿನ ದೇವತೆಗಳು (ಎರಡನೇ ಪ್ರಾಕಾರದಲ್ಲಿ) | ೧೯. ಸುದರ್ಶನ<br>೨೦. ನಂದಕ | (ಮತ್ಸ್ಯ, ಕೂರ್ಮ ಅವತಾರಗಳು ಮತ್ತು ದಿಕ್ಪಾಲಕರನ್ನು ಸ್ಥಾಪಿಸದೆ ಬಿಡಬಹುದು). |
| ೯. ವರಾಹ (ಪೂ) | ೨೧. ಕೌಮೋದಕಿ | |
| ೧೦. ಪರಶುರಾಮ (ಆ) | ೨೨. ಶಾರ್ಙ್ಗ | |
| ೧೧. ನರಸಿಂಹ (ದ) | ೨೩. ಪದ್ಮಾ | |
| ೧೨. ದಾಶರಥರಾಮ (ನೈ) | ೨೪. ವನಮಾಲಾ | |
| ೧೩. ಶ್ರೀಧರ (ಪ) | ೨೫ ರಿಂದ ೩೨ ರವರೆಗಿನ ದೇವತೆಗಳು | |
| ೧೪. ವಾಮನ (ವಾ) | (ಐದನೇ ಪ್ರಾಕಾರದಲ್ಲಿ) | |
| ೧೫. ಹಯಗ್ರೀವ (ಉ) | ಅಷ್ಟದಿಕ್ಪಾಲಕರು | |
| ೧೬. ವಾಸುದೇವ (ಈ) | ನಾಲ್ಕನೇ ಪ್ರಾಕಾರದಲ್ಲಿ (?) ಹತ್ತು ದ್ವಾರಪಾಲಕರಿರಬೇಕು. | |

ಪ್ರಾಕಾರಗಳನ್ನು ಹೇಳಿದ್ದು, ಎರಡನೇ ಪ್ರಾಕಾರದ ಹೊರಗೆ ವಿಶ್ವಕ್ಸೇನನ ಬಿಂಬ ಇರಬೇಕೆಂದಿದೆ. ಮಾನಸಾರದಲ್ಲಿ ದಶಾವತಾರಗಳನ್ನು ಮೊದಲ ಪ್ರಾಕಾರದಲ್ಲಿ ಸ್ಥಾಪಿಸಬೇಕೆಂದಿದೆ ; ಉಳಿದಂತೆ, ಮಾನಸಾರ ಕೃತಿಯಲ್ಲಿ ನೀಡಿರುವ ಚಿತ್ರವನ್ನು ಗಮನಿಸಿದರೆ, ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು (ತೀರ್ಥಂಕರರನ್ನು ಸೂಚಿಸಿರುವ ಸ್ಥಾನದಲ್ಲಿ) ಮತ್ತು ದಿಕ್ಪಾಲ ಮೂರ್ತಿಗಳು ಮೂರನೇ ಆವರಣದಲ್ಲಿ ಇರುತ್ತವೆಂದು ಹೇಳಬಹುದು. ಈ ದೇವತೆಗಳ ಆಲಯಗಳನ್ನು ನಿರ್ಮಿಸುವಾಗ, ಒಂದೊಂದು ದಿಕ್ಪಾಲಕರ ಅಕ್ಕಪಕ್ಕದಲ್ಲೂ ವಿಷ್ಣುವಿನ ೩-೩ ಮೂರ್ತಿಗಳ ಆಲಯಗಳನ್ನು ನಿರ್ಮಿಸುವುದು ಸೂಕ್ತವೆನಿಸುತ್ತದೆ.[೯]

ಪಾದ್ಮಸಂಹಿತೆಯಲ್ಲೂ ಪರಿವಾರ ದೇವತೆಗಳ ವಿವರಗಳಿರುವುವಾದರೂ, ಅದರಲ್ಲಿ ಷೋಡಶ ಪರಿವಾರ, ದ್ವಾತ್ರಿಂಶತ್ ಪರಿವಾರ ಇತ್ಯಾದಿಯಾಗಿ ಪ್ರತ್ಯೇಕವಾಗಿ ಹೇಳಿಲ್ಲ. ಒಂದೊಂದು ಪ್ರಾಕಾರದಲ್ಲೂ ಇರುವ ದೇವತೆಗಳನ್ನು ಅದು ಉಲ್ಲೇಖಿಸಿದೆ. ಆದರೆ, ೮, ೧೬ – ಈ ರೀತಿಯ ಗಣಿಕೆಗಿಂತಲೂ ಬೇರೆ ರೀತಿಯಲ್ಲಿ ಹೇಳಿರುವುದನ್ನು ಈ ಕೆಳಗಿನ ಪಟ್ಟಿಯಿಂದ ಗಮನಿಸಬಹುದಾಗಿದೆ.[೧೦]

**ಎರಡನೇ ಪ್ರಾಕಾರ :** (i) ಸೋಮ – ಈಶರ ನಡುವೆ ವಿಶ್ವಕ್ಸೇನ, (ii) ದಕ್ಷಿಣದ ಅಂಕಣದಲ್ಲಿ ಸಪ್ತಮಾತೃಕೆ (ನೈ), (iii) ಇಂದ್ರಾದಿ ದಿಕ್ಪಾಲಕರು, (iv) 'ಅಂತರ್ಹಾರ'ದಲ್ಲಿ ಸೂರ್ಯ ಚಂದ್ರ, ಪುರುಷ ಮತ್ತು ಅಚ್ಯುತಾ, (v) ಹಯಗ್ರೀವ, ಸ್ಮರ, ಸಂಕರ್ಷಣ, ವರಾಹ, ವಿಘ್ನರಾಟ್, ಪ್ರದ್ಯುಮ್ನ, ಕಾತ್ಯಾಯಿನೀ, ಅನಂತ, ಅನಿರುದ್ಧ, ನರಾಸನ (ಕುಬೇರ), ನರಸಿಂಹ, ಮುಸಲವಾನ್, ಶಂಖ, ಖಡ್ಗ, ಗಧಾಧರ, ಶಾರ್ಙ್ಗಿ, ಪದ್ಮಿ ಮತ್ತು ವಜ್ರ

**ಮೂರನೇ ಪ್ರಾಕಾರ :** (i) 'ಮಧ್ಯಾಂತರ್ಹಾರ'ದಲ್ಲಿ ಗೋಪುರದ ಪಾರ್ಶ್ವಗಳಲ್ಲಿ ದ್ವಾದಶಾದಿತ್ಯರು ಮತ್ತು ಮಧ್ಯೆ ಮನ್ಮಥ ಇರಬೇಕು ; ಅಷ್ಟವಸುಗಳು ಮತ್ತು ಮುಂದೆ ಗಣೇಶನಿರಬೇಕು. (ii) ಸ್ಕಂದ ಮತ್ತು ಗಣೇಶರ ಮಧ್ಯೆ ಪಿತೃಗಣ ಇರಬೇಕು. (iii) ವಿಶ್ವೇದೇವ, ಮರುತ, ಗುಹಾ ಮತ್ತು ದುರ್ಗಾ, (iv) ದುರ್ಗಾ ಮತ್ತು ಕುಬೇರರ ಮಧ್ಯೆ ಸಪ್ತರ್ಷಿಯರು, (v) ಕುಬೇರ ಮತ್ತು ಈಶಾನರ ಮಧ್ಯೆ ಏಕಾದಶರುದ್ರರು, (vi) ಕ್ಷೇತ್ರಪಾಲ[೧೧] ಮತ್ತು ಪ್ರಾಂಗಣದಲ್ಲಿ ಕುಮುದಾದಿಗಳು (=ದ್ವಾರಪಾಲಕರು)

**ಐದನೇ ಪ್ರಾಕಾರ :** (i) 'ಮರ್ಯಾದಾವರಣ'ದಲ್ಲಿ ಅಷ್ಟಾದಶ ಗಣಗಳನ್ನು ಸ್ಥಾಪಿಸಬೇಕು ('ಉತ್ತಮ' ಪರಿವಾರದಲ್ಲಿ ಇದು ಮತ್ತೆ ಇರುತ್ತದೆ).

(ii) ಉಪೇಂದ್ರ ಮುಂತಾದವರನ್ನು ಕ್ರಮವಾಗಿ ಮಾಡಬೇಕು. ಅಂದರೆ, ಉಪೇಂದ್ರ, ಪ್ರಾಕೃತ, ಪುಣ್ಯ, ಪುಷ್ಕರ, ವಿಶ್ವಭಾವನ, ಅಸುರ (ಘ್ನ), ಅಷ್ಟಭೂತನಾಥರು.

(iii) 'ಮಧ್ಯಮ' ರೀತಿಯ ದೇವಾಲಯದಲ್ಲಿ ಗಣಗಳನ್ನು ರಚಿಸಬೇಕು.

(iv) ಎಲ್ಲಕ್ಕೂ ಮೊದಲು ಇಂದ್ರನನ್ನು ಸ್ಥಾಪಿಸಬೇಕು (?)

ಹೀಗೆ ಪಾದ್ಮಸಂಹಿತೆಯು, ಒಂದೊಂದು ಪ್ರಾಕಾರದಲ್ಲೂ ಇರುವ ಒಟ್ಟಾರೆ ದೇವತೆಗಳನ್ನು ಒಂದಾದ ಮೇಲೊಂದರಂತೆ ಹೇಳುತ್ತಿದೆ. ದೇವತೆಗಳ ದಿಕ್ಕು ಮತ್ತು ಸ್ಥಾನವನ್ನು ಎಲ್ಲೆಡೆ ಹೇಳಿಲ್ಲದಿರುವುದರಿಂದ ಮತ್ತು ಪರಿವಾರಗಳ ಸಂಖ್ಯೆಯನ್ನೂ ಹೇಳಿಲ್ಲದಿರುವುದರಿಂದ ಕೆಲವೆಡೆ ನನಗೆ ವಿವರಗಳು ಅಸ್ಪಷ್ಟವಾಗಿವೆ.

ಇದರೊಂದಿಗೆ ಮಾನಸಾರವು, ಒಂದು ಪ್ರಾಕಾರದ ಗೋಡೆಯಿಂದ ಇನ್ನೊಂದು ಪ್ರಾಕಾರದ ಗೋಡೆಯ ನಡುವೆ ವೈನತೇಯನನ್ನು ಸ್ಥಾಪಿಸಬೇಕೆಂದಿದೆ ; ಅಲ್ಲದೆ, ಮುಂಭಾಗದಲ್ಲಿ ಉತ್ತರದೆಡೆ ವಿಶ್ವಕ್ಸೇನನೂ, ದ್ವಾರದ ಬಲಗಡೆ ಸೂರ್ಯನೂ ಇರಬೇಕೆಂದೂ ಅದು ಹೇಳಿದೆ.[೧೨] ಎರಡನೇ ಪ್ರಾಕಾರದ ಹೊರಗೆ ಪರಿವಾರಗಳ ಮುಖ್ಯಸ್ಥನಾಗಿ ವಿಶ್ವಕ್ಸೇನನಿರಬೇಕೆಂದು ವಿಶ್ವಾಮಿತ್ರ ಸಂಹಿತೆಯು ಹೇಳಿದೆ. ಹೀಗೆ, ವಿವಿಧ ಪರಿವಾರ ದೇವತೆಗಳನ್ನು ಗ್ರಂಥಗಳು ವಿವರಿಸಿದ್ದರೂ, ಅನಂತ, ಗರುಡ, ವಿಶ್ವಕ್ಸೇನ, ಸುದರ್ಶನ – ಈ ದೇವತೆಗಳಲ್ಲಿ ಒಬ್ಬೊಬ್ಬರನ್ನು ಒಂದೊಂದು ಗ್ರಂಥಗಳು 'ಪ್ರಧಾನ ಪರಿವಾರ ದೇವತೆ' ಎಂದು ಗುರುತಿಸಿವೆ ; ಅಲ್ಲದೆ, ಪರಿವಾರ ದೇವತೆಗಳನ್ನು ಹೇಗೆ ಬಿಡಿಸಬೇಕು, ಅವುಗಳ ಭಂಗಿ, ವರ್ಣ, ಆಯುಧ – ಮುಂತಾದವುಗಳ ಬಗ್ಗೆಯೂ ವಿವರಗಳಿರುವುದಾಗಿ ತಿಳಿದುಬರುತ್ತದೆ.[೧೩]

ಪ್ರಾಕಾರಗಳ ದ್ವಾರಗಳಲ್ಲಿ ಇರಬೇಕಾದ ದ್ವಾರದೇವತೆಗಳ ಬಗ್ಗೆಯೂ ವಿವರಗಳು ಗ್ರಂಥಗಳಲ್ಲಿ[೧೪] ದೊರೆಯುತ್ತವೆ. ಅದರಂತೆ ವಿವರಗಳನ್ನು ಈ ಕೆಳಗಿನ ಪಟ್ಟಿಕೆಯಲ್ಲಿ ಗಮನಿಸಬಹುದಾಗಿದೆ.

ಇದರೊಂದಿಗೆ, ಕಪಿಂಜಲ ಸಂಹಿತೆಯು ಚಂಡ – ಪ್ರಚಂಡರನ್ನೂ, ಪೌಷ್ಕರ ಸಂಹಿತೆಯು ಧಾತೃ – ವಿಧಾತೃರನ್ನೂ, ಈಶ್ವರಸಂಹಿತೆಯು ಜಯ – ವಿಜಯರನ್ನೂ ದ್ವಾರದೇವತೆಗಳೆಂದು ಗುರುತಿಸಿರುವುದಾಗಿ ತಿಳಿದುಬರುತ್ತದೆ. ಮಾನಸಾರವು, ಈ ೧೦ ದೇವತೆಗಳನ್ನು ೫ ಪ್ರಕಾರಗಳ ದ್ವಾರದೇವತೆಗಳೆಂದೇ ಗುರುತಿಸಿದೆ ; ಕೆಲವು ಗ್ರಂಥಗಳು ಪ್ರಾಕಾರದೊಳಗಿನ ದೇವತೆಗಳೆಂದು ಗುರುತಿಸಿರುವಂತೆ

| ವಿಶ್ವಾಮಿತ್ರ ಸಂಹಿತಾ ಮತ್ತು ಪಾದ್ಮಸಂಹಿತಾ | ಪಾರಮೇಶ್ವರ ಸಂಹಿತಾ |
|---|---|
| ಕುಮುದ – ಕುಮುದಾಕ್ಷ | ಚಂಡ–ಪ್ರಚಂಡ (ಅರ್ಧ ಮಂಟಪದಲ್ಲಿ) |
| ಪುಂಡರೀಕ – ವಾಮನ | ಧಾತೃ – ವಿಧಾತೃ |
| ಶಂಕುಕರ್ಣ – ಸರ್ಪನೇತ್ರ | ಜಯ – ವಿಜಯ |
| ಮಾನವ – ಪೃಷ್ಣಿಗರ್ಭ | ಭದ್ರ – ಸುಭದ್ರ |
| ಸುಮುಖ – ಸುಪ್ರತಿಷ್ಠ | – |

| ಮಾನಸಾರ (ಒಳಗಿನಿಂದ)<br>ಬಲ – ಎಡ | ಮಯಮತ |
|---|---|
| ಚಂಡ – ಪ್ರಚಂಡ | ಚಂಡ – ಪ್ರಚಂಡ |
| ಚಕ್ರಧರ – ಪಾಂಚಜನ್ಯ | ರಥನೇಮಿ – ಪಾಂಚಜನ್ಯ |
| ಗಣೇಶ – ಕಾತ್ಯಾಯಿನಿ | ದುರ್ಗಾ – ಗಣೇಶ |
| ಭಾಸ್ಕರ – ಚಂದ್ರ | ರವಿ – ಚಂದ್ರ |
| ಭುಜಂಗೇಶ – ದಿವಸ್ಪತಿ | ಸುರೇಶ್ವರ – ಸುರಪತಿ |

ತೋರುತ್ತದೆ (ಏಕೆಂದರೆ, ಅವುಗಳ ಸ್ಥಾನವನ್ನು ನೇರವಾಗಿ ಹೇಳಿಲ್ಲ). ಇವರುಗಳನ್ನು 'ಗಣೇಶ್ವರರು' ಎಂದೇ ಕರೆದಿರುವ ಪಾರಮೇಶ್ವರ ಸಂಹಿತೆಯಲ್ಲಿ ಮತ್ತು ಪಾದ್ಮಸಂಹಿತೆಯಲ್ಲಿ ಇವರುಗಳನ್ನು ಬಿಡಿಸುವ ಕ್ರಮ ಮತ್ತು ಆಯುಧಗಳ ಬಗ್ಗೆಯೂ ಹೇಳಿದೆ.

**(ಉ) ವೈಖಾನಸ ರೀತ್ಯಾ ಪರಿವಾರ ದೇವತೆಗಳು :** ಈವರೆಗೆ ಹೇಳಿರುವ ವಿಷ್ಣು ದೇವಾಲಯದ ಪರಿವಾರ ದೇವತೆಗಳ ವಿವರಗಳು ಪಾಂಚರಾತ್ರಾಗಮ ಸಂಪ್ರದಾಯ ದ್ದಾದರೆ, ವೈಖಾನಸ ಸಂಪ್ರದಾಯದ ದೇವಾಲಯಗಳ ಪರಿವಾರ ದೇವತೆಗಳು ಬೇರೆಬೇರೆಯಾಗಿರುವುದಾಗಿ ತಿಳಿದು ಬರುತ್ತದೆ. ಇದರಂತೆ, ಏಳು ಪ್ರಾಕಾರಗಳಿದ್ದು, ಅಲ್ಲಿರುವ ದೇವತೆಗಳ ಸಂಖ್ಯೆ ಮತ್ತು ಪ್ರಾಕಾರಗಳ ಸಂಖ್ಯೆಯ ಆಧಾರದ ಮೇಲೆ ದೇವಾಲಯಗಳನ್ನು ಬೇರೆ ಬೇರೆ ಪ್ರಕಾರಗಳಾಗಿ ಗುರುತಿಸುವುದುಂಟು.[೧೫] ವೈಖಾನಸಾಗಮದ ಪ್ರಕಾರ, ಒಂದೇ ಪ್ರಾಕಾರವಿದ್ದರೂ (ಇದು 'ಅಧಮ' ರೀತಿ)[೧೬] ಅದರಲ್ಲಿ ವಿಷ್ಣುವಿನ ೫ ಪರಿವಾರ ದೇವತೆಗಳಿರಬೇಕು. ವಿಶ್ವಕ್ಸೇನ, ಗರುಡ, ಶ್ರೀ ಭೂತ (ಭೂ?), ನ್ಯಕ್ಷ ಮತ್ತು ಮಹಾಭೂತ (ಅಥವಾ ಭೂತಪೀಠ) ; ಕೆಲವೆಡೆ, ನ್ಯಕ್ಷ ಮತ್ತು ಮಹಾಭೂತದ ಬದಲು ಚಕ್ರ ಮತ್ತು ಶಂಖವನ್ನು ಹೇಳಿದೆ.[೧೭]

ವೈಖಾನಸ ಸಂಪ್ರದಾಯದ್ದೇ ಆದ ವಿಮಾನಾರ್ಚನ ಕಲ್ಪವು, ಕೆಲಮಟ್ಟಿಗೆ ಇದೇ ದೇವತೆಗಳನ್ನೇ ಉಲ್ಲೇಖಿಸುತ್ತಿದೆ. ಆದರೆ, ಒಂದೊಂದು ಒಂದೊಂದು ಆವರಣದಲ್ಲಿನ ದೇವತೆಗಳ ಪಟ್ಟಿಯೂ ಬೇರೆ ಬೇರೆ ಸಂದರ್ಭಗಳಲ್ಲಿ ಪುನರಾವರ್ತನೆಗೊಂಡು (ನನಗೆ ತಿಳಿದ ಮಟ್ಟಿಗೆ) ಒಂದೇ ಪ್ರಾಕಾರಕ್ಕೆ ಬೇರೆ ಬೇರೆ ದೇವತೆಗಳ ಪಟ್ಟಿಯೂ ದೊರೆಯುತ್ತಿದೆ.[೧೮] ಆ ಗ್ರಂಥವು ಹೇಳುವ ಬೇರೆ ಬೇರೆ ಸಂದರ್ಭಗಳಲ್ಲಿನ ಪರಿವಾರ ದೇವತೆಗಳೆಂದರೆ, ಆವರಣಗಳ ಪ್ರಕಾರ :

**ಒಂದನೇ ಆವರಣ :** (i) ಪ್ರಭೂತ, ಗರುಡ, ಚಕ್ರಧ್ವಜ, ಶಂಖ, ಮಹಾಭೂತ ಮತ್ತು ಅಕ್ಷಹಂತ.

(ii) ಗರುಡ

(iii) ಪುರುಷ (ಪೂ), ಕಪಿಲ (ಆ), ಸತ್ಯ (ದ), ಯಜ್ಞ (ನೈ), ಅಚ್ಯುತ (ಪ), ನಾರಾಯಣ (ವಾ), ಅನಿರುದ್ಧ (ಉ), ಪುಣ್ಯ (ಈ)

(iv) ಶ್ರೀಭೂತ, ಗರುಡ, ಚಕ್ರ, ಶಂಖಧ್ವಜ, ಶಂಖ, ಯೂಥಾಧಿಪ, ಅಕ್ಷಹಂತ.

**ಎರಡನೇ ಆವರಣ :** (i) ಗರುಡ, ಚಕ್ರ

(ii) ವಾರಾಹ, ಸುಭದ್ರ, ನಾರಸಿಂಹ, ಶಿತಾತ್ಮ, ವಾಮನ, ತ್ರಿವಿಕ್ರಮ, ಸರ್ವವಿದ್ಯೇಶ್ವರ.

(iii) ಮಿತ್ರ, ಸನಾತನ, ಅತ್ರಿ, ಸನಂದನ, ಸನತ್ಕುಮಾರ, ವಿಶ್ವಸೇನ.

## ವೈಖಾನಸ ಸಂಪ್ರದಾಯದ ದೇವಾಲಯಗಳ ಪರಿವಾರ ದೇವತೆಗಳು[೧೮] (ಪ್ರಾಕಾರಗಳ ಪ್ರಕಾರ)

| ೧ನೇ ಪ್ರಕಾರ | ೨ನೇ ಪ್ರಾಕಾರ | ೩ನೇ ಪ್ರಾಕಾರ | ೪ನೇ ಪ್ರಾಕಾರ | ೫ನೇ ಪ್ರಾಕಾರ | ೬ನೇ ಪ್ರಾಕಾರ | ೭ನೇ ಪ್ರಾಕಾರ |
|---|---|---|---|---|---|---|
| ಪುರುಷ | ವರಾಹ (ಪೂ) | ಗಂಗಾ (ಪೂ) | ವಿಷ್ಣು | ಅನುಮತಿ | ನಾರದ | ಆರ್ಯಮಾ |
| ಕಪಿಲ (ಆ) | ನರಸಿಂಹ (ದ) | ಯಮುನಾ (ದ) | ಹರಿಣೀ | ದ್ವಾದಶಾದಿತ್ಯರು | ಪ್ರಹ್ಲಾದ | ಆದಿತ್ಯ |
| ಸತ್ಯ (ದ) | ವಾಮನ (ಪ) | ನರ್ಮದಾ (ಪ) | ಅಕ್ಷತ | ವತ್ಸರ | ಹಲೇಶ | ಸವಿತೃ |
| ಯಜ್ಞ(ನೈ) | ತ್ರಿವಿಕ್ರಮ (ಉ) | ಸಿಂಧೂ (ಉ) | ಅಗ್ನಿ | ಗಂಧರ್ವ | ಮದನ | ಸಾವಿತ್ರೀ |
| ಅಚ್ಯುತ (ಪ) | ಅಷ್ಟದಿಕ್ಪಾಲಕರು | ದುರ್ಗಾ | ಗುಹ | ಸಪ್ತಮಾತೃಕಾ | ಷಡ್ರುತು | ಅಗ್ನಿ |
| | | ಸರಸ್ವತೀ | ಮಿತ್ರ | ಮುನಿಗಳು | ವಿಪ | ದಂಡಧರ |
| ನಾರಾಯಣ (ವಾ) | ನವಗ್ರಹಗಳು | ಶ್ರೀ | ತೋಯ | ಪಂಚಪ್ರಾಣಾದಯ | ಯಕ್ಷ | ಯಮ |
| ಅನಿರುದ್ಧ (ಉ) | | ಜ್ಯೇಷ್ಠಾ | ಪವಿತ್ರ | ಅಪ್ಸರೆಯರು | ವಜನೀ | ಇಂದ್ರ |
| ಪುಣ್ಯ (ಈ) | | ಮಹಾಕಾಳೀ | ಪವನ | ಜಯಾ ಮತ್ತಿತರರು | ಜಾಂಬವ | ಇಂದ್ರಜ |
| | | ಸುಂದರೀ | ವಾಯು | ಅಶ್ವಿನೀ ದೇವತೆಗಳು | ಚಂದ್ರಾಭಾ | ನಿರುತಿ |
| | | ಸ್ವಾಹಾ | ತಕ್ಷಕ | ೭ ಮರುತರು | ಸುರಾ | ಪಾಶಭೃತ್ |
| | | ಸ್ವಧಾ | ಶಿವ | ೮ ವಸುಗಳು | ಕಿನ್ನರಜೋಡಿ | ಸರಿತ್ಪತಿ |
| | | ಮಾಯಾ | ಗವಿಷ್ಠ | ೭ ರೋಹಿಣಿಯರು | | ರುದ್ರ |
| | | ಸಂಹ್ಲಾದಿನೀ | ನಾಲ್ಕು ವೇದಗಳು | ವಿದ್ಯಾಧರರು | | ರುದ್ರಜ |
| | | ರಾಕಾ | (ವಿದಿಕ್ಕುಗಳಲ್ಲಿ) | ಶತರುದ್ರರು | | ಜವನ |
| | | ಸಿನೀವಾಲೀ | | ಏಕಾದಶರುದ್ರರು | | ಧನದ |
| | | [ಇಲ್ಲಿ, ನದೀ ದೇವತೆ | | ಕುಹೂ | | ಸೋಮ |
| | | ಹಾಗೂ ಸ್ತ್ರೀ ದೇವತೆ | | | | ಆಪವತ್ಸ |
| | | ಗಳನ್ನು ಹೇಳಿದೆ] | | | | ಈಶ |
| | | | | | | ಬ್ರಹ್ಮ |

(iv) ಇಂದ್ರಾದಿಗಳು, ಭಾಸ್ಕರ ಮತ್ತು ಇಂದೆ (ಅಂತರಾಲದಲ್ಲಿ), ಚಂದ್ರ, ಅಂಗಾರಕ, ಬುಧ, ಗುರು, ರಾಹು, ಕೇತು.

**೩ನೇ ಆವರಣ :** (i) ಶಂಖ, ಧ್ವಜ.

(ii) ದಿಕ್ಪಾಲಕರು, ಎಡ – ಬಲಗಳಲ್ಲಿ ಹರಿಣೀ, ಲಕ್ಷ್ಮೀ, ಸುಭದ್ರ[೨೦]

(iii) ದಿಕ್ಪಾಲಕರು, ಪಿತಾಮಹ ಮತ್ತು ಪುಣ್ಯ (ಬಲಭಿತ್ತಿಯ ಪಾರ್ಶ್ವದಲ್ಲಿ), ಎಡಕ್ಕೆ ಗಂಗಾಧರ ಮತ್ತು ವಿಷ್ಣು, ವಿಶ್ವಕ್ಸೇನ (ಉ. – ಈ. ದ ಮಧ್ಯೆ)

(iv) ಗಂಗಾ, ಯಮುನಾ, ನರ್ಮದಾ, ಸಿಂಧು (ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ)

(v) ದುರ್ಗಾ (ಆ), ಸಿದ್ಧಿ, ಲಕ್ಷ್ಮೀ, ಜ್ಯೇಷ್ಠಾ, ಭೂಮಿ, ಸುಧಾ, ಸುಂದರೀ, ಸ್ವಾಹಾ, ಸ್ವಧಾ, ಮಾಯಾ, ಸಂಹ್ಲಾದಿನೀ, ರಾಕಾ, ಸಿನೀವಾಲೀ (ಅಂತರಾಲದಲ್ಲಿ)

**೪ನೇ ಆವರಣ :** (i) ಯೂಥಾಧಿಪ

(ii) ಗವಿಷ್ಠ (ಪೂ), ಭೂದೇವಿ (ದ), ಅಗ್ನಿ (ನೈ ?), ವಾಯು (ಉ ?), ಆಗ್ನೇಯಾದಿ ಮೂಲೆಗಳಲ್ಲಿ ೪ ವೇದಗಳು, ಅಂತರಾಲದಲ್ಲಿ ಶಿವ, ವಿಷ್ಣು ಮತ್ತು ತಕ್ಷಕ (ಸರ್ಪ), ಭೂತನಾಯಕ.

**೫ನೇ ಆವರಣ :** (i) ಅಕ್ಷಹಂತ, ಅಕ್ಷಹಂತನ ಪೀಠ

(ii) ಚಕ್ರಪುರುಷ (ಪೂರ್ವದ ನಂತರ), ಬ್ರಹ್ಮ ಮುಂತಾದವರು (ದ). ಸಪ್ತಮಾತೃಕಾ, ಜಯಾ ಇತ್ಯಾದಿ ಅಪ್ಸರಸ್ತ್ರೀಯರು (ಪ), ಕುಂಭಿಣಿ ಇತ್ಯಾದಿ ಸಪ್ತರೋಹಿಣಿಯರು (ಉ), ವತ್ಸರಗಳು ಮತ್ತು ಮರುತ್ತುಗಳು (ಆ), ಶತರುದ್ರ (ಅಂತರಾಲದಲ್ಲಿ), ಏಕಪಾದ (ಈಶಾನ್ಯ ಮತ್ತು ಪೂರ್ವದಿಕ್ಕಿನ ಅಂತರಾಲ(ದ ಮಧ್ಯೆ ?). ಏಕಾದಶರುದ್ರರು, ಇಂದ್ರ – ಅಗ್ನಿಯ ನಡುವೆ ದ್ವಾದಶಾದಿತ್ಯರು, ಗಂಧರ್ವರು (ದಕ್ಷಿಣ ಮತ್ತು ಆಗ್ನೇಯದ ಮಧ್ಯೆ), ಮುನಿಗಳು (ದಕ್ಷಿಣ ಮತ್ತು ಉತ್ತರದ ನಡುವೆ), ದೇವತೆಗಳು (ಉತ್ತರ ಮತ್ತು ವರುಣದ ನಡುವೆ), ಅಶ್ವಿನಿ ದೇವತೆಗಳು (ವರುಣ ಮತ್ತು ವಾಯುವ್ಯದ ನಡುವೆ) ವಿದ್ಯಾಧರರು (ಉತ್ತರ ಮತ್ತು ವಾಯವ್ಯದ ನಡುವೆ), ವಿದ್ಯಾಧರರು (ಉತ್ತರ ಮತ್ತು ವಾಯವ್ಯದ ನಡುವೆ).

**೬ನೇ ಆವರಣ :** (ಪೂರ್ವ ದ್ವಾರದ ನಂತರ)– ತುಂಬುರರು ಮತ್ತು ಅವರ ಬಲಕ್ಕೆ ನಾರದರು, ಋತುಗಳು (ದ), ಪ್ರಜಾಪತಿ (ಪ), ಮುದ್ಗಲ (ಉ), ಬಲರಾಮ (ಆ), ಯಕ್ಷ (ನೈ), ಜಾಂಬವಂತ (ವಾ), ಸುರಮ (ಈ), ಕಿನ್ನರ ಮಿಥುನ (ಪೂರ್ವದ ನಂತರ – ಅಂತರಾಲದಲ್ಲಿ) ಮತ್ತು ಅದರ ಬಲಕ್ಕೆ ಪ್ರಹ್ಲಾದ, ಕಾಮ ಮತ್ತು ವಿಪಂಚಿ (ದ) ಮತ್ತು ಎಡಭಾಗದಲ್ಲಿ – ವ್ಯಾಜಿನಿ ಕಾಮಿನಿ ಇತ್ಯಾದಿ ವಾರ ಗಣಿಕೆಯರು, ಪ್ರಭಾಸುಂದರಿಯರು (ಉ).

**೭ನೇ ಅವರಣ :** (ಪೂರ್ವ ದ್ವಾರದ ನಂತರ) – ಬ್ರಹ್ಮ ಮತ್ತು ಅದರ ಬಲಕ್ಕೆ ಆರ್ಯ, ದಂಡಶ್ರುತ (ದ), ಕುಬೇರ (ಉ), ಸವಿತೃ ಮತ್ತು ಸಾವಿತ್ರೀ (ಆ), ಇಂದ್ರ ಮತ್ತು ಅವನ ಸಹೋದರರು, ರುದ್ರ ಮತ್ತು ರುದ್ರಾಣಿಯರು, ಮರುತರು ಇತ್ಯಾದಿ.

ಆರು ಮತ್ತು ಏಳನೇ ಪ್ರಾಕಾರ ಬಿಟ್ಟು, ಉಳಿದಂತೆ ಒಂದೊಂದು ಆವರಣದಲ್ಲೂ ಈ ಗ್ರಂಥವು ಹೇಳಿರುವ ದೇವತೆಗಳ ಹಲವು ಪಟ್ಟಿಗಳು ರಾಮಚಂದ್ರರಾಯರು ನೀಡಿರುವ ಪಟ್ಟಿಯೊಂದಿಗೆ ಹೋಲುತ್ತದೆ. ವೈಖಾನಸರಂತೆ ಒಂದೊಂದು ಪ್ರಾಕಾರದಲ್ಲೂ ಗರ್ಭಗೃಹಕ್ಕೆದುರಾಗಿ ಇರಬೇಕಾದ ವಿಶೇಷ ದೇವತೆಗಳೆಂದರೆ, ಮೊದಲ ಪ್ರಾಕಾರದಲ್ಲಿ ವಿಶ್ವಕ್ಸೇನನೂ, ಎರಡನೇ ಪ್ರಾಕಾರದಲ್ಲಿ ಗರುಡನೂ, ೩ನೇ ಪ್ರಾಕಾರದಲ್ಲಿ ಚಕ್ರವೂ ಇರಬೇಕು. ೪ ಮತ್ತು ೫ನೇ ಪ್ರಾಕಾರದಲ್ಲಿ ಕ್ರಮವಾಗಿ ಪಾಂಚಜನ್ಯ, ಧ್ವಜವೂ (ಚಕ್ರಧ್ವಜ ?), ೬ ಮತ್ತು ೭ನೇ ಪ್ರಾಕಾರದಲ್ಲಿ ಕ್ರಮವಾಗಿ ಯೂಥಾಧಿಪನೂ, ಶಂಖಚೂಡನೂ ಇರಬೇಕು. ೪ನೇ ಪ್ರಾಕಾರದ ದ್ವಾರಶಾಖೆಯಲ್ಲಿ ಶಂಖನಿಧಿ ಮತ್ತು ಪದ್ಮನಿಧಿ ಇರಬೇಕೆಂದು ನಿಯಮವಿದೆ. ಏಳು ಪ್ರಾಕಾರಗಳಲ್ಲಿರಬೇಕಾದ ದ್ವಾರಪಾಲಕರಲ್ಲದೆ, ಗರ್ಭಗೃಹದ ಸುತ್ತ (?) ದ್ವಾರಪಾಲಕರಾಗಿ ಮಣಿಕ ಮತ್ತು ಸಂಧ್ಯಾ ಇರಬೇಕು ; ೫ನೇ ಪ್ರಾಕಾರದ ದ್ವಾರದಲ್ಲಿ ತುರ್ವಣ ಮತ್ತು ಬಲಿದರೂ, ೬ನೇ ಪ್ರಾಕಾರದಲ್ಲಿ ಶಾರ್ಙ್ಗನೂ ದ್ವಾರಪಾಲಕರಾಗಿರುತ್ತಾರೆ, (ಕೊನೆಯ) ಪ್ರಾಕಾರದ ಹೊರಗೆ ಚಂಡ (ಬಲಕ್ಕೆ) ಮತ್ತು ಪ್ರಚಂಡರಿರಬೇಕೆಂದೂ ವಿಧಿಸಲಾಗಿದೆ. ಇದರೊಂದಿಗೆ, ೭ ಪ್ರಾಕಾರ ದ್ವಾರಗಳಲ್ಲಿ ೧೪ ದ್ವಾರಪಾಲಕರಿರಬೇಕೆಂದು ವಿಮಾನಾರ್ಚನಕಲ್ಪದಲ್ಲಿದೆ.

**(ಊ) ಇತರ ದೇವತೆಗಳ ಪರಿವಾರಗಳು :** ಶೈವ ಮತ್ತು ವೈಷ್ಣವ ದೇವತೆಗಳಂತೆಯೇ ದೇವಿಗೂ ಪರಿವಾರಾಲಯಗಳನ್ನು / ಪರಿವಾರ ದೇವತೆಗಳನ್ನು ಗ್ರಂಥಗಳು ಹೇಳಿರುವುದಾಗಿ ತಿಳಿದುಬರುತ್ತದೆ. ಆದರೆ, ಆ ದೇವತೆಗಳಿಗೆ ಪರಿವಾರ ದೇವತೆಗಳು ಎಲ್ಲ ಸಂದರ್ಭಗಳಲ್ಲೂ ಒಂದೇ ರೀತಿಯಾಗಿ ನಿಗದಿತರಾಗಿರುತ್ತಾರೆ. ಆದರೆ, ದೇವಿಗೆ ಮಾತ್ರ, ಅವಳ ವಿವಿಧ ರೂಪಗಳಲ್ಲಿ ವಿವಿಧ ಪರಿವಾರ ದೇವತೆಗಳಿವೆ. ಅವುಗಳ ವಿವರವನ್ನು ರಾಮಚಂದ್ರರಾಯರ ಕೃತಿಯಲ್ಲಿ ಗಮನಿಸಬಹುದಾಗಿದೆ. ಇತರ ಸಣ್ಣ ದೇವತೆಗಳು ಮತ್ತು ದೇವಿಯ ಪರಿವಾರವನ್ನು ಮತ್ತು ಅವರ ವಾಹನಗಳನ್ನು ಭೂತ, ಪೈಶಾಚ, ಕ್ಷೇತ್ರಪಾಲ, ಗಣಗಳು – ಮತ್ತಿತರ

ಗುಂಪುಗಳಿಂದ ಆರಿಸಿಕೊಳ್ಳಬೇಕೆಂದು ಮಾನಸಾರವು ಹೇಳಿದೆ.[೨೨] ಜೈನ ಮತ್ತು ಬೌದ್ಧರ ಯಕ್ಷ-ಯಕ್ಷಿ (?) ತೀರ್ಥಂಕರರ ದೇವಾಲಯಗಳಲ್ಲಿ ಹಾಗೂ ಶಾಸ್ತ್ರಾಲಯಗಳಲ್ಲಿಯೂ, ಶಾಸ್ತ್ರದಲ್ಲಿನ ನಿಯಮಕ್ಕನುಗುಣವಾಗಿ ಪರಿವಾರ ದೇವತೆಗಳನ್ನು / ಅವುಗಳಿಗೆ ಆಲಯಗಳನ್ನು ರಚಿಸಬೇಕೆಂದಿದೆ. ಪರಿವಾರಾಲಯಗಳನ್ನು ಕಟ್ಟಿದಿದ್ದಲ್ಲಿ ಹಣ ಉಳಿತಾಯವಾಗುವುದಾದರೂ, ಕಟ್ಟಿದಲ್ಲಿ ಅಭಿವೃದ್ಧಿಯುಂಟಾಗುವುದೆಂದು ಮಾನಸಾರವು ಹೇಳಿದೆ.[೨೩] ಪರಿವಾರಾಲಯ ನಿರ್ಮಿಸದಿದ್ದಲ್ಲಿ ಮಹತ್ತರ ದೋಷ ಉಂಟಾಗುವುದೆಂದು ವಿಮಾನಾರ್ಚನಕಲ್ಪವೂ ಕೂಡಾ ಹೇಳಿರುವುದನ್ನಿಲ್ಲಿ ನೆನೆಯಬಹುದು.

ಸೋಮನಾಥಪುರದ ಕೇಶವ ದೇವಾಲಯದಲ್ಲೂ ಎರಡು ಪ್ರಾಕಾರಗಳಿದ್ದು, ಅವುಗಳಲ್ಲಿ ಅರವತ್ತನಾಲ್ಕು ಪರಿವಾರಾಲಯಗಳಿವೆ. ಶಾಸನದಲ್ಲೂ ಇದು ಉಕ್ತವಾಗಿದೆ: "ಆ ಪ್ರಾಕಾರದ ಬ್ರಹ್ಮಾದಿ ದೇವರು ಆರು, ಕೇಶವಾದಿ ದೇವರು ಹನ್ನೆರಡು, ಹಂಸನಾರಾಯಣಾದಿ ದೇವರು ಹನ್ನೆರಡು, ಮತ್ಸ್ಯಾದಿ ದೇವರು ಹತ್ತು, ಸಂಕರ್ಷಣಾದಿ ದೇವರು ಹನ್ನೆರಡು, ಕೃಷ್ಣಾವತಾರದ ದೇವರು ಹನ್ನೆರಡು"[೨೪] ಅಲ್ಲಿ ಒಟ್ಟು ಅರವತ್ತನಾಲ್ಕು ದೇವತೆಗಳಿದ್ದುದನ್ನು ಶಾಸನವು ಸಾಬೀತುಪಡಿಸಿದೆ. ಅರವತ್ತನಾಲ್ಕು ಪರಿವಾರ ದೇವತೆಗಳನ್ನು ಗ್ರಂಥಗಳು ನೇರವಾಗಿ ಹೇಳಿಲ್ಲ. ಮಾನಸಾರವು ಮೂವತ್ತೆರಡು ಪರಿವಾರ ದೇವತೆಗಳ ಬಗ್ಗೆ ಹೇಳುವಾಗ – ೨೪ ವಿಷ್ಣುವಿನ ಮೂರ್ತಿಗಳು, ೮ ದಿಕ್ಪಾಲಕರು, ೧೦ ಅವತಾರಗಳು ಇರಬೇಕೆಂದು ಹೇಳಿದೆ ; ಅದರೊಂದಿಗೆ, ಒಂದು ಮತ್ತು ಎರಡನೇ ಪ್ರಾಕಾರಗಳಲ್ಲಿ ಒಟ್ಟು ೧೬ ದೇವತೆಗಳು ಇರುತ್ತಾರೆ. ಹೀಗೆ, ಇಲ್ಲಿ ಒಟ್ಟು ೫೮ ದೇವತೆಗಳನ್ನು ಹೇಳಿದೆ. ಶಾಸನದಲ್ಲಿರುವಂತೆ ೬ ಬ್ರಹ್ಮಾದಿ ದೇವರನ್ನು ಅದು ಉಲ್ಲೇಖಿಸಿದೆ. ಇದನ್ನೂ ಸೇರಿಸಿದರೆ ಒಟ್ಟು ಅರವತ್ತನಾಲ್ಕು ಆಗುತ್ತದೆ. ಹೀಗೆ ೩೨ ದೇವತೆಗಳನ್ನು ಹೇಳುತ್ತಾ ಮಾನಸಾರವು, ೬೪ ದೇವತೆಗಳನ್ನು ಸ್ಥಾಪಿಸುವುದನ್ನೇ ಸೂಚಿಸುತ್ತಿರುವಂತಿದೆ (ಗ್ರಂಥವು ಹೇಳುವ ಅಷ್ಟದಿಕ್ಪಾಲಕರನ್ನು ಶಾಸನವು ಉಲ್ಲೇಖಿಸಿಲ್ಲ ಹಾಗೂ ಇನ್ನೂ ಕೆಲವು ವ್ಯತ್ಯಾಸಗಳಿವೆ). ಈಗಾಗಲೇ ಪಟ್ಟಿಯಲ್ಲಿ ನೀಡಿರುವಂತೆ, ಎಲ್ಲಾ ಪ್ರಾಕಾರಗಳ ದೇವತೆಗಳನ್ನು ಒಟ್ಟಾಗಿ ಗಮನಿಸಿದರೆ, ಅವು ೬೪ಕ್ಕೂ ಹೆಚ್ಚಾಗುತ್ತದೆಂಬುದು ಅರ್ಥವಾಗುತ್ತದೆ. ಹೀಗಾಗಿ, ವೈಷ್ಣವ ದೇವಾಲಯಗಳಲ್ಲಿ ಪರಿವಾರ ದೇವತೆಗಳು ಅರವತ್ತನಾಲ್ಕಕ್ಕೂ ಹೆಚ್ಚಾಗಿರಬಹುದೆಂಬುದು ಸೂಚ್ಯ ವಾಗಿದೆ.[೨೫]

ಕನ್ನಂಬಾಡಿಯ ಗೋಪಾಲಕೃಷ್ಣ ದೇವಾಲಯದಲ್ಲಿ ಎರಡು ಪ್ರಾಕಾರಗಳಿದ್ದು, ಒಳಪ್ರಾಕಾರದಲ್ಲಿ ೪೬ ಗುಡಿಗಳಿವೆ (ದಕ್ಷಿಣದೆಡೆ-೧೭, ಪಶ್ಚಿಮದೆಡೆ-೧೨ ಮತ್ತು ಉತ್ತರದೆಡೆ-೧೭ ಆಲಯಗಳಿವೆ). ಇವುಗಳಲ್ಲಿ ವಿಷ್ಣುವಿನ ಚತುರ್ವಿಂಶತಿ ಮೂರ್ತಿ, ದಶಾವತಾರ ಬಿಂಬಗಳಿವೆಯಲ್ಲದೆ, ಹರಿಹರ, ಹಯಗ್ರೀವ, ಬ್ರಹ್ಮ, ಸರಸ್ವತಿಯವರ ಬಿಂಬಗಳೂ ಇರುವುದಾಗಿ ತಿಳಿದುಬರುತ್ತದೆ. (ಎಂಎಆರ್) ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು ಮತ್ತು ದಶಾವತಾರದ ಬಿಂಬಗಳನ್ನು ಸ್ಥಾಪಿಸಬೇಕೆಂದು ಮಾನಸಾರವೂ, ಹಯಗ್ರೀವನನ್ನು ಸ್ಥಾಪಿಸಬೇಕೆಂದು ವಿಶ್ವಾಮಿತ್ರ ಸಂಹಿತೆಯೂ ಹೇಳಿದೆ. ಕಳಲೆಯ ಲಕ್ಷ್ಮೀಕಾಂತ ದೇವಾಲಯದ ಪ್ರಾಕಾರದಲ್ಲಿ ಪರವಾಸುದೇವ, ವೇಣುಗೋಪಾಲ, ರಾಮಪರಿವಾರ, ಲಕ್ಷ್ಮೀನಾರಾಯಣ, ಶ್ರೀನಿವಾಸ, ಕೇಶವ, ನಾರಾಯಣ, ರಾಮ, ಆಚಾರ್ಯರು ಮತ್ತು ಆಳ್ವಾರರ ಬಿಂಬಗಳಿವೆ. ಇಲ್ಲಿ ವಿಷ್ಣುವಿನ ಕೆಲವು ವ್ಯೂಹದೇವತೆಗಳೂ ಇರುವುದಲ್ಲದೆ, ಶ್ರೀವೈಷ್ಣವ ಆಚಾರ್ಯರು ಮತ್ತು ಭಕ್ತರುಗಳೂ ಇರುವುದನ್ನು ಗಮನಿಸಬಹುದು (ಆದರೆ, ಅಷ್ಟಪರಿವಾರಾಲಯಗಳಿಲ್ಲ). ಮೇಲುಕೋಟೆಯ ಚೆಲುವನಾರಾಯಣ, ನಾಗಮಂಗಲದ ಸೌಮ್ಯಕೇಶವ, ರಂಗಾಪುರದ ರಂಗಸ್ವಾಮಿ, ಹುಲ್ಲೇಕೆರೆಯ ಕೇಶವ-ಮುಂತಾದ ದೇವಾಲಯಗಳಲ್ಲೂ ಆಯಾ ಧರ್ಮದ ಆಚಾರ್ಯರು ಮತ್ತು ಭಕ್ತರುಗಳನ್ನು ಪರಿವಾರಾಲಯಗಳಲ್ಲಿ ಸ್ಥಾಪಿಸಲಾಗಿದೆ.

ಕಂಚಿಯ ವರದರಾಜ ಮತ್ತು ಶ್ರೀರಂಗಂನ ರಂಗನಾಥ ದೇವಾಲಯಗಳಲ್ಲೂ ಇದೇ ರೀತಿ ಇರುವುದಾಗಿ ತಿಳಿದುಬರುತ್ತದೆ.[೨೬] ಅಂದರೆ, ಪರಿವಾರ ದೇವತೆಗಳಲ್ಲಿ ಆಳ್ವಾರರು, ಆಚಾರ್ಯರುಗಳೇ ಹೆಚ್ಚಿನ ಸ್ಥಾನ ಪಡೆದಿರುವರೆಂದು ಹೇಳಬಹುದು.

ಮದ್ದೂರಿನ ನರಸಿಂಹ ದೇವಾಲಯದಲ್ಲಿ ಪ್ರಧಾನ ದೇವಾಲಯದೊಳಗೇ ಮುಂಭಾಗದ ಮಂಟಪದಲ್ಲಿ ಪ್ರತ್ಯೇಕ ಗುಡಿಗಳೊಳಗೆ ವೇದಾಂತಾಚಾರ್ಯ, ಶ್ರೀನಿವಾಸ, ವಿಶ್ವಕ್ಸೇನ, ನಮ್ಮಾಳ್ವಾರ, ಮಣವಾಳಮುನಿ ಹಾಗೂ ಜೀಯರ್‌ರನ್ನು ಸ್ಥಾಪಿಸಲಾಗಿದೆ. ಅಕ್ಕಿಹೆಬ್ಬಾಳಿನ ಲಕ್ಷ್ಮೀನರಸಿಂಹ ದೇವಾಲಯದಲ್ಲೂ ನವರಂಗದಲ್ಲಿ ವಿಶ್ವಕ್ಸೇನ ಹಾಗೂ ಆಳ್ವಾರರ ಬಿಂಬಗಳಿವೆ. ಹೀಗೆ, ಪರಿವಾರ ದೇವತೆಗಳಿಗೆ ಪ್ರತ್ಯೇಕ ಆಲಯ ನಿರ್ಮಾಣದ ಬದಲು, ಅವುಗಳಿಗೆ ಅಂತರಾಳ/ಅರ್ಧಮಂಟಪ ಹಾಗೂ ನವರಂಗಗಳಲ್ಲೇ ಸ್ಥಾನ ನೀಡಿರುವುದು ಅನೇಕ ದೇವಾಲಯಗಳಲ್ಲಿ ಕಂಡುಬರುತ್ತದೆ. ನವರಂಗದ ಒಳಭಿತ್ತಿಯಲ್ಲಿರುವ ದೇವಕೋಷ್ಠಗಳು ಮತ್ತು ಗರ್ಭಗೃಹದ ಹೊರಭಿತ್ತಿಯಲ್ಲಿ ಮೂರು ದಿಕ್ಕುಗಳಲ್ಲಿರುವ ದೇವಕೋಷ್ಠಗಳು ಇವುಗಳಲ್ಲೂ ಕೂಡಾ ಪರಿವಾರ ದೇವತೆಗಳಿರುವುದುಂಟು.[೨೭] ಹೀಗಾಗಿ, ಪರಿವಾರಾಲಯಗಳಿಲ್ಲದಿದ್ದರೂ, ಅದರದರ

ಸಂದರ್ಭಕ್ಕೆ ತಕ್ಕಂತೆ, ಉಪಯುಕ್ತ ರೀತಿಯಲ್ಲಿ ಪರಿವಾರ ದೇವತೆಗಳನ್ನು ಬೇರೆ ಬೇರೆ ಸ್ಥಾನಗಳಲ್ಲಿ ಸ್ಥಾಪಿಸಲಾಗಿದೆ ಎಂದು ಹೇಳಬಹುದು.

ವೈಷ್ಣವ ಪರಿವಾರ ದೇವತೆಗಳ ಬಗ್ಗೆ ಬರೆಯುತ್ತಾ, ಟಿ.ವಿ. ಮಹಾಲಿಂಗಂ ಅವರು, 'ಆಗಮಗಳು ಪರಿವಾರ ದೇವತೆಗಳ ಬಗ್ಗೆ ಹೇಳಿದ್ದರೂ, ನಿಯಮದಂತೆ ('as a rule') ಅನೇಕ ದೇವಾಲಯಗಳಲ್ಲಿ ಅವು ಇರುವುದಿಲ್ಲ' ಎಂದು ಹೇಳಿದ್ದಾರೆ. ಅಲ್ಲದೆ, ಶಿವಾಲಯಗಳ ಪಂಚಾಯತನದ ಪ್ರಭಾವವು ವೈಷ್ಣವ ದೇವಾಲಯಗಳ ಮೇಲೆ ಆಗಿದೆ ಎಂದೂ, ಪಂಚಾಯತನ, ನವಾಯತನ ಮತ್ತು ದ್ವಾದಶಾಯತನ ರೀತಿಯ ದೇವಾಲಯಗಳಿದ್ದು, ಅವುಗಳಲ್ಲಿ ಪರಿವಾರ ದೇವತೆಗಳೂ ಇರುವುದಾಗಿ ತಿಳಿಸಿದ್ದಾರೆ. ಚಾರಿತ್ರಿಕವಾಗಿ ದೊಡ್ಡ ದೊಡ್ಡ ದೇವಾಲಯಗಳ ಪರಿವಾರ ದೇವತೆಗಳ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನ ಆಗಬೇಕಾಗಿದೆ.

**ಚಿತ್ರದಲ್ಲಿರುವಂತೆ ೩೨ ಪರಿವಾರ ದೇವತೆಗಳ ಪಟ್ಟಿ :**

**ಮೊದಲನೆಯ ಪ್ರಾಕಾರ**

ಸಂಖ್ಯೆ – ೧. ವಿಷ್ಣು ಪ್ರಧಾನ ಗರ್ಭಗೃಹ
೨. ವಿಶ್ವಕ್ಸೇನ (ಉ)
೩. ವೈನತೇಯ
೪. ದ್ವಾರಪಾಲಕರು
೫. ಮೃಗಾಲಯ (ಆ)
೬. ಕಾತ್ಯಾಯಿನೀ/ಬ್ರಹ್ಮ (ದ)
೭. ವಿನಾಯಕ (ನೈ)
೮. ಅನಂತ (ಪ)
೯. ವಾಸಿಷ್ಠ (ವಾ)
೧೦. ಧನದ / ಶಂಕರ (ಉ)
೧೧. ಭಾಸ್ಕರ (ಈ)

**ಎರಡನೇ ಪ್ರಾಕಾರ**

೧೨. ಗಣೇಶ (ಆ)
೧೩. ಬಲಭದ್ರ (ದ. – ಆ.ದ ಮಧ್ಯೆ)
೧೪. ಚಕ್ರಧರ (ದ. ನೈದ ಮಧ್ಯೆ)
೧೫. ಗುಹ/ಬುದ್ಧ (ನೈ)
೧೬. ಮಹಾಲಕ್ಷ್ಮೀ (ವಾ)
೧೭. ವಿಷ್ಣು (ಉ.ವಾ.ದ ಮಧ್ಯೆ)
೧೮. ಶಂಕರ (ಉ. ಈ.ದ ಮಧ್ಯೆ)
೧೯. ಸುದರ್ಶನ (ಈ)
೨೦. ಹತ್ತು ಅವತಾರ ದೇವತೆಗಳು

**ಮೂರನೇ ಪ್ರಾಕಾರ**

೨೧. ಅಷ್ಟದಿಕ್ಪಾಲಕರು
೨೨. ವಿಷ್ಣುವಿನ ೨೪ ಮೂರ್ತಿಗಳು (ದಿಕ್ಪಾಲಕರ ಅಕ್ಕ–ಪಕ್ಕ ೩–೩ ಮೂರ್ತಿಗಳಂತೆ)
೨೩. ದಶಾವತಾರಗಳು (ಮೊದಲ ಪ್ರಾಕಾರದಲ್ಲಿ)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಸನತ್ಕುಮಾರ ಸಂಹಿತೆ – I, 38-53, (ಉದ್ಧೃತ).
೧ಅ. Ramachandra Rao. S.K., *Vastusilpakosha* - Vol. I. (P. 164-65, 170-77) : ವಿವರಗಳನ್ನು ಈ ಕೃತಿಯಿಂದ ಸಂಗ್ರಹಿಸಲಾಗಿದೆ.
೨. **ಪಾದ್ಮಸಂಹಿತಾ ಕ್ರಿಯಾ** – ೧೦.೧೦೫, **ವಿಶ್ವಾಮಿತ್ರ ಸಂಹಿತಾ** – ೧೦.೧೨೪–೧೩೫.
೩. ಮಾನಸಾರದಲ್ಲಿ ಈ ಬಗ್ಗೆ ಚಿತ್ರವನ್ನು ನೀಡುವಾಗ ಇವನನ್ನು ಆಗ್ನೇಯ ದಿಕ್ಕಿನಲ್ಲಿ ತಪ್ಪಾಗಿ ಗುರುತಿಸಿದೆ.
೩ಅ. **ಸನತ್ಕುಮಾರ ಸಂಹಿತಾ** I, 38-53, **ವಿಶ್ವಾಮಿತ್ರ ಸಂಹಿತಾ** – ೧೦.೧೨೪–೧೩೫, **ಮಯಮತ** – ೨೩.೧೦೦೮–೧೦೨.
೪. Ramachandrarao, S.K., *Vastusilpakosha*, Vol. I, P. 171.
೫. **ಮಾನಸಾರ** – ೩೨, ೭೧–೭೫ಬಿ, **ಮಯಮತ** – ೨೩, ೧೦೩–೧೦೫ಎ.
೬ ದಕ್ಷಿಣದಲ್ಲಿ ಬಲಭದ್ರನನ್ನೂ, 'ಜಯಂತ' ಪದದಲ್ಲಿ ಅನಂತ/ಪೌತ್ರಿಕಾನನ್ನೂ ಸ್ಥಾಪಿಸಬೇಕೆಂದು ಮಾನಸಾರವು ಹೇಳಿದೆ. ಹೀಗಿದ್ದರೆ, ಹವಿನ್ನಾ ಪರಿವಾರ ದೇವತೆಗಳಾಗುತ್ತಾರೆ. ಆದ್ದರಿಂದ, ಈ ಎರಡರಲ್ಲಿ ಒಂದನ್ನು ಬಿಡಬೇಕಾಗುತ್ತದೆ. ಎರಡನೇ ಪ್ರಾಕಾರದಲ್ಲಿ ವಿದಿಕ್ಕುಗಳ ದೇವತೆಗಳನ್ನೂ ಮತ್ತು ಉತ್ತರ–ದಕ್ಷಿಣವಾಗಿ ದಿಕ್ಕು–ವಿದಿಕ್ಕುಗಳ ಮಧ್ಯೆ ಇರುವ ದೇವತೆಗಳನ್ನೂ ಹೇಳಿರುವುದರಿಂದ, ಎರಡಕ್ಕೂ ಹೊಂದದಿರುವ 'ಈಶಾನ

ಕೆಳಗೆ' ಜಯಂತಪದದಲ್ಲಿರುವ ಅನಂತ/ಪೌತ್ರಿಕಾನನ್ನು ಕೈಬಿಡಬೇಕಾಗುತ್ತದೇನೋ ! (ಕೃತಿಯಲ್ಲಿರುವ ಚಿತ್ರದಲ್ಲಿ ಅವನ (ಅನಂತ) ಸ್ಥಾನವನ್ನು ತಪ್ಪಾಗಿ ತೋರಿಸಿದೆ). ಬಲಭದ್ರನೂ ಕೂಡಾ ದಕ್ಷಿಣದಲ್ಲಿರದೆ, ದಕ್ಷಿಣ ಮತ್ತು ಆಗ್ನೇಯದ ಮಧ್ಯೆ ಇರುತ್ತಾನೆಂದು ಅರ್ಥೈಸುವುದು ಸೂಕ್ತವಾಗಬಹುದೇನೋ ! ('ಜಯಂತ ಪದ'ದ ಬಗ್ಗೆ ಲೇಖನ ನೋಡಿ : ಕೂ.ಸ. ಅಪರ್ಣ – 'ಪದನಿರ್ಣಯ' ಅಥವಾ 'ವಾಸ್ತುಮಂಡಲ' – **ಇತಿಹಾಸ ದರ್ಶನ** – ಸಂ. ೨೧/೨೦೦೬)

೭. ಮಯಮತವು, ಈಶಾನ್ಯದಲ್ಲಿ ದೇವತೆಯನ್ನು ಹೇಳಿಲ್ಲದಿದ್ದರೂ, ಅಲ್ಲಿ ಈಶಾನನನ್ನು ಸ್ಥಾಪಿಸಬೇಕೆಂದು ಸಂಪಾದಕರು ಹೇಳಿದ್ದಾರೆ (ಪು. ೪೧೧, ಅಡಿಟಿಪ್ಪಣಿ, ೫೫)

೮. ವಿಶ್ವಾಸಂಹಿತಾ–೧೦.೧೨೪–೧೩೫, ಮಾನ – ೩೨, ೭೬–೭೭.

೯. ಈ ೨೪ ಮೂರ್ತಿಗಳನ್ನು ಮಾನಸಾರದ ಸಂಪಾದಕರು ಅನುವಾದದಲ್ಲಿ / ಚಿತ್ರದಲ್ಲಿ ತೀರ್ಥಂಕರರೆಂದು ಗುರುತಿಸಿದ್ದಾರೆ. ಆದರೆ, ಅಲ್ಲಿ ವಿಷ್ಣು ದೇವಾಲಯದ ಪರಿವಾರ ದೇವಾಲಯದ ಪರಿವಾರ ದೇವತೆಗಳನ್ನು ಹೇಳುತ್ತಿರುವುದರಿಂದ, ಅದು ತೀರ್ಥಂಕರರಿಗೆ ಅನ್ವಯಿಸುವುದಿಲ್ಲ. ಅಂತೇ ವಿಷ್ಣುವಿನ ಮೂರ್ತಿಗಳಿಗೆ ದಿಕ್ಪಾಲಕರುಗಳ ಅಕ್ಕಪಕ್ಕ ೩ ಅಥವಾ ೪ ದೇವತೆಗಳಿಗೆ ಗುಂಪಾಗಿ ಸ್ಥಾನವನ್ನು ಕಲ್ಪಿಸಬೇಕೆನಿಸುತ್ತದೆ. ಬೌದ್ಧ ದೇವತೆಗಳಿಗೂ ಇಲ್ಲಿ ಸ್ಥಾನವನ್ನು ನೀಡಲಾಗಿದೆ. ಅದು ಇಲ್ಲದಿದ್ದಲ್ಲಿ ಬಹುಶಃ ದಿಕ್ಪಾಲಕರುಗಳ ಅಕ್ಕಪಕ್ಕ ೩–೩ ದೇವತೆಗಳಿಗೆ ಸ್ಥಾನ ಕಲ್ಪಿಸಬೇಕೇನೋ ಎಂಬ ಅನುಮಾನವಿದೆ.

೧೦. ಪಾದ್ಮ – ಕ್ರಿಯಾ – ೧೦.೯೮–೧೦೩.

೧೧. ಕ್ಷೇತ್ರಪಾಲನನ್ನು 'ವಾಸ್ತುಪುರುಷ' ಎಂದು ರಾಮಚಂದ್ರರಾಯರು ಗುರುತಿಸಿದ್ದಾರೆ. Ibid, P. 174).

೧೨. ಮಾನ – ೩೨.೬೫–೬೭ಎ.

೧೩. ರಾಮಚಂದ್ರರಾಯರು, Ibid, P. 176.

೧೪. ವಿಶ್ವಾಸಂಹಿತಾ – ೧೦.೧೨೪–೧೩೫ (ಉದ್ಧೃತ), ಮಾನ – ೩೨. ೬೧–೬೫, ಮಯ – ೨೩.೧೦೬, ಪಾರಮೇಶ್ವರ ಸಂಹಿತಾ – ೧೧.೮೭–೮೫ (ಉದ್ಧೃತ), ಕಪಿಂಜಲ ಸಂಹಿತಾ – ೧೨.೧೬೫–೬೯ (ಉದ್ಧೃತ), ಪೌಷ್ಕರ ಸಂಹಿತಾ – ೪.೧೭೩–೪ (ಉದ್ಧೃತ) ಈಶ್ವರ ಸಂಹಿತಾ – ೯.೪೯–೫೧ (ಉದ್ಧೃತ)

೧೫. ಹೆಚ್ಚಿನ ವಿವರಗಳಿಗೆ ರಾಮಚಂದ್ರರಾಯರ ಕೃತಿ ನೋಡಿ – Ibid, P. 164-165.

೧೬. ಒಂದು ಪ್ರಾಕಾರವಿರುವುದನ್ನೇ 'ಅಧಮ' ರೀತಿಯ ದೇವಾಲಯ ಎಂದು ಹೇಳುವುದರ ಮೂಲಕ ವೈಖಾನಸವು ಪ್ರಾಕಾರಗಳು/ಪರಿವಾರಾಲಯಗಳು ಅನಿವಾರ್ಯವೆಂದು ಹೇಳುತ್ತಿರುವಂತೆ ತೋರುತ್ತದೆ.

೧೭. Ramachandra Rao, Ibid - P. 164.

೧೮. Ibid, P. 174-76.

೧೯. ವಿಮಾನಾರ್ಚನಕಲ್ಪ – ಪ. ೧೨, ಪು. ೫೬–೫೯. ಅದರಲ್ಲಿ ಬೇರೆ ಬೇರೆ ದೇವತೆಗಳನ್ನು ಹೇಳಲು ಕಾರಣವೇನು, ಅರ್ಥವೇನು ತಿಳಿದಿಲ್ಲ.

೨೦–೨೧. ಮುಂದಿನ ಒಂದೆರಡು ಸಾಲುಗಳನ್ನು ಇಲ್ಲಿ ಸೇರಿಸಿಲ್ಲ.

೨೨. ಮಾನ – ೩೨.೭೭

೨೩. ಮಾನ–೩೨.೮೩.

೨೪. ಎ.ಕ. V(ಪ). ತಿನ. ೮೮ ಕ್ರಿ.ಶ. ೧೨೭೬ (ಸೋಮನಾಥಪುರ)

೨೫. ಇಲ್ಲಿನ ಕೆಲವು ಹಾಳಾಗಿದ್ದ ಗುಡಿಗಳನ್ನು ತೆಗೆದುಹಾಕಲಾಯಿತು ಎಂದು ಎಂಎಆರ್‌ನಿಂದ ತಿಳಿದುಬರುತ್ತದೆ.

೨೬. Mahalingam. T.V., *South Indian Temple Complex*, P. 68.

೨೭. ದೇವಾಲಯದ ವಿವಿಧ ಭಾಗಗಳಾದ ಹೊರಭಿತ್ತಿ, ಕಂಬಗಳು, ವಿತಾನ, ದ್ವಾರದ ಭಾಗಗಳು (ಇಲ್ಲಿ ಗಂಗಾ, ಯಮುನಾ ಬಿಡಿಸುವುದುಂಟು) ಇವುಗಳ ಮೇಲೂ ಅನೇಕ ದೇವತೆಗಳನ್ನು ಕೆತ್ತುವ ಪದ್ಧತಿ ಇದೆ. ಇದೂ ಕೂಡಾ ಪರಿವಾರ ದೇವತೆಗಳ ಹಿನ್ನೆಲೆಯಲ್ಲೇ / ಅದಕ್ಕೆ ಪರ್ಯಾಯವಾಗಿ ಬಂದಿರಬಹುದೇ ಎಂಬ ಅನುಮಾನವಿದೆ.

೨೮. Ibid, P. 67-68.

೨೯. (**ಎಪಿಗ್ರಾಫಿಯಾ ಕರ್ನಾಟಿಕಾ** – ಸಂ. V(ಪ), ಮೈಸೂರು. ಕೆಲವೆಡೆ ಅನುವಾದದಲ್ಲಿ ಸಹಾಯ ಮಾಡಿದ ನನ್ನ ಆತ್ಮೀಯ ಗೆಳತಿ ಡಾ. ಕೆ. ವಸಂತಲಕ್ಷ್ಮಿ ಹಾಗೂ ಚಿತ್ರವನ್ನು ಕಂಪ್ಯೂಟರ್ ಪ್ರತಿ ಮಾಡಿಕೊಟ್ಟ ಗೆಳತಿ ಶ್ರೀಮತಿ ಜಯಶ್ರೀ ಅವರಿಗೆ ವಂದನೆಗಳು.)

ಡಾ. ಎಸ್.ಕೆ. ಜೋಶಿ*

# ಕನ್ನಡ ನೆಲದಲ್ಲಿ ಗಣಪತಿ ಶಿಲ್ಪ ಪಥ

'ವಿಘ್ನಾನಾಂ ಈಶ್ವರಃ ವಿಘ್ನಾನಾಂ ನಿವರ್ತಕಃ
ಅತಃ ಸಃ ವಿಘ್ನಕೃತಃ, ವಿಘ್ನನಾಶನಃ'
–(ಗಣಪತ್ಯೊಪನಿಷತ್)

ಭಾರತೀಯ ನಂಬುಗೆಯ ಬದುಕಿನಲ್ಲಿ (In the belief and faith of India) ಗಣಪತಿಯಷ್ಟು ನಾಮವಂತ ದೈವ ಮತ್ತೊಂದಿಲ್ಲ. ಆತನು/ಗಣ–ಗಣಗಳ ಜನ–ಜನಗಳ ಅಧಿಪತಿಯೂ ಹೌದು. 'ತ್ರಿಮೂರ್ತಿ'ಗಳ ಆರಾಧನೆಯಲ್ಲಿ ಆತನಿಗೆ ಅಗ್ರಪೂಜೆ. ತ್ರಿಮಸ್ಥಗಳಲ್ಲಿಯೂ, ಶೈವ–ವೈಷ್ಣವ ಹಾಗೂ ಶ್ರೀವೈಷ್ಣವ–ಆತನಿಗೆ ಶ್ರೇಷ್ಠ ಸ್ಥಾನ. ಗಣಪತಿ ಕೇವಲ ಭಾರತದಲ್ಲಿ ಕೋಟ್ಯಾಂತರ ಜನಮನಗಳಲ್ಲಿ ಪೂಜ್ಯನೀಯನಾಗಿರದೆ ಕಡಲಾಚೆಯ ರಾಷ್ಟ್ರಗಳಾದ ಜಾವಾ, ಸುಮಾತ್ರಾ, ಕಾಂಬೋಡಿಯಾ, ಶ್ರೀಲಂಕಾಗಳಂಥ ಆಗ್ನೇಯ ಏಶಿಯಾದ ನೆಲದಲ್ಲೂ ಅಲ್ಲಿಯ ಜನಮಾನಸದಲ್ಲಿ ಸ್ಥಾಯಿಯಾಗಿದ್ದಾನೆ.

ಗಣಪತಿ ಮಂಗಲ ತರುವಾತನು/ಶುಭವ ಕೋರುವಾತನು, ವಿಘ್ನಗಳನ್ನು ತೊರೆವಾತನು/ವಿದ್ಯಾ ಬುದ್ಧಿ ಸಂಪತ್ತು ಸಮೃದ್ಧಿ ಶಾಂತಿ ಕೊಡುವಾತನು. ಈತನು ಬಹಳಷ್ಟು ಪ್ರಾಚೀನ ಸಾಹಿತ್ಯಗಳು ವರ್ಣಿಸಿವೆ. ದಂಡಿಯ ದಶಕುಮಾರ ಚಿಕಿತ್ಸೆ, ನಾರಾಯಣೋಪನಿಷತ್, ಬಾಣನ ಹರ್ಷಚರಿತೆ, ವರಾಹಮಿಹಿರನ ಬ್ರಹ್ಮತ್ಸಂಹಿತೆ, ವಂದತಾ–ಉಪನಿಷತ್ತು, ಅಥರ್ವಶಿರೋಪನಿಷತ್ತು, ಗಣಪತ್ಯುಪನಿಷತ್ತು, ವೈಖಾನೋಪನಿಷತ್ತು ಹೀಗೆ, ಶ್ರೇಷ್ಠತಮ ಸಾಹಿತ್ಯ ಗ್ರಂಥಗಳಲ್ಲಿ ಆತನನ್ನು ಆಕರಿಸಲಾಗಿದೆ.

ಗಣಪತಿಯ ರೂಪ ಸುಂದರ, ನಿವಾಂತ, ಪ್ರಶಾಂತ. ಆತನು ಗಜಮುಖವನ್ನು ಹೊಂದಿದ್ದು ಹೇಗೆ ಎಂಬುದು ಭಾರತದ ಆಧ್ಯಾತ್ಮ ಕಥನದಲ್ಲಿ ವಿವರಿಸಲಾಗಿದೆ. ಅದರ ಬಗ್ಗೆ ಇರುವ ವಿವರ ಜನಜನಿತ. ಹಾಗಾಗಿ ಅದನ್ನಿಲ್ಲಿ ವರ್ಣಿಸುವ ಅವಶ್ಯಕತೆ ಇಲ್ಲ. ಆದರೆ ಆತನ ರೂಪವು ಯುಗಯುಗಂಗಳಲ್ಲಿ ಬದಲಾಗುತ್ತ ಹೇಗೆ ಬಂದಿತು ಎಂದು, ಶಿಲ್ಪಗಳಲ್ಲಿ ಆತನು ಕಾಣಿಸಿದುದು ಹೇಗೆ, ಶತ ಶತಮಾನಗಳಲ್ಲಿ ಆದ ಆತನ ದರ್ಶನ ಪ್ರತಿಮೆಗಳು ಹೇಗೆ ಎಂದು ವಿವರಿಸುವದೇ ಈ ಸಂಶೋಧನ ಪ್ರಬಂಧದ ಮುಖ್ಯ ಉದ್ದೇಶ.

ಹಾಗೆ ನೋಡಿದಲ್ಲಿ, ಗಣಪತಿಯ ಪ್ರತಿಮೆಯು ಕ್ರಿಯಾತ್ಮಕ (creative) ಶಿಲ್ಪ ; ಸಂಕಲ್ಪದ ಸುಳಿಯಲ್ಲಿ ಬಹುರೂಪ ಹೊಂದಿದೆ. ಆತನ ದುಂಡನೆಯ ರೂಪವೇ ಓಂಕಾರ ರೂಪ, ಬ್ರಹ್ಮಾಂಡ ರೂಪ. ಕೃತಯುಗದಲ್ಲಿ ಆತನು ಸಿಂಹವಾಹನನಾಗಿ ಅಷ್ಟಭುಜಗಳಿಂದಲೂ, ತ್ರೇತಾಯುಗದಲ್ಲಿ ಮಯೂರ ವಾಹನನಾಗಿ ಷಡ್ಭುಜ ಹೊಂದಿದವನಾಗಿಯೂ, ದ್ವಾಪರ ಯುಗದಲ್ಲಿ ಚತುರ್ಭುಜನಾಗಿಯೂ, ಹಾಗೂ ಕಲಿಯುಗದಲ್ಲಿ ಶ್ವೇತವರ್ಣನಾಗಿ ಮೂಷಕವಾಹನನಾಗಿ ದ್ವಿಬಾಹುಗಳನ್ನು ಹೊಂದಿದವನಾಗಿಯೂ ತೋರಿದ್ದಾನೆ.

ಇನ್ನು ಭಾರತ ಇತಿಹಾಸದುದ್ದಕ್ಕೂ ಬೆಳೆದು ಬಂದ, ಗಣಪನ ಸಂಪದವನ್ನು, ಸಮೀಕ್ಷಿಸಿದರೆ, ಉತ್ತರ ಭಾರತದಲ್ಲಿ ಗಣಪತಿಯ ಪ್ರಭಾವ ಅಷ್ಟು ಎದ್ದು ಕಾಣುವದಿಲ್ಲ. ಆತನ ದೇವಾಲಯಗಳೂ ಕಡಿಮೆ; ಶಿಲ್ಪಗಳೂ ಕಡಿಮೆ. ದಕ್ಷಿಣ ಭಾರತದಲ್ಲಿ ಆತನ ಗುಣಗಾನ, ಆತನ ಆರಾಧನೆ, ಆತನ ಗುಡಿಗಳೂ, ಪ್ರತಿಮೆಗಳೂ ಅಸಂಖ್ಯ, ಅನಂತ. ಆತನ ಭಾವುಕತೆಯಲ್ಲಿ ದಕ್ಷಿಣದ ನದಿಗಳು ಆತನ ಸ್ತೋತ್ರಗಳನ್ನು ತಮ್ಮ ಹರಿವಿನಲ್ಲಿ, ಹರವಿನಲ್ಲಿ ಹರಡಿವೆ, ಸಾಗರದ ತರಂಗಳಂಚಿನಲ್ಲಿ ಆತನ ದೇವಾಲಯಗಳು ನಿರ್ಮಾಣವಾಗಿವೆ, ಪರ್ವತ ಶಿಖರಗಳ ಶ್ರೇಣಿಯಂಗಳಲ್ಲಿ ಆತನ ರೂಪಶಿಲ್ಪಗಳು ಮೂಡಿವೆ.

ಹಾಗೆ ನೋಡಿದಲ್ಲಿ, ಶಿಲ್ಪಗಳಲ್ಲಿ ನಮ್ಮವರು ಭಾವಗಳನ್ನು ಕಂಡಷ್ಟು ರೀತಿಯಲ್ಲಿ ಬೇರಿನ್ನಾರೂ ಕಂಡಿರಲಿಕ್ಕಿಲ್ಲ. ಸೂಕ್ಷ್ಮ ಹಾಗೂ ಭವ್ಯ ಕಲಾಕೃತಿಗಳ ನಿರ್ಮಾಣದಲ್ಲಿ ಶ್ರೇಷ್ಠತೆಯನ್ನು ತೋರಿಸಿದ್ದಾರೆ. ಭಾರತೀಯ ಶಾಸ್ತ್ರ, ಪುರಾಣ, ಶಾಸನ, ವೇದ, ಆಗಮ, ಉಪನಿಷತ್ತುಗಳನ್ನು ಅಭ್ಯಸಿಸಿ, ಅಲ್ಲಿ ತಾವು ಕಂಡ ದರ್ಶನಗಳನ್ನು, ಚಾರಿತ್ರ್ಯಗಳನ್ನು ಪ್ರಾಚೀನ ಶಿಲ್ಪಿಗಳು ಶಿಲಾಪ್ರತಿಮೆಗಳಲ್ಲಿ ಮೂಡಿಸಿದ್ದಾರೆ. ಕನ್ನಡ ನಾಡಿನ ದೇವಾಲಯಗಳು ಶಿಲ್ಪಗಳ ತೊಟ್ಟಿಲುಗಳಾಗಿವೆ. ಇತಿಹಾಸದುದ್ದಕ್ಕೂ ಬೆಳೆದುಬಂದ ಭಾವಶಿಲ್ಪಗಳಲ್ಲಿ, ಗಣಪತಿಯ ಶಿಲ್ಪ

* 'ಪುರಾತತ್ವವಿದ', # ೬೦, ಸಿಲ್ವರ್ ಆರ್ಚರ್ಡ್, ಧಾರವಾಡ – ೧.



ಇಡಗುಂಜಿ ದ್ವಿಬಾಹು ಗಣಪತಿ
(೪ನೇ ಶತಮಾನ)



ಬೇಲೂರು ಹೊಯ್ಸಳ ಶೈಲಿಯ
ಸಾಲಂಕೃತ ಗಣೇಶ (೧೨ನೇ ಶ.)



ಹಂಪಿ ವಸ್ತುಸಂಗ್ರಹಾಲಯದ ಮಹಾಶಕ್ತಿ
ಗಣಪತಿ (೧೬ನೇ ಶತಮಾನ)



ಹಂಪಿ ಸಾಸಿವೆಕಾಳು ಗಣಪತಿ
(೧೬ನೇ ಶತಮಾನ)



ಕಮಲಾಪುರ ವಸ್ತುಸಂಗ್ರಹಾಲಯದ ಗಣಪತಿ
ಮೂರ್ತಿಗಳು (೧೬ನೇ ಶತಮಾನ)



ಶೃಂಗೇರಿ ಪಂಚಲೋಹದ
ರತ್ನಗರ್ಭ ಗಣಪತಿ
(೧೭ನೇ ಶತಮಾನ)



ಬೆಳವಾಡಿ ಕೋಟೆ
ವೀರನಾರಾಯಣ ದೇವಸ್ಥಾನ
(೧೩ನೇ ಶತಮಾನ)



ಹಾನಗಲ್ ಗಣಪತಿ ದೇವಸ್ಥಾನ
(೧೩ನೇ ಶತಮಾನ)

ನಡೆದು ಬಂದ, ಬೆಳೆದು ಬಂದ ದಾರಿ ಸಾರಂಭದ ದಾರಿಯಾಗಿದೆ.

ಭಾರತದ 'ಗಣಪತಿಶಿಲ್ಪಗಳಲ್ಲಿ' ಅತ್ಯಂತ ಪ್ರಾಚೀನ ಪ್ರಯೋಗವು ಕರ್ನಾಟಕದ ಪಶ್ಚಿಮದಲ್ಲಿ ಸಾಗರದಂಚಿನಲ್ಲಿ, ನಡೆದುದು ಸಂಶೋಧಕರ ಸಮೀಕ್ಷೆಯ ಪರಿಣಾಮವಾಗಿದೆ. ಅತ್ಯಂತ ಪ್ರಾಚೀನ ಗಣಪತಿ ಮೂರ್ತಿಗಳು ದ್ವಿಬಾಹುಗಳಲ್ಲಿದ್ದು, ಇಡಗುಂಜಿಯ ಗಣಪತಿ ಹಾಗೂ ಗೋಕರ್ಣದ ಗಣಪತಿ ಕ್ರಿ.ಶ. ನಾಲ್ಕನೆಯ ಶತಮಾನದಲ್ಲಿ ಪ್ರಾರಂಭಿಕ ರೂಪದಲ್ಲಿ ನಿರ್ಮಾಣಗೊಂಡಿವೆ. (ಡಾ. ಅ. ಸುಂದರ). ಹೀಗಾಗಿ, ಪಶ್ಚಿಮ ಕರಾವಳಿಯ ಕರ್ನಾಟಕದಲ್ಲಿ, ದ್ವಿಬಾಹು/ಗಣಪತಿ ಮೂರ್ತಿಗಳು 'ಪ್ರಥಮ ಘಟ್ಟದ' ಗಣಪತಿಮೂರ್ತಿ ಬೆಳವಣಿಗೆಯಲ್ಲಿ ಬರುತ್ತವೆ. ಇಂಥ ಮೂರ್ತಿಗಳು ಕರ್ನಾಟಕದ ಪ್ರಥಮ ಸಾಮ್ರಾಜ್ಯವಾದ ಕದಂಬರ ನಾಡಿನಲ್ಲಿ ಹರಡಿವೆ.

ಕರ್ನಾಟಕದಲ್ಲಿ ತದನಂತರ ನುಸುಳಿದ ಐತಿಹಾಸಿಕ ಕಾಲ ಬಾದಾಮಿ ಚಾಲುಕ್ಯರದು (ಕ್ರಿ.ಶ. ೫೦೦-೭೫೭). ಈ ಚಾಲುಕ್ಯರ ಸಾಮ್ರಾಜ್ಯದ ಹೃದಯ ಭಾಗಗಳಾದ ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳಲ್ಲಿ, ನೂರಾರು ಗಣಪತಿಯ ಶಿಲಾಮೂರ್ತಿಗಳನ್ನು ಸಮೀಕ್ಷಿಸಿದಂತೆ (ಡಾ. ಎಸ್.ಕೆ. ಜೋಶಿ), ಈ ಕಾಲದಲ್ಲಿ ದ್ವಿಬಾಹು ಗಣಪತಿಯು ಪರಿವರ್ತನೆಗೊಂಡು ಚತುರ್ಬಾಹು ರೂಪ ತಳೆದಿರುವುದು ತಿಳಿಯುತ್ತದೆ.

'ವಾತಾಪಿ ಗಣಪತೀಂ ಭಜೇಹಂ'

ಎಂಬ ಕರ್ನಾಟಕ ಸಂಗೀತದಲ್ಲಿ ಸ್ತೋತ್ರನಾದ ಗಣಪತಿಯು ಅವರ ಇಡೀ ಸಾಮ್ರಾಜ್ಯದಲ್ಲಿ ಸಾವಿರಾರು; ಚಾಲುಕ್ಯರ ಅಧಿದೈವತವೂ ಹೌದು. ಬಾದಾಮಿಯ ಉತ್ತರ ಕೋಟೆಯಲ್ಲಿ 'ಲೋಅರ್ ಶಿವಾಲಯವು' ಮೂಲತಃ ಗಣಪತಿಯ ಗುಡಿಯೇ ಆಗಿತ್ತು. ಆ ಮೂಲ ಗಣಪತಿಯನ್ನು ಪಲ್ಲವರ ನರಸಿಂಹವರ್ಮನು ಬಾದಾಮಿಯನ್ನು ಸೂರೆಗೊಳಿಸಿ (652 AD) ಪಲ್ಲವರ ರಾಜಧಾನಿ ಕಾಂಚೀಪುರಂನ ಬಳಿಯ 'ತಿರುಚಗಟ್ಟಂ ಗುಡಿ' ಎಂಬಲ್ಲಿ ಪುನರ್ ಪ್ರತಿಷ್ಠಾಪಿಸಿದನು. ಈ ಗಣಪತಿಗೆ 'ವಾತಾಪಿ ಗಣಪತಿ' ಎಂದು ಈಗಲೂ ಪ್ರತೀತಿ. (ಡಾ. ಕೆ.ವಿ. ಸೌಂದರರಾಜನ್).

ಬಾದಾಮಿ ಚಾಲುಕ್ಯರ ನಂತರ 'ಮಾನ್ಯಖೇಟ'ವನ್ನು (ಕ್ರಿ.ಶ. ೭೫೬-೯೭೩) ತಮ್ಮ ರಾಜಧಾನಿಯನ್ನಾಗಿ (ಗುಲಬರ್ಗಾ ಜಿಲ್ಲೆ) ಮಾಡಿಕೊಂಡ, ದಕ್ಷಿಣ ಭಾರತವನ್ನೇ ಆಳಿದ ರಾಷ್ಟ್ರಕೂಟರು ನಂಬುಗೆಯಲ್ಲಿ ಬಹುಮಟ್ಟಿಗೆ ಜೈನ ಸಂಪ್ರದಾಯವನ್ನು ಹೊಂದಿದರೂ ಶೈವ-ವೈಷ್ಣವ ಪ್ರಿಯರು; (King has no Caste), ಹಾಗಾಗಿ, ಅವರ ಆಳ್ವಿಕೆಯಲ್ಲಿ ಎಲ್ಲೋರಾದ ಕೈಲಾಸ ದೇವಾಲಯದಂಥ ವಿಶಾಲ ಗುಹಾಂತರ್ದೇವಾಲಯ ಹಾಗೂ ಎಲಿಫಂಟಾ ದ್ವೀಪದಲ್ಲಿಯ (ಮುಂಬೈ ಸಮೀಪ) 'ತ್ರಿಮೂರ್ತಿ' ಮಹಾನ್ ಶಿಲ್ಪವು ಹಾಗೂ ಇನ್ನಿತರ ನೂರಾರು ಶೈವ ದೇವಾಲಯಗಳು ರಚನೆಗೊಂಡರೂ, ವಿಶೇಷವಾಗಿ ಗಣಪತಿಯ ಗುಡಿಗಳು ಮೂರ್ತಿಗಳು ಪ್ರತ್ಯೇಕವಾಗಿ ಬೆಳೆಯಲಿಲ್ಲ, ಇದೊಂದು ಕೊರತೆ. ಆದರೆ ಅವರ ಶೈವ ದೇವಾಲಯಗಳಲ್ಲಿ ಗಣಪತಿ ಶಿಲ್ಪಗಳು ಬಹಳಷ್ಟು ಇವೆ.

ತದನಂತರ (ಕ್ರಿ.ಶ. ೯೭೩-೧೧೯೮), ಕಲ್ಯಾಣ ಚಾಲುಕ್ಯರ ಸಮಯದಲ್ಲಿ, ಉತ್ತರ ಕರ್ನಾಟಕದ ಈಗಿನ ಪ್ರದೇಶದಲ್ಲಿ, ಶೈವ ಸಂಪ್ರದಾಯದ ಬಹಳಷ್ಟು ದೇವಾಲಯಗಳು ಹಾಗೂ ಶಿಲ್ಪಗಳೂ ವಾಸ್ತುಶಿಲ್ಪದ ಕರ್ನಾಟಕದ ಆಸ್ತಿಯಾಗಿ ಕೊಡಲ್ಪಟ್ಟವು. ಈ ಸಮಯದಲ್ಲಿ ಗಣಪತಿಯ ದೇವಾಲಯ ಹಾಗೂ ಮೂರ್ತಿಗಳು ಬಹಳ ಸುಂದರ ಶೈಲಿಯಲ್ಲಿ ಬೆಳಕು ಕಂಡದ್ದು ಕಂಡುಬರುತ್ತದೆ. ಗಣಪತಿಯ ಮೂರ್ತಿಗಳು ನಾಲ್ಕು ಹಾಗೂ ಅಷ್ಟ ಬಾಹುಗಳಲ್ಲಿ ಬೆಳವಣಿಗೆ ಹೊಂದಿದ್ದು, (ಕಲ್ಯಾಣಿ, ಗದಗ, ಲಕ್ಕುಂಡಿ, ಡಂಬಳ, ಶಿರಸಂಗಿ, ಲಕ್ಷ್ಮೇಶ್ವರ.) ನಯನಮನೋಹರವಾಗಿವೆ.

ಹೊಯ್ಸಳರ ಕಾಲದಲ್ಲಿ ಗಣಪತಿಯ ಮೂರ್ತಿಗಳು ಪ್ರಮಾಣ್ಯ ಅಳತೆಗಳನ್ನೂ, ಮೃದುತ್ವವನ್ನೂ, ಮನಸೂರೆಗೊಳ್ಳುವ ಸೌಂದರ್ಯವನ್ನೂ, ಆಭರಣಾಲಂಕಾರವನ್ನೂ ಪಡೆದವು. ಬೇಲೂರು, ಹಳೇಬೀಡು, ಸೋಮನಾಥಪುರ, ಅರಸಿಕೆರೆ, ಹಾಸನ, ತರಿಕೆರೆ, ಶೃಂಗೇರಿ, ಚಿಕ್ಕಮಗಳೂರು, ಬೆಳವಾಡಿ, ಬಾಳೆಹೊನ್ನೂರು, ಮೂಡಿಗೆರೆ, ದೇವನೂರು, ಶಿವಪುರ, ಬೀರೂರು, ಕಡೂರು ಇತ್ಯಾದಿ ತಾಣಗಳಲ್ಲಿಯ ದೇವಾಲಯಗಳಲ್ಲಿ ಸ್ವರ್ಗ ಸುಂದರ ಗಣಪತಿಗಳನ್ನು ಸಮೀಕ್ಷಿಸಬಹುದು. (Plasticity & Ornamentation) (ಡಾ. ಎಸ್. ಶೆಟ್ಟರ). ಸೋಮನಾಥಪುರದ ನಾಟ್ಯಗಣಪತಿ ಸೌಂದರ್ಯದ ಖಣಿ.

ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದ ಪೂರ್ವ ಪಶ್ಚಿಮ ಸಾಗರದಂಚಿನವರೆಗೂ ದಕ್ಷಿಣದ ಕನ್ಯಾಕುಮಾರಿಯ ಸಾಗರ ಭೂಶಿರದವರೆಗೂ ಹಬ್ಬಿದ ವಿರಾಟ ಸಾಮ್ರಾಜ್ಯ (ಕ್ರಿ.ಶ. ೧೩೩೬-೧೫೬೫). ತನ್ನ ಶಿರಿವಂತಿಕೆಯ ವೈಭವೋಪೇತ ಬದುಕಿನಲ್ಲಿ, ತನ್ನದೇ ಆದ ವಿಶಿಷ್ಟ ವಿಜಯನಗರ (Style of Architecture) ವಾಸ್ತುಶಿಲ್ಪ ಶೈಲಿಯನ್ನು ಭಾರತದ ವಾಸ್ತುಶೈಲಿಯ ಜಗತ್ತಿಗೆ ನೀಡಿದೆ. ಈ ಸಮಯದಲ್ಲಿ ಅರಮನೆಗಳು, ಗುಡಿ ಗುಂಡಾರಗಳು, ಶಿಲ್ಪಮೂರ್ತಿಗಳು ಎಲ್ಲವೂ ವಿಸ್ತಾರ ಹಾಗೂ ಭವ್ಯ. ಗಣಪನ ಮೂರ್ತಿಗಳು ಭೂವ್ಯೋಮಗಳನ್ನು ಜೋಡಿಸುವ ನಿಲುವನ್ನು




ಬಾದಾಮಿಯ ವಾತಾಪಿ ಗಣಪತಿ



ಹಳೇಬೀಡಿನ ಸಾಲಂಕೃತ ಗಣಪತಿ (೧೩ನೇ ಶತಮಾನ)

ಪಡೆದವು. ಹಂಪಿಯ ಸಾಸಿವೆಕಾಳು ಗಣಪತಿ, 'ಕಡಲೆಕಾಳು ಗಣಪತಿ' (ಸು. ೨೫ ಪೂ ಎತ್ತರ)ಗಳು ವಿಜಯನಗರ ಕಾಲದಲ್ಲಿ ಎಷ್ಟೊಂದು ಭವ್ಯತೆಯನ್ನು ಪಡೆದವು. ಅಂಬರಕ್ಕೇರಿದ ಗಣಪರು ಎಂದು ಅಚ್ಚರಿ ತೋರಿಸುತವೆ. ನಾವೆಷ್ಟು ಅವರ ಮುಂದೆ ಕುಬ್ಜರು !

ಅಂತತಃ ಭಾರತದ ರಾಷ್ಟ್ರೀಯ ದೇವತೆ ಗಣಪತಿ. ಭಾರತ ನೆಲದ ಪೂರ್ವ, ಪಶ್ಚಿಮ, ದಕ್ಷಿಣ ಉತ್ತರಗಳಲ್ಲಿ ಅವನಿಗೆ ಅಗ್ರಪೂಜೆ 'ಶಿಲ್ಪದರ್ಶನ'ದ ಕರ್ನಾಟಕದಲ್ಲಿ ಗಣಪತಿ ದ್ವಿಭುಜಗಳಿಂದ ಚತುರ್ಭುಜ, ಅಷ್ಟಭುಜ, ಷೋಡಶ ಭುಜಗಳಲ್ಲಿ ರೂಪುಗೊಂಡು ಕುಬ್ಜಾಕಾರದಿಂದ ವ್ಯೋಮಾಕಾರ ನಾಗಿ ಬೆಳೆದುದನ್ನು ಕ್ರಿ.ಶ. ೪ ಶತಮಾನದಿಂದ ೧೭ನೆಯ ಶತಮಾನದವರೆಗಿನ ಕಾಲಘಟ್ಟದಲ್ಲಿ ಕಾಣುತ್ತೇವೆ. ಕಲ್ಲುಗಳು ಇಲ್ಲಿ ರೂಪಗೊಂಡು ಹಾಡುತ್ತಿವೆ, ಕಥೆ ಹೇಳುತ್ತಿವೆ, ಆಧ್ಯಾತ್ಮ ದರ್ಶನ ಮಾಡುತ್ತಿವೆ.

## ಆಧಾರಸೂಚಿ

೧. ಡಾ. ಅ. ಸುಂದರ., **ಕಡಲಾಚೆಯ ಗಣಪತಿ**, ಬೆಂಗಳೂರು.
೨. ಡಾ. ಕೆ.ಎಂ. ಮುನಸಿ., *Indian Heritage*, Bharatiya Vidya Bhavan, Bombay.
೩. Dr. S. Radhakrishnan., *The Hindu way of life.*
೪. ಡಾ. ಎಸ್.ಕೆ. ಜೋಶಿ., 'ಗಣಪತಿ : ಗಣಗಳ ನಾಯಕ', **ಸಂಯುಕ್ತ ಕರ್ನಾಟಕ**, ಸಾಪ್ತಾಹಿಕ ಸೌರಭ, ೧೯೮೮, ಹುಬ್ಬಳ್ಳಿ.
೫. ಡಾ. ಎಸ್.ಕೆ. ಜೋಶಿ., 'ಮಹಾರಾಷ್ಟ್ರದ ಅಷ್ಟ ವಿನಾಯಕರು', **ಮೋದಕ**, (ಸಂ. ಕೃಷ್ಣ ಸಿದ್ಧಾಂತಿ).
೬. ಪ್ರೊ. ಪ್ರಿ.ಜಿ. ಮಾರಿಹಾಳ್., **ಕರ್ನಾಟಕ ಸಂಸ್ಕೃತಿಯ ವಿಶ್ವರೂಪ**, ಕ.ವಿ.ವಿ. ಧಾರವಾಡ, ೧೯೭೩.
೭. ಅದ್ಯ ರಾಮಾಚಾರ್ಯ., 'ವಿಶ್ವಭ್ರಾತೃತ್ವದ ಗಣೇಶ', ಕಸ್ತೂರಿ, ಸೆಪ್ಟೆಂಬರ್ ೨೦೦೧, ಹುಬ್ಬಳ್ಳಿ.
೮. Dr. Suryanath Kamat. A Hand Book of Karnataka. Dept. of Gazetteer. Govt. of Karnataka
೯. ಶ್ರೀಮತಿ ಸ್ವರೂಪರಾಣಿ ಮಠಪತಿ., 'ಕನ್ನಡಿಯ ಗಣಪ', **ಸಂಯುಕ್ತ ಕರ್ನಾಟಕ**, ಸಾಪ್ತಾಹಿಕ ಸೌರಭ, ಹುಬ್ಬಳ್ಳಿ, ೧೯೯೯, ಆಗಸ್ಟ್.
೧೦. ಶ್ರೀಮತಿ ಸ್ವರೂಪರಾಣಿ ಮಠಪತಿ., "ಕುಬೇರ ಶಿರಬಾಗಿದ, ಗಣಪ ವರ ನೀಡಿದ", **ಸಂಯುಕ್ತ ಕರ್ನಾಟಕ**, ಸಾಪ್ತಾಹಿಕ ಸೌರಭ, ಹುಬ್ಬಳ್ಳಿ, ೨೦೦೨, ಅಗಸ್ಟ್.
೧೧. ಕೃಪೆ : ಚಿತ್ರಗಳು ಎಎಸ್ಐ ಹಾಗೂ ಗ್ಯಾಸೆಟಿಯರ್ಸ್.
೧೨. ನಕ್ಷೆ : ಡಾ. ಎಸ್.ಕೆ. ಜೋಶಿ.

ಡಾ. ಎಸ್.ಎನ್. ಶಿವರುದ್ರಸ್ವಾಮಿ*

# ಉಚ್ಛಿಷ್ಟ ಗಣಪತಿ ಶಿಲ್ಪಗಳು

ಹಿಂದು ಧರ್ಮದಲ್ಲಿ ಗಣೇಶ ಅಥವಾ ಗಣಪತಿ ಅತ್ಯಂತ ಜನಪ್ರಿಯವಾದ ದೇವ. ಭಾರತದಲ್ಲಿ ಎಲ್ಲ ಪಂಥೀಯರು ವ್ಯಾಪಕವಾಗಿ ಈ ದೇವರನ್ನು ಆರಾಧಿಸುತ್ತಾರೆ. ಕಟ್ಟಾ ವೈಷ್ಣವರೂ ಸಹ – ಶಿವನನ್ನು ಪೂಜಿಸದಿದ್ದರೂ – ಗಣೇಶನನ್ನು ಪೂಜಿಸುತ್ತಾರೆ. ಇವನನ್ನು ವಿನಾಯಕ, ವಿಘ್ನರಾಜ, ವಿಘ್ನೇಶ ಮುಂತಾದ ಹೆಸರುಗಳಿಂದ ಅರ್ಚಿಸುತ್ತಾರೆ. ಇವನು ವಿಘ್ನವನ್ನು ತಂದೊಡ್ಡುತ್ತಾನೆ ಹಾಗೂ ಇವನನ್ನು ಆರಾಧಿಸುವವರ ವಿಘ್ನವನ್ನು ನಿವಾರಿಸುತ್ತಾನೆ – ಎಂಬ ನಂಬುಗೆ ಇದೆ. ಈ ದೇವರ ಪ್ರಾಚೀನತೆ ವೇದಗಳ ಕಾಲದವರೆಗೂ ಹಿಂದೆ ಸರಿಯುತ್ತದೆ. ಋಗ್ವೇದದಲ್ಲಿ ಗಣಪತಿಯ ಉಲ್ಲೇಖ ಎರಡು ಬಾರಿ ಬರುತ್ತದೆ.[೧] ಇವನ ವರ್ಣನೆ ಜನಪದೀಯ ಮೂಲದಿಂದ ಬಂದದ್ದು. ಶಂಕರಾಚಾರ್ಯರ ಕಾಲದಲ್ಲಿ ಗಾಣಪತ್ಯರೆಂಬ ಉಗ್ರಪಂಥೀಯರು ಗಣಪತಿಯ ಆರಾಧನೆಯಲ್ಲಿ ತೊಡಗಿದ್ದರು. ಅನಂತರ ಮತ್ತು ಇಂದೂ ಸಹ ಗಣಪತಿ ಸಾರ್ವತ್ರಿಕವಾಗಿ ಪೂಜೆಗೆ ಒಳಗಾಗುತ್ತಿದ್ದಾನೆ.[೨] ಅವನನ್ನು ಕುರಿತ ವರ್ಣನೆಯ ಹಿನ್ನೆಲೆ ಸಾಕಷ್ಟು ಕತೆಗಳಿಂದ ಕೂಡಿದೆ. ಇವೆಲ್ಲವೂ ಮಧ್ಯಯುಗದಲ್ಲಿ ರಚನೆ ಆದವು. ಶಿವ, ಬ್ರಹ್ಮಾಂಡ, ಗಣೇಶ, ವರಾಹ ಭವಿಷ್ಯ, ಸ್ಕಂದ ಪುರಾಣಗಳು ಈ ದೇವತೆಯ ವರ್ಣನೆಯನ್ನು ನೀಡುತ್ತವೆ. ಇವನು ಗಜಮುಖದವನಾಗಿ, ಗುಡಾಣದಂತಹ ಅಥವಾ ಲಂಬೋದರನಾಗಿ, ವಿಶಾಲವಾದ ಕಿವಿ ಉಳ್ಳವನಾಗಿ, ಏಕದಂತದವನಾಗಿ ಚಿತ್ರಿತವಾಗಿರುತ್ತಾನೆ. ಇವನು ವಸ್ತ್ರಾಭರಣ ಭೂಷಿತನಾಗಿ ಇರುತ್ತಾನೆ. ಇದು ಗಣೇಶನ ಸಾಮಾನ್ಯ ಚಿತ್ರಣ.[೩]

ತಾಂತ್ರಿಕಾಚಾರಗಳಲ್ಲಿ ಗಣೇಶನ ಆರಾಧನೆಯನ್ನು ವ್ಯಾಪಕವಾಗಿ ಅಳವಡಿಸಿಕೊಳ್ಳಲಾಗಿದೆ. ವಿಘ್ನಗಳಿಲ್ಲದೆ ಉದ್ದೇಶಿತ ಕಾರ್ಯಸಾಧನೆಗಾಗಿ ಇದನ್ನು ಮಾಡಲಾಗುತ್ತದೆ. ಶಾರದಾತಿಲಕ, ಪ್ರಪಂಚಸಾರ ಸಂಗ್ರಹ ಮುಂತಾದ ಸಂಸ್ಕೃತ ಗ್ರಂಥಗಳು ತಾಂತ್ರಿಕಾಚರಣೆಯಲ್ಲಿ ಗಣಪತಿಯ ಆರಾಧನೆಯ ಬಗ್ಗೆ ಮಾಹಿತಿಯನ್ನು ಕೊಡುತ್ತವೆ.[೪] ಶಕ್ತಿ ಗಣಪತಿಯ ಆರಾಧನೆ ತಾಂತ್ರಿಕಾಚರಣೆಯ ಪ್ರಮುಖ ಲಕ್ಷಣ.ಶಾರದಾತಿಲಕ ತಂತ್ರ ಗ್ರಂಥವು ಸತಿಯರಿಂದ ಕೂಡಿರುವ ಗಣೇಶರ ಪಟ್ಟಿಯನ್ನೇ ಕೊಡುತ್ತದೆ. ಈ ಪಟ್ಟಿಯಲ್ಲಿ ೫೧ ಗಣಪತಿಯರನ್ನು ಹೆಸರಿಸಲಾಗಿದೆ. ಈ ೫೧ ರೂಪಗಳಲ್ಲೂ ಗಣಪತಿಯನ್ನು ಕರಿಮುಖದವನಾಗಿ, ಮೇಲಣ ಹಸ್ತಗಳಲ್ಲಿ ಪಾಶ ಮತ್ತು ಅಂಕುಶಗಳನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಅವನು ತನ್ನ ಸತಿಯರೊಂದಿಗೆ ಆನಂದಪರವಶನಾಗಿರುತ್ತಾನೆ. ದೇವಿಯು ಅವನ ಎಡತೊಡೆಯ ಮೇಲೆ ಕುಳಿತಿರುತ್ತಾಳೆ. ಈ ಹಿನ್ನೆಲೆಯಲ್ಲೇ ಶಕ್ತಿ ಗಣಪತಿಯ ಬೆಳವಣಿಗೆ ಆದದ್ದು. ಶಕ್ತಿಗಣಪತಿಯಲ್ಲಿ ಉಚ್ಛಿಷ್ಟ ಗಣಪತಿ, ಲಕ್ಷ್ಮೀ ಗಣಪತಿ, ಊರ್ಧ್ವ ಗಣಪತಿ, ಪಿಂಗಳ ಗಣಪತಿ ಮತ್ತು ಮಹಾಗಣಪತಿಗಳು ಪ್ರಭೇದಗಳಿವೆ.[೫] ಉಚ್ಛಿಷ್ಟ ಗಣಪತಿಗೆ ನಾಲ್ಕು ಕೈಗಳು,



ಮುಳಬಾಗಿಲು ಸೋಮೇಶ್ವರ ದೇಗುಲದ ಉಚ್ಛಿಷ್ಟ ಗಣಪತಿ

* ಇತಿಹಾಸ ಪ್ರಾಧ್ಯಾಪಕರು, ಪ್ರಥಮ ದರ್ಜೆ ಕಾಲೇಜು, ತಿಪಟೂರು.

ಲಕ್ಷ್ಮೀಗಣಪತಿಗೆ ನಾಲ್ಕು ಅಥವಾ ಎಂಟು ಕೈಗಳು, ಉರ್ಧ್ವ ಗಣಪತಿಗೆ ಆರು ಕೈಗಳು. ಪಿಂಗಳ ಗಣಪತಿಗೆ ಆರು ಕೈಗಳು ಮತ್ತು ಮಹಾಗಣಪತಿಗೆ ೧೦ ಕೈಗಳು ಇರುವುದುಂಟು. ಶಕ್ತಿಗಣಪತಿಗಳು ತಮ್ಮ ಶಕ್ತಿಯರೊಂದಿಗೆ ಪರಸ್ಪರ ಆಲಂಗಿಸಿ ಕೊಂಡು ಸುಖಾಸೀನರಾಗಿ ಚಿತ್ರಿತವಾಗಿರುತ್ತಾರೆ.[೬] ಈ ನಿಬಂಧದಲ್ಲಿ ತಂತ್ರ ಗ್ರಂಥಗಳ ಹಿನ್ನೆಲೆಯಲ್ಲಿ ಉಚ್ಛಿಷ್ಟ ಗಣಪತಿಯ ಶಿಲ್ಪಗಳ ಅಧ್ಯಯನವನ್ನು ಮಾಡಲಾಗಿದೆ.

ತಾಂತ್ರಿಕಾಚರಣೆಯಲ್ಲಿ ದುಷ್ಟ ಶಕ್ತಿಗಳನ್ನು ಶಾಂತಗೊಳಿಸಿ, ಉದ್ದೇಶಿತ ಗುರಿಯನ್ನು ಸಾಧಿಸಲು ಸಾಧಕನು ಷಟ್ಕರ್ಮ ಗಳನ್ನು ಆಚರಿಸುತ್ತಾನೆ.[೭] ಬಹುಮಟ್ಟಿಗೆ ತಾಂತ್ರಿಕಾಚಾರಣೆಗಳು ಮೈಥುನ ಕ್ರಿಯೆಗಳನ್ನು ಒಳಗೊಂಡಿರುತ್ತವೆ. ತಾಂತ್ರಿಕ ಕ್ರಿಯಾನುಷ್ಠಾನಗಳಲ್ಲಿ, ವಿಘ್ನ ನಿವಾರಣೆಗಾಗಿ ಕ್ರಿಯೆಯ ಆರಂಭದಲ್ಲಿ ಗಣಪತಿಯನ್ನು ಆರಾಧಿಸಲಾಗುತ್ತದೆ. ಈ ಕ್ರಿಯೆಗಳಲ್ಲಿ ಗಣಪತಿಯು ಮೈಥುನ ಕ್ರಿಯೆಯಲ್ಲಿ ತೊಡಗಿರುವಂತೆ ಚಿತ್ರಿಸಿ, ಪೂಜಿಸಲಾಗುತ್ತದೆ. ಕ್ರಿಯೆಯ ಆರಂಭದಲ್ಲಿ (Rituals) ಅಂತಹ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಗುತ್ತದೆ. ಆರಂಭದಲ್ಲಿ ಅದು ಜಾನಪದೀಯ ಲಕ್ಷಣಗಳನ್ನು ಒಳಗೊಂಡಿತ್ತು. ಈ ಪ್ರತಿಮೆಗಳನ್ನು ಜೇಡಿಮಣ್ಣು, ಹಿಟ್ಟು, ಹುತ್ತದ ಮಣ್ಣು, ಬೆಲ್ಲ ಮುಂತಾದ ವಸ್ತುಗಳಿಂದ ಮಾಡಲಾಗುತ್ತಿತ್ತು. ಅನಂತರ ಈ ಪ್ರತಿಮೆಗಳನ್ನು ವಿಸರ್ಜಿಸಲಾಗುತ್ತಿತ್ತು ಮಂತ್ರಮಹಾರ್ಣವ ಗ್ರಂಥವು ಯಾವ ಯಾವ ವಸ್ತುಗಳಿಂದ ಗಣಪತಿಯ ಪ್ರತಿಮೆಗಳನ್ನು ಮಾಡಿ ಪೂಜಿಸಿದರೆ ಯಾವ ಯಾವ ಫಲ ದೊರೆಯುತ್ತದೆ ಎಂದು ತಿಳಿಸುತ್ತದೆ. ಜೇಡಿಮಣ್ಣಿನಿಂದ ಮಾಡಿ ಪೂಜಿಸಿದರೆ ಸಂಪತ್ತು ಬರುತ್ತದೆ. ಹುತ್ತದ ಮಣ್ಣಿನಿಂದ ಮಾಡಿದರೆ ಆಸೆಗಳು ಈಡೇರುತ್ತದೆ. ಬೆಲ್ಲದಿಂದ ಮಾಡಿದ ಗಣಪತಿಗಳನ್ನು ಆರಾಧಿಸಿದರೆ ಸುಖ ಬರುತ್ತದೆ – ಹೀಗೆ ಆ ಗ್ರಂಥದಲ್ಲಿ ವಿವರಿಸಲಾಗಿದೆ.

ರುದ್ರ–ಯಮಳ–ತಂತ್ರ ಮತ್ತು ಶಾರದಾ–ತಿಲಕ–ತಂತ್ರ– ಈ ಗ್ರಂಥಗಳು ಉಚ್ಛಿಷ್ಟ ಗಣಪತಿಯನ್ನು ಶ್ವೇತ ಅರ್ಕದ ಬೇರು ಅಥವಾ ಕೆಂಪು ಚಂದನದಿಂದ ತಯಾರಿಸಬೇಕೆಂದು ತಿಳಿಸುತ್ತದೆ. ತಂತ್ರಾಭಿಚಾರದ ಅಂತ್ಯದಲ್ಲಿ, ಅದರ ಯಶಸ್ಸನ್ನು ಗಳಿಸಬೇಕಾದರೆ ಉಚ್ಛಿಷ್ಟ ಗಣಪತಿಯನ್ನು ಪೂಜಿಸಬೇಕು. ಇದು ಉಚ್ಛಿಷ್ಟ ಗಣಪತಿಯ ಆರಾಧನೆಯ ಜಾನಪದೀಯ ಲಕ್ಷಣಗಳನ್ನು ತಿಳಿಸುತ್ತದೆ. ಇದು ತಾಂತ್ರಿಕಾಚರಣೆಯಲ್ಲಿರುವ ಮೈಥುನ ಅಂಶಗಳನ್ನು ಇದು ಸೂಚಿಸುತ್ತದೆ.

ಉಚ್ಛಿಷ್ಟ ಗಣಪತಿಯ ಪ್ರತಿಮಾ ಲಕ್ಷಣಗಳನ್ನು ಶಾರದಾ–ತಿಲಕ–ತಂತ್ರದ ೧೩ನೇ ಪಟಲವು ತಿಳಿಸುತ್ತದೆ.[೮] ಈ ದೇವನು ನಾಲ್ಕು ತೋಳುಗಳನ್ನು ಹೊಂದಿರುವಂತೆ ತೋರಿಸಲಾಗಿದೆ. ನಾಲ್ಕು ತೋಳುಗಳಲ್ಲಿ ಬಿಲ್ಲು, ಬಾಣ, ಪಾಶ ಮತ್ತು ಅಂಕುಶಗಳಿರುತ್ತವೆ. ಅವನ ದೇವಿ ಪುಷ್ಟಿ ನಗ್ನಳಾಗಿದ್ದು, ಅವನ ಜೊತೆ ಮೈಥುನ ಕ್ರಿಯೆಯಲ್ಲಿ ತೊಡಗಿರುತ್ತಾಳೆ. ಅದೇ ಕೃತಿಯು ಧ್ಯಾನ ಶ್ಲೋಕದಲ್ಲಿ ಗಣಪತಿಯನ್ನು ಮಧು–ಮತ್–ಕಪಾಲವನ್ನು ಹಿಡಿದಿರುವಂತೆ ವಿವರಿಸಲಾಗಿದೆ. ಅವನ ದೇವಿ ಅವನ ಎಡತೊಡೆಯ ಮೇಲೆ ಆಸೀನಳಾಗಿ, ಬಲಗೈಲಿ ಗಣಪತಿಯನ್ನು ತಟ್ಟಿದ್ದರೆ, ಎಡಗೈಲಿ ಪದ್ಮಪುಷ್ಪವನ್ನು ಹಿಡಿದಿರುತ್ತಾಳೆ. ಅವರಿಬ್ಬರೂ ಮೈಥುನಾಂಗಗಳ ಕ್ರಿಯೆಲ್ಲಿ ಪರಸ್ಪರ ತೊಡಗಿರುತ್ತಾರೆ. ಶಾರದಾ–ತಿಲಕ–ತಂತ್ರದ ಮೇಲೆ ಟೀಕುವನ್ನು ರಚಿಸಿರುವ ರಾಘವಭಟ್ಟನು ಉಚ್ಛಿಷ್ಟ ಗಣಪತಿಯ ಮತ್ತೊಂದು ರೂಪವನ್ನು ವಿವರಿಸುತ್ತಾನೆ.[೯] ಇದರಲ್ಲಿ ದೇವನು ಹತ್ತು ತೋಳುಗಳನ್ನು ಹೊಂದಿದ್ದು, ಬಲದ ಐದು ಹಸ್ತಗಳಲ್ಲಿ ಬೀಜಪೂರ (ಮಾದಲ ಹಣ್ಣು) ಗದೆ, ಬಾಣ, ಚಕ್ರ, ಅಕ್ಷಮಾಲ– ಇವುಗಳನ್ನು ಹಿಡಿದಿರುತ್ತಾನೆ, ಎಡ ಹಸ್ತಗಳಲ್ಲಿ ಬಿಲ್ಲು, ಪಾಶ, ಉತ್ಪಲ, ರದಾ, (ದಂತ, Tusk), ರತ್ನಕುಂಭ ಇವುಗಳು ಇರುತ್ತವೆ. ಅದೇ ಗ್ರಂಥದಲ್ಲಿ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಉಚ್ಛಿಷ್ಟ ಗಣಪತಿಯ ಪ್ರತಿಮೆಯನ್ನು ತಿಳಿಸಲಾಗಿದೆ. ದೇವರ ಈ ರೂಪವನ್ನು ಆರಾಧಿಸುವುದರ ಮೂಲಕ ಭಕ್ತ ಅಥವಾ ತಾಂತ್ರಿಕ ಸಾಧಕ ಅಭೀಷ್ಟ ಸಿದ್ಧಿಯನ್ನು ಗಳಿಸಬಹುದೆಂದು ರಾಘವಭಟ್ಟ ತಿಳಿಸುತ್ತಾನೆ.[೧೦]

ಈ ಗ್ರಾಂಥಿಕ ವಿವರಣೆಯ ಹಿನ್ನೆಲೆಯಲ್ಲಿ ಉಚ್ಛಿಷ್ಟ ಗಣಪತಿಯ ಕೆಲ ಶಿಲ್ಪಗಳನ್ನು ಗಮನಿಸೋಣ : ಇದರ ಶಿಲ್ಪ ನಿರೂಪಣೆಯನ್ನು ಕರ್ನಾಟಕದಲ್ಲಿ ವಿಜಯನಗರದ ಕಾಲದಲ್ಲಿ ಕಾಣಬಹುದು. ತಮಿಳು ನಾಡಿನಲ್ಲಿ ಅದಕ್ಕೂ ಪೂರ್ವದಲ್ಲೇ ಈ ದೇವನ ಅಪೂರ್ವ ಶಿಲ್ಪಗಳ ರಚನೆ ಆಗಿವೆ. ದಾರಶೂರಂ, ಕುಂಭಕೋಣಂ ಮುಂತಾದ ಸ್ಥಳಗಳಲ್ಲಿ ಈ ಶಿಲ್ಪಗಳಿವೆ. ದಾರಶೂರಂನ ಶಿಲ್ಪವಂತೂ ಅಪೂರ್ವವಾದ ರಚನೆ. ಕರ್ನಾಟಕದಲ್ಲಿ ವಿಜಯನಗರಕ್ಕೂ ಪೂರ್ವದಲ್ಲಿ ಉಚ್ಛಿಷ್ಟ ಗಣಪತಿಯ ಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ರಚನೆ ಆದಂತೆ ಕಾಣುವುದಿಲ್ಲ. ಇದನ್ನು ಮುಳಬಾಗಿಲಿನ ಸೋಮೇಶ್ವರ ದೇವಾಲಯ, ಕುರುಡಮಲೆಯ ಮಹಾಗಣಪತಿ ದೇವಾಲಯ, ನಂಜನಗೂಡಿನ ನಂಜುಂಡೇಶ್ವರ ದೇಗುಲ, ಪಂಕಜನಹಳ್ಳಿಯ ಮಲ್ಲಿಕಾರ್ಜುನ ದೇವಾಲಯಗಳಲ್ಲಿ ಕಾಣಬಹುದು. ಈ ದೇವಾಲಯಗಳೆಲ್ಲವೂ ವಿಜಯನಗರದ ಕಾಲದಲ್ಲಿ ನಿರ್ಮಾಣವಾದವು ಅಥವಾ ವಿಸ್ತರಣೆ ಆಗಿರಬಹುದು.

ಮುಳಬಾಗಿಲು ಪಟ್ಟಣದ ಸೋಮೇಶ್ವರ ದೇವಾಲಯದ ರಂಗಮಂಟಪದ ಈ ಕಾವ್ಯ ಕಂಬದ ಮೇಲೆ ಉಚ್ಛಿಷ್ಟ ಗಣಪತಿಯನ್ನು ಕೆತ್ತಲಾಗಿದೆ. ಇದು ಸುಂದರವಾದ

ಉಬ್ಬುಗೆತ್ತನೆ ಶಿಲ್ಪ. ನಗ್ನನಾಗಿರುವ ಇವನು ಪೀಠದ ಮೇಲೆ ಆಸೀನನಾಗಿದ್ದಾನೆ. ಮೇಲಣ ಬಲ ಮತ್ತು ಎಡ ಹಸ್ತಗಳಲ್ಲಿ ಅಂಕುಶ ಮತ್ತು ಪಾಶವನ್ನು ಹಿಡಿದಿದ್ದಾನೆ. ಮುಂದಣ ಬಲಗೈ ಮುರಿದ ದಂತವನ್ನು ಹಿಡಿದಿದೆ. ಅವನ ಮುಂದಣ ಎಡಗೈ ತನ್ನ ದೇವಿಪುಷ್ಟಿಯ ಪೃಷ್ಠವನ್ನು ಹಿಡಿದು ಆಲಂಗಿಸಿದೆ. ದೇವಿಯು ನಗ್ನಳಾಗಿ ಗಣೇಶನ ಎಡತೊಡೆಯ ಮೇಲೆ ಆಸೀನಳಾಗಿದ್ದಾಳೆ. ಗಣೇಶನು ತನ್ನ ಸೊಂಡಿಲನ್ನು ದೇವಿಯ ಜನನಾಂಗದಲ್ಲಿ ಇಟ್ಟಿದ್ದಾನೆ. ದೇವಿಯ ಬಲಗೈಯಿಂದ ಗಣೇಶನನ್ನು ಆಲಂಗಿಸಿದ್ದರೆ, ಎಡಗೈಯಿಂದ ಗಂಡನ ಸೊಂಡಿಲಿಗೆ ನೆರವು ನೀಡುತ್ತಿದ್ದಾಳೆ. ವಿಶಾಲವಾದ ಕಿವಿಗಳನ್ನು ಹೊಂದಿರುವ ಗಣೇಶನು ಕಿರೀಟಮಕುಟ, ಕಂಠಿಹಾರ, ನಾಗದರಬಂಧ, ತೋಳಬಂದಿ – ಇವುಗಳನ್ನು ಧರಿಸಿದ್ದಾನೆ.

ಅತ್ಯಂತ ಚಲುವಿನ ಉಚ್ಛಿಷ್ಟ ಗಣಪತಿಯ ಉಬ್ಬುಗೆತ್ತನೆಯ ಶಿಲ್ಪವನ್ನು ಕುರುಡುಮಲೆಯ (ಕೋಲಾರ ಜಿಲ್ಲೆ) ಮಹಾಗಣಪತಿ ದೇಗುಲದಲ್ಲಿ ರೂಪಿಸಲಾಗಿದೆ. ಈ ದೇವಾಲಯವನ್ನು ಹದಿನಾರನೇ ಶತಮಾನದ ಆರಂಭದಲ್ಲಿ ನಿರ್ಮಿಸಲಾಗಿದೆ. ಈ ದೇವನನ್ನು ದೇಗುಲದ ರಂಗಮಂಟಪದ ಸ್ತಂಭ ಒಂದರ ಮೇಲೆ ಮೂಡಿಸಲಾಗಿದೆ. ಇದು ಮುಳಬಾಗಿಲಿನ ಸೋಮೇಶ್ವರ ದೇಗುಲದ ಉಚ್ಛಿಷ್ಟ ಗಣಪತಿಯಂತೆ ಇದ್ದರೂ ಶಿಲ್ಪಸೌಂದರ್ಯದ ಪ್ರತೀಕವಾಗಿದೆ.

ಉಚ್ಛಿಷ್ಟ ಗಣಪತಿಯ ಮತ್ತೊಂದು ಉಬ್ಬಗೆತ್ತನೆಯ ಶಿಲ್ಪವನ್ನು ಪಂಕಜನಹಳ್ಳಿಯ ಮಲ್ಲಿಕಾರ್ಜುನ ದೇವಾಲಯದ ದ್ವಾರಮಂಟಪದ ಒಳಗೆ ರಚಿಸಲಾಗಿದೆ. ಪಂಕಜನಹಳ್ಳಿಯು ತುಮಕೂರು ಜಿಲ್ಲೆಯಲ್ಲಿದೆ. ಈ ದೇಗುಲವು ಹದಿನೈದನೇ ಶತಮಾನದ ಅಂತ್ಯದಲ್ಲಿ ನಿರ್ಮಾಣವಾಯಿತು. ಇದು ಹದಿನಾರನೇ ಶತಮಾನದ ಆರಂಭದಲ್ಲಿ ವಿಸ್ತರಣೆಯಾಯಿತು. ಉಚ್ಛಿಷ್ಟ ಗಣೇಶನನ್ನು ಪೀಠದ ಮೇಲೆ ಆಸೀನವಾಗಿರುವಂತೆ ಚಿತ್ರಿಸಲಾಗಿದೆ. ಇವನು ಆರು ತೋಳುಗಳನ್ನು ಹೊಂದಿದ್ದು, ಬಲಪಾರ್ಶ್ವದ ತೋಳುಗಳಲ್ಲಿ ಬಾಣ, ಅಂಕುಶ ಮತ್ತು ರತ್ನಕುಂಬ ಇವೆ.

ಎಡಪಾರ್ಶ್ವದ ತೋಳುಗಳಲ್ಲಿ ಬಾಣ, ಪಾಶಗಳಿವೆ. ಅವನ ಮತ್ತೊಂದು ತೋಳು ತನ್ನ ದೇವಿ ಪುಷ್ಟಿಯನ್ನು ತಬ್ಬಿ ಹಿಡಿದಿದೆ. ಆಕೆ ಅವನ ಎಡತೊಡೆಯ ಮೇಲೆ ಕುಳಿತಿದ್ದಾಳೆ. ದೇವ–ದೇವಿಯರಿಬ್ಬರೂ ನಗ್ನರಾಗಿದ್ದಾರೆ. ಗಣೇಶ ಕಿರೀಟಮಕುಟ, ಮಕರಕುಂಡಲ, ಕಂಠಿಹಾರ, ಛನ್ನವೀರ, ತೋಳಬಂದಿ, ಯಜ್ಞೋಪವೀತ ಮತ್ತು ನಾಗಉರಬಂಧ– ಇವುಗಳನ್ನು ಧರಿಸಿದ್ದಾನೆ. ದೇವಿಯನ್ನು ಪೀನಕುಜದೊಂದಿಗೆ ಚಿತ್ರಿಸಲಾಗಿದೆ. ಆಕೆಯೂ ಕಿರೀಟ, ಹಾರ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ. ಎಡಗೈಲಿ ಉತ್ಪಲವನ್ನು ಹಿಡಿದಿದ್ದರೆ, ಬಲಗೈಲಿ ದೇವನನ್ನು ಆಲಂಗಿಸಿದ್ದಾಳೆ. ಗಣಪತಿಯ ಸೊಂಡಿಲು ಆಕೆಯ ಜನನಾಂಗವನ್ನು ಸ್ಪರ್ಶಿಸುತ್ತಿದೆ. ದೇವಿಯ ಪಾದಗಳು ಪದ್ಮದ ಮೇಲಿವೆ.

ಗಣಪತಿಯ ಶಿಲ್ಪಗಳು ವ್ಯಾಪಕವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಚಿತ್ರಿತವಾಗಿವೆ. ಆದರೆ ಉಚ್ಛಿಷ್ಟ ಗಣಪತಿಯ ಶಿಲ್ಪಗಳು ಅಪರೂಪವೇ. ಅಭಿಷ್ಟವನ್ನು ಈಡೇರಿಸುವ ದೇವನಾಗಿ ಉಚ್ಛಿಷ್ಟ ಗಣಪತಿಯು ಭಕ್ತರಿಂದ ವಿಶೇಷವಾಗಿ ಪೂಜೆಗೆ ಒಳಗಾಗುತ್ತಿದ್ದಾನೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ರಾಮಚಂದ್ರರಾವ್. ಎಸ್.ಕೆ., ೧೯೭೫, **ಮೂರ್ತಿಶಿಲ್ಪ ನೆಲೆ–ಹಿನ್ನೆಲೆ**, ಬೆಂಗಳೂರು, ಪು. ೭೮.
೨. ಅದೇ., ಪು. ೮೦.
೩. ಶಿವರುದ್ರಸ್ವಾಮಿ. ಎಸ್.ಎಸ್., ೧೯೯೬, *Vijayanagara Temples In Karnataka*, ಮೈಸೂರು, ಪು. ೧೩೩–೧೩೪.
೪. ರಾಮಚಂದ್ರರಾವ್. ಎಸ್.ಕೆ., *Pratima-Kosa*, ಸಂ. ೨.
೫. ಗೋಪಿನಾಥರಾವ್. ಟಿ.ಎ., ೧೯೮೫, *Elements of Hindu Iconography*, ದೆಹಲಿ, ಪು. ೫೨–೫೬.
೬. ರಾಮಚಂದ್ರರಾವ್. ಎಸ್.ಕೆ., ೧೯೭೫, **ಮೂರ್ತಿಶಿಲ್ಪ ನೆಲೆ–ಹಿನ್ನೆಲೆ**, ಬೆಂಗಳೂರು, ಪು. ೯೨.
೭. ಷಟ್ಕರ್ಮಗಳು ಹೀಗಿವೆ. ಸ್ತಂಭನ, ವಿದ್ವೇಷಣ, ಮಾರಣ, ಉಚ್ಚಾಟನ ವಶೀಕರಣ, ಮೋಹ.
೮. ರಾಮಚಂದ್ರರಾವ್. ಎಸ್.ಕೆ., ೧೯೯೨, *Ganesha-Kosha*, ಪು. ೭೪.
೯. ಅದೇ., ಪು. ೭೬.
೧೦. ಅದೇ., ಪು. ೭೮.

ಡಾ. ಶೀಲಾಕಾಂತ ಪತ್ತಾರ*

# ಚಲುಕ್ಯರ ಗಜಲಕ್ಷ್ಮಿ ಶಿಲ್ಪಗಳು

ಭಾರತೀಯ ಶಿಲ್ಪಕಲೆಯು ಸಾಂಕೇತಿಕವೂ ಹೌದು, ಆಧ್ಯಾತ್ಮಿಕವೂ ಹೌದು. ಲಕ್ಷ್ಮಿ ದೇವತೆಯ ಶಿಲ್ಪ ರಚನೆಯಲ್ಲೂ ಇದು ಸತ್ಯವಾದುದು. ಲಕ್ಷ್ಮಿ ಎಂಬ ಪದವು 'ಲಕ್ಷ್ಮ'ದಿಂದ ವ್ಯುತ್ಪತ್ತಿ ಹೊಂದಿದ್ದು ಅದಕ್ಕೆ 'ಸಂಕೇತ' ಎಂಬ ಅರ್ಥವಿದೆ.

ಲಕ್ಷ್ಮಿ ಪೂಜೆಯು ವೇದಕಾಲದಷ್ಟು ಪ್ರಾಚೀನವಾದುದು. ಋಗ್ವೇದದ ಶ್ರೀಸೂಕ್ತದಲ್ಲಿ ಲಕ್ಷ್ಮಿಯ ವರ್ಣನೆ ಸುದೀರ್ಘವಾಗಿದೆ. ಅತಿ ಪ್ರಾಚೀನ ಗಜಲಕ್ಷ್ಮಿ ಶಿಲ್ಪಗಳನ್ನು ಭಾರಹುತ ಮತ್ತು ಸಾಂಚಿಯ ಸ್ತೂಪಗಳ ತೋರಣಗಳಲ್ಲಿ ಕಾಣುತ್ತೇವೆ. ಕ್ರಿ.ಪೂ. ಎರಡನೆಯ ಶತಮಾನದಷ್ಟು ಪ್ರಾಚೀನವಾದ ಈ ಶಿಲ್ಪಗಳಲ್ಲಿ ಲಕ್ಷ್ಮಿಯು ಕಮಲದ ಮೇಲೆ ಕುಳಿತಿರುವಂತೆ ಇಲ್ಲವೆ ನಿಂತಂತೆ ಮತ್ತು ಆನೆಗಳಿಂದ ಸೇವೆ ಸ್ವೀಕರಿಸುವಂತೆ ಶಿಲ್ಪಿತಳಾಗಿದ್ದಾಳೆ. ಈ ಶಿಲ್ಪ ವಿನ್ಯಾಸವು ಇಂದಿಗೂ ಹೆಚ್ಚು ಕಡಿಮೆ ಅದೇ ರೂಪದಲ್ಲಿ ಉಳಿದಿರುವುದು ಗಮನಾರ್ಹ ಸಂಗತಿ.

ಗುಲಬರ್ಗಾ ಜಿಲ್ಲೆಯ (ಚಿತಾಪುರ ತಾಲೂಕಿನ) ಸನ್ನತಿಯ ಬಳಿಯ ಹಸರಗುಂಡಿಯಲ್ಲಿ ಶೋಧಿಸಲಾದ ಬೌದ್ಧ ಧರ್ಮೀಯ ಯಕ್ಷ ಶಿಲ್ಪದಲ್ಲಿ ಕೊರಳಹಾರವಿದ್ದು, ಅದರ ಪದಕದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಇದರ ಕಾಲ ಸುಮಾರು ಕ್ರಿ.ಶ. ಎರಡನೆಯ ಶತಮಾನ. ಇಲ್ಲಿ ಕೂಡ ದೇವಿಯು ಪದ್ಮ ಪೀಠದಲ್ಲಿ ಕುಳಿತಿದ್ದು, ಬಲಗೈಯಲ್ಲಿ ಕಮಲ ಹಿಡಿದಂತೆ ಎಡಗೈಯನ್ನು ತೊಡೆಯ ಮೇಲೆ ಇಟ್ಟಿರುವಂತೆ ಚಿತ್ರಿತಳಾಗಿದ್ದಾಳೆ. ಶಾತವಾಹನರ ಕಾಲದ ಈ ಶಿಲ್ಪ ವೈಶಿಷ್ಟ್ಯವು ಮುಂಬರುವ ಶತಮಾನಗಳಲ್ಲಿಯೂ ಮುಂದುವರೆದುದನ್ನು ಕಾಣುತ್ತೇವೆ.

ಸಾಮಾನ್ಯವಾಗಿ ಗಜಲಕ್ಷ್ಮಿ ಶಿಲ್ಪವು ಬಾಗಿಲುವಾಡದ ಲಲಾಟಬಿಂಬದಲ್ಲಿ ಚಿಂಚಿತವಾಗಿರುತ್ತದೆ. ಇದು ಒಂದು ಶಿಲ್ಪ ಸಂಪ್ರದಾಯವಾಗಿ ನಂತರ ರೂಢಿಯಲ್ಲಿ ಬಂದಿತೆಂದು ತೋರುತ್ತದೆ. ಚಲುಕ್ಯರ ಅತೀ ಪ್ರಾಚೀನ ಗಜಲಕ್ಷ್ಮಿ ಶಿಲ್ಪವು ಬಾದಾಮಿಯ ಶೈವ ಗುಹಾಲಯದಲ್ಲಿದೆ. ಇದು ಲಲಾಟಬಿಂಬದಲ್ಲಿರದೆ ಕಂಬದ ಮೇಲೆ ಕಂಡರಣೆಗೊಂಡಿದೆ.

ಲಕ್ಷ್ಮಿಗೆ ಮಜ್ಜನಗೈಯುವ ಎರಡು ಆನೆಗಳೆಂದರೆ 'ಐರಾವತ' ಎಂಬ ಗಂಡಾನೆ ಮತ್ತು 'ಅಭ್ರಮೂ' ಎಂಬ ಹೆಣ್ಣಾನೆ. ಗಜಲಕ್ಷ್ಮಿಯ ಪರಿಕಲ್ಪನೆಯನ್ನು ಋಗ್ವೇದದ ಶ್ರೀ ಸೂಕ್ತದಲ್ಲಿ ಕಾಣುತ್ತೇವೆ. ಎರಡು ಆನೆಗಳಿಂದ ಅಭಿಷೇಕ ಗೊಳ್ಳುತ್ತಿರುವ ಲಕ್ಷ್ಮಿಯು ಶ್ರೀಫಲ ಮತ್ತು ಪದ್ಮವನ್ನು ಹಿಡಿದಿರುವಳೆಂದು ಹಾಗೂ ಪದ್ಮಾಸನದಲ್ಲಿ ಆಸೀನ ಳಾಗಿರುವಳೆಂದು ಮತ್ಸ್ಯ ಪುರಾಣವು ತಿಳಿಸುತ್ತದೆ. ಈ ಬಗೆಯ ಪ್ರತಿಮಾ ಲಕ್ಷಣಗಳನ್ನು 'ಅಭಿಲಷಿತಾರ್ಥ ಚಿಂತಾಮಣಿ'ಯಲ್ಲಿ ಕೂಡ ಹೇಳಲಾಗಿದೆ. ಎರಡು ಆನೆಗಳು ಶಂಖ ಮತ್ತು ಪದ್ಮ ಎಂಬ ಸಂಪತ್ತುಗಳ ದ್ಯೋತಕವೆಂದು ವಿಷ್ಣು ಧರ್ಮೋತ್ತರ ಪುರಾಣವು ತಿಳಿಸುತ್ತದೆ. ಗಣಿತ ಶಾಸ್ತ್ರದ ಮೇರೆಗೆ ಒಂದು ಪದ್ಮವೆಂದರೆ ೧೦೦ ಕೋಟಿ ಮತ್ತು ಒಂದು ಶಂಖವೆಂದರೆ ಕೋಟಿ ಕೋಟಿ. ಈ ಸಂಖ್ಯೆಗಳು ಅನಂತ ಸಂಪತ್ತು ಎಂದು ಸೂಚಿಸುತ್ತದೆ.

ಆನೆಯು ಫಲವತ್ತತೆಯ ಕುರುಹೂ ಹೌದು. ಮುಗಿಲುಗಳು ಮಳೆ ಸುರಿಸಿ ನೆಲವನ್ನು ಫಲವತ್ತಾಗಿ ಮಾಡುತ್ತವೆ. ಮುಗಿಲುಗಳು ಆನೆಯ ಸಹೋದರ ಬಂಧು ಗಳೆಂಬ ಕಲ್ಪನಾಕತೆಯುಂಟು. ಆನೆಗಳು ಸೊಂಡಿಲುಗಳಿಂದ ಸುರಿಸುವ ನೀರು ಸಮೃದ್ಧಿಯ ಸಂಕೇತ. ಲಕ್ಷ್ಮಿಯು ಧಾನ್ಯ ಲಕ್ಷ್ಮಿಯಾಗಿಯೂ ಪೂಜಿತಳು.

'ಶಿಲ್ಪರತ್ನ'ವು ಎರಡು ಕೈಗಳಿರುವ ಲಕ್ಷ್ಮಿ ಮತ್ತು ನಾಲ್ಕು ಕೈಗಳಿರುವ ಲಕ್ಷ್ಮಿ ಎಂದು ಎರಡು ಬಗೆಯ ಗಜಲಕ್ಷ್ಮಿಗಳನ್ನು ಪಟ್ಟಿ ಮಾಡಿದೆ. ಚಲುಕ್ಯರ ಶಿಲ್ಪಕಲೆಯಲ್ಲಿ ನಾಲ್ಕು ಕೈಗಳಿರುವ ಲಕ್ಷ್ಮಿ ಶಿಲ್ಪಗಳಿಲ್ಲ. ಚಲುಕ್ಯ ರೂವಾರಿಗಳು ಅವಳನ್ನು ದ್ವಿಭುಜೆಯಾಗಿಯೇ ಚಿತ್ರಿಸಿದ್ದಾರೆ. ದೇವಿಯು ಕುಳಿತಿರುವಂತೆ ಶಿಲ್ಪಿತಳಾಗಿದ್ದಾಳೆ. ಚಲುಕ್ಯ ಶಿಲ್ಪರಾಶಿಯಲ್ಲಿ ಲಕ್ಷ್ಮಿ ನಿಂತಂತೆ ಚಿತ್ರಣಗೊಂಡಿದ್ದು ಕಥಾನಕ ಶಿಲ್ಪಗಳಲ್ಲಿ. ಚಲುಕ್ಯ ಶಿಲ್ಪಗಳು ಕಂಡರಿಸಿದ ಅತ್ಯಂತ ಕಲಾತ್ಮಕವಾದ ಹಾಗೂ ಬೃಹದಾಕಾರದ ಲಕ್ಷ್ಮಿ ಶಿಲ್ಪವೆಂದರೆ ಬಾದಾಮಿಯ ಶಿವ ಗುಹಾಲಯ ದಲ್ಲಿಯದು. ಇದು ಶಿವ-ನಾರಾಯಣರ ಸಂಯುಕ್ತ ಪ್ರತಿಮೆ.

* 'ಈಶ್ವರ ಶಿಲ್ಪ', ೧ನೇ ಕ್ರಾಸ್, ವಿದ್ಯಾನಗರ, ಬಾದಾಮಿ - ೫೮೭ ೨೦೧. ಬಾಗಲಕೋಟೆ ಜಿಲ್ಲೆ.

ನಾರಾಯಣನ ಪಕ್ಕದಲ್ಲಿ ಲಕ್ಷ್ಮಿ ನಿಂತಿದ್ದಾಳೆ. ಇವಳು ಗಜಲಕ್ಷ್ಮಿಯಲ್ಲ.

ಈ ಹಿಂದೆ ಹೇಳಿದಂತೆ ಗಜಲಕ್ಷ್ಮಿ ಶಿಲ್ಪಗಳು ಬಾಗಿಲು ವಾಡದ ಲಲಾಟಬಿಂಬದಲ್ಲಿ ಬಿಂಬಿತವಾಗಿರುವುದು ವಾಡಿಕೆ. ಆದರೆ ಚಲುಕ್ಯ ಶಿಲ್ಪಾಚಾರ್ಯರು ಗಜಲಕ್ಷ್ಮಿಯನ್ನು ಲಲಾಟಬಿಂಬಕ್ಕೇ ಸೀಮಿತಗೊಳಿಸದೆ ಮೇಲ್ಛಾವಣಿ, ಗೋಡೆ ಹಾಗೂ ಕಂಬಗಳ ಮೇಲೆ ಕಂಡರಿಸಿದ್ದುದು ಗಮನೀಯ.

**ಅ) ಎರಡು ಆನೆಗಳೊಂದಿಗೆ ಲಕ್ಷ್ಮಿ**

**ತೊಲೆಗಳ ಮೇಲೆ :**

**ತಾರಕ ಬ್ರಹ್ಮ ದೇವಾಲಯ, ಆಲಂಪುರ :** ಗರ್ಭಗೃಹದ ಲಲಾಟಬಿಂಬದ ಮೇಲೆ ಗಜಲಕ್ಷ್ಮಿ ಶಿಲ್ಪವಿದೆ. ದೇವಿಯು ಪದ್ಮಪೀಠದ ಮೇಲೆ ಕುಳಿತ ಭಂಗಿ ಅಪರೂಪದ್ದಾಗಿದೆ. ಕಾಲುಗಳೆರಡನ್ನು ಇಳಿಬಿಟ್ಟು ಪ್ರಲಂಬಪಾದ ಲಕ್ಷ್ಮಿಯಾಗಿದ್ದಾಳೆ. ಮಹಾಬಲಿಪುರಂನಲ್ಲಿ ನರಸಿಂಹವರ್ಮ ಮಾಮಲ್ಲ ಕೊರೆಯಿಸಿದ ಗಜಲಕ್ಷ್ಮಿ ಶಿಲ್ಪವನ್ನು ನೆನಪಿಸುತ್ತದೆ.

**ಇಟಗಿಯ ತೋರಣ :** ಕೊಪ್ಪಳ ಜಿಲ್ಲೆಯ ಇಟಗಿಯಲ್ಲಿ ಚಲುಕ್ಯರ ಕಾಲದ ಬಿಡಿ ತೋರಣವಿದ್ದು ಅದರ ತೊಲೆಯ ಎರಡು ಕಡೆಗಳಲ್ಲಿ ಮಧ್ಯಭಾಗವು ಗಜಲಕ್ಷ್ಮಿ ಶಿಲ್ಪಗಳಿಂದ ಅಲಂಕೃತವಾಗಿದೆ. ಗಜಲಕ್ಷ್ಮಿಯನ್ನು ಮಂಗಲದೇವತೆಯಾಗಿ ತೋರಣಗಳಲ್ಲಿ ಕಂಡರಿಸುವುದು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಸಾಂಚಿಯ ತೋರಣಗಳಲ್ಲಿಯ ಗಜಲಕ್ಷ್ಮಿ ಶಿಲ್ಪಗಳನ್ನು ಇಲ್ಲಿ ಸ್ಮರಿಸಬಹುದು.

**ಕೊಂತ ಗುಡಿ, ಐಹೊಳೆ :** ಐಹೊಳೆಯ ಕೊಂತಗುಡಿ (ವ್ಯಾಯವ್ಯ)ಯ ಗರ್ಭಗುಡಿಯ ಮೇಲ್ಗಂಡಿಗೆ ಹೊಂದಿ ಕೊಂಡಂತೆ ತೊಲೆ ಇದೆ. ಇದರ ಮಧ್ಯದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಸಂಪ್ರದಾಯದಂತೆ ಎರಡು ಆನೆಗಳು ದೇವಿಗೆ ನೀರಿನ ಅಭಿಷೇಕ ಮಾಡುತ್ತಿವೆ. ದೇವಿ ಕುಳಿತಿರುವ ಕಮಲವು ನೆಲಕ್ಕೆ ಮುಖ ಮಾಡಿರುವಂತೆ ಕೆತ್ತನೆ ಮಾಡಲಾಗಿದೆ.

ಈ ಕಮಲವು ಎಂಟು ದಳಗಳಿಂದಾಗಿದೆ. ಈ ಅಷ್ಟದಳಗಳನ್ನು ಇಂದ್ರದಳ, ಅಗ್ನಿದಳ, ನೈರುತ್ಯದಳ, ವರುಣದಳ, ವಾಯುವ್ಯ ದಳ, ಕುಬೇರ ದಳ ಮತ್ತು ಈಶಾನ್ಯದಳಗಳೆಂದು ಕರೆಯಲಾಗಿದೆ. ಈ ದಳಗಳಲ್ಲಿ ಕ್ರಮವಾಗಿ ಭಕ್ತಿ, ಹಸಿವು, ಕ್ರೋಧ, ದ್ವೇಷ, ನಿದ್ರೆ, ಗಮನ, ಧರ್ಮ, ಶೀಲ ವಿಷಯಾಭಿರುಚಿ ಜಾಗೃತಗೊಳ್ಳುವವೆಂದು ಹೇಳಲಾಗಿದೆ.

೧೩ನೆಯ ಶತಮಾನದ ಹೇಮಾದ್ರಿಯು ತನ್ನ 'ಚತುರ್ವರ್ಗ ಚಿಂತಾಮಣಿ'ಯ ವ್ರತಖಂಡದಲ್ಲಿ ಲಕ್ಷ್ಮಿಯು ಕಮಲದ ಎಂಟುದಳಗಳ ನಡುವೆ ಕುಳಿತಿರುವಂತೆ ಚಿತ್ರಿತಳಾಗಿರಬೇಕೆಂದು ಮತ್ತು ಪಾತ್ರೆಯನ್ನು ಸೊಂಡಿಲಲ್ಲಿ ಹಿಡಿದ ಎರಡು ಆನೆಗಳು ದೇವಿಗೆ ಜಲಾಭಿಷೇಕ ಮಾಡು ವಂತಿರಬೇಕೆಂದು ನಿರ್ದೇಶಿಸಿದ್ದಾನೆ. ಈ ಲಕ್ಷಣಗಳುಳ್ಳ ಗಜಲಕ್ಷ್ಮಿಯ ಮೂರ್ತಿಯನ್ನು ಏಳನೆಯ ಶತಮಾನದಷ್ಟು ಹಿಂದೆಯೇ ಚಲುಕ್ಯ ರೂವಾರಿಗಳು ರೂಪಿಸಿರುವುದಕ್ಕೆ ಕೊಂತಗುಡಿಯ ಈ ಪ್ರತಿಮೆಯು ಸಾಕ್ಷಿಯಾಗಿದೆ.

**ಹುಚ್ಚಪ್ಪಯ್ಯ ಗುಡಿ, ಐಹೊಳೆ :** ಇಲ್ಲಿಯ ಗಜಲಕ್ಷ್ಮಿ ಶಿಲ್ಪವು ಸಭಾ ಮಂಟಪದ ಬಾಗಿಲುವಾಡದ ಹಿಂಭಾಗದ ತೊಲೆಯ ಮೇಲಿದೆ. ೫' x ೨' ಗಾತ್ರದ ಈ ಮೂರ್ತಿಯು ಚಲುಕ್ಯರ ಕಾಲದ ಗಜಲಕ್ಷ್ಮಿ ಶಿಲ್ಪಗಳಲ್ಲಿಯೇ ಅತಿ ದೊಡ್ಡದು ಹೀಗೆ ದೇವಿಯು ಗರ್ಭಗೃಹದತ್ತ ಮುಖ ಮಾಡಿರುವಂತೆ ಇರಿಸಲಾದ ಗಜಲಕ್ಷ್ಮಿ ವಿಗ್ರಹವು ಇದೊಂದೇ.

**ಬಿಡಿ ಬಾಗಿಲುವಾಡ ಐಹೊಳೆ :** ಹುಚ್ಚಪ್ಪಯ್ಯ ಗುಡಿಯ ದಕ್ಷಿಣಕ್ಕೆ ಅನತಿ ದೂರದಲ್ಲಿ ಏಕಾಂಗಿಯಾಗಿ ನಿಂತ ಬಾಗಿಲುವಾಡವಿದೆ. ಇದರ ಎಡ ಬಲದಲ್ಲಿ ಪೂರ್ಣ ಕಲಶ ಮತ್ತು ನಿಧಿ ಶಿಲ್ಪಗಳಿವೆ. ಸಿ. ಶಿವರಾಮ ಮೂರ್ತಿಯವರು ಕಮಲಗಳಿಂದ ಕೂಡಿದ ಮಂಗಲ ಕಲಶಗಳು ಲಕ್ಷ್ಮಿಯ ಪ್ರತೀಕವೆಂದು ವಿವರಿಸುತ್ತಾರೆ. ಶ್ರೀಯು 'ಕಲಶಾಬ್ಧಿಪುತ್ರಿ' ಎಂದೂ 'ಕಲಶಾಬ್ಧಿ ಸಮುದ್ಭವಾ' ಎಂದೂ ವರ್ಣಿತಳಾಗಿದ್ದಾಳೆ.

**ಚಲುಕ್ಯರ ವಾಸ್ತು ನಿರ್ಮಿತಿಗಳಲ್ಲಿ ಗಜಲಕ್ಷ್ಮಿ ಶಿಲ್ಪಗಳು ಮೂಡಿ ಬಂದುದು ಹೀಗೆ –**

| ಸ್ಥಾನ | ೨ ಆನೆಗಳೊಂದಿಗೆ ಲಕ್ಷ್ಮಿ | ೪ ಆನೆಗಳೊಂದಿಗೆ ಲಕ್ಷ್ಮಿ | ಒಟ್ಟು |
|---|---|---|---|
| ತೊಲೆ/ಲಲಾಟಬಿಂಬ | ೫ | ೧ | ೬ |
| ಮೇಲ್ಛಾವಣಿ | ೩ | ೦ | ೩ |
| ಗೋಡೆ | ೨ | ೧ | ೩ |
| ಕಂಬ | ೨ | ೧ | ೩ |
| ಒಟ್ಟು | ೧೨ | ೩ | ೧೫ |

ಚಲುಕ್ಯರ ಅವಧಿಯಲ್ಲಿ ಪೂರ್ಣಕಲಶಗಳೊಂದಿಗೆ ನಿಧಿಶಿಲ್ಪಗಳು ಕೂಡ ಕೆತ್ತನೆಗೊಂಡಿರುವುದಕ್ಕೆ ಈ ಬಾಗಿಲುವಾಡವು ನಿದರ್ಶನವಾಗಿದೆ.

**೨) ಮೇಲ್ಗಂಡಿನಲ್ಲಿ**

ಪಟ್ಟದಕಲ್ಲಿನ ವಿರೂಪಾಕ್ಷ, ಮಲ್ಲಿಕಾರ್ಜುನ ಮತ್ತು ಪಾಪನಾಥ ಗುಡಿಗಳ ಸಭಾಮಂಟಪದ ಮೇಲ್ಗಂಡಿನಲ್ಲಿ ತಲಾ ಒಂದರಂತೆ ಗಜಲಕ್ಷ್ಮಿ ಶಿಲ್ಪಗಳಿವೆ. ಇವೆಲ್ಲ ಬಹುಮಟ್ಟಿಗೆ ನಾಶವಾಗಿವೆ. ಈ ಮೂರು ಪ್ರತಿಮೆಗಳಲ್ಲಿ ದೇವಿಯು ವರ್ತುಲಾಕಾರದ ನಕ್ಷೆಗಳಿಂದ ಶೋಭಿತಳಾಗಿದ್ದಾಳೆ.

**೩) ಗೋಡೆಯ ಮೇಲೆ**

**ವಿರೂಪಾಕ್ಷ ಗುಡಿ, ಪಟ್ಟದಕಲ್ಲು :** ಈ ಗುಡಿಯ ದಕ್ಷಿಣ ಹೊರಗೋಡೆಯ ಮೇಲೆ ಕಲಾತ್ಮಕ ಪುಷ್ಪ ನಕ್ಷೆಗಳಿಂದ ಅಲಂಕೃತವಾದ ಗಜಲಕ್ಷ್ಮಿಯನ್ನು ಕಾಣಬಹುದು. ವಾಡಿಕೆಯಂತೆ ದೇವಿಯು ಪದ್ಮ ಪೀಠದ ಮೇಲೆ ಪದ್ಮಾಸನದಲ್ಲಿ ಶಿಲ್ಪಿತಳಾಗಿದ್ದಾಳೆ. ಎಡ ಬಲದಲ್ಲಿರುವ ಆನೆಗಳು ಅವಳಿಗೆ ಮಜ್ಜನ ಮಾಡಿಸುತ್ತಿದ್ದಾರೆ.

**ಮಲ್ಲಿಕಾರ್ಜುನ ಗುಡಿ, ಪಟ್ಟದಕಲ್ಲು :** ಈ ಮಂದಿರದ ದಕ್ಷಿಣ ಹೊರಗೋಡೆಯ ಮೇಲೆ ಒಂದು ಗಜಲಕ್ಷ್ಮಿ ಶಿಲ್ಪವಿದ್ದು ಬಹಳಷ್ಟು ತ್ರುಟಿತಗೊಂಡಿದೆ. ದೇವಿ ಕುಳಿತಿರುವ ಪದ್ಮಪೀಠವು ತೌಲನಿಕವಾಗಿ ದೊಡ್ಡದಾಗಿದೆ.

**೪) ಕಂಬದ ಮೇಲೆ**

೧. ಬಾದಾಮಿಯ ಶಿವ ಗುಹಾಲಯದ ಮೊಗಸಾಲೆಯ ಕಂಬದ ಮೇಲೆ ಗಜಲಕ್ಷ್ಮಿ ಶಿಲ್ಪದ ಕೆತ್ತನೆಯಿದೆ. ದೇವಿಯು ಕಮಲದ ಮೇಲೆ ಆಸೀನಳಾಗಿದ್ದಾಳೆ, ಎಡ ಬಲಗಳಲ್ಲಿ ಒಬ್ಬೊಬ್ಬ ಗಣ ನಿಂತಿದ್ದಾರೆ. ಅವರ ಕೈಯಲ್ಲಿ ಪಾತ್ರೆಯಿದೆ. ನಿಂತ ಭಂಗಿ ಆಕರ್ಷಣೀಯವಾಗಿದೆ. ಗಣಗಳ ಮೇಲ್ಭಾಗದಲ್ಲಿ ನೀರು ಸುರಿಯುವ ಆನೆಗಳಿವೆ. ಈ ಆನೆಗಳಿಗೆ ನೀರು ತುಂಬಿದ ಅಭಿಷೇಕ ಪಾತ್ರೆಗಳನ್ನು ಗಣರು ಕೊಟ್ಟಿರಬಹುದೆಂದು ಊಹಿಸಲು ಅವಕಾಶವಿದೆ. ಇದು ವಿಭಿನ್ನ ಲಕ್ಷಣಗಳಿಂದ ಕೂಡಿದ ಗಜಲಕ್ಷ್ಮಿ ಶಿಲ್ಪ. ಚಲುಕ್ಯ ರೂವಾರಿಗಳು ನಿರ್ಮಿಸಿದ ಅತಿ ಪ್ರಾಚೀನ ಗಜಲಕ್ಷ್ಮಿ ಶಿಲ್ಪವು ಇದೇ.

೨) ಲಾಡಖಾನ ಗುಡಿಯ ಮೊಗಸಾಲೆಯ ಕಂಬವೊಂದರ ಅರ್ಧವರ್ತುಲದಲ್ಲಿ ಇನ್ನೊಂದು ಗಜಲಕ್ಷ್ಮಿ ಮೂರ್ತಿ ಕೆತ್ತನೆಗೊಂಡಿದ್ದು ಯಾವುದೇ ವಿಶೇಷತೆ ಇಲ್ಲದ ಬಡ ಶಿಲ್ಪವದು.

**ಆ) ನಾಲ್ಕು ಆನೆಗಳೊಂದಿಗೆ ಲಕ್ಷ್ಮಿ**

ಚಲುಕ್ಯ ಕಲಾವಿದರ ಶಿಲ್ಪ ಸೃಷ್ಟಿ ಸಮೃದ್ಧವಾದುದು ಆದರೆ ಆ ಶಿಲ್ಪರಾಶಿಯಲ್ಲಿ ಲಕ್ಷ್ಮಿಯು ನಾಲ್ಕು ಆನೆಗಳೊಂದಿಗೆ ಕಾಣಸಿಗುವುದು ವಿರಳವೆಂದೇ ಹೇಳಬೇಕು. ಕೇವಲ ಮೂರು ಜಾಗೆಯಲ್ಲಿ ಈ ಬಗೆಯ ಗಜಲಕ್ಷ್ಮಿ ಪ್ರತಿಮೆಗಳನ್ನು ಕಾಣಬಹುದು.

**೧. ಎರಡನೆಯ ಗುಹಾಲಯ ಬಾದಾಮಿ :** ನಾಲ್ಕು ಆನೆಗಳಿರುವ ಗಜಲಕ್ಷ್ಮಿ ಶಿಲ್ಪಗಳಲ್ಲಿ ಇದೇ ಪ್ರಾಚೀನವಾದುದು ಇಲ್ಲಿಯ ಮೊಗಸಾಲೆಯ ಕಂಬವೊಂದರಲ್ಲಿ ದೇವಿಯು ಚಿತ್ರಿತಳಾಗಿದ್ದಾಳೆ. ಎರಡು ಆನೆಗಳು ದೇವಿಗೆ ಜಲಾಭಿಷೇಕ ವನ್ನು ಮಾಡುತ್ತಿವೆ. ಮೇಲಿನ ಮೂಲೆಗಳಲ್ಲಿ ಮತ್ತೆ ಎರಡು ಆನೆಗಳಿವೆ. ದೇವಿಯ ಸೇವೆಗೆಂದು ಸರದಿಯಲ್ಲಿವೆ ಎಂದು ಕಲ್ಪಿಸಬಹುದು. ಲಕ್ಷ್ಮಿಯು ಕಮಲದ ಮೇಲೆ ಕುಳಿತಿರುವಳು ಮೂಲತಃ ಕಮಲವು ವರ್ಣರಂಜಿತವಾಗಿತ್ತೆಂಬುದು ಬಣ್ಣದ ಅವಶೇಷಗಳಿಂದ ಗೊತ್ತಾಗುತ್ತದೆ. ಆರ್.ಡಿ. ಬ್ಯಾನರ್ಜಿಯವರು ಈ ದೇವಿಯು ಚತುರ್ಭುಜೆ ಎಂದು ಹೇಳಿರುವರಾದರೂ ಅವಳು ದ್ವಿಭುಜೆ ಎಂಬುದು ಸ್ಪಷ್ಟ.

**೨. ಗೌಡರ ಗುಡಿ, ಐಹೊಳೆ :** ಈ ಗುಡಿಯ ಬಾಗಿಲುವಾಡವು ಕಲಾತ್ಮಕವಾದ ಕೆತ್ತನೆಯಿಂದ ಕೂಡಿದೆ ಲಲಾಟಬಿಂಬದಲ್ಲಿ ಗರುಡನಿದ್ದಾನೆ. ಅದರ ಮೇಲ್ಭಾಗ (architrave) ದಲ್ಲಿ ಗಜಲಕ್ಷ್ಮಿ ಶಿಲ್ಪವನ್ನು ಕಂಡರಿಸಲಾಗಿದೆ ಸರೋವರದಿಂದ ಹೊರಬಂದ ದೊಡ್ಡದಾದ ಕಮಲದ ಮೇಲೆ ದೇವಿಯು ಆಸೀನಳಾಗಿದ್ದಾಳೆ. ಎರಡು ಆನೆಗಳ ನೀರನ್ನು ಸುರಿಯುತ್ತಿವೆ. ಇನ್ನೆರಡು ಆನೆಗಳು ಕೆಳ ಸರೋವರದಲ್ಲಿ ಈಜುತ್ತಿವೆ. ಹೀಗೆ ನಾವು ತಿಳಿದಿರುವ ಪ್ರತಿಮಾ ಲಕ್ಷಣಗಳಿಂದ ಈ ಗಜಲಕ್ಷ್ಮಿ ಶಿಲ್ಪವು ಭಿನ್ನವಾಗಿದೆ.

**೩. ವಿರೂಪಾಕ್ಷ ಗುಡಿ, ಪಟ್ಟದಕಲ್ಲು :** ಈ ದೇವಾಲಯದ ಪೂರ್ವದ ಗೋಡೆಯ ಮೇಲಿರುವ ಲಿಂಗೋದ್ಭವ ಶಿವನ ವಿಗ್ರಹದ ಮೇಲ್ಭಾಗದಲ್ಲಿ ಒಂದು ಗಜಲಕ್ಷ್ಮಿಯ ಮೂರ್ತಿಯು ಕೆತ್ತನೆಗೊಂಡಿದೆ. ಇಲ್ಲಿ ನಾಲ್ಕು ಆನೆಗಳು ದೇವಿಗೆ ಜಲಾಭಿಷೇ ಮಾಡುವಲ್ಲಿ ನಿರತವಾಗಿವೆ. ಎರಡು ಆನೆಗಳು ಕುಳಿತುಕೊಂಡ ಸೊಂಡಿಲಲ್ಲಿ ಹಿಡಿದ ಪಾತ್ರೆಯಿಂದ ನೀರನ್ನು ಸುರಿಯುತ್ತಿವೆ ಅವುಗಳ ಹಿಂದೆ ಇನ್ನೆರಡು ಆನೆಗಳ ಮುಖಗಳನ್ನು ರೂವಾ ಸಂಯೋಜಿಸಿದ್ದಾನೆ. ಅವು ಸೊಂಡಿಲಲ್ಲಿ ಪಾತ್ರೆ ಹಿಡಿದಿ ಇಲ್ಲಿಯೂ ಕೂಡ ಲಕ್ಷ್ಮಿಯು ಕಮಲದ ಮೇ ಆಸೀನಳಾಗಿರುವಳು.

ದೇವಿಯು ನಿಂತಿರುವಂತೆ ಯಾವ ಗಜಲಕ್ಷ್ಮಿ ಶಿಲ್ಪದಲ್ಲಿಯೂ ಚಲುಕ್ಯ ರೂವಾರಿಗಳು ಚಿತ್ರಿಸಿಲ್ಲವೆಂಬುದ

ಈ ಮೇಲಿನ ಸಮೀಕ್ಷೆಯಿಂದ ಸ್ಪಷ್ಟವಾಗುತ್ತದೆ. ಚಲುಕ್ಯರ ಕಲೆಯಲ್ಲಿ ಗಜಲಕ್ಷ್ಮಿ ಶಿಲ್ಪಗಳು ಲಲಾಟಬಿಂಬದಲ್ಲಿ ಚಿತ್ರಿತವಾಗಿರುವದರ ಜೊತೆಗೆ ಭಿತ್ತಿ, ಗೋಡೆ ಮತ್ತು ಕಂಬಗಳ ಮೇಲೆ ಕೆತ್ತನೆಗೊಂಡಿವೆ. ರಾಷ್ಟ್ರಕೂಟರ ಕಾಲದಲ್ಲಿ ಗಜಲಕ್ಷ್ಮಿ ಪ್ರತಿಮೆಗಳು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣಗೊಂಡವು. ಕ್ರಮೇಣ ಈ ಶಿಲ್ಪಗಳು ಬಾಗಿಲುವಾಡದ ಲಲಾಟಬಿಂಬಗಳಿಗೆ ಸೀಮಿತಗೊಂಡು ಒಂದು ಶಿಲ್ಪ ಸಂಪ್ರದಾಯವನ್ನು ರೂಪಿಸಿದವೆನ್ನಬಹುದು.

## ಆಧಾರಸೂಚಿ


೧. Shivarammurti., *Sri Lakshmi in Indian Art and Thought,* New Delhi, 1982.

೨. Ramachandra Rao., *S.K. Encycolpaedia of Indian Iconography,* Vol. III, Delhi-2003.

೩. Sundara, A., (Ed), i) *Karnataka Charite,* Vol-I, Hampi, 1997 (Kannada).
ii) Sri Lakshmi - 'Legends and lores', (Key note address) Mumbai, 1999.

೪. Nagaraj Rao. M.S., *The Chalukyas of Badami,* (Ed), Bangalore, 1978.

೫. Banerji. R.D., *Basreliefs of Badami,* calcutta, 1928.

೬. Rajasekhara. S., *Early Chalukya Art of Aihole,* NewDelhi - 1985.

೭. Gupte, R.S., *The Art and Architecture of Aihole,* Bombay, 1967.

೮. Shrinivas Padigar., *Vishnu Cult in Karnataka*, Mysore, 1996.

೯. The Art of Indian Asia - Its Mythology and Transformations, *Joseph Campbell,* (Ed) Delhi - 2001.

೧೦. Annigeri A.M., *Aihole : i) Kale Mattu Samskriti,* Dharwad, 1967 (Kannada).
ii) *Pattadakal Temples,* Dharwad, 1960 (Kannada).

ಜಿ.ಕೆ. ದೇವರಾಜಸ್ವಾಮಿ *

# ಭಾನುವಳ್ಳಿಯ ವಿಶಿಷ್ಟ ಸೂರ್ಯಶಿಲ್ಪ

ಭಾನುವಳ್ಳಿ ಅಥವಾ ಭಾನುಪುರವು ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಕಮ್ಮರಡಿಯಿಂದ ಸುಮಾರು ಎರಡು ಕಿ.ಮೀ. ದೂರದಲ್ಲಿದೆ. ಇದೇ ಜಿಲ್ಲೆಯ ಶೃಂಗೇರಿ ತಾಲ್ಲೂಕಿನ ಕ್ರಿ.ಶ. ೧೪೯೭ರ ತಾಮ್ರಶಾಸನದಲ್ಲಿ 'ಭಾನುವಳ್ಳಿ' ಎಂಬುದು ಪ್ರಾಚೀನ ಉಲ್ಲೇಖವಾಗಿದೆ. ಆನಂತರದ ಶಾಸನಗಳಲ್ಲಿ, ಭಾನುವಳಿ, ಭಾನುಪುರವೆಂದು ಕರೆಯಲ್ಪಟ್ಟಿದೆ. 'ಭಾನು' ಎಂಬುದು ಸೂರ್ಯನ ಹೆಸರನ್ನು ನಿರ್ದೇಶಿಸುತ್ತದೆ. ಪ್ರಸ್ತುತ ಭಾನುವಳ್ಳಿಯಲ್ಲಿ ಮಲ್ಲಿಕಾರ್ಜುನ ದೇವಾಲಯವು ಇದೆ. ಇತ್ತೀಚೆಗೆ ಕಾಂಕ್ರೀಟನಿಂದ ನವೀನ ಶೈಲಿ ದೇವಾಲಯವಾಗಿ ನಿರ್ಮಾಣಗೊಂಡಿದೆ.

ದೇವಾಲಯವು ಗರ್ಭಗೃಹ, ಅರ್ಧಮಂಟಪ, ರಂಗಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಮಲ್ಲಿಕಾರ್ಜುನನು ಶಿವಲಿಂಗ ರೂಪದಲ್ಲಿ ಪೂಜೆಗೊಳ್ಳುತ್ತಿದ್ದಾನೆ. ಗರ್ಭಗೃಹದ ದ್ವಾರಬಾಗಿಲಿನ ಹೊರ ಅರ್ಧಮಂಟಪದಲ್ಲಿ, ಎಡಭಾಗದಲ್ಲಿ ಗಣೇಶ ಮತ್ತು ಬಲಭಾಗದಲ್ಲಿ ದುರ್ಗಾದೇವಿಯ ವಿಗ್ರಹಗಳಿವೆ. ಶಿವಲಿಂಗದ ಬುಡದಲ್ಲಿರುವ ಕಪ್ಪು ಸಾಲಿಗ್ರಾಮವೇ ವಿಷ್ಣುವಾಗಿ ಪೂಜೆಗೊಳ್ಳುತ್ತಿದ್ದಾನೆ. ಹೊರಭಾಗದ ಮಂಟಪವನ್ನು ಮೂರು ಕಡೆಗಳಲ್ಲಿ ಕಬ್ಬಿಣದ ತಳಿ Grill ನಿಂದ ನಿರ್ಮಿಸಿದೆ. ಮುಂಭಾಗದ ಬಲಕ್ಕೆ ಪ್ರವೇಶ



ಮಲ್ಲಿಕಾರ್ಜುನ ದೇವಾಲಯದ ಶಿವಲಿಂಗ ಮತ್ತು ಬಸವ



ಭಾನುವಳ್ಳಿಯ ಮಲ್ಲಿಕಾರ್ಜುನ ದೇವಾಲಯ

ದ್ವಾರವಿದೆ. ಈ ಮಂಟಪದಲ್ಲಿ, ಮಲ್ಲಿಕಾರ್ಜುನ ಲಿಂಗಕ್ಕೆ ಅಭಿಮುಖವಾಗಿರುವ ಚಿಕ್ಕ ಗೂಡಿನಲ್ಲಿ ಸೂರ್ಯನ ವಿಗ್ರಹವಿದೆ. ಶಿವಲಿಂಗವನ್ನು ಹೊರತುಪಡಿಸಿ ಉಳಿದ ವಿಗ್ರಹಗಳು ಹಾಗೆಯೇ ಪಾಣಿಪೀಠದ ಮೇಲೆ ಇಡಲಾಗಿದೆ. ಈ ದೇವಾಲಯದಲ್ಲಿರುವ ಸೂರ್ಯಶಿಲ್ಪವು ಹೊಯ್ಸಳರ ಕಾಲದ್ದಾಗಿದ್ದಲ್ಲದೆ, ಅತ್ಯಂತ ಸುಂದರ ಶಿಲ್ಪವೂ ಆಗಿದೆ. ಉಳಿದ ಶಿಲ್ಪಗಳಾದ ಗಣೇಶ, ದುರ್ಗಾ ಶಿಲ್ಪಗಳು ಸಮಕಾಲೀನವುಗಳಾಗಿದ್ದರೂ ಅಲಂಕೃತ ಶಿಲ್ಪಗಳಾಗಿಲ್ಲ, ಈ ಹಿನ್ನೆಲೆಯಲ್ಲಿ ಭಾನುಪುರ, ಭಾನುವಳ್ಳಿ ಎಂಬ ಪ್ರಾಚೀನ ಶಾಸನೋಕ್ತ ಸ್ಥಳನಾಮವು ಹಾಗೂ ಅಪೂರ್ವ ಸೂರ್ಯಶಿಲ್ಪವನ್ನು ಗಮನಿಸಿದಾಗ ಸೂರ್ಯನೇ ಇಲ್ಲಿಯ ಪ್ರಮುಖ

* ನಂ. ೫೬, 'ತ್ರಯೀ' ಮೈಸೂರ್ ಲ್ಯಾಂಪ್ಸ್ ಲೇಔಟ್, ಚನ್ನನಾಯಕನಪಾಳ್ಯ, ೨ನೇ ಹಂತ, ಬೆಂ. ೭೩



**ಭಾನುವಳ್ಳಿಯ ಗಣಪತಿ ಶಿಲ್ಪ ಮತ್ತು ದುರ್ಗಾ ಶಿಲ್ಪ**

ದೇವತೆಯಾಗಿರಬೇಕು. ಕಾಲಾಂತರದಲ್ಲಿ ಸೂರ್ಯನ ಬದಲಾಗಿ ಈಶ್ವರನಿಗೆ ಸ್ಥಾನ ಕಲ್ಪಿಸಲಾಗಿದೆ. ಚಿಕ್ಕಮಗಳೂರು ಜಿಲ್ಲೆಯ ೨೨ ಶಾಸನಗಳಲ್ಲಿ ಮಲ್ಲಿಕಾರ್ಜುನನ ಉಲ್ಲೇಖವಿದೆ ಆದರೆ ಕ್ರಿ.ಶ. ೧೪೦೭ರ ಕೊಪ್ಪಾ ಶಾಸನದಲ್ಲಿ ಮಾತ್ರ 'ಭಾನುಪುರದ ಮಲ್ಲಿಕಾರ್ಜುನ' ಎಂದು ಸ್ಪಷ್ಟವಾಗಿ ಉಲ್ಲೇಖಿಸುತ್ತದೆ. ಈ ಸಮಯಕ್ಕಾಗಲೇ ಈ ಬದಲಾವಣೆಯನ್ನು ಕಾಣಬಹುದು. ಶಂಕರಾಚಾರ್ಯರಿಂದ ಆರಂಭವಾದ ಪಂಚಾಯತನ ಪೂಜಾಪದ್ಧತಿಗೆ ಅನುಸಾರವಾಗಿ ಗಣೇಶ, ದುರ್ಗಾ, ವಿಷ್ಣು, ಶಿವ, ಸೂರ್ಯನನ್ನು ಒಂದು ಕಡೆ ಸಂಯೋಜಿಸುವ ಪ್ರಯತ್ನವಾಗಿದೆ. ಪ್ರಾಚೀನ ದೇವಾಲಯದ ಅವಶೇಷಗಳೂ, ತ್ರುಟಿತ ಶಿಲಾಶಾಸನವೂ ಪ್ರಸ್ತುತ ದೇವಾಲಯದ ಹೊರಭಾಗದಲ್ಲಿ ಬಿಟ್ಟಿರುವುದು ಕಂಡುಬರುತ್ತದೆ.

**ಸೂರ್ಯಾರಾಧನೆ :** ಸೂರ್ಯಾರಾಧನೆಯು ಪ್ರಾಚೀನವಾದುದು. ಮತ್ತು ಸೂರ್ಯಾರಾಧನೆಯು ಜಗತ್ತಿನಲ್ಲೆಲ್ಲಾ ಹರಡಿತ್ತೆಂದು ಅಧ್ಯಯನದಿಂದ ತಿಳಿಯುತ್ತದೆ. ಋಗ್ವೇದದಲ್ಲಿಯೇ ಸೂರ್ಯನ ಬಗ್ಗೆ ಉಲ್ಲೇಖವಿದೆ. 'ಆಪ್ರಾದ್ಯಾವ್ಯಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತುಸ್ಥಷಶ್ಚ' । ಎಂದು. ವಿಶ್ವದ ಚರಾ ಚರಗಳಿಗೆ ಸೂರ್ಯನೇ ಆತ್ಮ ಎಂದು ತಿಳಿಯುತ್ತದೆ. ಪ್ರಾಚೀನ ಭಾರತದಲ್ಲಿ 'ಆದಿತ್ಯಗೃಹ' ಗಳಿದ್ದವೆಂದೂ ಮತ್ತು ಸೌರಪಂಥವು ಪ್ರಬಲವಾಗಿತ್ತೆಂಬುದನ್ನು ವಿದ್ವಾಂಸರು ಗಮನಿಸಿದ್ದಾರೆ. ಇದಕ್ಕೆ ಕೋನಾರ್ಕಿನ ಸೂರ್ಯಮಂದಿರವೇ ಸಾಕ್ಷಿ. ವೇದ, ಬ್ರಾಹ್ಮಣಗಳಲ್ಲಿ, ಪುರಾಣಗಳಲ್ಲಿ ಸೂರ್ಯ ಅಥವಾ ಆದಿತ್ಯನೆಂದು ಕರೆಯಲಾಗಿದೆ. ಶತಪಥ ಬ್ರಾಹ್ಮಣದಲ್ಲಿ ದ್ವಾದಶ ಆದಿತ್ಯರನ್ನು ಹೇಳಿದೆ. ಇವರಿಗೆ ಇವತ್ತಿಗೂ ಪೂಜೆ ಸಲ್ಲುತ್ತದೆ. ಅದರಲ್ಲಿಯೂ ವಿಷ್ಣುವಿಗೆ ವಿಶೇಷ ಸ್ಥಾನವಿದೆ.

ಭಾರತದಲ್ಲಿ ಕುಶಾನರು ಅಥವಾ ಶಕರು (ಸಿಥಿಯನ್ನರು) ಇವರ ಆಳ್ವಿಕೆಯ ಕಾಲದಲ್ಲಿ 'ಮಾಗಿ' ಎಂಬ ಗುಡ್ಡಗಾಡು ಜನರು ಅಥವಾ ಸಿಥಿಯ ಬ್ರಾಹ್ಮಣರು ಮೊದಲು ಸೂರ್ಯೋಪಾಸಕರಾಗಿದ್ದರು ಮತ್ತು ಸೂರ್ಯ ಪ್ರತಿಮಾ ಶಿಲ್ಪದ ಕಾರಣಕರ್ತರೂ ಇವರೆಂದು ವಿದ್ವಾಂಸರಾದ ಶ್ರೀ ನಾಗೇಂದ್ರನಾಥ ವಾಸು ಮತ್ತು ಡಾ. ಹಜ್ರಾರವರು ಅಭಿಪ್ರಾಯಪಟ್ಟಿದ್ದಾರೆ.

**ಶಿಲ್ಪಗ್ರಂಥಗಳಲ್ಲಿ ಸೂರ್ಯ :** ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ಸೂರ್ಯ ಅಥವಾ ಆದಿತ್ಯನನ್ನು ವೈವಿಧ್ಯತೆಯಿಂದ ವಿವರಿಸಲಾಗಿದೆ. ವಿಶ್ವಕರ್ಮಶಿಲ್ಪ ಶಾಸ್ತ್ರ ಧ್ಯಾನ ಶ್ಲೋಕದ ಪ್ರಕಾರ, ರವಿಯ ಮಹಾರಥವು ಒಂದೇ ಚಕ್ರವನ್ನು ಹೊಂದಿದ್ದು ಏಳು ಕುದುರೆಗಳಿಂದ ಎಳೆಯಲ್ಪಡುತ್ತಿರುತ್ತದೆ. ಎರಡು ತೋಳುಗಳು ಹಾಗೂ ಎರಡು ಹಸ್ತಗಳಲ್ಲಿ ತಾವರೆಗಳನ್ನು ಹಿಡಿದಿರುತ್ತಾನೆ. ವಕ್ಷ ಪ್ರದೇಶದಲ್ಲಿ ಕವಚವನ್ನು ಧರಿಸಿರುತ್ತಾನೆ. ಸುಂದರವಾಗಿರುವ ನೇರವಾಗಿರುವ ಕೇಶರಾಶಿ ಇರುತ್ತದೆ. ಅದರ ಸುತ್ತಲೂ ಪ್ರಭಾಮಂಡಲವಿರುತ್ತದೆ. ಸುಂದರವಾದ ವಸ್ತ್ರಗಳನ್ನು ಧರಿಸಿರುತ್ತಾನೆ. ಆತನು ಧರಿಸಿರುವ ಆಭರಣಗಳು ಪ್ರಕಾಶಿಸುತ್ತಿರುತ್ತದೆ.

ರವಿಯ ಬಲಕ್ಕೆ ಸಂಜ್ಞಾ (ನಿಕ್ಷುಭಾ) ಮತ್ತು ಎಡಗಡೆಗೆ ಛಾಯಾ (ರಾಜ್ಞೀ) ಇರುತ್ತಾರೆ. ರಥದ ಹೆಸರು ಮಕರ ಧ್ವಜ ಪವಿಯು ಕಿರೀಟದಾರಿಯಾಗಿರುತ್ತಾನೆ. ಯಮನು ಮತ್ತು ಸ್ಕಂದರಿರುತ್ತಾರೆ. ಸ್ಕಂದನ ಕೈಯಲ್ಲಿ ಶಂಖವಿರುತ್ತದೆ. ಇವರಿಬ್ಬರೂ ಮುಂದಿರುತ್ತಾರೆ. ತಾವರೆಯ ಮೇಲಿದ್ದು ವಾರ್ಚಾ ಎಂಬ ಕುದುರೆಯ ಮೇಲೆ ಕುಳಿತಿರುತ್ತಾನೆ. ಅವನ ಮೈ ಬಹು ಕಾಂತಿಯುತವಾಗಿರುತ್ತದೆ. ಏಕೆಂದರೆ ಆತನೇ ಸಕಲ ಲೋಕಗಳಿಗೂ ಬೆಳಕನ್ನು ನೀಡುವವನು. ಸೂರ್ಯ ಮಂಡಲವಿರಬೇಕು. ರವಿಯು ನಾಲ್ಕು ಅಥವಾ ಎರಡು ತೋಳುಗಳನ್ನು ಹೊಂದಿರಬೇಕು. ಎರಡು ಹಸ್ತಗಳಲ್ಲಿ ತಾವರೆಯನ್ನು ಹಿಡಿದಿರಬೇಕು. ದ್ವಾರಪಾಲಕರಾದ ದಂಡ, ಪಿಂಗಳರು ತಮ್ಮ ಕೈಯಲ್ಲಿ ಕತ್ತಿಯನ್ನು ಹಿಡಿದಿರಬೇಕೆಂದು ತಿಳಿಸಿದೆ. (ಬ್ರಾಹ್ಮಿ ಚಿತ್ರಕರ್ಮಶಾಸ್ತ್ರಂ)

ಮತ್ಸ್ಯ ಪುರಾಣದಲ್ಲಿ ತಿಳಿಸಿದಂತೆ, ಸೂರ್ಯನಿಗೆ ನಾಲ್ಕು ಕೈಗಳಿರಬೇಕು. ವಸ್ತ್ರಾಲಂಕಾರದಿಂದ ಕೂಡಿರಬೇಕು. ಎಲ್ಲಾ ಆಭರಣಗಳನ್ನು ಧರಿಸಿರಬೇಕು. ಎಡ ಬಲ ಹಸ್ತಗಳಲ್ಲಿ ಸೂರ್ಯ ರಶ್ಮಿಯನ್ನು ಹಿಡಿದಿರಬೇಕು. ಅಧ್ಯಂಗ ಮತ್ತು ಅವ್ಯಂಗ ಎಂದು ಹೇಳುವ ವಡ್ಯಾಣ ಧರಿಸಿರಬೇಕು. ಕಾಲು ಸರಗಳು, ತೋಳ್ಬಂದಿ, ಕಡಗ ಹಾಗೂ ನಾನಾ ರೀತಿಯ ಹಾರಗಳನ್ನು ಹೊಂದಿರಬೇಕು. ಸೂರ್ಯನ ಎರಡೂ ಹಸ್ತವು ದಂಡ ಪಿಂಗಳರ ತಲೆಯ ಮೇಲಿರಬೇಕು. ಪಿಂಗಳನ ಹಸ್ತದಲ್ಲಿ

ತಾಳೆ ಎಲೆ ಲೇಖನಿ (ಕಂಠ) ಇರಬೇಕು. ತಲೆಯ ಮೇಲೆ ಕೈ ಇಲ್ಲದಿದ್ದರೆ ಗುರಾಣಿ ಮತ್ತು ಶೂಲವಿರಬೇಕು. ಸೂರ್ಯನ ಮಕ್ಕಳಾದ ರೇವಂತ, ಯಮ ಹಾಗೂ ಇಬ್ಬರು ಮನುಗಳು ಸೂರ್ಯನ ಎರಡೂ ಪಾರ್ಶ್ವದಲ್ಲಿರಬೇಕು ಎಂಬುದಾಗಿ ತಿಳಿಸುತ್ತದೆ. (ಬ್ರಾಹ್ಮಿಚಿತ್ರ ಕರ್ಮಶಾಸ್ತ್ರಂ)

ಹರ್ಷ ಸಂಹಿತೆಯ ಪ್ರಕಾರ, ಎರಡು ತೋಳುಗಳ ಆದಿತ್ಯನು ಯೌವನದಲ್ಲಿದ್ದು ಸಕಲ ಸಲ್ಲಕ್ಷಣಗಳನ್ನು ಹೊಂದಿರುತ್ತಾನೆ. ಶಂಖದಂತಹ ಕೊರಳು, ವಿಶಾಲವಾದ ವಕ್ಷಸ್ಥಲ, ಸರ್ವಶುಭ ಅಲಂಕಾರಗಳನ್ನು ಧರಿಸಿರುತ್ತಾನೆ. ಎರಡು ಕಣ್ಣುಗಳಿರುವ ಈ ದೇವತೆಯು ಸಕಲಾಭರಣ ಭೂಷಿತನಾಗಿರುತ್ತಾನೆ. ಪದ್ಮದ ಮೇಲೆ ನಿಂತಿರುವ ಇವನ ಪಾದಗಳು ಕಾಣಿಸುವುದಿಲ್ಲ. ರಥದಲ್ಲಿ ನಿಂತಿರಬೇಕು. ರಥಕ್ಕೆ ಅರುಣನು ಸಾರಥಿಯಾಗಿರುತ್ತಾನೆ. ಅದಕ್ಕೆ ಒಂದೇ ಚಕ್ರವಿದ್ದು, ಏಳು ಕುದುರೆಗಳು ಇರುತ್ತದೆ. ದಂಡ ಮತ್ತು ಪಿಂಗಳ ಸೇವಕರು ಹಿಂಬದಿಯಲ್ಲಿ ನಿಂತಿರುತ್ತಾರೆ. ಸ್ಕಂದನು ಖಡ್ಗ ಮತ್ತು ಗುರಾಣಿಯನ್ನು ಹಿಡಿದು ರಥದ ದಂಡನಾಯಕನಾಗಿ ನಿಂತಿರುತ್ತಾನೆ. ಈತನ ಪಕ್ಕದಲ್ಲಿ ಪಿಂಗಳನು ಲೇಖನಿ ಮತ್ತು ತಾಳೆಗರಿ ಹಿಡಿದು ನಿಂತಿರುತ್ತಾನೆ. ಸಂಜ್ಞಾದೇವಿಯು ತನ್ನ ಮಕ್ಕಳೊಂದಿಗೆ ನಿಂತಿರುತ್ತಾಳೆ. ಆಕೆಯು ಬಾಣದೊಂದಿಗೆ ಕಾರ್ಮುಖ ಎಂಬ ಧನುಸ್ಸನ್ನು ಹಿಡಿದಿರುತ್ತಾಳೆ. ಛಾಯಾದೇವಿಯೂ ಹಾಗೆಯೇ ಎಡ ಪಾರ್ಶ್ವದಲ್ಲಿರುತ್ತಾಳೆ. ಈತನು ಸಕಲ ರೋಗ ನಿವಾರಕನು ಈ ಮೂರ್ತಿಯ ವಿಗ್ರಹವನ್ನಾಗಲೀ, ಚಿತ್ರವನ್ನಾಗಲೀ ರೂಪಿಸಬಹುದು. ಈತನ ವಕ್ಷಸ್ಥಲವು ಕವಚದಿಂದ ರಕ್ಷಿತವಾಗಿರಬೇಕೆಂದು ತಿಳಿಸುತ್ತದೆ. (ಬ್ರಾಹ್ಮೀ ಚಿತ್ರಕರ್ಮ ಶಾಸ್ತ್ರಂ) ಸೂರ್ಯನ ಲಕ್ಷಣಗಳನ್ನು ಹೀಗೆಯೇ ಪಾದ್ಮಸಂಹಿತೆ, ಸನತ್ಕುಮಾರ ಸಂಹಿತೆ, ನಾರದೀಯ ಸಂಹಿತೆ, ಬೃಹತ್ ಸಂಹಿತೆ, ಸುಪ್ರಭೇದಾಗಮ ಶಿಲ್ಪರತ್ನ ಮುಂತಾದ ಶಿಲ್ಪಗ್ರಂಥಗಳು, ತಮ್ಮ ಧ್ಯಾನಶ್ಲೋಕಗಳಲ್ಲಿ ವಿವಿಧ ಪಾಠಭೇದಗಳಿಂದ ತಿಳಿಸಿದರು. ಹೆಚ್ಚಿನ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ.

**ಭಾನುವಳ್ಳಿಯ ಸೂರ್ಯಶಿಲ್ಪ :** ಭಾನುವಳ್ಳಿಯ ಶಿಲ್ಪವು ಪೀಠದ ಮೇಲೆ ಎರಡು ಅಡಿ ಏಳು ಇಂಚು ಎತ್ತರವಾಗಿದೆ. ಪಾಣಿಪೀಠವು ಹದಿನಾರು ಇಂಚು ಉದ್ದ, ನಾಲ್ಕು ಇಂಚು ದಪ್ಪವಾಗಿದೆ. ಪೀಠವು ಸಾರಥಿ ಅರುಣ ಹಾಗೂ ಸಪ್ತಾಶ್ವಗಳನ್ನು ಹೊಂದಿದೆ.

ಶಿಲ್ಪವು ಹೊಯ್ಸಳರ ಕಾಲದ್ದಾಗಿದ್ದು, ಬಹುತೇಕ ಹೊಯ್ಸಳ ಎರಡನೇ ಬಲ್ಲಾಳನ (ಕ್ರಿ.ಶ. ೧೧೭೩–೧೨೨೦) ಕಾಲದ್ದಾಗಿದೆ ಎನ್ನಬಹುದು. ಕಾರಣ ಆ ಕಾಲದ ೮೮ ಶಾಸನಗಳು ಈ ಜಿಲ್ಲೆಯಲ್ಲಿದ್ದು, ಆ ಕಾಲದ ಧಾರ್ಮಿಕ



ಭಾನುವಳ್ಳಿಯ ಸೂರ್ಯಶಿಲ್ಪ

ಚಟುವಟಿಕೆ ಮತ್ತು ದೇವಾಲಯ ನಿರ್ಮಾಣ, ದಾನ, ದತ್ತಿ ಮುಂತಾದ ಕಾರ್ಯಗಳ ಹಿನ್ನೆಲೆಯಿಂದ ಮತ್ತು ಶಿಲ್ಪಶೈಲಿ ದೃಷ್ಟಿಯಿಂದಲೂ ಗಮನಿಸಿ ಶಿಲ್ಪದ ಕಾಲ ಸುಮಾರು ಕ್ರಿ.ಶ. ೧೨೦೦ ಎಂದು ಅಂದಾಜು ಮಾಡಿದೆ.

ಸೂರ್ಯನು ಸ್ಥಾನಿಕ ಭಂಗಿಯಲ್ಲಿ ಕಮಲ ಹೂವಿನ ದಳದ ಮೇಲೆ ನಿಂತಿದ್ದಾನೆ. ಪಾಣಿಪೀಠದ ಜಲನಾಳವು ವಿಗ್ರಹದ ಬಲಭಾಗಕ್ಕಿದೆ. ಸೂರ್ಯನ ಪಾದಗಳಲ್ಲಿ ಪಾದಜಾಲಕ ಹಾಗೂ ಗೆಜ್ಜೆಯನ್ನು ಧರಿಸಿದ್ದಾನಲ್ಲದೆ ಅಲಂಕೃತವಾದ ವಸ್ತ್ರ ಧರಿಸಿದ್ದಾನೆ ವಡ್ಯಾಣ, ಮೇಖಲಾ, ಕಟಿಬಂಧ, ಉದರಬಂಧ ಹಾಗೂ ಯಜ್ಞೋಪವೀತ ದೊಂದಿಗೆ ವೈಜಯಂತಿಯನ್ನೂ ಧರಿಸಿದ್ದಾನೆ. ಎಲ್ಲಾ ಆಭರಣ ಗಳೂ ಸೂಕ್ಷ್ಮ ಕೆತ್ತನೆಯಿಂದ ಕೂಡಿ ಸರ್ವಾಲಂಕಾರ ಭೂಷಿತನಾಗಿದ್ದಾನೆ. ಕೊರಳಲ್ಲಿ ಕಂಠೀಹಾರ, ರುದ್ರಾಕ್ಷಿಹಾರ, ಮಣಿಹಾರವೂ ಇದೆ. ಭುಜದಲ್ಲಿ ಸ್ಕಂದಮಾಲೆ, ಭುಜಕ್ಕೆ ಸಮನಾಗಿ ಎರಡೂ ಕೈಗಳಲ್ಲಿ ಕಮಲದ ಹೂಗಳನ್ನು ಹಿಡಿದಿದ್ದಾನೆ. ತನ್ನೆರಡೂ ಕೈಗಳಲ್ಲಿ ನಾಲ್ಕು ಹೂಗಳಂತೆ ಬಿಗಿ ಮುಷ್ಟಿಯಲ್ಲಿ ಹಿಡಿದಿದ್ದಾನೆ. ಒಂದೊಂದು ಕೈಯಲ್ಲಿನ



ಸೂರ್ಯಶಿಲ್ಪದ ಹಸ್ತದ ಕಮಲಗಳು

ಹೂಗಳಲ್ಲಿ ಮೂರು ಹೂ ಅರಳಿದಂತೆಯೂ ಒಂದು ಮೊಗ್ಗಿನಂತೆ ಕೆತ್ತಲಾಗಿದೆ. ಇದನ್ನು ಸೂಚಿಸಲು ಎಲ್ಲಾ ದಂಟುಗಳನ್ನೂ ಬಿಡಿ ಬಿಡಿಯಾಗಿಯೇ ಸೂಕ್ಷ್ಮವಾಗಿ ಕಡ್ಡಿಯಾಕಾರದಲ್ಲಿ ಚೆನ್ನಾಗಿ ಕೆತ್ತಲ್ಪಟ್ಟಿದೆ. ದಂಟಿನ ಕೆತ್ತನೆ ಮುಷ್ಟಿಯ ಕೆಳಭಾಗದಲ್ಲೂ ಮುಂದುವರಿದು ಅವುಗಳನ್ನೆಲ್ಲಾ ಸೇರಿಸಿ ಕುಂಡದಾಕಾರದಲ್ಲಿ ಸಂಯೋಜಿಸಿದೆ. ಹೂವಿನ ಈ ರಚನೆ ಶಿಲ್ಪದ ವಿಶೇಷವಾಗಿದೆ.

ಹೊಯ್ಸಳರ ಕಾಲದ ಸೂರ್ಯಶಿಲ್ಪವನ್ನು ಗಮನಿಸಿದಾಗ (ಬೇಲೂರು, ಹಳೇಬೀಡು, ನುಗ್ಗೇಹಳ್ಳಿ ಮುಂತಾದವು) ಸಾಮಾನ್ಯವಾಗಿ ಕೈಯಲ್ಲಿ ಕಮಲದ ಮೊಗ್ಗು, ಅರಳಿದ ಕಮಲ ಅಥವಾ ಸ್ವಲ್ಪ ಅರಳಿದ ಕಮಲದಂತೆ, ಯಾವುದಾದರೊಂದು ರೀತಿ ಕೆತ್ತಲ್ಪಟ್ಟಿರುತ್ತದೆ. ಹಿಡಿದಿರುವ ಕೈಯೂ ಕೂಡ ಜ್ಞಾನಮುದ್ರೆ ರೀತಿಯಲ್ಲಿರುತ್ತದೆ. ಹಾಗೂ ಕೈಯಲ್ಲಿ ಒಂದೇ ದಂಟಿನಂತಿದ್ದು, ಕೈಹಿಡಿತದ ಕೆಳಭಾಗದಲ್ಲಿ ಅಲಂಕಾರ ಸುಳಿ ಚಿತ್ರದಿಂದ ಕೂಡಿರುತ್ತದೆ.

ಆದರೆ ಈ ಶಿಲ್ಪದಲ್ಲಿ ವಿಶೇಷವೆಂದರೆ ಕಮಲಗಳೂ ನಾಲ್ಕು ಇದ್ದುದಲ್ಲದೆ ಬಿಡಿ ಬಿಡಿಯಾದ ದಂಟನ್ನೂ ಹೊಂದಿವೆ. ಇವು ಕೈಯ ಬಿಗಿ ಮುಷ್ಟಿಯಲ್ಲಿವೆ. ದಂಟುಗಳನ್ನು ಸ್ಪರ್ಶಿಸಬಹುದಾಗಿದೆ. ಇದು ಶಿಲ್ಪಿಯ ಚಾಣಾಕ್ಷತೆಯನ್ನು ತೋರಿಸುತ್ತದೆ. ಸೂರ್ಯನ ಶಿರದಲ್ಲಿ ಕರಂಡ ಮುಕುಟ ಕಿರೀಟ, ಕಿವಿಯಲ್ಲಿ ಕರ್ಣಕುಂಡಲಗಳನ್ನೂ ಸೂಕ್ಷ್ಮವಾಗಿ ಕೆತ್ತಲಾಗಿದೆ. ತಲೆಯ ಹಿಂಭಾಗದಲ್ಲಿ ಕಿರೀಟ ಹಾಗೂ ಬೆನ್ನನ್ನು ಆವರಿಸಿಕೊಂಡು ಪ್ರಭಾವಲಯವಿದೆ. ಅದರಲ್ಲಿನ ಕಿರಣಗಳನ್ನು ಜ್ವಾಲೆಯಂತೆ ತೋರಿಸಲಾಗಿದೆ. ತಲೆಕೂದಲು ಭುಜದ ವರೆಗಿದೆ.

ಸೂರ್ಯನ ಕಾಲಿನ ಎಡಬಲದಲ್ಲಿ ದಂಡ ಪಿಂಗಳರನ್ನು ಉಬ್ಬು ಕೆತ್ತನೆಯಲ್ಲಿ ಕೆತ್ತಲಾಗಿದೆ. ದಂಡನ ಎಡಕೈಯಲ್ಲಿ ಮಸಿ ಕುಡಿಕೆ, ಬಲಕೈಯಲ್ಲಿ ಲೇಖನಿ ಇದೆ. ಹಾಗೆಯೇ ಪಿಂಗಳನ ಕೈಯಲ್ಲಿ ಇದು ವಿರುದ್ಧ ದಿಕ್ಕಿನಲ್ಲಿದೆ. ಈ ಎರಡು ಶಿಲ್ಪಗಳನ್ನು ಸಂಯೋಜಿಸಿಕೊಂಡು ಪ್ರಭಾವಳಿಯನ್ನು ಕೆತ್ತಲಾಗಿದೆ. ಪ್ರಭಾವಳಿಯಲ್ಲಿ ಕ್ರಮವಾಗಿ ಸೂರ್ಯನ ಬಲಭಾಗದಿಂದ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಅವುಗಳು ದಂಡ, ಸಂಜ್ಞಾ, ಶಂಖವಾದಕ, ನರ್ತಕಿ, ನಂತರ ಕೀರ್ತಿಮುಖವಿದೆ. ನಂತರ ಎಡಭಾಗದಲ್ಲಿ ನರ್ತಕಿ, ವೇಣುವಾದಕ, ವೀರನೃತ್ಯಗಾರ, ಡಮರು ನುಡಿಸುವವನು, ನಂತರ ಛಾಯಾ ಮತ್ತು ಪಿಂಗಳರ ಶಿಲ್ಪಗಳಿವೆ. ಸಂಜ್ಞಾ ಮತ್ತು ಛಾಯಾ ಉಬ್ಬುಶಿಲ್ಪಗಳಲ್ಲಿ ಬಾಣದೊಂದಿಗೆ ಕಾರ್ಮುಕ ಎಂಬ ಬಿಲ್ಲನ್ನು ಹಿಡಿದಿರುವಂತೆ ಕೆತ್ತಲಾಗಿದ್ದು ವಿಮುಖ ದಿಕ್ಕನ್ನು ಅನುಸರಿಸಿವೆ. ಪ್ರಭಾವಳಿಯಲ್ಲಿನ ಶಿಲ್ಪಗಳನ್ನು ಅರ್ಧ ವೃತ್ತಾಕಾರದ ಸ್ಥಳದಲ್ಲಿ ಕೆತ್ತಲಾಗಿದೆ. ಇದರಿಂದ ಪ್ರಭಾವಳಿಯ ವಿಶೇಷವಾದ ಅಲಂಕಾರವೂ ಹೆಚ್ಚಿದೆ. ಇದೂ ಈ ಶಿಲ್ಪದ ವಿಶೇಷವೇ ಆಗಿದೆ. ಹಾಗೂ ಶಿಲ್ಪಿಯ ಚಾಣಾಕ್ಷತನವನ್ನು ಎತ್ತಿಹಿಡಿದಿದೆ.

ಹೊಯ್ಸಳರ ಕಾಲದ ಸೂರ್ಯಶಿಲ್ಪ ಪ್ರಭಾವಳಿಯಲ್ಲಿ ಸಾಮಾನ್ಯವಾಗಿ ಹೂಬಳ್ಳಿ, ಸುಳಿಗಳಿಂದಲೇ ಹೆಚ್ಚಿನ ಅಲಂಕಾರ ಗೊಂಡಿರುತ್ತದೆ. ಇದಕ್ಕೆ ಅಪವಾದ ನುಗ್ಗೇಹಳ್ಳಿ ಸೂರ್ಯಶಿಲ್ಪ, ಈ ಶಿಲ್ಪದ ಎಡ ಬಲಕ್ಕೆ ಒಂದರ ಮೇಲೊಂದರಂತೆ ಗುಂಪಾಗಿ ಶಿಲ್ಪಗಳನ್ನು ಕೆತ್ತಲಾಗಿದೆ. ಆದರೆ ಪ್ರಭಾವಳಿಯಲ್ಲಿಲ್ಲ, ಶಿಲ್ಪ ಸುಂದರವಾಗಿದ್ದರೂ ಎಲ್ಲವನ್ನೂ ಒಂದೆಡೆಗೆ ತರುವ ಪ್ರಯತ್ನವೆನಿಸುತ್ತದೆ. ಭಾನುವಳ್ಳಿಯ ಸೂರ್ಯಶಿಲ್ಪದಲ್ಲಿ ಪ್ರಭಾವಳಿಯಲ್ಲಿಯೇ ಕೆತ್ತಲಾಗಿದ್ದು, ಮೂಲಶಿಲ್ಪ ಮತ್ತು ಪ್ರಭಾವಳಿಯ ನಡುವೆ ಅಂತರವಿರುವುದರಿಂದ ಶಿಲ್ಪಸೌಂದರ್ಯ ಹೆಚ್ಚಿದೆ.

ನಾಲ್ಕು ಕಮಲಗಳನ್ನು ಹಿಡಿದಿರುವುದಕ್ಕೆ ಅಪವಾದವೆಂಬಂತೆ Victoria & Albert Museum, London. ಇಲ್ಲಿರುವ ಹೊಯ್ಸಳಶಿಲ್ಪ (ಕ್ರಿ.ಶ. ೧೩ನೇ ಶತಮಾನ) ಅದ್ಭುತವಾದುದಾಗಿದೆ. ಶಿಲ್ಪವು ಎರಡೂ ಕೈಗಳಲ್ಲಿ

ನಾಲ್ಕರಂತೆ ಕಮಲಗಳನ್ನು ಹಿಡಿದಿದ್ದರೂ ಬಿಡಿ ಬಿಡಿಯಾದ ದಂಟು ತೋರಿಸಿಲ್ಲ. ಹಾಗೆಯೇ ಪ್ರಭಾವಳಿಯಲ್ಲಿ ಬೇರಾವ ಉಬ್ಬುಶಿಲ್ಪಗಳಿಲ್ಲ. ಸುಳಿಬಳ್ಳಿಗಳಿಂದ ಅಲಂಕೃತವಾದ ಪ್ರಭಾವಳಿಯನ್ನು ಈ ಶಿಲ್ಪ ಹೊಂದಿದೆ.

ಭಾನುವಳ್ಳಿಯ ಸೂರ್ಯಶಿಲ್ಪವನ್ನು ಒಟ್ಟಾರೆಯಾಗಿ ಮೇಲೆ ತಿಳಿಸಿದ ಹಿನ್ನೆಲೆಯಿಂದ ಗಮನಿಸಿದಾಗ ಹೊಯ್ಸಳರ ಕಾಲದ ಸೂರ್ಯಶಿಲ್ಪದಲ್ಲಿಯೇ ಅಪೂರ್ವವಾದದ್ದಾಗಿದೆ ಎನ್ನಬಹುದು. ಅದನ್ನು ಈ ರೀತಿಯಲ್ಲಿ ಮುಖ್ಯವಾಗಿ ಗುರುತಿಸಬಹುದಾಗಿದೆ.

೧) ಪ್ರಮುಖವಾಗಿ ನಾಲ್ಕು ಕಮಲಗಳನ್ನು ಬಿಡಿ ಬಿಡಿಯಾದ ದಂಟಿನೊಂದಿಗೆ ಕೈಯ ಬಿಗಿಮುಷ್ಟಿಯಲ್ಲಿ ಹಿಡಿದಿರುವುದು ಹಾಗೂ ಎರಡೂ ಕೈಯ ಗುಚ್ಚಗಳೂ ಒಂದೇ ಅಳತೆಯನ್ನು ಅನುಸರಿಸಿರುವುದು.

೨) ಶಿಲ್ಪಶಾಸ್ತ್ರದ ಸೂರ್ಯಶಿಲ್ಪ ಲಕ್ಷಣಕ್ಕೆ ಸಂಪೂರ್ಣ ಹೊಂದಿಕೆಯಾಗಿರುವುದು.

೩) ದಂಡ, ಪಿಂಗಳ ಶಿಲ್ಪಗಳ ಮೇಲ್ಭಾಗದಲ್ಲಿ ಸಂಜ್ಞಾ, ಛಾಯಾರ ಶಿಲ್ಪವೂ ಸೇರಿದಂತೆ ಪ್ರಭಾವಳಿಯಲ್ಲಿ ನರ್ತಕ, ವಾದಕ ಮುಂತಾದ ಶಿಲ್ಪಗಳು ಇರುವುದು.

ಸೂರ್ಯಶಿಲ್ಪ ಮತ್ತು ಪ್ರಭಾವಳಿ ನಡುವೆ ಅಂತರವೇರ್ಪಡಿಸಿ ಶಿಲ್ಪದ ಒಟ್ಟೂ ಸೌಂದರ್ಯ ಹೆಚ್ಚಿದಂತಿದೆ.

(ಈ ಲೇಖನ ಸಿದ್ಧಪಡಿಸುವಲ್ಲಿ ಜಿ. ಜ್ಞಾನಾನಂದರ 'ಬ್ರಾಹ್ಮಿಯ ಚಿತ್ರಕರ್ಮಶಾಸ್ತ್ರಂ', ಎಂ. ಗೋಪೀನಾಥರಾವ್ ರವರ Elements of Hindu Iconography ಬಳಸಿಕೊಂಡಿದೆ. ಮತ್ತು Sun worship in Ancient India by Dr. Lalta prasad pandey.)

(**ಕೃತಜ್ಞತೆಗಳು** : ಸೂರ್ಯಶಿಲ್ಪ ಇರುವ ಬಗ್ಗೆ ಮಾಹಿತಿ ನೀಡಿದ ಆತ್ಮೀಯರಾದ ಡಾ. ಕೆ.ಎಸ್.ಎನ್. ಉಡುಪ ಸುಬ್ರಮಣ್ಯ ಇವರಿಗೆ. ಮಲ್ಲಿಕಾರ್ಜುನ ದೇವಾಲಯದ ಅರ್ಚಕರಾದ ಶ್ರೀ ರಾಮಚಂದ್ರಭಟ್ಟರು ಇವರಿಗೆ ಹಾಗೂ ಟಿ. ಶ್ರೀನಿವಾಸ್ ಗ್ರಾಫಿಕ್ ಡಿಸೈನರ್, ಜಿ.ಕೆ. ವಿಶ್ವಾಮಿತ್ರ ಇವರಿಗೆ.)

ಡಾ. ಎಸ್.ಕೆ. ಮೇಲಕಾರ*
ಪಿ.ಕೆ. ಕಾರಬಾರಿ**

# ನವಶೋಧಿತ ಕಾಳಭೈರವನ ಶಿಲ್ಪ (ಕ್ರಿ.ಶ. ೧೧-೧೨ನೇ ಶತಮಾನ)

ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನಲ್ಲಿ ಸ್ನೇಹಿತ ಸಂಶೋಧನಾ ವಿದ್ಯಾರ್ಥಿ ಶ್ರೀ ಪಿ.ಕೆ. ಕಾರಬಾರಿ ಇವರೊಂದಿಗೆ ನಾನು ಕ್ಷೇತ್ರ ಕಾರ್ಯ ಮಾಡುವಾಗ ತಾಲೂಕಿನ ಉಮ್ಮತ್ತೂರು ಗ್ರಾಮದಲ್ಲಿ ಶಾಸನವಿರುವ ಕಾಳಭೈರವನ ವಿಗ್ರಹ ಇರುವುದಾಗಿ ಸ್ಥಳೀಯ ಜನರಿಂದ ತಿಳಿದುಬಂದಿತು. ಆ ಪ್ರಕಾರ ಅಲ್ಲಿಗೆ ಹೋಗಿ ನೋಡಲಾಗಿ ಆಲದ ಮರದ ಕೆಳಗೆ ಗಿಡಕ್ಕೆ ಆನಿಸಿ ಇಟ್ಟಿರುವ ಶಿಲ್ಪವನ್ನು ಪರಿಶೀಲಿಸಲಾಗಿ, ಪೀಠದ ಮೇಲೆ ನಾಲ್ಕು ಸಾಲಿನ ಶಾಸನವಿರುವುದು ಪತ್ತೆಯಾಯಿತು. ಶಾಸನವನ್ನು ಪ್ರತಿ ಮಾಡಿಕೊಂಡು ಈ ಮೂರ್ತಿಯ ವೈಶಿಷ್ಟ್ಯತೆ ಕುರಿತು ಪ್ರಬಂಧದ ಮೂಲಕ ವಿದ್ವಾಂಸರ ಗಮನ ಸೆಳೆಯಲು ಮಾಡಿದ ಪ್ರಯತ್ನ ಇದಾಗಿದೆ.

**ಶಿಲ್ಪದ ವಿವರಣೆ :** ಕಪ್ಪು ಶಿಲೆಯಿಂದ ಮಾಡಲ್ಪಟ್ಟ ಕಾಳ ಭೈರವ ದ್ವಿಭಂಗಿಯಲ್ಲಿದ್ದು, ಇದಕ್ಕೆ ನಾಲ್ಕು ಕೈಗಳು ಇದ್ದು, ಶಿಲ್ಪದ ಬಲಕೈಗಳಲ್ಲಿ ಖಡ್ಗ, ತ್ರಿಶೂಲವಿದ್ದರೆ, ಎಡ ಕೈಗಳಲ್ಲಿ ಢಮರು, ಪಾನ ಪಾತ್ರೆಗಳಿವೆ. ಕೊರಳಲ್ಲಿ ರುಂಡಮಾಲೆ ಮತ್ತು ಕಂಠಹಾರ, ಕಿವಿಯಲ್ಲಿ ಕರ್ಣಕುಂಡಲ, ಕಟಿವಸ್ತ್ರ (ಬಂಧ), ಕೈಗಡಗ, ಕಾಲ್ಗಡಗ, ಪಾದರಕ್ಷೆ, ನಾಗಬಂಧ ಇತ್ಯಾದಿ ಆಭರಣಗಳನ್ನು ಧರಿಸಿರುವುದನ್ನು ಕಾಣಬಹುದು.

ಮೂರ್ತಿಯ ಇಕ್ಕೆಲಗಳಲ್ಲಿ ಪ್ರೇತಗಳು, ಎಡಭಾಗದಲ್ಲಿ ನಾಯಿಯೊಂದು ರುಂಡದಿಂದ ಬೀಳುತ್ತಿರುವ ನೆತ್ತರನ್ನು (ರಕ್ತ) ಕುಡಿಯಲು ಜಿಗಿಯುತ್ತಿದ್ದು, ಅದಕ್ಕೆ ಪ್ರೇತಗಳು ಅಡ್ಡಿಯನ್ನುಂಟು ಮಾಡುತ್ತಲಿವೆ. ಶಿಲ್ಪದ ಸುತ್ತಲೂ ಹೂಬಳ್ಳಿಯ ಅಲಂಕಾರವಿದ್ದು, ಮೇಲ್ಭಾಗದಲ್ಲಿ ಕೀರ್ತಿಮುಖ ಮುಂತಾದ ಅಲಂಕರಣೆಯನ್ನು ಕೆತ್ತಲಾಗಿದೆ.

**ಕಾಳಭೈರವನ ಮೂರ್ತಿಯ ಪೀಠದ ಮೇಲಿರುವ ಶಾಸನ ಪಾಠ**

೧ (ಮಾ)ಣೆಕ್ಯೆಂ ಮೆ (ರ)ರೊಳು ಕಲ್ಪವೃಕ್ಷದೊಳ್ . . . . . ಥಾನುದಯ



೨ . . .ಜನ ಬಸುನಿಳು ಪುಟಿದನು ಕಲ್ಲ ಶಿವ (ಕಲ್ಲೇಶ್ವರ)ರ ತು ಭತ್ತೂ (ರಿ)

೩ ದಿಸಿದ ಕ್ಷತಿಗಿ ಕ್ಷೇತ್ರಾಧಿಪತೀಜಗದೊಳಗೆ ಸಗುಂ ಶಾಸನ

೪ ಜಗಪ್ರತಿ ಭರವಿಥದಯುಗ್ ಭೈರವ ತಿಲಕಂ

ಎಂದು ಈ ಕಾಳಭೈರವನ ಶಿಲ್ಪವನ್ನು ಕುರಿತು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಶಾಸನದಲ್ಲಿ ಉಲ್ಲೇಖಿತನಾದ ಕಲ್ಲೇಶ್ವರ-ಕಾಳಾಮುಖ ಪ್ರತಿಷ್ಠಾಪನೆ ಮಾಡಿದಾತನಿರಬಹುದೇನೋ? ಆದರೂ ಮೂರ್ತಿಯ ನಾಟ್ಯಶೈಲಿ, ಖಡ್ಗ, ತ್ರಿಶೂಲ ಹಿಡಿದ ಶಾಕ್ತಿಕ, ರಾಜಸ, ತಾಮಸರೂಪದ ಕಾಳಭೈರವನು ಕೊರಳಲ್ಲಿ ರುಂಡಮಾಲೆ ಧರಿಸಿದ್ದಾನೆ.

**ಕಾಲಮಾನ :** ಈ ಮೂರ್ತಿಯ ಶಿಲ್ಪ ಲಕ್ಷಣ ಮತ್ತು ಪೀಠದ ಮೇಲಿರುವ ಶಾಸನಗಳನ್ನು ಅಧ್ಯಯನಿಸಲಾಗಿ ಇದು ಸು. ೧೧-೧೨ ನೆಯ ಶತಮಾನದ್ದೆಂದು ಸ್ಪಷ್ಟಗೊಳ್ಳುತ್ತದೆ.

**ಕಾಳಭೈರವ ಶಿಲ್ಪದ ಹಿನ್ನೆಲೆ :** ಮುಳುಗುಂದ ನಾಡಿನಲ್ಲಿ ಕಾಳಭೈರವ ಸ್ವಾಮಿಯ ಶಿಲ್ಪವನ್ನು ಸಂಶೋಧಿಸಿ ೨೦೦೬ರಲ್ಲಿ ಭೈರವ ಶಿಲ್ಪಗಳ ಕುರಿತು ಇತಿಹಾಸ ದರ್ಶನದಲ್ಲಿ ಈಗಾಗಲೇ ಪ್ರಕಟಿಸಿರುತ್ತಾರೆ. ಅದನ್ನಾಧರಿಸಿ, ಪ್ರಸ್ತುತ ಶಿಲ್ಪದ ಮೇಲೆ ಬೆಳಕು ಚಲ್ಲುವುದಾದರೆ, ಶೈವ ಪಂಥದವರಾದ ಪಾಶುಪತರು ಕಾಳಭೈರವನ ಆರಾಧಕರಾಗಿದ್ದರೆಂದೂ, ಅವರ ಶಿಷ್ಯರು ನಾಡಿನ ಅನೇಕ ಭಾಗಗಳಲ್ಲಿ ಭೈರವ ಶಿಲ್ಪಗಳನ್ನೂ ದೇವಾಲಯಗಳನ್ನೂ ಕಟ್ಟಿಸಿದ್ದರೆಂಬುದನ್ನು ಇತಿಹಾಸದಿಂದ ತಿಳಿಯುತ್ತೇವೆ.

ಮಹಾ ಪಾಶುಪತರನ್ನು ವಾಮನ ಪುರಾಣವು ಉಲ್ಲೇಖಿಸುತ್ತಿದ್ದು, ಡೇವಿಡ್ ಲಾರೆಂಜ್ ಅವರು ಸಾಧಾರಣ

* ಮ್ಯೂಜಿಯಂ ಕ್ಯೂರೇಟರ, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
** ಸಂಶೋಧನಾ ವಿದ್ಯಾರ್ಥಿ



ಪಾಶುಪತರ ಬಗೆಗೆ ತಿಳಿಸುವಲ್ಲಿ, ೧೦ನೇ ಶತಮಾನದ "ಉದಯನ" ೧೧ನೇ ಶತಮಾನದ ವರದರಾಜ ಮತ್ತು ೧೬೦೦ ರಲ್ಲಿದ್ದ ಶಂಕರಮಿಶ್ರರನ್ನು ಉದಾಹರಿಸಿದ್ದಾರೆ. ಮಹೇಂದ್ರವರ್ಮನ ಮತ್ತವಿಲಾಸವು, ಕಾಪಾಲಿಕರಾಗಿದ್ದ ಮಹಾಪಾಶುಪತರ ಬಗೆಗೆ ಬೆಳಕು ಚೆಲ್ಲಿದೆ. ಆನಂದಗಿರಿಯ ಶಂಕರವಿಜಯದಲ್ಲಿ ಕಾಪಾಲಿಕರ ಗುರುವಾದ ಉನ್ನತ ಭೈರವನು ಶೂದ್ರಜಾತಿಯವನೆಂದೂ ಅವನ ಶರೀರವು ಚಿತಾಭಸ್ಮದಿಂದ ಉದ್ಧೂಳಿತವಾಗಿತ್ತೆಂದೂ, ಅವನು ಕೊರಳಲ್ಲಿ ರುಂಡಮಾಲೆಯನ್ನು ಧರಿಸಿದ್ದು ಹಣೆಯ ಮೇಲೆ ಸಮಾನಂತರವಾಗಿ ಮೂರು ಕಪ್ಪು ಗೆರೆಗಳನ್ನು ಹೊಂದಿದ್ದು ಜಡೆಯನ್ನು ಎತ್ತಿ ಕಟ್ಟಿದ್ದು, ಸೊಂಟಪಟ್ಟಿ ಹುಲಿ ಚರ್ಮದಾಗಿದ್ದು, ಕಾಪಾಲಿಕರು ಎಡಗೈಯಲ್ಲಿ ಕಪಾಲಪಾತ್ರೆ ಬಲಗೈಯಲಿ ಗಂಟೆಯನ್ನು ಬಾರಿಸುತ್ತ ಓಂ ಶಂಭೋ ಅಘೋರ ಕಾಳೇಶ್ವರ ಎಂದು ಜಪಿಸುತ್ತಿದ್ದರೆಂದು ಆನಂದ ಗಿರಿ ವರ್ಣಿಸಿದ್ದು ಡಾ. ಕೆ. ವಸಂತಲಕ್ಷ್ಮೀ ಮತ್ತು ಡಾ. ಎಸ್. ವಿದ್ಯಾಶಂಕರ ಅವರು ಕಾಪಾಲಿಕರ ಬಗ್ಗೆ ತಮ್ಮ ಬರಹಗಳಲ್ಲಿ ತಿಳಿಸಿದ್ದಾರೆ.

ಪಾಶುಪತಕ್ಕೆ ಸೇರಿದ್ದ ಕಾಳಾಮುಖ ಯತಿಗಳು ಭೈರವನನ್ನು ಆರಾಧಿಸುತ್ತಿದ್ದರೆಂದು ವಿದಿತವಾಗುತ್ತದೆ. ಈ ತಾಲೂಕಿಗೆ ಹೊಂದಿಕೊಂಡಿರುವ ಮುಳಗುಂದ ನಾಡಿನಲ್ಲಿ ದೊರೆತಿರುವ ಕಾಳಭೈರವನ ಗುಡಿ ಮತ್ತು ಶಿಲ್ಪಗಳನ್ನು ಗಮನಿಸಲಾಗಿ ಉಮ್ಮತ್ತೂರಿನಲ್ಲಿ ಕಾಳಭೈರವನ ಗುಡಿ ಇರಬೇಕೆನ್ನಿಸುತ್ತದೆ. ಈ ಭೈರವನ ರೂಪವು ಶಂಕರನ ಪೂರ್ಣರೂಪವೆಂದು ತಿಳಿಯುತ್ತದೆ.

ಉಮ್ಮತ್ತೂರಿನಲ್ಲಿ ದೊರೆತ ಈ ಭೈರವನ ಶಿಲ್ಪ ಸ್ವಲ್ಪ ವಿಶಿಷ್ಟವಾಗಿದ್ದು ಕಾಳಭೈರವನ ಬದಿಯಲ್ಲಿ ಸೇವಕಿಯರು ಇದ್ದು, ಕೈಗಳಲ್ಲಿ ಖಡ್ಗ, ತ್ರಿಶೂಲ, ಡಮರು, ಪಾನಪಾತ್ರೆ ಶಿಲ್ಪದ ಸುತ್ತಲು ಹೂಬಳ್ಳಿಯ ಅಲಂಕಾರ, ಮೇಲ್ಭಾಗದಲ್ಲಿ ಕೀರ್ತಿಮುಖ, ಕೊರಳಲ್ಲಿ ರುಂಡಮಾಲೆ, ಇಕ್ಕೆಲಗಳಲ್ಲಿ ಪ್ರೇತಗಳು ಇರುವುದು ಮತ್ತು ರುಂಡದಿಂದ ಬೀಳುತ್ತಿರುವ ರಕ್ತವನ್ನು ಕುಡಿಯಲು ನಾಯಿಗಳು ಜಿಗಿಯುತ್ತಿರುವುದು, ಅದಕ್ಕೆ ಪ್ರೇತಗಳು ಅಡ್ಡಿಯನ್ನುಂಟು ಮಾಡುತ್ತಿರುವ ದೃಶ್ಯವಿರುವ ಈ ವಿಗ್ರಹದ ಶೋಧ ಈ ಭಾಗದಲ್ಲಿ ಕಾಳಭೈರವನ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲಲು ನೆರವಾಗುತ್ತದೆಂದು ಹೇಳಬಹುದಾಗಿದೆ.

(ಕೃತಜ್ಞತೆಗಳು : ನೆರವು ಮತ್ತು ಸಹಾಯ ನೀಡಿರುವ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕರಾದ ಡಾ. ಆರ್.ಎಂ. ಷಡಕ್ಷರಯ್ಯನವರಿಗೂ ಮತ್ತು ಕರ್ನಾಟಕ ಇತಿಹಾಸ ಅಕಾಡೆಮಿಗೂ ಕೃತಜ್ಞತೆಗಳು.)

ಸಂತೇಬೆನ್ನೂರು ಸುಮತೀಂದ್ರ ನಾಡಿಗ್*

# ಚನ್ನಗಿರಿ ತಾಲೂಕಿನ ಜೈನ ವಿಗ್ರಹಗಳು

ಕರ್ನಾಟಕದ ಧಾರ್ಮಿಕ-ಸಾಂಸ್ಕೃತಿಕ ಇತಿಹಾಸಕ್ಕೆ ಜೈನಧರ್ಮ ನೀಡಿರುವ ಕೊಡಿಗೆ ಅಪಾರ. ಜೈನಧರ್ಮ ಉತ್ತರ ಭಾರತದಲ್ಲಿ ಉಗಮವಾದರೂ ಬೆಳೆದಿದ್ದು ಕರ್ನಾಟಕದಲ್ಲಿ. ಶ್ರವಣಬೆಳಗೊಳ ಮತ್ತಿತರ ಕಡೆಯಲ್ಲಿರುವ ಬೃಹತ್ ಗೋಮಟೇಶ್ವರ ವಿಗ್ರಹಗಳು ನಮ್ಮ ನಾಡಿನ ಹೆಮ್ಮೆಯ ಜೈನ ಶಿಲ್ಪಗಳಾಗಿದ್ದು, ಅದರಂತೆ ನಾಡಿನಾದ್ಯಂತ ಇರುವ ವಿವಿಧ ಜೈನತೀರ್ಥಂಕರರ ವಿಗ್ರಹಗಳು, ಬಸದಿಗಳು ಆ ಧರ್ಮದ ವಾಸ್ತು ಶಿಲ್ಪಗಳನ್ನು ಪರಿಚಯಿಸುವುದಲ್ಲದೆ, ಕರ್ನಾಟಕದಲ್ಲಿ ಇದ್ದ ಸಂಪದ್ಭರಿತವಾದ ಜೈನ ಸಂಸ್ಕೃತಿಯನ್ನು ತೋರಿಸುತ್ತವೆ

ಕ್ರಿಸ್ತಪೂರ್ವಕಾಲದಿಂದಲೇ ಕರ್ನಾಟಕದಲ್ಲಿ ಜೈನಧರ್ಮ ಪ್ರವೇಶಿಸಿದ್ದಕ್ಕೆ ಅನೇಕ ಉದಾಹರಣೆಗಳಿದ್ದರೂ ಸು. ೧೦-೧೧ ನೇ ಶತಮಾನದಲ್ಲಿ ಜೈನಧರ್ಮ ಕರ್ನಾಟಕದಲ್ಲಿ ಪ್ರಬಲವಾಗಿತ್ತೆಂದು ಅನೇಕ ಶಾಸನಾಧಾರಗಳಿಂದ ತಿಳಿದು ಬರುತ್ತದೆ. ಅದರಲ್ಲೂ ೧೦ ನೇ ಶತಮಾನವನ್ನು ಇತಿಹಾಸಕಾರರು ಜೈನಧರ್ಮದ ಸುವರ್ಣಯುಗವೆಂದೇ ಗುರುತಿಸಿ ಕರೆದಿದ್ದಾರೆ. ಬನವಾಸಿ ಕದಂಬರು, ಬಾದಾಮಿ ಚಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಆಸಂಧಿ ಗಂಗರು, ಸೇವುಣರು, ಹೊಯ್ಸಳರು ಮುಂತಾದ ದೊರೆಗಳ ರಾಜಾಶ್ರಯದಲ್ಲಿ ಬೆಳೆದ ಈ ಜೈನ ಧರ್ಮ ಸಾಹಿತ್ಯ,ಕಲೆ ಎರಡೂ ಕ್ಷೇತ್ರದಲ್ಲಿ ತನ್ನದೇ ಆದ ಪ್ರಭಾವ ಬೆಳೆಸಿಕೊಂಡು ರಾಜ್ಯದಲ್ಲಿ ಹಲವು ಜಿನಾಲಯಗಳ ಸ್ಥಾಪನೆಗೆ ಕಾರಣ ವಾಯಿತು. ೧೧ನೇ ಶತಮಾನದಲ್ಲಿ ದಿನೇದಿನೇ ಪ್ರಬಲವಾಗುತ್ತಿದ್ದ ಜೈನಧರ್ಮ ಅನಂತರ ಆದ ಹಲವು ರಾಜಕೀಯ ಸ್ಥಿತ್ಯಂತ್ಯಗಳಿಂದಾಗಿ ಅದರ ಪ್ರಭಾವ ಕುಂಠಿತವಾಗುತ್ತಾ ಬಂತು. ಜೈನಧರ್ಮವನ್ನು ಮೊಟ್ಟಮೊದಲು ಪ್ರಬಲವಾಗಿ ವಿರೋಧಿಸಿ,ಅದರ ಪ್ರಗತಿಗೆ ಅಡ್ಡಿಪಡಿಸಿದವರು ಬಹುಶಃ ಶೈವರು, ವೀರಶೈವರು. ಶೈವರ ಉಗ್ರ ಅನುಯಾಯಿಗಳಲ್ಲಿ ಕೆಲವರು ಜೈನ ಬಸದಿಗಳನ್ನು ದೇವಾಲಯಗಳಾಗಿ ಪರಿವರ್ತಿಸಿ ಅಲ್ಲಿದ್ದ ಜಿನ ವಿಗ್ರಹಗಳನ್ನು ಒಡೆದು ಮಣ್ಣಿನಲ್ಲಿ ಹುಗಿದೋ, ಹೊರಗೆ ಹಾಕಿಯೋ ಅಲ್ಲಿ ಶಿವಲಿಂಗ ಪ್ರತಿಷ್ಠೆ ಮಾಡಿ ಜಿನಾಲಯಗಳನ್ನು ಶಿವಾಲಯಗಳಾಗಿ ಪರಿವರ್ತಿಸಿದರು. ಕೆಲವು ಕಡೆ ಜಿನಾಲಯಗಳು ವೈಷ್ಣವ ದೇವಾಲಯಗಳಾಗಿಯೂ ಪರಿವರ್ತಿತಗೊಂಡಿವೆ . ಹೀಗೆ ಮಣ್ಣಿನಲ್ಲಿ ಹುಗಿದ ಅನೇಕ ಜೈನ ವಿಗ್ರಹಗಳು ಈಚೆಗೆ ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ಹಲವೆಡೆ ದೊರೆತಿವೆ, ಅವುಗಳ ಬಗ್ಗೆ ಬೆಳಕು ಚೆಲ್ಲುವುದು ಈ ಸಂಪ್ರಬಂಧದ ಉದ್ದೇಶ.

ಚನ್ನಗಿರಿ ತಾಲ್ಲೂಕು ಕೇಂದ್ರದ ವಾಯವ್ಯಕ್ಕೆ ಸು. ೨೫ ಕಿ.ಮೀ. ದೂರದ ಬಸವಾಪಟ್ಟಣ ಗ್ರಾಮದಲ್ಲಿ ಈಗ್ಗೆ ೧೦ ವರ್ಷಗಳು ಹಿಂದೆ ಜಮೀನು ಉಳುಮೆ ಮಾಡುವಾಗ ಗ್ರಾಮದ ಪಶ್ಚಿಮಕ್ಕೆ ಇರುವ ಭರಮಜ್ಜರ ಹಾಲಸಿದ್ದಪ್ಪ ನವರ ಜಮೀನಿನಲ್ಲಿ ಕುಳಿತ ಭಂಗಿಯ ಎರಡು ಜೈನ ವಿಗ್ರಹಗಳೂ, ಒಂದು ಯಕ್ಷ ವಿಗ್ರಹವೂ ದೊರೆಯಿತು .ಈಗ ಈ ಗ್ರಾಮದಲ್ಲಿ ಓರ್ವ ಜೈನರೂ ಇಲ್ಲ, ಜೈನ ಬಸದಿಯಿರುವ ಕುರುಹೂ ಇಲ್ಲ. ೧೦ ನೇ ಶತಮಾನದ ಶಿಲ್ಪಲಕ್ಷಣಗಳಿರುವ ೩ ಅಡಿ ಎತ್ತರ ಕುಳಿತ ಭಂಗಿಯ ಬೆತ್ತಲೆ ಇರುವ ಈ ಜಿನ ವಿಗ್ರಹಗಳು ಚಂದ್ರನಾಥ, ನೇಮಿನಾಥ ತೀರ್ಥಂಕರರದ್ದು ಎಂದು ಗುರುತಿಸಲಾಗಿದೆ. ಈ ಎರಡು ವಿಗ್ರಹಗಳೂ ನೋಡಲು ಬಹಳ ಸುಂದರವಾಗಿದ್ದು, ಒಂದೂ ಒಂದಿಷ್ಟೂ ಊನವಾಗಿಲ್ಲ, ಇವು ಸುಮಾರು ೩-೪ ಟನ್ ತೂಕಭಾರವಿವೆ. ಈಗಲೂ ಮಣ್ಣಿನ ಗುಂಡಿಯಲ್ಲೇ ಮಣ್ಣಿನಲ್ಲಿ ಹುಗಿದು ಹೋಗಿದ್ದು. ಮರಳಿ ಮಣ್ಣಿಗೆ ಹೋಗುವಂತಿವೆ. ಈ ಶಿಲ್ಪಗಳು ಅಲ್ಲಿರುವ ವಿಚಾರ ಆ ಊರಿನ ಬಹಳ ಗ್ರಾಮಸ್ಥರಿಗೇ ತಿಳಿದಿಲ್ಲ, ಅವುಗಳನ್ನು ಮೇಲಕ್ಕೆ ಎತ್ತಿ ಗ್ರಾಮದ ಪ್ರಮುಖ ಸ್ಥಳದಲ್ಲೋ, ಪ್ರಾಚ್ಯ ಇಲಾಖೆಯ ಸಂಗ್ರಹಾಲಯದಲ್ಲಿಯೋ ಇಟ್ಟು ರಕ್ಷಿಸಬೇಕಾಗಿರುವುದು ಅಗತ್ಯವಾಗಿದೆ. ಯಕ್ಷ ವಿಗ್ರಹದ ಕೈಗಳು ತುಂಡಾಗಿದ್ದು ನೋಡಲು ಆಕರ್ಷಕವಾಗಿವೆ. ಚಿನ್ಹೆಗಳಿಲ್ಲದೆ ಅವು ಯಾವ ಯಕ್ಷ ಎಂದು ಗುರುತಿಸಲಾಗಿಲ್ಲ. ಇದಲ್ಲದೇ ಅದೇ ಗ್ರಾಮದಲ್ಲಿ ೮-೧೦ ವರ್ಷಗಳ ಕೆಳಗೆ ಸರ್ಕಾರಿ ಆಸ್ಪತ್ರೆ ಕಟ್ಟಡ ಕಟ್ಟಲು ಪಾಯ ತೋಡುವಾಗ ಒಂದೂವರೆ ಅಡಿ ಎತ್ತರದ ನಿಂತ ಭಂಗಿಯ ಇನ್ನೊಂದು

* ವಿಶ್ರಾಂತ ಪತ್ರಕರ್ತರು, ಸಂತೇಬೆನ್ನೂರು – ೫೭೭೫೫೨. ದಾವಣಗೆರೆ ಜಿಲ್ಲೆ.

ಪಾರ್ಶ್ವನಾಥ ವಿಗ್ರಹ (ಸುಪಾರ್ಶ್ವನಾಥ?) ದೊರೆತಿದೆ. ಅದರ ಪೀಠ ಭಾಗದಲ್ಲಿ ಒಂದು ಸಾಲಿನ ಶಾಸನವಿದ್ದು ಅದರ ಪಾಠ ಇಂತಿದೆ. 'ಶ್ರೀ ಸೂರಸ್ಥ ಗಣದ......ಸಿದ್ಧಾಂತ ದೇವರು'. ಈ ಪೀಠ ಶಾಸನದಿಂದ ಹೊಸ ಶಾಸನವೊಂದು ದೊರೆತಂತಾಗಿದೆ. ಈ ವಿಗ್ರಹ ಈಗ ಅಲ್ಲಿನ ರೆವಿನ್ಯೂ ಇನ್ಸಪೆಕ್ಟರ್ ಕಛೇರಿಯಲ್ಲಿದ್ದು ಮುಕ್ಕಾಗಿದೆ.



ಇದೇ ತಾಲೂಕಿನ ಸಿದ್ದನಮಠ ಗ್ರಾಮದ ಶ್ರೀ ರಾಮೇಶ್ವರ ದೇವಾಲಯದ ಸಮೀಪ ಕೆಲವು ವರ್ಷಗಳ ಹಿಂದೆ ಮನೆಯ ತಳಪಾಯ ತೆಗೆಯುವಾಗ ಮೂರು ಅಡಿ ಎತ್ತರದ ಸುತ್ತಲೂ ಮಕರತೋರಣವಿರುವ ಪಾರ್ಶ್ವನಾಥ ಸ್ವಾಮಿ ವಿಗ್ರಹ ದೊರೆಯಿತು. ಅದರ ಸಮೀಪದಲ್ಲಿಯೇ ಆ ವಿಗ್ರಹಕ್ಕೆ ಹೊಂದುವ, ಅದರದೇ ಆದ ಪಾಣಿಪೀಠವೂ ದೊರೆಯಿತು. ಆ ಪಾಣಿಪೀಠದ ಮೇಲೆ ಆ ವಿಗ್ರಹವನ್ನಿರಿಸಿ ಅದನ್ನು ಅಲ್ಲಿಯ ರಾಮೇಶ್ವರ ದೇವಾಲಯದಲ್ಲಿನ ಸುಖನಾಸಿಯಲ್ಲಿಡಲಾಗಿದೆ. ಈ ದೇವಾಲಯ ಹಿಂದೊಮ್ಮೆ ಬಸದಿಯಾಗಿರುವ ಸಾಧ್ಯತೆ ಇದೆ. ಈ ಗ್ರಾಮದಲ್ಲಿ ಜೈನರ್‍ಯಾರು ಈಗ ಇಲ್ಲ. ಆಗ ಜೈನರಾಗಿದ್ದವರು ವೀರಶೈವದ ಪ್ರಭಾವಕ್ಕೆ ಒಳಗಾಗಿ ವೀರಶೈವರಾಗಿರಬಹುದು. ಜೈನಧರ್ಮಿಯರು ಆ ವಿಗ್ರಹ ಕೇಳಿದರು ಕೊಡದೆ ಅದನ್ನು ಶಿವಾಲಯದಲ್ಲಿಯೇ ಇಟ್ಟು, ಪಾರ್ಶ್ವನಾಥಸ್ವಾಮಿಗೂ ವಿಭೂತಿ ಪಟ್ಟಿ, ನಿತ್ಯ ಅರ್ಚನೆ, ಪೂಜೆ, ಅಭಿಷೇಕ ಮಾಡುತ್ತಿದ್ದಾರೆ. ಆ ದೇವಸ್ಥಾನದ ಸಮೀಪದಲ್ಲಿಯೂ ಯಕ್ಷ-ಯಕ್ಷಿ ಮುಂತಾದ ಹಲವಾರು ಜೈನ ಭಿನ್ನ ಶಿಲ್ಪಗಳು ದೊರೆತಿವೆ. ಅವುಗಳನ್ನು ದೇವಾಲಯದ ಹಿಂಬದಿ ಇಡಲಾಗಿದ್ದು ಅದೊಂದು ಬಯಲ ವಸ್ತು ಸಂಗ್ರಹಾಲಯದಂತಿದೆ. ಇದರ ಸಮೀಪದಲ್ಲಿಯೇ ಚಾಲುಕ್ಯರ ಕಾಲದ ಒಂದು ಶಿಲಾ ಶಾಸನವಿದೆ. ಅದು ಈಗಾಗಲೇ ರೈಸರ ಶಾಸನ ಸಂಪುಟದಲ್ಲಿ ಪ್ರಕಟವಾಗಿದೆ.

ಈ ಮೂರು ವಿಗ್ರಹಗಳು ಈ ತಾಲೂಕಿನಲ್ಲಿ ದೊರೆತಿರುವುದು ಅಚ್ಚರಿಯ ವಿಷಯವಾಗಿದೆ.ಇದೇ ತರಹ ನೆರೆಯ ದಾವಣಗೆರೆ ತಾಲೂಕಿನ ಶಾಮನೂರು,ಬೇತೂರು ಗ್ರಾಮಗಳಲ್ಲಿಯೂ , ಸಮೀಪದ ಹೊನ್ನಾಳಿ ತಾಲೂಕಿನ ಬೆಳಗುತ್ತಿ, ತೀರ್ಥರಾಮೇಶ್ವರಗಳಲ್ಲೂ ಜೈನ ಶಿಲ್ಪಗಳು ದೊರೆತಿವೆ. ಇದೇ ಚನ್ನಗಿರಿ ತಾಲೂಕು ನಲ್ಲುದುರೆ ಗ್ರಾಮ ಹಿಂದೆ ಜೈನ ಕೇಂದ್ರವಾಗಿತ್ತೆಂದು ದಾಖಲೆಗಳಿಂದ ತಿಳಿದುಬರುತ್ತಿದ್ದು, ಅಲ್ಲಿನ ಜೈನ ಸನ್ಯಾಸಿ ಒಬ್ಬರು ಹಳೇಬೀಡಿನಲ್ಲಿ ಸಲ್ಲೇಖನ ವ್ರತದಿಂದ ದೇಹತ್ಯಾಗ ಮಾಡಿದ್ದಾಗಿ ಹಳೇಬೀಡಿನ ಶಾಸನವೊಂದು ತಿಳಿಸುತ್ತದೆ.

ಹೀಗೆ ದೊರೆತಿರುವ ಹಲವಾರು ಜೈನ ಸ್ಮಾರಕಗಳು ತಾಲೂಕಿನ ಜೈನಪಳೆಯುಳಿಕೆಗಳಾಗಿ ನಮ್ಮ ಕಣ್ಮುಂದೆ ಇದ್ದು, ಇದರಿಂದ ಹಿಂದೊಮ್ಮೆ ಜೈನರ ಪ್ರಾಬಲ್ಯ ಈ ಪ್ರಾಂತ್ಯದಲ್ಲಿ ಹೆಚ್ಚಾಗಿತ್ತೆಂದು ತಿಳಿಯಬಹುದಾಗಿದೆ. ಈಗ ಈ ತಾಲೂಕಿನಲ್ಲಿ ಮೂಲನಿವಾಸಿಗಳಾದ ಯಾವ ಜೈನ ಧರ್ಮೀಯರೂ ಇಲ್ಲ. ಈಗಿರುವ ಅಲ್ಪಸಂಖ್ಯಾತ ಜೈನಧರ್ಮೀಯರು ಈಚೆಗೆ ಬೇರೆ ಕಡೆಯಿಂದ ವಲಸೆ ಬಂದವರು. ಬಸವಾಪಟ್ಟಣದ ಸಮೀಪ ಸಿಕ್ಕಿರುವ ಜಿನ ವಿಗ್ರಹಗಳ ಸಮೀಪ, ಗವಿಮಠವೆಂಬ ಒಂದು ವೀರಶೈವ ಮಠವಿದ್ದು, ಬಹುಶಃ ಹಿಂದೆ ಆ ಗವಿಗಳಲ್ಲಿ ಜೈನಮುನಿಗಳು ವಾಸವಾಗಿದ್ದಿರಬೇಕು. ಸಿದ್ಧನಮಠ ಗ್ರಾಮದಲ್ಲೂ ಅನೇಕ ಗವಿಗಳಿದ್ದು ಅವೂ ಸಹ ಜೈನ ಯತಿಗಳು ತಪಸ್ಸನ್ನಾಚರಿಸುತ್ತಿದ್ದ ನೆಲೆಯಾಗಿರಬಹುದು.

ಎ. ಶ್ರೀಧರಮೂರ್ತಿ*

# ಕರ್ನಾಟಕದ ದೇವಾಲಯಗಳಲ್ಲಿ ಮಿಥುನ (ಶೃಂಗಾರ) ಶಿಲ್ಪಗಳು

ಶೃಂಗಾರ ಶಿಲ್ಪಗಳು ಪ್ರಪಂಚದ ಬಹುತೇಕ ನಾಗರೀಕತೆ ಮತ್ತು ಸಂಸ್ಕೃತಿಗಳಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ ಕಾಣಸಿಗುತ್ತವೆ. ಕೆಲವೊಮ್ಮೆ ಸಾಂಕೇತಿಕವಾಗಿ, ಗುಪ್ತಾಂಗಗಳ ಆಕಾರಗಳಾಗಿ, ಮಾತೃಶಿಲ್ಪವಾಗಿ, ಸಂತಾನೋತ್ಪತ್ತಿ ಅಥವಾ ಶೃಂಗಾರದ ಮೂಲ ಕಲ್ಪನೆಯನ್ನು ಸೂಚಿಸುವ ಕಲಾಕೃತಿಗಳು ಕಂಡು ಬರುತ್ತವೆ.

ಆದಿಮಾನವನ ಕಾಲದಿಂದಲೂ[೧] ಅವನ ಅಸ್ತಿತ್ವಕ್ಕೆ ಅವಶ್ಯವಾಗಿದ್ದಂತಹ ಆಹಾರ ಮತ್ತು ಸಂತಾನೋತ್ಪತ್ತಿಯನ್ನು ಬಿಂಬಿಸುವ ರಚನೆಗಳು ಪ್ರಪಂಚದ ಹಲವಾರು ಕಡೆ ಕಂಡುಬರುತ್ತವೆ. ಉದಾಹರಣೆಗೆ ಇಂತಹ ರಚನೆಗಳನ್ನು ಪ್ರಾಗೈತಿಹಾಸಕಾಲದ (pre-historic) 'ಅರಿಗ್ನೇಷಿಯನ್'ನ (Aurignacian) ಹೆಣ್ಣಿನ ಆಕಾರದಲ್ಲಿ ಕಲ್ಲಿನಲ್ಲಿ ಕೆತ್ತಲ್ಪಟ್ಟ ಮಾತೃಶಿಲ್ಪಗಳು ಮತ್ತು 'ಸೆರೆನ್ ಅಬ್ಬಾಸ್ ಜೈಂಟ್'ನ ಗುಹೆಯಲ್ಲಿ ಕೆತ್ತಲ್ಪಟ್ಟ ನಗ್ನ ವ್ಯಕ್ತಿಯೊಬ್ಬನ ರೇಖಾಚಿತ್ರ ಉತ್ತಮ ಉದಾಹರಣೆಗಳು. ನಂತರ ನಾಗರೀಕತೆ ಬೆಳೆದಂತೆ ಈ ರೀತಿಯ ಶಿಲ್ಪಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಉದಾಹರಣೆಗೆ ಈಜಿಪ್ಟಿನ 'ಟೂಂಬ್ ಆಫ್ ದ ಬುಲ್' (Tomb of the Bull, Tarquinia) ನಲ್ಲಿ ರಚಿತಗೊಂಡ ಭಿತ್ತಿಚಿತ್ರ ಹಾಗೂ ಗ್ರೀಕೊ ರೋಮನ್ ಕಾಲದ ಅನೇಕ ಶಿಲ್ಪಗಳು.

ಭಾರತೀಯ ಹಿನ್ನೆಲೆಯಲ್ಲಿ[೨] ಗಮನಿಸಿದಾಗ ಈ ರೀತಿಯ ಮೂಲ ಆಕಾರಗಳನ್ನು ನಾವು ಮಹಾರಾಷ್ಟ್ರದ ಅಹಮದ್‌ನಗರ ತಾಲ್ಲೂಕು 'ದೈಮಾಬಾದ್'ನಲ್ಲಿ (Dimabad) ಸಿಕ್ಕಿರುವ ಮಡಿಕೆಗಳ ಮೇಲೆ ಕಾಣಬಹುದಾಗಿದೆ. ಇಂತಹ ಚಿತ್ರ ಒಂದರಲ್ಲಿ ವೃತ್ತಾಕಾರದ ನಡುವೆ ಸ್ತ್ರೀ ಪುರುಷರನ್ನು ರಚಿಸಲಾಗಿದೆ. ಅವು ಬಹುತೇಕ ರೇಖಾ ಚಿತ್ರಗಳಂತೆ ಕಂಡುಬರುತ್ತವೆ. ಆದರೆ ಸ್ತ್ರೀ ಪುರುಷರ ದೇಹ ರಚನೆಗಳ ವ್ಯತ್ಯಾಸವನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಹೀಗೆಯೇ ಸಂಭೋಗದಲ್ಲಿ ತೊಡಗಿರುವ ಅಥವಾ ತೊಡಗಲು ಹೊರಟಿರುವ ರೀತಿಯ ಸ್ತ್ರೀ ಪುರುಷರ ರೇಖಾ ಚಿತ್ರಗಳು ಕರ್ನಾಟಕದ 'ಕುಪ್ಪಗಲ್ಲು' ಗವಿಗಳಲ್ಲಿಯೂ ಕಂಡು ಬರುತ್ತವೆ.

ದಂಪತಿ ಅಥವಾ ಮಿಥುನ ಶಿಲ್ಪಗಳು ಭಾರತದ ಎಲ್ಲಾ ಪ್ರಕಾರದ ಹಿಂದೂ, ಬೌದ್ಧ, ಜೈನ, ದೇವಾಲಯಗಳಲ್ಲಿ ಅಧಿಕ ಸಂಖ್ಯೆಯಲ್ಲಿ ದೊರಕುತ್ತವೆ. ಇವುಗಳನ್ನು ನಾಯಕ ನಾಯಕಿ, ಅಥವಾ ಯಕ್ಷ-ಯಕ್ಷಿಯರೆಂದು ಗುರುತಿಸುತ್ತಾರೆ. ಸಾಮಾನ್ಯವಾಗಿ ಮಿಥುನ ಶಿಲ್ಪಗಳು ನಗ್ನ ಅಥವಾ ಅರೆನಗ್ನವಾಗಿದ್ದು ಶೃಂಗಾರ ಭಂಗಿಯಲ್ಲಿ ಗಂಡು ಹೆಣ್ಣುಗಳು ಇರುವಂತೆ ರಚಿಸಲಾಗಿದೆ. ಪ್ರಾರಂಭ ಹಂತದ ಈ ರೀತಿಯ ಶಿಲ್ಪಗಳನ್ನು ಕ್ರಿ.ಪೂ. ಎರಡನೆಯ ಮತ್ತು ಮೊದಲನೆಯ ಶತಮಾನದಲ್ಲಿಯೇ ಸಾಂಚಿಸ್ತೂಪ ಮತ್ತಿತರ ಕಡೆಗಳಲ್ಲಿ ಕೆತ್ತಲಾಗಿದೆ. ಜೋಡಿಯಾಗಿರುವ ಮಿಥುನ ಶಿಲ್ಪಗಳಲ್ಲದೆ ದೇವಾಂಗನೆ ಅಥವಾ ಅಪ್ಸರಾ ಶಿಲ್ಪಗಳು ಕಂಡುಬರುತ್ತವೆ. ಈ ಪ್ರಕಾರದ ಶಿಲ್ಪಗಳಲ್ಲಿ ಸುಂದರವಾದ ಹೆಣ್ಣು ಪ್ರಕೃತಿಯ ಹಿನ್ನೆಲೆಯಲ್ಲಿ ಇರುವಂತೆ ರಚಿಸಲಾಗಿದೆ. ಇನ್ನೊಂದು ಪ್ರಕಾರದ ವಿಶಿಷ್ಟ ಶಿಲ್ಪಗಳು ಭಾರತೀಯ ದೇವಾಲಯಗಳಲ್ಲಿ ಕಂಡುಬರುತ್ತದೆ. ಇವುಗಳನ್ನು ಮಿಥುನ ಶಿಲ್ಪಗಳೆನ್ನುತ್ತಾರೆ. ಈ ಮಿಥುನ ಶಿಲ್ಪಗಳು ಹೆಸರೇ ಹೇಳುವಂತೆ ಸ್ತ್ರೀ ಪುರುಷರು ವಿವಿಧ ಭಂಗಿಗಳಲ್ಲಿ ಹಾಗೂ ಪ್ರಕಾರಗಳಲ್ಲಿ ರತಿ ಕ್ರೀಡೆಯಲ್ಲಿ ತೊಡಗಿರುವಂತೆ ನಿರ್ಮಿಸಲಾಗಿದೆ. ಮಿಥುನ ಶಿಲ್ಪಗಳು[೩], ಅಪ್ಸರಾ ಶಿಲ್ಪಗಳು ಹಾಗೂ ಮೈಥುನ ಶಿಲ್ಪಗಳನ್ನು ಒಟ್ಟಾರೆ ಕ್ರೋಡೀಕರಿಸಿ ಶೃಂಗಾರ ಶಿಲ್ಪಗಳೆಂದು ಕರೆಯಬಹುದು.

ಭಾರತೀಯ ಶೃಂಗಾರ ಶಿಲ್ಪಗಳ ಉಗಮಕ್ಕೆ ಮತ್ತು ಅವುಗಳ ನಿರಂತರ ಬೆಳವಣಿಗೆಗೆ ದೇವಾಂಗನ ದೇಸಾಯಿ ಮತ್ತು ಫ್ರಾನ್ಸಿಸ್ ಲೀಸನ್ ಮುಂತಾದ ಅನೇಕ ವಿದ್ವಾಂಸರು ಸಂಭವನೀಯ ಕಾರಣಗಳನ್ನು ನೀಡಿದ್ದಾರೆ. ಒಟ್ಟಾರೆ ಎಲ್ಲಾ ಅಂಶಗಳನ್ನು ವಿವೇಚಿಸಿ ಈ ಕೆಳಕಂಡಂತೆ ಪ್ರಮುಖ ಕಾರಣಗಳನ್ನು ಪಟ್ಟಿ ಮಾಡಬಹುದು :

೧. ಮಿಥುನ ಅಥವಾ ಶೃಂಗಾರ[೪] ಶಿಲ್ಪಗಳು 'ಶಕ್ತಿಯ' ಸಂಯೋಜನೆಯ ವಿವಿಧ ರೂಪಗಳು ಮತ್ತು ದೇವರೊಂದಿಗೆ ಒಂದಾಗುವ ಆಧ್ಯಾತ್ಮಿಕ ತಾದ್ಯಾತ್ಮತೆಯನ್ನು ನೀಡುವಲ್ಲಿ ಸಹಕಾರ ನೀಡಲು ಪ್ರೇರೇಪಿಸುವಂತಹ ಆಕಾರಗಳು.

* ಪ್ರವಾಚಕರು, ಗ್ರಾಫಿಕ್ ವಿಭಾಗ, ಚಿತ್ರಕಲಾ ಮಹಾವಿದ್ಯಾಲಯ, ಚಿತ್ರಕಲಾ ಪರಿಷತ್ತು, ಬೆಂಗಳೂರು - ೫೬೦ ೦೦೧

೨. ಪ್ರಕೃತಿಯೊಡನೆ ಒಂದಾಗುವ ಬ್ರಹ್ಮಾನಂದದ ಕಲ್ಪನೆಯನ್ನು ಮತ್ತು ಸೃಷ್ಟಿ ಕ್ರಿಯೆಯನ್ನು ಗೌರವಿಸುವ ಉದ್ದೇಶದಿಂದ ಶೃಂಗಾರ ಶಿಲ್ಪಗಳು ರಚನೆಗೊಂಡಿರಬಹುದು.

೩. ಅಥವಾ ಸಹಜವಾಗಿ ಮನುಷ್ಯನ ವಿವಿಧ ದೈನಂದಿನ ಚಟುವಟಿಕೆಗಳಾದ ಬೇಟೆ, ನೃತ್ಯ ಮತ್ತು ಸಂಗೀತ ಇವುಗಳಂತೆ ಶೃಂಗಾರ ಶಿಲ್ಪಗಳೂ ಕೂಡ ಜೀವನದ ಒಂದು ಭಾಗದಂತೆ ರಚಿಸಲ್ಪಟ್ಟಿರಬಹುದು.

೪. ಶೃಂಗಾರ ಶಿಲ್ಪಗಳು 'ಹರಕೆ ಗೊಂಬೆ'ಗಳಂತೆ ಅಥವಾ ದುಷ್ಟ ಶಕ್ತಿಗಳ ನಿವಾರಣೆಗೆ ಉಪಯೋಗಿಸುವ 'ಮಾಟದ ಗೊಂಬೆ'ಗಳಂತೆಯೂ ಉಪಯೋಗಿಸಲ್ಪಟ್ಟಿರಬಹುದು.

೫. ಮುಳ್ಳನ್ನು ಮುಳ್ಳಿಂದಲೇ ಕೀಳುವಂತೆ ಲೌಕಿಕ ಆಸೆಗಳನ್ನು, ಕಾಮನೆಗಳನ್ನು ಅದೇ ಕಾಮನೆಗಳ ಸಹಾಯದಿಂದಲೇ ತೊಡೆದು ಹಾಕುವ ಒಂದು ರೀತಿಯ ಮಾನಸಿಕ ಸಾಂತ್ವನವನ್ನು ನೀಡಲು ಶೃಂಗಾರ ಶಿಲ್ಪಗಳು ರಚನೆಗೊಂಡಿರಬಹುದು.

೬. ಶಂಗಾರ ಶಿಲ್ಪಗಳನ್ನು ಜನಸಾಮಾನ್ಯರನ್ನು ಆಧ್ಯಾತ್ಮದ ಕಡೆಗೆ ಆಕರ್ಷಿಸಲು ಪ್ರಲೋಭನೆ ನೀಡಲು ಉಪಯೋಗಿಸಿರಬಹುದು.

೭. ಜನ ಸಾಮಾನ್ಯನಿಗೆ ಲೈಂಗಿಕ ಶಿಕ್ಷಣ ನೀಡಲು ಸಹಕಾರಿಯಾಗುವ ಉದ್ದೇಶದಿಂದಲೂ ಕೂಡ ಶೃಂಗಾರ ಶಿಲ್ಪಗಳು ರಚನೆಗೊಂಡಿರಬಹುದು.

೮. ತಾಂತ್ರಿಕ ಅಥವಾ ಯೋಗ ಸಿದ್ದಿಯ ಭಾಗವಾಗಿ ಇವುಗಳನ್ನು ಉಪಯೋಗಿಸಿರಬಹುದು.

೯. ಭಾರತೀಯ ಸಾಹಿತ್ಯ, ಸಂಗೀತ ಮತ್ತು ನೃತ್ಯಗಳಲ್ಲಿರುವಂತೆ ನವರಸಗಳಲ್ಲೊಂದಾದ 'ಶೃಂಗಾರ ರಸದ' ಅಭಿವ್ಯಕ್ತಿಯಾಗಿ ಶೃಂಗಾರ ಶಿಲ್ಪಗಳು ರೂಪಗೊಂಡಿರಬಹುದು.

೧೦. ರಸಿಕ ರಾಜರುಗಳು, ಜಮೀನ್ದಾರರು ಮತ್ತು ಶ್ರೀಮಂತರು ಹಾಗೂ ಇವರುಗಳು ಪೋಷಿಸುತ್ತಿದ್ದ 'ದೇವದಾಸಿ' ಪದ್ಧತಿಯೂ ಕೂಡ ಶೃಂಗಾರ ಶಿಲ್ಪಗಳು ದೇವಾಲಯಗಳಲ್ಲಿ ಹೆಚ್ಚು ಹೆಚ್ಚಾಗಿ ಮೂಡಿ ಬರಲು ಕಾರಣವಾಗಿರಬಹುದು.

೧೧. ಕಲಾವಿದರು ಕಲಾಕೃತಿಗಳನ್ನು ರಚಿಸುವಾಗ ವಿಷಯ ವೈವಿಧ್ಯತೆ ಮತ್ತು ಸೌಂದರ್ಯ ಪ್ರಜ್ಞೆಯನ್ನು ಉಂಟು ಮಾಡಲು ಪ್ರಾಣಿಗಳು, ಪಕ್ಷಿಗಳು, ಹೂಬಳ್ಳಿಗಳನ್ನು ಬಳಸಿದ್ದಾರೆ. ಇದೇ ರೀತಿಯಲ್ಲಿ ಅಲಂಕಾರ ಮತ್ತು ದೇವಾಲಯದ ವೈಭವವನ್ನು ಹೆಚ್ಚಿಸಲು ಶೃಂಗಾರ ಶಿಲ್ಪಗಳನ್ನು ಬಳಸಿರಬಹುದು.

೧೨. ದೇವಾಲಯ ಒಂದರಲ್ಲಿ ಪ್ರಭಾವಶಾಲಿಯಾಗಿ ಮೂಡಿ ಬಂದ ಶಿಲ್ಪಗಳು ಬೇರೆ ಬೇರೆ ದೇವಾಲಯಗಳಲ್ಲಿ ಅದೇ ಅದೇ ಪ್ರತಿಕೃತಿಯಾಗಿ ರಚಿಸಲ್ಪಟ್ಟಿರುವುದು ಕಂಡುಬರುತ್ತದೆ. ಹಾಗೆಯೇ ಸಾಂಪ್ರದಾಯಿಕವಾಗಿ ಶೃಂಗಾರ ಶಿಲ್ಪಗಳು ರಚನೆಗೊಂಡಿರುವ ಸಾಧ್ಯತೆ ಇದೆ.

೧೩. ಕ್ರಿ.ಶ. ೫೦೦ರ ನಂತರ ವೈಷ್ಣವರು, ಶೈವರು, ಬೌದ್ಧರು, ಜೈನರು, ಎಲ್ಲರೂ ದೇವಾಲಯಗಳನ್ನು ತಮ್ಮ ತಮ್ಮ ಧರ್ಮ ಪ್ರಚಾರಕ್ಕಾಗಿ ನಿರ್ಮಿಸತೊಡಗಿದರು. ಈ ರೀತಿಯ ಸ್ಪರ್ಧಾತ್ಮಕ ಮನೋಭಾವನೆಯು ಶೃಂಗಾರ ಶಿಲ್ಪಗಳ ಹೆಚ್ಚುವರಿ ಬೆಳವಣಿಗೆಗೆ ಸಹಾಯಕವಾಗಿರಬಹುದು.

೧೪. ಪೌರಾಣಿಕವಾಗಿ ಎಲ್ಲಾ ಪ್ರಮುಖ ದೇವರುಗಳು ಅವತಾರಗಳನ್ನು ಕೆಲವು ಕಾರ್ಯನಿಮಿತ್ತವಾಗಿ ತೆಗೆದುಕೊಳ್ಳುತ್ತಾರೆ. ಈ ರೀತಿಯ ದೇವರ ಕಾರ್ಯಗಳನ್ನು ನೆರವೇರಿಸಲು ಮತ್ತು ಸಹಕಾರಿಯಾಗಲು ಉಪದೇವತೆಗಳಿರುತ್ತಾರೆ ಹೀಗೆ ದೇವ ದೇವತೆಗಳ ಚಟುವಟಿಕೆಗಳನ್ನು ಮತ್ತು ಘಟನಾವಳಿಗಳನ್ನು ರಂಜನೀಯವಾಗಿಸಲು ಶೃಂಗಾರ ಶಿಲ್ಪಗಳು ರಚನೆಗೊಂಡಿರುವಂತೆ ತೋರುತ್ತದೆ.

೧೫. ಪೂರ್ವ ಪಶ್ಚಿಮಗಳನ್ನು[೫] ಕೂಡಿಸುತ್ತಿದ್ದ ಗಾಂಧಾರ ಭಾಗದ 'ಸಿಲ್ಕ್ ರೂಟ್' ಮುಖಾಂತರ ಗ್ರೀಕ್ ಮತ್ತು ರೋಂನ ನಾಣ್ಯಗಳು ಮತ್ತು ಕಲಾಕೃತಿಗಳು ಭಾರತವನ್ನು ಕ್ರಿ.ಶ. ಎರಡನೇ ಶತಮಾನದ ಹಿಂದಿನಿಂದಲೂ ಬಂದು ಸೇರಿವೆ ಇವುಗಳ ಮೇಲಿರುವ ಗ್ರಿಕೋ ರೋಮನ್ ನಗ್ನ ಚಿತ್ರಗಳು ಕೂಡ ಶೃಂಗಾರ ಶಿಲ್ಪಗಳ ಅಸ್ತಿತ್ವಕ್ಕೆ ಹೆಚ್ಚಿನ ಒತ್ತು ನೀಡಿರುವ ಸಾಧ್ಯತೆಗಳಿವೆ.

**ಕರ್ನಾಟಕದಲ್ಲಿ ಶೃಂಗಾರ ಶಿಲ್ಪಗಳು :** ವಿಶಿಷ್ಟ ಮತ್ತು ಚರ್ಚಾಸ್ಪದವಾಗಿರುವಂತಹ ಶೃಂಗಾರ ಶಿಲ್ಪಗಳು ಸುಮಾರು ಕ್ರಿ.ಶ. ೫೦೦ ರಿಂದ ಇಂದಿನವರೆವಿಗೂ ಕರ್ನಾಟಕದ ಬಹುತೇಕ ಎಲ್ಲ ದೇವಾಲಯಗಳಲ್ಲಿ ಕಂಡುಬರುತ್ತವೆ. ವಿಸ್ತೃತವಾಗಿ ಈ ಪ್ರಕಾರದ ಶಿಲ್ಪಗಳನ್ನು ಬಾದಾಮಿ ಚಾಲುಕ್ಯರ ಕಾಲದ ದೇವಾಲಯಗಳಲ್ಲಿ ನೋಡಬಹುದು. ಬಾದಾಮಿ ಚಾಲುಕ್ಯರ ನಂತರ ಬಂದ ರಾಜ ವಂಶಗಳು ಕಟ್ಟಿಸಿರುವ ದೇವಾಲಯಗಳಲ್ಲಿಯೂ ಕೂಡ ಶೃಂಗಾರ ಶಿಲ್ಪಗಳು

ಕೆತ್ತಲ್ಪಟ್ಟಿವೆ. ಹೊಯ್ಸಳರ ಕಾಲದಲ್ಲಿಯೂ ಸಂಖ್ಯಾ ದೃಷ್ಟಿಯಿಂದ ಹೇರಳವಾಗಿಯೂ ಹಾಗೂ ಸೂಕ್ಷ್ಮ ಕುಸುರಿ ಕೆಲಸದಿಂದ ಕೆತ್ತಿರುವುದು ಕಂಡುಬರುತ್ತದೆ.

ಚಾಲುಕ್ಯರ ಕಾಲದ ಬಾದಾಮಿ ಗುಹಾಂತರ ದೇವಾಲಯಗಳು ಹಾಗೂ ಐಹೊಳೆ, ಪಟ್ಟದಕಲ್ಲಿನಲ್ಲಿನ ದೇವಾಲಯಗಳಲ್ಲಿ ಕಂಡುಬರುವ ಶೃಂಗಾರ ಶಿಲ್ಪಗಳು ತಾಂತ್ರಿಕವಾಗಿಯೂ, ಪ್ರಮಾಣಬದ್ಧವಾಗಿಯೂ ಮತ್ತು ಸೃಜನಾತ್ಮವಾಗಿಯೂ ಕೆತ್ತಲ್ಪಟ್ಟಿವೆ. ಬಾದಾಮಿಯ ಗುಹಾಂತರ ದೇವಾಲಯಗಳಲ್ಲಿ ಮಿಥುನ ಶೃಂಗಾರ ಶಿಲ್ಪಗಳು ಮತ್ತು ವಿವಿಧ ಭಂಗಿಗಳಲ್ಲಿರುವ ಅಪ್ಸರಾ (ನಾಯಿಕಾ) ಶೃಂಗಾರ ಶಿಲ್ಪಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ದೇವಾಲಯದ ಕಂಭಗಳ ಮೇಲೆ ಹಾಗೂ ಛಾವಣಿಯ ಮೇಲೆ ಈ ರೀತಿಯ ಶಿಲ್ಪಗಳನ್ನು ಕೆತ್ತಲಾಗಿವೆ. ಕಂಬಗಳ ಮೇಲೆ ವೃತ್ತಾಕಾರದ ಅಲಂಕಾರಿಕದಲ್ಲಿ ರಚಿತವಾದ ಮಿಥುನ ಶಿಲ್ಪಗಳಿವೆ. ವೃತ್ತಾಕಾರವು ಬಹುಶಃ ಸಾಂಕೇತಿಕವಾಗಿ ಜೀವನ ಚಕ್ರವನ್ನು ಪ್ರತಿನಿಧಿಸುತ್ತದೆ. ಬಾದಾಮಿಯ ಮಿಥುನ ಶೃಂಗಾರ ಶಿಲ್ಪಗಳಲ್ಲಿ ಕಂಡುಬರುವ ಮತ್ತೊಂದು ವಿಶೇಷತೆಯೆಂದರೆ ಮಿಥುನ ದಂಪತಿಗಳ ಜೊತೆಗೆ ಸೇವಕಿ-ಸೇವಕರನ್ನೂ ಕೆತ್ತಲಾಗಿದೆ. ಸಹಜತೆಯನ್ನು ಮೂಡಿಸಲು ಸೇವಕ-ಸೇವಕಿಯರ ಕೈಯಲ್ಲಿ ಮಧುಪಾತ್ರೆ ಅಥವಾ ಹೂ ಗೊಂಚಲನ್ನು ತೋರಿಸಲಾಗಿದೆ, ಮತ್ತು ಸೇವಕಿಯರು ಲಜ್ಜೆಯಿಂದ ಮುಖ ತಿರುವಿರುವಂತೆ ಚಿತ್ರಿಸಿ ಶಿಲ್ಪದಲ್ಲಿ ಜೀವಂತಿಕೆಯನ್ನು ಮತ್ತು ಶೃಂಗಾರದ ಸಾಂದರ್ಭಿಕ ತೀವ್ರ ಭಾವನೆಯನ್ನು ಉದ್ದೀಪನಗೊಳಿಸಲಾಗಿದೆ. ಬಾದಾಮಿಯ ಮೂರನೆಯ ಗುಹೆಯಲ್ಲಿ ಚಿತ್ರಿತವಾಗಿರುವ ಅಪ್ಸರೆಯ ಶಿಲ್ಪವೊಂದು, ಸುಂದರ ಸ್ತ್ರೀಯೊಬ್ಬಳ ಪ್ರಮಾಣಬದ್ಧ ಹಾಗೂ ಲಾಲಿತ್ಯಪೂರ್ಣವಾಗಿರುವಂತಹ ಭಂಗಿಯಲ್ಲಿ ನಿಂತಿರುವಂತೆ ಕೆತ್ತಲಾಗಿದೆ ಮತ್ತು ಆಕೆಯು ತಾಡಪತ್ರವನ್ನು ಓದುತ್ತಿರುವಂತೆಯೂ ಚಿತ್ರಿತವಾಗಿದೆ. ಸಹಜವಾಗಿ ಆ ಪತ್ರವು ಆಕೆಯ ಪ್ರಿಯಕರನೆಂದು ಊಹಿಸಬಹುದಾಗಿದೆ. ಹೀಗಾಗಿ ಈ ಶಿಲ್ಪದಲ್ಲಿ ಶೃಂಗಾರದ ಭಾವವು ಬಹಳ ರಸಿಕತೆಯಿಂದ ಚಿತ್ರಿಸಲಾಗಿದೆ. ಕಾಮಸೂತ್ರದಲ್ಲಿ ವಿವರಿಸಿರುವ ಶೃಂಗಾರದ ಪ್ರಥಮ ಹಂತದ ಶಿಲ್ಪಗಳು ಬಾದಾಮಿಯ ದೇವಾಲಯಗಳಲ್ಲಿ ಕಂಡುಬರುತ್ತವೆ. ನೇರವಾದ ಮೈಥುನದಲ್ಲಿ ತೊಡಗಿರುವ ಶಿಲ್ಪಗಳು ಅಷ್ಟಾಗಿ ಕಂಡುಬರುವುದಿಲ್ಲ. ಬಾದಾಮಿಯ ದೇವಾಲಯಗಳಲ್ಲಿ ವಿಷ್ಣು-ಲಕ್ಷ್ಮೀ, ಶಿವ-ಪಾರ್ವತಿ, ಕಾಮ-ರತಿ ಮುಂತಾದ ದೇವ ದೇವತೆಯರ ಶೃಂಗಾರ ಶಿಲ್ಪಗಳಿವೆ. ಗಂಧರ್ವ ಮತ್ತು ವಿದ್ಯಾಧರರನ್ನು ಮೋಡಗಳಲ್ಲಿ ತೇಲುತ್ತಿರುವಂತೆ ತೋರಿಸಲಾಗಿದೆ. ಇದರಿಂದ ದೇವ ದಂಪತಿಗಳೂ ಕೂಡಾ ಕಲಾವಿದನ ಕಲ್ಪನೆಯಲ್ಲಿ ಮಿಥುನ ಶಿಲ್ಪಗಳೇ ಆಗಿ ಬಿಂಬಿಸಲ್ಪಟ್ಟಿವೆ.

ಬಾದಾಮಿಯಿಂದ ಹತ್ತು ಮೈಲು ದೂರದಲ್ಲಿ ಇರುವ ಪಟ್ಟದಕಲ್ಲು ಕೂಡ ಚಾಲುಕ್ಯರ ವಾಸ್ತು ಮತ್ತು ಶಿಲ್ಪ ಶೈಲಿಗಳಿಗೆ ಹೆಸರುವಾಸಿಯಾಗಿದೆ. ಪಾಪನಾಥ ದೇವಾಲಯ, ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳಲ್ಲಿ ಅನೇಕ ಶೃಂಗಾರ ಶಿಲ್ಪಗಳನ್ನು ಚಾಲುಕ್ಯ ರೂವಾರಿಗಳು ಕೆತ್ತಿದ್ದಾರೆ. ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳ ಸಭಾಮಂಟಪದಲ್ಲಿ ಅನೇಕ ಮಿಥುನ ಶೃಂಗಾರ ಶಿಲ್ಪಗಳನ್ನು ನೆಲದ ಹಂತದಲ್ಲಿಯೇ ಕೆತ್ತಲಾಗಿದೆ. ಮೇಲ್ಸ್ತರಗತಿಯಲ್ಲಿರುವಂತೆ ತೋರುವ ಗಂಡು ಹೆಣ್ಣು ಶಿಲ್ಪಗಳ ಮುಖದಲ್ಲಿ ಶೃಂಗಾರದ ಭಾವವು ವ್ಯಕ್ತವಾಗುತ್ತದೆ ಮತ್ತು ಅರೆ ಕಾಮುಕತೆಯನ್ನು ಬಿಂಬಿಸುತ್ತವೆ. ಚಾಲುಕ್ಯರ ಮತ್ತೊಂದು ಪ್ರಮುಖ ಪ್ರದೇಶ ಮಲಪ್ರಭಾ ನದಿಯ ದಡದಲ್ಲಿ ಇರುವ ಐಹೊಳೆ. ಐಹೊಳೆಯ ದುರ್ಗಾ ದೇವಾಲಯದ ಕಂಬಗಳ ಮೇಲೆ ಗಂಧರ್ವ ದಂಪತಿಯರನ್ನು ಹಾಗೂ ಸ್ತ್ರೀ ಶಿಲ್ಪಗಳನ್ನು ಸೊಗಸಾಗಿ ಮತ್ತು ಪ್ರಮಾಣ ಬದ್ಧವಾಗಿ ಕೆತ್ತಲಾಗಿದೆ. ಈ ಆಕೃತಿಗಳಲ್ಲಿ ಹಾರುತ್ತಿರುವ ದೃಶ್ಯಗಳು ಇವರನ್ನು ದೈವೀಕರೆಂದು ತೋರಿಸುತ್ತವೆ. ಕಲಾವಿದನು – ಈ ಭಾವನೆಯನ್ನು ಅತ್ಯಂತ ನೈಜವಾಗಿ ಆಕೃತಿಗಳನ್ನು ಮೋಡಗಳ ಮಧ್ಯ ಇರುವಂತೆ ಬಿಂಬಿಸಿದ್ದಾನೆ. ಐಹೊಳೆಯ ಮತ್ತೊಂದು ದೇವಾಲಯ ಹುಚ್ಚಪ್ಪಯ್ಯ ಮಠ ದೇವಾಲಯದಲ್ಲಿ ಕೇವಲ ಶೃಂಗಾರದ ಮಿಥುನ ಶಿಲ್ಪಗಳನ್ನು ಮಾತ್ರ ಕೆತ್ತಲಾಗಿದೆ. ಇವುಗಳನ್ನು ಆಲಿಂಗನದಲ್ಲಿ ಮತ್ತು ಚುಂಬನದಲ್ಲಿರುವಂತೆ ಬಿಂಬಿಸಿರುವುದು ಶಿಲ್ಪಗಳ ನೈಜತೆಗೆ ಹೆಚ್ಚಿನ ಒತ್ತು ನೀಡುತ್ತದೆ. ವಾತ್ಸಾಯನನ ಕಾಮಸೂತ್ರದ ಭಂಗಿಗಳನ್ನು ಇಲ್ಲಿ ಕೆತ್ತಲಾಗಿದೆ. ಈ ಶಿಲ್ಪಗಳು ನಂತರದ ಕಲ್ಯಾಣ ಚಾಲುಕ್ಯ ಕಾಲದ ದೇವಾಲಯಗಳಲ್ಲೂ ಕೂಡಾ ರಚನೆಗೊಂಡು ಬೆಳವಣಿಗೆ ಹೊಂದಿವೆ. ದೇವಾಲಯದ ಹೊರಭಿತ್ತಿಯ ಮೇಲೆ – ಕಂಬಗಳ ಕೆಳಭಾಗದಲ್ಲಿ ಇಂತಹ ಶಿಲ್ಪಗಳ ವಿಭಿನ್ನ ವಿನ್ಯಾಸ ಹಾಗೂ ಸಂಯೋಜನೆಯೊಡನೆ ಕಂಡುಬರುತ್ತವೆ.

ಹೊಯ್ಸಳರ ಕಾಲದ ಶಿಲ್ಪ ವೈಭವವನ್ನು ನಾವು ಪ್ರಮುಖವಾಗಿ ಬೇಲೂರು, ಹಳೇಬೀಡು, ಸೋಮನಾಥಪುರ ಮುಂತಾದ ದೇವಾಲಯಗಳಲ್ಲಿ ಕಾಣಬಹುದು. ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿ ಕಂಡುಬರುವ ಅಪ್ಸರಾ ಶಿಲ್ಪಗಳು ವಾಸ್ತು ವೈವಿಧ್ಯತೆಯಿಂದ ಹಾಗೂ ಸೂಕ್ಷ್ಮ ಅಲಂಕಾರಗಳಿಂದ ಜಗತ್ ಪ್ರಸಿದ್ಧವಾಗಿವೆ. ಹೀಗೆ ಬಿಂಬಿಸಲ್ಪಟ್ಟ ಅಪ್ಸರಾ ಶಿಲ್ಪಗಳು[1] ಭರತನ ನಾಟ್ಯಶಾಸ್ತ್ರದಲ್ಲಿ ವಿವರಿಸಿರುವ ನಾಟ್ಯ ಭಂಗಿಗಳನ್ನನುಸರಿಸಿ ನಿರ್ಮಿತವಾಗಿವೆ ಮತ್ತು ವಿವಿಧ

ರೀತಿಯ ವಸ್ತ್ರ, ಆಭರಣಗಳನ್ನು ಧರಿಸಿರುವಂತೆ ತೋರಿಸಿರುವ ಉತ್ಕೃಷ್ಟ ಕುಸುರಿ ಕೆಲಸವು ಕಂಡುಬರುತ್ತದೆ. ಅಪ್ಸರೆಯರು ಅಥವಾ ನಾಯಕಿಯರ ಶಿಲ್ಪಗಳಲ್ಲಿ ವಸ್ತ್ರ ಆಭರಣಗಳಲ್ಲದೇ ವೃಕ್ಷ ಬಳ್ಳಿ, ಹೂವುಗಳು, ಹಣ್ಣುಗಳು, ಪಕ್ಷಿ ಮುಂತಾದವುಗಳ ಚಿತ್ರಣವಿದ್ದು ಅತೀ ಸೂಕ್ಷ್ಮಾತಿಸೂಕ್ಷ್ಮ ಕೆತ್ತನೆಗಳ ವಿವರಗಳಿವೆ. ಇಲ್ಲಿನ 'ದರ್ಪಣ ಸುಂದರಿ' ಶಿಲ್ಪವು ಅತ್ಯಂತ ಸುಂದರ ಶಿಲ್ಪವಾಗಿದೆ. ಈ ಶಿಲ್ಪದಲ್ಲಿ ಆಭರಣಗಳಿಂದ ಅಲಂಕೃತಗೊಂಡ ಸುಂದರಿಯೊಬ್ಬಳು ತನ್ನ ಸೌಂದರ್ಯ ವನ್ನು ತನ್ಮಯಳಾಗಿ ಕನ್ನಡಿಯಲ್ಲಿ ನೋಡಿಕೊಳ್ಳುತ್ತಿದ್ದಾಳೆ. 'ಶುಕಭಾಷಿಣಿ' ಎಂಬ ಮತ್ತೊಂದು ಶಿಲ್ಪದಲ್ಲಿ ಗಿಳಿಯೊಂದಿಗೆ ಮಾತನಾಡುತ್ತಿರುವಂತೆ ಸುಂದರ ಸ್ತ್ರೀಯೊಬ್ಬಳನ್ನು ಕೆತ್ತಲಾಗಿದೆ. ಆಕೆ ನಿಂತಿರುವ ಭಂಗಿ ಲಾಲಿತ್ಯ ಪೂರ್ಣವಾಗಿದ್ದು ಹೊಯ್ಸಳ ಶಿಲ್ಪ ಶೈಲಿಗೆ ಅತ್ಯುತ್ತಮ ಉದಾಹರಣೆಯಾಗಿದೆ. ಇನ್ನೊಂದು ಶಿಲ್ಪವೊಂದರಲ್ಲಿ ಅಪ್ಸರೆಯ ವಸ್ತ್ರವನ್ನು ಓಡಿದೆಳೆಯುತ್ತಿರುವ ಕಪಿಯ ಕೆತ್ತನೆ ಇದೆ. ಇದು ಶೃಂಗಾರ ರಸದೊಂದಿಗೆ ಹಾಸ್ಯರಸವನ್ನು ಸಮರ್ಪಕವಾಗಿ ಸಮ್ಮಿಳನಗೊಳಿಸುವ ತಂತ್ರಗಾರಿಕೆಗೆ ಉತ್ತಮ ಉದಾಹರಣೆಯಾಗಿದೆ.

ಹಳೇಬೀಡು ಅಥವಾ ದ್ವಾರಸಮುದ್ರವೂ ಹೊಯ್ಸಳರ ಕಾಲದ ಮತ್ತೊಂದು ಪ್ರಮುಖ ಕೇಂದ್ರವೂ ಮತ್ತು ಅವರ ರಾಜಧಾನಿಯಾಗಿದ್ದು ಇಲ್ಲಿ ದೇವಾಲಯಗಳು ನಿರ್ಮಿಸಲ್ಪಟ್ಟಿವೆ. ಕೇತಮಲ್ಲನೆಂಬಾತನು ಕಟ್ಟಿಸಿರುವ ಹೊಯ್ಸಳೇಶ್ವರ ದೇವಾಲಯವು ಪ್ರಮುಖವಾಗಿದ್ದು ಇಲ್ಲಿಯೂ ಕೆಲವು ಮಿಥುನದ, ಶೃಂಗಾರದ ಉಬ್ಬು ಶಿಲ್ಪದ ಪಟ್ಟಿಗಳು ಕಾಣಸಿಗುತ್ತವೆ. ದಂಪತಿಯರು ಮತ್ತು ಅಪ್ಸರೆಯರ ಶಿಲ್ಪಗಳು ಅಸಂಖ್ಯಾತವಾಗಿ ಅಲಂಕಾರಿಕ ಪಟ್ಟಿಯಲ್ಲಿ ಕಂಡುಬರುತ್ತವೆ.

ಹೊಯ್ಸಳ ಕಾಲದ ಮತ್ತೊಂದು ಪ್ರಮುಖ ಕೇಂದ್ರವಾಗಿದ್ದ ಸೋಮನಾಥಪುರವು ಮೈಸೂರಿನಿಂದ ಸುಮಾರು ೩೦ ಮೈಲು ದೂರದಲ್ಲಿದೆ. ಇಲ್ಲಿಯ ದೇವಾಲಯದ ದಕ್ಷಿಣ ಭಾಗದಲ್ಲಿ ಶೃಂಗಾರದ ಶಿಲ್ಪಗಳು ಕಾಮಸೂತ್ರದ ಭಂಗಿಯಲ್ಲಿ ಕೆತ್ತಲ್ಪಟ್ಟಿವೆ. ಆದರೆ ಈ ಶಿಲ್ಪಗಳಲ್ಲಿ ಹೊಯ್ಸಳ ಶಿಲ್ಪಗಳಲ್ಲಿ ಇರುವ ಸಹಜವಾದ ಕುಸುರಿ ಕೆಲಸವು ಕಂಡುಬರುವುದಿಲ್ಲ. ಒಟ್ಟಾರೆಯಾಗಿ ನೋಡಿದಾಗ ಹೊಯ್ಸಳರ ಕಾಲದಲ್ಲಿ ದೇವಾಲಯಗಳ ಅಲಂಕಾರಗಳಲ್ಲಿ – ಅಪ್ಸರಾ ಮತ್ತು ಮಿಥುನ ಶಿಲ್ಪಗಳು ಅಗಾಧ ಸಂಖ್ಯೆಯಲ್ಲಿ ಕಂಡುಬರುತ್ತವೆ. ಈ ಶಿಲ್ಪಗಳು ನಂತರದ ಕಾಲಗಳಲ್ಲಿ ಅಷ್ಟೊಂದು ಪ್ರಮಾಣದಲ್ಲಿ ಕಂಡುಬರುವುದಿಲ್ಲ. ಇದಕ್ಕೆ ಹಲವಾರು ಕಾರಣಗಳು ಇದ್ದಿರಬಹುದು. ಅದಾಗ್ಯೂ – ವಿಜಯನಗರದ ಕಲೆಯಲ್ಲಿ ಈ ಶಿಲ್ಪಗಳು ಬಳಕೆಯಾಗಿರುವುದನ್ನು ಹಲವಾರು ಉದಾಹರಣೆಗಳಿಂದ ಕಾಣಬಹುದು.

## ಆಧಾರಸೂಚಿ ಮತ್ತು ಟಿಪ್ಪಣೆಗಳು


೧. Edward Lucie Smith., *Eroticism in Western Art*, Thames and Hudson, London, 1972, Page 12.

೨. Devanga Desai., *Erotic Sculpture of India*, Page 10.

೩. Ibid.

೪. Francis Leeson., *Kamashilpa* - P.S. Taraporevala Sons & Co. Pvt., Pae 31 and 34.

೫. *Erotic Sculptures of India*., pp. citi, Page 21 and 22.

೬. Randhawa. M.S., *Indian Sculpture* - Page 280.

ಡಾ. ಶೋಭಾ ಮಹೇಶ್*

# ಶಿಲ್ಪಕಲೆಯಲ್ಲಿ ಉಡುಪಿನ ವೈವಿಧ್ಯ (ಕೆಲವು ವಿನ್ಯಾಸಗಳು)

ಕರ್ನಾಟಕದ ವಿವಿಧ ಕಾಲದ ಶಿಲ್ಪಗಳಲ್ಲಿ ವೈವಿಧ್ಯಮಯವಾದ ಉಡುಪಿನ ವಿನ್ಯಾಸಗಳು ಕಾಣಸಿಗುತ್ತವೆ. ೧೦–೧೧ನೇ ಶತಮಾನಗಳಲ್ಲಿ ಅವುಗಳಲ್ಲಿ ಕಂಡುಬರುವ ಈವರೆಗೆ ಕಲಾ ಇತಿಹಾಸಕಾರರು ಗಮನಿಸದ ಆಯ್ದ ಮೂರು ವಿನ್ಯಾಸಗಳನ್ನು ಇಲ್ಲಿ ಪರಿಶೀಲಿಸಿದೆ. ವಿಷಯಕ್ಕೆ ಪೂರಕವಾಗಿ ಹೊರ ರಾಜ್ಯಗಳ ಒಂದೆರಡು ಶಿಲ್ಪಗಳನ್ನು ಉದಾಹರಿಸಿದೆ.

## ಅಧೋವಸ್ತ್ರ

ಭಾರತೀಯ ಶಿಲ್ಪಗಳಲ್ಲಿ ಅಧೋವಸ್ತ್ರ ಇಲ್ಲವೆಂಬ ಭಾವನೆ ಅನೇಕರಲ್ಲಿದೆ. ಆದರೆ ಅವು ಇದ್ದೂ ಇಲ್ಲದಂತಿರುವುದೇ ಅಧಿಕ. ಕಾಳಿದಾಸನ ಮಾಳವಿಕಾಗ್ನಿಮಿತ್ರ ಹಾಗೂ ೩ನೇ ಸೋಮೇಶ್ವರನ ವಿಕ್ರಮಾಂಕಾಭ್ಯುದಯಗಳಲ್ಲಿ ಮತ್ತು ಕೆಲವು ಪ್ರವಾಸಿಗಳ ಲೇಖನಗಳಲ್ಲಿ ಪಾರದರ್ಶಕ ಉಡುಪುಗಳ ಬಗ್ಗೆ ಉಲ್ಲೇಖವಿದೆ. ಇಲ್ಲಿ ಗದುಗಿನ ಸರಸ್ವತಿ ಹಾಗೂ ಬೆಳಗಾವಿ ಜಿಲ್ಲೆಯ ರಾಯಬಾಗದ ಕಾಳಿಯ ಚಿತ್ರಗಳನ್ನು ನೀಡಿದೆ. ಉಡುಪು ಮೈಗೆ ಹತ್ತಿದಂತಿದ್ದು ಅವುಗಳ ಮೇಲಿನ ವಿನ್ಯಾಸದಿಂದಷ್ಟೇ ಗುರುತಿಸಬಹುದಾಗಿದೆ. ಮಥುರಾದ ಎರಡು ಶಿಲ್ಪಗಳು ಹಾಗು ಒರಿಸ್ಸಾದ ರಾಜಾ ರಾಣಿ ದೇವಾಲಯದ ಶಿಲ್ಪಗಳಲ್ಲಿ ಕಟೀಬಂಧದ ಮೇಲ್ಭಾಗದಲ್ಲಿ ಉಡುಗೆಯನ್ನು ಕಾಣಬಹುದು. ಇಲ್ಲಿ ಉಡುಪನ್ನು ಧರಿಸಿ ಕಟೀಬಂಧದಿಂದ ಬಂಧಿಸಿಕೊಂಡಿರುವುದು ಸ್ಪಷ್ಟವಾಗಿದ್ದು ಕಾಲಿನಿಂದ ಸೊಂಟದವರೆಗೆ ಇಂದಿನ ಕಮೀಜನ್ನು ಹೋಲುವಂತೆ, ಎರಡೂ ಕಾಲುಗಳಿಗೂ ಪ್ರತ್ಯೇಕವಾಗಿ ಕೊಳವೆಯಾಕಾರದಲ್ಲಿದ್ದು ಕಾಲ ಕೆಳಗಿನಿಂದ ಧರಿಸಿಕೊಂಡು ಸೊಂಟದ ಬಳಿ ಕಟೀಬಂಧದಿಂದ ಹೊಂದಿಸಿಕೊಂಡಂತಿದೆ. ಕಟೀಬಂಧದ ಮೇಲೆ ಬಟ್ಟೆಯ ಅಂಚು ಕಂಡುಬರುತ್ತದೆ. ಸಿರುವತ್ತಿ, ಜಲಸಂಗ್ವಿ, ಬೇಲೂರುಗಳ ಶಿಲ್ಪಗಳಲ್ಲಿ ಕಟಿಯ ಕೆಳಭಾಗದಲ್ಲಿ ಉಡುಪು ಸ್ಪಷ್ಟವಾಗಿ ಗೋಚರಿಸದಿದ್ದರೂ ಕಟೀಬಂಧದ ಮೇಲುಭಾಗದಲ್ಲಿ ವಸ್ತ್ರದ ಅಂಚು ಕಂಡುಬರುವುದರಿಂದ ಕೆಳಭಾಗದಲ್ಲಿಯೂ ವಸ್ತ್ರವಿದೆಯೆಂದು ಊಹಿಸಬಹುದಾಗಿದೆ.

## ಯೋಗಪಟ್ಟ

ತಪಸ್ವಿಗಳು, ದೇವಾನುದೇವತೆಗಳು ಯೋಗಮುದ್ರೆಯಲ್ಲಿ ಕುಳಿತಿರುವಾಗ ಮೊಳಕಾಲುಗಳ ಮೇಲೆ ಯೋಗಬಂಧವಿರುವುದು ಕಾಣಬಹುದು. ಇಲ್ಲಿ ತಮಿಳುನಾಡಿನ ಋಷಿಯೊಬ್ಬನ ಚಿತ್ರ, ಹೊಸಹೊಳಲಿನ ನರಸಿಂಹ ಹಾಗು ಜೈನ ಚಿಕಣಿ ಚಿತ್ರವೊಂದನ್ನು ನೀಡಿದೆ. ಇವರುಗಳು ಪಟ್ಟಬಂಧ ಧರಿಸಿ ತಪಸ್ಸಿನಲ್ಲಿ ನಿರತರಾಗಿದ್ದಾರೆ. ಕೆಲವು ಶಿಲ್ಪಗಳಲ್ಲಿ ಉದ್ದನೆಯ ವಸ್ತ್ರವನ್ನು ಸೊಂಟದ ಎರಡೂ ಬದಿಗೆ ಸಿಕ್ಕಿಸಿಕೊಂಡಿದ್ದು ಕಾಲುಗಳ ಬಳಿಯಲ್ಲಿ ಅರೆ ವೃತ್ತಾಕಾರವಾಗಿ ಇರುವಂತೆ ರಚಿಸಲಾಗಿರುತ್ತದೆ. ಬಾದಾಮಿಯ ವರಾಹ, ಕಲ್ಯಾಣಿ ಚಾಳುಕ್ಯರ ಸಂಗೀತಗಾರ್ತಿ ಹಾಗೂ ಮಂಡ್ಯ ಜಿಲ್ಲೆಯ ಗೋವಿಂದನಹಳ್ಳಿಯ ಎರಡು ಶಿಲ್ಪಗಳನ್ನು ಉದಾಹರಿಸಿದೆ. ಮೇಲೆ ಹೇಳಿದಂತೆ ಈ ವ್ಯಕ್ತಿಗಳು ಅರೆ ವೃತ್ತಾಕಾರದ ವಸ್ತ್ರ ಧರಿಸಿದ್ದಾರೆ. ಈ ವ್ಯಕ್ತಿಗಳೆಲ್ಲ ನಿಂತಿದ್ದು ಯೋಗಮುದ್ರೆಯಲ್ಲಿ ಕುಳಿತಾಗ ಈ ವಸ್ತ್ರವನ್ನು ಪಟ್ಟಬಂಧವಾಗಿ ಮೊಳಕಾಲಿಗೆ ಅಳವಡಿಸಿಕೊಳ್ಳುವಂತೆ ಕಂಡುಬರುತ್ತದೆ. (ಹೊಯ್ಸಳರ ಶಿಲ್ಪಗಳಲ್ಲಿ ಯೋಗಿನಿ, ನಾಗಿನಿ, ದೇವದಾಸಿ ಇತ್ಯಾದಿಗಳಿಗೂ ಮೇಲಿನ ರೀತಿಯಲ್ಲಿ ವಸ್ತ್ರ ವಿನ್ಯಾಸವಿದ್ದು ಇವರುಗಳೂ ಯೋಗನಿರತರೆಂಬ ಭಾವನೆ ಇದ್ದಿರಬಹುದು)

ಕೋಲಾರ ಜಿಲ್ಲೆಯ ಕುರುಡುಮಲೈನ ಸೋಮೇಶ್ವರ ದೇವಾಲಯದಲ್ಲಿ ಸೊಂಟಪಟ್ಟಿಯನ್ನು ಯೋಗಬಂಧದಂತೆ ಕಾಲಿಗೆ ಅಳವಡಿಸಿಕೊಂಡಿದೆ. ಲೇಪಾಕ್ಷಿಯ ಶಿಲ್ಪದಲ್ಲಿ ಹುಲಿಯ ಮೇಲೆ ಕುಳಿತ ಯತಿಯೊಬ್ಬ ಒಂದು ಕಾಲನ್ನು ಮೇಲೆ ಮಡಿಸಿ ಅದಕ್ಕೆ ಮಾತ್ರ ಪಟ್ಟಬಂಧವನ್ನು ಅಳವಡಿಸಿಕೊಂಡಿದ್ದಾನೆ. ಶಾಸ್ತ್ರಗ್ರಂಥಗಳಲ್ಲಿ ಈ ರೀತಿಯ ವಸ್ತ್ರವಿನ್ಯಾಸದ ಬಗ್ಗೆ ವಿವರಗಳಿಲ್ಲ. ಇದು ವೈಜಯಂತೀಮಾಲೆ ಅಲ್ಲ. ಶಿಲ್ಪಗಳಲ್ಲಿ ವೈಜಯಂತೀಮಾಲೆಯನ್ನು ಪ್ರತ್ಯೇಕವಾಗಿ ಗುರುತಿಸಬಹುದು. ಈ ಕಾರಣದಿಂದಾಗಿ ಮೇಲೆ ಹೇಳಿದ ವಸ್ತ್ರ ವಿಶೇಷಗಳು ಯೋಗಬಂಧವಾಗಿರಬಹುದಾದ ಸಾಧ್ಯತೆಯಿದೆ. ಇಂದಿನ ಯೋಗಾಭ್ಯಾಸದಲ್ಲಿ ಈ ಬಗೆಯ ಪದ್ಧತಿ

* ಇತಿಹಾಸ ಉಪನ್ಯಾಸಕಿ, ಸರ್ಕಾರಿ ಪದವಿ ಪೂರ್ವ ಕಾಲೇಜು, ಅಮೃತೂರು, ತುಮಕೂರು ಜಿಲ್ಲೆ.



ಖಜುರಾಹೊ



ಹೊಳೆ ಆಲೂರಿನ ಎರಡು ಶಿಲ್ಪಗಳು



ಕೋಲಾರಮ್ಮನ ಗಾರೆ ಶಿಲ್ಪ





ತಮಿಳುನಾಡಿನ ತಿರುತ್ತಣಿಯ ಎರಡು ಶಿಲ್ಪಗಳು

ಇಲ್ಲ. ಇದು ಸಿದ್ಧಯೋಗದ ಒಂದು ಪ್ರಕಾರವಿರಬಹುದೆಂದು ಯೋಗಾಚಾರ್ಯರ ಅಭಿಪ್ರಾಯ.

**ಕಂಚುಕ**

ಭಾರತೀಯ ಚಿತ್ರ ಶಿಲ್ಪಗಳಲ್ಲಿ ಸ್ತ್ರೀ ಪುರುಷರಿಬ್ಬರನ್ನೂ ತೆರೆದೆದೆಯಂತೆ ರೂಪಿಸಿರುವುದೇ ಅಧಿಕ. ಆದರೆ ಮಾತೃ ದೇವತೆಗಳಿಗೂ ಮೇಲುಡೆಗೂ ಸಂಬಂಧ ಕಲ್ಪಿಸಿದೆ. "ದಕ್ಷಿಣ ಭಾರತದಲ್ಲಿ ದುರ್ಗಿ ಮೊದಲಾದ ಮಾತೃದೇವತೆಗಳಿಗೆ ಕುಚಬಂಧಹಾಕಿರುವುದು ಮಾತೃವಿಗೂ ಹಾಲು ತುಂಬಿದ ಎದೆಗೂ ಸಂಬಂಧವಿದ್ದು ಪಯೋಧರದ ರಕ್ಷಣೆಗಾಗಿ ಇಂತಹ ವ್ಯವಸ್ಥೆ ಮಾಡಿಕೊಂಡಿದ್ದರು" ಎಂದು ಚಾರ್ಲ್ಸ್ ಫೇಬ್ರಿಯವರು ತಿಳಿಸುತ್ತಾರೆ. ಇಲ್ಲಿ ಖಜುರಾಹೊ, ಚಾಮರಾಜನಗರ ಜಿಲ್ಲೆಯ ಹೊಳೆ ಆಲೂರು, ಕೋಲಾರಮ್ಮ ದೇವಾಲಯದ ಗಾರೆಯ ಸಪ್ತಮಾತೃಕೆ ಹಾಗು ತಮಿಳು ನಾಡಿನ ತಿರುತ್ತಣ್ಣಿಯ ಮಾತೃಕಾ ಶಿಲ್ಪಗಳನ್ನು ನೀಡಿದೆ. ಗಂಗ, ಚೋಳರ ಕಾಲದಲ್ಲಿ ಸಪ್ತ ಮಾತೃಕೆಯರ ಅನೇಕ ಶಿಲ್ಪಗಳು ದೊರೆಯುತ್ತವೆಯಾದರೂ ಅವರೆಲ್ಲರಿಗೂ ಮೇಲುಡೆ ಕಡ್ಡಾಯವೆಂದೇನಲ್ಲ. ಕೆಲವೊಮ್ಮೆ ಪಟ್ಟಿಯಾ ಕಾರದ ಸ್ತನಬಂಧವಿದ್ದು ಭುಜದ ಮೇಲಿನಿಂದ ಹಾಯ್ದು ಇನ್ನೆರಡು ಪಟ್ಟಿಗಳು ಎದೆಯ ಭಾಗದಲ್ಲಿ ಬೆಸುಗೆ ಹಾಕಿದಂತೆ ಇದ್ದು ಒಟ್ಟು ರಚನೆ ಲೋಹದಿಂದ ತಯಾರಿಸಿದಂತಿದೆ. ಮೇಲುಡೆಗೆ 'ಕಂಚುಕ' ಎಂಬ ಪದವೂ ಇದ್ದು ಅದನ್ನು ಕಂಚಿನಿಂದ ತಯಾರಿಸಿರಬಹುದಾದ ಸಾಧ್ಯತೆಯಿದೆ. ಇಂಗ್ಲಿಶ್‌ನಲ್ಲಿಯೂ 'Brassiere' ಎಂಬ ಪದವು ಇದ್ದು ಅದನ್ನು 'Brass' ನಿಂದ ಎಂದರೆ ಕಂಚಿನಿಂದ ರೂಪಿಸಿರಬಹುದಾದ ಸಂಭವವಿದೆ. ಕಂಚುಕವು ಯೋಧರು ಧರಿಸುತ್ತಿದ್ದ ಲೋಹ ಕವಚವಾಗಿದ್ದು ನಂತರ ಸ್ತ್ರೀಯರ ಮೇಲುಡೆಗೆಗೆ ಅನ್ವಯಿಸಿರಬಹುದು. ತುಳುವರ ಆಚರಣೆಯಲ್ಲಿ ಮಾತೃ ದೇವತೆಗಳಿಗೆ ಮೊಲೆಕಟ್ಟು ಅತಿಮುಖ್ಯವಾದುದೆಂದೂ ಅದನ್ನು ಬೆಳ್ಳಿ ಅಥವ ಕಂಚಿನಿಂದ ತಯಾರಿಸಿ ಇತರ ವಸ್ತುಗಳೊಂದಿಗೆ ಭಂಡಾರದ ಮನೆಯಲ್ಲಿಟ್ಟು ಪೂಜಿಸುವ ರೆಂದೂ ಲೀಲಾಭಟ್ ಅವರು ತಿಳಿಸುತ್ತಾರೆ.

ಮನೋಜ್*

# ವಿದ್ಯಾಶಂಕರ ದೇವಾಲಯದ ಗಮನಾರ್ಹ ಶಿಲ್ಪಗಳು

ಶೃಂಗೇರಿಯ ವಿದ್ಯಾಶಂಕರ ದೇವಾಲಯವು ತನ್ನ ಶಿಲ್ಪಸೌಂದರ್ಯಕ್ಕೆ ಬಹಳ ಪ್ರಖ್ಯಾತವಾಗಿದೆ. ಹಲವು ವಿದ್ವಾಂಸರ ಗಮನವನ್ನು ತನ್ನತ್ತ ಸೆಳೆದುಕೊಂಡಿರುವ ಈ ದೇವಾಲಯದ ಬಗ್ಗೆ ಸಾಕಷ್ಟು ಚರ್ಚೆಗಳು ನಡೆದಿವೆ ಮತ್ತು ಲೇಖನಗಳು ಬಂದಿವೆ. ಆದರೆ ಕೆಲವು ವಿಶೇಷತೆಗಳನ್ನು ವಿದ್ವಾಂಸರು ಗುರುತಿಸದೆ ಬಿಟ್ಟಿದ್ದಾರೆ. ಆ ಅಂಶಗಳನ್ನು ಈ ಕೆಳಗೆ ಕ್ರೋಡೀಕರಿಸಲಾಗಿದೆ.

ಈ ದೇವಾಲಯದ ಶಿಲ್ಪಾವಳಿಯಲ್ಲಿ ಕೆಲವು ಗಮನಾರ್ಹ ಶಿಲ್ಪಗಳಿವೆ. ಇವು ಪುರಾಣ ಸನ್ನಿವೇಶಗಳನ್ನು ಪ್ರತಿಬಿಂಬಿಸುತ್ತವೆ. ಸಾಮಾನ್ಯವಾಗಿ ದೇವಾಲಯದ ಭಿತ್ತಿಯ ಶಿಲ್ಪಗಳ ಅಧ್ಯಯನವನ್ನು ಮಾಡುವಾಗ ನಾವು ಶಿಲ್ಪಶಾಸ್ತ್ರದ ಮತ್ತು ವಾಸ್ತು ಗ್ರಂಥಗಳಲ್ಲಿ ಉಕ್ತವಾಗಿರುವ ಮೂರ್ತಿಲಕ್ಷಣಗಳನ್ನು ಪರಿಗಣಿಸುತ್ತೇವೆ. ಆದರೇ ಹಲವಾರು ಸಂದರ್ಭಗಳಲ್ಲಿ ನಾವು ಪುರಾಣೋಕ್ತ ಘಟನೆಗಳನ್ನು ಸ್ಮರಿಸಬೇಕಾಗುತ್ತದೆ. ಏಕೆಂದರೆ ಭಿತ್ತಿಶಿಲ್ಪಗಳ ಮೂಲ ಉದ್ದೇಶ ಕೇವಲ ಅಲಂಕರಣ ಮಾತ್ರವಲ್ಲದೆ, ಬರುವ ಭಕ್ತರಿಗೆ ಪುರಾಣೇತಿಹಾಸಗಳ ಪರಿಚಯವನ್ನು ಮಾಡಿಸುವುದು ಸಹ. ಆದ್ದರಿಂದಲೆ ಶಿಲ್ಪಿಗೆ ಹೊರ ಭಿತ್ತಿಯ ಶಿಲ್ಪಗಳ ನಿರೂಪಣೆಯಲ್ಲಿ ಸಾಕಷ್ಟು ಸ್ವಾತಂತ್ರ್ಯವನ್ನು ಗಮನಿಸಬಹುದು. ಈ ವರ್ಗಕ್ಕೆ ಸೇರಿದ, ಅಂದರೆ ಪುರಾಣೋಕ್ತ ಸನ್ನಿವೇಶಗಳನ್ನು ಪ್ರತಿಬಿಂಬಿಸುವ ಶಿಲ್ಪಗಳು ಇಲ್ಲಿ ಗಮನಾರ್ಹವಾಗಿವೆ.

ಇಂತಹ ಶಿಲ್ಪಗಳ ಪೈಕಿ ಬಹಳ ಪ್ರಮುಖವಾದದ್ದೆಂದರೆ ದೇವಾಲಯದ ಉತ್ತರದ ಭಿತ್ತಿಯ ಮಧ್ಯಭಾಗದ ಓಸ್ಸರಿತದಲ್ಲಿ ಕೆತ್ತಲ್ಪಟ್ಟ ಸ್ವಾಭಿಷೇಕಮೂರ್ತಿಯದ್ದು (ನೋಡಿ ಚಿತ್ರ–೧). ಇದು ಶಿವ ಪುರಾಣದ ಸತೀ ಖಂಡದಲ್ಲಿ ಬರುವ ಸನ್ನಿವೇಶದ ದೃಶ್ಯ ರೂಪ. ಸತೀದೇವಿಯು ಯೋಗಾಗ್ನಿಯಲ್ಲಿ ದಗ್ಧವಾದ ನಂತರ ಅವಳ ಪಾರ್ಥಿವ ಶರೀರವನ್ನು ಹೆಗಲ ಮೇಲೆ ಹೊತ್ತು ಶಿವನು ಭ್ರಾಂತನಾಗಿ ತ್ರಿಲೋಕಗಳಲ್ಲೂ ಸಂಚರಿಸುತ್ತಿದ್ದನು. ಇದರಿಂದ ಭೀತರಾದ ದೇವತೆಗಳು ಅವನ ಭ್ರಾಂತಿಯ ಉಪಶಮನಕ್ಕೆ ವಿಷ್ಣುವನ್ನು ಪ್ರಾರ್ಥಿಸಿದಾಗ, ಅವನು ತನ್ನ ಚಕ್ರದಿಂದ ಸತೀ ಶರೀರವನ್ನು ಛಿದ್ರಗೊಳಿಸಿದನು. ಇದರಿಂದ ಸತಿಯ ಶರೀರದಿಂದ ಶಿವನು ಮುಕ್ತನಾದನೇ ಹೊರತು, ಅದರಿಂದುಂಟಾದ ತಪನದಿಂದ ಮುಕ್ತನಾಗಲಿಲ್ಲ. ಇದಕ್ಕೆ ಉಪಾಯವಾಗಿ ದೇವತೆಗಳು ಚಂದ್ರನಿಂದ ಉತ್ಪನ್ನವಾಗುವ ಅಮೃತಬಿಂದುಗಳನ್ನು ಕುಂಭಗಳಲ್ಲಿ ಶೇಖರಿಸಿ ತಂದುಕೊಡಲು, ಶಿವನು ಅದನ್ನು ತಾನೇ ತನ್ನ ಶರೀರದ ಮೇಲೆ ಸುರಿದುಕೊಂಡು ತಪನವನ್ನು ಉಪಶಮನ ಮಾಡಿಕೊಳ್ಳುವನು. ಈ ಸನ್ನಿವೇಶವನ್ನು ಶಿಲ್ಪಿಯು ಬಹಳ ಅಚ್ಚುಕಟ್ಟಾಗಿ ಕೆತ್ತಿದಾನೆ. ಸ್ವಾಭಿಷೇಕಮೂರ್ತಿಯು ತನ್ನ ಹತ್ತು ಕೈಗಳಲ್ಲಿ ಕಳಶಗಳನ್ನು ಹಿಡಿದಿದ್ದಾನೆ. ಪ್ರಾಯಶಃ ಇದು ಕಳಶಗಳನ್ನು ಸ್ವೀಕರಿಸಿ ತಾನೇ ಅಭಿಷೇಕವನ್ನು ಮಾಡಿಕೊಳ್ಳುತ್ತಿರುವ ಚಾಲನೆಯನ್ನು ಸೂಚಿಸುತ್ತಿರಬಹುದು. ಚಂದ್ರನ ಅಮೃತಬಿಂದುಗಳೆಂದು ಸೂಚಿಸುವ ಸಲುವಾಗಿ ಈ ಶಿಲ್ಪವನ್ನು ಚಂದ್ರಮಂಡಲದ ಮಧ್ಯದಲ್ಲಿ ಕೆತ್ತಲಾಗಿದೆ. ಈ ಶಿಲ್ಪದ ಕೋಷ್ಠಗಳ ಇಕ್ಕೆಲಗಳಲ್ಲೂ ದೇವತೆಗಳು ಕುಂಭಗಳನ್ನು ಹಿಡಿದು ನಿಂತಿದ್ದಾರೆ ಮತ್ತು ಕೊಡುತ್ತಿದಾರೆ. ಈ ಶಿಲ್ಪವನ್ನು ಕೆತ್ತಿರುವ ಕೋಷ್ಠವನ್ನು ರಥದ ಆಕಾರದಲ್ಲಿ ಕೆತ್ತಲಾಗಿದೆ. ಈ ರಥದ ಕುದುರೆಗಳು ಸಹ ಪಶ್ಚಿಮಾಭಿಮುಖವಾಗಿದ್ದು ಚಂದ್ರನ ಗತಿಯನ್ನು ಸೂಚಿಸುತ್ತದೆ. ಅಲ್ಲದೇ ಇದಕ್ಕೆ ಪೋಷಕವಾಗಿ ಈ ಶಿಲ್ಪವನ್ನು ಕೆತ್ತಿರುವ ಭಿತ್ತಿಯ ನೇರ ಹಿಂಭಾಗದ ಭಿತ್ತಿಯಲ್ಲಿ, ಅಂದರೆ ದಕ್ಷಿಣದ ಭಿತ್ತಿಯಲ್ಲಿ, ಗಾಯತ್ರಿಯ ಶಿಲ್ಪವನ್ನು ಕೆತ್ತಲಾಗಿದೆ (ನೋಡಿ ಚಿತ್ರ–೨). ಇಲ್ಲಿ ದೇವಿಯನ್ನು ಸೂರ್ಯಮಂಡಲದ ಮಧ್ಯದಲ್ಲಿ ಕುಳಿತಿರುವಂತೆ ಬಿಂಬಿಸಲಾಗಿದ್ದು, ಎರಡೂ ಪಾರ್ಶ್ವಗಳಲ್ಲಿ ಅರ್ಘ್ಯಪ್ರದಾನ ಮಾಡುತ್ತಿರುವ ದೇವತೆಗಳನ್ನು ಕೆತ್ತಲಾಗಿದೆ. ಈ ಶಿಲ್ಪದ ಕೋಷ್ಠಕ್ಕೂ ಸಹ ರಥದ ಆಕಾರವನ್ನೇ ನೀಡಲಾಗಿದೆ. ಇದು ಸೂರ್ಯನ ಗತಿಯನ್ನು ಸೂಚಿಸುತ್ತದೆ. ಒಟ್ಟಾರೆ ಇವೆರಡು ಅಪರೂಪವಾಗಿ ಕಂಡು ಬರುವ ಶಿಲ್ಪಗಳೇ ಸರಿ.

ಗರ್ಭಗೃಹದ ಪ್ರದಕ್ಷಿಣಾಪಥದ ಹೊರಭಿತ್ತಿಯಲ್ಲಿ ಸಾಲಾಗಿ ಕೆತ್ತಲಾದ ಭಿತ್ತಿ ಶಿಲ್ಪಗಳನ್ನು ಕಾಣಬಹುದು. ಇದರ ಜೋಡಣೆಯಲ್ಲಿ ಒಂದು ಕ್ರಮವನ್ನು ಅನುಸರಿಸಿದ್ದಾರೆ. ಈ ದೇವಾಲಯಕ್ಕೆ ನಾಲ್ಕು ಗರ್ಭಗೃಹಗಳಿವೆ. ಪ್ರಧಾನ

* ೨೫, ಕೆ.ಆರ್. ಸಿಂಧೆ ರಸ್ತೆ, ವಿ.ವಿ. ಪುರಂ, ಬೆಂಗಳೂರು – ೫೬೦ ೦೦೪.

ಗರ್ಭಗೃಹದಲ್ಲಿ ವಿದ್ಯಾಶಂಕರರ ಸಮಾಧಿ ಮತ್ತು ಲಿಂಗವನ್ನು ಪ್ರತಿಷ್ಠಿಸಲಾಗಿದೆ. ಉಳಿದ ಮೂರು ಗರ್ಭಗೃಹಗಳು ಪ್ರದಕ್ಷಿಣೆಯ ಕ್ರಮದಲ್ಲಿ ದಕ್ಷಿಣಕ್ಕೆ ಬ್ರಹ್ಮ, ಪಶ್ಚಿಮಕ್ಕೆ ವಿಷ್ಣು ಮತ್ತು ಉತ್ತರಕ್ಕೆ ಮಹೇಶ್ವರನ ಗರ್ಭಗೃಹಗಳಿವೆ. ಇವುಗಳಿಗೆ ಪ್ರತ್ಯೇಕವಾಗಿ ಪ್ರದಕ್ಷಿಣಾಪಥಕ್ಕೆ ಸೇರಿದಂತೆ ಮೂರು ಪ್ರವೇಶ ದ್ವಾರಗಳಿವೆ. ಈ ದ್ವಾರಗಳ ಇಕ್ಕೆಲಗಳಲ್ಲೂ ಹೊರಭಿತ್ತಿಯಲ್ಲಿ, ಆ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಲಾಗಿರುವ ಪ್ರಧಾನ ದೇವತೆಯ ಲೀಲಾಮೂರ್ತಿಗಳನ್ನು ಕೆತ್ತಲಾಗಿದೆ. ಬ್ರಹ್ಮನ ಗರ್ಭಗೃಹದ ದಿಕ್ಕಿನ ಭಿತ್ತಿಯಲ್ಲಿ ನವಬ್ರಹ್ಮರ ಶಿಲ್ಪಗಳನ್ನು ಕಾಣಬಹುದು. ಇದೂ ಸಹ ನಮಗೆ ಅಪರೂಪವಾಗಿ ಕಂಡು ಬರುವ ಶಿಲ್ಪಸಮೂಹ. ಅತ್ರಿ, ಆಂಗೀರಸ, ಪುಲಹ, ಪುಲಸ್ತ್ಯ, ಮರೀಚಿ, ದಕ್ಷ, ಕ್ರತು, ಭೃಗು ಮತ್ತು ವಸಿಷ್ಠ, ಇವರುಗಳು ನವಬ್ರಹ್ಮರು. ಪ್ರವೇಶ ದ್ವಾರದ ಎಡಪಾರ್ಶ್ವಕ್ಕೆ ಎರಡು ಮತ್ತು ಬಲಪಾರ್ಶ್ವಕ್ಕೆ ಏಳರಂತೆ ನವಬ್ರಹ್ಮರ ಶಿಲ್ಪಗಳನ್ನು ಕೆತ್ತಲಾಗಿದ್ದು, ಇವೆಲ್ಲದರ ಮೂರ್ತಿ ಲಕ್ಷಣಗಳು ಒಂದೇ ರೀತಿಯಾಗಿವೆ (ನೋಡಿ ಚಿತ್ರ-೩). ಎಲ್ಲ ಶಿಲ್ಪಗಳು ಸ್ಥಾನಕ ಚತುರ್ಭುಜಮೂರ್ತಿಗಳು, ಸಮಭಂಗಿಯಲ್ಲಿದೆ. ಮೇಲಿನ ಎರಡು ಕೈಗಳಲ್ಲಿ ಸ್ರುಕ್ ಮತ್ತು ಸ್ರುವಗಳನ್ನು ಹಿಡಿದು, ಕೆಳಗಿನ ಕೈಗಳಲ್ಲಿ ಅಭಯ ಮತ್ತು ವರದ ಮುದ್ರೆಗಳನ್ನು ಪ್ರದರ್ಶಿಸುತ್ತಿವೆ. ಇವುಗಳ ಪೀಠದಲ್ಲಿ ಹಂಸಗಳ ಬಿಂಬಗಳನ್ನು ಬಿಡಿಸಲಾಗಿದೆ.

ಪಶ್ಚಿಮದ ಭಿತ್ತಿಯು ವಿಷ್ಣುಗೃಹದ ದಿಕ್ಕಿನಲ್ಲಿರುವುದರಿಂದ ಇದರ ಹೊರಭಿತ್ತಿಯಲ್ಲಿ ದಶಾವತಾರದ ಮೂರ್ತಿಗಳನ್ನು ಕಾಣಬಹುದು. ಇವುಗಳ ಪೈಕಿ ಗಮನ ಸೆಳೆಯುವ ಶಿಲ್ಪವೆಂದರೆ, ಬೌದ್ಧಾವತಾರದ ಶಿಲ್ಪ. ಈ ಶಿಲ್ಪವನ್ನು ಸಮಭಂಗದಲ್ಲಿರುವ ಸ್ಥಾನಕ ತೀರ್ಥಂಕರನ ರೀತಿಯಲ್ಲಿ ಕೆತ್ತಲಾಗಿದೆ. ಇದರಿಂದ ವಿಜಯನಗರದ ಕಾಲದ ಹೊತ್ತಿಗೆ ಬುದ್ಧನ ಮೂರ್ತಿಶಿಲ್ಪದಲ್ಲಿ ಒಂದು ತೊಡಕು ಏರ್ಪಟ್ಟಿತ್ತು ಎಂಬ ವಾದ ದೃಢವಾಗುತ್ತದೆ. ಇಲ್ಲಿ ಬುದ್ಧನನ್ನು ನಗ್ನ ಮೂರ್ತಿಯಾಗಿ ಪ್ರತಿಬಿಂಬಿಸಿದ್ದಾರೆ. ಅಲ್ಲದೇ ಪೀಠದಲ್ಲಿ ಮೇಲಿನ ಶಿಲ್ಪವನ್ನು ಹೋಲುವ ನಾಲ್ಕು ಉಬ್ಬು ಶಿಲ್ಪಗಳನ್ನು ಕಾಣಬಹುದು. ಇದೂ ಸಹ ಪ್ರಾಯಶಃ ಜಿನಮತದ ಪಂಚ ಪರಮೇಷ್ಠಿಯ ಪರಿಕಲ್ಪನೆಯ ಪ್ರಭಾವವಿರಬಹುದು. ಇದರೊಂದಿಗೆ ಈ ಸಾಲಿನಲ್ಲಿ ಮತ್ಸ್ಯ ಮತ್ತು ಕೂರ್ಮಾವತಾರದ ಶಿಲ್ಪಗಳನ್ನು ಪ್ರಾಣಿರೂಪದಲ್ಲಿಯೇ ಬಿಂಬಿಸಿರುವುದು ವಿಶೇಷ. ಸಾಮಾನ್ಯ ವಾಗಿ ಹೊಯ್ಸಳರ (ಮತ್ತು ಕಲ್ಯಾಣಿ ಚಾಲುಕ್ಯರ) ಪ್ರಧಾನ ಶಿಲ್ಪಗಳ ಪ್ರಭಾವಳಿಯಲ್ಲಿ ಕಂಡುಬರುವ ಈ ಪ್ರಯೋಗ ಇಲ್ಲಿ ಭಿತ್ತಿಯಲ್ಲಿ ಕಾಣಬಹುದಾಗಿದೆ (ನೋಡಿ ಚಿತ್ರ-೪).

ಇನ್ನು ಉತ್ತರದ ಭಿತ್ತಿಯಲ್ಲಿ ಶಿವನ ಲೀಲಾಮೂರ್ತಿಗಳನ್ನು ಕಾಣಬಹುದು. ಕಾಮಾರಿ, ಕಾಲಾರಿ, ತ್ರಿಪುರಾರಿ, ಸೋಮಸ್ಕಂದ ಮೊದಲಾದ ಮೂರ್ತಿಗಳಿವೆ. ಇವುಗಳಲ್ಲಿ ತ್ರಿಪುರಾಂತಕನ ಶಿಲ್ಪ ಗಮನಾರ್ಹವಾಗಿದೆ (ನೋಡಿ ಚಿತ್ರ-೫). ಆಗಮೋಕ್ತ ಎಲ್ಲ ಲಕ್ಷಣಗಳನ್ನು ಹೊಂದಿರುವ ಈ ಮೂರ್ತಿಯು ಬಾಣದ ಮಧ್ಯದಲ್ಲಿ ವಿಷ್ಣುವಿನ ಬಿಂಬವನ್ನು ಹೊಂದಿದ್ದು, ವಿಷ್ಣುವೇ ಶರವಾಗಿದ್ದನೆಂಬ ಪುರಾಣ ಕಥನವನ್ನು ಸಮರ್ಥಿಸುತ್ತದೆ. ಆದರೆ ಇಲ್ಲಿ ಶಿಲ್ಪಿಯಿಂದ ಒಂದು ಗಮನಾರ್ಹ ಸೇರ್ಪಡೆಯಾಗಿದೆ. ಅದೆಂದರೆ, ಬಾಣದ ತುದಿಯಲ್ಲಿ, ಮುಖದ ಮೇಲೆ ಬೌದ್ಧನ ಶಿಲ್ಪವನ್ನು ಕೆತ್ತಲಾಗಿದೆ. ಇಲ್ಲಿಯೂ ಸಹ ದಶಾವತಾರದ ಶಿಲ್ಪಗಳ ಸಾಲಿನಲ್ಲಿರುವ ಬುದ್ಧನನ್ನು ಹೋಲುವಂತೆಯೆ ಕೆತ್ತಲಾಗಿದೆ. ಇದು ಮೌಖಿಕ ಪರಂಪರೆಯ ಕಥೆಯ ಪ್ರಭಾವವೆನ್ನಬಹುದು. ತ್ರಿಪುರ ಸಂಹಾರ ಕಾಲದಲ್ಲಿ ತ್ರಿಪುರಾಸುರರ ಸತಿಯರ ವ್ರತವನ್ನು ನಾರಾಯಣನು ಭಂಗಮಾಡಿದ್ದಾಗಿಯೂ, ಆದ್ದರಿಂದಲೆ ಶಿವನು ಸುಸೂತ್ರವಾಗಿ ಅವರನ್ನು ಜಯಿಸಿದನೆಂದು ಐತಿಹ್ಯವುಂಟು. ಇದಕ್ಕೆ ಪೋಷಕವಾಗಿ ದಾಸ ಸಾಹಿತ್ಯದಲ್ಲಿ 'ತ್ರಿಪುರನ ಸತಿಯರ ವ್ರತವನು ಕೆಡಿಸಿದೆ' ಎಂಬ ನಿಂದಾಸ್ತುತಿಯು ದೊರಕುತ್ತದೆ. ಈ ಕಾಲಕ್ಕಾಗಲೇ ಐತಿಹ್ಯಗಳ ಪ್ರಭಾವ ಶಿಲ್ಪಗಳ ಮೇಲಿದ್ದುದಕ್ಕೆ ಇದು ಉತ್ತಮ ಉದಾಹರಣೆ.

ಈ ಶಿಲ್ಪಗಳ ಸಾಲಿನ ಕೊನೆಯಲ್ಲಿ, ಸ್ಥಳೀಯರಿಂದ ಕಾರ್ತವೀರ್ಯನೆಂದು ಗುರುತಿಸಿ ಪೂಜಿಸಲ್ಪಡುವ ಶಿಲ್ಪವಿದೆ. ಇದರ ನಂತರ, ಈ ಶಿಲ್ಪವನ್ನೆ ಹೋಲುವ, ಆದರೇ ವಿಭಿನ್ನ ಭಂಗಿಯಲ್ಲಿರುವ ಎರಡು ಶಿಲ್ಪಗಳಿವೆ (ನೋಡಿ ಚಿತ್ರ-೬. ೭, ೮). ಈ ಮೂರು ಶಿಲ್ಪಗಳನ್ನು ಒಟ್ಟಿಗೆ ಗಮನಿಸಿದಾಗ ಇದು ಶಿಲ್ಪರತ್ನಕೋಶದಲ್ಲಿ ಉಕ್ತವಾಗಿರುವ ವೀರಭದ್ರನ ಮೂರ್ತಿಗಳೆನ್ನ ಬಹುದು. ಶಿಲ್ಪರತ್ನಕೋಶವು ಸಾತ್ವಿಕ, ರಾಜಸಿಕ ಮತ್ತು ತಾಮಸಿಕ ವೀರಭದ್ರ ಮೂರ್ತಿಗಳನ್ನು ಪ್ರಸ್ತಾಪಿಸುತ್ತದೆ. ಅದರಲ್ಲಿ ಉಕ್ತವಾಗಿರುವಂತೆ ಯಥಾವತ್ತಾಗಿ ಇಲ್ಲಿ ಕಾಣದಿದ್ದರೂ, ಶಿಲ್ಪಿಯು ಆ ಪರಿಕಲ್ಪನೆಯನ್ನು ಹೊಂದಿದ್ದನೆನ್ನಬಹುದು. ಇವುಗಳ ಪೈಕಿ ಮೊದಲ ಶಿಲ್ಪ ದ್ವಿಭುಜ ಮೂರ್ತಿಯಾಗಿದ್ದು ಬಲಗೈಯನ್ನು ಹೃತ್ಸ್ಥಲದಲ್ಲಿ ಹಿಡಿದಿದೆ. ಈ ಕೈಯಲ್ಲಿ ಒಂದು ಜ್ಯೋತಿಯನ್ನು ಕಾಣಬಹುದು. ಇದು ಪ್ರಾಯಶಃ ಸತ್ವ ಜ್ಞಾನದ ಸಂಕೇತವೆನ್ನಬಹುದು. ಎರಡನೆಯ ಶಿಲ್ಪವು ಮೇಲಿನ ಕೈಗಳಲ್ಲಿ ಮಾತ್ರ ಆಯುಧಗಳನ್ನು ಹಿಡಿದು ಕೆಳಗಿನ ಕೈಗಳಲ್ಲಿ ಅಭಯ ಮತ್ತು ವರದ ಮುದ್ರೆಗಳನ್ನು ಹೊಂದಿದೆ. ಇದು ರಾಜಸಿಕ ಸ್ವರೂಪ. ಮೂರನೆಯ ಶಿಲ್ಪವೇ ಕಾರ್ತವೀರ್ಯನೆಂದು ಪೂಜಿಸಲ್ಪಡುವುದು. ಇದು ನಾಲ್ಕು ಕೈಗಳಲ್ಲೂ ಆಯುಧಗಳನ್ನು ಹಿಡಿದಿರುವುದನ್ನು ನೋಡಿದರೆ ಇದು ತಾಮಸಿಕ ಮೂರ್ತಿಯೆನ್ನಬಹುದು. ಇಲ್ಲಿ ದಕ್ಷನ ಬಿಂಬದ ಅನುಪಸ್ಥಿಯ ಕಾರಣದಿಂದ ಕೆಲವರು ಇದು

  

ವೀರಭದ್ರನೇ? ಎಂದು ಪ್ರಶ್ನಿಸಬಹುದು. ಆದರೆ ಎತ್ತರವಾದ ಪಾದರಕ್ಷೆಗಳು, ಸರ್ಪಾಭರಣಗಳು ಇವೆಲ್ಲ ನೋಡಿದರೆ ಇದು ನಿಸ್ಸಂದೇಹವಾಗಿ ವೀರಭದ್ರನೇ ಎಂದು ಸೂಚಿಸುತ್ತದೆ. ಅಲ್ಲದೇ ಇದೇ ದೇವಾಲಯದ ಭಿತ್ತಿಯಲ್ಲಿ ಇನ್ನು ಎರಡು ಮೂರು ವೀರಭದ್ರನ ಶಿಲ್ಪಗಳಿದ್ದು ಅವುಗಳಿಗೂ ಇವುಗಳಿಗೂ ಬಹಳ ಹೋಲಿಕೆಯಿರುವುದರಿಂದ, ಇದನ್ನು ವೀರಭದ್ರನ್ನೆನ್ನುವುದಕ್ಕೆ ಅಭ್ಯಂತರವಿಲ್ಲ.

ಗೂಢಮಂಟಪದ ಹೊರಭಿತ್ತಿಗಳಲ್ಲೂ ಇದೇ ರೀತಿಯ ವಿಶೇಷ ಶಿಲ್ಪಗಳನ್ನು ಕಾಣಬಹುದು. ಬಲಭಾಗದ (ದಕ್ಷಿಣ) ಭಿತ್ತಿಯಲ್ಲಿ ಸಾಲಾಗಿ ತ್ರಿಮೂರ್ತಿಗಳ ಶಿಲ್ಪಗಳಿದ್ದು, ಈ ಸಾಲಿನಲ್ಲಿ ವಿಷ್ಣುವಿನ ಬದಲಿಗೆ ಲಕ್ಷ್ಮೀನರಸಿಂಹನನ್ನು ಕೆತ್ತಲಾಗಿದೆ. ಇದು ವಿಜಯನಗರ ಕಾಲದಲ್ಲಿ ನರಸಿಂಹ ಉಪಾಸನೆಗೆ ಇದ್ದ ಒಂದು ಆದ್ಯತೆಯನ್ನು ಸೂಚಿಸುತ್ತದೆ. ಅಲ್ಲದೇ ಶೃಂಗೇರಿಯ ಗುರುಪರಂಪರೆಯಲ್ಲಿ ಕೆಲವು ಯತಿಗಳು ನರಸಿಂಹೋಪಾಸಕರಾಗಿದ್ದರು. ಇದೇ ರೀತಿ ಎಡಭಿತ್ತಿಯಲ್ಲಿ ಸಾಲಾಗಿ ಮೂರು ದೇವಿಯರ, ಅಂದರೆ ತ್ರಿಮೂರ್ತಿಗಳ ಮಡದಿಯರಾದ ಸರಸ್ವತಿ, ಲಕ್ಷ್ಮೀ ಮತ್ತು ಪಾರ್ವತಿಯರ ಆಸೀನ ಶಿಲ್ಪಗಳನ್ನು ಕೆತ್ತಿದ್ದಾರೆ. ಇದು ಬಹಳ ಅಪರೂಪವಾಗಿ ಕಂಡು ಬರುವುದು.

ಒಟ್ಟಾರೆ ವಿದ್ಯಾಶಂಕರ ದೇವಾಲಯವು ವಿಶೇಷವಾದ ಗುರ್ವಾಯತನವಾಗಿರುವುದಲ್ಲದೇ, ಕರ್ನಾಟಕದಲ್ಲಿ ವೈದಿಕ ಮತ್ತು ಪೌರಾಣಿಕ ಪರಂಪರೆಯ ಶಿಲ್ಪಗಳಿಗೆ ಆಗರವಾಗಿದೆ ಎನ್ನಬಹುದು. ಕೇವಲ ಆಗಮಕ್ಕೆ ಸೀಮಿತಗೊಳಿಸಿಕೊಳ್ಳದೆ ಶಿಲ್ಪಿಯು ಜನರ ಅಭಿರುಚಿಗೆ ತಕ್ಕಂತೆ ಮತ್ತು ಜನ ಸಾಮಾನ್ಯರಲ್ಲಿ ಪುರಾಣೇತಿಹಾಸಗಳ ಪ್ರಜ್ಞೆ ಮೂಡುವಂತೆ ವೈವಿಧ್ಯಮಯ ಶಿಲ್ಪಗಳನ್ನು ನಿರ್ಮಿಸಿದ್ದಾನೆ. ಅಲ್ಲದೇ ಭಿತ್ತಿ ಶಿಲ್ಪಗಳ ನಿರೂಪಣೆಯಲ್ಲಿ ಓಜನಿಗೆ ಸರ್ವತಂತ್ರ ಸ್ವಾತಂತ್ರ್ಯವಿತ್ತೆನ್ನುವುದಕ್ಕು ಇದು ಉತ್ತಮ ನಿದರ್ಶನ. ಧಾರ್ಮಿಕ ಕೇಂದ್ರವಾಗಿರುವ ಈ ಸ್ಥಳದಲ್ಲಿ ಅವನು ಖಂಡಿತವಾಗಿಯೂ ತನ್ನ ಪರಿಮಿತಿಯನ್ನು ಅರಿಯಬೇಕು. ಆದರೂ ಸಹ ಯಾವುದೇ ನಿಯಮಕ್ಕೂ ಧಕ್ಕೆ ಬಾರದಂತೆ ಇಲ್ಲಿಯ ಶಿಲ್ಪಗಳನ್ನು ರೂಪಿಸಿದ್ದಾನೆ.

(ಈ ಲೇಖನವನ್ನು ಸಿದ್ಧಪಡಿಸಲು ನನಗೆ ನೆರವಾಗಿ ಮಾರ್ಗದರ್ಶನವಿತ್ತ ನನ್ನ ಪೂಜ್ಯ ಗುರುಗಳಾದ ಪ್ರೊ. ಡಾ. ಎಂ.ಎಸ್. ಕೃಷ್ಣಮೂರ್ತಿಯವರಿಗೆ ನಾನು ಆಭಾರಿಯಾಗಿದ್ದೇನೆ.)

ವಸುಂಧರಾದೇಸಾಯಿ ಮಹಾಪುರುಷ*

# ಪಂಪಾಪತಿಯ ಮುಖವಾಡ ಮತ್ತು ವಿದ್ಯಾರಣ್ಯಶ್ರೀಗಳ ಕಿರೀಟ ಕರ್ಣಕುಂಡಲಗಳ ಕರ್ತೃ ಶ್ರೀ ಬಿಷ್ಟಪ್ಪಯ್ಯ ಮಹಾಪುರುಷ

ಹಂಪಿಯ ಶ್ರೀ ವಿರೂಪಾಕ್ಷದೇವನಿಗೆ ಒಂದು ಸುಂದರವಾದ ನವರತ್ನ ಖಚಿತ ಚಿನ್ನದ ಮುಖವಾಡವಿದೆ. ಹದಿನೆಂಟು ಅಂಗುಲ ಎತ್ತರವಿರುವ ಈ ಮುಖವಾಡ ನಾಲ್ಕೂವರೆ ಕಿಲೋಗ್ರಾಂ ತೂಕ ಹೊಂದಿದೆ. ಅಪ್ಪಟ ಚಿನ್ನದಿಂದ ಆಗಿರುವ ದೇವರ ಈ ಮುಖಕ್ಕೆ ರಾಜಕಳೆಯ ಉದ್ದನೆಯ ಮೀಸೆ, ವಜ್ರದ ಕಣ್ಣು ಗುಡ್ಡೆ, ಹವಳ ನವರತ್ನಗಳ ಜೊತೆಗೆ ವಜ್ರಗಳನ್ನು ಬಳಸಿ ಮಾಡಿರುವ ವಿಭೂತಿಪಟ್ಟೆ, ಹಣೆಗಣ್ಣು, ಅದರ ಮೇಲೆ ವಲಂದಾ ವಜ್ರದಲ್ಲಿ ಅರ್ಧಚಂದ್ರ, ಕಿರೀಟದ ಕೇಂದ್ರ ಭಾಗದಲ್ಲಿ ಗೌರಿಯ ಸುಂದರ ಮುಖ, ಸರಪೇಚು, ಛತ್ರ, ಚಾಮರ, ಕತ್ತಿನಲ್ಲಿ ಪಚ್ಚೆ ಮಣಿ ಮುಂತಾದ ಆಭರಣಗಳಿಂದ ಸಿಂಗರಿಸಲಾಗಿದೆ. ಅದರಲ್ಲಿ ಅದನ್ನು ಕೊಡುಗೆಯಾಗಿ ನೀಡಿದವರ ಹೆಸರಿನ ಶಾಸನವಿಲ್ಲ.

ವಿದ್ಯಾರಣ್ಯ ಮಠದ ಪೀಠಸ್ಥ ಸ್ವಾಮಿಗಳು ಧರಿಸುವ ಕರ್ಣಕುಂಡಲ ಸಹಿತವಾದ ಕಿರೀಟವೊಂದಿದೆ. ಮೂರುವರೆ ಕಿಲೋಗ್ರಾಂ ತೂಕದ ಅತ್ಯಮೂಲ್ಯವಾದ ಹಲವಾರು ವಜ್ರಗಳು, ಅಪ್ಪಟ ಬಂಗಾರ ನವರತ್ನಗಳಿಂದ ಕೆತ್ತಿದ ಸೂಕ್ಷ್ಮ ಕಲೆಗಾರಿಕೆಯಿಂದ ಈ ಕಿರೀಟವನ್ನು ನಿರ್ಮಿಸಲಾಗಿದೆ. ಇದರಲ್ಲೂ ಅದನ್ನು ಕೊಡುಗೆಯಾಗಿ ನೀಡಿದವರ ಹೆಸರಿನ ಶಾಸನವಿಲ್ಲ.

ಈ ಮೊದಲು ಈ ಮುಖವಾಡ ಮತ್ತು ಕಿರೀಟಗಳನ್ನು ಕ್ರಮವಾಗಿ ಶ್ರೀಕೃಷ್ಣದೇವರಾಯ ಮತ್ತು ಬುಕ್ಕಮಹಾರಾಜರು ಕೊಟ್ಟಿದ್ದೆಂದು ಯಾವುದೇ ಆಧಾರವಿಲ್ಲದೆ ಭಾವಿಸಲಾಗಿತ್ತು. ಆದರೆ ಈಚೆಗೆ ಪುರಾತತ್ವ ಇಲಾಖೆಯ ಮತ್ತು ಯುನೆಸ್ಕೊ ತಂಡದ ತಜ್ಞರು ಎಲ್ಲ ರೀತಿಯ ಅಧ್ಯಯನ ಮತ್ತು ಪರೀಕ್ಷೆಗಳನ್ನು ನಡೆಸಿ ಅವುಗಳು ಹದಿನೇಳನೆಯ ಶತಮಾನದಲ್ಲಿಯೇ ನಿರ್ಮಿಸಲ್ಪಟ್ಟವುಗಳೆಂದು ಖಚಿತ ತೀರ್ಮಾನಕ್ಕೆ ಬಂದಿದ್ದಾರೆ.[೧]

ಕೆಳಕಂಡ ಅಂಶಗಳನ್ನು ಆಧರಿಸಿ ಈ ಮುಖವಾಡ ಮತ್ತು ಕಿರೀಟಗಳ ಕರ್ತೃ ಕೂಡ ಹಂಪಿ ಮುಖ್ಯ ಗೋಪುರ ನಿರ್ಮಾಪಕರಾಗಿರುವ ಶ್ರೀ ಬಿಷ್ಟಪ್ಪಯ್ಯ ಮಹಾಪುರುಷ ಅವರೇ ಎಂದು ಪ್ರತಿಪಾದಿಸುತ್ತಿದ್ದೇನೆ.

೧. ಮಹಾಪುರುಷ ಕುಟುಂಬದ ಹಿರಿಯರು ಮತ್ತು ಅಪ್ಪರು ಮುಖವಾಡ ಮತ್ತು ಕಿರೀಟಗಳನ್ನು ಮಾಡಿಸಿದ್ದು ಬಿಷ್ಟಪ್ಪಯ್ಯ ಅವರೇ ಎಂದು ತಮ್ಮ ಹಿರಿಯರಿಂದ ತಾವು ಕೇಳಿದ್ದಾಗಿ ಹೇಳುತ್ತಾರೆ.

೨. ಅವುಗಳು ನಿರ್ಮಾಣವಾದ ಕಾಲ ಹದಿನೇಳನೆಯ ಶತಮಾನ, ಬಿಷ್ಟಪ್ಪಯ್ಯ ಅವರ ಕಾಲ ೧೬೦೮–೧೬೭೮ ಕ್ರಿ.ಶ.

೩. ಅವುಗಳನ್ನು ಯಾವುದೇ ರಾಜರು ನೀಡಿದ್ದರೆ ಖಂಡಿತವಾಗಿ ಶಾಸನ ಬರೆಸಿರುತ್ತಿದ್ದರು. ಶಾಸನವಿಲ್ಲ ಎಂದಾಗ ಬಿಷ್ಟೇಶರು ಕೊಟ್ಟಿದ್ದೆಂದು ಸ್ಪಷ್ಟ. ಮಹಾದರ್ಶನಿಕ ಬಿಷ್ಟೇಶರು ತಾವು ನಿರ್ಮಿಸಿದ ಯಾವುದೇ ಗುಡಿ ಗೋಪುರ ವಿಗ್ರಹಗಳಲ್ಲೂ ಶಾಸನ ಬರೆಸಿಲ್ಲ ಎಂಬುದನ್ನು ಗಮನಿಸಬಹುದು.

೪. ಬಿಷ್ಟಪ್ಪಯ್ಯ ಅವರಿಗೆ ರಸಶಾಸ್ತ್ರ, ಲೋಹಶಾಸ್ತ್ರಗಳಲ್ಲಿ ಅಪಾರವಾದ ಪಾಂಡಿತ್ಯವಿತ್ತು ಎಂಬುದಕ್ಕೆ ಅವರ ವಂಶಸ್ಥರಲ್ಲಿರುವ ಬಿಷ್ಟೇಶ ಕೃತ ರಸಲಿಂಗವೇ ಸಾಕ್ಷಿ. ಈ ಲಿಂಗ ರಸಲಿಂಗಗಳಲ್ಲೆಲ್ಲ ಅತ್ಯಂತ ದೊಡ್ಡದು ಮತ್ತು ಚಿನ್ನದಂಥ ಕವಚದಿಂದ ಕೂಡಿ ವಿಶಿಷ್ಟವಾದದ್ದೆಂಬ ಹೆಗ್ಗಳಿಕೆ ಹೊಂದಿದೆ.[೨]

ಅದೇ ಲೋಹದಿಂದಾದ ಈಶ್ವರನ ಪರಿವಾರ ದೇವತೆಗಳಲ್ಲವುಗಳ ವಿಗ್ರಹಗಳಿದ್ದವು. ಸುಮಾರು ನಲವತ್ತು ವರ್ಷಗಳ ಹಿಂದೆ ಕಳುವು ಆಗಿವೆ. ತಮ್ಮ ಸ್ವಂತ ಅರ್ಚನೆಗೆಂದು ಅಷ್ಟೊಂದು ವಿಗ್ರಹಗಳನ್ನು ನಿರ್ಮಿಸಿಕೊಂಡ ಬಿಷ್ಟೇಶರು ತಮ್ಮ ಇಷ್ಟದೈವ ಪಂಪಾಪತಿಗೆ ಮತ್ತು ಶ್ರೀಗಳಿಗೆ ಈ ಕೊಡುಗೆಗಳನ್ನು ನೀಡಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ.

೫. ಬಿಷ್ಟಪ್ಪಯ್ಯ ಅವರು ಗೋಪುರ ನಿರ್ಮಾಣ ಸಮಯದಲ್ಲಿ ಕಾರ್ಮಿಕರಿಗೆ ವೇತನ ನೀಡಿರುವ ನಾಲ್ಕು ವಿಧಾನಗಳು ಲಭ್ಯವಿದ್ದು ಅವು ಇಂತಿವೆ.

ಎ) ಗೋಪುರ ನಿರ್ಮಿಸಿದ ಕಾರ್ಮಿಕರಿಗೆ ಹೇರಳವಾದ ಚಿನ್ನದ ನಾಣ್ಯಗಳನ್ನಿತ್ತು ತೃಪ್ತಿಗೊಳಿಸಿದರು.[೩]

* ಶಿವಮೊಗ್ಗ.



ಶ್ರೀ ವಿರೂಪಾಕ್ಷೇಶ್ವರನ ಚಿನ್ನದ ಮುಖವಾಡ



ಬಿಷ್ಟಪ್ಪಯ್ಯ ಅವರ ವಂಶಸ್ಥರಲ್ಲಿರುವ ಬಿಷ್ಟೇಶ ಕೃತ ರಸಲಿಂಗದ ಬೆಳ್ಳಿಯ ಮುಖವಾಡ, ಅದರ ಕರ್ಣಕುಂಡಲಗಳಲ್ಲೂ ನವಿಲಿನ ಅಲಂಕಾರ



ಶ್ರೀ ವಿರೂಪಾಕ್ಷೇಶ್ವರನ ಚಿನ್ನದ ಮುಖವಾಡದ ಕರ್ಣಕುಂಡಲ

ಬಿ) ಒಂದೊಂದು ಹುಲ್ಲುಕಡ್ಡಿ ಕೊಡುತ್ತಿದ್ದರು. ಅದು ಅವರವರ ದೈವಕ್ಕನುಗುಣವಾಗಿ ಚಿನ್ನ ಆಗುತ್ತಿತ್ತು.[೪]

ಸಿ) ಪ್ರತಿ ಬಾರಿ ಒಂದೊಂದು ಗುಪ್ತಸ್ಥಳಕ್ಕೆ ಕೈಹಾಕಿ ಚಿನ್ನದ ನಾಣ್ಯ ತೆಗೆಯುತ್ತಿದ್ದರು.[೫]

ಡಿ) ಒಂದು ಬಾರಿ ಮಣ್ಣಿನ ಉಂಡೆ ಕೊಟ್ಟರು. ಒಡೆದಾಗ ಒಳಗೆ ಚಿನ್ನದ ನಾಣ್ಯ ಇದ್ದವು.[೬] ಬಿಷ್ಟಪ್ಪಯ್ಯ ಅವರ ಕಾರ್ಯಗಳನ್ನೆಲ್ಲ ವಿವರಿಸುವ 'ಶ್ರೀ ಬಿಷ್ಟೇಶ ಶತನಾಮಾವಳಿ' ಲಭ್ಯವಿದ್ದು 'ಸುವರ್ಣ ವರ್ಷಣೋ ಯೋಗಿ' ಕೂಡ ಅವುಗಳಲ್ಲೊಂದು.

ರಸಶಾಸ್ತ್ರ ಲೋಹಶಾಸ್ತ್ರಜ್ಞರಿಗೆ ಚಿನ್ನ ತಯಾರಿಕೆ ಕೂಡ ತಿಳಿದಿರುತ್ತಿತ್ತು, ಆ ಭಾಗದಲ್ಲೇ ಇರುವ ಕಪ್ಪತಗುಡ್ಡದಲ್ಲಿರುವ ಚಿನ್ನದ ನಿಕ್ಷೇಪಗಳಿಂದಲೂ ಅವರು ಚಿನ್ನ ತೆಗೆದಿರುವ ಸಾಧ್ಯತೆಗಳಿವೆ ಎಂದು ಡಾ. ಸತ್ಯನಾರಾಯಣಭಟ್ ಪಿ. ಅವರ ಅಭಿಪ್ರಾಯ.

ಶ್ರೀ ಗುರು ಬಿಷ್ಟೇಶರು ಯಾವ ಯಾವ ಸ್ಥಳಗಳಲ್ಲಿ, ಗುಡಿ, ಗೋಪುರ, ಕೆರೆ ಕಟ್ಟೆಗಳನ್ನು ನಿರ್ಮಿಸುವ ಮೂಲಕ ಧಾರ್ಮಿಕ ಸಾಮಾಜಿಕ ಕಾರ್ಯಗಳನ್ನು ನಡೆಸಿದ್ದಾರೋ ಆ ಎಲ್ಲ ಹಳ್ಳಿಗಳೂ ಮುಂದೆ ಅವರ ಮೊಮ್ಮಗ ಮಹಾದೇವಪ್ಪಯ್ಯ ಅವರಿಗೆ ಇನಾಂ ಆಗಿ ಸಂದಿವೆ. (ಬಹುಶಃ ಗುರು ಬಿಷ್ಟೇಶರು ಭೂಮಿದಾನ ಸ್ವೀಕರಿಸಿರಲಿಕ್ಕಿಲ್ಲ.) ಅವುಗಳಲ್ಲಿ ಪ್ರಮುಖವಾದವುಗಳೆಂದರೆ :

ಉತ್ತರಾದಿ ಮಠಾಧೀಶರಿಂದ ರಂಗಾಪುರ, ಬಳ್ಳಾರಿ, ಡಂಬಳ (ಗದಗ) ದೇಸಾಯಿಯವರಿಂದ ತಾಮ್ರಗುಂಡಿ ಜಿ. ಗದಗ ಕಲಘಟಗಿ ತಾಲೂಕಿನ ಮಿಶ್ರಿಕೋಟಿ ದೇಸಾಯಿರಿಂದ ಆರೆಬಸವನಕೊಪ್ಪ ಜಿ. ಕಲಘಟಗಿ ತಾಲೂಕಿನ ತಡಸ ದೇಸಾಯಿರಿಂದ ಅಂಬ್ಲಿಕೊಪ್ಪ ಜಿ. ಧಾರವಾಡ, ಶಿರಹಟ್ಟಿ ದೇಸಾಯಿರಿಂದ ವಿಠ್ಠಲಾಪುರ ಜಿ. ಗದಗ ಹಾವನೂರಿನ ಹನುಮಂತಗೌಡ ಬಹದ್ದೂರ ದೇಸಾಯಿ ಅವರಿಂದ ಮೇವುಂಡಿ ಜಿ. ಹಾವೇರಿ, ಹರಪನಹಳ್ಳಿ ಸಂಸ್ಥಾನಿಕರಿಂದ ಹನಸಿ ಜಿ. ಬಳ್ಳಾರಿ, ಬಳ್ಳಾರಿ ಸಂಸ್ಥಾನಿಕರಿಂದ ಶಿರಗುಪ್ಪಿ ಜಿ. ಬಳ್ಳಾರಿ ಇಷ್ಟಲ್ಲದೇ ಇನ್ನೂ ಹಲವಾರು ಗ್ರಾಮಗಳಲ್ಲಿ ಮಹಾಪುರುಷ ಕುಟುಂಬಕ್ಕೆ ಸೇರಿದ ಭೂಮಿ ಇದ್ದುದು ತಿಳಿದುಬರುತ್ತದೆ ಮತ್ತು ಈ ಎಲ್ಲ ಗ್ರಾಮ ಭೂಮಿಗಳಲ್ಲೂ ಇರುವ ಗುಡಿಗಳು, ಕೆರೆ ಕಟ್ಟುಗಳು ಮೌಖಿಕವಾಗಿ 'ಬಿಷ್ಟೇಶ್ವರ ಸ್ವಾಮಿಗಳ ಗುಡಿ' 'ಬಿಷ್ಟಪ್ಪಯ್ಯನ ಕೆರೆ' ಎಂದು ಕರೆಯಲ್ಪಡುತ್ತವೆ. ಈ ಎಲ್ಲ ಸಂಸ್ಥಾನಿಕರೂ ಗುರು ಬಿಷ್ಟೇಶರಿಗೆ ಧಾರ್ಮಿಕ, ಸಾಮಾಜಿಕ ಕಾರ್ಯಗಳಿಗೆ ಆರ್ಥಿಕ ಸಹಾಯ ನೀಡಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ.

೬ ಬಿಷ್ಟಪ್ಪಯ್ಯ ಅವರು ತಮ್ಮ ಶಿಷ್ಯ ಗೋಣಿ ಬಸಪ್ಪನಿಗೆಂದು ನಿರ್ಮಿಸಿಕೊಟ್ಟ ಮುಂಡರಗಿ ತಾಲ್ಲೂಕಿನ ಗುಮ್ಮಗೋಳದಲ್ಲಿರುವ ಶಿವಮಂದಿರದಲ್ಲಿರುವ ಯೋಗಿಯ ಉಬ್ಬುಶಿಲ್ಪ 'ಬಿಷ್ಟಪ್ಪಯ್ಯ' ಅವರು ಎಂದೇ ಮಠದ ಅರ್ಚಕರಿಂದ ಬಿಷ್ಟಪ್ಪಯ್ಯ ವಂಶಸ್ಥರಿಂದ ಪೂಜಿಸಲ್ಪಡುತ್ತದೆ. ಆ ಯೋಗಿಯ ಅಕ್ಕಪಕ್ಕದಲ್ಲಿ ಒಂದು ಹೆಣ್ಣು ಮತ್ತು ಒಂದು ಗಂಡು ನವಿಲು ಇವೆ. ಮಠದ ತುಂಬ ವಿವಿಧ ಭಂಗಿಯ ನವಿಲುಗಳು, ಅವರ ಸ್ವಗ್ರಾಮ 'ಸೋಗಿ' ಮತ್ತು ಮುಖ್ಯ ಗುಡಿಯಾದ 'ಹನಸಿ'ಯ ಗುಡಿಯಲ್ಲೂ ಮತ್ತು ಹಂಪಿ ಗೋಪುರದ ಒಂದು ತೊಲೆಯಲ್ಲೂ ನವಿಲುಗಳು ಇವೆ. ಹಾಗೇ ಸ್ವಾಮಿಗಳ ಕಿರೀಟದ ಮೇಲೆ ಜೋಡು ನವಿಲಿನ ಅಲಂಕಾರವಿದೆ. ಪಂಪಾಪತಿ ಮುಖವಾಡದ ಕರ್ಣಕುಂಡಲಗಳೂ ಮತ್ತು ಬಿಷ್ಟೇಶಕೃತ ರಸಲಿಂಗಕ್ಕೆ ಇರುವ ಬೆಳ್ಳಿಯ ಮುಖವಾಡದ ಕರ್ಣಕುಂಡಲಗಳೂ ನವಿಲಿನ ಆಕಾರದಲ್ಲಿದೆ. ಬಿಷ್ಟೇಶರ ಶತನಾಮಗಳಲ್ಲಿ 'ಸೋಗೀ ಪತಿ' ಕೂಡ ಒಂದು.

ಅವರ ಸ್ವಗ್ರಾಮ 'ಸೋಗೆ' (ಅಲ್ಲಿ ಹಿಂದೆ ಬಹಳ ನವಿಲುಗಳಿದ್ದವಂತೆ) ಮತ್ತು ರಸಶಾಸ್ತ್ರಜ್ಞರ ಪ್ರೀತಿಯ ದೇವತೆ ಕುಮಾರಸ್ವಾಮಿಯಾಗಿದ್ದರಿಂದ 'ನವಿಲು' ಅವರ ಸಂಕೇತವಾಗಿರಬಹುದು.

೭ ಮತ್ತೊಂದು ಮಹತ್ವದ ಪುರಾವೆ ಎಂದರೆ ಹಂಪಿಯ ಗೋಪುರಕ್ಕೆ ಕಲಶ ಇಡಿಸಿದ ಮತ್ತು 'ವಿರೂಪಾಕ್ಷ ವಸಂತೋತ್ಸವ ಚಂಪೂ' ಗ್ರಂಥದ ಕರ್ತೃವಾಗಿರುವ ಬಿಷ್ಟಪ್ಪಯ್ಯ ಅವರ ಮೊಮ್ಮಗ ಮಹಾದೇವಪ್ಪಯ್ಯ, ಮಹಾಪುರುಷ ಅವರನ್ನು ವರ್ಣಿಸುವ 'ಶ್ರೀ ಶಿವಪ್ಪಾರ್ಯಾಷ್ಟಕ ಸ್ತೋತ್ರ' ಲಭ್ಯವಿದೆ. ಅದರ ಒಂದು ಚರಣ ಇಂತಿದೆ.

**ಸ್ಫುರದ್ರತ್ನ ರಾಜತ್ಕಿರೀಟಂ ದಧಾನಂ । ಜ್ವಲತ್ಕುಂಡಲ ದ್ವಂದ್ವಸಂಶೋಭಿಮಾನಂ ।**
**ಲಸದ್ಧಾರಯಷ್ಟಿ ಪ್ರಭಾಭಾಸ ಮಾನಂ । ಶಿವಪ್ಪಾರ್ಯ ಬಾಲಂ ಭಜೆ ನಿತ್ಯ ಕಾಲಂ ॥**

ಮಹಾದೇವಪ್ಪಯ್ಯ ಅವರ ತಂದೆ ಶಿವಪ್ಪಯ್ಯ ಅಂದರೆ ಮಹಾದೇವಪ್ಪಯ್ಯ ಅವರು ತಾವು ನಡೆಸಿದ ಕಲಶ ಸಮಾರೋಹ ಮುಂತಾದ ವಿರೂಪಾಕ್ಷೋತ್ಸವಗಳಲ್ಲಿ ಈ ಕಿರೀಟವನ್ನು ಧರಿಸಿದ್ದರೆಂದು ತಿಳಿದುಬರುತ್ತದೆ.

ಅಂದರೆ ಹಲವಾರು ಕೆರೆ ಕಟ್ಟೆ ಗುಡಿಗಳನ್ನು, ಹಂಪಿಯ ಧೀಮದ್ಗೋಪುರವನ್ನು ನಿರ್ಮಿಸಿರುವ ಬಂಗಾರವೇ ಪ್ರಧಾನವಾಗಿರುವ ಹಲವಾರು ಪಂಚಲೋಹದ ವಿಗ್ರಹಗಳನ್ನು

ನಿರ್ಮಿಸಿರುವ ಹಿನ್ನೆಲೆಯಲ್ಲಿ ನೋಡಿದರೆ ಬೀಷ್ಟಪ್ಪಯ್ಯ ಅವರೇ ಈ ಮುಖವಾಡ ಮತ್ತು ಕಿರೀಟಗಳ ಕರ್ತೃ ಎಂದೇ ಹೇಳಬಹುದು. ಇನ್ನು 'ವಿದ್ಯಾರಣ್ಯರ ತಪಸ್ಸಿಗೆ ಮೆಚ್ಚಿ ಭುವನೇಶ್ವರಿ ದೇವಿ ಚಿನ್ನದ ಮಳೆ ಸುರಿಸಿದಳು' ಎಂಬ ಅತ್ಯಂತ ಜನಪ್ರಿಯ ಐತಿಹ್ಯದ ಬಗ್ಗೆಯೂ ನಾನು ಇದೇ ಸಂದರ್ಭದಲ್ಲಿ ಬೆಳಕು ಚೆಲ್ಲಲು ಪ್ರಯತ್ನಿಸಿದ್ದೇನೆ.

ರಸಶಾಸ್ತ್ರ, ಲೋಹಶಾಸ್ತ್ರ, ಆಯುರ್ವೇದ, ಶಿಲ್ಪಶಾಸ್ತ್ರ, ವಾಸ್ತುಶಿಲ್ಪ, ಖಗೋಲಶಾಸ್ತ್ರ, ಜ್ಯೋತಿಷ್ಯ, ಯೋಗ ಮುಂತಾದವುಗಳೆಲ್ಲ ತಂತ್ರಶಾಸ್ತ್ರದ ವಿವಿಧ ಅಂಗಗಳೇ ಆಗಿದ್ದು ನಮ್ಮ ಪ್ರಾಚೀನ ಋಷಿಮುನಿಗಳು ತಮ್ಮ ಅವಿರತ ಅಧ್ಯಯನ ಪರಿಶ್ರಮ ಸಾಧನೆಗಳಿಂದ ಸಿದ್ಧಿಸಿಕೊಂಡು ಸಮಾಜದ ಒಳಿತಿಗಾಗಿ ಬಳಸಿದ ವಿದ್ಯೆಗಳು.

ಆದಿಶಂಕರರ ಗುರುವಿನ ಗುರು ಗೌಡಪಾದರು 'ಶಕ್ತಿಸೂತ್ರ' 'ಸುಭಗೋದಮ' ಗ್ರಂಥಗಳನ್ನು ರಚಿಸಿದ್ದಾರೆ. ಅವರ ಶಿಷ್ಯ ಗೋವಿಂದ ಭಗವತ್ಪಾದರು ರಸೇಶ್ವರ ಎಂಬ ಪ್ರಾಚೀನ ಮತಕ್ಕೆ 'ರಸಹೃದಯ' ಎಂಬ ಗ್ರಂಥ ರಚಿಸಿದ್ದಾರೆ.[೮] ಮಾಧವ (ವಿದ್ಯಾರಣ್ಯ) ಸಾಯಣರಿಗೂ ಈ ವಿದ್ಯೆ ತಿಳಿದಿತ್ತು. ಸಾಯಣರು ರಸಶಾಸ್ತ್ರವನ್ನು ರಸೇಶ್ವರ ದರ್ಶನ ಎಂದು ಕರೆದಿದ್ದಾರೆ.[೯] ಮತ್ತು 'ಆಯುರ್ವೇದ ಸುಧಾನಿಧಿ' 'ಯಜ್ಞ ತಂತ್ರ ಸುಧಾನಿಧಿ' ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ.[೧೦] ಬಿಷ್ಟಪ್ಪಯ್ಯ ಅವರಾದರೂ ತಮ್ಮ ಎಲ್ಲ ವಿದ್ಯೆಗಳನ್ನು ವಿದ್ಯಾರಣ್ಯ ಮಠದಲ್ಲಿನ ಗ್ರಂಥಗಳ ಸ್ವಯಂ ಅಧ್ಯಯನದಿಂದ ಕರಗತ ಮಾಡಿಕೊಂಡದ್ದು ಎಂದು ತಿಳಿದುಬಂದಿದೆ.[೧೧]

ಬಿಷ್ಟಪ್ಪಯ್ಯ ಅವರ ವಂಶಸ್ಥರಲ್ಲಿ ಅವರು ಉಪಯೋಗಿಸುತ್ತಿದ್ದ ನಾಲ್ಕು ದಂಡಗಳಿದ್ದು ಒಂದು ಭಿನ್ನವಾಗಿದೆ. 'ಇದು ಶಿವನೇ ಪ್ರತ್ಯಕ್ಷವಾಗಿ ಕೊಟ್ಟಿದ್ದು, ಅದರಿಂದ ಏನನ್ನೇ ಮುಟ್ಟಿದರೂ ಅದು ಚಿನ್ನವಾಗುತ್ತಿತ್ತಂತೆ' ಎಂದು ಪರಂಪರಾನುಗತ ಪ್ರತೀತಿ. ಆದಿಶಂಕರರ ಜೀವನದ ಒಂದು ಘಟನೆ ಇಂತಿದೆ. ಅವರು ಭಿಕ್ಷೆಗೆಂದು ಹೋದಾಗ ಒಬ್ಬ ಬಡ ಗೃಹಿಣಿ ಏನೂ ಇಲ್ಲದ್ದರಿಂದ ಒಣಗಿದ ನೆಲ್ಲಿಕಾಯಿ ನೀಡಿದಳೆಂದೂ, ಅವಳ ಶ್ರದ್ಧೆಗೆ ಮೆಚ್ಚಿ ಶಂಕರರು ಕನಕಧಾರಾ ಸ್ತೋತ್ರದ ಮೂಲಕ ಲಕ್ಷ್ಮಿದೇವಿಯನ್ನು ಸ್ತುತಿಸಲು ಅವಳು ಚಿನ್ನದ ಮಳೆ ಕರೆದಳೆಂದು ಹೇಳುತ್ತಾರೆ.

ಅಂದರೆ ಶಂಕರರಿಗೆ ಮಾಧವ ದೇವಿ ಸುರಿಸಿದಳೆಂದು ಹೇಳಲಾಗುವ ಚಿನ್ನದ ಮಳೆಯ ಗುಟ್ಟಾದರೂ ಇದೇ ರಸಶಾಸ್ತ್ರ ಲೋಹಶಾಸ್ತ್ರಗಳ ಮೂಲಕ ಪಡೆದ ಚಿನ್ನವೇ ಆಗಿದೆ. ಆದರೆ ತಮಗೆ ಚಿನ್ನದ ತಯಾರಿಕೆ ತಿಳಿದಿದೆ ಎಂಬ ವಿಷಯವನ್ನು ಜನಸಾಮಾನ್ಯರಿಂದ ಗುಪ್ತವಾಗಿರಿಸುತ್ತಿದ್ದರಾದ್ದರಿಂದ ಅದನ್ನು ಪವಾಡ ಎಂಬಂತೆ ಬಿಂಬಿಸುತ್ತಿದ್ದರು.

ಆದಿಶಂಕರರ ಕಾರ್ಯಗಳನ್ನು ಮಾಧವ ಸಾಯಣರೂ, ಅವರ ಕಾರ್ಯಗಳನ್ನು ಬಿಷ್ಟಪ್ಪಯ್ಯ ಅವರೂ ತಮ್ಮ ತಮ್ಮ ಕೈಲಾದ ಮಟ್ಟಿಗೆ ಮಾಡಿ ಧಾರ್ಮಿಕವಾಗಿ ಸಂಕಷ್ಟದಲ್ಲಿದ್ದ ಅಂದಿನ ಸಮಾಜಕ್ಕೆ ಭದ್ರತೆ ನೀಡಲು ಶ್ರಮಿಸಿದ್ದಾರೆ ಎಂದು ನನ್ನ ಬಲವಾದ ಅನಿಸಿಕೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಜಾರ್ಜ್ ಮಿಷೆಲ್., ಡಾ. ಜಾನ್ ಫ್ರಿಡ್ಜ್, ಡಾ. ಅ. ಸುಂದರ, ಡಾ. ಶೇಷಾದ್ರಿಯವರು ಖಚಿತಪಡಿಸಿದ ಮಾಹಿತಿ.
೨. ಡಾ. ಪಿ. ನಾರಾಯಣಭಟ್ ಅವರ **ಲಿಂಗ ಮತ್ತು ಕಂತೆ** ಪುಸ್ತಕ ಮತ್ತು ಅವರೇ ೨೫-೦೨-೦೮ರ ಉದಯವಾಣಿಯಲ್ಲಿ ಬರೆದ 'ಮಹಾಪುರುಷ ಮಹತ್ಸಾಧನೆಗಳು' ಲೇಖನ.
೩. ಮೌಖಿಕ ಪರಂಪರೆ.
೪. ಹಸ್ತಪ್ರತಿಯಲ್ಲಿ ನಮೂದಾದ ಮಾಹಿತಿ.
೫. ಆಪಟೆ ಅನಂತರಾಯರು ಬರೆದ 'ಹಂಪೆಯ ಶ್ರೀ ವಿರೂಪಾಕ್ಷ ದೇವಾಲಯದ ಗೋಪುರ ನಿರ್ಮಾಪಕ ಶ್ರೀ ಬಿಷ್ಟಪ್ಪಯ್ಯನವರು'. ಪುಸ್ತಕದ ೮೧ನೆಯ ಪುಟ.
೬. ಅದೇ ಪುಸ್ತಕದ ೧೩೫ನೆಯ ಪುಟ.
೭. ಅದೇ ಪುಸ್ತಕದ ೧೪೩ನೆಯ ಪುಟ.
೮. ಡಾ. ಜಿ.ಬಿ. ಹರೀಶ್., **'ತಂತ್ರಶಾಸ್ತ್ರ'.**
೯. ಡಾ. ಪಿ. ಸತ್ಯನಾರಾಯಣಭಟ್., **ಲಿಂಗ ಮತ್ತು ಕಂತೆ.**
೧೦. ಡಾ. ಸೂರ್ಯನಾಥ ಕಾಮತ್., **'ವಿಜಯನಗರ ಸಾಮ್ರಾಜ್ಯ'.**
೧೧. ಆಪಟೆ ಅನಂತರಾಯರ ಅದೇ ಪುಸ್ತಕ ಮತ್ತು ಮೌಖಿಕ ಪರಂಪರೆ.

ಸುಭಾಷ್ ಕಮ್ಮಾರ *

# ಬಂಕಾಪುರದ ನಗರೇಶ್ವರ ದೇವಾಲಯದ ನವರಂಗದ ಕಂಬಗಳ ರೇಖಾಚಿತ್ರಗಳು

ಕತ್ತಲಿನಲ್ಲಿ ತೆಳುವಾದ ಬೆಳಕಿನ ಸಹಾಯದಿಂದ ಅತೀ ಸೂಕ್ಷ್ಮ ರೀತಿಯ ಜಾಗೃತ ಮನಸ್ಸಿನಿಂದ ನೋಡುವುದಾದಲ್ಲಿ ಚಿತ್ರಗಳು ತಮ್ಮ ಇರುವಿಕೆಯನ್ನು ಸೂಕ್ಷ್ಮ ಸ್ಪಷ್ಟಪಡಿಸುತ್ತವೆ. ಕೆತ್ತನೆಯ (Engraving on Stone Pillars) ಆಳತೆಯುಳ್ಳ ರೇಖೆಗಳು ಗಾಢತೆ ಪಡೆಯುತ್ತವೆ. ಹತ್ತಿರದಿಂದ ಗಮನಿಸಿದಾಗ ಅವು ನೀಡುವ ಆಂತರಿಕ ಸೌಂದರ್ಯದಲ್ಲಿ ತೆಳು, ದಪ್ಪ, ಆಳಗಳನ್ನು ಸಹಜವಾಗಿ ಪ್ರದರ್ಶಿಸುತ್ತವೆ. ಇಂತಹ ಕಲಾಕೃತಿಯ ಮೂಲರೂಪದ ಅಭಿವ್ಯಕ್ತಿಯಲ್ಲಿ ಸುಲಲಿತವಾದ ಅಂಶಗಳು ಸೇರಿ ಕೆಲವೇ ರೇಖೆಗಳಲ್ಲಿ ಪೂರ್ಣತೆ ಪಡೆದಿವೆ. ಸರಾಗವಾಗಿ ಚಲಿಸುವ ಆ ತೆಳುವಾದ ರೇಖೆಗಳು ಒತ್ತಿ ಹೇಳುವ ಪ್ರಮೇಯಕ್ಕನುಗುಣವಾಗಿ ಗಂಭೀರತೆ ಮತ್ತು ವಿಷಯದ ಮಹತ್ವವನ್ನು, ಪ್ರಾಮುಖ್ಯವನ್ನು ಪ್ರಚುರಪಡಿಸಿವೆ. ಈ ದೇವಾಲಯಗಳಲ್ಲಿ ನವರಂಗದ ೨೪ ಕಂಬಗಳಲ್ಲಿ ಚಿತ್ರಗಳಿರುವ ಕಂಬಗಳು ೧೮ ಮಾತ್ರ ಇವೆ. ಇಂತಹುಗಳಲ್ಲಿ ೯೩ ರಿಂದ ನೂರು ದಾಟುವಂತೆ ಚಿತ್ರಗಳಿವೆಯಾದರೂ ಸೌಂದರ್ಯದಿಂದ ಕೂಡಿದ ೯೩ ಚಿತ್ರಗಳು ಸೂಕ್ಷ್ಮತೆ ಪಡೆದಿವೆ. ನೃತ್ಯ ಚಿತ್ರಗಳು ೫೦, ಇತರ ಚಿತ್ರಗಳು ೨೭, ನಕ್ಷೆ ರೂಪದ ಚಿತ್ರಗಳು ೧೬ ಇವೆ. ಇದರಂತೆ ಅನೇಕ ಕಂಬಗಳಲ್ಲೂ ಚಿತ್ರಗಳಿವೆಯಾದರೂ ಅಲ್ಲಿ ಸೂಕ್ಷ್ಮತೆ ಹಾಳಾಗಿ ರೇಖೆಗಳು ಕಾಣದಂತಾಗಿವೆ.

**ರೇಖೆಗಳು :** ರೇಖೆಗಳು ಸಹಜವಾಗಿ ನಮ್ಮ ಮುಂದೆ ಕಾಣದಂಥ ಅವು ಪ್ರಕೃತಿಯ ಕೊಡುಗೆಗಳಲ್ಲ. ಮಾನವ ನಿರ್ಮಿತಿಗಳು. ಕಲ್ಪನೆಯೊಡಗೂಡಿ ಕನಸು ಅರಳುವ ಮೊದಲ ಹಂತಗಳು. ರೇಖೆಗಳು ಬಣ್ಣದ ಚಿತ್ರಗಳಿಗಿಂತಲೂ ಸೃಜನಾತ್ಮಕವಾದ ಗಟ್ಟಿ ಚಿಂತನೆಯ ಸಾಕಾರಗಳು. ಪ್ರಕೃತಿಯಲ್ಲಿನ ಅಂಶಗಳಿಗೆ ಹೋಲುತ್ತಿವೆಯಾದರೂ ಅವು ಕಲಾವಿದನ ಮೂಲ ಆಶಯಗಳೇ ಆಗಿವೆ. ಕಲಾವಿದನ ಅಂತರಂಗದ ತಲ್ಲಣಗಳು, ಪರಿಸರದಿಂದ ಸಿಗುವ ಸ್ಫೂರ್ತಿ ಅದಕ್ಕೆ ಸ್ಪಂದಿಸುವ ವಿಚಾರಗತಿಯೂ ಸೇರಿ ಕೂತಲ್ಲೇ ಎಲ್ಲವನ್ನು ಸೃಷ್ಟಿಸುವ ಕುತೂಹಲಕಾರಿ ಅಂಶವಾಗಿದೆ. ಅವನು ರೇಖೆಗಳಲ್ಲಿ ಜೀವನೋಲ್ಲಾಸದ ಅಭಿವ್ಯಕ್ತಿಯೆನಿಸುವ ನೃತ್ಯದ ಗತಿಲಯಗಳ ಹತ್ತು ಮಾದರಿಗಳನ್ನು ಸಂವೇದನೆ ಮೂಲಕ ಸ್ಪಂದಿಸುತ್ತಾನೆ.

**ಕಂಬದಲ್ಲಿ ಕೆತ್ತನೆಗೆ ಸ್ಫೂರ್ತಿ, ಒಡಮೂಡಿಸಿದ ರೇಖೆಗಳು :** ಕಲ್ಲಿನಲ್ಲಿ ಕೆತ್ತನೆ ಮಾಡಿದ ಭಾಗವು ತನ್ನ ಪರಿಮಿತಗಳ ಆಚೆ ಈಚೆಯ ಅಂಚಿನಲ್ಲಿ ಮೂಡುವ ಪರಿಣಾಮ ನಮಗೆ ವೇಗದ ಹರಿವನ್ನು, ತಗ್ಗಿನ ಕೆತ್ತನೆಯ ಗತಿಯನ್ನೇ ಅನುಸರಿಸಿರುತ್ತದೆ. ಇಂತಹ ಹರಿವು ಕೆತ್ತನೆಯ ವಿಷಯಗಳ ಮಹತ್ವ ಮತ್ತು ವಿಷಯಾಧಾರಿತ ತೀವ್ರತೆ (force) ಯನ್ನು ಮನಸ್ಸಿಗೆ ನಾಟುವ ರೀತಿಯಲ್ಲಿರುತ್ತವೆ. ತೀವ್ರಗತಿ ಮತ್ತು ಮಂದಗತಿ (Slow) ಯನ್ನು ಸೃಷ್ಟಿ ಮಾಡಿ ನೋಡುಗನಿಗೆ ಚಿತ್ರದ ಒಟ್ಟಾನಂದವನ್ನು, ಈ ರೇಖೆಯ ರೂಪದ ತಗ್ಗುಗಳು ಆಕರ್ಷಿಸುವ ರೀತಿಯಲ್ಲಿ ಸಹೃದಯರನ್ನು ತಡೆದು ನಿಲ್ಲಿಸುತ್ತವೆ. ಜೀವನಾನುಭವವು ಪ್ರತಿಯೊಬ್ಬನ ಮನಸ್ಸಿನಲ್ಲಿ ಲೇಪನವಾಗದೇ ಹೊರಹಾಕಲ್ಪಡುವ ಸೃಜನರೂಪವಾಗಿ ಭಾವತೀವ್ರತೆ ಪಡೆದು ಕ್ರಿಯಾಶೀಲವಾದ ಸೃಷ್ಟಿಯಲ್ಲಿ ಸರಣಿರೂಪ (Sequence) ದ ಚಿತ್ರಗಳಾಗಿ ಒಡಮೂಡುತ್ತವೆ. ಅಂತಃಸತ್ವತೆಯುಳ್ಳ ಮಾನವೀಯ ನೆಲೆ ಹಾಗೂ ಮೌಲ್ಯಗಳ ಸತ್ಯತೆಯು ಸದಾ ಒಂದಿಲ್ಲೊಂದು ಜಾಗದಲ್ಲಿ ತನ್ನ ಆಸೆಯನ್ನು ಮುಕ್ತತೆಯ ವಾತಾವರಣವನ್ನು ಬಯಸುತ್ತದೆ. ಅಂತಹ ಕ್ರಿಯಾಶೀಲ ಮನೋಭಾವವು ಅತ್ಯಂತ ವಿನಯ ಪೂರ್ವಕವಾದ ಸೃಜನಶಕ್ತಿಯಿಂದ ತನ್ನೆಲ್ಲಾ ದೃಷ್ಟಿಕೋನಗಳು ಹಾಗೂ ಆತ್ಮನಿಷ್ಠ ಕಾವ್ಯ (Subjective Poetry) ವಾಗಿ ಸರ್ವ ಸಾಕ್ಷಿತ್ವದ ಅಂಶಗಳನ್ನು ನಿರೂಪಣೆ (Third Person Narration) ರೂಪದಲ್ಲಿ ಅಭಿವ್ಯಕ್ತಿಯಾಗುತ್ತವೆ.

**ನವರಂಗದ ಕಂಬಗಳಲ್ಲಿನ ಚಿತ್ರಗಳು :** ಬಂಕಾಪುರದ ನಗರೇಶ್ವರ ದೇವಾಲಯದಲ್ಲಿನ ನವರಂಗದ ಅಕ್ಕಪಕ್ಕದಲ್ಲಿರುವ ಕಂಬಗಳಲ್ಲಿ ಸೃಷ್ಟಿಸಿರುವ ರೇಖೆಗಳಲ್ಲಿ ನಯ ನಾಜೂಕಗಳ ಜಾಣ್ಮೆಯಿಂದ ಶಿಲ್ಪಿಗಳು ಅಭೂತಪೂರ್ವ ಸಾಮರ್ಥ್ಯವನ್ನೇ ವ್ಯಕ್ತಗೊಳಿಸಿದ್ದಾರೆ. ಪ್ರಾಣಿ ಪಕ್ಷಿಗಳು, ಸಸ್ಯರೂಪಗಳು, ಯೌವನ, ಮಧ್ಯವಯಸ್ಕರ ಒಳನೋಟದ ಗ್ರಹಿಕೆಗಳು ಇಲ್ಲಿಲ್ಲಾ ವಿಡಂಬನೆ ಮತ್ತು ನೋವಿಗಿಂತ ಬದುಕನ್ನು ಗಂಭೀರವಾಗಿ

* ನಂ. ೩೮, 'ವಿನಾಯಕ', ೨ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ, ಕತ್ತಿಗುಪ್ಪೆ ಪೂರ್ವ, ಬನಶಂಕರಿ ೩ನೇ ಹಂತ, ಬೆಂ. ೮೫.



ರಸಿಕ ಜೋಡಿಗಳು



ಮದ್ದಳೆ ವಾದ್ಯಗಾರ



ನೃತ್ಯಗಾರ್ತಿ



ಶಿವಪೂಜಾನಿರತ ಯತಿ



ಯುದ್ಧಕಲೆ



ಅಲಂಕಾರ ಮಾಡಿಕೊಳ್ಳುವ ಸುಂದರಿ



ನಮಿಸುತ್ತಿರುವ ಶಿವಭಕ್ತ



ನೃತ್ಯಗಾರ್ತಿ



ಗಿಣಿಯೊಂದಿಗೆ ಸಂಭಾಷಣೆ ನಿರತ ಸ್ತ್ರೀ



ಗಣೇಶ



ಕಂಗಾಲಾದ ಸ್ತ್ರೀ



ತಂತೀವಾದ್ಯ ನುಡಿಸುವವಳು

ಗ್ರಹಿಸಿದ ಸ್ಥಿತಿಯಿದೆ. ರೇಖೆಗಳನ್ನು ಅತ್ಯಂತ ಎಚ್ಚರದಿಂದ ಮುಡಿಸಿಕೊಳ್ಳಲಾಗಿದೆ. ಸಾಹಿತ್ಯ, ಸಂಗೀತ, ನೃತ್ಯವನ್ನು ಬಳಸಿಕೊಂಡ ಈ ರೇಖಾಚಿತ್ರಗಳಲ್ಲಿ ಕೋಮಲತೆಯಿದೆ. ಕಾವ್ಯದ ಸ್ವಚ್ಛಂದ ಲಯದ ಪ್ರಭಾವವಿದೆ. ತಿರುವಿನಾಳದ ತಿರುವಿನ ಅಂಕು ಡೊಂಕು, ಬಿಂದು ರೇಖೆಗಳನ್ನು ಮತ್ತು ರೇಖೆಗಳಾಗಿ ಮುನ್ನಡೆದ ಬಿಂದುಗಳನ್ನು ಕಲ್ಯಾಣದ ಚಾಲುಕ್ಯರ ಅಂದಿನ ಸಮಕಾಲೀನತೆಯನ್ನು ನಿರ್ವಹಿಸಿದ್ದಾರೆ. ನವಿಲು ಗರಿಯ ಕೋಮಲತೆಯಂತಹ ರೇಖೆಗಳ ವೇಗ, ಕೋಗಿಲೆ ಹಾಡಿನ ಇಂಪಿನ ಸೆಳೆತದಂತೆ ಪ್ರಕ್ರಿಯೆಯಲ್ಲಿ ರೇಖಾ ಮಾಧ್ಯಮದ ಚಿತ್ರದ ಭಾಷೆ ಹಲವಾರು ಕೃತಿಗಳಲ್ಲಿ ಕಲೆಯಾಗಿ ವಿಶಿಷ್ಟ ಅನುಭವ ನೀಡುತ್ತವೆ.

**ರೇಖೆಗಳಲ್ಲಿ ಮೂಡಿಬಂದ ಚಿತ್ರಗಳ ಆಶಯ** : ಇಲ್ಲಿ ಕಲಾವಿದರ ಕನಸು ಸೇರಿದಂತೆ ಹಲವು ಮಗ್ಗುಲಿನ ಜೀವನದೃಷ್ಟಿಕೋನ ಮತ್ತು ಭಾವಗೀತಾತ್ಮಕ ಲಾವಣಿ (Lyrical ballad) ಗಳಂತೆ ಅನುಭಾವದ ಹಂತಗಳನ್ನು ತಮ್ಮ ಸ್ವಾತಂತ್ರ್ಯದ ಕಲ್ಪನೆಯಲ್ಲಿ ಒಡಮೂಡಿಸಿದ್ದಾರೆ. ದೈನಂದಿನ ಬದುಕಿನಲ್ಲಿ ತನುಮನ ತಣಿಯುವ ಮೈಥುನ, ಏಕಾಂತದಲ್ಲಿನ ರಸಿಕತೆ, ಒಂಟಿತನ, ವಿರಹದ ನರಳುವಿಕೆ, ದೇಸಿ ಮತ್ತು ಮಾರ್ಗದ ಸತ್ವಯುತ ಕುಣಿತಗಳು, ಯುದ್ಧಕಲೆ, ಸಿದ್ಧರು, ಕಾಳಾಮುಖ ಸಿದ್ಧಿ ಪುರುಷರು, ವಾದ್ಯಗಾರರು, ಭಕ್ತರು, ದೇವತೆಗಳು ಸೇರಿದಂತೆ ಇವೆ. ಮನುಷ್ಯನ ಮನಸ್ಸಿನ ಇನ್ನೊಂದು ಮಗ್ಗುಲಿನ ನೋಟಗಳಾದ ಮಾನವೀಯ ಅಟ್ಟಹಾಸ, ಕಾಮದ ತೀವ್ರತೆ ಮತ್ತು ಅದರ ಗುಲಾಮಗಿರಿಯನ್ನು ಕ್ರೌರ್ಯವಾಗಿ ತೋರಿಸಲಾಗಿದೆ. ಅಲಂಕಾರತೆಯುತ ನಕ್ಷೆಗಳು, ಬಳ್ಳಿಗಳು ಅದರಲ್ಲಿ ಪ್ರಾಣಿ ಪಕ್ಷಿಗಳನ್ನು ಕಲಾವಿದರು ರೇಖೆಗಳಲ್ಲಿ ತಮ್ಮ ಭಾವತೀವ್ರತೆಯಿಂದ ಸೃಜಿಸಿದ ಸತ್ವವನ್ನು ಸೆರೆ ಹಿಡಿದಿದ್ದಾರೆ. ಹೆಣ್ಣು ಗಂಡಿನ ದೇಹದ ಆಕರ್ಷಣೆ, ಆಂಗಿಕ ಸಂಜ್ಞೆ (Gesture) ಭಾವನೆಗಳನ್ನು ರೇಖೆಗಳಲ್ಲಿ ನಯ ನಾಜೂಕಿನೊಡನೆ ಪ್ರದರ್ಶಿಸಿದ್ದಾರೆ. ಅಲಂಕಾರಯುಕ್ತ ಸ್ತ್ರೀಯು ಗಿಳಿಯೊಂದಿಗೆ ಸಂಭಾಷಿಸುತ್ತಿರುವುದು ಮತ್ತು ಗಿಳಿಯು ಅವಳ ತುಟಿಗೆ ಮುತ್ತನ್ನು ನೀಡುತ್ತಿರುವ ದೃಶ್ಯವು ಆಕರ್ಷಕವಾಗಿದೆ. ನಗ್ನ ಸ್ತ್ರೀಯೊಬ್ಬಳು ಪ್ರಿಯಕರನ ಬರುವಿಕೆಯನ್ನು ನಿರೀಕ್ಷಿಸಿ ಹುಸಿಯಾದ ಅವಳ ಕಾತರ ತಾಳದೇ ಕಂಗಾಲಾಗಿ ತೋಚಲಾರದೆ ಎರಡು ಕೈಗಳಿಂದ ತಲೆ ಕೆರೆದುಕೊಳ್ಳುತ್ತಿದ್ದಾಳೆ. ಈ ದೃಶ್ಯವು ಪರಿಣಾಮಕಾರಿ ಅಂಶವನ್ನು ಒತ್ತಿ ಹೇಳುತ್ತದೆ.

ನೃತ್ಯದ ಚಿತ್ರಗಳಲ್ಲಿ ರೇಖೆಗಳು ಕೂಡಾ ನರ್ತಿಸಿವೆ. ಅವರ ಕಲ್ಪನಾಯುಕ್ತತೆ ಪೂರ್ಣತೆ ಪಡೆಯುವಲ್ಲಿ ಅಕ್ಕರೆಯಿಂದ ಕೂಡಿದೆ. ನೃತ್ಯಭಾಷೆಯ, ದೇಹದ ಲವಲವಿಕೆ ಪ್ರತಿಭಂಗಿಗಳು ನಿರ್ಮಾಣವಾದಂತೆ ರೇಖೆಗಳಲ್ಲಿ ಸೆಳೆತ (Strokes) ಗಳು ಭಾವಗಳಿಗೆ ಧ್ವನಿಯಾಗಿವೆ. ನೃತ್ಯಗಾರ, ನೃತ್ಯಗಾರ್ತಿಯರು ಹಾಕುವ ಹೆಜ್ಜೆಗಳು ಒಂದರಿಂದ ಹಲವಾರು ಬಗೆಯವು. ಹಿಂಬದಿಯಿಂದ ಹಾರಿ ಬಂದ ಇನ್ನೊಂದು ಕಾಲು ಮುಂದಿನ ಬಾಗುವ ಕಾಲು ದೇಹದ ಭಾರವನ್ನು ತುದಿ ಬೆರಳಲ್ಲೇ ಹೊತ್ತಂತೆ ಚಿತ್ರಪೂರ್ಣವಾಗಿದೆ. ನೆಮ್ಮದಿಯ ಭಾವ, ನಿರ್ಲಿಪ್ತತೆಯ ಆನಂದವು ಅವಳನ್ನು ಸ್ಪುರದ್ರೂಪಿ ಸ್ತ್ರೀ, ಶಕ್ತಿ ಸ್ವರೂಪಿಣಿ ಎಂಬಂತೆ ಭಾಸವಾಗುತ್ತದೆ. ಅವಳು ಧರಿಸಿದ ಗೆಜ್ಜೆ, ಆಭರಣಗಳು, ಉಡುಪುಗಳು ಚಲನೆಯ ಹೊಯ್ದಾಟವನ್ನು ಪಡೆದುಕೊಳ್ಳುವಲ್ಲಿ ಉತ್ಸಾಹಿ ರೂಪವನ್ನು ರೇಖೆಗಳು ಕಂಡಿವೆ.

**ಕಲಾವಿದರು** : ಇಲ್ಲಿನ ಕಂಬಗಳ ರಚನೆಗೆ ಬೇಕಾದ ಸುತ್ತಳತೆಯನ್ನು ನಿರ್ವಹಿಸಿ ಅಳತೆಗಳಿಗನುಗುಣವಾಗಿ ವೃತ್ತಾಕಾರ, ಎಲೆಯಾಕಾರಗಳ ನಡುವೆ ಈ ಎಲ್ಲ ಕನಸುಗಳು ಅರಳಿವೆ. ಕಲಾವಿದನು ವಾಸ್ತವತೆಯೊಂದಿಗೆ ಕಲ್ಪನೆ, ಊಹೆ, ಉನ್ನತ ಚಿಂತನೆಗಳು ಸೇರಿಸುತ್ತಾ ರೇಖಾ ಚಲನೆಯಲ್ಲಿ ಸರಾಗತೆಯನ್ನು ಮೂಡಿಸಿದ್ದಾನೆ. ಇಲ್ಲಿನ ಚಿತ್ತಾರಗಳು, ಆಶಯ, ಮೌಲ್ಯಗಳು, ನಡತೆಯ ನೈಜತೆ ಸೆರೆಹಿಡಿದ ಐದಾರು ಜನ ಕಲಾವಿದರ ಕೊಡುಗೆ ಅಪಾರವಾಗಿದೆ. ಕಂಬದ ಉಬ್ಬು ಭಾಗದಲ್ಲಿ ನುಣುಪಾದ ಸುತ್ತಲಿನ ಜಾಗದಲ್ಲಿರುವ ಈ ಚಿತ್ರಗಳು ನಾಲ್ಕು ಇಂಚು ಮತ್ತೊಂದಿಷ್ಟು ಕಡೆಗಳಲ್ಲಿ ಐದು ಇಂಚು ಸುತ್ತಲಿನ ಆವರಣ ಹೊಂದಿವೆ. ಕಲಾವಿದ ತನ್ನ ತಂತ್ರಗಾರಿಕೆ (Technique) ಯಿಂದ ಉಳಿ (ಚಾಣ) ಸುತ್ತಿಗೆಯ ಪೆಟ್ಟಿನ ಆಧಾರದ ಮೇಲೆ ಲೀಲಾಜಾಲವಾಗಿ ಬಾಗು ಬಳಕು, ವಯ್ಯಾರಗಳ ಮೂಲಕ ಸಾಗುತ್ತ ಕಲ್ಪನೆಯ ಮೂರನೆಯ ಕಣ್ಣಿನ ಸಿದ್ಧಿಯ ಸಾಧನೆಯನ್ನು ಕಂಬದಲ್ಲಿ ತೋರಿಸಿ ಕೊಂಡಿದ್ದಾನೆ. ನಕ್ಷೆಗಳಲ್ಲಿಯೂ ಮಾನವ, ಪ್ರಾಣಿ ಪಕ್ಷಿಗಳ ದೇಹದೊಂದಿಗೆ ತಮ್ಮ ಕೌಶಲ್ಯಯುಕ್ತವಾದ ಅಲಂಕಾರವನ್ನು ನಿರ್ಮಿಸಿದ್ದಾರೆ. ಅತ್ಯುತ್ತಮ ರೇಖೆಗಳನ್ನುಳ್ಳ ಚಿತ್ರ ಹಲವು ಇವೆಯಾದರೂ ಪ್ರಬುದ್ಧತೆ, ಸೂಕ್ಷ್ಮತೆಯನ್ನು ಹಿರಿಯರ ಕಲಾಕೃತಿಗಳಲ್ಲಿ ಸಾಧ್ಯವಾಗಿದೆ.

**ರೇಖೆಗಳಲ್ಲಿನ ವೈಭವ** : ರೇಖೆಗಳ ವೇಗದಲ್ಲಿ ಚಿತ್ರಭಾಷೆಗೆ ಅನುಗುಣವಾಗಿ ಕಥಾ ಸಂಕೀರ್ಣತೆ (Story Complex) ಯೊಡನೆ ಕಲಾ ಸಾಮರ್ಥ್ಯವು ಅವರವರ ಕೈಚಳಕದಲ್ಲಿ ಮೂಡಿಬಂದಿವೆ. ಅಂದಿನ ಅಪಾರವಾದ ಸಂಪನ್ಮೂಲ ವ್ಯಕ್ತಿಗಳನ್ನೊಳ ಗೊಂಡಂತಹ ಸಮಾಜದ ಚಿತ್ರಣದಂತೆಯೂ ಆತ್ಮಕಥನಾತ್ಮಕ (Autobiographical) ವಿಚಾರಗಳು ಪೂರ್ಣ ಪ್ರಮಾಣದಲ್ಲಿ ರಚಿತವಾಗಿವೆ. ರೇಖೆಗಳು ನೀರಿನ ಹಾಗೆ ತಮಗಿಷ್ಟ ಬಂದಂತಹ ರೀತಿಯಲ್ಲಿ



**ಕಾಮಚೇಷ್ಟೆ**

ಹರಿವನ್ನು ಪಡೆದಿವೆ. ಸೆಳೆತಗಳಿಂದ ಕೂಡಿ ಸರಾಗತೆ ಪಡೆಯುತ್ತಾ ಏರು ಇಳಿತಗಳ ಸಂದುಗೊಂದುಗಳನ್ನು ದಾಟಿ ಪದ್ಯರೂಪ (Verse form) ದ ಸರಳತೆ ಪಡೆದಿವೆ.

ಮುಖಭಾವ ಲಕ್ಷಣಗಳಲ್ಲಿ ಕಲ್ಯಾಣ ಚಾಲುಕ್ಯರ ಶೈಲಿ ಸೃಷ್ಟಿಸಿರುವ ನೀಳವಾದ ಮೂಗು, ತುಂಬಿದ ತುಟಿಗಳು, ಉಬ್ಬಿದೆದೆಯ ಆಕರ್ಷಣಯುಕ್ತ ದುಂಡನೆಯ ಸ್ತನಗಳು, ತೆಳುವಾದ ಸೊಂಟ, ಬಟ್ಟಲು ರೂಪದ ಹೊಕ್ಕಳು, ಹಸ್ತಿನಿ, ಚಿತ್ತಿನಿ, ಶಂಕಿನಿ, ಪದ್ಮಿನಿ ಜಾತಿಯ ಸ್ತ್ರೀಯರೆಲ್ಲಾ ಒಡಮೂಡಿದಂತಿವೆ. ಉದಾಹರಣೆಗಾಗಿ ರತಿಸುಖದಲ್ಲಿ ನಿರತರಾದ ಜೋಡಿಯ ತುಂಬಿದ ತುಟಿಗಳನ್ನು ಗಂಡು ಹೆಣ್ಣು ಜೋಡಿಸಿದ್ದಾರೆ. ತಲ್ಲೀನರಾದುದರಿಂದ ಕಣ್ಣುಗಳು ಮುಚ್ಚಿದಂತೆಯೂ ಒಮ್ಮೊಮ್ಮೆ ತೆರೆದಂತೆಯೂ ಅರೆನಗ್ನತೆ ಪಡೆದಿವೆ. ಪ್ರಿಯಕರನ ಎದೆಗೆ ಒರಗಿದ ಅವಳ ದುಂಡನೆಯ ಸ್ತನವು ಒತ್ತಿದ ಒತ್ತಡದ ಭಾವ ತೀವ್ರತೆಯನ್ನು ಕಲಾವಿದ ಸೂಕ್ಷ್ಮಪ್ರಜ್ಞೆಯ ರಸಿಕನೂ ಆಗಿರಬೇಕು. ಕಲಾವಿದನು ಪರಿಸರದಲ್ಲಿನ ಸೃಷ್ಟಿಕ್ರಿಯೆಯ ರಹಸ್ಯಗಳನ್ನು ಕೂಡಾ ರೇಖೆಗಳಲ್ಲಿ ರೂಪಕ ಕಥೆ (Allegory) ಯಾಗಿ ಧ್ವನಿಯಾಗಿಸಿದ್ದಾನೆ.

ಚಿ.ಸು. ಕೃಷ್ಣಸೆಟ್ಟರು ಹೇಳುವಂತೆ "ರೇಖೆ ಎನ್ನುವುದು ಒಂದರ್ಥದಲ್ಲಿ ನಾಮಪದವಲ್ಲ. ಅದು ನಿಜಕ್ಕೂ ಕ್ರಿಯಾಪದವೇ ಆಗಿದೆ. ಅದರ ಒಂದು ಮೂಲಗುಣ ಚಲನೆ. ಅದು ಯಾರನ್ನು ಒಂದೆಡೆ ನಿಲ್ಲಿಸುವುದಿಲ್ಲ. ವರ್ಣಚಿತ್ರವೊಂದು ವಿಶ್ರಾಂತ ಭಾವನೆಯನ್ನು ನಿರ್ಮಿಸುವುದಾದರೂ, ರೇಖೆಗಳು ಹರಿಯುವ ನದಿಯೊಂದರಂತೆ ಚಲಿಸುತ್ತಲೇ ಇರುತ್ತವೆ. ಅವು ನಗಿಸಬಲ್ಲವು. ಅಳಿಸಬಲ್ಲವು ಜೊತೆಗೆ ಗಾಯನದ, ನರ್ತನದ ಅನುಭವವನ್ನು ಮುಟ್ಟಿಸಬಲ್ಲವು. ದಟ್ಟಗೊಳಿಸ

ಬಲ್ಲವು. ಅವು ಬಣ್ಣಗಳ ಅಡಿಯಾಳಲ್ಲಿ ಸ್ವತಂತ್ರ ಅಭಿವ್ಯಕ್ತಿ ಸಾಮರ್ಥ್ಯವುಳ್ಳವು" ಅಂತೆಯೇ (ರೇಖೆಗಳು) ಗಿಡಕ್ಕಂಟಿದ ಬಳ್ಳಿಯಂತೆ ತೆವಳಿಕೊಂಡು ಗಿಡವನ್ನೇರಿದಂತೆ ಗಿಡದ ದೇಹ ರಚನೆಯನ್ನು ಅನುಸರಿಸಿ ಹೊಯ್ದಾಟವನ್ನು ನಿರ್ಮಿಸಿ ಕೊಂಡಿರುತ್ತವೆ. ಬಳ್ಳಿಯ ಮೂಲಗುಣವು ತನ್ನ ತಾಜಾತನವನ್ನು ಅಪೇಕ್ಷಿಸುವುದು ಸಹಜ. ಕಲೆಯಿಂದ ಮನುಷ್ಯರ ಗುಣವು ಹೆಚ್ಚು ಕಡಿಮೆ ನಿರ್ಮಲಭಾವ, ನಿರ್ಲಿಪ್ತತೆಯನ್ನು ಬಯಸುವುದು ಸಹಜವಾಗಿದೆ. ಅಂತೆಯೇ ಅವರ ರೇಖಾಚಿತ್ರಗಳನ್ನು ನೋಡಿದಾಗ ನಮಗಾಗುವ ಅನುಭವ ದೊಡ್ಡದು.

ನಮ್ಮ ಲಾಕ್ಷಣಿಕರು ಹೇಳುವಂತೆ 'ರೇಖಂ ಪ್ರಶಂಸತಾಚಾರ್ಯ' (ವಿಷ್ಣು ಧರ್ಮೋತ್ತರ ಪುರಾಣ) ರೇಖೆಗಳು ನಿಪುಣ ಕಲಾವಿದನ ಸಾಧನೆ ಎಂಬ ಅಭಿಪ್ರಾಯವು ಸಾರ್ವತ್ರಿಕವಾಗಿದೆ.

ನಮ್ಮ ನಿತ್ಯ ಬದುಕಿನಲ್ಲಿ ಕಲಾಶಾಲೆಗಳ ಕಲಾ ಬೋಧನೆಯಲ್ಲಿ (ಪ್ರಾಯೋಗಿಕ) ಕಲೆಯು ಶಾಬ್ದಿಕ ರೂಪ ಪಡೆಯುತ್ತಿದೆ. ಅದೊಂದು ಘೋರವಾದ ಅಪರಾಧವಾಗಿದೆ. ಇಲ್ಲಿ ದೃಶ್ಯದ ಮಹತ್ವವನ್ನು ನಾಲಿಗೆ ಕೊಲ್ಲುತ್ತಿದೆ. ಎಂಬ ಆತಂಕ ಸೃಷ್ಟಿ ಮಾಡುವ ಕೈಗಳು ತಮ್ಮ ಇರುವಿಕೆಯನ್ನು ಪ್ರಚುರಪಡಿಸುವಲ್ಲಿ ಸಮಯ ಸಾರ್ಥಕಪಡಿಸಿಕೊಳ್ಳುತ್ತಿವೆ. ದೃಶ್ಯಕಾವ್ಯ ಮರೆಯಾಗುತ್ತಿದೆ. ಇಂತಹ ಇಲ್ಲಗಳ ನಡುವೆ ಬಂಡೆಗಲ್ಲುಗಳಲ್ಲಿ ಚಿಗುರನ್ನು ಬಿತ್ತಿ ಬೆಳೆಗಳ ಕನಸಿನ ಕಾರ್ಯಗಳು ಜರುಗಬೇಕಾಗಿದೆ. ರೇಖೆಗಳು ಕನಸಿನ ಬಿತ್ತುವಿಕೆಯಲ್ಲಿ ಭೂಮಿಯಲ್ಲಿ ಉಳಿಯದೇ ಅವು ಚಲನೆ ಪಡೆದು ಸೃಜನಶೀಲ ಕೈಂಕರ್ಯ ಮೂಡುವಲ್ಲಿ ನಮ್ಮ ಬೌದ್ಧಿಕರ, ವಿದ್ಯಾವಂತರ ಸಹಕಾರ ಅತ್ಯಗತ್ಯವಾಗಿದೆ. ಪ್ರಸ್ತುತ ನಮ್ಮ ವಿದ್ವಾಂಸರ ಕ್ರಿಯಾಶೀಲತೆಯು ಶ್ರಮಜೀವಿಗಳಾದ ಕಲಾವಿದರ ಹೃದಯ ಸಂಬಂಧಿ ಮನೋಭಾವದ ಈ ಚಿಗುರುಗಳನ್ನು ಚಿವುಟಿ ಹಾಕದಿರಲಿ ಮತ್ತು ಬೆಳೆಸುವ ಸಮೃದ್ಧಿ ಹೆಚ್ಚಾಗಲಿ. ಮುಂದೆ ಬರುವ ಸಂಸ್ಕಾರಯುಕ್ತ ಸಾಂಸ್ಕೃತಿಕ ಕಾಳಜಿಯ ಸಂಶೋಧಕರ ಕಣ್ಣಿಗೆ ಕಾಣುವಂತೆ ಆಗಲಿ ಎಂದು ಬಿನ್ನಹ ಮಾಡುತ್ತ ಈ ಸೃಜನ ಕಾರ್ಯವನ್ನು ಮುಂದುವರೆಸಲು ಅನುವು ಮಾಡಿಕೊಡುವ ಪ್ರಯತ್ನ ಪುಟ್ಟದಾಗಿದೆ.

[ಈ ಲೇಖನ ಸಿದ್ಧವಾಗಲು ಮಾನಸಿಕ, ಬೌದ್ಧಿಕವಾಗಿ ಸ್ಫೂರ್ತಿ ನೀಡಿದ ಡಾ. ಎಚ್.ಎಸ್. ಗೋಪಾಲರಾವ್, ಪ್ರೊ. ಎಸ್. ಶೆಟ್ಟರ್, ಪ್ರೊ. ಅ. ಸುಂದರ, ಡಾ. ಶೀಲಾಕಾಂತ ಪತ್ತಾರ, ಡಾ. ಬಿ. ರಾಜಶೇಖರಪ್ಪ, ಡಾ. ಇಂದಿರಾಹೆಗ್ಗಡೆ, ಬಿ.ಕೆ. ವಿಜಯೇಂದ್ರಣ್ಣ, ಡಾ. ಆರ್. ಗಣೇಶ, ಡಾ. ಶೋಭಾ ಶಿವಕುಮಾರ, ಗೋಪಾಲಕಮ್ಮಾರ ಶಿಲ್ಪಕಲಾವಿದರು ಇನ್ನೂ ಅನೇಕ ಗುರುಗಳು.)

## ಆಧಾರಸೂಚಿ

೧. ಹಿರಿಯಣ್ಣ. ಎಂ., **ಭಾರತೀಯ ತತ್ವಶಾಸ್ತ್ರ ರೂಪರೇಖೆಗಳು,** (ಅನು) ಪ್ರಭುಶಂಕರ, ಅಭಿನವ, ಬೆಂಗಳೂರು – ೨೦೦೪.
೨. ಡಾ. ವಿಜಯೇಂದ್ರ ಕರುಣಾ., **ಕಲ್ಯಾಣ ಚಾಲುಕ್ಯ ಶಿಲ್ಪಕಲೆ,** (ಸಂ) ಡಾ. ಗೋಪಾಲರಾವ್ ಎಚ್.ಎಸ್. ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು – ೨೦೦೮.
೩. ಕೃಷ್ಣಶೆಟ್ಟಿ. ಜಿ.ಸು., 'ರೇಖಾಸಂಭ್ರಮ'ದ ಫೋಲ್ಡರ್, **ಸಂಚಲನ ಕರ್ನಾಟಕ,** ಬೆಂಗಳೂರು – ೨೦೦೯.
೪. ಡಾ. ವಿಜಯೇಂದ್ರ ಕರುಣಾ., ೨೦೦೮, **ಕರ್ನಾಟಕ ದೇವಾಲಯಗಳಲ್ಲಿ ರಂಗಭೋಗ** (ನೃತ್ಯ), ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.
೫. ಪ್ರೊ. ಕೆ.ಜಿ. ಸುಬ್ರಮಣ್ಯನ್., (ಅನು) ಶ್ರೀನಿವಾಸಮೂರ್ತಿ ಕೆ.ಎಸ್. ಆಟಮಾಟ ಅಭಿನವ, ಬೆಂಗಳೂರು – ೨೦೦೨.
೬ ಡಾ. ಎಲಿಗಾರ ಚನ್ನಕ್ಕ., **ಬಂಕಾಪುರ ಶೋಧನ,** ಚನ್ನಗಂಗಾ ಪ್ರಕಾಶನ, ಧಾರವಾಡ – ೮.
೭. ನಾಡ ಕಳಸಿ, ಬಂಕಾಪುರ ಮತ್ತು ಹಲವು ದೇವಾಲಯಗಳಲ್ಲಿ ಹೊಯ್ಸಳ ಮತ್ತು ಕಲ್ಯಾಣ ಚಾಲುಕ್ಯರ ಈ ರೇಖಾ ಚಿತ್ರಗಳಿಗೆ ಸಂಬಂಧಿಸಿದಂತೆ ಡಾ. ಕರುಣಾ ವಿಜಯೇಂದ್ರರೊಂದಿಗೆ ಮುಕ್ತವಾಗಿ ಸಂವಾದಿಸಲಾಗಿದೆ.
೮. ಡಾ. ಗೋಪಾಲರಾವ್. ಎಚ್.ಎಸ್., ೨೦೦೭, **ನಮ್ಮ ನಾಡು ಕರ್ನಾಟಕ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಡಾ. ಆರ್.ಎಚ್. ಕುಲಕರ್ಣಿ*

# ಸೋದೆ ಶ್ರೀ ವಾದಿರಾಜರ ಅಪರೂಪದ ಸಾಂಪ್ರದಾಯಿಕ ಚಿತ್ರ

ಶ್ರೀ ವಾದಿರಾಜ ತೀರ್ಥರು ಮಾಧ್ವಯತಿಗಳಲ್ಲಿ ತಮ್ಮದೇ ಆದಂತಹ ವಿಶಿಷ್ಟವಾದ ಸ್ಥಾನವನ್ನು ಹೊಂದಿದ್ದಾರೆ. ಉಡುಪಿ ಶ್ರೀಕೃಷ್ಣನ ಆರಾಧಕರೂ ಹಯಗ್ರೀವದೇವರನ್ನು ಇಷ್ಟದೈವವಾಗಿಸಿಕೊಂಡು ಹರಿದಾಸ ಸಾಹಿತ್ಯಕ್ಕೆ ತಮ್ಮ ಕೀರ್ತನೆಗಳ ಮೂಲಕ 'ಹಯವದನ' ಅಂಕಿತದೊಡನೆ ಪ್ರಸಿದ್ಧರಾಗಿದ್ದಾರೆ. ಶ್ರೀ ವ್ಯಾಸತೀರ್ಥರ ನಂತರ ಹಾಗೂ ಶ್ರೀ ರಾಘವೇಂದ್ರ ತೀರ್ಥರ ಮೊದಲು ಮಾಧ್ವ ಮತ ಪ್ರಚಾರ, ಅದರ ವೈಶಿಷ್ಟ್ಯವನ್ನು ಸಮರ್ಪಕವಾಗಿ ಸಾರಿದ ಕೀರ್ತಿ ಇವರದು.

ಕರ್ನಾಟಕದ ಎಲ್ಲೆಗಳನ್ನು ಮೀರಿ ಆಂಧ್ರ, ಮಹಾರಾಷ್ಟ್ರ, ತಮಿಳುನಾಡುಗಳಲ್ಲಿಯೂ ಮಾಧ್ವಮತವು ಸಾಕಷ್ಟು ಗಣನೀಯ ಪ್ರಮಾಣದಲ್ಲಿ ಹರಡಿತು. ತಮಿಳುನಾಡಿನ 'ಕುಂಭಕೋಣಂ' ಧಾರ್ಮಿಕ ಚಟುವಟಿಕೆಗಳ ಕೇಂದ್ರವಾಯಿತು. ಅದೇ ರೀತಿ ಆಂಧ್ರದ ರಾಜಮಂಡ್ರಿ, ಶ್ರೀಕೂರ್ಮಂ ಮೊದಲಾದವುಗಳು ಪ್ರಮುಖ ಧಾರ್ಮಿಕ ಕೇಂದ್ರಗಳಾಗಿದ್ದವು.

ಶ್ರೀ ವಾದಿರಾಜರನ್ನು ಹಾಗೂ ಅವರ ಹಲವು ದೃಶ್ಯ ನಿರೂಪಣೆಗಳನ್ನು ಬಿಂಬಿಸುವ ಒಂದು ಅಪರೂಪದ ಚಿತ್ರವೊಂದನ್ನು ಇತ್ತೀಚೆಗೆ ನಮ್ಮ ಕ್ಷೇತ್ರ ಕಾರ್ಯದಲ್ಲಿ ಗಮನಿಸಲಾಗಿದೆ. ಮೂಲತಃ ಕುಂಭಕೋಣಂನಿಂದ ಸಂಗ್ರಹಿಸಲಾದ ಈ ಚಿತ್ರ ಪ್ರಸ್ತುತ ಚೆನ್ನೈನ ಖಾಸಗಿ ಸಂಗ್ರಹಾಲಯದಲ್ಲಿದೆ. ಇದರ ಕಲಾವಿದ ಅಥವಾ ಕಾಲದ ಬಗ್ಗೆ ಯಾವುದೇ ಉಲ್ಲೇಖಗಳಿಲ್ಲ – ಆದರೆ ಚಿತ್ರದ ಸಂಯೋಜನೆ ಹಾಗೂ ಶೈಲಿಯನ್ನು ಗಮನಿಸಿ ಅದರ ಕಾಲವನ್ನು ಸುಮಾರು ೧೮೫೦ರ ಕಾಲಕ್ಕೆ ಸೇರಿಸಬಹುದಾಗಿದೆ.

ಪ್ರಸ್ತುತ ಚಿತ್ರ ಆಯತಾಕಾರದ ಸಂಯೋಜನೆಯಲ್ಲಿದೆ. ಚಿತ್ರದಲ್ಲಿ ಶ್ರೀಹರಿಯ ವಿವಿಧ ರೂಪಗಳನ್ನು, ಶ್ರೀ ಬಾದರಾಯಣರು ಅಂದರೆ ಶ್ರೀ ವೇದವ್ಯಾಸದೇವರು ಹಾಗೂ ಶ್ರೀ ವಾದಿರಾಜರನ್ನು ಅತ್ಯಂತ ಸೊಗಸಾಗಿ ಮತ್ತು ಆಕರ್ಷಕವಾಗಿ ಚಿತ್ರಿಸಲಾಗಿದೆ.

ಚಿತ್ರವನ್ನು ಎರಡು ಹಂತಗಳಲ್ಲಿ ಸಂಯೋಜಿಸಿದೆ. ಮೇಲಿನ ಸ್ತರದಲ್ಲಿ ಮೂರು ಕಿರು ಸಂಯೋಜನೆಗಳು ಹಾಗೂ ಕೆಳಗಿನ ಸ್ತರದಲ್ಲಿ ಮೂರು ಕಿರು ಸಂಯೋಜನೆಗಳು ಹೀಗೆ ಒಟ್ಟು ಆರು ಸಂಯೋಜನೆಗಳು ಇಲ್ಲಿವೆ. ಪ್ರತಿಯೊಂದಕ್ಕೂ ವಾಸ್ತು ವಿನ್ಯಾಸದ ಕಮಾನಿನ ಚಿತ್ರಣ ಚಿನ್ನದ ಉಬ್ಬು ರೇಖು (Gold gesso) ಗಳಿಂದ ಅಲಂಕೃತವಾಗಿದೆ. ಮೇಲ್‌ಸ್ತರದ ಮೊದಲ ಭಾಗದಲ್ಲಿ ಶ್ರೀ ಹಯಗ್ರೀವ ಮತ್ತು ಶ್ರೀ ವೇದವ್ಯಾಸರು ಎದಿರು–ಬದಿರು ಕುಳಿತು ದಿವ್ಯ ಸಂವಾದದಲ್ಲಿ ತೊಡಗಿರುವಂತೆ ಬಿಂಬಿಸಲಾಗಿದೆ. ಮಧ್ಯದಲ್ಲಿ ಭೂದೇವಿ ಸಹಿತ ವರಾಹ ದೇವರನ್ನು ಆಸನಭಂಗಿಯಲ್ಲಿ ತೋರಿಸಿದ್ದಾರೆ. ಕೊನೆಯ ಸಂಯೋಜನೆಯಲ್ಲಿ ಸ್ಥಾನಕ ಮತ್ತು ಕಟ್ಯಾವಲಬಿಂತದಲ್ಲಿರುವ ಪಂಢರಪುರ ವಿಠಲ, ಹಾಗೂ ಲಕ್ಷ್ಮೀ ಸಹಿತ ನರಸಿಂಹರ ಕುಳಿತ ಆಕೃತಿಗಳನ್ನು ಚಿತ್ರಿಸಲಾಗಿದೆ. ಕೆಳಸ್ತರದ ಸಂಯೋಜನೆಯಲ್ಲಿ ಕೂರ್ಮಾಸನದ ಮೇಲೆ ಕುಳಿತು ನೀಲವರ್ಣದ ನವನೀತ ಕೃಷ್ಣನ ನಿಂತ ಭಂಗಿಯ ಆಕೃತಿಗೆ ತುಳಸಿ ಅರ್ಚನೆ ಮಾಡುತ್ತಿದ್ದಾರೆ ಶ್ರೀ ವಾದಿರಾಜರು. ವಾದಿರಾಜರನ್ನು ಕೌಪೀನ ಮತ್ತು ತಲೆಗೆ ಹೊದೆದ ಕಾಷಾಯ ವಸ್ತ್ರ ಹಾಗೂ ದಂಡ, ಮಾಧ್ವ ಅಲ್ಲದೆ ಚಿಹ್ನೆಗಳಾದ ನಾಮಮುದ್ರೆಗಳಿಂದ ತೋರಿಸಿದೆ. ಕೃಷ್ಣನನ್ನು ಬಾಲಕನಂತೆ ಕಡಗೋಲು ಹಿಡಿದಹಾಗೆ ಬಿಂಬಿಸಿದೆ. ಕೃಷ್ಣನ ಪಕ್ಕದಲ್ಲಿರುವ ಆಕೃತಿ ಬಲರಾಮನದು. ಬಲರಾಮನನ್ನು ಶ್ವೇತವರ್ಣದಲ್ಲಿ ತೋರಿಸಿದೆ. ನಿಂತ ಭಂಗಿ ಹಾಗೂ ಅಲಂಕಾರವನ್ನು ವಿಠಲನ ಚಿತ್ರಕ್ಕೆ ಹೋಲಿಸಬಹುದು.

ಇನ್ನು ಮಧ್ಯದಲ್ಲಿ ಪದ್ಮಾಸನದಲ್ಲಿ ಚತುರ್ಭುಜನಾದ ಶ್ರೀ ಹಯಗ್ರೀವನನ್ನು ನೋಡಬಹುದು. ಈ ಚಿತ್ರದ ಪಕ್ಕದಲ್ಲಿಯೇ ಚಿತ್ರದ ಪ್ರಮುಖ ನಿರೂಪಣೆಗೊಂಡ ಹಯದ (ಕುದುರೆ) ರೂಪದಲ್ಲಿ ಹಯಗ್ರೀವನು – ಶ್ರೀ ವಾದಿರಾಜರು ತಲೆಯ ಮೇಲೆ ಹರಿವಾಣದಲ್ಲಿರಿಸಿರುವ ಕಡಲೆ–ಬೆಲ್ಲ (ಹಯಗ್ರೀವ) ವನ್ನು ಭಕ್ಷಿಸುತ್ತಿದ್ದಾನೆ. ಶ್ರೀ ವಾದಿರಾಜರ ಇಷ್ಟದೈವವಾದ ಶ್ರೀ ಹಯಗ್ರೀವ – ಹಯದ ರೂಪದಲ್ಲಿ ಬಂದು ಅವರು ನೀಡುತ್ತಿದ್ದ ಕಡಲೆ – ಬೆಲ್ಲ ತಿನ್ನುತ್ತಿದ್ದರೆಂದು ನಂಬಿಕೆ ಮಾಧ್ವರಲ್ಲಿ ಇದೆ. ಹೀಗಾಗಿ ಈ ಚಿತ್ರದಲ್ಲಿ ಶ್ರೀ ವಾದಿರಾಜ – ಹಯಗ್ರೀವ ಸಂಬಂಧಗಳ ದೃಶ್ಯರೂಪದ ಅನಾವರಣವಿದೆ.

* ಪ್ರಾಂಶುಪಾಲರು, ಮುಖ್ಯಸ್ಥರು, ಕಲಾ ಇತಿಹಾಸ ವಿಭಾಗ, ಚಿತ್ರಕಲಾ ಪರಿಷತ್ತು, ಬೆಂಗಳೂರು.

ಒಟ್ಟಾರೆಯಾಗಿ ಈ ಚಿತ್ರವನ್ನು ದೃಶ್ಯ ಕಲೆಯ ಹಿನ್ನೆಲೆಯಲ್ಲಿ ಗಮನಿಸಿದಾಗ ಶ್ರೀ ವಾದಿರಾಜರನ್ನು ಬಿಂಬಿಸುವ ಒಂದು ಅತ್ಯುಪಯುಕ್ತ ದೃಶ್ಯ ಪುರಾವೆಯಾಗಿದೆ. ಮಧ್ವಯತಿಗಳ ಭಾವ ಚಿತ್ರಗಳ-ಶಿಲ್ಪಗಳ ಕೆಲವೇ ಉದಾಹರಣೆಗಳು ಇವೆ. ಅದರಲ್ಲೂ ಶ್ರೀ ವಾದಿರಾಜರ ಚಿತ್ರಗಳು ತೀರ ಅಪರೂಪವೇ ಎಂದು ಹೇಳಬಹುದು (ನಮ್ಮ ಇತ್ತೀಚಿನ ಅಧ್ಯಯನದಲ್ಲಿ ಹಂಪಿಯ ವಿರುಪಾಕ್ಷ ದೇವಸ್ಥಾನದಲ್ಲಿನ ಒಳಮಾಳಿಗೆಯ ಬೋಧಿಗೆಯಲ್ಲಿ ರಚನೆಗೊಂಡಿರುವ ಯತಿಗಳ ಮತ್ತು ಯತಿಗಳ ಶಿಷ್ಯರ ಚಿತ್ರ ಪ್ರಾಯಃ ವಾದಿರಾಜರನ್ನು ಮತ್ತು ಗುರುಗಳಾದ ಶ್ರೀ ವ್ಯಾಸರಾಜರನ್ನು ಬಿಂಬಿಸುತ್ತದೆ.)

ಚಿತ್ರದಲ್ಲಿನ ಆಕೃತಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಹಲವಾರು ವಿಶಿಷ್ಟ ಅಂಶಗಳು ಬೆಳಕಿಗೆ ಬರುತ್ತದೆ. ಮೊದಲನೆಯದಾಗಿ ವೇದವ್ಯಾಸ, ವಿಠಲ ಹಾಗೂ ಕೃಷ್ಣರ ಆಕೃತಿಗಳನ್ನು ನೀಲಿವರ್ಣದಲ್ಲಿ ಚಿತ್ರಿಸಿರುವದು. ಇದು ಒಂದು ರೀತಿಯಲ್ಲಿ ಮೂರು ವ್ಯಕ್ತಿಗಳನ್ನು ಒಂದೇ ಎಂದು ನಂಬಿಕೆಗಳ ಪ್ರಕಾರ ಬಿಂಬಿಸುವುದಾಗಿದೆ. ಎರಡನೆಯದಾಗಿ ಹಯಗ್ರೀವ, ವರಾಹ, ನರಸಿಂಹ ಹಾಗೂ ಬಲರಾಮರ ಆಕೃತಿಗಳನ್ನು ಶ್ವೇತವರ್ಣದಲ್ಲಿ ಚಿತ್ರಿಸಿದೆ. ವಿಶೇಷವೆಂದರೆ ಹಯಗ್ರೀವನ ರೂಪವಾದ ಹಯವನ್ನು (ಅಶ್ವ) ಶ್ವೇತವರ್ಣದಲ್ಲಿಯೇ ಬಿಂಬಿಸಿವೆ. ಈ ಪ್ರಮುಖ ಆಕೃತಿಗಳ ವರ್ಣ ಸಂಯೋಜನೆಯ ಸಾಂಕೇತಿಕತೆಯು ಅರ್ಥಪೂರ್ಣವಾಗಿ ಮೂಡಿಬಂದಿದೆ. ಇನ್ನು ವರಾಹ ದೇವರ ಅರ್ಧಾಂಗಿ – ಭೂದೇವಿ ಹಾಗೂ ನರಸಿಂಹನ ಅರ್ಧಾಂಗಿ ಲಕ್ಷ್ಮೀಯರ ಆಕೃತಿಗಳನ್ನು ತೆಳು ಹಳದಿ ಬಣ್ಣದಲ್ಲಿ ಬಿಂಬಿಸಿದೆ. ದೇವತೆಗಳನ್ನು ರಚಿಸುವಲ್ಲಿ ಆಭರಣಗಳನ್ನು ಹಾಗೂ ಅಲಂಕಾರಿಕ ರೇಖೆಗಳನ್ನು ದುಡಿಸಿಕೊಂಡಿದೆ. ವಿಶೇಷವಾಗಿ ಈ ಚಿತ್ರವನ್ನು ರಚಿಸಿದ ಕಲಾವಿದನಿಗೆ ಇಲ್ಲಿ ರಚಿಸಬೇಕಾಗಿದ್ದ ಆಕೃತಿಗಳ ಸೃಷ್ಟಿ ಹಾಗೂ ನೈಜ ಕಲ್ಪನೆ ಇದ್ದುದು ಕಂಡುಬರುತ್ತೆ. ಅಂದು ಪ್ರಚಲಿತವಲ್ಲಿದ್ದ ಚಿತ್ರಕಲೆಯ ಶೈಲಿಯ ಪರಿಮಿತಿಯಲ್ಲಿಯೇ ಸಾಕಷ್ಟು ಕಾಲ್ಪನಿಕವಾಗಿ ನೈಜವಾಗಿ ಚಿತ್ರಗಳನ್ನು ಇಲ್ಲಿ ರಚಿಸಿದ್ದಾನೆ.

ಹಯಗ್ರೀವರ ಆಕೃತಿಗಳಲ್ಲಿ ತದ್ರೂಪತೆಯನ್ನು ತಂದಿರುವುದು ಕಲಾವಿದನ ಚಿತ್ರ ರಚನಾ ತಾಂತ್ರಿಕತೆಯನ್ನು ಹಾಗೂ ಸಿದ್ಧಹಸ್ತತೆಯನ್ನು ಸೂಚಿಸುತ್ತದೆ. ಮುಖ್ಯವಾಗಿ ಪ್ರಾರಂಭದಲ್ಲಿಯೇ ಇರುವ ಹಯಗ್ರೀವನ ಕುಳಿತ ಆಕೃತಿಯು ಶ್ರೀವೇದವ್ಯಾಸರೊಂದಿಗೆ ಸಂಭಾಷಿಸುತ್ತಿರುವಂತಹ ಕಲ್ಪನೆ– ಅದೇ ರೀತಿ ಹಯಗ್ರೀವ–ವಾದಿರಾಜರನ್ನು, ಹಯಗ್ರೀವರನ್ನು ಗಮನಿಸುತ್ತಿರುವಂತೆ ಬಿಂಬಿತವಾಗಿರುವುದು ಮೇಲಿನ ಆಕೃತಿಯನ್ನೇ ಪುನರಾವರ್ತಿಸುವ ಪರಿಯನ್ನು ನೋಡಬಹುದು. ವಿಶೇಷವೆಂದರೆ ಈ ಆಕೃತಿಗಳನ್ನು ಅತ್ಯಂತ ನೈಜವಾಗಿ ರಚಿಸಿರುವ ಪರಿ–ಗಮನಸೆಳೆಯುತ್ತದೆ. ಹಯಗ್ರೀವ – ಹಯವದನ(ಅಶ್ವ)ರ ಮುಖದ ರಚನೆ ತದ್ರೂಪತೆಯಿಂದ ಕೂಡಿರುವುದು, ಸಾಂಕೇತಿಕವಾಗಿ ಹಯಗ್ರೀವ ಪರಿಕಲ್ಪನೆಯನ್ನು ಸ್ಪಷ್ಟಪಡಿಸುತ್ತದೆ. ಇನ್ನು ವೇದವ್ಯಾಸರ ಆಕೃತಿಯನ್ನು ಗಮನಿಸಬಹುದು. ಜಟಾ–ದಾಡಿಗಳಿಂದ ಕೂಡಿದ, ನೀಲವರ್ಣದ ಮೈಕಾಂತಿಯೊಂದಿಗೆ ಯೋಗಪಟ್ಟಣದಲ್ಲಿ ಆಸೀನರಾದ ರೀತಿ ಸಮ್ಯಕ್ ಜ್ಞಾನದ ಪ್ರತೀಕವಾಗಿದೆ. ಇಂತಹದೇ ಹಲವಾರು ದೃಶ್ಯ ದೃಷ್ಟಾಂತಗಳನ್ನು ಮಧ್ಯಕಾಲೀನ ಶಿಲ್ಪಗಳಲ್ಲಿ ಕಾಳಾಮುಖ ಯತಿಗಳನ್ನು ಬಿಂಬಿಸುವಲ್ಲಿ ಕಾಣಬಹುದು. ಯೋಗಪಟ್ಟ ಧರಿಸುವುದು, ಯೋಗಿಗಳು ಅಲ್ಲದೇ ದಕ್ಷಿಣಾಮೂರ್ತಿ ಶಿವನಾಕೃತಿ ಗಳಲ್ಲಿಯೂ ಕಾಣಬಹುದು.

ಶ್ರೀ ವಾದಿರಾಜರನ್ನು ಬಿಂಬಿಸುವುದು ಚಿತ್ರದ ಮುಖ್ಯ ಉದ್ದೇಶ. ಆದರೆ ವಾದಿರಾಜರಿಗೆ ಪೂರಕವಾಗಿ ಭೂದೇವಿ ಸಹಿತ ವರಾಹ, ಲಕ್ಷ್ಮೀನರಸಿಂಹ ಹಾಗೂ ಪಂಢರಪುರ ವಿಠಲರ ಚಿತ್ರಣ ಇಲ್ಲಿ ರಚನೆಗೊಂಡಿವೆ. ಪ್ರಾಯಃ ಈ ಎಲ್ಲ ದೇವತೆಗಳು ಮಾನವ–ಪ್ರಾಣಿ ಸಂಬಂಧ (Zoo anthropomorphic) ವನ್ನು ಬಿಂಬಿಸುತ್ತವೆ. ಹಯಗ್ರೀವ–ವರಾಹ–ನರಸಿಂಹ–ಎಲ್ಲರೂ ಮಾನುಷ–ದೇವ (ಪ್ರಾಣಿಮುಖ ಹೊಂದಿರುವುದು) ಇಲ್ಲಿ ಒಂದು ರೀತಿಯ ತಾದಾತ್ಮ್ಯತೆಯನ್ನು ತರಲು ಉದ್ದೇಶವಿದ್ದಂತೆ ತೋರುತ್ತದೆ. 'ವಾದಿರಾಜರ'–'ಹಯವದನ'ರ ಚಿತ್ರಣವೇ ಜೀವಾಳವಾಗಿ ಪ್ರಸ್ತುತ ಚಿತ್ರ ಒಂದು ತೆರನಾದ ಐತಿಹಾಸಿಕ ದಾಖಲೆಯಾಗುತ್ತದೆ.

ಚಿತ್ರದ ರಚನಾ ಕಾಲವನ್ನು ಪ್ರಾರಂಭದಲ್ಲಿ ಸುಮಾರು ಕ್ರಿ.ಶ. ೧೮೫೦ಕ್ಕೆ ಸೇರಿಸಬಹುದೆಂದು ಊಹಿಸಲಾಗಿದೆ. ಚಿತ್ರದಲ್ಲಿನ ಆಕೃತಿಗಳ ರಚನಾ ಶೈಲಿ, ವರ್ಣಸಂಯೋಜನೆ ಹಾಗು ಅಲಂಕಾರವನ್ನು ವಿವರವಾಗಿ ಗಮನಿಸಿದರೆ ನಮ್ಮ ಅನಿಸಿಕೆ ಸರಿ ಎನಿಸುತದೆ. ವಿಶೇಷವಾಗಿ ಹಯಗ್ರೀವ, ವರಾಹ ಕೇಶವಿನ್ಯಾಸ ನಮ್ಮ ಮೈಸೂರು ಸಾಂಪ್ರದಾಯಿಕ ಭಿತ್ತಿಚಿತ್ರಗಳಲ್ಲಿನ ಆಕೃತಿಗಳನ್ನು ನೆನಪಿಗೆ ತರುತ್ತದೆ. ಅಲ್ಲದೇ, ವಿಜಯನಗರ ಚಿತ್ರ ಶೈಲಿಯ ಸೊಗಡು ಸ್ಪಷ್ಟವಾಗಿ ಈ ಚಿತ್ರಗಳಲ್ಲಿ ಉಳಿದುಕೊಂಡು ಬಂದಿದೆ. ಆಕೃತಿಗಳ ಹಾವಭಾವ, ಬಾಹ್ಯರೇಖಾ ಲಾಲಿತ್ಯ, ವರ್ಣ ಸಂಯೋಜನೆಗಳು ಬಹು ಸುಂದರವಾಗಿ ರಚಿತವಾಗಿವೆ. ಈ ಎಲ್ಲಾ ಅಂಶಗಳನ್ನು ಗಮನಿಸಿ ಪ್ರಸ್ತುತ ಚಿತ್ರವನ್ನು ೧೮೫೦ರ ಕಾಲಘಟಕ್ಕೆ ಸೇರಿಸುವುದು ಸೂಕ್ತವೆನಿಸುತ್ತದೆ. ಅಲ್ಲದೇ ಶ್ರೀ ವಾದಿರಾಜರನ್ನು ಬಿಂಬಿಸುವ ಅಪರೂಪದ ಚಿತ್ರ ಇದಾಗಿದೆ. ನಂತರದ ಕಾಲಘಟ್ಟದಲ್ಲಿ ವಾದಿರಾಜ–ಹಯಗ್ರೀವರ ಕ್ಯಾಲೆಂಡರ್‌ಗಳು ಸಾಕಷ್ಟು ರೀತಿಯಲ್ಲಿ ಪ್ರಕಟಗೊಂಡಿರುವುದನ್ನು ಇಲ್ಲಿ ಸ್ಮರಿಸಬಹುದು.

ಡಾ. ಜ್ಯೋತ್ಸ್ನಾ ಕಾಮತ್*

# ಕಮಲಾದೇವಿ ಚಟ್ಟೋಪಾಧ್ಯಾಯರು ಹಾಗೂ ಒಂದು ಕಲಾಪ್ರಸಂಗ

ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರು ಹುಟ್ಟಿನಿಂದ ಕನ್ನಡಿತಿ (೧೯೦೩-೧೯೮೮). ದಕ್ಷಿಣ ಕನ್ನಡ ಜಿಲ್ಲೆಯವರು. ಅವರ ತಂದೆ ಅನಂತಯ್ಯ ಧಾರೇಶ್ವರ ಅವರು ಬ್ರಿಟಿಶ ಭಾರತದಲ್ಲಿ ಕಲೆಕ್ಟರ್ (ಈಗಿನ ಡಿ.ಸಿ)ಯಂತಹ ಉನ್ನತ ಹುದ್ದೆಯಲ್ಲಿ ನಿವೃತ್ತರಾದವರು. ಸ್ವಾತಂತ್ರ್ಯ ಹೋರಾಟದ ಮುಂಚೂಣಿಯಲ್ಲಿದ್ದ ಕಮಲಾದೇವಿ, ಇನ್ನೊಬ್ಬ ಪ್ರಸಿದ್ಧ ಸ್ವಾತಂತ್ರ್ಯ ಯೋಧೆ, ಕವಿ, ರಾಜಕಾರಣಿ ಭಾರತದ ಕೋಗಿಲೆಯೆಂದು ಖ್ಯಾತಿವೆತ್ತ ಸರೋಜಿನಿ ನಾಯ್ಡು ಅವರ ಸೋದರರಾಗಿದ್ದ ಹರೀಂದ್ರನಾಥ ಚಟ್ಟೋಪಾಧ್ಯಾಯರನ್ನು ಮದುವೆಯಾಗಿದ್ದರು. ಜನ್ಮವೆತ್ತಿದ ಮಂಗಳೂರಿನಲ್ಲಿ ಅವರ ಬಾಲ್ಯ ವಿದ್ಯಾಭ್ಯಾಸಗಳು ಜರುಗಿದವು. ಅಂದಿನ ದಕ್ಷಿಣ ಕನ್ನಡ ಜಿಲ್ಲೆ, ಮದ್ರಾಸ್ ಪ್ರಾಂತಕ್ಕೆ ಒಳಪಟ್ಟಿತ್ತು. ಹೀಗಾಗಿ ಅವರು ತಾರುಣ್ಯದಲ್ಲೇ ಕೈಕೊಂಡ ರಾಜಕೀಯ-ಸಾಮಾಜಿಕ ಚಟುವಟಿಕೆಗಳಿಗೆ ಮದ್ರಾಸು ನೆಲೆಯಾಯಿತು. ಕೊನೆಗೆ ರಾಷ್ಟ್ರಮಟ್ಟದ ಸ್ವಾತಂತ್ರ್ಯ ಹೋರಾಟಗಾರ್ತಿಯಾಗಿ ಬೆಳೆದರು. ಗಾಂಧೀಜಿಯವರನ್ನು ಗುರುವಾಗಿ ಸ್ವೀಕರಿಸಿದ ಅವರು, ಸ್ವಾತಂತ್ರ್ಯ ಪ್ರಾಪ್ತಿಯ ಬಳಿಕ ಯಾವುದೇ ರಾಜಕೀಯ ಹುದ್ದೆ (ರಾಜ್ಯಪಾಲ, ಸಚಿವೆ, ರಾಯಭಾರಿ, ಉಪರಾಷ್ಟ್ರಪತಿ) ಸ್ವೀಕರಿಸಲು ಒಪ್ಪಲಿಲ್ಲ. ಆದರೆ ಅಂದಿನ ಪ್ರಧಾನಿ ಜವಾಹರಲಾಲ ನೆಹರೂ ಅವರು ಅಖಿಲ ಭಾರತದ ಕಲಾಕುಶಲ ನಿಗಮದ ಅಧ್ಯಕ್ಷರಾಗಲು ಸೂಚಿಸಿದಾಗ ಸಂತೋಷದಿಂದ ಒಪ್ಪಿಕೊಂಡರು. ಅದು ಗೌರವಸೇವೆ (honorary) ಯ ಹುದ್ದೆಯಾಗಿತ್ತು. ಹುಟ್ಟಾ ಕಲಾವಿದೆಯಾದ ಆಕೆಗೆ ಭಾರತದ ಅನನ್ಯ ಕೈಗಾರಿಕೆಗಳ ಬಗ್ಗೆ ವಿಶೇಷ ಮಮತೆ ಇತ್ತು. ಪ್ರೋತ್ಸಾಹವಿಲ್ಲದೇ ಮಣ್ಣುಗೂಡಲಿದ್ದ ಅದೆಷ್ಟೊ ಕುಶಲ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸಿದ ಹಿರಿಮೆ ಅವರದು. ಲಕ್ಷಗಟ್ಟಲೆ ಕಾರ್ಮಿಕರಿಗೆ ಉದ್ಯೋಗ ಕಲ್ಪಿಸಿದ್ದೇ ಅಲ್ಲದೇ, ರಾಷ್ಟ್ರೀಯ ಮಟ್ಟದಲ್ಲಿ ಪ್ರತಿಷ್ಠೆ-ಪುರಸ್ಕಾರಗಳ ಯೋಜನೆ ಪ್ರಾರಂಭಿಸಿದರು. ನಾಶವಾಗಲಿದ್ದ ಅಪರೂಪದ ಕಲಾವಸ್ತುಗಳನ್ನು ಕಷ್ಟಪಟ್ಟು ಉಳಿಸಿಕೊಂಡರು. ಅವರ ಜನ್ಮಭೂಮಿಯಾದ ತುಳುನಾಡಿನಲ್ಲಿ ನಡೆದ ಒಂದು ಕಲಾಪ್ರಸಂಗವನ್ನು ಅವರು ತಮ್ಮ ಆತ್ಮಕತೆಯಲ್ಲಿ ಹೇಳಿಕೊಂಡಿದ್ದಾರೆ.

ಈ ಸಂದರ್ಭದಲ್ಲಿ ಅವರು ದಕ್ಷಿಣ ಕನ್ನಡದ ಹಳ್ಳಿಗಳಲ್ಲಿ ಸಂಚರಿಸಿ ಅಪರೂಪದ ಕಲಾವಸ್ತುಗಳನ್ನು ಗುರುತಿಸುತ್ತಿದ್ದರು. ಭೂತಪೂಜೆ ತುಳುನಾಡಿನ ವೈಶಿಷ್ಟ್ಯ ! ಭೂತದೇವುಳಗಳಲ್ಲಿ ಕೆಲವೆಡೆ ಅವರಿಗೆ ತುಂಬ ಕಲಾತ್ಮಕವಾಗಿದ್ದ ವಸ್ತುಗಳು ಕಂಡವು. ೧೬ ರಿಂದ ೧೮ ಅಡಿ ಎತ್ತರದ ಕಾಷ್ಠಶಿಲ್ಪಗಳಲ್ಲಿ ಸುಂದರವಾದ ಕೆತ್ತನೆಯ ಆನೆಗಳು, ಕುದುರೆಗಳು ಇನ್ನಿತರ ಕಲಾವಸ್ತುಗಳಿದ್ದವು. ಕೆಲವು ಭೂತ ವಿಗ್ರಹಗಳೂ, ಕೊಂಚ ಭಗ್ನವಾಗಿದ್ದರಿಂದ ಪೂಜೆಗೆ ಅನರ್ಹವಾಗಿದ್ದವು. ಇಂಥವನ್ನು ದೇವಾಲಯದ ಪ್ರಾಂಗಣದಲ್ಲಿ ಒಟ್ಟಲಾಗಿತ್ತು. ಕಮಲಾದೇವಿ, ತಜ್ಞರಿಂದ ಅವನ್ನು ಪರಿಶೀಲಿಸಿದರು. ಕೆಲವಂತೂ ೮೦೦ ವರ್ಷಕ್ಕೂ ಹಿಂದಿನವಾಗಿದ್ದವು ಎನ್ನುವುದು ಖಚಿತವಾಯಿತು.

ಮಳೆ ಗಾಳಿಗಳಿಂದ ಇನ್ನು ಮೇಲಾದರೂ ಅವನ್ನು ಸಂರಕ್ಷಿಸಬೇಕು, ಕಾಯ್ದಿರಿಸಿ ಪ್ರೇಕ್ಷಣೀಯವಾಗಿಸಬೇಕು ಎಂದು ಕಮಲಾದೇವಿ ಯೋಚಿಸಿದರು. ಕರಕುಶಲ ಕಲಾಮಂಡಳಿ ಅವುಗಳಲ್ಲಿ ಅಪರೂಪವಾದವನ್ನು ಖರೀದಿಸುವುದು ಮತ್ತು ದಿಲ್ಲಿಗೆ ಒಯ್ದು ದೇಶದ ಪ್ರಸಿದ್ಧ ಕಲಾಲಯಗಳಲ್ಲಿ ಅವಕ್ಕೆ ಸ್ಥಾನ ನಿರ್ಮಿಸುವದು, ಅವರ ಉದ್ದೇಶವಾಗಿತ್ತು. ಆಯಾ ದೇವಾಲಯಗಳಿಗೆ ಹಣ ಸಂದಿತು. ಅಷ್ಟೇ ಅಲ್ಲ, ಅನರ್ಹವಾಗಿದ್ದ ಶಿಲ್ಪಗಳ ಬದಲಿ ಶಿಲ್ಪಗಳನ್ನು ಹೊಸದಾಗಿ ನಿರ್ಮಿಸಿ ಆ ದೇವಸ್ಥಾನಗಳಿಗೆ ಕೊಡಿಸುವ ವ್ಯವಸ್ಥೆಯೂ ಆಯಿತು. ಅಂಥ ಕೆಲಸವನ್ನು ಸೊಗಸಾಗಿ ನಿರ್ವಹಿಸುವ ಶಿಲ್ಪಿಗಳು ಆಗ ಇನ್ನೂ ಬದುಕಿದ್ದರು. ದೇವುಳಗಳ ಆಡಳಿತ ಮಂಡಳಿಯೂ ಇದನ್ನು ಒಪ್ಪಿಕೊಂಡು ಹಣ ಪಡೆಯಿತು.

ದುರ್ದೈವದಿಂದ ಇದೇ ಹೊತ್ತಿಗೆ ಕರಕುಶಲ ನಿಗಮ ಮಂಡಳಿಯ ಅಧ್ಯಕ್ಷ ಸ್ಥಾನದಿಂದ ಕಮಲಾದೇವಿ ಅವರ ಬಿಡುಗಡೆ ಆಯಿತು. ಪ್ರಧಾನಿ ಇಂದಿರಾಗಾಂಧಿ ಇದಕ್ಕೆ ಕಾರಣರಾಗಿದ್ದರು. ಕಮಲಾದೇವಿ ಅವರ ನೇರ ವ್ಯವಹಾರ, ನಿರ್ಭಯದ ನಿಲುವು ಅವರ ಸ್ಥಾನಕ್ಕೆ ಕುತ್ತು ಆಗಿ

* ಶಶಿಕಿರಣ್ ಅಪಾರ್ಟ್‌ಮೆಂಟ್ಸ್, ೧೮ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು.

ಪರಿಣಮಿಸಿದವು. ಅವರ ಅಧ್ಯಕ್ಷ ಸ್ಥಾನ ರಾಜಕೀಯವಾಗಿರಲಿಲ್ಲ. ಆದರೆ ಪಟ್ಟಭದ್ರಾಸಕ್ತರಿಗೆ ಅನುಕೂಲಕರವೂ ಆಗಿರಲಿಲ್ಲ !

ಒಮ್ಮೊಂದೊಮ್ಮೆ ಅಧಿಕಾರಶಾಹಿಯ ಬಣ್ಣ ಬದಲಾಯಿತು ! ಆಡಿಟ್ ಪಾರ್ಟಿಯ ರಿಪೋರ್ಟ್ ಹೊರಬಿತ್ತು. ಮಾಜಿ ಕರಕುಶಲ ಮಂಡಳಿಯ ಅಧ್ಯಕ್ಷರ ಆಡಳಿತಾವಧಿಯಲ್ಲಿ ಹುಳ ಹತ್ತಿ ಹಾಳಾದ ಕಟ್ಟಿಗೆಯ ಸಾಮಾನು (ಹಳೆ ದಾಸ್ತಾನು) ಖರೀದಿಸಿ ಸರಕಾರಿ ಬೊಕ್ಕಸಕ್ಕೆ ಲಕ್ಷಗಟ್ಲೆ ರೂಪಾಯಿಗಳ ವಂಚನೆ ಮಾಡಲಾಗಿದೆ ! ಅಷ್ಟೆ ಅಲ್ಲ, ನೀರೊಲೆಗೆ ಹಾಕಲು ಲಾಯಕ್ಕಾದ ಹಳೆ ಕಟ್ಟಿಗೆ ರಾಶಿಯ ಬದಲಾಗಿ ಒಳ್ಳೆಯ ಕಟ್ಟಿಗೆ ಸಾಮಾನುಗಳನ್ನು ದೇವಾಲಯ ಗಳಿಗೆ ಪೂರೈಸಲಾಗಿದೆ. ಇದರಿಂದ ಮಂಡಳಿಗೆ ಅಪಾರ ನಷ್ಟವಾಗಿದೆ ! ಇದು ಹೊರಬಿದ್ದ ವರದಿ.

ಸ್ಥಳೀಯ ಶಾಸಕರಿಗೆ ಇದರಿಂದ ಒಳ್ಳೆಯ ಗ್ರಾಸ ಸಿಕ್ಕಿತು. ಕಮಲಾದೇವಿ ತುಳುನಾಡಿನ ಕೆಲ ದೇವಾಲಯಗಳ ಪವಿತ್ರ ವಸ್ತುಗಳನ್ನು ವಿದೇಶದವರಿಗೆ ಮಾರಿ ಹಣ ಮಾಡುತ್ತಿದ್ದಾರೆ! ಎಂಬ ಪುಕಾರು ಎದ್ದಿತು. ದೂರನ್ನು ಪ್ರಧಾನಿಯ ಬಳಿ ಒಯ್ದರು. ಜೊತೆಗೆ ಸ್ಥಳೀಯ ದೇವಾಲಯಗಳ ಆಡಳಿತ ಮಂಡಳಿಯವರನ್ನು ಎತ್ತಿ ಕಟ್ಟಿ 'ದೊರೆಯಬಹುದಾಗಿದ್ದ ಲಕ್ಷಗಟ್ಟಲೆ ಹಣದಿಂದ ವಂಚಿತರಾದಿರಿ ! ಅತ್ಯಮೂಲ್ಯ ವಿಗ್ರಹಗಳೆಲ್ಲ ಕೈಬಿಟ್ಟು ವಿದೇಶಗಳಿಗೆ ಹೋದವು !' ಎಂದು ನಂಬಿಸಿದರು. ರೊಚ್ಚಿಗೆದ್ದ ದೇವಾಲಯದ ಟ್ರಸ್ಟಿಗಳಲ್ಲಿ ಅನೇಕರು ಹೊಸ ಪ್ರತಿಮೆಗಳನ್ನೆಲ್ಲ ದಾಸ್ತಾನಿಗೆ ತೆಗೆದುಕೊಂಡರೂ (stock taking) ಬದಲಿ ಹಳೇ ವಿಗ್ರಹಗಳ ಸಾಗಾಟ ಮಾಡಗೊಡಲೇ ಇಲ್ಲ ! ಮುಂದಾಗಿ ಕಳಿಸಲ್ಪಟ್ಟವು ಮಾತ್ರ ದಿಲ್ಲಿಯ ಸಂಗ್ರಹಾಲಯಗಳಲ್ಲಿ ಸುರಕ್ಷಿತವಾಗಿ ಉಳಿದವು.

ಅನಧಿಕೃತವಾಗಿ ಕಮಲಾದೇವಿಯವರ ಮೇಲೆ ಎರಡು ಆಪಾದನೆಗಳು ಸಾರಲ್ಪಟ್ಟವು. ಸರಕಾರಕ್ಕೆ ಹಾನಿ ಮಾಡಿದ್ದು ಮೊದಲನೆಯದಾದರೆ ವಿದೇಶಕ್ಕೆ ಅಪೂರ್ವ ಕಲಾಕೃತಿಗಳನ್ನು ಮಾರಾಟಕ್ಕೆ (!) ಸಾಗಿಸಿದ್ದು ಎರಡನೆಯದು. ಅವರು ಓರ್ವ ಕ್ರಿಮಿನಲ್ ಆಗಿ ಘೋಷಿತವಾಗುವದು ಬಾಕಿ ಇತ್ತು.

ಜಗತ್ಪ್ರಸಿದ್ಧ ಪ್ರಾಚ್ಯ ಕಲಾತಜ್ಞೆ, ಡಾ. ಸ್ಟೆಲಾ ಕ್ರಾಮ್‌ರಿಶ್ (Stella Kramrisch), ಕಮಲಾದೇವಿಯವರು ರಾಜಧಾನಿ ದಿಲ್ಲಿಗೆ ಸಾಗಿಸಿದ್ದ ಭೂತ-ವಿಗ್ರಹಗಳಲ್ಲಿ ಎರಡನ್ನು ಆಯ್ಕೆ ಮಾಡಿ ಅಮೇರಿಕೆಯಲ್ಲಿ ಸಂಘಟಿತವಾಗಿದ್ದ ಪ್ರತಿಷ್ಠಿತ ಅಂತರ್‍ರಾಷ್ಟ್ರೀಯ ಕಲಾ ಪ್ರದರ್ಶನಕ್ಕೆ ಸಾಗಿಸಿದ್ದರು. ಒಂದೊಂದನ್ನು ೧೦,೦೦೦ ಡಾಲರ್‌ಗಳಿಗೆ ವಿಮೆ ಇಳಿಸಲಾಗಿತ್ತು. ಈ ದೊಡ್ಡ ಮೊತ್ತದ [illegible] ಆಡಿಟ್ ಪಾರ್ಟಿಯ ಬಾಯಿಯನ್ನು ಕಟ್ಟಿಬಿಟ್ಟಿತು. ಸರಕಾರಿ ಅಪಪ್ರಚಾರ ನಿಂತಿತು.

ಈ ಘಟನೆ ಇಬ್ಬಗೆಯಲ್ಲಿ ಇರಿಯುವ ಖಡ್ಗವಾಗಿ ಪರಿಣಮಿಸಬಹುದಾಗಿತ್ತು. ಆದರೆ ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮೊಂದಿಗೆ ಪಾಲ್ಗೊಂಡ ಆಪ್ತರು ಸಹಾಯಕ್ಕೆ ಬಂದರು. ಅವರು ಹಳೇ ಭೂತವಿಗ್ರಹ ಕೊಡಮಾಡಿದ ದೇವಾಲಯವೊಂದರ ಟ್ರಸ್ಟಿಯೂ ಆಗಿದ್ದರಿಂದ ಅನಾಹುತ ತಪ್ಪಿತೆಂದು ಕಮಲಾದೇವಿ ಸ್ಮರಿಸಿಕೊಂಡಿದ್ದಾರೆ.

ಹಳೆಯ ಭೂತವಿಗ್ರಹಗಳ ಖರೀದಿ ಹೊಸವುಗಳ ವಿನಿಮಯ ಸಾಗಾಟಗಳೆಲ್ಲ ಪರಸ್ಪರ ವಿಶ್ವಾಸದ ಮೇಲೆಯೇ ನಡೆದಿದ್ದವು. "All these transactions had been conducted verbally with no documents with signatures' ಎಂದು ಕಮಲಾದೇವಿ ಒಪ್ಪಿಕೊಂಡಿದ್ದಾರೆ. ಈಗಿನಂತೆ ಟಿ.ವಿ. ಮಾಧ್ಯಮಗಳು ಇದ್ದರೆ, ತೇಜೋವಧೆ ಕೆಸರ ಎರಚಾಟ ಹೇಗಿರುತ್ತಿತ್ತೆಂಬುದು ಊಹೆಗೆ ಬಿಟ್ಟ ವಿಷಯ!

ಕರ್ನಾಟಕ ಇತಿಹಾಸ ಅಕಾದೆಮಿ ವರ್ಷ ವರ್ಷಕ್ಕೂ 'ಐತಿಹಾಸಿಕ ಪರಂಪರೆ ಉಳಿಸಿ !' ಸಪ್ತಾಹವನ್ನು ನಾಡಿನುದ್ದಕ್ಕೂ ಆಚರಿಸುತ್ತಿದೆ. ಹಳೇ ಪಳೆಯುಳಿಕೆಗಳ ಮೌಲ್ಯದ ಕುರಿತು ಜಾಗೃತಿ ಬೆಳೆಸುವದರಲ್ಲಿ ತೊಡಗಿದೆ. ಈಗ ೪೦ ವರ್ಷಗಳ ಹಿಂದೆ ಇಂಥ ಸಾಂಸ್ಕೃತಿಕ ಜಾಗೃತಿ ಬಿಂಬಿಸುವ ಸಂಸ್ಥೆ ಇದ್ದಿದ್ದರೆ, ಕೆಲವು ಧೀಮಂತರಾದರೂ ಕಮಲಾದೇವಿಯವರಿಗೆ ನೈತಿಕ ಬೆಂಬಲ ನೀಡುತ್ತಿದ್ದರೋ ಏನೋ !

ತನ್ನ ಜೀವನ ಸ್ಮೃತಿ ಗ್ರಂಥವಾದ Inner Recesses and outer spaces ದಲ್ಲಿ ಈ ಪ್ರಸಂಗವನ್ನು ಕಮಲಾದೇವಿ ಒಂದಿಷ್ಟು ನಂಜು ಇಲ್ಲದೇ ನಿರ್ಲಿಪ್ತತೆಯಿಂದ ಹೇಳಿಕೊಂಡಿದ್ದಾರೆ. ಅವರಿಗೆ ನಿಕಟರಾಗಿದ್ದ ಹಲವಾರು ರಾಷ್ಟ್ರೀಯ ಮುಖಂಡರ ಆತ್ಮೀಯ ಚಿತ್ರಣ ಆ ಗ್ರಂಥದಲ್ಲಿದೆ. ಸಮಕಾಲೀನ ರಾಜಕೀಯ ಘಟನೆಗಳ ಕೋಶವೇ ಅದಾಗಿದೆ. ಇದೊಂದು ಕಲಾಪ್ರಸಂಗವನ್ನು ಮಾತ್ರ ವೈಯಕ್ತಿಕವೆನಿಸಬಹುದಾದ ಸ್ತರದಲ್ಲಿ ಕಾಣಬಹುದಾಗಿದೆ.

ಆಧಾರ : Inner Recesses and outer spaces memoris Kamaladevi Chattopadhyaya, Navrang Publications, New Delhi 1986.

ಡಾ. ಎಸ್.ಎಂ. ನಾಗಭೂಷಣ*

# ಮುಳಗುಂದ ನಗರೇಶ್ವರ ದೇವಾಲಯದ ಕಂಬ ಶಾಸನ

ಮುಳಗುಂದ ಗದಗ ಜಿಲ್ಲೆ ಹಾಗು ತಾಲೂಕಿನ ಒಂದು ಹೋಬಳಿ, ಪಟ್ಟಣವಾಗಿದ್ದು ದಕ್ಷಿಣಕ್ಕೆ ೧೨ ಕಿ.ಮೀ. ದೂರದಲ್ಲಿದೆ. ಇದೊಂದು ಪ್ರಾಚೀನ ಐತಿಹಾಸಿಕ ಪಟ್ಟಣವಾಗಿದ್ದು, ಹೆಜ್ಜೆ ಹೆಜ್ಜೆಗೂ ದೇವಾಲಯ ಶಿಲ್ಪಮೂರ್ತಿಗಳು ಶಿಲಾಶಾಸನಗಳು ಶಿಥಿಲ ಶಿಲ್ಪಾವಶೇಷಗಳು ಕಾಣಸಿಗುತ್ತವೆ. ಇಡೀ ಪಟ್ಟಣವೇ ಒಂದು ಸಂಗ್ರಹಾಲಯದಂತಿದೆ. ರಾಷ್ಟ್ರಕೂಟರ ಕಾಲದಿಂದ ವಿಜಯನಗರ ಕಾಲದವರೆಗೆ, ಆಡಳಿತ ಕೇಂದ್ರವಾಗಿ ವ್ಯಾಪಾರ, ಸಾಹಿತ್ಯ, ಧಾರ್ಮಿಕ ಕೇಂದ್ರವಾಗಿ ಹೆಸರು ಪಡೆದಿದೆ. ಜೈನ, ಶೈವ, ಧರ್ಮಗಳ ನೆಲವೀಡಾಗಿ ನಯಸೇನನ ಜನ್ಮಸ್ಥಳ ಕರ್ಮಭೂಮಿಯಾಗಿ, ಇಂದ್ರನ ಅಮರಾವತಿಯನ್ನು ಮೀರಿಸುವ ಸುಂದರ ಸೊಬಗಿನ ಪಟ್ಟಣವಾಗಿ 'ಚತುರ್ಯುಗ ಪಟ್ಟಣ'ವೆಂದು ಅಲ್ಲಿನ ಶಾಸನಗಳ ಸಾಲಿನಲ್ಲಿ ಹಾಗು ಪುರಾಣಗಳಲ್ಲಿ ಉಲ್ಲೇಖವಿದೆ.

ಈ ಪ್ರಾಚೀನ ಚತುರ್ಯುಗ ಪಟ್ಟಣ ಮುಳಗುಂದದಲ್ಲಿ ಇದುವರೆವಿಗೆ ಅನೇಕ ಶಾಸನಗಳು ಪ್ರಕಟವಾಗಿವೆಯಾದರೂ ಕ್ಷೇತ್ರಕಾರ್ಯ ಕೈಗೊಂಡು ಹೋದ ಸಂಶೋಧಕರಿಗೆ ಏನಾದರೊಂದು ಹೊಸ ವಿಷಯ ಶಾಸನ ಶಿಲ್ಪಗಳು ಪತ್ತೆಯಾಗುತ್ತಲೇ ಇವೆ. ಪ್ರಸ್ತುತ ಶಾಸನ ಇತ್ತೀಚೆಗೆ ೧೯೯೯ರಲ್ಲಿ ಗಣಪತಿ ಉತ್ಸವ ಸಂದರ್ಭದಲ್ಲಿ ನಗರೇಶ್ವರ ದೇವಾಲಯ ಸ್ವಚ್ಛಗೊಳಿಸುವ ಸಂದರ್ಭದಲ್ಲಿ, ಕಂಬದಲ್ಲಿನ ಸುಣ್ಣದ ಪದರುಗಳನ್ನು ಕೆತ್ತಿದಾಗ ಶಾಸನವಿರುವುದು ಬೆಳಕಿಗೆ ಬಂದದ್ದು. ಸ್ಥಳೀಯ ಪ್ರಾಚಾರ್ಯರು, ನನ್ನ ಸಹೋದರರಾದ, ಶ್ರೀ ಎಚ್.ಬಿ. ಚರಂತಿಮಠರು ನನ್ನ ಗಮನಕ್ಕೆ ತಂದಿದ್ದರು. ನಾನು ಕೂಡಲೇ ಹೋಗಿ ಶಾಸನ ಪಡಿಯಚ್ಚು ತೆಗೆದುಕೊಂಡು ಬಂದು ಡಾ. ಎಚ್.ಆರ್. ರಘುನಾಥಭಟ್ಟರ ಸಹಾಯದಿಂದ ಶಾಸನ ಪಾಠವನ್ನು ಸಿದ್ಧಪಡಿಸಿದೆ.

ಶಾಸನ ನಗರೇಶ್ವರ ದೇವಾಲಯದ ನವರಂಗದ ಬಲಭಾಗದ ಭಿತ್ತಿಯ ಅರ್ಧಗಂಭದಲ್ಲಿದೆ. ೬೫" ಉದ್ದ, ೨೦" ಅಗಲವಾಗಿದ್ದು ಮೇಲಿನ ೬" ನಲ್ಲಿ ನಂದಿ ಶಿವಲಿಂಗ ಆಕಳುಕರು ರೇಖಾಚಿತ್ರವಿದೆ. ಕೆಳಭಾಗದಲ್ಲಿ ಒಂದು ಇಂಚಿನ ಗಾತ್ರದ ಕನ್ನಡ ಲಿಪಿ ಹಾಗು ಭಾಷೆಯಲ್ಲಿ ಒಟ್ಟು ೭೬ ಸಾಲುಗಳಿವೆ. ಇದರಲ್ಲಿ ಎರಡು ಶಾಸನಗಳಿದ್ದು, ಬೇರೆ ಬೇರೆ ಕಾಲ ಘಟ್ಟದಲ್ಲಿ ರಚಿಸಲಾಗಿದೆ.

**ಶಾಸನ ತಿಥಿ :** ಶಾಸನ ನೋಡಲು ಒಂದೇ. ಆದರೂ ಎರಡು ಶಾಸನಗಳಿವೆ. ಮೊದಲ ಶಾಸನ ಹೊಯ್ಸಳ ೨ನೇ ವೀರಬಲ್ಲಾಳನ ಕಾಲದಲ್ಲಿ (ಸಾ. ೩೫) ಶಕ ವರ್ಷ ೧೧೨೫ನೇ ರೌದ್ರನಾಮ ಸಂವತ್ಸರದ ಮಾಘ ಬಹುಳ ಅಮವಾಸೆ ಆದಿವಾರ ಕ್ರಿ.ಶ. ೧೨೦೧ ಫೆಬ್ರವರಿ ೪, ಭಾನುವಾರಕ್ಕೆ ಸರಿಹೊಂದುತ್ತದೆ.

ಮತ್ತೊಂದು ಶಾಸನ (ಸಾ. ೬೬-೭೬ ವರೆಗೆ) ಶ್ರೀಮತು ಯಾದವನಾರಾಯಣಂ ಪ್ರತಾಪ ಚಕ್ರವರ್ತಿ ಶ್ರೀ ಸಿಂಗಣದೇವನ ಶಾಸನದ ಕಾಲ ಸಾಲು ೭೩ರಲ್ಲಿರುವಂತೆ ಸಿಂಘಣದೇವ ವರ್ಷದ ೧೮ನೇ ಪಾರ್ಥಿವ ಸಂವತ್ಸರದ ಮಾರ್ಗಶಿರ ಅಮವಾಸೆ, ಸೋಮವಾರ, ಕ್ರಿ.ಶ. ೧೨೨೫ ನವೆಂಬರ್ ೨, ಭಾನುವಾರ ಅಥವಾ ೧೨೨೫ ಡಿಸೆಂಬರ್ ೭ಕ್ಕೆ ಸೋಮವಾರಕ್ಕೆ ಸರಿಹೊಂದುತ್ತದೆ. ಇಲ್ಲಿ 'ಸಿಂಘಣದೇವ ವರ್ಷ' ಹೊಸದಾಗಿ ತಿಳಿದುಬರುತ್ತದೆ. (Era of Singanadeva of Sevanna)

**ಸ್ಥಳನಾಮಗಳು :** ಶಾಸನದಲ್ಲಿ ಉಲ್ಲೇಖಿಸಲಾದ ಸ್ಥಳನಾಮಗಳು – ಶ್ರೀ ಮದನಾದಿ ಚಾತುರ್ಯ್ಯಗದ ಪಟ್ಟಣಂ, ಮುಳ್ಗುಂದನಾಡು, ಗಂಗೆಗಂ ಕಾಸರವ ವಾರಣಾಸಿ, ಕುರುಕ್ಷೇತ್ರ, ಪ್ರಯಾಗ, ಶ್ರೀ ಪರ್ವತ, ಸಿಂಧವಾಡಿ, ಹಗರಿಟಗೆ ನಾಡು.

**ಶಾಸನದ ರಾಜಕೀಯ ಅಂಶಗಳು :** ಪ್ರಸ್ತುತ ಶಾಸನದ ಮೊದಲ ಶಾಸನ ಹೊಯ್ಸಳ ೨ನೇ ಬಲ್ಲಾಳನ ಕ್ರಿ.ಶ. ೧೨೦೧ರ ಶಾಸನವಾಗಿದ್ದು, "ಸ್ವಸ್ತ್ಯನವರತ ವಿನಮಶೇಷ ಮಾಂಡಳಿಕ ಮೌಳಿ ಮಾಣಿಕ್ಯ ನಿರಾಜಿತಾಂಘ್ರಿದ್ವಯನ ಶೇಷ ಪೃಥ್ವೀವಲ್ಲಭ ನಮರತ್ನಂಗನಾ ವಲ್ಲಭ, ಶನಿವಾರ ಸಿಧ್ಧಿ, ಗಿರಿದುರ್ಗಮಲ್ಲ, ನಿಶಂಕ ಪ್ರತಾಪ ಚಕ್ರವರ್ತಿ ಹೊಯಿಸಣ ವೀರಬಲ್ಲಾಳದೇವ" ಎಂದು ಬಣ್ಣಿಸಿದೆ. ಆತನ ಸಾಮಂತನಾದ

*ಡಾ. ಸಿನ್‌ಫಾಲ್ ಬಿಲ್ಡಿಂಗ್, ೧೦೨೪೧/ಬಿ, ತಾವರಗೆರೆ ನರ್ಸಿಂಗ್ ಹೋಂ ರಸ್ತೆ, ಧಾರವಾಡ – ೮.

(ಸಾಲು ೧೦ ರಿಂದ) ಬಲ್ಲಾಳ ಭೂಪಾಳಕಂ ॥ ತತ್ಪಾದ ಪದ್ಮೋಪಜೀವಿ ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತ ಮಹಾಪಸಾಯಿತಂ ಪರಮ ವಿಶ್ವಾಸಿ ಸ್ವಾಮಿ ಸಂತೋಷಕ ಸ್ವಾಮಿದ್ರೋಹರಗಂಡ ಶರಣಾಗತ ವಜ್ರಪಂಜರ, ವೈರಿಗಂಡ ಗೋಪಾಳ, ಪ್ರಜೆ ಮೆಚ್ಚೆ ಗಂಡನಾಶ್ರಿತ ಜನ ಕಲ್ಪವೃಕ್ಷ ಬನ್ದುಜನ ಚಿಂತಾಮಣಿ ಮಂತ್ರಿ ಮಾಣಿಕ್ಯತಿರಿ ಚಾಲುಕ್ಯ ಕರ್ಪುರದ ದಿಷ್ಠಾಯಕ ಶ್ರೀ ವಾಸುದೇವರ ದಿವ್ಯ ಶ್ರೀ ಪಾಧಾರಾಧಕರು ಮಪ್ಪ ಕುಮಾರಂ ಗೊಯ್ಯಣನ ಸೋಮಯ್ಯ ನಾಗಯ್ಯಂಗಳು ಮುಳ್ಗುಂದ ಹನ್ನೆರೆಡು ಮಾಂಸುಖ ಸಂಕಥಾ ವಿನೋದಿಂದಾಳುತ್ತಮಿರೆ" ಎನ್ನುವಲ್ಲಿ ಗೊಯ್ಯಣ ಮತ್ತು ಅವನ ಮಕ್ಕಳಾದ ಸೋಮಯ್ಯ ನಾಗಯ್ಯ ಎಂಬವರು ೨ನೇ ವೀರಬಲ್ಲಾಳನ ಮಾಂಡಲಿಕರಾಗಿದ್ದರು ಎಂದು ತಿಳಿಯುತ್ತದೆ.

ಎರಡನೇ ಶಾಸನ ಯಾದವ (ಸೇವುಣ) ಸಿಂಘಣನ ಶಾಸನವಿದ್ದು (ಸಾ. ೬೬-೭೭) ಸ್ವಸ್ತಿ ಶ್ರೀಮತ ಯಾದವ ನಾರಾಯಣಂ ಪ್ರತಾಪ ಚಕ್ರವರ್ತಿ ಶ್ರೀ ಸಿಂಘಣದೇವ "ಪಾದ ಪದ್ಮೋಪ ಜೀವಿ ರಾಯಸೆಟ್ಟಿಗನ ವಾರಣ ಆರ್ಯ್ಯಮಲ್ಲ ಸೆಟ್ಟಿಯ ಸರ್ವಾಂಗ ಲಕ್ಷ್ಮೀರಾಜಲವಾರಿಜ ವರಜಾಹ್ನವಿಜನಿತ ಕಾರ್ತಿಕೇಯನಪ್ಪ ಹೊನ್ನ ಬಮ್ಮಿಸೆಟ್ಟಿಯರು ಸಮಸ್ತ ದೇಶಾಧಿಕಾರ ಮಾಡುತಿರ್ದ್ದ, ಶ್ರೀ ಮದನಾದಿ ಚಾತುರ್ಯ್ಯುಗದ ಪಟ್ಟಣಂ ಮುಳ್ಗುಂದ ನಗರ", ಎನ್ನುವಲ್ಲಿ "ಬಮ್ಮಿಸೆಟ್ಟಿ" ಸಾಮಂತ ಆಡಳಿತಗಾರನಾಗಿದ್ದನೆಂದು ತಿಳಿದುಬರುತ್ತದೆ.

**ಶಾಸನದ ಧಾರ್ಮಿಕ ಅಂಶಗಳು :** ಪ್ರಸ್ತುತ ಶಾಸನ ಶೈವಧರ್ಮದ ದಾನ ಶಾಸನವಾಗಿದ್ದು, ಮೊದಲ ಶಾಸನದಲ್ಲಿ ಹೊಯ್ಸಳ ಎರಡನೇ ಬಲ್ಲಾಳನ ಮಾಂಡಲಿಕರಾದ ಸೋಮಯ್ಯ ನಾಗಯ್ಯ ಮುಳ್ಗುಂದದ ನಗರೇಶ್ವರ ದೇವಾಲಯಕ್ಕೆ ಧರ್ಮಕಾರ್ಯಗಳು ನಿರಂತರವಾಗಿ ನಡೆಯುವಂತೆ ನೋಡಿಕೊಂಡರು. ಶಾಸನದ ೧೯ನೇ ಸಾಲು, ೨೬ನೇ ಸಾಲು, ೩೮ನೇ ಸಾಲು, ೪೪ನೇ ಸಾಲುಗಳು ಈ ಧರ್ಮಕಾರ್ಯಗಳ ಚಿತ್ರವನ್ನು ನೀಡುತ್ತವೆ.

ಎರಡನೇ ಶಾಸನ, ಯಾದವ ಸಿಂಘಣದೇವ ಈ ಪ್ರದೇಶವನ್ನು ಆಕ್ರಮಿಸಿಕೊಂಡು ನಂತರದಲ್ಲಿ ಆತನ ಆಡಳಿತದ ೧೮ನೇ ವರ್ಷದಲ್ಲಿ ಅಲ್ಲಿನ ಶೈವಧರ್ಮ ಹಾಗು ಮೇಲಿನ ದತ್ತಿದಾನಗಳನ್ನು ಗೌರವಿಸಿ ಮುಂದುವರಿಸಿದ. ತಾನು ಸಹ ಅದೇ ದೇವಾಲಯಕ್ಕೆ ಆಚಾರ್ಯರಿಗೆ ದ್ರವ್ಯ ಹಾಗು ಭೂದಾನ ನೀಡಿದ ವಿಷಯವಿದೆ. (ಸಾಲು ೬೬ ರಿಂದ) ಸ್ವಸ್ತಿ ಶ್ರೀಮತ ಯಾದವ ನಾರಾಯಣಂ ಪ್ರತಾಪ ಚಕ್ರವರ್ತಿ ಶ್ರೀ ಸಿಂಘಣದೇವ, ಪಾದ ಪದ್ಮೋಪಜೀವಿ ರಾಯಶೆಟ್ಟಿ ಮತ್ತು ಮಗನಾದ ಕಾರ್ತಿಕೇಯನಪ್ಪ ಹೊನ್ನ ಬಮ್ಮಿಸೆಟ್ಟಿಯು ಮುಳ್ಗುಂದ ನಾಡ ಸಮಸ್ತ ದೇಶಾಧಿಕಾರ ಮಾಡುತಿದ್ದು ಈತನು (ಸಾಲು ೭೨) ನಗರೇಶ್ವರ ದೇವರ ಆಚಾರ್ಯರಾದ ಮಲ್ಲಿಕಾರ್ಜುನ ದೇವರ ಪಾದ ಪ್ರಕ್ಷಾಳ ಮಾಡಿ, ಮುಳ್ಗುಂದನಗರ ಮಹಾಜನಂಗಳ ಕೈಗೆ ದ್ರವ್ಯ ಹಾಗು ಭೂಧಾನ ಮಾಡಿದನು.

ಒಟ್ಟಿನಲ್ಲಿ ಇಲ್ಲಿ ಶೈವಧರ್ಮದ ನಗರೇಶ್ವರ ದೇವಾಲಯದ ಆಚಾರ್ಯರು ಗುರುಕುಲ ಅಧ್ಯಯನ ಅನುಷ್ಠಾನಗಳಿಗೆ ಧರ್ಮಕಾರ್ಯಗಳು ನಿರಂತರವಾಗಿ ನಡೆಯುತಿದ್ದವೆಂದು ಆಡಳಿತಗಾರರು ಅದಕ್ಕೆ ದತ್ತಿಗಳನ್ನು ಬಿಟ್ಟು ನಿರಂತರವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ.

**ಶಾಸನದ ಸಾಮಾಜಿಕ ಅಂಶಗಳು :** ಪ್ರಸ್ತುತ ಶಾಸನದಿಂದ ಮುಳ್ಗುಂದ ಶೈವಧರ್ಮದ ಕೇಂದ್ರವಾಗಿದ್ದು ಅಲ್ಲಿನ ನಗರೇಶ್ವರ ದೇವಾಲಯಕ್ಕೆ ನಗರದ 'ಮಹಾನಗರ ಪ್ರಭುಗಳು' ಆಡಳಿತಕೊಳಪಟ್ಟ ಸಾಮಾಜಿಕ ಕಾರ್ಯಗಳನ್ನು ನಡೆಸುತ್ತಿದ್ದರೆಂದು ಮತ್ತು ಅಲ್ಲಿನ ಆಚಾರ್ಯರ ಸ್ವ ಅಧ್ಯಾಯ ಅನುಷ್ಠಾನಗಳು ನಡೆಯುತ್ತಿದ್ದವು. ಗುರುಕುಲ ಪದ್ಧತಿ ಇತ್ತೆಂಬುದನ್ನು ಶಾಸನ ತಿಳಿಯಪಡಿಸುತ್ತದೆ. ಅಲ್ಲಿನ ಶಿಕ್ಷಣ ಧರ್ಮಕಾರ್ಯಗಳು ನಿರಂತರವಾಗಿ ನಡೆಯುತ್ತಿದ್ದು ದ್ರವ್ಯ ಹಾಗು ಭೂದಾನಗಳು ಅಲ್ಲಿನ ಕಾರ್ಯಗಳನ್ನು ನಡೆಸಲು ಆದಾಯ ಒದಗಿಸುತ್ತಿದ್ದವೆಂಬುದು ತಿಳಿದುಬರುತ್ತದೆ. ಸ್ಥಳೀಯ ಆಡಳಿತಗಾರರ ಜವಾಬ್ದಾರಿಗಳನ್ನು ಹಾಗೂ ಅವರ ಪಾಂಡಿತ್ಯವನ್ನು ವಿವರಿಸಲಾಗಿದೆ. ೨ನೇ ಭಾಗದ ಶ್ರೀ ಸಿಂಘಣದೇವನು ಬರೆಸಿದ ಶಾಸನವು ಮೊದಲು ಬರೆಸಿದ ಶಾಸನ, ಶತ್ರುಗಳು ಬಿಟ್ಟ ದತ್ತಿಶಾಸನವನ್ನು ಗೌರವಿಸಿ, ತಾವು ಸಹ ಅದೇ ದೇವಾಲಯದ ಕಾರ್ಯಗಳಿಗೆ ಸಮಾಜದ ಉನ್ನತಿಗಾಗಿ ಎತ್ತಿಹಿಡಿದು ಸೌಹಾರ್ದತೆಯನ್ನು ತೋರಿದೆ. ಇದು ಬಹಳ ವಿರಳವಾದ ವಿಷಯವಾಗಿದೆ.

**ಆರ್ಥಿಕ ವಿಷಯಗಳು :** ಪ್ರಸ್ತುತ ಶಾಸನದಲ್ಲಿ ಆರ್ಥಿಕ ವಿಷಯಗಳು ವಿರಳವಾದರೂ ಶಾಸನ ಮೇಲಿನ ಚಿತ್ರ ದಾನ ಶಾಸನ ಲಕ್ಷಣವಾದ ಆಕಳು-ಕರು ಚಿತ್ರವಿದೆ. ಆಕಳು ಲಕ್ಷ್ಮಿ, ಹಣ, ಆರ್ಥಿಕತೆಯ ಚಿಹ್ನೆಯಾಗಿದೆ. ದೇವಾಲಯದ ಧಾರ್ಮಿಕ ಕಾರ್ಯಗಳಿಗೆ, ಭೂದಾನ, ದ್ರವ್ಯದಾನ ಎಂಬಲ್ಲಿ ಭೂಮಿಯ ಅಳತೆಮಾನ (ಸಾಲು ೪೪) ವನ್ನು ಅಲ್ಲಿಯ ಗಡಿಂಬದ ಕೋಲಂ ಕೊಂಡು ಕೊಟ್ಟ ಮತ್ತರೆರಡು 'ಮತ್ತರು' ಭೂಮಾಪನವನ್ನು ಉಲ್ಲೇಖಿಸಿದೆ. ದ್ರವ್ಯ ಎಂದರೆ ಹಣ ಅಥವಾ ಬಂಗಾರ, ಪೂಜಾ ಸಾಮಗ್ರಿಗಳಾದ ತೀರ್ಥ, ಎಂಟು ಬಗೆಯ ದ್ರವ್ಯಗಳಾಗಬಹುದು. ಕೃಷಿ ಪ್ರಧಾನವಾದ ಹೊಲ, ಕೆರೆ, ಹಳ್ಳ, ತೋಟ ಎಂಬ ಶಬ್ದಗಳು ಉಲ್ಲೇಖವಾಗಿದೆ.

ಇದರಿಂದ ಇಲ್ಲಿ ಕೃಷಿ ಭೂಮಿ, ನೀರಾವರಿ ಫಲವತ್ತತೆಯನ್ನು ಶೋಧಿಸಬಹುದಾಗಿದೆ.

ಮುಳ್ಗುಂದ ನಗರ, ನಾಡು, ಪಟ್ಟಣವೆನ್ನುವಲ್ಲಿ ದೊಡ್ಡ ಗ್ರಾಮ ಆಡಳಿತ ಕೇಂದ್ರ ಹಾಗೆಯೇ ವ್ಯಾಪಾರ ವ್ಯವಹಾರಗಳ ಮಾರುಕಟ್ಟೆಯನ್ನು ಹೊಂದಿತ್ತು ಎಂಬುದರಲ್ಲಿ ಅನುಮಾನವಿಲ್ಲ. ಇಲ್ಲಿನ ಸರಕುಗಳು ಕರ, ಅಳತೆ, ಮಾನಗಳು, ಆರ್ಥಿಕ ವ್ಯವಹಾರಗಳಿಗೆ ಸಂಬಂಧಿಸಿದವುಗಳೇ ಆಗಿವೆ.

**ಸಮಾರೋಪ : ಶಾಸನದ ವೈಶಿಷ್ಟಗಳು :** ಮುಖ್ಯವಾಗಿ ಶಾಸನ ಒಂದೇ ಆದರೂ ಎರಡು ಶಾಸನ ಭಾಗಗಳನ್ನು ಹೊಂದಿದೆ. ಮುಳ್ಗುಂದ ನಾಡನ್ನು ಆಕ್ರಮಿಸಿಕೊಂಡ ಯಾದವ ಸಿಂಘಣದೇವ, ತಮ್ಮ ಶತ್ರುಗಳಾದ ಹೊಯ್ಸಳ ಎರಡನೇ ಬಲ್ಲಾಳನ ಶಾಸನವನ್ನು ಗೌರವಿಸಿ, ಅವರು ಬಿಟ್ಟ ವೃತ್ತಿ ದಾನಗಳನ್ನು ಮನ್ನಿಸಿ, ಅದರ ಕೆಳಗೆ ತಾನು ಸಹ ದ್ರವ್ಯ ಭೂದಾನಗಳನ್ನು ಮಾಡಿರುವುದು ಸಿಂಘಣದೇವನ ಹೃದಯ ವೈಶಾಲತೆ, ಸಾಮಾಜಿಕ ಸಾಮರಸ್ಯ ಕಾಪಾಡಿರುವುದು ಒಂದು ವಿಶೇಷ. ಇಂತಹ ಶಾಸನಗಳು ಬಹು ವಿರಳ.

ಯಾದವ ಸಿಂಘಣ ದೇವನ ೧೮ನೇ ವರ್ಷದಲ್ಲಿ ಈ ಶಾಸನ ಬರೆಸಿರುವುದಾಗಿ ಉಲ್ಲೇಖಿಸಿದೆ. ಇದರಿಂದ ಸಿಂಘಣದೇವನು ತಾನು ಆಡಳಿತಕ್ಕೆ ಬಂದಂದಿನಿಂದ ತನ್ನದೇ ಆದ ಕಾಲಮಾನ (Era of Singana) ಸಿಂಘಣ ದೇವನ ಶಕವರ್ಷ ಆರಂಭಿಸಿದ್ದು ತಿಳಿದುಬರುತ್ತದೆ.

ಮುಳ್ಗುಂದದ ನಗರೇಶ್ವರ ದೇವಾಲಯದ ಆಚಾರ್ಯ ಪರಂಪರೆಯಲ್ಲಿ ಇಬ್ಬರು ಆಚಾರ್ಯರ ಪರಂಪರೆ ತಿಳಿದುಬರುತ್ತದೆ.

ನಗರೇಶ್ವರ ದೇವಾಲಯದ ಅಧ್ಯಯನ ಪರಂಪರೆ ನಿಯಮಗಳು ಹಾಗೂ ಅಲ್ಲಿನ ಆಚಾರ್ಯರ ಪಾಂಡಿತ್ಯವನ್ನು ವಿವರಿಸಿರುವುದು ವಿಶೇಷ.

ನಗರೇಶ್ವರ ದೇವಾಲಯದ ಆಡಳಿತ ಮಂಡಳಿ 'ನಗರ ಪ್ರಭುಗಳು' ಅವರ ಜವಾಬ್ದಾರಿ ವಿವರಗಳನ್ನು ತಿಳಿಯಬಹುದಾಗಿದೆ.

### ಮುಳುಗುಂದ ಶಾಸನ–*೩

ಸ್ಥಳ : ನಗರೇಶ್ವರ ದೇವಾಲಯದ ಕಂಬ

ಕಾಲ : ಕ್ರಿ.ಶ. ೧೨೦೧ ಮತ್ತು ೧೨೨೫.

ಅರಸ : ಹೊಯ್ಸಳ ಇಮ್ಮಡಿ ವೀರಬಲ್ಲಾಳ ಮತ್ತು ಸೇವುಣ ಸಿಂಘಣದೇವನ ಶಾಸನ.

೧ ನಮಸ್ತುಂಗಸಿರಸ್ತುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭಮೂ

೨ ಲಸ್ತಂಭಾಯಶಂಭವೇ ॥ ಶ್ರೀ ಗಿರಿಜಾಲಿಂಗನಂಗ ಭೋಗಸುಖ ತನಗೊಡವೆ ಲಾ

೩ ರತತಿಗಂ ರಾಗದೆ ನಗರೇಶ್ವರನಿಂಬಾಗಿ ಮಹಾದೇವ ನೀಗೆ ಸುಖ ಸಂಪದಮಂ ॥ ಸ್ವಸ್ತ್ಯನವ

೪ ರತ ವಿನಮದಶೇಷ ಮಂಡಳಿಕ ಮೌಳಿ ಮಾಣಿಕ್ಯ ನಿರಾಜಿತಾಂಘ್ರಿದ್ವಯ ನಶೇಷ ಪ್ರಿ

೫ ಥ್ವೀವಲ್ಲಭನಮಳರತ್ಯಂಗನಾವಲ್ಲಭಂ ಶನಿವಾರಸಿದ್ಧಿ ಗಿರಿ ದುರ್ಗಮಲ್ಲ ನಿಶಂಕ ಪ್ರತಾ

೬ ಪಚಕ್ರವರ್ತಿ ಹೊಯಿಸಣ ವೀರಬಲ್ಲಾಳದೇವ ರಾಜ್ಯಮುದಿತೋದಿತ ಮಾಚಂದ್ರಾರ್ಕ್ಕತಾರಂಬ

೭ ರಂ ಸಲುತ್ತಮಿರೆ ॥ ಆತನ ಮಹಿಮೋಂನತಿ ಯೆಂತೆಂದಡೆ ॥ ನಿರುತಂ ಹೊಯ್ಸಳ ವಂಶವಾ

೮ ರ್ಧಿಯೊದವಿಂಗಾ ಚಂದ್ರನೆನ್ತಂತೆ ತಾಂ ಭರದಿಂದಾಂತ ವಿರೋಧಿ ದೈತ್ಯ ನಿವಹಕ್ಕಾರಾಮನೆಂತಂ

೯ ತೆ ತಾಂ ಸರಸೋತ್ಕ್ರಿಷ್ಟ ಕವೀಶ್ವರಾರ್ತ್ಥಿನಿವಹಕ್ಕ ಕರ್ಣ್ನನೆಂತಂತೆ ತಾಂ ನರಸಿಂಹಾತ್ಮ ಜನತ್ಯುದಾರ

೧೦ ನೆಸೆದಂ ಬಲ್ಲಾಳಭೂಪಾಳಕಂ ॥ ತತ್ಪಾದಪದ್ಮೋಪಜೀವ ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಮಹಾಪಸಾ

೧೧ ಯಿತಂ ಪರಮವಿಶ್ವಾಸಿಸ್ವಾಮಿಸಂತೋಷಕಸ್ವಾಮಿ ದ್ರೋಹಂ ರಗಡ ಶರಣಾಗತವಜ್ರಪಂಜರ ವೈರಿ ಗಂಡಗೋ

೧೨ ಪಾಳ ಪ್ರಜೆಮೆಚ್ಚೆ ಗಂಡನಾಶ್ರಿತಜನಕಲ್ಪವ್ರಿಕ್ಷಬನ್ಧುಜನ ಚಿಂತಾಮಣಿ ಮಂತ್ರಿ ಮಾಣಿಕ್ಯ

೧೩ ತಿರಿ ಚಾಣಾಕ್ಯಂ ಕರ್ಪ್ಪುರದಧಿಷ್ಟಾಯಕ ಶ್ರೀವಾಸುದೇವರ ದಿವ್ಯ ಶ್ರೀಪಾದಾರಾಧಕರುಮಪ್ಪ

೧೪ ಕುಮಾರಂ ಗೊಯ್ಯಣನ ಸೋಮಯ್ಯ ನಾಗಯ್ಯಂಗಳು ಮುಳ್ಗುಂದ ಹಂನೆರಡುಮಂ ಸುಖಸಂಕಥಾವಿನೋ

೧೫ ದದಿಂದಾಳುತ್ತಮಿರೆ ॥ ಮಿಗಿಲಾಳ್ದನ ವನ್ನಣಿಯೊಳು ನಗರೇಶ್ವರಧರ್ಮವಾರ್ದ್ಧಿವರ್ದ್ಧನದೆಡೆಯೊಳು ಜಗದಾ

೧೬ ನಂದೋನ್ನತಿಯೊಳು ಬಗೆವಡೆ ಗೊಯ್ಯಣನ ಸೋಮನಾ ಸೋಮನವೊಲು ॥ ಕಂದ ॥

ಆತನನುಜಾತನಖಿಳ ಧ

---

* ಎಚ್.ಆರ್. ರಘುನಾಥಭಟ್ಟ ಮತ್ತು ಎಸ್.ಎಂ. ನಾಗಭೂಷಣ ಅವರು ದಿನಾಂಕ ೧–೨–೧೯೯೯ರ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಸ್ತಾಪ ಮಾಡಿದುದು. ದಿನಾಂಕ : ೪–೪–೧೯೯೯ ರಂದು ನಾನು ಮತ್ತು ಶ್ರೀಮತಿ ಹನುಮಾಕ್ಷಿ ಗೋಗಿ ಅವರು ಈ ಶಾಸನದ ಪ್ರತಿ ತೆಗೆದುಕೊಂಡು ಬಂದು ಮೊದಲ ಬಾರಿ ಪ್ರಕಟಿಸಿದುದು.



೧೭ ರಾತಳನುತಾಮಳೋರ್ಜ್ಜಿತಗುಣನಪ್ರತಿ ವಿನೂತನ ರವಿ ಸುಕವಿ ಸರೋಜಾತ ಸಮಾಜಕ್ಕೆ ನಾಗದೇವ

೧೮ ಚಮೂಪಂ ॥ ತದುಪಜೀವಿ ॥ ಸಿಂದವಾಡಿನಾಡ ತುಂಬಳಪ್ರಭು ಭಾರದ್ವಾಜಗೋತ್ರನಾಚಾರಪವಿ

೧೯ ತ್ರಂ ಚಿಣ್ಣಮರಸ ತನೂಜಾತಂ ನಾಗದೇವನುಂ ॥ ನಿರುತಂದಳ್ವಡೆ ನಾಗದೇವನಗಜಾಧೀಶಾಂಘ್ರಿ ಸದ್ಭಕ್ತಿಯಿಂ ಮ

೨೦ ರವಿದ್ವತು ಪ್ರಕರೇಷ್ಠದಾನದೊದವಿಂಸತ್ಕಿರ್ತ್ತಿಯಂ ಮೂರ್ತ್ತಿಯಂ ಪರಮ ಪರಮಪ್ರೀತಿಯಿನಿಷ್ಟ ಸಂಪದದೊಳು ಸ್ವಾ

೨೧ ಮಿಪ್ರಸಾದಂಗಳಿಂ ಗಿರಿರಾಜೋನ್ನತಧೈರ್ಯ್ಯನ ಪ್ರತಿಮನೀ ಧರ್ಮ್ಮಾಚ್ಛಿಶೀತಪ್ರಭಂ ॥ ತದನು

೨೨ ಹಗರಿಟಗೆನಾಡೊಳಗೆ ಮೂಜೂರ ತುಂಬುಗೆಯ ಪ್ರಭು ಶಾಂಡಿಲ್ಯ ಗೋತ್ರತಿಳಕಂ ಮಲ್ಲರ

೨೩ ಸ ತನೂಜಾತಂ ಚೌಡಯ್ಯನು ॥ ಕಲಿಯುಗತಮೋ ದಿವಾಕರ ಬಲನಧಿಕ ಮಹೀಧರ್ಮ್ಮ

೨೪ ಕೌಮುದಿಕಾನ್ತಂ ಜಲರುಹನಾಭನವೊಲು ತಾಂ ಪಲರೆನೆ ಚಾಮುಂಡರಾಜನೆಸೆದ ಧರೆಯೊ

೨೫ ಳು ॥ ದಿನಕರದಿವಾಕರತೇಜಘನತರ ಧರ್ಮೋಪಕಾರಿ ಜನತಮದೊಡ್ಡಿಂಗನಘರತಿ

೨೬ ಸೆಬ್ಬರೆಂದೀ ಜನವೆನೆ ಚಾಮುಂಡ ನಾಗದೇವರ್ಮ್ಮಜಿ ವರು ॥ ಪರಹಿತರೆಂದು ಸತ್ಯಪರರೆಂದು

೨೭ ಬುಧಾಳಿಗೆ ವಾಂಚಿತಾರ್ತ್ಥಮಂ ಪಿರಿದೆನಲೀವವೆಂದು ಮ್ರಿಡನಂಘ್ರಿ ಸರೋರುಹಭ್ರಿಂಗ

೨೮ ರೆಂದು ಮತ್ತುರುತರ ತೇಜರೆಂದುನುತನಾಗಚಮೂಪತಿ ಚಾಮುಂಡರಾಜರದರ ಹಸ್ತಿ

೨೯ ತಾಸ್ಯರೆಂದು ದಿಟವೀರ್ವ್ವರನುರ್ವ್ವರೆ ಕೂರ್ತ್ತು ಕೀರ್ತ್ತಿಕುಂ ॥ ಅವರೀರ್ವ್ವರುಂ ಮುಳ್ಗುಂದ ಹಂ

೩೦ ನೆರಡುಮನಧಿಕಾರಪದ್ಧತಿಯಿಂದಾಳುತ್ತಮಿರ್ದ್ದಾ ಪಟ್ಟಣಕ್ಕಧಿ ದೈಯ್ವಮಾಗಿರ್ಪ್ಪ ನಗ

೩೧ ರೇಶ್ವರದೇವರ ಧರ್ಮ್ಮಕಾರ್ಯ್ಯಮನಲ್ಲಿಯಾಚಾರ್ಯ್ಯರ ತಪೋನಿಷ್ಠೆಯಂ ಕಂಡು ಹಳ್ಳ

೩೨ ಮೂವಲ್ಲಿ ಬೀಡು ಬಿಟ್ಟಿರ್ದ್ದಲ್ಲಿ ತಮ್ಮೊಳ್ದ (ಳ್ವು) ಮುಖ್ಯವಾಗಿ ಬಲ್ಲಾಳ ಧರಂಗೆ ಬಿನ್ನಪಂಗೆಯ್ದು ॥

೩೩ ಶ್ರೀಮದನಾದಿಚತುರ್ಯ್ಯುಗದಪಟ್ಟಣಂ ಮುಳ್ಗುಂದದ ನಗರ ಮಹಾಜನವೈನೂರ್ವ್ವ

೩೪ ರ್ವ್ವರ ಪಂಚಮಠಸ್ಥಾನದ ಸಂನಿಧಾನದಲು ಆ ದೇವರ ತಪೋಧನರಾಹಾರದಾನದ ಕೆ

೩೫ ಯ್ಯ ಮೂಡಣಕಂಚಮೊಟ್ಟಗೆಯಲ್ಲಿ ಶಕವರ್ಷ ೧೧೨೩ ನೆಯ ರೌದ್ರಿಸಂವತ್ಸರದ ಮಾಘ

೩೬ ಬಹುಳ ಅಮಾವಾಸೆ ಆದಿತ್ಯವಾರ ವ್ಯತೀಪಾತಮುತ್ತರಾ ಭಾದ್ರಪದನಕ್ಷತ್ರ ಸಂಕ್ರಾ

೩೭ ನ್ತಿಯಲ್ಲಿ ನಗರ ಮಹಾಜನಂಗಳ ಕೈಯಲು ದ್ರವ್ಯ ಸಿಂಧುಗೊಂಡು ಶ್ರೀನಗರೇಶ್ವರದೇವರ

೩೮ ದೇವಕಾರ್ಯ್ಯಕವಲ್ಲಿ ಯಾಚಾರ್ಯ್ಯರ ಭಿಕ್ಷೆ ನಿಮಿತ್ತವಾಗಿ । ಸ್ವಸ್ತಿ ಯಮನಿಯಮಸ್ವಾಧ್ಯಾಯ

೩೯ ಧ್ಯಾನಧಾರಣಮೌನಾನುಷ್ಠಾನಜಪಸಮಾಧಿಶೀಲ ಗುಣಸಂಪನರುಂ ಸಕಳ ವಿದ್ವಜ್ಜ

೪೦ ನ ಪ್ರಸಂನರುಂ ಸ್ವಕೀಯಾನುಷ್ಠಾನಮಹೀಮೋ ಪಾರ್ಜ್ಜಿತ ತೇಜಃ ಪುಂಜರುಂ ಗುರುಚರಣಸ್ಮ

೪೧ ರಣಪರಿಣತಾಂತಃಕರಣರುಂ ವ್ಯಾಕರಣ ತರ್ಕ--- --ತಾಡನೇಕರುಂ ಪ್ರವಿಶಾರದರುಂ

೪೨ ನಗರೇಶ್ವರದೇವ ಶ್ರೀಪಾದಪದ್ಮಭೃಂಗರುಂ ಸಜ್ಜನ...... ಮಿರ್ಪ್ಪ......ಶನೇಶ್ವರ

೪೩ ದೇವರಪಾದಾರಾಧಕರುಮಪ್ಪ ಶ್ರೀಮದಮ್ರಿತರಾಸಿ ದೇವರ ಶ್ರೀಪಾದಾರಾಧಕರುಮ

೪೪ ಪ್ಪ ಮಹಾಸಿದ್ಧಾನ್ತಿರುಗ್ವೇದಪಂಡಿತದೇವರಪಾದ ಪ್ರಕ್ಷಾಳನಂಮಾಡಿ ಅಲ್ಲಿಯ ಗಡಿಂಬದಕೋ

೪೫ ಲಂಕೊಂಡುಕೊಟ್ಟಮತ್ತರೆರಡುಅದಕ್ಕೆಸೀಮೆಪಶ್ಚಿಮ ದಲಾ ದೇವರಕೆಯ್ಯಮೇರೆ । ಬಡ

೪೬ ಗಲುಸೆಟ್ಟಿವೊಲಂಮೇರೆ । ಮೂಡಲುಂತೆಂಕಲುಬೆಳ್ಳಾಳ ಸೋಯಿಮಯ್ಯನ ಮಾನ್ಯದ

೪೭ ಮೇರೆ ॥ ಬೆಳೆವದರ್ಪ್ಪುಣ್ಯಪಳಂಗಳಂ ಗಿರಿಸುತಾ ಧೀಶಾಂಘ್ರಿಪೂಜೆಯಿಂ ಚಳ

೪೮ ಕೀರ್ತಿಯನಂನದಾನದೊದವಿಂ ಸೌವರ್ಣ್ನದಾಂಗಳಿಂ ಮುಳ್ಗುಂದ (ಮುಳುಗುಂದ) ಕ್ಷಿತರುಂನತರ್ಣ್ನಧರ ಮು

೪೯ ವಿಪ್ರೋತ್ತಮರು ಸಂತತಂ ಬೆಳಗೆಂದೀ ನಗರೇಶ್ವರಂಗೆ ಮಹಿಯಂ ಕೊಟ್ಟರ್ಮ್ಮಹಿಪಾ

೫೦ ಜ್ಞೆಯಿಂ ॥ ಆ ಮುನೀಶ್ವರನಮಹಿಮೋಂನತಿಯೆಂತೆ ದಡೆ ॥ ಧರೆ ರುಗ್ವೇದಿಕವಿಸ್ತುತ ಬ್ರ

೫೧ ತಿಪನಂ ವಿದ್ವಜ್ಜನಾಧಾರನಂ ಸ್ವರವಿದ್ವೇಷಿತಪಃಪ್ರಭಾವ ವಿಮಳ ಪ್ರೋದ್ಯದ್ಯಶಃ ಪುಣ್ಯ

೫೨ ನೆಂದುರುಲಕ್ಷ್ಮೀಯುತನೆಂದು ಸತ್ಯನಿಧಿಯೆಂದತ್ಯಂನತಾ ಚಾರನೆಂದ ರವಿಂದಾದಿಪ

೫೩ .....ನೆಂದು ಪೊಗಳ್ಗುಂ ಸಿದ್ಧಾಂತಸರ್ವಜ್ಞನಂ ॥ ಎಳ್ಳನಿತು ದಾನವಿಲ್ಲೆನೆ ಬೆಳ್ಳೆಯುಸಂತತಿ

೫೪ ಯೊಳೆಲ್ಲರತಿ ವಿಖ್ಯಾತಂ ಬೆಳ್ಳೆಯ ಸಂತತಿಯೊಳು ತಾನೊಳ್ಪಿದನತಿಶಯಗು

೫೫ ಣಂಗಳಿಂ ರುಗ್ವೇದಿ ॥ ವಸುಧಾಪತಿ ಬಲ್ಲಾಳವಸು ಸಹಿತಂ ಕ್ಷೇತ್ರಮಂ ಮನೋಮುದದಿಯ

೫೬ ದಂಜಸವಪ್ಪಿನವೀಯಲು ಪಡೆದೆಸೆದಂ ರುಗ್ವೇದಿಮೆಸೆದ ನೂರ್ಜ್ಜಿತತೇಜಂ ॥ ಸಿದ್ಧಾಂತಮ

೫೭ ಱೆಯದಮರಂ ಸುಧಾಂತಃಕರಣರಲ್ಲದ ಬ್ರತಿಗಳನೇಂ ಸಿದ್ಧಾಂತಿ ಮುನೀಶ್ವರನೊ

೫೮ ಳು ಸುದ್ಧಾಂತಃಕರಣನೆನಿಪನೊಳು ಪೋಲಿಪುದೇ ॥ ಇನ್ತಿದಂ ಪ್ರತಿಪಾಳಿಸಿ

೫೯ ದಂಗಂಗೆಗಂ ಕಾಸಾರವ ವಾರಣಾಸಿಕುರುಕ್ಷೇತ್ರ ಪ್ರಯಾಗೆ ಶ್ರೀಪರ್ವತ

೬೦ ಮೆಂಬ ಪುಣ್ಯತೀರ್ತ್ಥಂಗಳಲ್ಲಿ ಸಾವಿರಕವಿಲೆಯಕೋಡುಂ ಕೊಳಗುಮಂ ಪಂಚಾ

೬೧ ರತ್ನದೊಳುಕಟ್ಟಿಸಿ ಮಹಾರಿತ್ವಿಜರ್ಗ್ಗಭಯಮುಖಿ ಕೊಟ್ಟಫಲಮಕ್ಕು ಇದನ

೬೨ ಳಿದನಿನಿತುಮನಳಿದುನರಕಂಬೊಕ್ಕಪಂಚಮಹಾ ಪಾತಕನಕ್ಕುಂ ॥ ಸ್ವದತ್ತಾಂ ಪರದತ್ತಾಂ

೬೩ ವಾಯೋಹರೇತ ವಸುಂಧಾರಾಂ ಷಷ್ಠಿರ್ವ್ವರ್ಷ ಸಹಶ್ರಾಣಿ ವಿಷ್ಠಾಯಾಂ ಜಾಯೆತೇ

೬೪ ಕ್ರಿಮಿಃ ॥ ಓಂ ನಮಃ ಶಿವಾಯ । ರುಗ್ವೇದಿಸಿದ್ದಾನ್ತಿದೇವರ ಪಾದಾಪ್ರಕ್ಷಾಳನಂ ಮಾಡಿ ಊರೋ

೬೫ ಡೆಯ ದಾಸಿರಾಜ ಶ್ರೀನಗರೇಶ್ವರದೇವರ್ಗ್ಗೆ ಮಂನ್ನೆಯ ವೊಲದೊಳಗೆ ಕೊಟ್ಟ ಹೂದೋಂಟ

೬೬ ಮತ್ತರೊಂದು ॥ ಸ್ವಸ್ಥಿ ಶ್ರೀಮತು ಯಾದವನಾರಾಯಣಂ ಪ್ರತಾಪಚಕ್ರ

೬೭ ವರ್ತ್ತಿ ಶ್ರೀಸಿಂಘಣದೇವ ಪಾದಪದ್ಮೋಪಜೀವಿ ರಾಯಸೆಟ್ಟಿ ಗನವಾರಣಾ

೬೮ ಆರ್ಯ್ಯಮಲ್ಲಿಸೆಟ್ಟಿಯ ಸರ್ವಾಂಗಲಕ್ಷ್ಮೀ ರಾಜಲ ವಾರಿಜ ವರಜಾ

೬೯ ಹ್ನವಿಜನಿತಕಾರ್ತ್ತಿಕೇಯನಪ್ಪಹೊನ್ನಬಮ್ಮಿಸೆಟ್ಟಿಯರು ಸಮಸ್ತದೇ

೭೦ ಶಾಧಿಕಾರವ ಮಾಡುತ್ತಿರ್ದ್ದು ಶ್ರೀಮದನಾದಿಚಾತುರ್ಯ್ಯು ಗದ ಪಟ್ಟಣಂ ಮು

೭೧ ಳುಗುಂದದ ನಗರ ಮಹಾಜನ ಪ್ರಭುಗಳ ಕೈಯ್ಯಲು ದ್ರವ್ಯ ಸಿಂಧುಗೊಂಡು

೭೨ ಶ್ರೀನಗರೇಶ್ವರದೇವರಾಚಾರ್ಯಮಲ್ಲಿಕಾರ್ಜುನ ದೇವರ ಪಾದ ಪ್ರಕ್ಷಾಳನಂ ಮಾ

೭೩ ಡಿ ಸಿಂಘಣದೇವವರ್ಷ್ಯದ ಹದಿನೆಂಟನೆಯ ಪಾರ್ತ್ಥಿವ ಸಂವತ್ಸರದ ಮಾರ್ಗ್ಗಶಿರದ

೭೪ ಅಮಾವಾಸೆ ಸೋಮವಾರದಲು ಧಾರಾಪೂರ್ವಕ ಮಾಡಿ ಕೊಟ್ಟ

೭೫ ಹಪ್ರವಿಷ್ಯ ಭೂಮಿಜೆಯು ನಾಗನಬಸದಿಯ ಕೇರಿಯಿಂದುತ್ತರ ಭಾ

೭೬ ಗದಲು ಶ್ರೀನ(ಗ)ರೇಶ್ವರದೇವರ ದೇವಂಗೇರಿ ॥ ಮಂಗಳಮಹಾ ಶ್ರೀಶ್ರೀಶ್ರೀ

ಬಿ.ಸಿ. ಸುರೇಶ್*

# ಚಿಕ್ಕಮಗಳೂರು ಜಿಲ್ಲೆಯ ದೇವಾಲಯಗಳ ವಾಸ್ತು ಶಿಲ್ಪಗಳು

ಈ ಜಿಲ್ಲೆಯು ಮಲೆನಾಡು ಪ್ರದೇಶವಾಗಿದ್ದು ದಟ್ಟ ಅರಣ್ಯ ಕಣಿವೆ. ಪರ್ವತಗಳು ಮತ್ತು ಗಿರಿಧಾಮಗಳಿಂದ ಕೂಡಿರುವ ಸ್ಥಳವಾಗಿದೆ. ಪಶ್ಚಿಮ ದಿಕ್ಕಿನ ಸ್ವಲ್ಪ ಭಾಗವು ಗಿರಿಶಿಖರ ಗಳಿಂದಲೂ ದಟ್ಟವಾದ ಕಾಡುಗಳಿಂದಲೂ ಕೂಡಿದರೆ ಪೂರ್ವಕ್ಕೆ ಸ್ವಲ್ಪಭಾಗ ಬಯಲು ಸೀಮೆಗೆ ಹೊಂದಿಕೊಂಡಂತೆ ಸಣ್ಣ ಸಣ್ಣ ಗುಡ್ಡಗಳು, ಕಾಡುಗಳು ಮತ್ತು ಬಯಲು ಪ್ರದೇಶಗಳನ್ನು ಹೊಂದಿದೆ. ಈ ಜಿಲ್ಲೆಯ ಪ್ರಾಕೃತಿಕ ಸೊಬಗು. ಗಿರಿಕಂದರಗಳು, ನದಿಗಳು, ಪರ್ವತ ಶ್ರೇಣಿಗಳು, ಮುಗಿಲೆತ್ತರದ ಮರಗಳು, ವಿವಿಧ ಪ್ರಾಣಿಗಳು ಮುಂತಾದವುಗಳಿಂದ ಇದು ಪ್ರಕೃತಿ ಸಂಪತ್ತಿನ ಕಣಜವೇ ಆಗಿದೆ. ಚಿಕ್ಕಮಗಳೂರಿನ ಭಗವತಿ, ಮುತ್ತೋಡಿ, ಮುಳ್ಳಯನಗಿರಿ, ಕಲ್ಲತ್ತ್‌ಗಿರಿ ಮುಂತಾದ ನಿಸರ್ಗಧಾಮಗಳಿವೆ. ಜಿಲ್ಲೆಯ ಮಧ್ಯಭಾಗದಲ್ಲಿ ಹಾದುಹೋಗುವ ಬಾಬಬುಡನ್‌ಗಿರಿ ಪರ್ವತಶ್ರೇಣಿ, ಮಲೆನಾಡು ಮತ್ತು ಮೈದಾನ ಪ್ರದೇಶಗಳನ್ನು ಬೇರ್ಪಡಿಸುವ ಗೋಡೆಯಂತಿದೆ. ಇದಕ್ಕೆ ಚಂದ್ರದ್ರೋಣ ಪರ್ವತವೆಂದೂ ಜಲಮೇಲು ಪರ್ವತ ಎಂದೂ ಕರೆಯುತ್ತಾರೆ.

ಜಿಲ್ಲೆಯು ಹಲವಾರು ನದಿಗಳ ಮೂಲಸ್ಥಾನವಾಗಿದೆ. ವರಾಹ ಪರ್ವತದ ಗಂಗಾಮೂಲದಲ್ಲಿ ಹುಟ್ಟುವ ತುಂಗಾ ಮತ್ತು ಭದ್ರಾ ನದಿಗಳು ಉತ್ತರ ದಿಕ್ಕಿಗೆ ಹರಿದರೆ ಹೇಮಾವತಿ ದಕ್ಷಿಣಕ್ಕೆ ಹರಿಯುತ್ತದೆ. ಮುಳ್ಳಯನಗಿರಿಯಲ್ಲಿ ಹುಟ್ಟುವ ಯಗಚಿ ಚಿಕ್ಕಮಗಳೂರಿನಿಂದ ಹಾಸನ ಜಿಲ್ಲೆಯ ಗೊರೂರಿನ ಹತ್ತಿರ ಹೇಮಾವತಿಯನ್ನು ಸೇರುತ್ತದೆ. ಮುಳ್ಳಯನಗಿರಿ ಶ್ರೇಣಿಯಲ್ಲಿ ಗೌರಿಹಳ್ಳ ಮತ್ತು ಆವತಿಹಳ್ಳ ಎಂಬ ಎರಡು ಸಣ್ಣ ತೊರೆಗಳು ಹುಟ್ಟಿ ಅಲ್ಲಿಂದ ಅಯ್ಯನಕೆರೆಗೆ ಸೇರಿ ಮುಂದೆ ಹೋದಾಗ ಅದನ್ನು ವೇದ ಎಂದು ಕರೆಯುತ್ತಾರೆ. ಮದಗದರಾಯನ ಕೆರೆಯಿಂದ ಹೊರಬಿದ್ದ ನೀರು ಆವತಿಹಳ್ಳ ಎಂಬ ಹೆಸರಿನಲ್ಲಿ ಹರಿದು ಕಡೂರಿನ ಬಳಿ ವೇದಾವನ್ನು ಸೇರುತ್ತದೆ. ಅಲ್ಲಿಂದ ಅದು ವೇದಾವತಿ ನದಿಯಾಗಿ ಹರಿಯುತ್ತದೆ. ಇವಲ್ಲದೆ ಇಲ್ಲಿ ಪವಿತ್ರ ಕ್ಷೇತ್ರಗಳಾಗಿ ಶೃಂಗೇರಿಯ ಶಾರದಾ ಪೀಠ, ಬಾಳೆಹೊನ್ನೂರಿನ ಶ್ರೀಮದ್ರಂಭಾಪುರಿ ಪೀಠ, ಕಳಸದ ಕಳಸೇಶ್ವರ, ಹೊರನಾಡು ಅನ್ನಪೂರ್ಣೇಶ್ವರಿ, ಹಿಂದು ಮುಸ್ಲಿಂರ ಪವಿತ್ರ ಸ್ಥಳವಾಗಿರುವ ಬಾಬಬುಡನ್‌ಗಿರಿ ಕ್ಷೇತ್ರ, ಮುಂತಾದ ಧಾರ್ಮಿಕ ಕ್ಷೇತ್ರಗಳಿವೆ. ಹೀಗೆ ಹತ್ತು ಹಲವು ಧಾರ್ಮಿಕ ಸ್ಥಳಗಳೊಂದಿಗೆ ಐತಿಹಾಸಿಕ ಸ್ಥಳಗಳು ಜಿಲ್ಲೆಯಲ್ಲಿವೆ. ಮೂಡಿಗೆರೆ ತಾಲ್ಲೂಕಿನ ಅಂಗಡಿಯು ಕರ್ನಾಟಕವನ್ನಾಳಿದ ಸುಪ್ರಸಿದ್ಧ ರಾಜವಂಶಸ್ಥರಾದ ಹೊಯ್ಸಳರ ಮೂಲ ನೆಲೆಯಾಗಿದೆ. ಈ ಜಿಲ್ಲೆ ಚಿಕ್ಕಮಗಳೂರು ಸೇರಿದಂತೆ ಏಳು ತಾಲ್ಲೂಕು ಕೇಂದ್ರಗಳನ್ನು ಹೊಂದಿದೆ. ಅವುಗಳೆಂದರೆ ಚಿಕ್ಕಮಗಳೂರು, ಕಡೂರು, ತರೀಕೆರೆ, ಮೂಡಿಗೆರೆ, ಶೃಂಗೇರಿ, ನರಸಿಂಹರಾಜಪುರ ಮತ್ತು ಕೊಪ್ಪ ತಾಲ್ಲೂಕುಗಳು.

**ಹಿರೇಮಗಳೂರು :** ಹಿರೇಮಗಳೂರು ಚಿಕ್ಕಮಗಳೂರಿನಿಂದ ಸುಮಾರು ೨ ಕಿ.ಮೀ. ದೂರದಲ್ಲಿದೆ. ಇದು ಒಂದು ಅಗ್ರಹಾರವಾಗಿತ್ತು. ಇದನ್ನು ಕೇಶವಪುರ ಎಂತಲೂ ಪುರಾಣದ ಹೆಸರಾದ ಭಾರ್ಗವಪುರಿ ಎಂತಲೂ ಕರೆಯುತ್ತಾರೆ. ದ್ವಾಪರಾಂತ್ಯದಲ್ಲಿ ಪರೀಕ್ಷಿತರಾಯನಿಗೆ ಸರ್ಪದಿಷ್ಟವಾದುದರಿಂದ ಆತನಮಗ ಜನಮೇಜರಾಯನು ಮಹಾಕೋಪಿಷ್ಠನಾಗಿ 'ಸರ್ಪಯೋಗ'ವನ್ನು ಈ ಸ್ಥಳದಲ್ಲಿ ಮಾಡಿದನು. ತರುವಾಯ ಇಲ್ಲಿ ಪಂಚಲಿಂಗ ಪ್ರತಿಷ್ಠೆ ಮಾಡಿದನು. ಆದುದರಿಂದ ಈ ಗ್ರಾಮದಲ್ಲಿ ಸರ್ಪದಿಷ್ಟವಾದರೆ ಮರಣವಿಲ್ಲ ಎಂಬ ಐತಿಹ್ಯವಿದೆ.[೧] ಇದು ಗಂಗರ ಕಾಲದಿಂದಲೂ ಸಹ ಇದ್ದಂತಹ ಗ್ರಾಮವಾಗಿದೆ. ಇಲ್ಲಿಯ ಶಾಸನವೊಂದರಲ್ಲಿ ಹಸು–ಕರು, ಮಂಟಪ ಮತ್ತು ಅದರೊಳಗೆ ಲಿಂಗವಿದೆ. ಆನೆ ಲಾಂಛನವಿದೆ. ಇವುಗಳ ಕೆಳಭಾಗದಲ್ಲಿ ಇಬ್ಬರು ವ್ಯಕ್ತಿಗಳಿದ್ದು ಇವರ ತಲೆಯ ಮೇಲೆ ಛತ್ರಿಗಳಿವೆ. ಶಾಸನದ ಬಲಗಡೆ ವ್ಯಕ್ತಿ ಧಾರೆಯೆರೆಯುತ್ತಿದ್ದಾನೆ. ಎಡಗಡೆಯ ವ್ಯಕ್ತಿ ಏನನ್ನೋ ಸ್ವೀಕರಿಸುತ್ತಿರುವಂತಿದೆ.

**ಪರಶುರಾಮ ದೇವಾಲಯ :** ಈ ದೇವಾಲಯವು ಊರ ಮಧ್ಯದಲ್ಲಿದೆ. ಪೂರ್ವಾಭಿಮುಖವಾಗಿದ್ದು ಎತ್ತರದಲ್ಲಿ, ವಿಶಾಲತೆಯಲ್ಲಿ ಬಹಳ ಚಿಕ್ಕದಾಗಿದೆ, ಭಗ್ನವಾಗಿರುವ ಭಾಗವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಈ ದೇವಾಲಯ ಗರ್ಭಗೃಹ, ಸುಕನಾಸಿ, ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ೨ ಅಡಿ ಎತ್ತರದ ಪೀಠದ

* ಹಿರಿಯ ಸಂಶೋಧನಾ ವಿದ್ಯಾರ್ಥಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು – ೦೬.

ಮೇಲೆ ೨.೫ ಅಡಿ ಎತ್ತರದ ಚೌಕಾಕಾರದ ಲಿಂಗವಿದ್ದು ಇದು ಮೇಲ್ಭಾಗದಲ್ಲಿ ಸುಮಾರು ೯ ಇಂಚಿನಷ್ಟು ಮುಂಚಾಚಿದೆ. ಇದು ಸುತ್ತಿಗೆ ಅಥವಾ ಕೊಡಲಿಯಾಕಾರ ದಲ್ಲಿದ್ದು ಚೌಕಾಕಾರವಾಗಿದೆ. ಲಿಂಗದ ರುದ್ರ ಭಾಗದಲ್ಲಿ ಚೌಕಾಕಾರದ ರೀತಿಯಲ್ಲಿ ಮಾಡಿರುವುದರಿಂದ ಇದನ್ನು ಪರಶುರಾಮೇಶ್ವರ ಲಿಂಗವೆಂದು ಕರೆಯುತ್ತಾರೆ. ಗೋವಾದ ಅರವೇಲಂನಲ್ಲಿ ಇಂತಹ ಲಿಂಗದ ರುದ್ರಭಾಗವನ್ನು ಕಾಣುತ್ತೇವೆ. ಕರ್ನಾಟಕದಲ್ಲಿ ಪರಶುರಾಮನಿಗೆ ಪ್ರತ್ಯೇಕ ದೇವಾಲಯುಗಳು ಬಹಳ ವಿರಳ. ವಿಷ್ಣು ಶಿಲ್ಪದ ಪ್ರಭಾವಳಿಯಲ್ಲಿ ಸಾಮಾನ್ಯವಾಗಿ ತೋರಿಸಲ್ಪಡುವ ದಶಾವತಾರ ಪಟ್ಟಿಕೆಯಲ್ಲಿ ಪರಶುವನ್ನು ಹಿಡಿದ ಒಬ್ಬ ವ್ಯಕ್ತಿಯ ಶಿಲ್ಪವನ್ನು ಬಿಡಿಸಲಾಗಿರುತ್ತದೆ. ಹೊಯ್ಸಳರ ದೇವಾಲಯಗಳ ಭಿತ್ತಿಶಿಲ್ಪಗಳಲ್ಲಿ ಪರಶುರಾಮನನ್ನು ಚಿತ್ರಿಸಲಾಗಿರುತ್ತದೆ. ಇವುಗಳನ್ನು ಬಿಟ್ಟರೆ ಪ್ರತ್ಯೇಕವಾಗಿ ಪರಶುರಾಮನಿಗಾಗಿಯೇ ದೇವಾಲಯಗಳ ನಿರ್ಮಾಣ ವಿರಳ. ಇಲ್ಲಿನ ಪರಶುರಾಮರ ದೇವಾಲಯವೆ ಒಂದು ವಿಶೇಷವಾದರೆ ಇಲ್ಲಿನ ಲಿಂಗವು ಬಹಳ ವಿಶೇಷ.

ದೇವಾಲಯದ ಎಡಭಾಗದಲ್ಲಿ ಒಂದು ವೀರಗಲ್ಲಿದೆ. ಇದರ ಪಕ್ಕದಲ್ಲಿ ಮತ್ತೊಂದು ಕಲ್ಲಿದ್ದು ಇಲ್ಲಿ ನಾಯಿ ಹಾಗೂ ತಲೆಯ ಭಾಗವು ಗರುಡ ಪಕ್ಷಿಯ ಆಕಾರದಲ್ಲಿದ್ದು ಇದು ಎರಡು ತಲೆಯನ್ನು ಹೊಂದಿದೆ. ದೇಹವು ಮನುಷ್ಯನಾಕಾರ ದಲ್ಲಿದೆ. ಇದು ಮನುಷ್ಯನ ರೂಪವಿರುವ ಗಂಡಭೇರುಂಡದ ಶಿಲ್ಪವಾಗಿರುವಂತಿದೆ.

**ಜಡೆಮುನಿ ಶಿಲ್ಪ :** ಈಶ್ವರ ದೇವಾಲಯದ ಈಶಾನ್ಯಕ್ಕೆ ಒಂದು ಸುಂದರವೂ ವಿಚಿತ್ರವೂ ಆದ ಶಿಲ್ಪವಿದೆ. ಇದು ನಾಲ್ಕು ಅಡಿ ಎತ್ತರವಿದೆ. ಇದನ್ನು ಜಡೆಮುನಿ ಎಂದು ಕರೆಯುತ್ತಾರೆ. ಎಂಟು ಕಾಲುಗಳು, ನಾಲ್ಕು ಕೈಗಳಿದ್ದು ನೀಳವಾದ ಕೂದಲನ್ನು ಬಿಟ್ಟಿದೆ. ಮಂಡಿಯವರೆಗೆ ಪಂಚೆ ಉಟ್ಟಿದೆ. ಪಂಚೆಯ ಮೇಲಂಚಿನಲ್ಲಿ ಹಗ್ಗದ ಕಟ್ಟು ಇರುವಂತಿದೆ. ಪಟ್ಟೆಯ ರೀತಿಯಲ್ಲಿ ಸ್ವಲ್ಪ ಅಗಲವಾದ ಜನಿವಾರವಿದೆ. ಕಿವಿಯಲ್ಲಿ ಕರ್ಣಕುಂಡಲಗಳನ್ನು ಧರಿಸಿದೆ. ಸಿಂಹದ ಚರ್ಮವನ್ನು ಸೊಂಟಕ್ಕೆ ಸುತ್ತಿಕೊಂಡಿರುವಂತಿದೆ. ಹಣೆಯಲ್ಲಿ ಒಂದು ಕಣ್ಣಿದೆ. ನಾಲ್ಕು ಕಾಲುಗಳು ಸಮನಾಗಿ ಮುಂಭಾಗಕ್ಕಿದ್ದು, ಅದೇ ರೀತಿ ಇನ್ನುಳಿದ ನಾಲ್ಕು ಕಾಲುಗಳು ಸಮನಾಗಿ ಹಿಂಭಾಗದಲ್ಲಿದೆ. ನಾಲ್ಕು ಕೈಗಳಿದ್ದು ಬಲಗೈಯಲ್ಲಿ ಮೇಲ್ಭಾಗದಲ್ಲಿರುವ ಕೈಯಲ್ಲಿ ದಂಡವಿದ್ದು ಬಲಭಾಗದಲ್ಲಿ ಕೆಳಗಡೆ ಇರುವ ಕೈಯಲ್ಲಿ ಜಪಮಣಿಯನ್ನು ಹಿಡಿದಿದೆ. ಎಡಭಾಗದ ಕೆಳಕೈಯಲ್ಲಿ ಕಮಂಡಲವನ್ನು ಹಿಡಿದಿದೆ. ಮತ್ತೊಂದು ಕೈ ಭಿನ್ನವಾಗಿದೆ. ಇಲ್ಲಿನ ಜನರು ಇದನ್ನು ಬೂತಪ್ಪ ಎಂತಲೂ ಕರೆಯುತ್ತಾರೆ. ಇದು ಈ ಅಗ್ರಹಾರಕ್ಕೆ (ಹಿರೇಮಗಳೂರು) ಯಾವುದೇ ಪ್ರೇತಗಳು ಬಾರದ ರೀತಿಯಲ್ಲಿ ಕಾವಲಿರುವ ಒಂದು ದೈವಶಕ್ತಿಯಾಗಿದೆ ಎಂಬುದು ಗ್ರಾಮದವರ ನಂಬಿಕೆ. ಚಪ್ಪಟೆ ಮುಖ, ಅಗಲವಾದ ಕಣ್ಣುಗಳು ಮತ್ತು ಮೂಗು, ಸ್ವಲ್ಪ ನಗುಮುಖ ಇರುವ ಈ ಶಿಲ್ಪ ಶಿನವನದ್ದಿರಬೇಕೆಂದು ಎಂ.ಎಚ್. ಕೃಷ್ಣ ಅಭಿಪ್ರಾಯ ಪಟ್ಟಿದ್ದಾರೆ.[೨]

**ಯೂಪಸ್ತಂಭ :** ಈಶ್ವರ ದೇವಾಲಯದ ಮುಂಭಾಗ ದಲ್ಲಿ ಸುಮಾರು ೨೦ ಅಡಿ ಎತ್ತರದ ಒಂದು ಯೂಪಸ್ತಂಭ ವಿದೆ. ಪೌರಾಣಿಕ ಕಥಾನಾಯಕನಾದ ಜನಮೇಜಯನು ಸರ್ಪಯಾಗವನ್ನು ಮಾಡಿದಾಗ ಇದನ್ನು ನಿಲ್ಲಿಸಿದನೆಂಬ ಐತಿಹ್ಯವಿದೆ. ಪೂರ್ವ ಮತ್ತು ಪಶ್ಚಿಮ ಭಾಗದಲ್ಲಿರುವ ಮೊಗ್ಗುಗಳು ಹಾಗೂ ಸ್ತಂಭದ ಮೂಲೆಯನ್ನು ನೋಡಿದರೆ ಇದು ತ್ರಿಶೂಲದ ರೀತಿ ಕಾಣುತ್ತದೆ. ಇದಕ್ಕೆ ಎತ್ತರದ ಘನಾಕೃತಿಯ ಪೀಠವಿದೆ. ಅದರ ಮೇಲೆ ಅಷ್ಟಕೋನಾಕೃತಿಯ ಅಲಂಕೃತ ಭಾಗವಿದೆ. ಅನಂತರ ಮತ್ತೊಂದು ಘನಾಕೃತಿಯ ಭಾಗವಿದೆ. ಅದರ ಮೇಲ್ಭಾಗದಲ್ಲಿ ಚೌಕಾಕಾರದ ಬೋದಿಗೆಯಿದ್ದು ಅದರ ಮೇಲೆ ಕಮಲದ ಮೊಗ್ಗಿನ ಅಲಂಕಾರವಿದೆ. ಇದರ ಪೂರ್ವ ಮತ್ತು ಪಶ್ಚಿಮ ಭಾಗಗಳಲ್ಲಿ ರೇಖೆಗಳಿದ್ದು ಇವು ತ್ರಿಶೂಲವನ್ನು ಬಿಂಬಿಸುವಂತಿವೆ. ಸ್ತಂಭದ ಪೂರ್ವ ಮತ್ತು ಪಶ್ಚಿಮದಲ್ಲಿ ಶಾಸನವಿದೆ. ಪಶ್ಚಿಮ ಭಾಗದಲ್ಲಿ ಕೆಲವೇ ಅಕ್ಷರಗಳಿದ್ದು ಉಳಿದ ಅಕ್ಷರಗಳು ನಾಶವಾಗಿವೆ. ಈ ಅಕ್ಷರಗಳು ಎರಡು ಇಂಚು ಅಗಲ ಮತ್ತು ಉದ್ದವನ್ನು ಹೊಂದಿವೆ ಇದರಲ್ಲಿ 'ಅಶ್ವಯೂಪ' ಎಂಬ ಪದ ಮಾತ್ರ ಸಂಪೂರ್ಣವಾಗಿ ಉಳಿದಿದೆ. ಪ್ರಾಚೀನ ಕಾಲದಿಂದಲೂ ಯಜ್ಞ ಯಾಗಾದಿಗಳನ್ನು ಮಾಡುವ ಪದ್ಧತಿ ಇತ್ತೆಂದು ಇದರಿಂದ ತಿಳಿಯುತ್ತದೆ. ಡಾ. ಎಂ. ಚಿದಾನಂದಮೂರ್ತಿಯವರು ಈ ಬಗ್ಗೆ ಚರ್ಚಿಸುತ್ತ 'ಅಶ್ವಯೂಪ' ಎಂಬ ಪದಕ್ಕೆ ಅರ್ಥವನ್ನು ಹೇಳುವ ಪ್ರಯತ್ನ ಮಾಡಿದ್ದಾರೆ. ಕ್ರಿಸ್ತಶಕಪೂರ್ವದಲ್ಲಿಯೇ ಇಲ್ಲಿ ಯಾಗಗಳು, ಅಶ್ವಬಲಿಗಳು ನಡೆಯುತ್ತಿದ್ದುವೆಂಬುದು ಸೂಚಿತವಾಗುತ್ತದೆ. ಪೂರ್ವ ಮುಖದ ಶಾಸನವನ್ನು ಅಣ್ಣಯ್ಯ ಎನ್ನುವವನು ಕೊರೆಯಿಸಿರಬೇಕು. 'ಬಲಿ' ಎನ್ನುವ ಮಾತನ್ನು ಗಮನಿಸಿದರೆ ಅವನು ಯಾವುದೋ ಯಾಗವನ್ನು ಮಾಡಿಸಿ ಬಲಿಯನ್ನು ಕೊಟ್ಟನೆಂದು ಊಹಿಸಬೇಕಾಗುತ್ತದೆ.[೩] ಲಕಿಗ ಎಂಬಾತನು ಈ ಶಾಸನವನ್ನು ಕೊರೆಸಿದನು. ಬಹುಶಃ ನೊಳಂಬರಾಜ ಅಣ್ಣಿಗ ಅಥವಾ ವೀರನೊಳಂಬನು ಜೀರ್ಣವಾಗಿ ಹೋಗಿದ್ದ ಆ ಸ್ತಂಭವನ್ನು ಮತ್ತೆ ನೆಡಿಸಿರಬೇಕು ಎಂದು ವಿದ್ವಾಂಸರು ಊಹಿಸುತ್ತಾರೆ. ಪ್ರಾಚೀನ ಕರ್ನಾಟಕದಲ್ಲಿ ಯಜ್ಞಗಳನ್ನು ಮಾಡುವಾಗ ಬಲಿಯನ್ನು ಕೊಡುತ್ತಿದ್ದಾ

ರೆಂಬುದು ಇದರಿಂದ ಸೂಚಿತವಾಗುತ್ತದೆ.[೪] ಇಲ್ಲಿನ ಲಿಪಿಯ ಸ್ವರೂಪವನ್ನು ಗಮನಿಸಿದರೆ ಕ್ರಿ.ಶ. ೨ ಮತ್ತು ೩ನೆಯ ಶತಮಾನದ ಕಾಲದ ಅಕ್ಷರಗಳಂತೆ ತೋರುತ್ತದೆ. ಅಂದರೆ ಈ ಕಲ್ಲನ್ನು ಕ್ರಿ.ಶ. ೨-೩ನೆಯ ಶತಮಾನದಲ್ಲಿ ಬರೆವಣಿಗೆಗೆ ಬಳಸಿ ಮತ್ತೆ ಕ್ರಿ.ಶ. ೧೧ನೆಯ ಶತಮಾನದಲ್ಲಿ ಬಳಸಲಾಯಿತು.[೫] ಆದರೆ ಮೊದಲು ಬರೆದಿರುವ ಅಕ್ಷರಗಳು ಯಾವ ಕಾಲದವು ಎಂಬುದರ ನಿಖರತೆಯ ಬಗ್ಗೆ ವಿದ್ವಾಂಸರಲ್ಲಿ ಒಮ್ಮತಾಭಿಪ್ರಾಯವಿಲ್ಲ. ಪೂರ್ವಭಾಗದಲ್ಲಿರುವ ಶಾಸನ ಮಾತ್ರ ಕ್ರಿ.ಶ. ೧೧ನೆಯ ಶತಮಾನದ ಕಾಲದ ಅಕ್ಷರ ಲಿಪಿಯನ್ನು ಹೋಲುತ್ತದೆ.[೬]

**ಸೋಮಪುರದ ಪ್ರಸನ್ನ ಸೋಮೇಶ್ವರ ದೇವಾಲಯದ ಲಿಂಗ :** ತರೀಕೆರೆ ತಾಲ್ಲೂಕಿನಲ್ಲಿರುವ ಈ ಗ್ರಾಮವು ತರೀಕೆರೆಯಿಂದ ಪೂರ್ವಕ್ಕೆ ಸುಮಾರು ೨೦ ಕಿ.ಮೀ. ದೂರದಲ್ಲಿದೆ. ಸ್ಥಳಪುರಾಣದ ಪ್ರಕಾರ ಇದು ಜಮದಗ್ನಿ ಋಷಿಯ ವಾಸಸ್ಥಾನ, ಈ ಸ್ಥಳದಲ್ಲೇ ಪರಶುರಾಮನು ಇಡೀ ಭೂಮಂಡಲವನ್ನು ಜಯಿಸಿದ ನಂತರ ತನ್ನ ಪರಶುವನ್ನು ತೊಳೆದನೆಂಬ ಐತಿಹ್ಯ. ಇದು ಭದ್ರಾನದಿಯ ದಕ್ಷಿಣ ದಂಡೆಯ ಮೇಲಿನ ಪಂಚಕ್ಷೇತ್ರಗಳಲ್ಲಿ ಒಂದು. ಈ ದೇವಾಲಯಕ್ಕೆ ಕ್ರಿ.ಶ. ೧೨೨೮ರಲ್ಲಿ ಎರಡನೆಯ ನರಸಿಂಹನ ಕಾಲದಲ್ಲಿ ಚಿಕ್ಕಬೇರುಂಡನ ಮಠದ ಸಮಸ್ತ ಜನಗಳು ಸೋಮೇಶ್ವರ ದೇವಾಲಯಕ್ಕೆ ದಾನ ನೀಡಿದ ಉಲ್ಲೇಖವಿದೆ.[೭] ಇದಲ್ಲದೆ ಕ್ರಿ.ಶ. ೧೨೬೧ ಮತ್ತು ಕ್ರಿ.ಶ. ೧೨೬೫ರಲ್ಲಿ ದೇವರ ಅಂಗಭೋಗ, ರಂಗಭೋಗಕ್ಕೆ ದಾನ ನೀಡಿದ ಉಲ್ಲೇಖವಿದೆ.[೮] ಆದುದರಿಂದ ಈ ದೇವಾಲಯವನ್ನು ಕ್ರಿ.ಶ. ೧೨೨೮ಕ್ಕಿಂತ ಹಿಂದೆಯೇ ನಿರ್ಮಿಸಲಾಗಿದೆ ಎನ್ನಬಹುದು.

ಪೂರ್ವಾಭಿಮುಖವಾಗಿರುವ ಈ ದೇವಾಲಯ ಏಕಕೂಟ ದೇವಾಲಯವಾಗಿದೆ. ಗರ್ಭಗೃಹದಲ್ಲಿ ಸುಮಾರು ೩ ಅಡಿ ಎತ್ತರದ ಪಾಣಿಪೀಠದ ಮೇಲೆ ೧ ಅಡಿ ಎತ್ತರದ ಲಿಂಗವಿದೆ. ಇಲ್ಲಿದ್ದ ಮೂಲ ಸೋಮೇಶ್ವರ ಲಿಂಗ ನಾಪತ್ತೆಯಾಗಿದ್ದು ಹೊಸದೊಂದು ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇದನ್ನು ಕ್ರಿ.ಶ. ೧೯೭೬ರಲ್ಲಿ ಶೃಂಗೇರಿಯ ಜಗದ್ಗುರುಗಳು ಪ್ರತಿಷ್ಠಾಪಿಸಿದರು. ಇಲ್ಲಿನ ಲಿಂಗದ ಮುಂಭಾಗದಲ್ಲಿ ಅಂಡಾಕಾರದ ಗುಳಿಯನ್ನು ಮಾಡಿದ್ದು ಅಲ್ಲಿ ಮೂರು ಶಿರಸ್ಸನ್ನುಳ್ಳ ದತ್ತಾತ್ರೇಯನ ಕೆತ್ತನೆಯನ್ನು ಹೊಂದಿದ್ದು ಇದು ನಾಲ್ಕು ಕೈಗಳನ್ನು ಹೊಂದಿದೆ. ಸ್ಥಳಪುರಾಣದ ಪ್ರಕಾರ ಇದು ತ್ರಿಮೂರ್ತಿಗಳ ರೂಪವಾದ ಬ್ರಹ್ಮ, ವಿಷ್ಣು, ಮಹೇಶ್ವರರ ರೂಪವೆಂದು ಭವಿಸಲಾಗಿದೆ. ಕೆಳಭಾಗದಲ್ಲಿ ನಂದಿ ಚಿತ್ರವಿದೆ. ಈ ಪ್ರದೇಶದಲ್ಲಿ ಹಿಂದೆ ದತ್ತಾತ್ರೇಯಮೂರ್ತಿಯ ಉಪಾಸನೆ ನಡೆಯುತ್ತಿದ್ದಿರಬಹುದು.[೯]

**ಬಿಂದುಮಾಧವ :** ಇದು ಕಳಸದ ಕಳಸೇಶ್ವರ ದೇವಾಲಯದಿಂದ ಉತ್ತರಕ್ಕಿದೆ. ಗರ್ಭಗೃಹದಲ್ಲಿ ಬಿಂದುಮಾಧವ ಎಂಬ ಶಿಲ್ಪವು ವಿಷ್ಣುವಿನ ನಿರೂಪಣಾ ಶಿಲ್ಪವಾಗಿದ್ದು ಇದು ಕೂರ್ಮದ ಮೇಲೆ ನಿಂತಿರುವ ವಿಷ್ಣುವಿನ ವಿಗ್ರಹ. ಇದು ಸು. ೩ ಅಡಿ ಎತ್ತರವಿದೆ. ಕೈಯಲ್ಲಿ ಶಂಖ, ಚಕ್ರ, ಗದೆ ಮತ್ತು ಅಭಯಹಸ್ತವನ್ನು ಹೊಂದಿದೆ. ಇಕ್ಕೆಲಗಳಲ್ಲಿ ಶ್ರೀದೇವಿ, ಭೂದೇವಿಯರ ಚಿತ್ರಗಳಿವೆ. ಈ ಮೂರ್ತಿಯಲ್ಲಿನ ಒಂದು ವಿಶೇಷವೆಂದರೆ ಲಕ್ಷಣವೆಂದರೆ ವಿಷ್ಣುವಿನ ಪಾದದಡಿಗಳಲ್ಲಿ ಆಮೆಯನ್ನು ತೋರಿಸಿರುವುದು. ಅಗ್ನಿಪುರಾಣದಲ್ಲಿ ಬರುವ ವಿಷ್ಣುಪೂಜೆಯ ವರ್ಣನೆಯಲ್ಲಿ ವಿಷ್ಣುವನ್ನು ಅವನ ಪರಿವಾರದವರಾದ ಲಕ್ಷ್ಮಿ, ಗಂಗಾಧರ, ವಿಧಾತ, ನವನಿಧಿಗಳು, ವಾಸ್ತುಪುರುಷ, ಶಕ್ತಿ, ಕೂರ್ಮ, ಅನಂತ ಮತ್ತು ಪೃಥ್ವಿ ಇವರೊಡನೆ ಸೂಚಿಸಬೇಕೆಂದು ವಿಧಿಯಿದೆ. ಅನಂತರ ಕಾಲದ ಶಿಲ್ಪರತ್ನದಲ್ಲಿ ಕೂರ್ಮ ಮತ್ತು ಅನಂತನನ್ನು ವಿಷ್ಣುವಿನ ಪಾದದ ಬಳಿ ತೋರಿಸಬೇಕೆಂಬ ನಿಯಮವಿದೆ.[೧೦] ಪ್ರಾಯಶಃ ಇದಕ್ಕನುಗುಣವಾಗಿ ಈ ಮೂರ್ತಿಯನ್ನು ಮಾಡಿರಬಹುದು.

**ಕಿಗ್ಗ (ರಿಷಿಯಶೃಂಗೇಶ್ವರಪುರ) ಋಷ್ಯಶೃಂಗೇಶ್ವರ ಲಿಂಗ:** ಶೃಂಗೇರಿಯಿಂದ ಪಶ್ಚಿಮಕ್ಕೆ ಸುಮಾರು ೮ ಕಿ.ಮೀ. ದೂರದಲ್ಲಿ ಈ ಗ್ರಾಮವಿದೆ. ರಿಷಿಯಶೃಂಗಪುರವನ್ನು ಮಾರ್ಕಳ ಎಂದೂ ಕರೆಯುತ್ತಾರೆ. ಬಹುಶಃ ಈ ಪ್ರಾಂತ್ಯವು ಹಾಗೂ ದೇವಾಲಯವು ಕ್ರಿ.ಶ. ೭ನೆಯ ಶತಮಾನದಿಂದಲೂ ಪ್ರಸಿದ್ಧಿ ಪಡೆದಿದ್ದು ನಂತರದಲ್ಲಿ ಕ್ಷೀಣಿಸುತ್ತಾ ಅನಂತರದಲ್ಲಿ ಬಹಳ ಪ್ರಸಿದ್ಧಿ ಪಡೆದಿರಬಹುದು. ಇಲ್ಲಿ ಕ್ರಿ.ಶ. ಸುಮಾರು ೭ನೆಯ ಶತಮಾನದ ೫ ದಾನಶಾಸನಗಳು ದೊರೆತಿರುವುದೆ ಇದಕ್ಕೆ ಸಾಕ್ಷಿಯಾಗಿದೆ.[೧೧] ನಂತರದಲ್ಲಿ ಕ್ರಿ.ಶ. ೧೧ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ ಈ ದೇವಾಲಯಕ್ಕೆ ದಾನದತ್ತಿಗಳನ್ನು ನೀಡಿ ಜೀರ್ಣೋದ್ಧಾರವಾಗಿದೆ.

ಈ ದೇವಾಲಯ ಪೂರ್ವಾಭಿಮುಖವಾಗಿದ್ದು ಇದನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಿದ್ದಾರೆ. ದೇವಾಲಯವನ್ನು ಕ್ರಿ.ಶ. ೧೪ನೆಯ ಶತಮಾನದಲ್ಲಿ ವಿಜಯನಗರ ಕಾಲದಲ್ಲಿ ನಿರ್ಮಿಸಿದ್ದಾರೆ.[೧೨] ಗರ್ಭಗೃಹದಲ್ಲಿ ೩ ಅಡಿ ಎತ್ತರದ ಲಿಂಗವಿದೆ. ಇದನ್ನು ಶೃಂಗೇಶ್ವರ ಎಂದೂ ಹಾಗೂ ಮುನಿ ರಿಷಿಯಶೃಂಗ ಎಂದೂ ಕರೆಯುತ್ತಾರೆ. ಈ ಲಿಂಗದಲ್ಲಿ ಜಿಂಕೆಯ ಕೊಂಬಿನ ಗುರುತಿದೆ ಇದರ ಕೆಳಗೆ ನಂದಿ ಇದರ ಪಕ್ಕದಲ್ಲಿ ಸ್ತ್ರೀಯ ಚಿತ್ರವಿದೆ. ಇದು ಋಷ್ಯಶೃಂಗನ ಹೆಂಡತಿ ಶಾಂತಾಳನ್ನು ಸೂಚಿಸುತ್ತದೆ. ಕೊಂಬುಗಳು ಅವನ ಶೃಂಗಗಳನ್ನೂ ಸಂಕೇತಿಸುತ್ತವೆ, ಕೆಳಭಾಗದಲ್ಲಿ ಕಮಲದ ಮೊಗ್ಗಿನಾಕಾರದ ಶಿಲ್ಪಗಳಿವೆ. ಕಲ್ಲಿನ ಹಿಂಭಾಗ ನುಣುಪಾಗಿದೆ.

ಈ ಗುಡಿಯ ಐತಿಹ್ಯವೆಂದರೆ ಈ ಪ್ರಾಂತ್ಯಕ್ಕೆ ಮಳೆ ಬೆಳೆ ಆಗದಿದ್ದರೆ ಈ ದೇವರನ್ನು ಪೂಜಿಸಿದರೆ ಮಳೆ ಬೆಳೆ ಚೆನ್ನಾಗಿ ಆಗುತ್ತದೆ ಎಂಬ ನಂಬಿಕೆಯಿದೆ. ಆದುದರಿಂದಲೆ ಈ ಪ್ರಾಂತ್ಯದಲ್ಲಿ ಬಹಳ ಪ್ರಸಿದ್ಧಿ ಪಡೆದಿದೆ. ಗರ್ಭಗೃಹದ ಎರಡೂ ಕಡೆಯೂ ಚಿಕ್ಕದಾದ ಗುಡಿಗಳಿದ್ದು ಬಲಭಾಗದಲ್ಲಿ ೨ ಅಡಿ ಎತ್ತರದ ದ್ವಿಬಾಹು ಗಣಪತಿಯ ಶಿಲ್ಪವಿದೆ. ಈ ದ್ವಿಭುಜ ಗಣಪತಿಯು ಸಹ ಒಂದು ವಿಶೇಷ ಶಿಲ್ಪವಾಗಿದೆ. ಏಕೆಂದರೆ ದ್ವಿಬಾಹು ಗಣಪತಿಯ ಶಿಲ್ಪಗಳು ದೊರೆಯುವುದು ವಿರಳ.

**ಲಜ್ಜಾಗೌರಿ ಶಿಲ್ಪಗಳು :** ಗರ್ಭಗುಡಿಯ ಹೊರಭಾಗದ ಪಶ್ಚಿಮ ಭಿತ್ತಿಯಲ್ಲಿ ಲಜ್ಜಾಗೌರಿ ಶಿಲ್ಪವಿದ್ದು ಇದು ಕುಳಿತ ಭಂಗಿಯಲ್ಲಿದೆ. ಇದು ನಗ್ನವಾಗಿದ್ದು ಯೋನಿ ಪ್ರಧಾನವಾಗಿ ಕಾಣುವಂತೆ ಕಾಲು ಅಗಲಿಸಿ ಕುಳಿತ ಭಂಗಿಯ ಸ್ತ್ರೀ ಶಿಲ್ಪವಾಗಿದೆ. ಇದು ಕುಳಿತ ಪ್ರಸೂತಿ ಭಂಗಿಯದಾಗಿದೆ. ಇದನ್ನು ಮಗು ಹಡೆಯುತ್ತಿರುವಂತೆ ಚಿತ್ರಿಸಲಾಗಿದ್ದು ಮಗುವಿನ ತಲೆ ಹಾಗೂ ಕೈಗಳು ಹೊರಗೆ ಬಂದಿರುವಂತೆ ಚಿತ್ರಿಸಲಾಗಿದೆ. ಇವಳ ಮುಖವು ಬಲಕ್ಕೆ ವಾಲಿದೆ. ದೇವಾಲಯದ ನೈರುತ್ಯ ದಿಕ್ಕಿನ ಹಾಸುಗಲ್ಲಿನಲ್ಲಿಯೂ ಸಹ ಮತ್ತೊಂದು ಲಜ್ಜಾಗೌರಿಯ ಶಿಲ್ಪವಿದೆ. ಇದು ಸಹ ಕುಳಿತ ಭಂಗಿಯಲ್ಲಿದ್ದು ಇದರಲ್ಲಿ ಪ್ರಸೂತಿಯ ರಚನೆಯನ್ನು ತೋರಿಸಲಾಗಿಲ್ಲ. ಸ್ಥಳೀಯರು ಮಕ್ಕಳಿಗಾಗಿ ಈ ವಿಗ್ರಹವನ್ನು ಇಂದಿಗೂ ಪೂಜಿಸುತ್ತಾರೆ. ಈ ಶಿಲ್ಪಗಳ ಲಕ್ಷಣವನ್ನು ಗಮನಿಸಿದಾಗ ಇದು ಮಕ್ಕಳ ಫಲಕ್ಕಾಗಿ ಪೂಜಿಸುವ ದೇವತೆಯೆಂದು ಹೇಳಬಹುದು. ಮೈಸೂರು ವಿಶ್ವವಿದ್ಯಾನಿಲಯದ ವಸ್ತುಸಂಗ್ರಹಾಲಯದಲ್ಲಿರುವ ರಥದ ಶಿಲ್ಪದಲ್ಲಿಯೂ ಸಹ ಮಗುವನ್ನು ಹಡೆಯುತ್ತಿರುವ ಶಿಲ್ಪವಿದೆ. ಇದರಲ್ಲಿ ಮಗುವನ್ನು ಹಡೆಯುತ್ತಿರುವ ತಾಯಿಗೆ ಸಹಾಯಕರಾಗಿ ನಾಲ್ಕು ಜನ ಮಹಿಳೆಯರನ್ನು ಚಿತ್ರಿಸಲಾಗಿದೆ. ಇದೊಂದು ಸಾಮಾಜಿಕ ಸನ್ನಿವೇಶವನ್ನು ಚಿತ್ರಿಸುವ ಶಿಲ್ಪವಾದರೂ ಲಜ್ಜಾಗೌರಿಯ ಶಿಲ್ಪದ ಸಾಮ್ಯತೆಯನ್ನು ಹೊಂದಿರುತ್ತದೆ. ಈ ಅಂಶಗಳನ್ನು ಗಮನಿಸಿದಾಗ ಲಜ್ಜಾಗೌರಿಯೆಂದು ಕರೆಯುವ ಶಿಲ್ಪವು ಸಂಭೋಗ ಭಂಗಿಯಲ್ಲದೆ ಪ್ರಸೂತಿ ಭಂಗಿಯದು ಎಂದು ಹೇಳಬಹುದು. ಜನಪದರು ಲಜ್ಜಾಗೌರಿ ಮಕ್ಕಳ ಶಿಲ್ಪದ ಬಗ್ಗೆ ಪ್ರತ್ಯೇಕ ಅನಿಸಿಕೆ, ನಂಬಿಕೆಗಳನ್ನು ಬೆಳೆಸಿಕೊಂಡು ಬಂದಿರುವುದು ಸಹಜವಾದರೂ ಸಹ ಸಾಮಾನ್ಯ ನಂಬಿಕೆಯೆಂದರೆ ಲಜ್ಜಾಗೌರಿ ಫಲ ಕೊಡುವ ದೇವತೆಯಾಗಿದೆ.[೧೩]

**ಶೃಂಗೇರಿ ವಿದ್ಯಾಶಂಕರ ದೇವಾಲಯ :** ಈ ದೇವಾಲಯ ಪಟ್ಟಣದ ಪಶ್ಚಿಮ ಭಾಗದಲ್ಲಿದೆ. ಇದು ಪೂರ್ವಾಭಿಮುಖವಾಗಿದ್ದು ಸ್ವಲ್ಪ ಕೆಂಪು ಮಿಶ್ರಿತ ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಈ ದೇವಾಲಯ ಕರ್ನಾಟಕದ ವಾಸ್ತುಶಿಲ್ಪ ಪರಂಪರೆಯಲ್ಲಿ ವಿಭಿನ್ನವಾದ ವಾಸ್ತುಶೈಲಿಯನ್ನು ಹೊಂದಿದೆ. ಇದು ಮೇಲುನೋಟಕ್ಕೆ ಹೊಯ್ಸಳ ಶೈಲಿಯಂತೆ ಕಂಡರೂ ವಾಸ್ತವಿಕವಾಗಿ ದ್ರಾವಿಡಶೈಲಿಯ ಕಲಾಕೃತಿಯನ್ನು ಹೊಂದಿರುವುದು ಒಂದು ವಿಶೇಷ. ಗಜಪೃಷ್ಠಾಕಾರ ಹಾಗೂ ಸುಂದರವಾದ ತಳವಿನ್ಯಾಸವನ್ನು ಹೊಂದಿದೆ. ಇದರ ಬೃಹತ್ ವ್ಯಾಸವು ಭಾರತದಲ್ಲಿಯೇ ಅಪೂರ್ವವೆಂಬುದು ತಜ್ಞರ ಅಭಿಪ್ರಾಯ. ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದಂತಹ ದುರ್ಗ ದೇವಾಲಯವು ಸಹ ಗಜಪೃಷ್ಠಾಕಾರವನ್ನು ಹೊಂದಿದೆ. ದಕ್ಷಿಣ ಭಾರತದ ಮೂರು ಮುಖ್ಯ ದೇವಾಲಯ ನಿರ್ಮಾಣ ಶೈಲಿಗಳಾದ ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರ ಶೈಲಿಗಳ ಒಿತಕರ ಹೊಂದಾಣಿಕೆಗೆ ಇದೊಂದು ಉತ್ತಮ ನಿದರ್ಶನವಾಗಿದೆ.[೧೪] ಇದು ಹೊಯ್ಸಳ ವಾಸ್ತುಶಿಲ್ಪ ಶೈಲಿಯಾಗಿ ಪರಿವರ್ತನೆಗೊಂಡದ್ದರ ಪ್ರತೀಕವೂ ಆಗಿದೆ ಎಂದು ಹೇಳಬಹುದು. ಈ ದೇವಾಲಯವನ್ನು ಕ್ರಿಶ ೧೩೬೦ರ ಸುಮಾರಿನಲ್ಲಿ ವಿಜಯನಗರದ ರಾಜ ಬುಕ್ಕರಾಯನು ನಿರ್ಮಿಸಿದನೆಂದು ಶಾಸನಗಳಿಂದ ತಿಳಿಯಬಹುದು. ವಿಜಯನಗರ ಕಾಲದಲ್ಲಿ ಕಟ್ಟಿರುವ ಇದನ್ನು ಎತ್ತರವಾದ ಜಗತಿಯ ಮೇಲೆ ನಿರ್ಮಿಸಲಾಗಿದೆ. ಹೊಯ್ಸಳ ವಾಸ್ತುಶೈಲಿ ಮತ್ತು ದ್ರಾವಿಡ ವಾಸ್ತುಶೈಲಿಯ ಲಕ್ಷಣಗಳುಳ್ಳ ವಿಶಿಷ್ಟ ರೀತಿಯ ಮಿಶ್ರಣವನ್ನು ಇಲ್ಲಿ ಕಾಣಬಹುದು. ವಿಜಯನಗರ ಸಾಮ್ರಾಜ್ಯದ ಆರಂಭದಲ್ಲಿ ದ್ರಾವಿಡ ರೀತಿಯು ಹೊಯ್ಸಳ ಲಕ್ಷಣಗಳೊಡನೆ ಮಿಲನವಾದ ದೇವಾಲಯವೆಂದೂ ಹೇಳಬಹುದು.[೧೫] ತಳವಿನ್ಯಾಸವು ದೀರ್ಘ ಚತುಶ್ರ ಪ್ರಕಾರವಾಗಿದ್ದು ಅದರ ಎರಡೂ ತುದಿಗಳನ್ನು ಅರ್ಧವೃತ್ತಾಕಾರವಾಗಿ ಕಟ್ಟಲಾಗಿದೆ. ಈ ರೀತಿಯ ಆಕಾರದ ದೇವಾಲಯವನ್ನು ಚಾಲುಕ್ಯರ ಕಾಲದಲ್ಲಿಯೇ ನಿರ್ಮಾಣವಾಗಿರುವುದು ಕಂಡು ಬಂದಿದ್ದು ಬಹುಶಃ ಇದು ಹತ್ತಾರು ಪ್ರಯೋಗಗಳನ್ನು ಮಾಡುವಾಗ ಈ ರೀತಿಯ ಗಜಪೃಷ್ಠಾಕೃತಿಯ ದೇವಾಲಯವನ್ನು ನಿರ್ಮಿಸಿರಬೇಕು. ಆದರೆ ಇದು ಅಷ್ಟು ಸಮರ್ಪಕವಾಗಿ ಕಾಣದೇ ಹೋದುದರಿಂದ ಈ ರೀತಿಯ ಕಟ್ಟಡಗಳನ್ನು ಮುಂದೆ ಕೈಬಿಡಲಾಯಿತು.[೧೬]

ನವರಂಗದಲ್ಲಿ ಕಂಬಗಳನ್ನು ಸುಂದರವಾಗಿ ಕೆತ್ತಿದ್ದಾರೆ ಇಲ್ಲಿ ಹನ್ನೆರಡು ಕಂಬಗಳಿದ್ದು ವಿಜಯನಗರದ ಶೈಲಿಯಲ್ಲಿವೆ. ಇವುಗಳು ಖಗೋಲಶಾಸ್ತ್ರಕ್ಕೆ ಅನ್ವಯವಾಗುವಂತೆ ವಿಶೇಷತೆ ಹೊಂದಿವೆ. ಪ್ರತಿಯೊಂದು ಕಂಬಗಳು ಸುಂದರವಾದ ಕೆತ್ತನೆಯಿಂದ ಕೂಡಿವೆ. ಚೌಕಾಕಾರದ ದಿಂಡು, ಚಾಚು ಪೀಠದಲ್ಲಿ ಮಾವಿನ ಹಣ್ಣಿನ ಗೊಂಚಲುಗಳ ಚಿತ್ರ, ಕೆಳಭಾಗದಲ್ಲಿ ಆನೆಯ ಚಿತ್ರಗಳಿದ್ದು ಕಂಬದ ಮಧ್ಯಭಾಗದಲ್ಲಿ ಆನೆ, ಸಿಂಹ

ಮತ್ತು ಸೊರಬಗಳ ಶಿಲ್ಪಗಳಿವೆ. ಸಿಂಹಗಳ ಮೇಲೆ ಕುಳಿತ ವ್ಯಕ್ತಿಯ ಚಿತ್ರವಿದೆ. ಎಲ್ಲಾ ಕಂಬದ ಮೇಲೂ ಒಂದೊಂದು ರಾಶಿಗಳ ಸಂಕೇತ ಶಿಲ್ಪವಿದೆ. ಇವುಗಳನ್ನು ರಾಶಿಕಂಬಗಳೆಂದು ಪ್ರತ್ಯೇಕವಾಗಿ ಗುರುತಿಸಬಹುದಾಗಿದೆ ಹಾಗೂ ದ್ವಾದಶರಾಶಿ ಕಂಬ ಎಂದು ಕರೆಯುತ್ತಾರೆ. ಸೌರಮಾನದ ಅನುಕ್ರಮದಲ್ಲಿ ಮಕರ ಸಂಕ್ರಮಣದಂದು ಸೂರ್ಯನ ಕಿರಣ ಉದಯ ಕಾಲದಲ್ಲಿ ಆಯಾ ಕಂಬಗಳ ಮೇಲೆ ಬೀಳುವಂತೆ ಈ ಕಂಬಗಳನ್ನು ಜೋಡಿಸಿರುವುದು ಅತ್ಯಾಶ್ಚರ್ಯಕರವಾಗಿದೆ. ಕಂಬದ ಉಬ್ಬು ಶಿಲ್ಪಗಳಾದ ವ್ಯಾಘ್ರ ಶಿಲ್ಪಗಳಲ್ಲಿಯೂ ಒಂದು ವಿಶೇಷತೆ ಇದೆ. ಸಿಂಹಗಳ ಬಾಯಿಯ ಒಳಗೆ ಉಂಡೆಕಲ್ಲುಗಳಿದ್ದು ಅವುಗಳನ್ನು ತಿರುಗಿಸಿದರೆ ತಿರುಗುತ್ತವೆ, ಆದರೆ ಹೊರಗಡೆ ತೆಗೆಯುವುದಕ್ಕೆ ಆಗುವುದಿಲ್ಲ. ಇದು ಇಲ್ಲಿನ ಮತ್ತೊಂದು ವೈಶಿಷ್ಟ್ಯತೆಯಾಗಿದೆ.

**ಅಮೃತಾಪುರದ ಅಮೃತೇಶ್ವರ ದೇವಾಲಯ :** ಅಮೃತಾಪುರವು ತರೀಕೆರೆ ತಾಲ್ಲೂಕಿನಲ್ಲಿದೆ. ಇದು ತರೀಕೆರೆಯಿಂದ ಈಶಾನ್ಯಕ್ಕೆ ಸುಮಾರು ೧೧ ಕಿ.ಮೀ. ದೂರದಲ್ಲಿದೆ. ದೇವಾಲಯ ಪೂರ್ವಾಭಿಮುಖವಾಗಿದ್ದು ಸೋಪುಗಲ್ಲಿನಿಂದ ನಿರ್ಮಿಸಲಾಗಿದೆ. ಇದನ್ನು ಹೊಯ್ಸಳ ದೊರೆ ಎರಡನೆಯ ಬಲ್ಲಾಳನ ದಂಡನಾಯಕ ಅಮೃತೇಶ್ವರ ಎಂಬ ದಂಡನಾಯಕನು ಕ್ರಿ.ಶ. ೧೧೯೬ರಲ್ಲಿ ಕಟ್ಟಿಸಿದನು. ಈತನನ್ನು ಶಾಸನಗಳಲ್ಲಿ ಅಮಿತಯ್ಯ ಅಥವಾ ಅಮೃತಯ್ಯ ಎಂದೂ ಕರೆಯಲಾಗಿದೆ.[೧೭] ಈ ಶಾಸನವು ಕನ್ನಡದ ಪ್ರಸಿದ್ಧ ಕವಿ ಜನ್ನನಿಂದ ರಚಿಸಲ್ಪಟ್ಟಿರುವುದಾಗಿ ತಿಳಿದು ಬರುತ್ತದೆ. ದೇವಾಲಯವು ಏಕಕೂಟವಾಗಿದ್ದು ಅಲಂಕಾರಿಕವಾದ ಶಿಲ್ಪಗಳನ್ನೊಳಗೊಂಡಿದೆ. ವಿನ್ಯಾಸದಲ್ಲಿ ವಿಸ್ತೀರ್ಣದಲ್ಲಿ ಹಾಗೂ ಪರಿಕಲ್ಪನೆಯಲ್ಲಿ ಹಲವಾರು ವಿಶೇಷತೆಗಳಿಂದ ಕೂಡಿದ ದೇವಾಲಯ ಎಂದು ಹೇಳಬಹುದು.

ಮುಖಮಂಟಪದಲ್ಲಿರುವ ಭುವನೇಶ್ವರಿಗಳಲ್ಲಿ ಮಧ್ಯದ ಸಾಲಿನ ದಕ್ಷಿಣ ಭಾಗದಲ್ಲಿರುವ ಭುವನೇಶ್ವರಿಯ ಪಶ್ಚಿಮಕ್ಕೆ ಉಚ್ಛಿಷ್ಟಗಣಪತಿಯಿದೆ; ಉತ್ತರದಲ್ಲಿ ಸಿದ್ಧಿವಿನಾಯಕ ಶಕ್ತಿಯನ್ನು ಸೊಂಡಿಲಿನಿಂದ ಅಪ್ಪಿಕೊಂಡಿದ್ದಾನೆ. ಸಾಮಾನ್ಯವಾಗಿ ಮಂತ್ರಶಾಸ್ತ್ರಗಳಲ್ಲಿ ಉಚ್ಛಿಷ್ಟ ಗಣಪತಿಗೆ ಹೋಲುವ ಎಲ್ಲಾ ಲಕ್ಷಣಗಳನ್ನು ಈ ಶಿಲ್ಪವು ಹೊಂದಿದೆ. ಪೂರ್ವದಲ್ಲಿ ಷಡ್ಬಾಹು ಗಣಪತಿ ಇದ್ದು ಇಲ್ಲಿ ಗಣಪತಿಯ ವಿವಿಧ ಭಂಗಿಗಳನ್ನು ಚಿತ್ರಿಸಲಾಗಿದೆ. ಇಲ್ಲಿಯ ಗಣಪತಿ ಶಿಲ್ಪಗಳೆ ವಿಶಿಷ್ಟವಾಗಿದ್ದು ಅದರಲ್ಲಿಯೂ ಉಚ್ಛಿಷ್ಟ ಗಣಪತಿಯ ಶಿಲ್ಪವು ಬಹಳ ವಿಶೇಷ ಶಿಲ್ಪವೆಂದು ಹೇಳಬಹುದು. ಹಾಗೂ ಈ ರೀತಿಯ ಶಿಲ್ಪಗಳು ದೊರೆಯುವುದು ಬಹಳ ವಿರಳ.

ಸುಕನಾಸದ ಮೇಲೆ ಸಳನು ಹುಲಿಯನ್ನು ಕೊಲ್ಲುತ್ತಿರುವ ಚಿತ್ರವಿದೆ. ಸಳನ ತಲೆಯ ಭಾಗವು ಭಗ್ನವಾಗಿದೆ. ಸುಕನಾಸದ ಮುಂಭಾಗದಲ್ಲಿ ಗಜಾಸಂಹಾರಮರ್ದನ ಶಿಲ್ಪವಿದೆ. ಇದರ ಪಕ್ಕದಲ್ಲಿ ಶಿವನು ನೃತ್ಯ ಮಾಡುತ್ತಿರುವನು. ಹದಿನಾರು ಕೈಗಳಲ್ಲಿ ಹತ್ತು ಮುರಿದುಹೋಗಿವೆ. ಪಕ್ಕದಲ್ಲಿ ನಂದಿ, ನಾಟ್ಯ ಗಣೇಶ, ಕಿನ್ನರ ಬೇತಾಳ, ಬಲಗಡೆ ವೀಣೆಯನ್ನು ಬಾರಿಸುತ್ತಿರುವ ಬ್ರಹ್ಮ, ಎಡಗಡೆ ಕೊಳಲೂದುತ್ತಿರುವ ವಿಷ್ಣು ಇರುವರು; ತೋರಣದಲ್ಲಿ ಅಷ್ಟದಿಕ್ಪಾಲಕರನ್ನು ಚಿತ್ರಿಸಲಾಗಿದ್ದು ಇದೊಂದು ವಿಶೇಷ ಲಕ್ಷಣಗಳನ್ನು ಹೊಂದಿರುವ ಶಿಲ್ಪವಾಗಿದೆ. ಸಾಮಾನ್ಯವಾಗಿ ಸುಕನಾಸದಲ್ಲಿ ಈ ರೀತಿಯ ಶಿಲ್ಪಗಳು ವಿರಳ.

ಕಡೂರು ತಾಲ್ಲೂಕಿನ ಯಗಟಿಪುರ ಗ್ರಾಮದಿಂದ ಸುಮಾರು ಅರ್ಧ ಪರ್ಲಾಂಗು ದೂರದಲ್ಲಿ ಉತ್ತರಕ್ಕೆ ಚಿಕ್ಕದಾದ ಮಲ್ಲಿಕಾರ್ಜುನ ದೇವಾಲಯವಿದ್ದು ಇಲ್ಲಿ ಬಲಮುರಿ ಗಣಪತಿಯಿದೆ. (ಬಲಕ್ಕೆ ಸೊಂಡಿಲನ್ನು ಹೊಂದಿರುವುದು). ಕೊಪ್ಪದಿಂದ ಸುಮಾರು ೪ ಕಿ.ಮೀ. ದೂರದಲ್ಲಿರುವ ಕಮಂಡಲವು ಗಣಪತಿ ಕ್ಷೇತ್ರವಾಗಿದ್ದು ಇಲ್ಲಿರುವ ನೀರಿನ ಚಿಲುಮೆಯಲ್ಲಿ ವರ್ಷವಿಡೀ ನೀರು ಬರುತ್ತಿದ್ದು ಹಿಂದೆ ಇಲ್ಲೊಂದು ಕ್ರಿ.ಶ. ೬ನೆಯ ಶತಮಾನದ ದ್ವಿಬಾಹು ಗಣಪತಿ ವಿಗ್ರಹವಿತ್ತೆಂದು ತಿಳಿದುಬರುತ್ತದೆ. ಆದರೆ ಆ ಶಿಲ್ಪವು ಇಲ್ಲಿ ಇಂದು ಕಂಡುಬರುತ್ತಿಲ್ಲ.[೧೮] ಕರ್ನಾಟಕದಲ್ಲಿ ಈ ರೀತಿಯ ದ್ವಿಭುಜ ಗಣಪತಿ, ಉಚ್ಛಿಷ್ಟ ಗಣಪತಿ, ಬಲಮುರಿ ಗಣಪತಿಯ ಮೂರ್ತಿಗಳು ದೊರೆಯುವುದು ಬಹಳ ವಿರಳ.

**ಮುದಿಗೆರೆಯಲ್ಲಿರುವ ವಿಷ್ಣು ಶಿಲ್ಪ :** ತರೀಕೆರೆ ತಾಲ್ಲೂಕಿನಲ್ಲಿರುವ ಈ ಊರು ತರೀಕೆರೆಯಿಂದ ಪೂರ್ವಕ್ಕೆ ೩೦ ಕಿ.ಮೀ. ಹಾಗೂ ಅಜ್ಜಂಪುರದಿಂದ ಆಗ್ನೇಯಕ್ಕೆ ಸುಮಾರು ೧೭ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೭೩ರ ಶಾಸನದಲ್ಲಿ ಮುದುಗೆರೆಯ ಆದಿಗಾವುಂಡನ ಮಹಾಪ್ರಭು ಎಂಬ ಉಲ್ಲೇಖವಿದೆ. ಇದನ್ನು ಆಸಂದಿನಾಡಿನ ಮುದುಗೆರೆ ಎಂದು ಕರೆಯುತ್ತಿದ್ದರು.[೧೯] ಇಲ್ಲಿ ಈಶ್ವರ (ಸಿಂಗೇಶ್ವರ) ರಾಮೇಶ್ವರ (ಈಶ್ವರ) ಮತ್ತು ಲಕ್ಷ್ಮೀನರಸಿಂಹ ದೇವಾಲಯಗಳಿವೆ. ಗುಡಿಯ ಮುಂಭಾಗದ ಎಡಭಾಗದ ಬಯಲಿನಲ್ಲಿ ಗರುಡ ಪೀಠದ ಮೇಲೆ ಸುಮಾರು ೮ ಅಡಿ ಎತ್ತರದ ಮಹಾವಿಷ್ಣುವಿನ ಶಿಲ್ಪವಿದೆ. ನಾಲ್ಕು ಕೈಗಳಿದ್ದು ಗದೆ, ಪ್ರಯೋಗಚಕ್ರ, ಶಂಖ ಹಾಗೂ ಮತ್ತೊಂದು ಕೈಯನ್ನು ಸೊಂಟದ ಮೇಲೆ ಇರಿಸಿದ್ದಾನೆ. ಇದು ಸಮಭಂಗಿಯಲ್ಲಿದ್ದು ಕೀರ್ತಿಮಕುಟ, ಮಕರ ಕುಂಡಲ ಹಾಗೂ ಯಜ್ಞೋಪವಿತವನ್ನು ಧರಿಸಿದ್ದಾನೆ. ಗ್ರ್ಯಾನೈಟ್ ಶಿಲೆಯಲ್ಲಿ ಕೆತ್ತಿರುವ ಈ ಶಿಲ್ಪವು ಕ್ರಿ.ಶ. ೧೧ನೆಯ ಶತಮಾನದಲ್ಲಿ ಮಾಡಿರಬಹುದು.

ಇದರ ಶಿಲ್ಪ ಲಕ್ಷಣಗಳನ್ನು ಗಮನಿಸಿದಾಗ ಇದು ಕಲ್ಯಾಣಿ ಚಾಲುಕ್ಯರ ಕಾಲದ್ದಾಗಿದೆ. ಏಕೆಂದರೆ ಹೊಯ್ಸಳ ಹಾಗೂ ವಿಜಯನಗರದ ಕಾಲದಲ್ಲಿ ರಚನೆಯಾಗಿರುವ ಶಿಲ್ಪಗಳಲ್ಲಿ ಪ್ರಯೋಗ ಚಕ್ರವು ಮುಂಭಾಗಕ್ಕೆ ಇರುತ್ತದೆ. ಆದರೆ ಇಲ್ಲಿ ಬಲಭುಜದ ಮೇಲೆ ಬಲಕಿವಿಯ ಪಕ್ಕಕ್ಕೆ ಎದುರಾಗಿ ಇದೆ. ಸಾಮಾನ್ಯವಾಗಿ ಈ ರೀತಿಯ ಶಿಲ್ಪಗಳನ್ನು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಕೆತ್ತಲಾಗುತ್ತಿತ್ತು.[೨೦] ಈ ರೀತಿಯ ಮತ್ತೊಂದು ಶಿಲ್ಪವು ಹಿರೇಮಗಳೂರಿನ ಕೋದಂಡರಾಮ ದೇವಾಲಯದ ಪೂರ್ವಭಾಗದ ಪ್ರಾಕಾರದ ಗುಡಿಯಲ್ಲೊಂದಿದೆ. ಇದು ಸಹ ಮೇಲೆ ವಿವರಿಸಿದ ಲಕ್ಷಣಗಳನ್ನು ಹೊಂದಿದೆ. ಇದನ್ನು ಸ್ಥಳೀಯರು ವೆಂಕಟೇಶ ಶಿಲ್ಪ ಎಂದು ಕರೆಯುತ್ತಾರೆ. ಆದರೆ ಇದು ಮಹಾವಿಷ್ಣು ಶಿಲ್ಪ ಎಂದು ಹೇಳಬಹುದು. ಈ ಜಿಲ್ಲೆಗೆ ಸೀಮಿತವಾದಂತೆ ಈ ರೀತಿಯ ಮಹಾವಿಷ್ಣುವಿನ ಶಿಲ್ಪಗಳು ದೊರೆಯುವುದು ಬಹಳ ವಿರಳವೆಂದೆ ಹೇಳಬಹುದು.

ಚಿಕ್ಕಮಗಳೂರು ತಾಲ್ಲೂಕಿನಿಂದ ನೈರುತ್ಯಕ್ಕೆ ಸುಮಾರು ೫ ಕಿ.ಮೀ. ದೂರದಲ್ಲಿ ಮತ್ತಾವರ ಎಂಬ ಗ್ರಾಮವಿದ್ದು ಇಲ್ಲಿ ಕಲ್ಲೇಶ್ವರ ದೇವಾಲಯವಿದೆ. ಈ ದೇವಾಲಯವನ್ನು ಹೊಯ್ಸಳರ ಕಾಲದಲ್ಲಿ ನಿರ್ಮಿಸಲಾಗಿದೆ. ಇದರ ಉತ್ತರದ ಹೊರ ಭಿತ್ತಿಯಲ್ಲಿ ಎರಡು ಮತ್ಸ್ಯಗಳನ್ನು ಒಂದಕ್ಕೊಂದು ಎದುರುಬದುರಾಗಿ ಇರುವಂತೆ ಚಿತ್ರಿಸಲಾಗಿದೆ. ಇದು ಮತ್ಸ್ಯಮಿಲನದ ಸಂಕೇತವಾಗಿದೆ. ಒಂದೇ ನೇರ ದೃಷ್ಟಿಯಲ್ಲಿಯೇ ಮಿಲನ ಹೊಂದುತ್ತಿದ್ದಂತಹ ಪೌರಾಣಿಕ ಕಥೆಗಳಿವೆ. ಬಹುಶಃ ಅಂತಹ ಕಥೆಗಳಿಗೆ ಪೂರಕವಾದಂತಹ ಶಿಲ್ಪವಾಗಿದೆ.

## ಜೈನ ಶಿಲ್ಪಗಳು

**ಅಂಗಡಿಯ ನೇಮಿನಾಥ ಬಸದಿಯ ಯಕ್ಷಿ ಶಿಲ್ಪ :** ಬಸದಿಯು ಊರಿನ ದಕ್ಷಿಣ ಭಾಗದಲ್ಲಿದ್ದು ಉತ್ತರಾಭಿಮುಖ ವಾಗಿದೆ. ಇದನ್ನು ಕೆಂಪು ಮರಳು ಶಿಲೆಯಿಂದ ಕಟ್ಟಲಾಗಿದೆ. ಸುಮಾರು ೩ ಅಡಿ ಎತ್ತರದ ಅಧಿಷ್ಠಾನದ ಮೇಲೆ ಇರುವ ಈ ಬಸದಿಯನ್ನು ಹೊಯ್ಸಳರ ಕಾಲದಲ್ಲಿ ಕಟ್ಟಲಾಗಿದೆ. ಇದು ಗರ್ಭಗೃಹ, ಸುಕನಾಸಿ, ನವರಂಗವನ್ನು ಹೊಂದಿದೆ. ಇದರ ನವರಂಗದ ಬಲಭಾಗದಲ್ಲಿ ನಿಂತ ಭಂಗಿಯಲ್ಲಿರುವ ಅಂಬಿಕಾ ಯಕ್ಷಿಯ ಶಿಲ್ಪವಿದೆ. ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನ ಯಕ್ಷಿ. ಈಕೆಯನ್ನು ವಾಲಬ್ಬೆ, ಅಮ್ರಾ, ಅಂಬಿಕಾ, ಕೂಷ್ಮಾಂಡಿನೀ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈಕೆ ದ್ವಿಭುಜವನ್ನು ಹೊಂದಿದ್ದು ಈಕೆಯ ಎಡಮಗ್ಗುಲಲ್ಲಿ ಮಗು ಅಲಂಕಾರಯುಕ್ತವಾಗಿ ನಿರ್ವಾಣದಲ್ಲಿ ನಿಂತಿದೆ. ಯಕ್ಷಿಯು ಆಮ್ರವನದ ಕೆಳಗೆ ನಿಂತಿದೆ, ಮಗುವಿನ ಬಲಗೈಲಿ ಬೀಜಪೂರವಿದೆ. ಎಡಗೈಲಿ ಕಬ್ಬಿನ ಜಲ್ಲೆ ಇದೆ. ಮಗುವಿನ ತಲೆಯ ಮೇಲೆ ಅಂಬಿಕೆಯ ಕೈ ಇದೆ. ಬಲಗಡೆ ಸಿಂಹದ ಮೇಲೆ ಇನ್ನೊಂದು ಮಗು ಕುಳಿತಿದೆ. ಈಕೆಯ ಬಲಗೈಲಿ ಮಾವಿನ ಗೊಂಚಲಿದೆ. ಕಾಲಲ್ಲಿ ದಪ್ಪದಾದ ಕಡಗಗಳಿವೆ. ಸಿಂಹದ ಎಡಪಾದ ಮೇಲಕ್ಕೆ ಎತ್ತಿದೆ. ಸಾಮಾನ್ಯವಾಗಿ ಯಕ್ಷಿಯ ಶಿಲ್ಪಗಳು ಕುಳಿತ ಭಂಗಿಯಲ್ಲಿವೆ ಆದರೆ ಈ ಶಿಲ್ಪವು ನಿಂತಭಂಗಿಯಲ್ಲಿದ್ದು ವಿಶೇಷ ಲಕ್ಷಣಗಳನ್ನು ಹೊಂದಿದೆ.

**ನರಸಿಂಹರಾಜಪುರ (ಸಿಂಹನಗದ್ದೆ) ಶ್ರೀ ಪಾರ್ಶ್ವನಾಥ ಬಸದಿ :** ಇದೊಂದು ಜೈನರ ಧಾರ್ಮಿಕ ಸ್ಥಳವಾಗಿದೆ. ಬಸದಿಯು ಉತ್ತರಾಭಿಮುಖವಾಗಿದೆ ಮೂಲ ಬಸದಿಯ ಭಗ್ನವಾಗಿದ್ದು ಇತ್ತೀಚಿಗೆ ಜೀರ್ಣೋದ್ಧಾರ ಮಾಡಿದ್ದಾರೆ. ಗುಡಿಯಲ್ಲಿ ನಾಗ ಪೀಠದ ಮೇಲೆ ೬ ಅಡಿ ಎತ್ತರದ ಪಾರ್ಶ್ವನಾಥನ ವಿಗ್ರಹವಿದೆ. ಮೇಲ್ಭಾಗದಲ್ಲಿ ಶಿಲ್ಪಕ್ಕೆ ಹೊಂದಿಕೊಂಡಂತಿರುವ ಪೀಠದ ಬಲಭಾಗದಲ್ಲಿ ಕೂರ್ಮವನ್ನು ಎಡಭಾಗದಲ್ಲಿ ಹಂಸ ದೇಹ ಹಾವಿನ ಹೆಡೆಯ ತಲೆಯನ್ನು ಹೊಂದಿರುವ ಕುಕ್ಕುಟ ಪಕ್ಷಿಯಿದ್ದು ಮಧ್ಯದಲ್ಲಿ ಸರ್ಪದ ಚಿತ್ರವನ್ನು ಕೆತ್ತಲಾಗಿದೆ. ಇದು ಸುಂದರವಾದ ಪ್ರಭಾವಳಿಯನ್ನು ಹೊಂದಿದ್ದು ಪ್ರಭಾವಳಿಯ ಇಕ್ಕೆಲಗಳಲ್ಲಿ ಯಕ್ಷ ಹಾಗೂ ಯಕ್ಷಿಯರಿದ್ದಾರೆ. ಇವರ ತಲೆಯ ಮೇಲೆ ಮೂರು ಹೆಡೆಯ ಸರ್ಪವಿದೆ. ಪಾರ್ಶ್ವನಾಥನ ಪ್ರಭಾವಳಿಯ ಮೇಲ್ಭಾಗದಲ್ಲಿ ಹೆಬ್ಬೆಟ್ಟಿನ ಗಾತ್ರದ ಸಣ್ಣ ಸಣ್ಣ ಹೆಡೆಯಿರುವ ಸರ್ಪವನ್ನು ಕೆತ್ತಲಾಗಿದೆ. ಈ ಶಿಲ್ಪದ ಲಕ್ಷಣಗಳನ್ನು ಗಮನಿಸಿದಾಗ ಇದು ಹೊಯ್ಸಳರ ಕಾಲದ್ದು ಎಂದು ಹೇಳಬಹುದು. ಈ ರೀತಿಯಲ್ಲಿ ಪ್ರಭಾವಳಿಯಲ್ಲಿ ಸಣ್ಣ ಸಣ್ಣ ಸರ್ಪಗಳನ್ನು ಕೆತ್ತಿರುವ ಪಾರ್ಶ್ವನಾಥನ ಶಿಲ್ಪಗಳು ವಿರಳ.

## ಆಧಾರಸೂಚಿ


೧. ಎಂ.ಎಂ. ಕಲಬುರ್ಗಿ., **ಕರ್ನಾಟಕದ ಕೈಫಿಯತ್ತುಗಳು**, ಪು. ೧೮೯-೯೦.
೨. ಎಂ.ಎ.ಆರ್, ೧೯೪೨, ಪು. ೪೬.
೩. ಡಾ. ಎಂ. ಚಿದಾನಂದಮೂರ್ತಿ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪು. ೪೮೩.
೪. ಅದೇ.,
೫. ಎ.ಕ.ಸಂ. ೧೧, ಪೀಠಿಕೆ.
೬. ಎಂ.ಎ.ಆರ್., ೧೯೪೨, ಪು. ೪೭.
೭. ಎ.ಕ.ಸಂ. ೧೨, ಶಾಸನ ಸಂಖ್ಯೆ ೯೨, ಪು. ೪೩೩.
೮. ಎ.ಕ.ಸಂ. ೧೨, ಶಾಸನ ಸಂಖ್ಯೆ, ೮೯, ೯೦, ಪು. ೪೩೦-೩೧.
೯. ತರೀಕೆರೆ ತಾಲ್ಲೂಕು ದರ್ಶನ, ಆರ್. ಕೃಷ್ಣತಂತ್ರಿ, ಪು. ೩೬.
೧೦. ಬರಹ ಬಾಗಿನ, ಪು. ೪೪೫.
೧೧. ಎ.ಕ.ಸಂ. ೧೧, ಶಾಸನ ಸಂಖ್ಯೆ, ೫೫ ರಿಂದ ೫೯, ಪು. ೩೨೯-೩೧.
೧೨. ಎಂ.ಎ.ಆರ್. ೧೯೩೧, ಪು. ೧೬-೧೭.
೧೩. ಎಂ.ಎಂ. ಕಲಬುರ್ಗಿ., **ಮಾರ್ಗ**, ಸಂ. ೨, ಪು. ೩೭೪.
೧೪. ಡಾ. ಎ.ವಿ. ನರಸಿಂಹಮೂರ್ತಿ., **ಚಾಲುಕ್ಯ ವಾಸ್ತು ಶಿಲ್ಪ ಪರಿಚಯ**, ಪು. ೧೫.
೧೫. ಕೆ.ವಿ. ಪುಟ್ಟಪ್ಪ., **ಹೊಯ್ಸಳ ವಾಸ್ತುಶಿಲ್ಪ**, ಪು. ೭.
೧೬. ಡಾ. ಎ.ವಿ. ನರಸಿಂಹಮೂರ್ತಿ., ಅದೇ, ಪು. ೧೫.
೧೭. ಎ.ಕ.ಸಂ. ೧೨, ಶಾಸನ ಸಂಖ್ಯೆ ೯, ಪು. ೩೪೧.
೧೮. ಎಸ್.ಎನ್. ಚಂದ್ರಕಲಾ., **ಕೊಪ್ಪ ತಾಲ್ಲೂಕು ದರ್ಶನ**, ಪು. ೩೧.
೧೯. ಆರ್. ಕೃಷ್ಣತಂತ್ರಿ., **ತರೀಕೆರೆ ತಾಲ್ಲೂಕು ದರ್ಶನ**, ಪು. ೩೪.
೨೦. ಎಂ.ಎ.ಆರ್. ೧೯೪೨, ಪು. ೬೬.

ಡಾ. ರಾಕೇಶ್. ಬಿ.ಸಿ.*

# ಚಿಕ್ಕಗೋಣಿಗೆರೆ ಪ್ರದೇಶದ ವಾಸ್ತುಶಿಲ್ಪ ವೈಶಿಷ್ಟ್ಯ

ಇದು ಹೊನ್ನಾಳಿಯ ಈಶಾನ್ಯಕ್ಕೆ ಸುಮಾರು ಹತ್ತು ಕಿ.ಮೀ. ದೂರದಲ್ಲಿರುವ ಚಿಕ್ಕಗೋಣಿಗೆರೆಯು ಹೊನ್ನಾಳಿಯಿಂದ ನಂದಿಗುಡಿ ರಸ್ತೆಯಲ್ಲಿ ಕಂಡುಬರುತ್ತದೆ. ಈ ಗ್ರಾಮ 'ಗೋಳಿಗಿರ್ಯೆ' (ಶಾಸನ ಉಲ್ಲೇಖ) ಎನ್ನುವ ಹೆಸರಿನಲ್ಲಿ ತುಂಗಭದ್ರಾ ನದಿಯ ದಡದ ಮೇಲಿತ್ತು. ಈ ಒಂದು ಪ್ರದೇಶದಲ್ಲಿ ದೇವಾಲಯ ಮತ್ತು ಶಾಸನಗಳನ್ನು ನಾವು ಕಾಣಬಹುದು. ತುಂಗಭದ್ರ ನದಿಯ ಪ್ರವಾಹದಿಂದಾಗಿ ಗ್ರಾಮವನ್ನು ಸ್ಥಳಾಂತರಿಸಲಾಯಿತು. ಕೆಲವರು ತಮ್ಮ ಹೊಲಗದ್ದೆಗಳ ಬಳಿ ಮನೆಯನ್ನು ಕಟ್ಟಿಕೊಂಡರು. ಆದ್ದರಿಂದ ಊರನ್ನು ಹಿರೆಗೋಣಗೇರೆ ಎಂದು ಮತ್ತು ಅಲ್ಲೇ ಸಮೀಪದಲ್ಲಿ ನಿರ್ಮಾಣವಾದ ಗ್ರಾಮವನ್ನು ಚಿಕ್ಕಗೋಣಿಗೇರಿ ಎಂದು ಕರೆಯುತ್ತಾರೆ.

ಈ ಗ್ರಾಮದಲ್ಲಿ ಸುಮಾರು ೧೩೦ ಮನೆಗಳಿದ್ದು ಇದರಲ್ಲಿ ಜೈನ ಸಮುದಾಯ, ಹಿಂದೂ ಸಮುದಾಯ ಮತ್ತು ಮುಸ್ಲಿಂ ಸಮುದಾಯದ ಮನೆಗಳಿವೆ. ಈ ಗ್ರಾಮದಲ್ಲಿ ಶಿವದೇವಾಲಯ ಅಥವಾ ಕಲ್ಲೇಶ್ವರ ದೇವಾಲಯ ಅಥವಾ ಸಿದ್ಧರಾಮೇಶ್ವರ ದೇವಾಲಯ, ಆಂಜನೇಯ ದೇವಾಲಯ, ಜೈನ ಬಸದಿ ಮತ್ತು ದರ್ಗಾಗಳು ಕಂಡುಬರುತ್ತವೆ. ಹಳೆಯ ಊರಿನಲ್ಲಿ ಶಿವದೇವಾಲಯ ಮತ್ತು ಪಾಳುಬಿದ್ದ ಇನ್ನೊಂದು ದೇವಾಲಯದ ಜೊತೆಗೆ ಮನೆಯ ಅವಶೇಷಗಳು ಕಂಡುಬರುತ್ತವೆ. ಇನ್ನು ಉಳಿದಂತೆ ಜೈನಬಸದಿ, ಆಂಜನೇಯ ದೇವಾಲಯ, ದರ್ಗಾಗಳು ಕಂಡುಬರುತ್ತವೆ. ಜೊತೆಗೆ ಗಂಗಮ್ಮ, ಉಡಚಲಮ್ಮ, ಶಿವ-ಪಾರ್ವತಿ ದೇವಾಲಯಗಳಿವೆ. ಇಲ್ಲಿನ ಮತ್ತೊಂದು ವಿಶೇಷ ಎಂದರೆ ಮೂರು ಧರ್ಮೀಯರಿಗೆ ಸಂಬಂಧಿಸಿದ ದೇವಾಲಯಗಳು ಅಂದರೆ ಆಂಜನೇಯ ದೇವಾಲಯ, ಜೈನಬಸದಿ ಮತ್ತು ದರ್ಗಾಗಳು ಸುಮಾರು ೧೦೦ ಮೀ. ಅಂತರದಲ್ಲಿ ಕಂಡುಬರುತ್ತವೆ. ಆಂಜನೇಯ ದೇವಾಲಯ ಮತ್ತು ಜೈನ ಬಸದಿಗಳು ಮುಖಾಮುಖಿಯಾಗಿವೆ. ಜೈನಬಸದಿಯ ಹಿಂದೆ ದರ್ಗಾವು ಕಂಡುಬರುತ್ತದೆ. ಈ ಪವಿತ್ರ ಸ್ಥಳಗಳು ಕೇವಲ ೧೦೦ ಮೀ. ಅಂತರದಲ್ಲಿ ಇರುವುದು ಒಂದು ವಿಶೇಷವಾಗಿದೆ. ಈ ರೀತಿಯಾಗಿ ಈ ಗ್ರಾಮವು ಐತಿಹಾಸಿಕ ಮಹತ್ವವನ್ನು ಪಡೆದಿದೆ.

ಈ ಗ್ರಾಮವು ಮುಖ್ಯವಾಗಿ ಮೂರು ಐತಿಹಾಸಿಕ ಮಹತ್ವವನ್ನು ಪಡೆದ ಸ್ಮಾರಕಗಳನ್ನು ಹೊಂದಿದೆ. ಅವುಗಳಲ್ಲಿ ಕಲ್ಲೇಶ್ವರ ದೇವಾಲಯ, ಜೈನ ಬಸದಿ ಮತ್ತು ದರ್ಗಾಗಳು ಮುಖ್ಯವಾಗಿವೆ.

**ಕಲ್ಲೇಶ್ವರ ದೇವಾಲಯ ಅಥವಾ ಸಿದ್ಧರಾಮೇಶ್ವರ ದೇವಾಲಯ :** ಈ ದೇವಾಲಯವು ಮೊದಲು ಊರು ಇದ್ದ ಸ್ಥಳದಲ್ಲಿ ತುಂಗಭದ್ರಾ ನದಿಯ ಬಲದಂಡೆಯ ಮೇಲೆ ಕಂಡುಬರುತ್ತದೆ. ಈ ದೇವಾಲಯವು ಸುಮಾರು ೯ ಮತ್ತು ೧೦ನೆಯ ಶತಮಾನಕ್ಕೆ ಸಂಬಂಧಪಟ್ಟ ದೇವಾಲಯವಾಗಿದೆ. ಇದರ ಲಕ್ಷಣಗಳು ಆ ಕಾಲಘಟ್ಟಕ್ಕೆ ಹೊಂದಿಕೊಳ್ಳುತ್ತದೆ. ಈ ದೇವಾಲಯದ ಮುಂದೆ ಶ್ರೀಕೃಷ್ಣ ದೇವರಾಯನ ಕಾಲದಲ್ಲಿ ದಾನಬಿಟ್ಟ ವಿವರಣೆಯುಳ್ಳ ಶಾಸನವಿದೆ. ಈ ಶಾಸನದಲ್ಲಿ 'ಚಿಕ್ಕಗೋಳಿಗೇರೆ' ಎಂದು ಕರೆಯಲಾಗಿದೆ. ಶಾಸನದ ಮೇಲಿನ ಭಾಗ ಸ್ವಲ್ಪ ಹಾಳಾಗಿದೆ. ಕೆಳಗಿನ ಭಾಗ ಉಳಿದುಕೊಂಡಿದೆ. ಈ ಶಾಸನವು ದೇವಾಲಯದ ಮುಂದೆ ಅಂಗಳದಲ್ಲಿ ಕಂಡುಬರುತ್ತದೆ. ಈ ಶಾಸನದಲ್ಲಿ ಗಾಜನೂರು ಶಂಕರೀಗೌಡ ತಿರುಮಲೆದೇವಿಯ ಪಟ್ಟಣದಲ್ಲಿ ನಿವಾಸಿಮಠದ ಸುರಗಿ ಒಡೆಯರಿಗೆ ತಾನು ವಿಜಯನಗರ ಕೃಷ್ಣರಾಯರಿಂದ ಉಂಬಳಿಯಾಗಿ ಪಡೆದಿದ್ದು ಚಿಕ್ಕಗೋಣಿಗೆರೆ ಗ್ರಾಮವನ್ನು ಬಿಟ್ಟುಕೊಟ್ಟ ದಾಖಲೆಯಿದೆ.

ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಶಿವಲಿಂಗವು ಸ್ವಲ್ಪ ಹಾಳಾದ ಸ್ಥಿತಿಯಲ್ಲಿದೆ. ಶಿವಲಿಂಗವು ಆಯತಾಕಾರದ ಪಾಣಿವಟ್ಟಲಲ್ಲಿ ನಿರ್ಮಾಣವಾಗಿದೆ. ಈ ಪಾಣಿವಟ್ಟಲು ಉತ್ತರಕ್ಕೆ ಮುಖ ಮಾಡಿದೆ. ಶಿವಲಿಂಗದ ಅಭಿಷೇಕ ಜಲ ಪಾಣಿವಟ್ಟಲ ಮೂಲಕ ಹೊರಭಾಗದಲ್ಲಿ ಗುಂಡಿಗೆ ಸೇರುತ್ತದೆ. ಗರ್ಭಗೃಹವು ಚಚ್ಚೌಕವಾಗಿದ್ದು ಸುಮಾರು ೧೦ x ೧೦ ಅಡಿ ಅಳತೆಯಲ್ಲಿ ನಿರ್ಮಾಣವಾಗಿದೆ. ಭುವನೇಶ್ವರಿಯು ಸರಳವಾಗಿದ್ದು, ಕಲ್ಲಿನ ಹೊದಿಕೆಯನ್ನು ಹೊಂದಿದೆ. ಅಂತರಾಳದಲ್ಲಿ ನಂದಿ ಇದ್ದು ನಂದಿಯ ಎಡಗಾಲನ್ನು ಮುಂದೆ ಮಾಡಿದೆ. ಇದರ ಮುಖ

* ಅತಿಥಿ ಉಪನ್ಯಾಸಕರು, ಸರಕಾರಿ ಪ್ರಥಮದರ್ಜೆ ಕಾಲೇಜು, ಸುಣಕಲ್ಲಬಿದರಿ, ರಾಣೇಬೆನ್ನೂರು, ಹಾವೇರಿ ಜಿಲ್ಲೆ.

ಹಾಳಾಗಿದೆ. ನಂದಿಯು ಸರಳ ಅಲಂಕಾರಗಳಿಂದ ಅಲಂಕೃತವಾಗಿದೆ. ಅಂತರಾಳವು ಆಯತಾಕಾರದಲ್ಲಿದೆ. ಇದರ ಭುವನೇಶ್ವರಿಯು ಸರಳವಾಗಿದೆ. ಅಂತರಾಳದ ದ್ವಾರವು ಸರಳವಾದ ಎರಡು ಪಟ್ಟಿಕೆಗಳನ್ನು ಹೊಂದಿದೆ. ದ್ವಾರಕ್ಕೆ ಹೊಂದಿಕೊಂಡಂತೆ ಎರಡು ಪಕ್ಕದಲ್ಲಿ ಸರಳವಾಗಿ ಅಲಂಕೃತವಾದ ಜಾಲಂದರಗಳಿವೆ. ಈ ಜಾಲಂದರಗಳು ೧೬ x೧೬ ರಂಧ್ರಗಳನ್ನು ಹೊಂದಿದೆ. ಈ ಜಾಲಂದರಗಳು ತಲಾ ೧೬ ರಂಧ್ರಗಳನ್ನು ಎರಡು ಸಾಲಿನಲ್ಲಿ ಹೊಂದಿವೆ. ಒಂದು ಸಾಲಿನಲ್ಲಿ ೮ ರಂಧ್ರಗಳಿವೆ. ಈ ರಂಧ್ರಗಳು ಚಚ್ಚೌಕವಾಗಿವೆ. ಮುಖಮಂಟಪವು ತೆರೆದು ಕೊಂಡಿದೆ. ಮುಖಮಂಟಪವು ಸುಮಾರು ೨೦ ಅಡಿ ವ್ಯಾಸವನ್ನು ಹೊಂದಿದ್ದು, ಸರಳವಾದ ೧೨ ಕಂಬಗಳನ್ನು ಹೊಂದಿದೆ. ಇದರ ಭುವನೇಶ್ವರಿಯು ಸರಳವಾಗಿದ್ದು ಅದರ ಮೇಲೆ ಕಲ್ಲಿನಿಂದ ಸ್ವಲ್ಪ ಎತ್ತರದ ಗೋಡೆಯನ್ನು ಕಟ್ಟಿದ್ದಾರೆ. ಜೊತೆಗೆ ಪಕ್ಕದಲ್ಲಿ ಗೋಡೆಯನ್ನು ಭುವನೇಶ್ವರಿಯವರೆಗೆ ಕಟ್ಟಲಾಗಿದೆ. ಎದುರುಗಡೆ ಗೋಡೆಯನ್ನು ಸುಮಾರು ೩ ಅಡಿ ಎತ್ತರದಲ್ಲಿ ನಿರ್ಮಿಸಲಾಗಿದೆ. ಈ ಗೋಡೆಗೆ ಹೊಂದಿ ಕೊಂಡಂತೆ ಶ್ರೀಕೃಷ್ಣ ದೇವರಾಯನ ಕಾಲದ ಶಾಸನವನ್ನು ನಿಲ್ಲಿಸಲಾಗಿದೆ. ಇದರ ಮುಂದಿನ ಭಾಗವು ವಿಶಾಲವಾದ ಪ್ರದೇಶವನ್ನು ಹೊಂದಿದೆ. ಈ ದೇವಾಲಯದ ಹಿಂದೆ ಒಂದು ಪಾಳುಬಿದ್ದ ಒಂದು ದೇವಾಲಯವಿದೆ. ಈ ದೇವಾಲಯದಲ್ಲಿ ರೇಖೆಗಳಲ್ಲಿ ನಿರ್ಮಿತವಾದ ಆಂಜನೇಯನ ವಿಗ್ರಹವಿದೆ. ಸಂಪೂರ್ಣವಾಗಿ ಈ ದೇವಾಲಯ ಹಾಳಾಗಿದೆ. ಈ ದೇವಾಲಯದಲ್ಲಿ ಇರುವ ಇತರ ಶಿಲ್ಪಗಳನ್ನು ನಾವು ಗಮನಿಸಿದಾಗ ಅರ್ಧ ತುಂಡಾದ ಮಹಿಷಾಸುರಮರ್ದಿನಿಯ ಶಿಲ್ಪವಿದೆ. ೭ ಹೆಡೆಗಳನ್ನು ಹೊಂದಿದ ನಾಗಶಿಲ್ಪ ಸುಮಾರು ೩ ಅಡಿ ಎತ್ತರವಿದೆ. ಜೊತೆಗೆ ಸೂರ್ಯನ ವಿಗ್ರಹವು ಸುಂದರವಾದ ಅಲಂಕಾರ ವನ್ನು ಹೊಂದಿದ ಮೂರ್ತಿಯಾಗಿದೆ. ಇದರ ಪಕ್ಕದಲ್ಲಿ ಭೈರವಿಯ ಶಿಲ್ಪವಿದೆ. ಇದರ ನಂತರ ಜೋಡಿ ನಾಗಶಿಲ್ಪವಿದೆ. ಇದರ ನಂತರ ಸರಳ ಅಲಂಕಾರಗೊಂಡ ಸ್ತ್ರೀದೇವತೆಯ ವಿಗ್ರಹವಿದೆ. ಪಕ್ಕದಲ್ಲಿ ಮುರಿದುಬಿದ್ದ ಕಂಬವು ಕಂಡುಬರುತ್ತದೆ. ಈ ದೇವಾಲಯಕ್ಕೆ ಸಿದ್ಧರಾಮ ಶಿವಯೋಗಿಗಳು ಬಂದು ಧರ್ಮ ಪ್ರಚಾರ ಮಾಡಿದ್ದರಿಂದ ಈ ದೇವಾಲಯಕ್ಕೆ ಸಿದ್ಧರಾಮೇಶ್ವರ ದೇವಾಲಯ ಎಂಬ ಹೆಸರು ಕೂಡ ಇದೆ. ಈ ದೇವಾಲಯದ ಭಾಗವನ್ನು ಮತ್ತು ಉಳಿದ ಎರಡು ಎಕರೆ ಜಾಗ ಶ್ರೀಮಠ ನಂದಿಗುಡಿ ಮಹಾಸಂಸ್ಥಾನಕ್ಕೆ ಸೇರಿದ್ದಾಗಿದೆ.

*ಜೈನ ಬಸದಿಯು ಈಗ ವಾಸವಾಗಿರುವ ಊರಿನಲ್ಲಿದೆ. ಈ ಬಸದಿಯನ್ನು ಜೀರ್ಣೋದ್ಧಾರ ಮಾಡಲಾಗಿದೆ. ಈ ಬಸದಿಯು ಉತ್ತರಕ್ಕೆ ಮುಖಮಾಡಿದೆ. ಗರ್ಭಗುಡಿಯಲ್ಲಿ ಮಹಾವೀರರು ಕುಳಿತಿರುವ ಶಿಲ್ಪವಿದೆ. ಈ ಗರ್ಭಗುಡಿಯ ಗೋಪುರದಲ್ಲಿ ಪಾರ್ಶ್ವನಾಥನ ಮೂರ್ತಿಯಿದೆ. ಈ ಮೂರ್ತಿಯು ನೋಡಲು ತುಂಬಾ ಸುಂದರವಾಗಿದೆ. ಈ ಬಸದಿಯನ್ನು ಚಟ್ಟಶೆಟ್ಟಿಯೆನ್ನುವವನು ನಿರ್ಮಾಣ ಮಾಡಿದ ವಿವರಣೆಯನ್ನು ಶಾಸನವು ಒಳಗೊಂಡಿದೆ. ಈ ಒಂದು ಶಾಸನದ ಆಧಾರವನ್ನು ಇಟ್ಟುಕೊಂಡು ನೋಡಿದಾಗ ಈ ಬಸದಿಯನ್ನು ೧೧ ಅಥವಾ ೧೨ನೇ ಶತಮಾನದಲ್ಲಿ ನಿರ್ಮಾಣ ಮಾಡಿರಬೇಕೆಂದು ಹೇಳಬಹುದು.*

*ದರ್ಗಾ (ಸೂಫಿಸಂತರ ನೆಲೆ) ಮುಸ್ಲಿಂರ ಆರಾಧನಾ ಸ್ಥಳವಾಗಿದೆ. ಈ ಸ್ಥಳವು ಮುಸ್ಲಿಂರ ಪವಿತ್ರ ಧಾರ್ಮಿಕ ಕ್ಷೇತ್ರವಾಗಿದೆ. ಈ ದರ್ಗಾವು ಬದ್ರುದ್ದೀನ್-ಶಾ-ಖಾದ್ರಿವಲಿಯ ಸಮಾಧಿ ಮಾಡಿರುವುದಾಗಿ ಹೇಳಲಾಗುತ್ತದೆ. ಇಲ್ಲಿ ಪ್ರತಿ ಅಮವಾಸ್ಯೆಯಂದು ಯಾವುದೇ ಜಾತಿ ನಿರ್ಭಂಧವಿಲ್ಲದೆ ಸಾವಿರಾರು ಜನರು ಸೇರಿ ಇಲ್ಲಿನ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಾರೆ.*

ಈ ರೀತಿಯಾಗಿ ಐತಿಹಾಸಿಕ ಮಹತ್ವವನ್ನು ಪಡೆದ ಗ್ರಾಮ ಶಾಸನಗಳಲ್ಲಿ ಉಲ್ಲೇಖವಾದ 'ಚಿಕ್ಕಗೊಳಿಗೇರೆ' ಗ್ರಾಮ ಇದು ಪ್ರವಾಹದಿಂದ ಎರಡು ಊರುಗಳಾಗಿ ಮಾರ್ಪಟ್ಟು ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿದೆ. ಈ ಒಂದು ಗ್ರಾಮದಲ್ಲಿ ಮೂರು ಧರ್ಮೀಯರ ಪವಿತ್ರ ಸ್ಥಳಗಳು ಕೇವಲ ೧೦೦ ಮೀ. ಅಂತರದಲ್ಲಿ ಇರುವುದರಿಂದ ಈ ಗ್ರಾಮವು ಧಾರ್ಮಿಕ ಐಕ್ಯತೆಯನ್ನು ಹೊಂದಿದ ಗ್ರಾಮವಾಗಿದೆ. ಜೈನ ಬಸದಿ ಮತ್ತು ಆಂಜನೇಯ ದೇವಾಲಯ ಮುಖಾಮುಖಿಯಾಗಿದ್ದರೆ ದರ್ಗಾವು ಜೈನಬಸದಿಯ ಹಿಂದೆ ಸ್ವಲ್ಪ ದೂರದಲ್ಲಿದೆ. ಐತಿಹಾಸಿಕ ಮಹತ್ವವನ್ನು ಪಡೆದ ಕಲ್ಲೇಶ್ವರ ದೇವಾಲಯ ನದಿದಂಡೆಯಲ್ಲಿ ಪಾಳುಬಿದ್ದ ಸ್ಥಿತಿಯಲ್ಲಿದೆ. ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡುವ ಅವಶ್ಯಕತೆಯಿದೆ.

(ಈ ಪ್ರಬಂಧ ರಚಿಸುವಲ್ಲಿ ಮತ್ತು ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ರಾಜು, ಎಚ್.ಪಿ., ಶಾಸನವನ್ನು ಓದುವಲ್ಲಿ ಸಹಕರಿಸಿದ ಡಾ. ಶ್ರೀನಿವಾಸಪಾಡಿಗಾರ ಮತ್ತು ಚಿಕ್ಕಗೋಣಿಗೆರೆ ಗ್ರಾಮಸ್ಥರಿಗೂ ಕೃತಜ್ಞತಾಪೂರ್ವಕ ನಮನಗಳನ್ನು ಅರ್ಪಿಸುತ್ತೇನೆ.)

## ಆಧಾರಸೂಚಿ

೧. ಎಪಿಗ್ರಾಫಿಯಾ ಕರ್ನಾಟಿಕಾ, ಸಂ. ೭
೨. ಡಾ. ನಾ. ಕೊಟ್ರೇಶ್ ಉತ್ತಂಗಿ., ಹೊನ್ನೆಲೆಗಳು, ಸಹ್ಯಾದ್ರಿ ಪ್ರಕಾಶನ, ಹೊನ್ನಾಳಿ.

ಆದಪ್ಪ ಪಾಸೋಡಿ *

# ಕಾಡುಗುಡಿ ಸ್ಥಳದ ಗಂಗರ ದೇವಾಲಯ

ಬೃಹತ್ ಬೆಂಗಳೂರು ಮಹಾನಗರಪಾಲಿಕೆ ವ್ಯಾಪ್ತಿಗೊಳಪಡುವ 'ಕಾಡುಗೋಡಿ' ಗ್ರಾಮವು ಈ ಹಿಂದೆ ಮಹದೇವಪುರ ನಗರಸಭೆಯ ಸರಹದ್ದಿನಲ್ಲಿತ್ತು. ತಾಲ್ಲೂಕು ಕೇಂದ್ರವಾದ ಕೃಷ್ಣರಾಜಪುರದಿಂದ ಸಾದರಮಂಗಲ, ಕುಂಬೇನ ಅಗ್ರಹಾರ ಮಾರ್ಗವಾಗಿ ಅಥವಾ ಬೆಂಗಳೂರಿನಿಂದ ವೈಟ್‌ಫೀಲ್ಡ್, ಹೋಫಾರ್ಮ್ ಮಾರ್ಗವಾಗಿ ಕಾಡುಗೋಡಿ ತಲುಪಬೇಕಾಗುತ್ತದೆ

'ಕಾಡುಮಂಗಲಂ'[೧], 'ಕಾಡಗೊಡಿ ಸ್ಥಳ'[೨], ಕಾಡುಗೋಡಿ ಗ್ರಾಮದ ಪೂರ್ವಕ್ಕೆ ಸರ್ವೆ ನಂ. ೧೧೦ರಲ್ಲಿ (ಸರ್ಕಾರಿ ಧರ್ಮತೋಪು) 'ಕಾಶಿ ವಿಶ್ವೇಶ್ವರ' (ಈಶ್ವರ) ದೇವಾಲಯವಿದೆ.

ಬೆಂಗಳೂರು ನಗರದಲ್ಲಿ ೬೪ ಕಿ.ಮೀ. ಉದ್ದದ ಹೊರವರ್ತುಲ ರಸ್ತೆಯು ಮಾರತ್‌ಹಳ್ಳಿ, ಅಗರ, ಬಿ.ಟಿ.ಎಂ. ಲೇಔಟ್, ಹೆಬ್ಬಾಳ, ಟಿನ್‌ಫ್ಯಾಕ್ಟರಿ ಮೂಲಕ ಹಾಯ್ದು ಹೋಗುತ್ತದೆ. ಅದರ ನಂತರ ಬರುವ ೧೧೦ ಕಿ.ಮೀ. ಉದ್ದದ ಪೆರಿಫೆರಲ್ ವರ್ತುಲ ರಸ್ತೆಯು ನಗರಕ್ಕೆ ಬರುವ ಎಲ್ಲ ರಾಷ್ಟ್ರೀಯ ಹೆದ್ದಾರಿಗಳು ಹಾಗೂ ಮುಖ್ಯ ರಸ್ತೆಗಳನ್ನು ಜೋಡಿಸುವುದಲ್ಲದೆ, ಹೊಸಕೋಟೆ, ವೈಟ್‌ಫೀಲ್ಡ್, ವರ್ತೂರು, ಸರ್ಜಾಪುರ, ಹೊಸೂರು, ಬನ್ನೇರುಘಟ್ಟ, ಕನಕಪುರ, ಮೈಸೂರು, ಮಾಗಡಿ, ತುಮಕೂರು ಮತ್ತು ದೊಡ್ಡಬಳ್ಳಾಪುರ ರಸ್ತೆಗಳನ್ನು ಸಂಪರ್ಕಿಸುತ್ತದೆ. ಅಂದರೆ ಪೆರಿಫೆರಲ್ ವರ್ತುಲ ರಸ್ತೆಯು ಉತ್ತರದಿಂದ ಕೊಡಿಗೇನಹಳ್ಳಿ, ಕೆ.ಆರ್. ಪುರ, ಕಾಡುಗೋಡಿ, ವರ್ತೂರು, ಸಿಂಗಸಂದ್ರ, ಬೇಗೂರು, ಗೊಟ್ಟಿಗೆರೆ, ಉತ್ತರಹಳ್ಳಿ, ಕೆಂಗೇರಿ, ರಾಮಸಂದ್ರ, ಮಾಚೋಹಳ್ಳಿ, ಗಂಗೊಂಡನಹಳ್ಳಿ, ದೊಡ್ಡಬಿದರಕಲ್ಲು, ಬಾಗಲಕುಂಟೆ, ಚಿಕ್ಕಸಂದ್ರ ಮತ್ತು ತಿಂಡ್ಲು ಮಾರ್ಗವಾಗಿ ಹಾಯ್ದು ಹೋಗುತ್ತದೆ.[೩] ಈ ರಸ್ತೆ ಅಷ್ಟಪಥವಾಗಿದ್ದು ೫೮–೬೦ ಮೀಟರು ಅಗಲವಾಗಿರುತ್ತದೆ. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಮಹತ್ತರವಾದ ಈ ರಸ್ತೆಯೋಜನೆಯ ಸರ್ವೇ ಕೆಲಸ ಮುಗಿದು ಗುರುತು ಕಲ್ಲುಗಳನ್ನು ಹಾಕಲಾಗಿದೆ. ಇತಿಹಾಸ ಪ್ರಸಿದ್ಧ ಗಂಗರ ದೇವಾಲಯಕ್ಕೆ ತೀರ ಹತ್ತಿರದಲ್ಲಿರುವ ಪೆರಿಫೆರಲ್ ಸರ್ವೀಸ್ ರಸ್ತೆಯಿಂದ ಅಪಾಯವಿರುತ್ತದೆ. ಉದಾ : ಹೊರವರ್ತುಲ ರಸ್ತೆಯಲ್ಲಿ ಅರ್ಧ ಭಾಗ ಮುಚ್ಚಿಹೋಗಿರುವ ಇಬ್ಬಲೂರು ವೀರಗಲ್ಲು. ಒಂದೆಡೆ ಶಿಥಿಲಾವಸ್ಥೆಯ ಕಾರಣದಿಂದ ಬಿದ್ದು ಹೋಗುತ್ತಿರುವ ಭಾಗಗಳು ಇನ್ನೊಂದೆಡೆ ಪೆರಿಫೆರಲ್ ವರ್ತುಲ ರಸ್ತೆಯಿಂದ ಆತಂಕ ಎದುರಿಸುತ್ತಿರುವ ಕಾಡುಗೋಡಿ ಈಶ್ವರ ದೇವಾಲಯದ ಪ್ರಾಕಾರ ಪರಿವಾರ ದೇವರು, ತಲವಿನ್ಯಾಸ, ಅಧಿಷ್ಠಾನ, ಭಿತ್ತಿ, ಅಂತರಾಳ, ಕಂಬಮಾದರಿ, ಗರ್ಭಗೃಹ ಹಾಗೂ ಅಲ್ಲಿರುವ ಮೂರ್ತಿಶಿಲ್ಪಗಳ ಮಾಹಿತಿಯನ್ನು ದಾಖಲಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.



'ಕಾಡುಗೋಡಿ', 'ಕಾಡುಗುಡಿ' ಎಂದು ಕರೆಯಲ್ಪಡುವ ಸ್ಥಳನಾಮವನ್ನು ವಿಶ್ಲೇಷಿಸುವುದು ಅನಿವಾರ್ಯವೆನಿಸುತ್ತದೆ. ಸಾಮಾನ್ಯವಾಗಿ ಸ್ಥಳನಾಮಗಳು ಕೂಡುನುಡಿಗಳು. ಇದರಲ್ಲಿ ಪೂರ್ವಭಾಗವು ವಿಶಿಷ್ಟವಾದ ನಿರ್ದಿಷ್ಟ ಲಕ್ಷಣವನ್ನು ಸೂಚಿಸುವ ನಿರ್ದಿಷ್ಟ ಆಕೃತಿಮ, ಉತ್ತರ ಭಾಗವು ಹೆಸರಿನ ಸಾಮಾನ್ಯ ವರ್ಗವನ್ನು, ಪ್ರತಿನಿಧಿಸುವ ವಾರ್ಗಿಕ ಆಕೃತಿಮವೆಂದು ಕರೆಯಲ್ಪಡುತ್ತದೆ.[೫] ಗ್ರಾಮಗಳಿಗೆ ಹೆಸರಿಡುತ್ತ ಬಂದ ಇತಿಹಾಸದಲ್ಲಿ ಸಾಮಾನ್ಯವಾಗಿ ಪ್ರಕೃತಿ ನಾಮಸೂಚಿ ಆಮೇಲೆ ಜನಾಂಗನಾಮಸೂಚಿ ತದನಂತರ ವ್ಯಕ್ತಿನಾಮಸೂಚಿ ಧೋರಣೆಗಳು ಕಂಡುಬರುತ್ತವೆ.[೬]

* ಶಿಕ್ಷಣ ಸಂಯೋಜಕ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಕೃಷ್ಣರಾಜಪುರ, ಬೆಂಗಳೂರು – ೫೬೦ ೦೩೬.



'ಕಾಡುಗೋಡಿ' ಇದು ಪ್ರಕೃತಿ ನಾಮಸೂಚಿಯಾಗಿದೆ. ಅಂದರೆ ನಾಮವಿಜ್ಞಾನದ 'Microtoponomy' ಮತ್ತು 'Hydronymy' ಶಾಖೆಗಳು ಇಲ್ಲಿ ಮೇಳೈಸಿವೆ. ಮೂರನೆಯ ಹೊಯ್ಸಳ ವೀರಬಲ್ಲಾಳ ದೊರೆಯ ಕ್ರಿ.ಶ. ೧೩೪೨ರ ಪಟ್ಟಂದೂರು ಶಾಸನವು 'ಶ್ರೀ ಮನುಮಹಾ ಸಣ್ಣೆನಾಡ ತೆಂಕಣ ಬಾಗೆಯ ತೊರೆವಳ ವಿತ್ತಿಯ ಕಾಡುಗೊಡಿ ಸ್ಥಳ' ಎಂದು ಉಲ್ಲೇಖಿಸುವುದರಿಂದ ಕಾಡಿನ + ಗುಡಿ = ಕಾಡುಗುಡಿ ಎಂಬ ಅರ್ಥವು ತನ್ನ ಮಹತ್ವ ಕಳೆದುಕೊಂಡು 'ಕಾಡುಗೋಡಿ' ಅಥವಾ 'ಕಾಡುಗೊಡಿ' ಸ್ಥಳನಾಮ ಗಟ್ಟಿಗೊಳ್ಳುತ್ತದೆ. 'ಕಾಡಿನ ಕೋಡಿ' ಯೇ ಸ್ಥಳನಾಮದ ಉದಯಕ್ಕೆ ಕಾರಣವಾಗಿದೆಯೆನ್ನಬಹುದು. 'ಕಾಡು' ಪದವನ್ನು ಅಡವಿ ಅಥವಾ ಹೊಲ ಎಂದೂ ; 'ಕೋಡಿ'ಯು ಕೆರೆ ಕಟ್ಟೆಗಳಲ್ಲಿ ಹೆಚ್ಚಿನ ನೀರು ಹರಿದು ಹೋಗಲು ಮಾಡಿರುವ ದಾರಿಯಾಗಿಯೂ ಅರ್ಥ ಕೊಡುತ್ತದೆ.[೮] ಭೌಗೋಳಿಕವಾಗಿ ಈಗಲೂ ಗ್ರಾಮದ ಉತ್ತರದಿಂದ ಈಶಾನ್ಯಕ್ಕೆ ಅಡವಿಯಲ್ಲಿ ಕೆರೆ ಕೋಡಿ ಇದೆ.

ಗ್ರಾಮದಾನದ ಇನ್ನೊಂದು ಹಾದಿ ಹಿಡಿದು ಹೊರಟರೆ, ಕಾಡುಗೋಡಿ>ಕಾಡುಗೊಡಿ ಆಗಿರುವ ಸಾಧ್ಯತೆಯೂ ಇದೆ. 'ಗೋಡು' ಇದು ಒಂದು ಬಗೆಯ ಮಣ್ಣು. ಕೆರೆ, ಬಾವಿ, ಕೊಳ ಮುಂತಾದವುಗಳಿಂದ ತೆಗೆದು ಹಾಕಿರುವ ಸಾರವತ್ತಾದ ಹೂಳುಮಣ್ಣು.[೯] 'ಗೋಡುನೆಲ'ವೂ ಮೆಕ್ಕಲು ಮಣ್ಣಿನಿಂದ ಕೂಡಿದ ಫಲವತ್ತಾದ ಭೂಮಿಯಾಗಿರುತ್ತದೆ.[೧೦] ಬಹುಶಃ ಕಾಡಿನ ಅಂಚಿನಲ್ಲಿರುವ ಫಲವತ್ತಾದ ಗೋಡು ಪ್ರದೇಶದಿಂದಾಗಿ 'ಕಾಡುಗೋಡು' ಎಂದು ಕರೆಯಲ್ಪಟ್ಟು 'ಕಾಡುಗೋಡಿ' ಆಗಿರುವ ಸಾಧ್ಯತೆಯೂ ಇಲ್ಲದಿಲ್ಲ.

ಬೆಂಗಳೂರು ಪರಿಸರದಲ್ಲಿರುವ ಕಮ್ಮಸಂದ್ರದ ಸೋಮೇಶ್ವರ ದೇವಾಲಯ, ಬೇಗೂರಿನ ಸೋಮನಾಥ, ಮಡಿವಾಳದ ಸೋಮೇಶ್ವರ, ಮಣ್ಣೆಯ ಶಾಸನೋಕ್ತ ಸೋಮೇಶ್ವರ ಹಾಗೂ ಯಲಹಂಕದ ಅಳ್ಳಪ್ಪನ ಏಕತಳದ ಶಿಲಾ ದೇವಾಲಯಗಳು ಗಂಗರ ದೇವಾಲಯಗಳೆಂದು ಡಾ. ದೇವರಕೊಂಡಾರೆಡ್ಡಿರವರು ಉಲ್ಲೇಖಿಸಿದ್ದಾರೆ. ಬೆಂಗಳೂರು ಪೂರ್ವ ತಾಲ್ಲೂಕಿನ ಜ್ಯೋತಿಪುರ ಗ್ರಾಮದ ಹೊರವಲಯದಲ್ಲಿರುವ ಶಿಥಿಲಾವಸ್ಥೆಯ ಸೋಮೇಶ್ವರ ಹಾಗೂ ಕಾಡುಗೋಡಿಯ ಕಾಶಿ ವಿಶ್ವೇಶ್ವರ (ಈಶ್ವರ) ದೇವಾಲಯಗಳು ಈ ಪಟ್ಟಿಗೆ ಸೇರುತ್ತವೆ. ಕಾರಣ ಇವು ಗಂಗರ ದೇವಾಲಯಗಳನ್ನು ಗುರುತಿಸುವ ಪ್ರಮುಖ ಲಕ್ಷಣಗಳನ್ನು ಹೊಂದಿವೆ. ಅಂದರೆ ದೇವಾಲಯಗಳ ಅಗಲ ಮತ್ತು ಉದ್ದ ಕಡಿಮೆಯಿದ್ದು ಚಿಕ್ಕದಾಗಿರುವುದು. ಚಿಕ್ಕ ಗರ್ಭಗೃಹ, ಕಡಿಮೆ ಎತ್ತರ, ಕಡಿಮೆ ಎತ್ತರದ ಬಾಗಿಲು, ಕಡಿಮೆ ಅಲಂಕಾರ, ಬಹುತೇಕ ಊರ ಹೊರಗೆ ಇರುವುದು ಹಾಗೂ ಇವುಗಳ ಪ್ರಾಚೀನತೆಯನ್ನು ಗುರುತಿಸುವಲ್ಲಿ ಚೋಳರು ಪ್ರತಿಷ್ಠೆ ಮಾಡಿದ್ದರೆಂದು ಗುರುತಿಸುವುದು. ಕ್ರಿ.ಶ. ೯೯೭ ರಿಂದ ೧೦೦೦ ವರೆಗಿನ ಅವಧಿಯಲ್ಲಿ ಚೋಳರ ಆಕ್ರಮಣ ನಡೆದಿದ್ದು, ಶೈವ–ವೈಷ್ಣವ–ಜೈನ ಎಂಬ ಭೇದಭಾವವಿಲ್ಲದೆ ಎಲ್ಲ ದೇವಾಲಯಗಳನ್ನು ಪ್ರಾಯಶಃ



ಲೂಟಿ ಮಾಡಿ ಮುಂದೆ ಹಲವಾರು ವರ್ಷಗಳ ಕಾಲ ಪೂಜಾ ಕೈಂಕರ್ಯಗಳು ನಡೆಯದಂತೆ ಸ್ಥಗಿತವಾಗಿರಬೇಕು. ಸುಮಾರು ೪೦-೫೦ ವರ್ಷಗಳ ನಂತರದಲ್ಲಿ ಜೀರ್ಣೋದ್ಧಾರ ಹೊಂದಿ, ಪೂಜೆ-ಪುನಸ್ಕಾರಗಳಿಗೆ ಚೋಳರೇ ವ್ಯವಸ್ಥೆ ಮಾಡಿರುವುದು ಕಂಡುಬರುತ್ತದೆ. ಹಾಗಾಗಿ ಅನೇಕ ಪ್ರಾಚೀನ ಗಂಗರ ದೇವಾಲಯಗಳನ್ನು ಜನಬಳಕೆಯಲ್ಲಿ 'ಚೋಳ ಪ್ರತಿಷ್ಠೆ' ಎಂದು ಕರೆದಿರುವಂತೆ ಕಾಣುತ್ತದೆ. ಅಂಥ ಸಂದರ್ಭದಲ್ಲಿ ಅರ್ಚಕರೂ ತಮಿಳುನಾಡಿನಿಂದ ಬಂದಿರಬಹುದು. ಉದಾ : ಕಾಡುಗೋಡಿ ಈಶ್ವರ ದೇವಸ್ಥಾನದ ಅರ್ಚಕರಾದ ನರಸಿಂಹ ದೀಕ್ಷಿತ್‌ರು ತಮ್ಮ ಪೂರ್ವಜರು (ಶಿಖಾಮಣಿ ದೀಕ್ಷಿತ್ ?) ತಮಿಳುನಾಡಿನಿಂದ ಬಂದವರು ಎಂದು ಸ್ಪಷ್ಟಪಡಿಸುತ್ತಾರೆ.

ಕಾಡುಗೋಡಿಯ ಕಾಶಿ ವಿಶ್ವೇಶ್ವರ ದೇವಾಲಯವು ಅಧಿಷ್ಠಾನಸಹಿತವಾಗಿದೆ. ಏಕಾಂತ ಪ್ರದೇಶದ ಸಹಜ ನೀರಿನ ಆಸರೆಯ ಸ್ಥಳದಲ್ಲಿ (ಕೆರೆ ಕೋಡಿ ಮತ್ತು ಪಿನಾಕಿನಿ ದಂಡೆ) ನಿರ್ಮಿತವಾಗಿದ್ದು ಪೂರ್ವಾಭಿಮುಖವಾಗಿದೆ.

**ಅಧಿಷ್ಠಾನ :** ಕಾಶಿ ವಿಶ್ವೇಶ್ವರ ದೇವಾಲಯಕ್ಕೆ ಸರಳವಾದ ಪಾದಬಂಧ ಅಧಿಷ್ಠಾನವಿದ್ದು, ಜಗತಿ, ತ್ರಿಪಟ್ಟಕುಮುದ, ಗಳ ಮತ್ತು ಅದರಲ್ಲಿ ಗಳಪಾದ-ಪಟ್ಟಿಗಳು ಬಂದಿರುತ್ತವೆ. ನೆಲಮಟ್ಟದಿಂದ ೨'೮" ಎತ್ತರದ ಅಧಿಷ್ಠಾನವಿದೆ. ಕಪೋತ ಭಾಗದಲ್ಲಿ ಯಾವುದೇ ಅಲಂಕಾರಗಳಿಲ್ಲ. ಹುಸ್ಕೂರಿನ ಸೋಮೇಶ್ವರ, ಬೇಗೂರಿನ ನಗರೇಶ್ವರ ದೇವಾಲಯಗಳಲ್ಲೂ ಇಂತಹ ಅಧಿಷ್ಠಾನಗಳಿರುತ್ತವೆ. ಇವು ತಮ್ಮ ಸಮಕಾಲೀನರಾದ ಚಾಲುಕ್ಯರಿಂದಾಗಲಿ, ಪಲ್ಲವರಿಂದಾಗಲಿ ಪೂರ್ಣ ಪ್ರಭಾವಿತರಾಗದೆ, ಸ್ಥಳೀಯವಾಗಿ ಲಭ್ಯವಿರುವ ವಾಸ್ತುಪ್ರಕಾರ ಬಳಸಿರುವುದು ಕಂಡುಬರುತ್ತದೆ. ದೇವಾಲಯದ ಬಲಪಕ್ಕದ ಜಗತಿಯ ಮೇಲೆ ಹಸು ಪಶ್ಚಿಮಕ್ಕೆ ಮುಖ ಮಾಡಿದ್ದು ಅದರ ಮುಂದೆ ಕರುವಿನ (ಚಿಕಣಿ) ಶಿಲ್ಪ ಕೆತ್ತಲಾಗಿದೆ.

**ಭಿತ್ತಿ :** ಅಧಿಷ್ಠಾನದ ಮೇಲೆ ಬರುವ ಭಾಗವೇ ಭಿತ್ತಿ (ಗೋಡೆ)ಯಾಗಿದ್ದು, ಇದು ಶಿಲಾನಿರ್ಮಿತಿಯಾಗಿರುವುದರಿಂದ ಸುಸ್ಥಿತಿಯಲ್ಲಿದೆ. ನವರಂಗ ಮಂಟಪದ ದಕ್ಷಿಣದ ಹೊರಭಿತ್ತಿಯ ಮೇಲೆ ದೇವಕೋಷ್ಠದಲ್ಲಿ ಹಾವಿನ ಬಾಲವನ್ನು ಬಲಗೈಯಿಂದ ಹಿಡಿದು ಮೇಲೆತ್ತಿ ಹೆಡೆಯ ಮೇಲೆ ನೃತ್ಯ ಮಾಡುತ್ತಿರುವ ಕಾಳಿಂಗ ಮರ್ದನನ ಉಬ್ಬುಶಿಲ್ಪ ಸುಂದರವಾಗಿದೆ. ಅಂತರಾಳದ ದಕ್ಷಿಣ ಹೊರಭಿತ್ತಿಯಲ್ಲಿ ಅಂಜಲಿ ಭಂಗಿ (ಎರಡೂ ಕೈ ಮುಗಿದು ನಿಂತಿರುವ) ಸ್ತ್ರೀಯ ಉಬ್ಬುಶಿಲ್ಪವಿದೆ. ಸ್ತ್ರೀಯ ಇಕ್ಕೆಲಗಳಲ್ಲಿ ಸಸ್ಯ ಹಾಗೂ ಕೆಳಗೆ ಇಬ್ಬರು ವ್ಯಕ್ತಿಗಳನ್ನು ಕುಳ್ಳಿರಿಸಿರುವಂತೆ ತೋರಿಸಲಾಗಿದೆ. ಗರ್ಭಗೃಹದ ದಕ್ಷಿಣ ಹೊರಭಿತ್ತಿಯಲ್ಲಿ ನಟರಾಜ (ಜಟಾಧರ) ತನ್ನ ಬಲಗಾಲನ್ನು ಪುರುಷನ ಮೇಲಿರಿಸಿ ನೃತ್ಯ ಸ್ಥಿತಿಯಲ್ಲಿರುವನು. ಗರ್ಭಗೃಹದ ಹಿಂಭಾಗದ ಭಿತ್ತಿಯ ದೇವಕೋಷ್ಠದಲ್ಲಿ ಚಂದ್ರಶೇಖರಮೂರ್ತಿ (?)ಯ ಉಬ್ಬುಶಿಲ್ಪವಿದೆ. ಒಂದು ಬಲಗೈಯಲ್ಲಿ ಡಮರುಗ, ಇನ್ನೊಂದು ಬಲಗೈ ಅಭಯ ಸ್ಥಿತಿ, ಎಡಗೈ ಕಟಿಹಸ್ತ, ಇನ್ನೊಂದು ಎಡಗೈಯಲ್ಲಿ ಹೂವು ಹಿಡಿದಿರುವತಿದೆ. ಗರ್ಭಗೃಹದ ಎಡಭಾಗದಲ್ಲಿ ಉತ್ತರದ ಭಿತ್ತಿಯ ದೇವಕೋಷ್ಠದಲ್ಲಿ ಕಂಕಾಳಮೂರ್ತಿಯ ಉಬ್ಬುಶಿಲ್ಪ ತ್ರಿಭಂಗಿಯಲ್ಲಿರುತ್ತದೆ. ನಾಲ್ಕು ಕೈಗಳನ್ನು ತೋರಿಸಲಾಗಿದೆ. ಬಲಗೈಯಲ್ಲಿ ಡಮರುಗ ಇದೆ. ಗರ್ಭಗೃಹದ ಎಡಭಾಗದಲ್ಲಿ ಉತ್ತರಕ್ಕೆ ಅಂತರಾಳದ ಹೊರಭಿತ್ತಿಯಲ್ಲಿ ವೃಷಭಾರೂಢ ಉಮಾ ಮಹೇಶ್ವರನಿದ್ದಾನೆ. ಹಿನ್ನೆಲೆಯಲ್ಲಿ ಮರವನ್ನು ತೋರಿಸಿದೆ. ಆದರೆ ಬೇಗೂರಿನ ನಾಗೇಶ್ವರ ದೇವಾಲಯದ ನವರಂಗದ ಭಿತ್ತಿನಲ್ಲಿ ಪೀಠಸ್ಥ ಉಮಾಮಹೇಶ್ವರ ಶಿಲ್ಪವಿದೆ. ನವರಂಗ ಮಂಟಪದ ಎಡಭಾಗದಲ್ಲಿ ಉತ್ತರಕ್ಕೆ ಭಿತ್ತಿಯಲ್ಲಿರುವ ಸಂಹಾರ ಮೂರ್ತಿಯು ಎಡಗಾಲನ್ನು ಬಲಗಾಲಿನ ಮೊಣಕಾಲ ಮೇಲಿಟ್ಟು, ಬಲಗಾಲೊಂದರ ಮೇಲೆಯೇ ನಿಂತಿರುವಂತಿದೆ. ಒಂದು ಬಲಗೈ, ಒಂದು ಎಡಗೈ ಮೇಲಕ್ಕೆತ್ತಿ ಇನ್ನೊಂದು ಬಲಗೈಯಲ್ಲಿ ಉದ್ದನೆಯ ತ್ರಿಶೂಲ (?) ಇರುತ್ತದೆ.

ಭಿತ್ತಿಯಲ್ಲಿ ಉಬ್ಬು ಕಂಬಗಳನ್ನು ಬಿಡಿಸಿರುತ್ತಾರೆ. ಸಾಮಾನ್ಯವಾಗಿ ದಪ್ಪ ದಪ್ಪ ಕಲ್ಲು ಚಪ್ಪಡಿಗಳನ್ನು ಜೋಡಿಸಿ ಅನಂತರ ಉಬ್ಬು ಕಂಬಗಳನ್ನು ಬಿಡಿಸುತ್ತಿದ್ದಿರಬೇಕು, ಇಲ್ಲವೆ ಅರೆ ಬರೆಯಾಗಿ ಉಬ್ಬು ಕಂಬಗಳನ್ನು ಚಪ್ಪಡಿಯಲ್ಲಿ ಬಿಡಿಸಿ ದೇವಾಲಯದ ಭಾಗಗಳಿಗೆ ಜೋಡಿಸಿದ ನಂತರ ಪೂರ್ಣವಾಗಿ ಕೆತ್ತುತ್ತಿದ್ದಿರಬೇಕು. ಒಟ್ಟಾರೆ ಭಿತ್ತಿಭಾಗವು ೪'೬" ಎತ್ತರ ಮಾತ್ರ ಇದ್ದು, ಮಟ್ಟಸವಾಗಿರುತ್ತದೆ.

**ವ್ಯಾಳವಾರಿ :** ಈ ಭಾಗವು ಕಟ್ಟಕಡೆಯ (ಅಂತಿಮ) ಹಂತವಾಗಿರುವುದರಿಂದ, ಕಲ್ಲಿನ ಹೊರ ಅಂಚುಗಳು ಬೋಳಾಗಿ ಕಾಣಬಾರದೆಂದು ಸಿಂಹಗಳನ್ನು ಸಾಲಾಗಿ ಒಂದರ ಹಿಂದೆ ಒಂದರಂತೆ ಬಿಡಿಸಲಾಗಿದೆ. ಇಲ್ಲಿಯ ಸಿಂಹಗಳು ಬಲಗಾಲು ಎತ್ತಿ ಮುಂದೆ ಸಾಗುತ್ತಿರುವುದನ್ನು ಸುಂದರವಾಗಿ ಕೆತ್ತಲಾಗಿದೆ. ಎಲ್ಲ ಸಿಂಹಶಿಲ್ಪಗಳಲ್ಲಿ ಬಾಲವನ್ನು ಮೇಲಕ್ಕೆತ್ತಿದಂತೆ ಕಂಡರಿಸಲಾಗಿದೆ. ಪ್ರಸಕ್ತ ಮಳೆ ಬಿಸಿಲಿನಿಂದ ಸಿಂಹಶಿಲ್ಪಗಳು ಸವಕಳಿಯಾಗಿರುತ್ತವೆ. ದೇವಾಲಯದ ಬಲಗಡೆಯಿಂದ ಆರಂಭವಾದ ವ್ಯಾಳವಾರಿ ಕ್ರಮ ಎಡಭಾಗಕ್ಕೆ ಮುಂದುವರೆದಿದೆ.

**ಶಿಖರ :** ಇದು ಏಕತಳ ದೇವಾಲಯವಾಗಿರುವುದರಿಂದ ಕಪೋತದ ಮೇಲಿನ ಭಾಗಕ್ಕೆ ಛಾವಣಿ ಹಾಕಿ ಕೊನೆ



ಮಾಡಲಾಗಿದೆ. ಇಂತಹ ಮಟ್ಟಸ ಛಾವಣಿಯ ದೇವಾಲಯಗಳನ್ನು ಮುಂಡಮಾಲಾ ಎಂದು ಕರೆಯುತ್ತಾರೆ.[೧೧] ಕೆಲವೊಮ್ಮೆ ಇಂತಹ ಮುಂಡಮಾಲ ದೇವಾಲಯಕ್ಕೆ ಮೇಲೆ ಶಿಖರ ನಿರ್ಮಿಸಿರುವ ಉದಾಹರಣೆಗಳೂ ಇವೆ. ಕಾಡುಗೋಡಿಯ ಈಶ್ವರ ದೇವಾಲಯದ ಮುಂಡಮಾಲಾದ ಮೇಲೆ ಗಾರೆಯ ಕಳಶವನ್ನು, ಸ್ಥಾಪಿಸಲಾಗಿದೆ. ಸದ್ಯಕ್ಕೆ ಇದೂ ತ್ರುಟಿತವಾಗಿದೆ. 'The shikhara over the garbhagriha has totally fallen now'[12] ಎಂಬ ಮಾತು ಹಿಂದಿನದಾಗಿದೆ.

**ಮುಖಮಂಟಪ** : ಗಂಗರ ದೇವಾಲಯಗಳಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗ ಮಂಟಪಗಳು ಮಾತ್ರ ಕಾಣಬರುತ್ತವೆ. ಕಾಡುಗೋಡಿಯಲ್ಲೂ ಈ ಮೂರು ಭಾಗಗಳು ಇದ್ದು, ನಂತರದ ಅವಧಿಯಲ್ಲಿ ಮುಖಮಂಟಪ ಕಟ್ಟಿಸಲಾಗಿದೆ. ೧೨'X೧೨' ಅಳತೆಯ ಮುಖಮಂಟಪದಲ್ಲಿ ನಾಲ್ಕು ಚೌಕಾಕಾರದ ಪೂರ್ಣಕಂಬಗಳಿರುತ್ತವೆ. ಇವುಗಳ ಅಳತೆ ಗಾತ್ರದಲ್ಲಿ ಸಾಮ್ಯತೆ ಇರುವುದಿಲ್ಲ. ಛತ್ತಿಗೆ ೫ ಕಲ್ಲುಚಪ್ಪಡಿಗಳನ್ನು ಹೊದಿಸಲಾಗಿದೆ. ಎಡಭಾಗದ ಕಂಬದ ಮೇಲೆ ಶಿವಲಿಂಗದ ಚಿತ್ರ ಕಂಡರಿಸಲಾಗಿದೆ.

**ನವರಂಗ ಮಂಟಪ** : ನವರಂಗದ ಪ್ರವೇಶದ್ವಾರ ತೀರ ಕಿರಿದಾಗಿರುತ್ತದೆ. ದ್ವಾರಶಾಖೆಯ ಹಣೆಪಟ್ಟಿಯಲ್ಲಿ ಗಜಲಕ್ಷ್ಮಿಯನ್ನು ಹಾಗೂ ದ್ವಾರದ ಎಡಬಲಕ್ಕೆ ತ್ರಿಭಂಗಿಯಲ್ಲಿರುವ ದ್ವಾರಪಾಲಕರನ್ನು ತೋರಿಸಲಾಗಿದೆ. ಇವರಿಗೆ ನಾಲ್ಕು ಕೈಗಳಿರುತ್ತವೆ. ಒಂದು ಬಲಗೈ ಅಭಯ, ಇನ್ನೊಂದು ಬಲಗೈಯಲ್ಲಿ ಹೂವಿನ ಪೊಕಳೆ, ಎಡಗೈಯಲ್ಲಿ ಖಡ್ಗ (?) ವನ್ನು ಕೊಟ್ಟು, ನೆಲಕ್ಕೆ ತಾಕಿಸಿಡಲಾಗಿದೆ. ಇನ್ನೊಂದು ಎಡಗೈ ಮೇಲಕ್ಕೆತ್ತಲಾಗಿದೆ. ೧೦'೫"X೧೨' ವಿಸ್ತೀರ್ಣದ ನವರಂಗ ಮಂಟಪವು ಅಲಂಕಾರರಹಿತವಾಗಿದ್ದು, ಮಧ್ಯಭಾಗದಲ್ಲಿ ವೇದಿಕೆ ಇರುವುದಿಲ್ಲ. ಛತ್ತಿನಲ್ಲಿ ಕಮಲ ದಳಗಳ ಅಲಂಕಾರವಿರುತ್ತದೆ. ಇಲ್ಲಿ ಮಧ್ಯದ ನಾಲ್ಕು ಕಂಬಗಳು ಪ್ರಧಾನವಾಗಿದ್ದು, ಹಿಂದಿಯೊಂದ ಕಂತದವರೆಗೆ ೪'೪" ಎತ್ತರವಾಗಿರುತ್ತವೆ. ಶಲಾಕದ ಮೇಲ್ಭಾಗದಲ್ಲಿ ಮಾಲಾಲಂಕಾರವಿದ್ದು ಈ ಭಾಗದ ಸುತ್ತಳತೆ ೨'೮" ಇರುತ್ತದೆ. ಕಂಬಗಳ ಮೇಲೆ ಉದ್ದ ಮತ್ತು ಅಡ್ಡ ತೊಲೆಗಳು ಬಂದಿರುವುದರಿಂದ ಛತ್ತಿನಲ್ಲಿ ಒಂಭತ್ತು ಸಮಭಾಗಗಳ ವಿಂಗಡಣೆ ಕಾಣಬಹುದು. ನವರಂಗಮಂಟಪದ ಸುತ್ತು ಗೋಡೆಯಲ್ಲಿನ ೧೨ ಕಂಬಗಳು ಅರ್ಧ ಮಾತ್ರ ಹೊರಗೆ ಕಾಣುವಂತಿದ್ದು, ಉಳಿದ ಅರ್ಧ ಭಾಗ ಗೋಡೆಯೊಳಗೆ. ದೇವಾಲಯದ ಮೇಲ್ಛಾವಣಿಯ ಭಾರ ಹೊತ್ತಿರುತ್ತವೆ. ಕಂಬಗಳ ಮುಚ್ಚಳದ ಕಂತದ ಮೇಲೆ ಸರಳ ಬೋದಿಗೆಗಳಿದ್ದು, ತಳಭಾಗದಿಂದ ಮೇಲಕ್ಕೆ ಇಳಿಜಾರಾಗಿ ಮುಂಚಾಚಿರುತ್ತವೆ, ಅನಂತರ ಮೇಲಕ್ಕೆ ನೇರವಾಗಿ ಸಾಗುತ್ತವೆ. ವ್ಯಾಪಕ ಬಳಕೆ ದೃಷ್ಟಿಯಿಂದ ಇಂತಹ ಸರಳ ಬೋದಿಗೆಗಳನ್ನು ಗಂಗರ ಕೊಡುಗೆಗಳೆಂದು ಹೇಳಬೇಕಾಗುತ್ತದೆ. ಗಂಗರ ನಂತರದಲ್ಲಿ ಬಂದ ಅರಸರು ಬೋದಿಗೆಯ ಮಧ್ಯದಲ್ಲಿ ಸೀಳುಗಳನ್ನು ಪರಿಚಯಿಸಿದ್ದಾರೆ. ಅಂದರೆ ಸಪಾಟಾದ ಸರಳ ಬೋದಿಗೆ ಬಳಸಿದವರಲ್ಲಿ ಗಂಗರೇ ಪ್ರಸಿದ್ಧರು.[೧೩]

**ಸಪ್ತಮಾತೃಕೆಯರು** : ನವರಂಗ ಮಂಟಪದಲ್ಲಿ ಉತ್ತರಾಭಿಮುಖವಾಗಿ ಸಪ್ತಮಾತೃಕೆಯರ ಶಿಲಾಫಲಕ ಪ್ರತಿಷ್ಠಾಪಿಸಲಾಗಿದೆ. ಆರು ದೇವತೆಗಳು ಮಾತ್ರ ಇದ್ದು, ಇಂದ್ರಾಣಿ ಶಿಲ್ಪ ಒಡೆದು ಹೋಗಿರುವ ಸಾಧ್ಯತೆ ಇದೆ. ಎಲ್ಲ ಆರು ದೇವಿಯರು ಬಲಪಾದವನ್ನು ಇಳಿಬಿಟ್ಟು ಕುಳಿತಿದ್ದಾರೆ. ಚತುರ್ಬಾಹುಗಳಿದ್ದು, ಅಭಯ-ಚಕ್ರ-ಶಂಖ ಹಾಗೂ ಎಡ ತೊಡೆ ಮೇಲೆ ಆರಾಮ ಹಸ್ತ ತೋರಿಸಲಾಗಿದೆ. ಸಾಮಾನ್ಯವಾಗಿ ಸಪ್ತಮಾತೃಕಾ ಶಿಲ್ಪಗಳು ಅಥವಾ ಗುಡಿಗಳು ಕೆರೆಯ ದಂಡೆಯಲ್ಲಿ ಕಾಣಬರುತ್ತವೆ ಎಂಬುದು ಇಲ್ಲಿಯೂ ಅನ್ವಯವಾಗುತ್ತದೆ. ಕಾಡುಗೋಡಿ ದೇವಾಲಯದ ಸಪ್ತಮಾತೃಕೆಯರ ಪೀಠಗಳಲ್ಲಿ ವಾಹನ ಬಿಡಿಸಿರುವುದಿಲ್ಲ. ವಾರಾಹಿ ಬಿಂಬ ಸ್ಪಷ್ಟವಾಗಿದೆ. ಸಪ್ತಮಾತೃಕೆಯರ ಪ್ರತೀಕವಾಗಿ ಕರ್ನಾಟಕದ ಉತ್ತರ ಭಾಗದ ಜಿಲ್ಲೆಗಳಲ್ಲಿ 'ಏಳು ಮಕ್ಕಳ ತಾಯಿ' ಎಂದು ಕರೆಯಲ್ಪಡುವ ಏಳು ಕಲ್ಲುಗಳು ಅಲ್ಲಲ್ಲಿ ಕಂಡುಬರುತ್ತವೆ.

**ವಿಷ್ಣು** : ೨' ೧" ಎತ್ತರ ಹಾಗೂ ೧ ಅಡಿ ಅಗಲವಿರುವ ಕಪ್ಪು ಶಿಲೆಯಲ್ಲಿ ಕಾಣಿಸಿರುವ ವಿಷ್ಣುವಿನ ಎಡ ಕೆಳಗೈಯಲ್ಲಿ ಗದೆ. ಎಡಮೇಲುಗೈಯಲ್ಲಿ ಶಂಖ. ಬಲಮೇಲಗೈಯಲ್ಲಿ ಚಕ್ರ. ಬಲ ಕೆಳಗೈ ಅಭಯ ಮುದ್ರೆಯಲ್ಲಿರುತ್ತದೆ. ಸರ್ವಾಭರಣಗಳಿದ್ದು, ಕಿರೀಟ ಮುಕುಟ ತೋರಿಸಲಾಗಿದೆ.

ಶಿಲೆಯ ಆಕಾರಕ್ಕೆ ಹೊಂದಿಸಿ ಶಿಲ್ಪವನ್ನು ಕಂಡರಿಸಲಾಗಿದೆ. ಈಗ ಉತ್ತರ ದಿಕ್ಕಿಗೆ ಮುಖಮಾಡಿ ಇಡಲಾಗಿದೆ.

**ಗಣಪತಿ** : ಶಿವನ ಪಂಚಾಯತನದಲ್ಲಿ ಬರುವ ವಿಗ್ರಹಗಳಲ್ಲಿ ಗಣಪತಿಯದೂ ಒಂದು. ಕಾಡುಗೋಡಿಯಲ್ಲಿರುವ ಎಡಮುರಿ ಗಣಪತಿ ಶಿಲ್ಪ ಪೂರ್ವಾಭಿಮುಖವಿದ್ದು, ಹುನ್ಕುಂದದಲ್ಲಿರುವಂತೆ ಪ್ರಾಚೀನವಾದುದಾಗಿದೆ. ಹೆಚ್ಚಿನ ಅಲಂಕಾರಗಳಿರುವುದಿಲ್ಲ.

**ಷಣ್ಮುಖ** : ಗಂಗರ ದೇವಾಲಯಗಳಲ್ಲಿ ಸ್ಕಂದ ಅಥವಾ ಷಣ್ಮುಖನ ವಿಗ್ರಹಗಳು ದೊರೆಯುವುದು ಅಪರೂಪ. ಆದರೆ ಇಲ್ಲಿ ಕಾಡುಗೋಡಿ ವಿಶ್ವೇಶ್ವರ, ದೇವಾಲಯದಲ್ಲಿ ಅಂತರಾಳ ದ್ವಾರದ ಬಲಕ್ಕೆ ೨' ೨" ಎತ್ತರ ೧' ೬" ಅಗಲದ ಕಪ್ಪು ಶಿಲೆಯಲ್ಲಿ ಅಭಯಹಸ್ತದ ಷಣ್ಮುಖನಿದ್ದಾನೆ. ಜಪಮಾಲೆ ತೋರಿಸಲಾಗಿದೆ. ಮೂರು ಮುಖಗಳಿರುತ್ತವೆ. ಇಂತಹದೇ ಶಿಲ್ಪ ಹೊಸಕೋಟೆ ತಾಲ್ಲೂಕಿನ ಕಮ್ಮಸಂದ್ರದಲ್ಲೂ ಇರುತ್ತದೆ.

**ಸೂರ್ಯಶಿಲ್ಪ** : ೨' ೫" ಎತ್ತರ ಹಾಗೂ ೧' ೬" ಅಗಲವಿರುವ ಶಿಲೆಯಲ್ಲಿ ಸಮಭಂಗಿಯಲ್ಲಿ ನಿಂತಿರುವ ಸೂರ್ಯನು ತಾವರೆ ದಂಟು ಜಿಗಿಯಾಗಿ ಹಿಡಿದಿರುತ್ತಾನೆ. ಪಾದಗಳ ಬಳಿ ಚಿಕಣಿ ಶಿಲ್ಪಗಳಿಲ್ಲ. ಸೌರಮತದವರ ಪ್ರಭಾವ ಅಲ್ಲಲ್ಲಿ ಕಂಡುಬಂದರೂ, ಗಂಗವಾಡಿಯಲ್ಲಿ ಅದು ಕಡಿಮೆ ಇತ್ತು. ಬಹುಶಃ ಸೌರಮತ ಪ್ರತಿಪಾದಕರಾಗಿದ್ದ ವರ್ತಕರಿಂದ ಸೂರ್ಯೋಪಾಸನೆ ಬಂದಿರಬೇಕು.

ಭೈರವ ಶಿಲ್ಪ ಸಮಪಾದದಲ್ಲಿ ನಿಂತಿದ್ದು ನಗ್ನವಾಗಿದೆ. ಸ್ಥಳೀಯವಾಗಿ ಪಾರ್ವತಿ ಅಥವಾ ವಿಶಾಲಾಕ್ಷಿ ಅಮ್ಮನವರೆಂದು ಕರೆಯಲಾಗುತ್ತಿರುವ ದುರ್ಗಾಶಿಲ್ಪವೂ ಇರುತ್ತದೆ. ಇದು ನಂತರದ ಕಾಲದ್ದಾಗಿದ್ದು ೩' ೮" ೧' ೭" ಅಗಲವಾದ ಶಿಲೆಯಲ್ಲಿ ಕೆತ್ತಲಾಗಿದೆ.

**ಅಂತರಾಳ** : ದೇವಾಲಯದ ಗರ್ಭಗೃಹ ಹಾಗೂ ನವರಂಗ ಮಂಟಪದ ನಡುವೆ ಸಣ್ಣ ತೆರೆದ ಕೋಣೆಯಂತಿರುವ ಅಂತರಾಳ ಮಂಟಪವು ೫' ೯" X ೫' ೯" ವಿಸ್ತೀರ್ಣ ಹೊಂದಿದೆ. ಈ ಭಾಗಕ್ಕೂ ನವರಂಗಕ್ಕೂ ಮಧ್ಯೆ ಬಾಗಿಲು ಶಾಖೆಗಳನ್ನು ಇಟ್ಟಿರುವುದಿಲ್ಲ. ಆದರೆ ಬೇಗೂರಿನ ನಾಗೇಶ್ವರ ದೇವಾಲಯದಲ್ಲಿ ನವರಂಗ ಅಂತರಾಳದ ಮಧ್ಯೆ ಬಾಗಿಲು ಇರುತ್ತದೆ. ಬಹುಶಃ ಈ ಬದಲಾವಣೆ ಗಂಗರ ಕಾಲದ್ದಲ್ಲವೆಂದು ತಿಳಿದುಬರುತ್ತದೆ. ಕಾಡುಗೋಡಿಯ ವಿಶ್ವೇಶ್ವರ ದೇವಾಲಯದ ಅಂತರಾಳದ ಮೇಲಿನ ಛತ್ತಿಗೆ ಒಂದೇ ಚಪ್ಪಡಿ ಕಲ್ಲು ಹೊದಿಸಲಾಗಿದೆ.

ಗರ್ಭಗೃಹ : ೮' ೫" x೮' ೫" ವಿಸ್ತೀರ್ಣದ ಗರ್ಭಗೃಹವು ನಿರಂಧಾರ ಮಾದರಿಯದಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ.

**ಪರಿವಾರ ದೇವಾಲಯಗಳು** : ಮುಖಮಂಟಪದ ಮುಂಭಾಗದ ಪ್ರಾಕಾರ ಗೋಡೆಗೆ ಹೊಂದಿಕೊಂಡಂತೆ ಎರಡು ಪರಿವಾರ ದೇವಾಲಯಗಳು ಇರುತ್ತದೆ. ಒಂದು ದಕ್ಷಿಣಕ್ಕೆ ಮುಖ ಮಾಡಿದ್ದರೆ, ಇನ್ನೊಂದು ಉತ್ತರಾಭಿಮುಖವಾಗಿರುತ್ತದೆ. ಈ ದೇವಾಲಯಗಳ ಒಳಗೆ ವಿಗ್ರಹಗಳು ಇರುವುದಿಲ್ಲ. ಮುಖ್ಯ ದೇವಸ್ಥಾನದ ಬಲಗಡೆ ಅಂದರೆ ನವರಂಗ ಮಂಟಪದ ಭಿತ್ತಿಯ ಎದುರು ಮುಖ ಮಾಡಿದ ಪರಿವಾರ ದೇವಾಲಯದ ಬಾಗಿಲು ಉತ್ತರಕ್ಕಿದ್ದು, ಎರಡೂ ಕಡೆಗಳಲ್ಲಿ ದ್ವಾರಪಾಲಕರಿದ್ದಾರೆ. ಇವರ ಬಲಗೈಯಲ್ಲಿ ಹೂವಿನ ಪಕಳೆ (?) ಎಡಗೈಯಲಿ ಖಡ್ಗವನ್ನು, ನೆಲಕ್ಕೆ ಮುಖ ಮಾಡಿ ಇಡಲಾಗಿದೆ. ಗರ್ಭಗೃಹದ ಬಲಭಾಗದ ಭಿತ್ತಿಯ ಪಕ್ಕ ಪ್ರಾಕಾರ ಗೋಡೆಗೆ ಹೊಂದಿಕೊಂಡಂತೆ ಪೂರ್ವಕ್ಕೆ ಮುಖ ಮಾಡಿರುವ ಪರಿವಾರ ದೇವಾಲಯಕ್ಕೂ ದ್ವಾರಪಾಲಕರಿದ್ದಾರೆ. ಇನ್ನು ಹಿಂದಿನ ಪ್ರಾಕಾರ ಗೋಡೆಗೆ ಹೊಂದಿಕೊಂಡು, ಪೂರ್ವಕ್ಕೆ ಮುಖ ಮಾಡಿರುವ ಎರಡೂ ಪರಿವಾರ ದೇವಾಲಯಗಳು ಶಿಥಿಲವಾಗಿರುತ್ತವೆ. ಈ ಎಲ್ಲ ಪರಿವಾರ ದೇವಾಲಯಗಳು ನಾಲ್ಕು ದೊಡ್ಡ ಚಪ್ಪಡಿಗಳಿಂದ ನಿರ್ಮಿಸಿದ ವೀರರ ಗುಡಿಗಳನ್ನು ನೆನಪಿಸುತ್ತವೆ. ನವರಂಗ ಮಂಟಪದ ಪ್ರವೇಶದ್ವಾರದಲ್ಲಿರುವ ದ್ವಾರಪಾಲಕರಂತೆಯೇ ಪರಿವಾರ ದೇವಾಲಯಗಳಿಗೂ ಖಡ್ಗವನ್ನು ನೆಲಕ್ಕೆ ತಾಕಿಸಿರುವ ದ್ವಾರಪಾಲಕರಿರುತ್ತಾರೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಇಲ್ಲಿ ಒಟ್ಟು ಆರು ಪರಿವಾರ ದೇವಾಲಯಗಳಿರುವುದು ಕಂಡುಬಂತು.

ತ್ರುಟಿತ ಶಿಲ್ಪಗಳು : ಮುಖಮಂಟಪದ ಎದುರು ಪ್ರಾಕಾರ ಗೋಡೆಗೆ ನಿಲ್ಲಿಸಲಾದ ಎರಡು ಕಲ್ಲು ಚಪ್ಪಡಿಗಳ ಮೇಲೆ ರಾಮಾಯಣದ ಕಥಾರೂಪ ಬಿಡಿಸಲಾಗಿದೆ. ೨' ೧೦" ಎತ್ತರ ಹಾಗೂ ೩' ೩" ಅಗಲವಿರುವ ಒಂದು ಫಲಕದ ಮೇಲೆ ಸ್ತೂಪಿ, ಕಲಶ ಕಂಡರಿಸಿ ಅದರಲ್ಲಿ ಆಸೀನ ಸ್ಥಿತಿಯಲ್ಲಿರುವ ಸೀತಾಮಾತೆಯನ್ನು ದರ್ಶನ ಮಾಡುತ್ತಿರುವ ಆಂಜನೇಯ, ಇನ್ನೊಂದು ಶಿಲಾಫಲಕವು ೨' ೧೧" ಎತ್ತರವಿದ್ದು, ೩' ೬" ಅಗಲದ ವಿನ್ಯಾಸ ಹೊಂದಿದೆ. ಇದರಲ್ಲಿ ಬಿಲ್ಲು ಬಾಣ ಹಿಡಿದು ನಿಂತಿರುವ ಶ್ರೀರಾಮ (?) ಮತ್ತು ಮೊಣಕಾಲೂರಿ ವಿನೀತ ಭಾವದಿಂದ ತನ್ನೆರಡೂ ಕೈ ಮುಗಿದಿರುವ ಆಂಜನೇಯನನ್ನು ತೋರಿಸಲಾಗಿದೆ.

**ಪ್ರಾಕಾರ ಗೋಡೆ** : ಪೂರ್ವ ಪಶ್ಚಿಮದಲ್ಲಿ ೭೫ ಅಡಿ ದಕ್ಷಿಣೋತ್ತರವಾಗಿ ೫೦ ಅಡಿ ಅಳತೆ ಹೊಂದಿರುವ ಪ್ರಾಕಾರ ಗೋಡೆಯ ನಿರ್ಮಾಣ ವಿಶೇಷವೆನಿಸುತ್ತದೆ. ೨' ೬" ಅಗಲ, ೬' ೫" ಉದ್ದದ ಗಾತ್ರ ಹೊಂದಿರುವ ಎರಡು ಕಲ್ಲಿನ ಛಾವಣಿಗಳನ್ನು ಉದ್ದುದವಾಗಿ ನೆಲದಲಿ ನೆಟ್ಟು, ಅವುಗಳ

ಮೇಲೆ ಒಂದ ಛಾವಣಿ, ಮತ್ತೆರಡು ಛಾವಣಿ ಉದ್ದುದ್ದ ಇಟ್ಟು, ಅದರ ಮೇಲೆ ಟೋಪಿಕಲ್ಲು ಹೊದಿಸಲಾಗಿದೆ. ನೆಲಮಟ್ಟದಿಂದ ವೀಕ್ಷಿಸಿದರೆ ಬಲಭಾಗದ ಪ್ರಾಕಾರ ಗೋಡೆಯ ಎಡಭಾಗದ ಪ್ರಾಕಾರ ಗೋಡೆಗಿಂತ ಸ್ವಲ್ಪ ಎತ್ತರದಲ್ಲಿರುವುದು ಸ್ಪಷ್ಟವಾಗುತ್ತದೆ. ಪ್ರಾಕಾರದ ಪೂರ್ವ, ದಕ್ಷಿಣ ದಿಕ್ಕುಗಳಿಂದ ಪ್ರವೇಶಾವಕಾಶ ಕಲ್ಪಿಸಿದ್ದು, ಅಲ್ಲಲ್ಲಿ ಶಿಥಿಲವಾಗಿ ಟೋಪಿಕಲ್ಲುಗಳು ಕೆಳಗೆ ಬಿದ್ದಿರುತ್ತವೆ. ಬಳಸಿರುವ ಎಲ್ಲ ಛಾವಣಿ ಕಲ್ಲುಗಳು ಸಾಮಾನ್ಯವಾಗಿ ಮೇಲೆ ಹೇಳಲಾದ ಅಳತೆಯ ದಪ್ಪ ಮತ್ತು ಅಗಲವನ್ನು ಹೊಂದಿದ್ದು, ಉದ್ದ ಮಾತ್ರ ಲಭ್ಯತೆಯನ್ನನುಸರಿಸಿದೆ. ಕಾಡುಗೋಡಿ ಸುತ್ತಮುತ್ತಲಿನ ಪಟ್ಟಂದೂರು ಮತ್ತು ಹೂಡಿ ಪರಿಸರಕ್ಕೆ 'ಸಣ್ಣೆನಾಡು' ಎಂದು ಕರೆಯುತ್ತಿದಿದ್ದುದಾಗಿ ತಿಳಿದುಬರುತ್ತದೆ.[೧೪] ಕಾಡುಗೋಡಿಯ ಆರಾಧ್ಯದೈವ ಕಾಶಿ ವಿಶ್ವೇಶ್ವರನನ್ನು 'ರಾಜಾಧಿರಾಜ ಬಂಗೀಶ್ವರಂ', 'ವಂಗೀಶ್ವರಂ ಉದೈಯಾರ್' ಎಂಬುದಾಗಿ ಸಂಶೋಧಿಸಿದ ಅಂಶ ದೇವಾಲಯದ ಅಧಿಷ್ಠಾನದಲ್ಲಿರುವ ಶಾಸನಗಳಿಂದ ತಿಳಿದು ಬರುತ್ತದೆ. ಪಾರಜ್ವಾದಿ ಗೋತ್ರದ ದಾಮೋದರ ಚಾಮುಂಡನ್ ಎಂಬ ಶಿವಬ್ರಾಹ್ಮಣನು ರಾಜಾಧಿರಾಜ ಬಂಕೀಶ್ವರ ಮುಡಿಯ ಮಹಾದೇವರಿಗೆ ಮುಡಿಗುಂಡ, ಚೋಳ ಬ್ರಹ್ಮ ಮಾರಾಯನ್ ದತ್ತಿ ಬಿಟ್ಟಿರುವುದು; ಕಶ್ಯಪ ಗೋತ್ರದ ಕುಲತ್ತುಂಗ ಚೋಳ, ಸಣ್ಣೈನಾಟ್ಟು ಕುಲರಾಜರ್ ರಾಜಾಧಿರಾಜ ವಂಗೀಶ್ವರ ಮುಡಿಯಾರ್ ದೇವಸ್ಥಾನಕ್ಕೆ ೫೦೦ ಕುಳ ಭೂಮಿಯನ್ನು ಕಾಣಿಕೆ ಕೊಟ್ಟಿರುವುದು ಸ್ಪಷ್ಟವಾಗುತ್ತದೆ. ಕಾಡುಗೋಡಿ ಸ್ಮಶಾನದಲ್ಲಿರುವ ಶಾಸನದಲ್ಲಿ ಪೂರ್ವ ದೇಶವನ್ನು ಗಂಗೆಯನ್ನು ಗೆದ್ದಂತಹ ರಾಜೇಂದ್ರ ಚೋಳನ ಆಡಳಿತಾವಧಿಯ ೩೨ನೇ ವರ್ಷದಲ್ಲಿ ವಿಕ್ರಮ ಚೋಳಮಂಡಲದ ಸಣ್ಣೈನಾಡಿನ ಪೆರ್ಮಾಡಿ ಗಾವುಂಡನ ಮಗ ರಾಜರಾಜವೇಳಾನ್ ಪಟ್ಟಂದೂರು ಏರಿ ಕಟ್ಟಿಸಿ,, ೩ ತೂಬುಗಳನ್ನು ಇಟ್ಟು ದುರ್ಗಾದೇವಿ, ಕ್ಷೇತ್ರಪಾಲ ಮತ್ತು ಗಣಪತಿಯರನ್ನು, ಪ್ರತಿಷ್ಠಾಪಿಸಿ ಮಾಡಿಸಿದನೆಂದು ಹೇಳಲಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ, ಕಾಡುಗೋಡಿಯ ಕಾಶಿ ವಿಶ್ವೇಶ್ವರ (ಈಶ್ವರ) ದೇವಾಲಯವು ಗಂಗರಸರು ಕಟ್ಟಿಸಿದ ನಿರ್ಮಿತಿಯಾಗಿದ್ದು, ನಂತರದಲ್ಲಿ ಚೋಳರು ಜೀರ್ಣೋದ್ಧಾರ ಮಾಡಿರುವ ಪ್ರಸಂಗಗಳು ಕಂಡುಬರುತ್ತವೆ.

[ಕ್ಷೇತ್ರ ಕಾರ್ಯದಲ್ಲಿ ನನ್ನೊಂದಿಗಿದ್ದು, ತಲವಿನ್ಯಾಸ-ಅಧಿಷ್ಠಾನ-ಕಂಬ ಮಾದರಿಯ ವಿನ್ಯಾಸ ತಯಾರಿಸಿ ಮಾರ್ಗದರ್ಶನ ಮಾಡಿದ ಪೂಜ್ಯ ಗುರುಗಳಾದ ಡಾ. ಪಿ.ವಿ. ಕೃಷ್ಣಮೂರ್ತಿಯವರಿಗೆ ವಂದನೆಗಳು]

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್, ಬೆಂಗಳೂರು ಜಿಲ್ಲೆ, ೧೯೯೦, ಪುಟ ೯೬೦, ೯೬೧.
೨. ಎಪಿಗ್ರಾಫಿಯಾ ಕರ್ನಾಟಕ – IX, ಬೆಂಗಳೂರು ರೈಸ್ ಬಿ.ಎಲ್. ೧೮೯೪, ಪುಟ ೧೯.
೩. ಡೆಕ್ಕನ್ ಹೆರಾಲ್ಡ್ – 'ಸರ್ವೆ ಫಾರ್ ಪೆರಿಫೆರಲ್ ರಿಂಗ್ ರೋಡ್ ಸೂನ್' ದಿನಾಂಕ : ೨೪-೧-೨೦೦೪.
೪. ಶಂಭಾ ಜೋಶಿ, 'ಎಡೆಗಳು ಹೇಳುವ ಕಂನಾಡ ಕಥೆ' ಪುಟ ೬.
೫. ಚಿದಾನಂದಮೂರ್ತಿ ಎಂ., 'ಕರ್ನಾಟಕ ಸ್ಥಳನಾಮಗಳು' ವಾಗಾರ್ಥ, ಪುಟ ೧೪-೧೫.
೬. ಕಲಬುರ್ಗಿ ಎಂ.ಎಂ., 'ಧಾರವಾಡ ಗ್ರಾಮನಾಮ ವಿವೇಚನೆ' ಜಾನಪದ ಜಗತ್ತು, ಸಂ-೧, ೬, ಪುಟ ೧೯.
೭. ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಸಂ-೭, ೧೯೭೬, ಪು. ೧೬೯೫.
೮. ಅದೇ., ಪು. ೨೨೩೧.
೯. ಅದೇ., ಸಂ. ೩, ೧೯೭೭, ಪು. ೨೬೩೧.
೧೦. ಅದೇ., ೧೯೭೭, ಪು. ೨೬೩೨.
೧೧. ಡಾ. ದೇವರಕೊಂಡರೆಡ್ಡಿ, 'ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ', ಕನ್ನಡ ಸಾಹಿತ್ಯ ಪರಿಷತ್ತು, ೧೯೯೪, ಪು. ೫೩.
೧೨. ಕರ್ನಾಟಕ ಸ್ಟೇಟ್ ಗೆಸೆಟಿಯರ್ ಬೆಂಗಳೂರು ಜಿಲ್ಲೆ, ೧೯೯೦, ಪು. ೯೬೦-೯೬೧.
೧೩. ಡಾ. ದೇವರಕೊಂಡರೆಡ್ಡಿ, 'ತಲಕಾಡಿನ ಗಂಗರ ದೇವಾಲಯಗಳು' ಕ.ಸಾ.ಪ., ೧೯೯೪, ಪು. ೭೨.
೧೪. ಡಾ. ಪಿ.ವಿ. ಕೃಷ್ಣಮೂರ್ತಿ, 'ಬೆಂಗಳೂರು ಜಿಲ್ಲೆಯ ಪ್ರಾಚೀನ ಆಡಳಿತ ವಿಭಾಗಗಳು', ಇತಿಹಾಸ ದರ್ಶನ, ಸಂ. ೧.

ಡಾ. ಎಂ.ಜಿ. ನಾಗರಾಜ್*

# ಕೊಡಗಿನ ಆರಾಧನಾ ನೆಲೆಗಳು – ಆಚರಣೆಗಳು

ಪ್ರಾಗೈತಿಹಾಸಿಕವಾಗಿ ನೂತನ ಶಿಲಾಯುಗ, ಬೃಹತ್ ಶಿಲಾಯುಗದ ಅವಧಿಯಲ್ಲೂ ಆರಾಧನಾ ನೆಲೆಗಳಿದ್ದುವು. ಪಶ್ಚಿಮಘಟ್ಟಗಳ ಏರು ಒದಗುವ ಮುನ್ನ (೧೦ ಲಕ್ಷ ವರ್ಷಗಳ ಹಿಂದೆ) ತಲಕಾವೇರಿಯಂಥ ನೆಲೆಗಳು ಆರಾಧನೆಗೊಂಡು ಬಂದುವು. ಈ ಕಾಲದ ಮುಂದೆ ಇದಕ್ಕೆ ಮತ್ತಷ್ಟು ಸಾಕ್ಷ್ಯವಾಗಿ ಕೊಳತ್ತೋಡು, ಬೈಗೋಡುವಿನ, ನಿಲುವುಗಲ್ಲುಗಳಿದ್ದು, ಅವುಗಳಿಗೆ ಆ ಕಾಲಕ್ಕೆ ಏನು ಹೆಸರಿತ್ತೋ ತಿಳಿಯದು. ಇಂದಿಗೆ ಅಯ್ಯಪ್ಪ, ಸುಬ್ರಮಣ್ಯಗಳೆಂದು ಅವುಗಳಿಗೆ ಪೂಜೆ ನಡೆದಿದೆ. ಇಂಥ ಅನೇಕ ಉದಾಹರಣೆಗಳಿವೆ.





ಕೊಡಗಿನಲ್ಲಿ ನೆಲೆಗಳು ಆರಂಭಕ್ಕೆ ವೇದಿಕೆ, ಶಿಲೆ, ತ್ರಿಶೂಲ (ಅಂಶಾವತಾರ) ಬಳೆ, ವೃಕ್ಷ, ಕಿರುಮಂಟಪ, ಗುಡಿ, ದೊಡ್ಡ ದೇಗುಲ – ಈ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಪ್ರಾಗೈತಿಹಾಸಿಕ ಸಂಪ್ರದಾಯದ್ದೋ, ಪದ್ಧತಿಯದ್ದೋ ಆಗಿ ವೃತ್ತಾಕಾರದ ಕಲ್ಲುಗಳನ್ನು ಜೋಡಿಸಿಟ್ಟು, 'ಅಜ್ಜಿ ಬನ'ವೆಂದು



ಪೂಜಿಸುವುದು, ಸೋಮವಾರಪೇಟೆ ತಾ. ಯಡೂರಿನ ಸುಗ್ಗಿಕಟ್ಟೆ ಹಬ್ಬದ ಸಮಯದಲ್ಲಿ ಕಾಣಬರುತ್ತದೆ.

ದಕ್ಷಿಣ ಕೊಡಗಿನ ಇರ್ಪು ಜಲಪಾತದ ಬಳಿಗೆ ರಾಮೇಶ್ವರ ಗುಡಿಯ ಹಾದಿಯಲ್ಲಿರುವ ಮಂಚಳ್ಳಿ ಗ್ರಾಮದಲ್ಲಿ ಮುಚಲಿಂದ ನಾಗ, ಬುದ್ಧಪಾದ ಆವೃತ ನಾಗಹೆಡೆಯುಳ್ಳ ರೂಪದಲ್ಲಿ ಕಾಣಿಸಿಕೊಂಡಿದೆ. ಮಂಚಳ್ಳಿ ಗ್ರಾಮೀಣ ಜನತೆ ಇದನ್ನು 'ಮಕ್ಕಳ ಪಾದ' ಎಂದು ಪೂಜಿಸುತ್ತಾರೆ. ಜೊತೆಗೆ ಬೌದ್ಧ ಧರ್ಮದ 'ಮಾಯಾಜಾಲಕ್ರಮ ಅವಲೋಕಿತೇಶ್ವರ' ವಿಗ್ರಹವು ಇದ್ದು ಪ್ರಾಚೀನ ಪದ್ಧತಿಗಳ ಪೂಜಾ ಸಾಕ್ಷ್ಯಗಳಾಗಿ ಉಳಿದಿವೆ.

* ಅನರ್ಘ್ಯ, ಶ್ರೀ ಜಚನಿ ಕೃಪ, ೨೨೧, ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು – ೧೦

ಕಾವೇರಿ ಮಹಾತ್ಮೆಯ ಬಗ್ಗೆ ಸುಮಾರು ಮೂರು ಸಾವಿರ ವರ್ಷಗಳ ಹಿಂದೆಯೇ ಬಿದ್ದ ಕತೆ ಇದೆ. ಇದಕ್ಕೆ ಪೋಷಕವಾಗಿ ಕುಂಭಸಂಭವ ಅಗಸ್ತ್ಯನು ಆರ್ಯ ಸೋದರಿಂದ ಬಹಿಷ್ಕೃತನಾಗಿ ದ್ರಾವಿಡ ಪೂರ್ವ ಬುಡಕಟ್ಟುಗಳ ವಂಶಿಕರೊಡನೆ ದಕ್ಷಿಣ ಭಾರತದ ಪಶ್ಚಿಮ ಘಟ್ಟಗಳ ಕಡೆಗೆ ಕ್ರಿ.ಪೂ. ೧೦೭೫ರ ವೇಳೆಗೆ ಬಂದನೆನ್ನಲಾಗಿದೆ[೨]. ೧೧ನೇ ಶತಮಾನದ ವೀರಶೋಳಿಯನ ತಮಿಳು ವ್ಯಾಕರಣವು ಅಗಸ್ತ್ಯನು ಅವಲೋಕಿತೇಶ್ವರ (ಬೋಧಿಸತ್ವ) ನಿಂದ ಅರಿವು ಪಡೆದನೆಂದು ಹೇಳುತ್ತದೆ.[೩] ಇದರಿಂದ ಕಾವೇರಿ–ಅಗಸ್ತ್ಯರ ಸಂಬಂಧವನ್ನು ಸ್ಕಾಂದಪುರಾಣವೂ ನಿರ್ದೇಶಿಸುವಲ್ಲಿ ದೇವಿನೆಲೆಗೆ ಐತಿಹಾಸಿಕ ಸ್ಪರ್ಶ ಒದಗುತ್ತದೆ. ಕ್ರಿ.ಶ. ೧೦೦೧ರ ಮಡಿಕೇರಿ ಶಾಸನವು 'ಮೊದಲ್ಕಾವೇರಿಯಂ' ಎಂಬ ಶಬ್ದಗುಚ್ಛ ದಾಖಲಿಸುವಲ್ಲಿ[೪] ತಲಕಾವೇರಿಗೆ (ತೀರ್ಥೋದ್ಭವ ನೆಲೆ) ಅದು



ಅನ್ವಯವಾಗುವುದು ಸ್ಪಷ್ಟವಿದೆ. ೧೧ನೆಯ ಶತಮಾನದ ಮಾಲಂಬಿ ಶಾಸನವು 'ಕವೇರ ಕನ್ಯಕಾ' ಎಂಬ ಪದಗಳಲ್ಲಿ ಪೌರಾಣಿಕ ಪರಂಪರೆಯಲ್ಲಿ ಬರುವ 'ಕವೇರನ ಪುತ್ರಿ ಕಾವೇರಿ' ಎಂಬುದನ್ನು ದಾಖಲಿಸಿದೆ.[೫] ಇದು 'ಮಾರ್ಗ ಪುರಾಣ'ದಲ್ಲಿ ಮೂಡಿಬಂದ ಕತೆ. ಶಾಸನ ಶರೀರದಲ್ಲಿ ಹೊಕ್ಕ ಇತಿಹಾಸದ ಸ್ಪರ್ಶವನ್ನು ಆ ಸಮಕಾಲೀನಕ್ಕೆ ಹೊಂದಿದೆ. ಶಾಸನಗಳಲ್ಲಿ 'ಮೊದಲ್ಕಾವೇರಿ' ಎನಿಸಿದ ತಲಕಾವೇರಿಯಲ್ಲಿ ತೀರ್ಥೋದ್ಭವ ಇದು ಅಕ್ಟೋಬರ್ ಮಧ್ಯಭಾಗದ ಸುವಾರಿಗೆ ತುಲಾಸಂಕ್ರಮಣದಲ್ಲಿ ಸಂಭವಿಸುವ ಆರಾಧನೋತ್ಸವ. ಅದಕ್ಕೆ ಪೌರಾಣಿಕ ಪಾವಿತ್ರ್ಯದ ಅಡಕಗಳಿವೆ. ಸ್ಕಾಂದಪುರಾಣದಲಿ ಶಿವನ ವರದ ಕಾರಣ ಕೈಲಾಸದಿಂದ ಅಗಸ್ತ್ಯನ ಕಮಂಡಲುವಿನಲ್ಲಿ ತುಂಬಿಕೊಂಡ ಕಾವೇರಿ, ಕೊಡಗಿನಲ್ಲಿ ಅದರಿಂದ ಉಕ್ಕಿಬಂದವಳು. ಅಂತೇ ಆ ನೆಲೆ ಕಾವೇರಿ ಕುಂಡಿಕೆ ಎಂದಾಯ್ತು. ಅಗ್ನಿಪುರಾಣದ ರೀತ್ಯಾ ಆಕೆ ಬ್ರಹ್ಮದೇವರ ಮಾನಸ ಪುತ್ರಿ ಲೋಪಾಮುದ್ರೆ ಎನಿಸಿದವಳು, ಕವೇರನಿಂದ ಸಲಹಲ್ಪಟ್ಟು ಕಾವೇರಿ ಎನಿಸಿದಳು. 'ಮೂಲಕಾವೇರಿ ಪಾಟ್' ಮೇಲೆ ಈ ಪುರಾಣದ ಕತೆ ಪ್ರಭಾವ ಬೀರಿದೆ. ಹೀಗಾಗಿ ಕಾವೇರಿ ತೀರ್ಥ ಕುಂಡಿಕೆ ಸರ್ವಾರಾಧನೆಯ ನೆಲೆ ಆಗಿದೆ. ಅಗಸ್ತ್ಯೇಶ್ವರ ದೇಗುಲವೂ ಅಲ್ಲಿದೆ. ಸಂಗಂ ಸಾಹಿತ್ಯದಲ್ಲಿಯೂ 'ಕವೇರ ಪುತ್ರಿ ಕಾವೇರಿ' ಎಂಬಿದ್ದು, ಪವಿತ್ರ ದೇವಿಯ ನೆಲೆಯನ್ನು ಸೂಚಿಸಲನುಕೂಲವಾಗಿದೆ. ಗಂಗೆಯೂ ಹಿರಿಯಳಾದ ಪವಿತ್ರ ಕಾವೇರಿಯ ಮಹಿಮೆಯನ್ನು ತ್ರಿಗುಣಿ ಎಂಬ ಬ್ರಾಹ್ಮಣಸಿಗೆ ಹೇಳಿದ ಕುರಿತು ಸ್ಕಾಂದಪುರಾಣ ತಿಳಿಸುತ್ತದೆ.

ಕೊಡಗಿನ ಮೂಲನಿವಾಸಿ ದಲಿತ ವರ್ಗದ ಕೆಂಬಟ್ಟಿ ಜನಾಂಗದವರ 'ದೇಸಿ ಪುರಾಣ'ದಲ್ಲಿ ಕವೇರ ಪುತ್ರಿ ಕಾವೇರಿಯನ್ನು ಸ್ಪರ್ಧೆಯಲ್ಲಿ ಗೆದ್ದು 'ಹೂಮದುವೆ' (ಬಿಳಿ ಹೂ ಬಂದು ಶುಭಸಮ್ಮತಿ ದೊರಕಿದ ಸರಳ ವಿವಾಹವಾಗಿದೆ. ಹಾಗೂ ಕೆಂಬಟ್ಟಿಗಳ ಸರಳ ಬದುಕಿನ ಕತೆಯಂತಿದೆ) ಮಾಡಿಕೊಂಡ ಕತೆ ಬಂದಿದೆ ಅದಾಗಿ ತಲಕಾವೇರಿ ಅವರಿಗೆ ಪೂಜನೀಯ ನೆಲೆ.

ತೀರ್ಥೋದ್ಭವದ ದಿನ ಅಥವಾ ಮಾರನೆ ದಿನ ತಲಕಾವೇರಿಯಿಂದ ತೀರ್ಥ ತಂದು ಕುಂದದಯಪ್ಪನಿಗೆ (ಗೋಣಿಕಪ್ಪ–ಕೈಕೇರಿ ಬಳಿಯ ಕುಂದಬೆಟ್ಟದ ಮಹಾದೇವ ಶಿವಲಿಂಗರೂಪಿಯಾದ ಇವನು ಶಾಸ್ತಾವು ಅಯ್ಯಪ್ಪನಲ್ಲ.)





ಅಭಿಷೇಕ, ಪೂಜೆ, ಜಾತ್ರೆ, ಕುದುರೆ ಬೋಡುಕಳಿ (ಬಿದಿರು ಕುದುರೆ ಹೊತ್ತು ಮಾಡುವ ಜನಪದ ಕುಣಿತ) ಬೆತ್ತಲೆ ಕಳಿ (ಶರೀರಕ್ಕೆ ಸೊಪ್ಪು ಸುತ್ತಿಕೊಂಡ ವೇಷ) ಇತ್ಯಾದಿ ಜನಪದ ಕಲೆಗಳ ಪ್ರದರ್ಶನ ಸೇವೆ ನಡೆಯುತ್ತದೆ. ಈ ಕುಂದದಯ್ಯಪ್ಪನಿಗೆ ಕ್ರಿ.ಶ. ೧೮೫೪-೫೭ರ ಅವಧಿಯಲ್ಲಿ ಕುಂದಗ್ರಾಮದ ಜಾಹಗೀರ್‌ದಾರ್ ಹಯಾತ್‌ಕಾನ್ ಎಂಬಾತನೂ ದೇಗುಲ ಜೀರ್ಣೋದ್ಧಾರಕ್ಕೆ ನೆರವಾದ ವಿಷಯ ಶಾಸನೋಕ್ತವಾಗಿದೆ (ಎ.ಕ.ಸಂ. ೧, ಕೊಡಗು ಜಿಲ್ಲೆ ೯೯, ಕುಂದ, ವಿರಾಜಪೇಟೆ ತಾಲ್ಲೂಕು) ವಿಶೇಷವೆಂದರೆ ಇಲ್ಲಿ ವರ್ಷದ ಕುದುರೆ



ಬೋಡುಕಳಿ ಈ ಜಾತ್ರೆಯಲ್ಲಿ ಆರಂಭವಾದ ಮೇಲೆಯೆ ಇಡೀ ಕೊಡಗಿನಲ್ಲಿ ಮುಂದಿನ ೮ ತಿಂಗಳು ನಡೆಯುವ ಕುದುರೆ ಬೋಡುಕಳಿ, ಹಬ್ಬಗಳಿಗೆ ನಾಂದಿ ಬೀಳುತದೆ. ಆನಂತರ **ಪಾರಣಮಾನಿ** ಎಂಬಲ್ಲಿ ಜೂನ್ ೧, ೨ರಂದು ನಡೆಯುವ ಹಬ್ಬದಲ್ಲಿ ಮುಕ್ತಾಯ ಕಾಣುತ್ತದೆ. ಹೀಗಾಗಿ 'ಕುಂದತ್ ಬೊಟ್ಟಲ್ ನೇಂದ ಕುದುರೆ ಪಾರಣ ಬೋಡಲ್ (ಮಾನಿಲ್) ಅಳಂಜ ಕುದುರೆ' (ಕುಂದ ಬೆಟ್ಟದಲ್ಲಿ ಎದ್ದ ಕುದುರೆ ಎಲ್ಲ ಕಡೆ ತಿರುಗಿ ಪಾರಣಮಾನಿ ಗದ್ದೆ ಮೈದಾನದಲ್ಲಿ ೮ ತಿಂಗಳ ನಂತರ ಬಿದ್ದುಹೋಗುತ್ತದೆ ಕಡಿಯುತ್ತಾರೆ.) ಎಂಬ ಗಾದೆಯೇ ಇದೆ.

ಚೌಡ್ಲು ಗ್ರಾಮದ ಸುಗ್ಗಿ ಕಟ್ಟೆ (ಮಂಟಪ) ಹಬ್ಬದ ಸಮಯದಲ್ಲಿ ಅದಕ್ಕೆ ಸೇರಿದ ಕಲಕಂದೂರು ಸಮೀಪದಲ್ಲಿ 'ಅಜ್ಜಿಬನ'ದ ಪೂಜೆ ಮಾಡುತ್ತಾರೆ. ಅಲ್ಲಿ ವೃತ್ತಾಕಾರದಲ್ಲಿ ಶಿಲೆಗಳ ರಾಸಿ ಇದ್ದು ಮಧ್ಯೆ ತುಸು ತಗ್ಗು ನೆಲೆ ಇದೆ. ಸುಮಾರು ಎರಡು ಅಡಿ ಎತ್ತರದ ಶಿಲೆಗಳು ಕಿರುಗುಡಿ ಬಾಗಿಲಿನ ಸ್ತಂಭದಂತಿವೆ. ಈ ನೆಲೆಯ ಎಲ್ಲ ಶಿಲೆಗಳಿಗೆ ಭಸ್ಮಲೇಪನ, ಹರಿಶಿನ ಕುಂಕುಮ, ಪುಷ್ಪಗಳನ್ನು ಹಾಕಿ, ನಾಲ್ಕು ಸೊಡ್ಲು (ಸೊಡರು)ಗಳನ್ನು ಹಚ್ಚುತ್ತಾರೆ. ಈ ಅಜ್ಜಿಬನದ ಶಿಲಾರಚನೆ ವಾಸ್ತವವಾಗಿ ಪ್ರಾಗೈತಿಹಾಸ ಕಾಲದ 'ಪ್ಯಾಸೇಜ್ ಚೇಂಬರ್ ಟೂಂಬ್' ಅನ್ನು ಹೋಲುತ್ತದೆ. ಅಂದರೆ ಪ್ರಾಗೈತಿಹಾಸ ಕಾಲದ ನೆಲೆಯೊಂದು ಇಂದಿಗೂ ಸಾಂಸ್ಕೃತಿಕ – ಧಾರ್ಮಿಕ ಆಚರಣೆಯ ಮೂಲಕ ಪೂಜೆಗೊಳ್ಳುವ ಆರಾಧನಾ ನೆಲೆಯಾಗಿರುವುದು ವಿಶೇಷ. ವಾರ್ಷಿಕವಾಗಿ ಈ ಹಬ್ಬ ನಡೆಯುವಲ್ಲಿ ಹಿರಿಯರ ಸಂಸ್ಮರಣಾ ಪೂಜಾ ನೆಲೆಯಂತೆ ಕಂಡುಕೊಂಡಿರುವುದು ಗಮನಾರ್ಹ. ಯಡೂರಿನ ಅಜ್ಜಿ ಬನದಲ್ಲಿ ಕಲ್ಲುಗಳ ರಾಶಿಗೆ ಪ್ರಾರ್ಥನೆ, ಪೂಜೆ ಸಲ್ಲುತ್ತದೆ ; ಹಾಗೂ ಆ ರಾಶಿಗೆ ಒಂದೊಂದು ಕಲ್ಲನ್ನು ಪೇರಿಸುತ್ತಾ ಹೋಗುತ್ತಾರೆ. ಅಲ್ಲಿ ವೀರಗಲ್ಲುಗಳನ್ನು ಸಾಲು ಚೌಕಾಕಾರವಾಗಿ ನಿಲ್ಲಿಸಿಟ್ಟು 'ಮಾಳದ ಪೂಜೆ'ಯನ್ನು ಆಚರಿಸುತ್ತಾರೆ. ಇದು ಪ್ರಾಗೈತಿಹಾಸ ಕಾಲದ ನಿಲುವುಗಲ್ಲಿನ ಇತಿಹಾಸ ಕಾಲದ ರೂಪವಾಗಿ ಕಂಡುಬರುವಂತಿದೆ.

'ಹೆದ್ದೇವರ ಬನ'ದಲ್ಲಿ ಹೆದ್ದೇವರ ಪೂಜೆ ಎಂದು ಸಿಲಿಂಡರಾಕಾರದಲ್ಲಿ ಹುತ್ತದ ಆಕೃತಿಗಳಿಗೆ ಪೂಜೆ ಸಲ್ಲಿಸುವುದೂ ಚೌಡ್ಲುವಿನ ಸುಗ್ಗಿಕಟ್ಟೆ ಹಬ್ಬದ ಸಮಯದಲ್ಲಿ ನಡೆಯುತ್ತದೆ. ಸುಗ್ಗಿಕಟ್ಟೆ ಹಬ್ಬದಲ್ಲಿ ತಲ್ತರೆ ಶೆಟ್ಟಳ್ಳಿ, ಶಾಂತಳ್ಳಿಯಲ್ಲಿಯೂ 'ಹೆದ್ದೇವರ ಬನದಲ್ಲಿ ಪೂಜೆ ಕೊಡುತ್ತಾರೆ. ಗಮನಾರ್ಹವಾಗಿ ಶಾಸನೋಕ್ತ ಹೆದ್ದೇವರ (ಪೆದ್ದೇವರ) ಉಲ್ಲೇಖ ಕ್ರಿ.ಶ. ೧೦೯೫ರ ದೊಡ್ಡ ಮಳತೆ (ಪ್ರಾಗೈತಿಹಾಸಿಕ ನೆಲೆ)ಯ ಹೊಸ ಶಾಸನದಲ್ಲಿ ಕಂಡುಬಂದಿದೆ.

ದುದ್ದನಾಯಕ ಎಂಬವನು ಕೊಡಗಿನ ಕದಂಬ ದುದ್ದರಸನ ಪರ ಚೆಂಗಾಳ್ವರ ವಿರುದ್ಧ ಹೋರಾಡುವಲ್ಲಿ ಸತ್ತ. ಆ ವೀರನಿಗೆ ಪರೋಕ್ಷ ವಿನಯದಲ್ಲಿ ಪುಣ್ಯವಾಗಲೆಂದು ದುದ್ದರಸನ ಬಂಧು ಗೋವರಸನು ಪೆದ್ದೇವರ ಬನದಲ್ಲಿ ವೀರಗಲ್ಲು ನಿಲ್ಲಿಸಿದ ವಿಷಯವು ಉಕ್ತವಾಗಿದೆ.[೬] ಅಂದರೆ ಹುತ್ತದ ದೇವರ ಬನವು, ನಾಗಾರಾಧನೆ ಹಾಗೂ ವೀರರಾಧನೆಯ ನೆಲೆ ಆಗಿತ್ತು ಎಂಬ ಸೂಚನೆ ಇಲ್ಲಿ ಕಾಣುತ್ತದೆ.

ಕೊಡಗಿನ ದೊಡ್ಡ ಮಳತೆ ಹೇಳಿ ಕೇಳಿ ಪ್ರಾಗೈತಿಹಾಸಿಕ ಸಮಾಧಿಗಳನ್ನೊಳಗೊಂಡ ನೆಲೆ. ಹೀಗಾಗಿ ಪ್ರಾಗೈತಿಹಾಸಿಕ ಹಿನ್ನೆಲೆಯ ಜಾನಪದ ಆಚರಣೆಯೊಂದು ಹೆದ್ದೇವರ ಬನ ಪೂಜೆಯ ಮೂಲಕ ಅಸ್ತಿತ್ವಗೊಂಡಿರುವುದು ಇಲ್ಲಿ ಕಾಣುತ್ತದೆ. ವೀರವನವೊಂದು ಇಲ್ಲಿರುವ ಸೂಚನೆಯೂ ಸಿಗುತ್ತದೆ. ಬಹುಶಃ 'ದುದ್ದಮಳತೆ' ಮೊದಲಿನ ಹೆಸರಾಗಿದ್ದು ದುದ್ದನಾಯಕನ ಹೆಸರಿನಲ್ಲಿ ರೂಪುಗೊಂಡಿದ್ದು ಕಾಲಾಂತರದಲ್ಲಿ 'ದೊಡ್ಡ ಮಳತೆ' ಎನಿಸಿರುವಂತಿದೆ. ಹುತ್ತರಿ ಹಬ್ಬದಲ್ಲಿ ಹೊಸ ಕದಿರನ್ನು ಹೆದ್ದೇವರಿಗೆ ಬನದಲ್ಲಿಟ್ಟು ಗೌಡ ಜನಾಂಗದವರು ಪೂಜೆ ಮಾಡುತ್ತಾರೆ. ಸುಗ್ಗಿಕಟ್ಟೆಯ ಸಬತಾಯಿಗೆ ಪೂಜೆ (ಸಪ್ತಮಾತೃಕೆಯರು) ಹಾಗೂ ನಾಗಪೂಜೆಯು ಇಲ್ಲಿ ನಡೆಯುತ್ತದೆ.

ಚೌಡ್ಲು ಗ್ರಾಮದ ಚೌಡ್ಲಯ್ಯನ ಕಲ್ಲು ಕೊಂಗಾಳ್ವರ ಕ್ರಿ.ಶ. ಸು. ೧೧೮೬ರ ಕಾಲದ ರಾಣಸೋಕ್ಕ ವೀರಗಲ್ಲು ಇದೆ. ವರ್ಷ ಬಿಟ್ಟು ವರ್ಷದಲ್ಲಿ ಈ ನೆಲೆಯಲ್ಲಿ 'ಹರಿಸೇವೆ' ನಡೆಸುತ್ತಾರೆ. ಒಂದು ವರ್ಷ ಸುಗ್ಗಿ ದೇವರ ಹಬ್ಬ, ಮರುವರ್ಷ ಹರಿಸೇವೆ. ಆಯಾ ವರ್ಷದ ವಾರ್ಷಿಕ ಜನಪದ ಹಬ್ಬ, ಹಿರಿಯ ಪೂಜೆಯೊಂದಿಗೆ ಅಡಕಗೊಂಡಿವೆ. ನಗರೂರು ಸುಗ್ಗಿಕಟ್ಟೆಯು ಚೌಡ್ಲುವಿಗೆ ಸಂಬಂಧಗೊಂಡಿದೆ. ಕುಮಾರಹಳ್ಳಿ, ನಗರಹಳ್ಳಿ, ಹುಲುಕೋಡು-ಕಿತ್ತೂರು ಸುಗ್ಗಿಸ್ತಂಭಗಳ ಬಳಿ ಹಬ್ಬದ ಸಂದರ್ಭದಲ್ಲಿ ಸಬತಾಯಿ, ಭದ್ರಕಾಳಿ ಮುಖವಾಡವಿಟ್ಟು ಪೂಜಿಸುತ್ತಾರೆ. ಈ ಸಂದರ್ಭದಲ್ಲಿ ದೇವರ ಅಭರಣದ ಸಾಮಾನುಗಳನ್ನು ಇಟ್ಟು ಸ್ತಂಭಗಳ ನಡುವೆ ತೊಟ್ಟಿಲಿನಲ್ಲಿಟ್ಟು 'ಸುಗ್ಗಿಯಮ್ಮ' ಮುಖವಾಡಕ್ಕೆ ಪೂಜೆ ಮಾಡುತ್ತಾರೆ. ಚೌರಿಗೆ ಕೊಡುವುದು, ಜೀರೇದೇವರಿಗೆ ಪೀಳಿ ಚೆಲ್ಲುವುದು, ಕೆಂಡ ತುಳಿಯುವುದು, ಊಲು ಏರಿಸುವುದು.



ಹೊನ್ನಾರು ಉತ್ಸವ, **ಬಿಲ್ಲು ಸುಗ್ಗಿ**, ಮಲ್ಲು ಸುಗ್ಗಿ, ಹಗಲು ಸುಗ್ಗಿ, ಮಡೆ, ಓಕುಳಿ, ಕೇಲುಪೂಜೆ (ಗಂಗೆ ಮಡಿಕೆ ಪೂಜೆ) ಎಣ್ಣೆಮಜ್ಜನ, **ಮಡಕೆ ಸೊಡ್ಲು** ಇತ್ಯಾದಿ ಜನಪದ ಆಚರಣೆಗಳು ನಡೆಯುತ್ತವೆ. ಇದು ಉತ್ತರ ಕೊಡಗಿನಲ್ಲಿ ಹೆಚ್ಚು ಪ್ರಚಲಿತ.

ದಕ್ಷಿಣ ಕೊಡಗಿನಲ್ಲಿ ಬೆಕ್ಕೆ ಸೊಡ್ಲೂರಿನ [ಸ್ಥಳನಾಮವೆ (ಸೊಡ್ಲು>ಸೊಡಲು>ಸೊಡರು) ದೀಪವಿಟ್ಟು ಪೂಜಿಸುವ ಆರಾಧನಾ ಸ್ಥಳ ಎಂದು ಸೂಚಿಸುತ್ತದೆ] 'ಮಂದತವ್ವನ ಮಂದ್'ನಲ್ಲಿ ಆಡುವ ಹುತ್ತರಿ ಕೋಲಾಟವು ದೇವಿಗೆ ಅರ್ಪಿಸುವ ರಂಜನಾ ಭಕ್ತಿಯೆನಿಸುತ್ತದೆ. ಮಂದತವ್ವ ಎಂದರೆ ಪಾರ್ವತಿಗೆ ಅನ್ವಯ. ಈ ಮಂದತವ್ವ ಕಮಲದ ಪಿಡಾವಣೆಯ ಏಕಸ್ತಂಭದ ರೂಪದಲ್ಲಿದ್ದಾಳೆ. ಆರಾಧನೆಯ ಸಂದರ್ಭದಲ್ಲಿ ಕುದುರೆ ಬೋಡುಕಳಿ (ಬಿದುರು ಕುದುರೆ ಹೊತ್ತ ವೇಷ ತೊಟ್ಟು ಆಡುವ ಕುಣಿತ) ಪಾರಕುಂಞಿ (ಹರಕೆ ಕೋಳಿಮರಿ ಹಾರಿಸುವುದು) ಇತ್ಯಾದಿ ಜನಪದ ಆಚರಣೆಗಳು ನಡೆಯುತ್ತವೆ.

ಉತ್ತರ ಕೊಡಗಿನಲ್ಲಿ ಅಜ್ಜಿಬನ, ಮಾಳದ ಹಬ್ಬ, ರಾಶಿಗಲ್ಲು ಹಿರಿಯರ ಆರಾಧನಾ ನೆಲೆಗಳಾದರೆ, ದಕ್ಷಿಣ



ಕೊಡಗಿನಲ್ಲಿ ಅವು ಕೈಮಡ (ಮನೆತನ ಸ್ಥಾಪಕನ ಸ್ಮಾರಕ ಕಟ್ಟಡ ಯಾನೆಲೆ)ಗಳ ಸ್ವರೂಪದಲ್ಲಿ ಸಣ್ಣ ಚೌಕಾಕೃತಿ ಕಟ್ಟಡಗಳ ಸ್ವರೂಪದಲ್ಲಿ ಕಾಣಬರುತ್ತವೆ. ಬಾಳೆಲೆ ಬಳಿಯ ಕೊಟ್ಟಗೇರಿಯ **ಮಾಚಂಗಳ ಮನೆತನದ ವೀರಮಾಸ್ತಿ ಕೈಮಡದಲ್ಲಿ** ಸಾತ್ವಿಕಾಹಾರ ನೈವೇದ್ಯವಿಟ್ಟು ಪೂಜೆ ನಡೆಸಲಾಗುತ್ತದೆ. ಸಾಲು ಸಮಾಧಿ ಶಿಲಾಪ್ರತೀಕಗಳಾದ 'ಕಲ್ಲಂದರೆ'ಗಳೂ ಹೀಗೆಯೇ ಆರಾಧನಾ ನೆಲೆಗಳಾಗಿ, ಕುಮಟೂರು, ಕೊಟ್ಟಗೇರಿಯಲ್ಲಿ ಕಾಣಬರುತ್ತವೆ ; ಲಿಂಗದ (ಬಾಣ ಭಾಗ) ರೂಪದಲ್ಲಿಯೂ ಅವು ಇರುತ್ತವೆ.

ಉತ್ತರ ಕೊಡಗಿನ ಹೆಗ್ಗಡೆಮನೆ ಬಳಿ ಪುಷ್ಪಗಿರಿಗೆ ಹೋಗುವ ಹಾದಿಯಲ್ಲಿ ಪೇರಿಕೆ ಕಲ್ಲುಗಳ ಕಲ್‌ಗೋಪುರ ಹಾಗೂ ಬುಡ ಗೂಡುಗಳನ್ನು ಹೊಂದಿರುವಂಥ ಮಾನವ ರೂಪಿತ ಕಲ್ಲುಪೇರಿಕೆಯ ನಿಲುಗಲ್ ಮನೆಗಳು ಪಟ್ಟೆಪಾರಿ ಬಂಡೆಯ ಮೇಲಿವೆ.





ಅಚ್ಚರಿ ಎಂದರೆ ಮಧ್ಯ ಪ್ರದೇಶದ ಕುಜರಾಹೋದಲ್ಲಿ ೧೦–೧೧ನೇ ಶತಮಾನದಲ್ಲಿ ಆಳಿದ ಹಿಂದೂ ದೊರೆ ವಂಶದ ಚಾಂದೇಲರು ವೇದಿಕೆಗಳ ಮೇಲೆ ನಿರ್ಮಿಸಿರುವ ಲಕ್ಷ್ಮಣ, ವಿಶ್ವನಾಥ ದೇಗುಲಗಳು ಇಂಥದೇ ಆಕಾರಗಳಲ್ಲಿ ಕಲಾತ್ಮಕ ಶೈಲಿಯಲ್ಲಿ ಶಾಸ್ತ್ರೀಯ ರೂಪಾಂತರಗಳೊಡನೆ ನಿರ್ಮಾಣಗೊಂಡಿರುವುದಾಗಿದೆ. ಅವುಗಳಲ್ಲಿ ಅಧಿಷ್ಠಾನದ ಮೇಲೆ ಕೋನಾಕಾರದ ಮೊನಚುಗಳ ಭಿತ್ತಿ ಸುತ್ತುವರಿದಿದ್ದು ಮೇಲೆ ಸಾಗುತ್ತ ರಾಶಿ ಗೋಪುರಗಳು ಹಿಂಬದಿಗೆ ನೀಳ ರೇಖಾನಾಗರ ಶೈಲಿ ಗೋಪುರವು ಎತ್ತರವಾಗಿ ನಿಂತಿರುವುದು, ಮುಂಬದಿಯಲ್ಲಿ ಪ್ರವೇಶ ದ್ವಾರವು ಗುಡಿಗೆ ಪ್ರವೇಶವಾಗುವಂಥ ಭಾವನೆಯನ್ನು ತರುವುದಾಗಿದೆ. ಅಂದರೆ ಪ್ರಾಗೈತಿಹಾಸಿಕ ಬುಡಕಟ್ಟು ಪದ್ಧತಿಯ ರಚನೆಯೊಂದು ಕಾಲಾಂತರದ ದೇಗುಲದ ವಿವಿಧ ಕಲಾತ್ಮಕ ವಿನ್ಯಾಸಗಳಿಗೆ ಪ್ರೇರಣೆ ನೀಡಿರಬೇಕು ಎಂಬುದಕ್ಕೆ ಸಾಕ್ಷಿಯಾಗಿ ಹೆಗ್ಗಡೆಮನೆ ಗ್ರಾಮದ ಬಳಿಯ ಪಟ್ಟೆದಾರಿ ಬಂಡೆಯ ಮೇಲಿನ ನಿಲುವುಗಲ್ ಗೂಡು ಮನೆಗಳ ರಚನೆಗಳು, ಸಾಕ್ಷಿಯಾಗಿವೆ. ಶೃಂಗೇರಿಯ ವಿದ್ಯಾಶಂಕರ ದೇಗುಲದ ಮುಂಬದಿ, ಹಿಂಬದಿ ರಚನೆಗಳು ಪಟ್ಟೆಪಾರಿ ಬಂಡೆಯ ರಚನಾ ಸ್ವರೂಪವನ್ನು ಹೋಲುತ್ತ ಶಾಸ್ತ್ರೀಯ ಮಾರ್ಪಾಟುಗೊಂಡಿರುವಂತಿವೆ.

ನಾಗರಹೊಳೆಗೆ ಚಂಗಾಳ್ವ ನಾಗರಾಜನ (ಕ್ರಿ.ಶ.ಸು. ೧೪೦೦) ಕುಂತೂರು ಅವನ ಆಳ್ವಿಕೆಯ ನೆಲೆಯಾಗಿ ಆ ಹೆಸರಿನಲ್ಲಿತ್ತು. ಅವನು ಬಹಳ ಜನಪ್ರಿಯ ದೊರೆ ಆಗಿದ್ದ. ಜನಪದ ಅವನ ನಂತರ ಕುಂತೂರಿಗೆ ನಾಗನಹೊಳೆ (>ನಾಗರಹೊಳೆ, ಅಲ್ಲಿ ಆ ಹೆಸರಿನಲ್ಲಿ ಹೊಳೆ ಹರಿಯುತ್ತದೆ) ಎಂಬ ಹೆಸರಿಟ್ಟು ಸ್ಮರಿಸಿದರು. ಬುಡಕಟ್ಟು ಜನಾಂಗವಾಗಿ ಜೇನು ಕುರುಬರು, ಬೆಟ್ಟ ಕುರುಬರ 'ಅಮ್ಮಾಳೆಗುಡಿ' ಎಂಬ ಹೆಸರಿಟ್ಟು ನಾಗರಹೊಳೆ ಅರಣ್ಯದಲ್ಲಿ ಕಟ್ಟಿದ ಆಯತಾಕಾರದ ಮನೆಯಲ್ಲಿ ನಾಗರಾಜನ ಆಸ್ಥಾನ ಶಿಲ್ಪವನ್ನು ಇಂದಿಗೂ ಪೂಜಿಸುತ್ತ ಬಂದಿದ್ದಾರೆ. ವಿಶೇಷವೆಂದರೆ ಗುಡಿಯ ಹೊರಭಿತ್ತಿಯ ಮೇಲೆ ಪ್ರಾಗೈತಿಹಾಸಿಕ ಕಾಲದ ಚಿತ್ರರೂಪಗಳನ್ನು ಸೂರ್ಯ, ಮನುಷ್ಯ, ಜರಿಗಿಡದ ಎಲೆಗಳು, ಹಸ್ತ ನೀಳ ಜಡೆಯಂಥ ರಚನೆಗಳನ್ನು ಬಿಡಿಸಿ ಹಬ್ಬ ಆಚರಿಸಿ ಪೂಜಿಸುತ್ತಾರೆ. ಕೊಡಗಿನ ಹುತ್ತರಿ ಹಬ್ಬದಲ್ಲಿಯೂ ಹೊರಗೆ ಮನೆಯ ಗೋಡೆ, ಬಾಗಿಲುಗಳ ಮೇಲೆ ಹಸ್ತದ ಬಣ್ಣದ ಮುದ್ರೆಯನ್ನು ಒತ್ತುವುದು ಪ್ರಾಗೈತಿಹಾಸಿಕ ರೂಢಿಯ ಆಧುನಿಕ ಮುಂದುವರಿಕೆಯಂತಿದೆ. ಹೀಗೆಯೇ ಪ್ರಾಗೈತಿಹಾಸಿಕ 'ರಿಚುಯಲ್ ಪೋಲ್', ಕೊಡಗಿನಲ್ಲಿ 'ಕಲ್ಲುಬೋಟ' (ಶಿಲ್ಪಗೆತ್ತನೆಯ ಸ್ತಂಭ ಪೂಜಾಚರಣೆಗಳಿಗೆ ಮೀಸಲು)ಯ ಸ್ವರೂಪದಲ್ಲಿ ಕಾಣಬರುತ್ತದೆ. ಸಾಮಾನ್ಯವಾಗಿ ಹಿರಿಯರು ಕಟ್ಟಿದ ಭಕ್ತಿ ಆದರಗಳಿಗೆ ನೆಲೆಯೂ ಆದ ಐನ್ ಮನೆಯ (ಅಯ್ಯನ ಮನೆ) ಮುಂದಿನ ಅಂಗಳದಲ್ಲಿ ಒಂಟಿಯಾಗಿ ಅಥವಾ ಸಾಲಾಗಿ ಇವು ಕಾಣಬರುತ್ತವೆ. ಅರಮೇರಿಯಲ್ಲಿ ಇವುಗಳ ಬಳಿ ಹರಕೆಯಾಗಿ ದೇವರಿಗೆ ಎತ್ತುಗಳ ಮೇಲಿನ ಇಬ್ಬದಿ ಚೀಲಗಳಲ್ಲಿ (ಕವುಂದಿ) ಅಕ್ಕಿ ತೆಂಗು ಬೆಲ್ಲ ಇತ್ಯಾದಿ ವಸ್ತುಗಳನ್ನಿಟ್ಟುಕೊಂಡು ಹೋಗುವಲ್ಲಿ **'ಎತ್ತುಪೋರಟ'** ನಿಲ್ಲಿಸಿ ಪೂಜಿಸಿ ಸಾಗುತ್ತಾರೆ. ಹುತ್ತರಿ ಹಬ್ಬಗಳಲ್ಲಿ ಇವನ್ನು ಕಣಸ್ತಂಭವಾಗಿ ಪೂಜಿಸುವುದುಂಟು. ಕಳತ್‌ಮಾಡು ಗ್ರಾಮದಲ್ಲಿ



ಕರ್ಪೋಟಿಯ ತುದಿ ಕಾಲುಭಾಗಕ್ಕೆ ಹುಲ್ಲಿನ ಕೊಂಬು ಮಾಡಿ ಕಟ್ಟಿ ಕಣದ ಸಮಯದಲ್ಲಿ ಧಾನ್ಯದ ಹಬ್ಬ ಮಾಡಿ ಪೂಜಿಸುತ್ತಾರೆ. ದಲಿತ ಕೆಂಬಟ್ಟಿಗಳೂ ಇಲ್ಲಿಗೆ ಬಂದು ಪೂಜೆ ಕೊಡುತ್ತಾರೆ. ಗಾಳಿಬೀಡು ಭದ್ರಕಾಳಿ ಹಬ್ಬದಲ್ಲಿ ತಲೆಗೆ ಹುಲ್ಲಿನ ಕೊಂಬು ಕಟ್ಟಿ ದೇಗುಲದ ಸುತ್ತ ಕುಣಿದು ಬರುತ್ತಾರೆ.[1] ಇದು ಮಾನವರೂಪಿ ಚರಸ್ತಂಭಗಳ ಪ್ರಾಗೈತಿಹಾಸಿಕ ಧಾರ್ಮಿಕ ಆರಾಧನಾ ಪದ್ಧತಿಯ ಸಂಕೇತವಾಗಿ ಕಾಣುತ್ತದೆ. ಹೀಗೆ ಪ್ರಾಗೈತಿಹಾಸಿಕ ಆರಾಧನಾ ಪದ್ಧತಿಗಳು ಕೊಡಗಿನಲ್ಲಿ ವರ್ತಮಾನದ ಮಾರ್ಪಾಟುಗಳನ್ನು ಮಾಡಿಕೊಂಡು, ವಿವಿಧ ಆರಾಧನಾ ನೆಲೆಗಳಲ್ಲಿವೆ.

ಹಿರಿಯರ ಸ್ಮಾರಕ ಕಟ್ಟಡಗಳಾದ ಕೈಮಡಗಳೂ, ಸಮಾಧಿ ಗದ್ದುಗೆಗಳು ವಾರ್ಷಿಕ ಪೂಜಾರಾಧನೆ, ಸಾಂಸ್ಕೃತಿಕ ಜನಪದ ಕಲೆಗಳೊಡನೆ ಕೂಡಿ ಆರಾಧನೆಗೊಳ್ಳುತ್ತಿವೆ. ಕೈಮಡ ಆರಾಧನೆ ಎಂದರೆ ಇಲ್ಲಿ 'ಭೂತಾರಾಧನೆ' ಅಲ್ಲ. ಆ ನೆಲೆಯೆ ಒಂದು ದೈವಸನ್ನಿಧಿ, ಗುರುಸನ್ನಿಧಿ, ವೀರಸನ್ನಿಧಿ, ಸಾಂಸ್ಕೃತಿಕ ಸಂಸ್ಮರಣಾ ಸನ್ನಿಧಿ. ಅಂತೇ ಅಲ್ಲಿಗೆ ನಿತ್ಯದೀಪ, ವಾರ್ಷಿಕ ಹಬ್ಬ ನಡೆಯುತ್ತದೆ. ಪೊನ್ನಂಪೇಟೆ ಬಳಿ ತೂಚಮಕೇರಿಯ ಪೆಮ್ಮಂಡ ಮನೆತನದ ಆದಿಗುರು 'ಅಚ್ಚಂಬಲ್ಲಯ್ಯ' ಕೈಮಡದ ಮೇಲೆ ಕೆತ್ತಿಸಿರುವ ಸಾಲು. **'ಓಂ ಶ್ರೀ ಕಾವೇರಿ ಪ್ರಸನ್ನ ಪೆಮ್ಮಂಡ ಆದಿಗುರು ಶ್ರೀ ಶ್ರೀ ಶ್ರೀ ಅಚ್ಚಂ ಬಲ್ಲಯ್ಯ ಸನ್ನಿಧಿ'** ಎಂದಿರುವುದು ಇದಕ್ಕೊಂದು ನೇರಸಾಕ್ಷಿ. ಅಮ್ಮತ್ತಿ ಬೆಟ್ಟೇರಿಯ **ಪೂದರಿಮಾಡ** ಮನೆತನದ **ಕೈಮಡದಲ್ಲಿ ೧೧ ತಲದ** (ಹಂತ) ಸುಮಾರು ಗೋಪುರಾಕೃತಿ ಮೇಲ್ತುದಿಯಲ್ಲಿ **ಲಿಂಗಶಿರ**



(ರುಂಡಭಾಗ ಬಾಗಬಾಗ) ಇದ್ದು ಗದ್ದುಗೆಯಾಗಿ ಆರಾಧನೆಗೊಳ್ಳುತ್ತಿವೆ. ಅಯ್ಯಂಗೇರಿಯಲ್ಲಿ ಗೌಡ ಜನಾಂಗದ ಪೆಮ್ಮುಡೀರ ಮನೆತನದ ಗುರುಕಾರೋಣ 'ಸಂದಿಪ್ಪೆ', ಹೆಗ್ಗಡೆ ಜನಾಂಗದವರಲ್ಲಿ ಬೆಳ್ಳಿಗೇರಿಯ ಕಟ್ರತಂಡ ಮನೆತನದ ಹುತ್ತಕೈಮಡ. ಪೊಕ್ಕಳಚಂಡ ಮನೆತನದ ಕಾಳಪ್ಪನ ಕಲ್ ಕೈಮಡ. ನಾಲ್ನಾಡು ಅರಮನೆ ಬಳಿ ಕಾಪಳರ ಮನೆತನದ



**ಕಾಟಾಳು ಬೊಳ್ತು** ಕೈಮಡ, ಕೊಡವರಲ್ಲಿಯ ಜನಪ್ರಿಯ **ಕಲ್ಯಾಟಜ್ಜಪ್ಪನ** ಕೈಮಡ. ಜಮ್ಮ ಮಾಪಿಳ್ಳೆಗಳಲ್ಲಿ ಕುರುಟಿಮಾರ ದೇವರ (ನಲವತ್ತೊಕ್ಕಲು ಕನ್ನಡಿಯಂಡ ಮನೆತನ) ನೆಲೆ ಇತ್ಯಾದಿಗಳು ಆರಾಧನಾ ನೆಲೆಗಳಾಗಿವೆ. ಮಠಗಳಲ್ಲಿ (ಅಬ್ಬಿಮಠ, ಸೋಮವಾರಪೇಟೆ ಅರಮೇರಿ, ಕಿರಿಕೊಡ್ಲಿ ಮಠ ಇತ್ಯಾದಿ) ಗುರುಗಳ ಗದ್ದುಗೆ ಹಾಗೂ ಮಡಿಕೇರಿಯ



ರಾಜರ ಗದ್ದುಗೆಗಳಿಗೆ ಪೂಜಾರಾಧನೆಗಳು, ಸಾಂಸ್ಕೃತಿಕ ಗೌರವಗಳೂ ಸಲ್ಲುತ್ತಿವೆ. ಇಲ್ಲೆಲ್ಲ ಜನಪದೀಯ ಘಟನೆಗಳ ಮೂಲದ ಆರಾಧನೆ ಕಾಣುತ್ತದೆ.

ಕಾವೇರಿಯ ನೆಲೆಯ ನಂತರ ಪ್ರಾಚೀನತೆ ಕಾಣಬರುವುದು ಇರ್ಪು ರಾಮೇಶ್ವರ ದೇವಾರಾಧನೆಯ ಸಂದರ್ಭವಾಗಿಯೆ. ಇರ್ಪುವಿನಲ್ಲಿ ಮುನಿಕಲ್ ಬೆಟ್ಟದಿಂದ ಬರುವ ಲಕ್ಷ್ಮಣತೀರ್ಥ, ಆ ಕ್ಷೇತ್ರವನ್ನು ಜಲಗಂಗಾತೀರ್ಥ ವನ್ನಾಗಿಸಿದೆ. ಎಡಕಲ್ ಗುಡ್ಡವೂ ಇವುಗಳಿಗೆ ಸಮೀಪವೆ ಆಗಿದೆ. ಅಲ್ಲಿ ೩-೪ನೇ ಶತಮಾನದ ಶಾಸನಗಳಿದ್ದು, ಕಾವೇರಿಯ ಪ್ರಸ್ತಾಪವೂ ಬರುವಂತಿದೆ. ಅಲ್ಲಿಯ ಶಾಸನಗಳು ಕ್ರಿಪೂ. ಸುಮಾರು ೩-೪ ಶತಮಾನಗಳಿಂದಲೇ ಆ ಪ್ರಸ್ತಾಪ ಮಾಡಿವೆ. ಹೀಗಾಗಿ ಕದಂಬ ವಂಶಿಕ ವಿಷ್ಣುವರ್ಮ ಹಾಗೂ ಚೇರವಂಶದವರ ಆಳ್ವಿಕೆಯಲ್ಲಿ ಈ ಆರಾಧನಾ ನೆಲೆಗಳನ್ನು ಮಾನಿಸಿದ್ದರೆನ್ನಬೇಕು. ಗಂಗರ ಶ್ರೀ ಪುರುಷನ ದತ್ತಿಯ ಪ್ರಸ್ತಾಪವೂ ಬರುವಲ್ಲಿ ಬಸದಿ ಜಿನಾಲಯಗಳೂ ಆ ಕಾಲಕ್ಕೆ ಅಸ್ತಿತ್ವವನ್ನು ದಕ್ಷಿಣ ಕೊಡಗಿನ ಬಿಳಿಯೂರು, ಪೆಗ್ಗೂರು, ಮುಂತಾದೆಡೆ ಕಾಣಬಹುದು. ಅರಮೇರಿಯಲ್ಲಿ ಚತುರ್ವಿಂಶತಿ ತೀರ್ಥಂಕರರ ಶಿಲ್ಪವೂ ದೊರಕಿರುವಲ್ಲಿ, ಅರನಾಥನ ಬಸದಿಯೂ ಇದ್ದುದರ ಸಾಕ್ಷ್ಯವನ್ನು ಅದು ಹೇಳುವಂತಿದೆ.

ಲಕ್ಷ್ಮಣ ತೀರ್ಥನದಿಯು ದುಮ್ಮಿಕ್ಕುವ ಜಲಪಾತವಿರುವ ಇರ್ಪು ರಾಮೇಶ್ವರ ಸನ್ನಿಧಿ ಇದೆ. ಪರಶುರಾಮ ಕ್ಷೇತ್ರವಾದ ಮಲೆಯಾಳದಲ್ಲಿ ವ್ಯಗ್ರನಾಗಿದ್ದ ಲಕ್ಷ್ಮಣ ಕೊಡಗಿನಲ್ಲಿ ಬಂದಾಗ ವಿನೀತನಾದ ನೆಲೆ ಆಗಿದೆ. ಶ್ರೀರಾಮ ಲಕ್ಷ್ಮಣ ಹನುಮಂತ ಇವರು ಶಿವಲಿಂಗ ಪೂಜಿಸಿದ ಸ್ಥಳವಿದಾಗಿದೆ. ಸನಿಹದಲ್ಲಿ ಹನುಮಂತನ ಬೆಟ್ಟವೂ ಇದೆ. ಹೀಗೆ ಪೌರಾಣಿಕ ಕತೆಗಳನ್ನು ಹೊಂದಿರುವ ಈ ತೀರ್ಥಕ್ಷೇತ್ರದಲ್ಲಿ ಮಹಾಶಿವರಾತ್ರಿಯಂದು ಮಹಾಜಾತ್ರೆ ನಡೆಯುತ್ತದೆ. ಹಾಲೇರಿ ಅರಸರ ಕಾಲದಲಿ ಈ ದೇಗುಲ ಜೀರ್ಣೋದ್ಧಾರಗೊಂಡಿತು. ಈ ರಾಮೇಶ್ವರ ದೇಗುಲದ ತಳವಿನ್ಯಾಸ ವೃತ್ತಾಕಾರವಾಗಿದ್ದು, ವರ್ತುಲ ಶರೀರ ಹೊಂದಿ ಶಂಕುವಿನಾಕಾರದ ಗೋಪುರವಿರುವ ಲುಘಾ ವಮಾದರಿಯ ದೇಗುಲವಾಗಿದೆ. ಮನೆಯಪಂಡ ಮನೆತನದವರು ಕಾಶಿಯಿಂದ ತಂದರೆನ್ನಲಾದ ಶಾಕ್ತ ಪರಂಪರೆಯ ಆಕರ್ಷಕ ನವಲಿಂಗ ಶಿಲ್ಪ ಪೀಠವೊಂದು ಇಲ್ಲಿ ಮರದ ಕೆಳಗೆ ಸ್ಥಾಯಿಗೊಂಡಿದೆ. ಇರ್ಪುವಿನಲ್ಲಿ ಆರು ವರ್ಷಗಳಿಗೊಮ್ಮೆ ಅರ್ಧೋದಯ ಪುಣ್ಯಕಾಲ, ೧೨ ವರ್ಷಗಳಿಗೊಮ್ಮೆ ನಡೆಯುವ ಮಹೋದಯ ಪುಣ್ಯಕಾಲ ಮಹೋತ್ಸವಗಳು ಬಹು ಪ್ರಸಿದ್ಧವಾಗಿವೆ.

ಇನ್ನು ಈಗಾಗಲೇ ಹೇಳಿದಂತೆ ಇರ್ಪು ರಾಮೇಶ್ವರನ ಪ್ರಸ್ತಾಪವು ಕ್ರಿ.ಶ. ೧೦೦೧ರ ಮಡಿಕೇರಿ ಶಾಸನದಲ್ಲಿ ಸೂಚಿತಗೊಂಡಿರುವಲ್ಲಿ ಇರ್ಪು ಜಲಪಾತದ ಲಕ್ಷ್ಮಣತೀರ್ಥ ಹಾಗೂ ರಾಮೇಶ್ವರ ಕ್ಷೇತ್ರಗಳು ಪ್ರಾಚೀನ ಆರಾಧನಾ ಕೇಂದ್ರಗಳಾಗಿ ಬೆಳೆದು ಬಂದಿವೆ. ಇರ್ಪುವಿನಲ್ಲಿ ಬೃಹತ್ ದೇವರ ಕಾಡೂ ಇದೆ. ಕೊಡಗಿನ ದೇವರ ಕಾಡುಗಳ ವೈಶಿಷ್ಟ್ಯವೆಂದರೆ ದೇವನೆಲೆ, ದೇವರಕೆರೆ ಹಾಗೂ ಕೆಳಗಣ ಗದ್ದೆಗಳನ್ನು ಹೊಂದಿರುವ ಚತುರ್ವ್ಯೂಹದ ವೈಜ್ಞಾನಿಕ ವ್ಯವಸ್ಥೆಯಾಗಿರುವುದಾಗಿದೆ. ಆ ಕಾಡು ಪವಿತ್ರವಾದ ಕಾರಣ ಮರ ಕಡಿಯಬಾರದೆನ್ನುವ ಅತಿಕ್ರಮಿಸಬಾರದೆನ್ನುವ ಮರ ಒಣಗಿದರೂ ಹಾಗೆಯೇ ಬಿಡಬೇಕೆನ್ನುವ ಕಟ್ಟಲೆಗಳಿವೆ. ಅದು ಕಾರಣ ಕಾಡಿನಿಂದ ಫಲವತ್ತಾದ ಜಲ, ಗದ್ದೆಗೆ ಹರಿದು ಕೃಷಿ ಬೆಳೆಗೆ ಅನುಕೂಲಿಸುತ್ತದೆ. ಕೆರೆಯ ನೀರು ದೇವರ ಅಭಿಷೇಕಕ್ಕೆ ಮೀಸಲಾಗಿದ್ದು ಅದನ್ನು ಕೆಡಿಸುವಂತಿಲ್ಲ. ಹೀಗಾಗಿ ಪರಿಸರ ನಿರ್ವಹಣೆಯ ಹಾಗೂ ದೇವಾರಾಧನೆಯ ನೆಲೆಗಳಾಗಿ ಕೊಡಗಿನ ಪ್ರತಿಗ್ರಾಮದಲ್ಲಿಯೂ ದೇವರಕಾಡುಗಳಿವೆ. ದಕ್ಷಿಣ ಕೊಡಗಿನ ಇರ್ಪು ರಾಮೇಶ್ವರ ಕುರ್ಚಿಂದಲೆ ಅಯ್ಯಪ್ಪ 'ಕರಿಂಗಾಳಿ'ಯಿಂದ ಹಿಡಿದು ಉತ್ತರ ಕೊಡಗಿನ ಪಾಕತಮ್ಮೆಯ ಈರುಳ್ಳಿ ಬನ, ಅಯ್ಯಪ್ಪ ದೇವರಕಾಡು ಇತ್ಯಾದಿ ಅನೇಕ ವಿಶಾಲವಾದ ದೇವರ ಕಾಡುಗಳಿವೆ. ಸೋಮವಾರಪೇಟೆ ತಾಲ್ಲೂಕು ಚೌಡ್ಲು, ಯಡೂರು, ಶನಿವಾರಸಂತೆ ಬೆಂಬಳೂರು, ಹುಲುಕೋಡು, ಕಿತ್ತೂರುಗಳಲ್ಲಿಯ ಸುಗ್ಗಿದೇವರ ಬನಗಳು ಕಾಣಬರುತ್ತವೆ.

ಹೀಗೆಯೇ ರಾಮತೀರ್ಥ ನದಿ ಸನಿಹದ ಹೇರ್ಮಾಡು ರಾಮೇಶ್ವರ, ಹರಿಹರದ ಸುಬ್ರಮಣ್ಯ ಷಷ್ಠಿ ಕ್ಷೇತ್ರವೂ ಭಕ್ತ ಜನಪ್ರಿಯ ಕ್ಷೇತ್ರಗಳಾಗಿವೆ. **ದಬ್ಬಚ್ಚವ್ವೆ** ದೇಗುಲವೆಂದು ಹೆಸರಾದ ಪಾರ್ವತಿ ದೇಗುಲವು, ಕುಂದ ಗ್ರಾಮದ ನೆರೆಗಿರುವ ಈಚೂರು ಗ್ರಾಮದಲ್ಲಿದೆ. ಈಕೆಯನ್ನು ಕುಂದಗ್ರಾಮದ ನಾಡ್ಲಯ್ಯಪ್ಪನ -ಬೆಟ್ಟಯ್ಯಪ್ಪ ಮಹಾದೇವನ ಶಕ್ತಿದೇವತೆ ಎನ್ನುವುದುಂಟು. ನಾಡ್ಲಯ್ಯಪ್ಪ, ಬೆಟ್ಟಯ್ಯಪ್ಪನ (ಬೆಟ್ಟದ ಮಹಾದೇವ) ಊರು ಪ್ರತಿನಿಧಿ. ಬೆಟ್ಟ ಏರಲಾರದವರಿಗೆ ಊರೊಳಗೆ ಅವನ ದರ್ಶನ. **ದಬ್ಬಚ್ಚವ್ವೆ ದೇವತೆಯ** ಮೇಲ್ಭಾಗ ಸ್ತ್ರೀ ಲಕ್ಷಣದ್ದು, ಕೆಳಭಾಗ ಪುರುಷ ಲಕ್ಷಣದ್ದು ಎಂದಿದೆ. ಈ ದ್ವಿಲಕ್ಷಣ ದೇವತೆ ಇಬ್ಬರು ಅವ್ವೆಯರಿಂದ (ಜೋಗಿತಿಯರು!) ಪ್ರೇರಿತಳಾದ್ದರಿಂದ (ಬಹುಶಃ ಪ್ರತಿಷ್ಠಾ ಪ್ರೇರಕರು) 'ದಬ್ಬಚ್ಚವ್ವೆ' ಎನಿಸಿದಳಂತೆ. ಜನಪದ ದೇವತೆ ಉಡುಸಲವ್ವನ ಒಂದು ರೂಪವಿದಾಗಿರ ಬಹುದು. ಹಾಸನ ಜಿಲ್ಲೆಯಲ್ಲಿ **ಉಡುಸಲವ್ವ** ಗ್ರಾಮದೇವತೆಯು ಹರಿಹರ (ಮೊದಲಿಗೆ ಶಾಸನೋಕ್ತವಾಗಿ ತವನಿಧಿ>ತವನಂದಿ ಎಂಬ ಸ್ಥಳನಾಮ ಹೊಂದಿತ್ತು) ಗ್ರಾಮದಲ್ಲಿದ್ದು 'ಮಾರ್ಗ ಪುರಾಣ'ದ ಆರೋಪವಾಗಿ ಇಂದು ಪಾರ್ವತಿ ಎನಿಸಿದ್ದಾಳೆ. ಅರ್ಧನಾರೀಶ್ವರ(ರಿ!)ನ ದೇಸೀ ಹೆಸರೂ ಇದಾಗಿರ ಬಹುದು.

ಈ ದಬ್ಬಚ್ಚವ್ವೆಯ ಹಬ್ಬದಲ್ಲಿ ಕೊಡಿಮರ (ಧ್ವಜಸ್ತಂಭ) ನಿಲ್ಲಿಸಿದ ನಂತರ 'ದಬ್ಬಚ್ಚವ್ವೆ ಪೋದ್ಮೊ, ನಾಡ್ಡುಯ್ಯಪ್ಪ ಪೋದ್ಮೊ, ಬೆಳ್ಳುಯಪ್ಪ ಪೋದ್ಮೊ' ಎಂಬ ಘೋಷ ಮಾಡುತ್ತಾರೆ. ಪೋದ್ಮೊ ಎಂಬುದು 'ಪೊಳ್ಬ' ಎಂಬುದರ ಮಾರ್ಪಾಟು ಉಚ್ಚಾರವಾಗಿದ್ದು, 'ಹಬ್ಬ' ಎಂಬ ಅರ್ಥವನ್ನು ಪಡೆದಿದೆ. ಕೊಡಿಮರ ನಿಂತ ಮೇಲೆ ಅಡಕೆ ಹೊಂಬಾಳೆ ಸಹಿತವಾದ ಉತ್ಸವಮೂರ್ತಿ ತಡಂಬುವನ್ನು ಪಟ್ಟು ಹೊಲಿದು ಸಿದ್ಧಪಡಿಸಿ ಪೂಜಿಸುತ್ತಾರೆ. ಹರಕೆ ಅರ್ಪಣೆಯ ಆಚರಣೆಯಾದ 'ನೆಪ್ರು', ಕಾರ್ತಿಕ ದೀಪೋತ್ಸವದಂಥ 'ಪರಕೆ ಬೊಳಕು' (ಹರಕೆ ಸೊಡರು) ಬೇಡುಕೋಲ, ಪೀಲಿಯಾಟ್ ಇತ್ಯಾದಿ ಆಚರಣೆ, ಕ್ರೀಡೆಗಳೊಡನೆ ಮೀನಮಾಸದಲ್ಲಿ (ಮಾರ್ಚಿ) ಹಬ್ಬ ನಡೆಯುತ್ತದೆ. ಗ್ರಾಮೀಣ ಆರಾಧನಾ ನೆಲೆಯೊಂದರ ವೈಶಿಷ್ಟ್ಯವಿದು.



**ಆದಿಪನ್ನಂಗಾಲತಮ್ಮೆ**, ಯುವಕಪಾಡಿಯಲ್ಲಿ, ದಲಿತ ಕೆಂಬಟ್ಟಿಗಳ ಆರಾಧ್ಯ ದೇವತೆಯಾಗಿ ಹಬ್ಬಗೊಳ್ಳುತ್ತಾಳೆ. ಕೇರಳದಿಂದ ಬಂದ ಇಗ್ಗುತಪ್ಪ ಸೋದರರ ತಂಗಿಯಾಗಿ ದಲಿತರಿಗೆ ಒಲಿದಾಕೆ. ಪಾಡಿಗ್ರಾಮದಲ್ಲಿ ಇಗ್ಗುತಪ್ಪನಿಗೆ 'ಮಾರ್ಗ' ಪದ್ಧತಿಯ ಪೂಜೆ ಇದ್ದರೆ, ಪನ್ನಂಗಾಲತಮ್ಮೆ ಸೋದರರಿಂದ ದೂರಗೊಂಡು 'ದೇಸೀ' ಪೂಜೆ ಪಡೆಯುತ್ತಾಳೆ. ದಲಿತೇತರ ಸರ್ವರಿಂದಲೂ ಪೂಜೆ ಪಡೆದರೂ, ಆಕೆಯ ಪೂಜಾರಿಗಳು ಕೆಂಬಟ್ಟಿಗಳೇ. ಈಕೆಯ ಹೆಸರಿನಲ್ಲಿ ವಾರ್ಷಿಕವಾಗಿ ಸಣ್ಣ ಕೊಡೆ ಹಬ್ಬ, ದೊಡ್ಡ ಕೊಡೆ ಹಬ್ಬಗಳು ನಡೆಯುತ್ತವೆ. ಕುರುಂದಹಬ್ಬ (ತಲೆಯ ಮೇಲೆ ತೆಂಗು ಬಡಿದುಕೊಳ್ಳುವುದು) 'ಮೊದಕರ'ವನ್ನು ಕೊಡುವುದು, ಕರುವ (ನೀರ ಮೇಲೆ ಬಿಟ್ಟ ಮಡಕೆ) ಕರೆಯುವುದು ಇತ್ಯಾದಿ ಆಚರಣೆಗಳು ನಡೆಯುತ್ತವೆ. ಇಗ್ಗುತಪ್ಪ (ಸೋದರ-ಸೋದರಿಯರ ಭಾವನಾತ್ಮಕ ನಂಟು ಸೂಚಿಸುವ ಓಲಾಟಗಳು ಇಲ್ಲಿಯ ಕೊಡೆಹಬ್ಬದಲ್ಲಿ ಕರುಳು ಹಿಂಡುವಂಥ ದೃಶ್ಯವಾಗಿ ನಡೆಯುತ್ತವೆ. ಈ ನಮ್ಮೆ (ಹಬ್ಬ)ಯಲ್ಲಿ ಕೊಡವರು, ಐರಿರ (ಬಡಗಿ) ಮನೆತನದವರು, ಮಠತ್ ಕೆಂಬಟ್ಟಿ ಕುಡಿ (ನಾಪೋಕ್ಲು ಪೀರಕ್ಕೆವ ಮಠದ ಕುಡಿ), ಕೆಂಗೋಲ್, ಅಂಬಿಲಿಕೆ ಕುಳಗಳು ಸೇರಿ ಹಬ್ಬ ಆಚರಿಸುತ್ತಾರೆ. ಅಂತಾಗಿ ಅಸ್ಪೃಶ್ಯ ವಿದೂರವಾದ ಹಬ್ಬವಿದಾಗಿದೆ. ಎತ್ತು ಪೋರಟಗಳೂ ಈಕೆಗುಂಟು. ಎಲ್ಲ ನಾಡಿನ ೨೨ ಕೆಂಬಟ್ಟಿ ಮನೆತನಗಳು ಈ ಹಬ್ಬದಲ್ಲಿ ಪಾಲ್ಗೊಳ್ಳುವ ಪರಂಪರೆ ಇದೆ. ಯುವಕಪಾಡಿ ಮುಖ್ಯ ನೆಲೆಯಾದರೆ ಈಕೆಗೆ ಅರಮೇರಿ, ಅಮ್ಮತ್ತಿ, ಬಿಳುಗುಂದ, ಕೈಕೇರಿ ಬೇಟೋಳಿ, ಮಗ್ಗುಲ, ಕುಂಜದಾಳು ಮುಂತಾದ ಗ್ರಾಮಗಳು ಆರಾಧನೆಯ ಉಪನೆಲೆಗಳಾಗಿವೆ. ಇವುಗಳಲ್ಲಿ ಕೆಲವೆಡೆ ತೆರೆದ ವೇದಿಕೆಯುಲ್ಲಿ ತ್ರಿಶೂಲ ಸಂಕೇತ (ಅಂಶರೂಪ)ದಿಂದ ಈಕೆಯನ್ನು ಪ್ರತಿನಿಧಿಸಲಾಗಿದೆ.

ನಾಪೋಕ್ಲು ಹಳೇ ತಾಲೂಕು ಬಳಿಯ **ಮೂಟೇರಿ ಭಗವತಿ ದೇಗುಲವು** ಕೊಡಗಿನ ಬಹುಸುಂದರ ಏಕಾಯತನ ವಿಮಾನ ಹೊಂದಿದೆ. ವ್ಯಾಳಿ ಸೋಪಾನದ ಕಲಾತ್ಮಕ ಗಂಭೀರ ಶಿಲ್ಪವನ್ನು ಹೊಂದಿದೆ. ಸೌರಮಾನ ಯುಗಾದಿ ಸಮಯದಲ್ಲಿ ಅಂದಿ ಬೊಳಕು (ಸಂಧ್ಯಾದೀಪ) ಸಹಿತವಾದ ದೊಡ್ಡ ಹಬ್ಬ ನಡೆಯುತ್ತದೆ. ಈ ಭಗವತಿ ದೇವತೆಗೆ ಬೊಳಕಾಟ್, ಕೆಂಬಟ್ಟಿಗಳಿಂದ ತೂಡ್‌ನಮ್ಮೆ (ಪಂಜುಗಳನ್ನು ಹಾರುವ ಕ್ರೀಡೆ), ಎತ್ತುಪೊರಟ ಇತ್ಯಾದಿ ಜನಪದ ಕಲೆಗಳ ಮೂಲಕ ಆರಾಧನೆ ನಡೆಯುತ್ತದೆ.

ಕೊಡಗಿನಲ್ಲಿ ಅಯ್ಯಪ್ಪ ಶಾಸ್ತಾವು ದೇವತೆಯೂ ಜನಪ್ರಿಯ. ಹೀಗಾಗಿ ಬೇತುಗ್ರಾಮದ ಮಕ್ಕಿ ಶಾಸ್ತಾವು, ವೃತ್ತಾಕಾರದ ದುಂಡು ತಳ ವೇದಿಕೆಯ (ಬಹುಶಃ ಮೊದಲಿಗೆ ಲುಘಾ ಮಾದರಿಯ ದೇಗುಲವೋ, ಅಥವಾ ಸಿಲಿಂಡರಾಕಾರದ ಗರ್ಭಗೃಹದ ದೇಗುಲವಾಗಿವಾಗಿಯೋ ಇದ್ದಿರಬಹುದು!) ಲಿಂಗ (ಬಾಣಭಾಗ), ತ್ರಿಶೂಲಗಳಿಂದ ಸಂಕೇತಗೊಂಡಿದ್ದಾನೆ. ಈ ಬೇತು ಗ್ರಾಮದ ಬಳಿ ಕೆಂಬಟ್ಟಿಗಳ 'ಪಳ್ಳಿ' ನೆಲೆ ಇದ್ದು, ಬೌದ್ಧ ಅಥವಾ ಜೈನ ಪ್ರಾಚೀನ ಮೂಲವನ್ನು ಸಂಕೇತಿಸುವಲ್ಲಿ ಈ ಶಾಸ್ತಾವು ಕೂಡ ಆ ಮೂಲದ ದೇವತೆಯಾಗಿತ್ತೇ ಎಂಬ ಸೂಚನೆಗೂ ಅವಕಾಶವಿದೆ. ಹುತ್ತರಿ ಕಳೆದ ನಂತರ ಇಲ್ಲಿ ಹಬ್ಬ ನಡೆಯುತ್ತದೆ. ಇನ್ನು ಹೆಗ್ಗಳದ ಬಳಿ ಪಂಚಲಿಂಗೇಶ್ವರ ಪೆರುಮಲೆ ಶಾಸ್ತಾವು ಸಾಲುಲಿಂಗಗಳಿಂದ ತೆರೆದ ವೇದಿಕೆಯಲ್ಲಿ ಸೂಚಿಸಲ್ಪಟ್ಟಿದೆ. ಇಲ್ಲಿ ಅಯ್ಯಪ್ಪ ಶಾಸ್ತಾವು, ಕ್ಷೇತ್ರಪಾಲ, ಗಣಪತಿ, ಸುಬ್ರಮಣ್ಯ ಮತ್ತು ವೀರಭದ್ರರು ಈ ಲಿಂಗರೂಪದಲ್ಲಿ ಸಂಕೇತಗೊಂಡಿದ್ದಾರೆ. ಈ ನೆಲೆಯಲ್ಲಿ ಮುಪ್ಪಟ್ಟು ಚನಿಯಾಜೆ (ಮೊದಲ ಶನಿವಾರ) ಹಬ್ಬ ಪ್ರಸಿದ್ಧ. ಈ ದೇವನೆಲೆಯಲ್ಲಿ ನಡೆದುಕೊಳ್ಳುವ ನಾಡತಕ್ಕರಾದ ಅಮ್ಮಣಕುಟ್ಟಂಡ ಮನೆತನದವರಿದ್ದಾರೆ. ಈ ಮನೆತನದ 'ಅಮ್ಮಕ್ಕದೇವಿ' ಹಾಲೇರಿ ಅರಸರ ಕಾಲದ ಸ್ತ್ರೀ ಪಡೆಯ

ಮುಖ್ಯಸ್ಥಳಾಗಿದ್ದಳಂತೆ. ಈ ದೇವತೆ ಹಬ್ಬದಲ್ಲಿ ಎತ್ತುಪೊರಟ, ಪೀಲಿಯಾಟ್, ಕುಟ್ಟಿಚಾತತೆರೆ ಇತ್ಯಾದಿ ಜನಪದ ಆಚರಣೆಗಳಿವೆ. ಹೀಗೆಯೆ ಪಾಲಂಗಾಲದ ಮಲೆಶಾಸ್ತಾವು, ಚೆಯ್ಯಂಡಾಣೆ ಸನಿಹದ ಪನ್ನೋಲ ಶಾಸ್ತಾವು ಪ್ರಸಿದ್ಧಿಗೊಂಡು ಶಬರಿಮಲೆ ಶಾಸ್ತಾವಿನ ಕತೆಯನ್ನು ಅಂಟಿಸಿಕೊಂಡಿವೆ.

ಕೂಡಿಗೆಕೊಪ್ಪಲು ಹೆಗ್ಗಡಹಳ್ಳಿ ಮಂಜುನಾಥ, ಹಾಲೇರಿ ಅರಸರ ಕಾಲದ ಕುಡುಮ (ಧರ್ಮಸ್ಥಳ) ಮಂಜುನಾಥನ ಸಾಕ್ಷಿ ದೇಗುಲವನ್ನು ಹೊಂದಿದ್ದಾನೆ. ನೆರೆಗೆ ದಂಡಿನ ಮಾರಮ್ಮ ದೇಗುಲವಿದೆ. ಮೇ ತಿಂಗಳಲ್ಲಿ ಸುಗ್ಗಿ ಹಬ್ಬವು ಇಲ್ಲಿ ನಡೆಯುತ್ತದೆ ಭಾಗಮಂಡಲನಾಡು ಅಯ್ಯಂಗೇರಿ **ಚಿನ್ನತಪ್ಪದೇವರು, ಕೊಡಗಿನ ಕೃಷ್ಣದೇವರೆಂದೇ** ಪ್ರಸಿದ್ಧಿ. ಈ



ಬಲ್ಲಮಾವಟಿ ಸಣ್ಣಪುಲಿಕೋಟು ಗ್ರಾಮದ ಬಳಿ ದೇವತಕ್ಕರಾದ ಗೊಲ್ಲಜನಾಂಗದ ಬಿದ್ದಿಯಂಡ ಐನ್ ಮನೆಯ 'ಮನೆಗುಡಿ'ಯಲ್ಲಿ ಇವನ ಅಮೃತ ಶಿಲಾವಿಗ್ರಹವಿದ್ದು ಹರಕೆಯ ದೀಪಾಲೆಕಂಬ, ನಾಗದೀಪಗಳ ನಡುವೆ ಆರಾಧನೆ ಗೊಳ್ಳುತ್ತಾನೆ.

ಶನಿವಾರಸಂತೆ ಬೆಂಬಳೂರು ಬಾಣತಪ್ಪ, ಕಿತ್ತೂರು ಕುಮಾರಲಿಂಗೇಶ್ವರ, ಅವರದಾಳು ಹುಲುಕೋಡಯ್ಯ ಇವರೆಲ್ಲ ಆರಾಧ್ಯ ದೈವಗಳಾಗಿ ಜನಪದ ಗೀತೆಗಳಲ್ಲಿ ಹಾಗೆ ಆರೋಪಿತರಾಗಿ, ದಲಿತರೂ ಭಾವಿಸುವ ಸ್ಪರ್ಶ, ದೇವತೆಗಳಾಗಿ, ವಾರ್ಷಿಕ ಜನಪದ ಜಾತ್ರೆಗಳೊಡನೆ ಸಮ್ಮಿಲಿತರಾಗಿದ್ದಾರೆ.

ದಕ್ಷಿಣ ಕೊಡಗಿನ ಬಿರುನಾಣಿಯ ಪುತ್ತು ಭಗವತಿ ದೇಗುಲದಲ್ಲಿ ಅವಿವಾಹಿತ ಹುಡುಗ, ಹುಡುಗಿಯರು ಅನುಕ್ರಮವಾಗಿ ಸ್ತ್ರೀ, ಪುರುಷ ವೇಷ ತೊಟ್ಟು ವಿನಿಮಯ ಪಾತ್ರಗಳಲ್ಲಿ ಹರಕೆ ತೀರಿಸುವ **ಪೊಮ್ಮಂಗಲ ಹರಕೆ** ಒಂದು ಕುತೂಹಲಕಾರಿ ಜನಪದ ಆರಾಧನೆಯ ಬಗೆ ಆಗಿದೆ. ಕೊಡಗಿನಲ್ಲಿ ಭದ್ರಕಾಳಿ ಆರಾಧನೆ ವಿಪುಲವಾಗಿದೆ. **ಏಳು ನೆಲೆ ಭದ್ರಕಾಳಿ** ಹಬ್ಬ ಎಂದೇ ಪ್ರಸಿದ್ಧಿ ಇದೆ. ಹಾಲೇರಿ ವಂಶಸ್ಥಾಪಕ ಮೊದಲರಸ ವೀರರಾಜ ಒಡೆಯ ಮೊದಲು ನಿಂತ ನೆಲೆ ಹಾಲೇರಿ.

**ಆ ಹಾಲೇರಿ ಭದ್ರಕಾಳಿಯ** ೧೫ ದಿನಗಳ ಹಬ್ಬ ಇಂದು ೮ ದಿನಕ್ಕಿಳಿದಿದೆ. ಯುಗಾದಿಯಂದು ಹಬ್ಬದ ಮುಖ್ಯ ದಿನ. ಹಬ್ಬದ ದಿನಗಳಲ್ಲಿ ಮಡಿಯಿಂದಿರಲು ಸಾತ್ವಿಕವಾಗಿರಲು ಕಟ್ಟುಕಟ್ಟಳೆಗಳನ್ನು ಹಾಕುತ್ತಾರೆ. ಹಬ್ಬದ ದಿನಗಳಲ್ಲಿ 'ತೆಂಗೆಪೋರು' (ತೆಂಗು ಕಸಿಯುವ ಹೋರಾಟ), ಕೈತಲೆ ಆಟ-ಭದ್ರಕಾಳಿ ಮೊದಲು ನಿಂತ ನೆಲೆಯಲ್ಲಿ ತಳಿಯಕ್ಕಿ ಬೊಳಕು (ಅಕ್ಕಿದೀಪ) ಇಟ್ಟು ಆಡುವ ಕುಣಿತ, ಬೊಳಕಾಟ್, ಹಾಗೂ **ಕೊಂಬಾಟ್** ನೃತ್ಯ, ಅರಪು ತೆರೆ (ದೇವರ ಕರೆವ



ಘೋಷ), ಕಾಳೆ ಓಡಿಸುವುದು (ಆಡುಗಳನ್ನು ಓಡಿಸುವುದು), ಚೌರಿ ಆಟ್, ಪಡುವ ತಮಣೆ ಕೊಟ್ (ದೊಡ್ಡ ಮೃದಂಗ ಬಾರಿಸುವಿಕೆ) ಇತ್ಯಾದಿ ಜನಪದ ಕಲಾ ಪ್ರದರ್ಶನದೊಡನೆ ಆರಾಧನೆ ನಡೆಯುತ್ತದೆ. ಮಕ್ಕಂದೂರು ಭದ್ರಕಾಳಿ ಹಬ್ಬದಲ್ಲಿ ಕೈತಲಪ್ಪ (ಕೈತಲೆಯಪ್ಪ-ಭೈರವ !) ನೆಲೆಯಲ್ಲಿ ಕೆಂಪು ಬಟ್ಟೆ ಒಪ್ಪಿಸುವ 'ಕೊಡಿ ಬಿಡುವುದು' ಆಚರಿಸುತ್ತಾರೆ. ಭದ್ರಕಾಳಿಗೆ ಜೇಡುಹಬ್ಬ ಆಚರಿಸುತ್ತಾರೆ. ಹುಲ್ಲಿನಲ್ಲಿ ಕೊಂಬುಗಳಿರುವಂಥ ಕಿರೀಟ ಮಾಡಿಕೊಂಡು ಧರಿಸಿ ಕಪ್ಪು ಬೊಟ್ಟು ಹಚ್ಚಿಕೊಂಡು, ಸೊಂಟಕ್ಕೆ ಅಂಗರೆ ಸೊಪ್ಪು (ನಸುಗುನ್ನಿ) ಕಟ್ಟಿಕೊಂಡು, ಕುಣಿದು ಬರುತ್ತಾರೆ : ಕೈತಲೆ (ಕೆಂಪು ವಸ್ತ್ರ ನವಿಲುಗರಿ) ಓಡಿದು ದೇಗುಲ ಸುತ್ತ ಹಚ್ಚಿದ 'ಬೊಳಕು' ದೀಪದ ಕಾಂತಿಯಲ್ಲಿ ಕುಣಿಯುತ್ತಾರೆ. ದೇವರ ಕುರಿತ 'ಬಾಳೋಪಾಟ್' ಹಾಡುತ್ತಾರೆ. ಭದ್ರಕಾಳಿ ಬಳಿ ಚೌಡಿಯು ಬಂದು ತನಗೆ ಆಗುತ್ತಿದ್ದ ಉಪದ್ರವ ಹೇಳಿಕೊಂಡಿತಂತೆ. ಆಗ ಊರವರ ಮೇಲೆ ಭದ್ರಕಾಳಿ ದರ್ಶನ ಬಂದು ವಿಷ್ಣುಮೂರ್ತಿ ತೆರೆ ಕಟ್ಟಿಸಲು ಆದೇಶಿಸಿದಳಂತೆ. ೧೮ ಮೊಳದ ಬಿದುರಿನಲ್ಲಿ ಮುಡಿಯನ್ನು ರೂಪಿಸಿ, ಕೆಂಪು, ಬಿಳಿ ಬಟ್ಟೆ ಹೊದಿಸಿ ಹಳದಿ ಬಣ್ಣದ ಪಾಂಬಾಳೆ ಗರಿಯಿಂದ ಅಲಂಕರಿಸಿ ವರಾಹ ಮುಖ

ಹೋಲುವ ವಿಷ್ಣುಮೂರ್ತಿ ಮೊಗವನ್ನು ತೊಡಿಸಿ ಆ ತೆರೆಯನ್ನು ಹೊತ್ತು ನೃತ್ಯ ಮಾಡುತ್ತ ಸಾಗುತ್ತಾರೆ. ಒಂದು ವರ್ಷ ಭದ್ರಕಾಳಿ ದೊಡ್ಡ ಹಬ್ಬವಾದರೆ ಮರು ವರ್ಷ ವಿಷ್ಣುಮೂರ್ತಿ ತೆರೆ ದೊಡ್ಡದಾಗಿ ನಡೆದು ಪರ್ಯಾಯ ಹಬ್ಬದಾಚರಣೆ ಇಲ್ಲಿದೆ.

**ಗಾಳಿಬೀಡು** ಭದ್ರಕಾಳಿ ಹಬ್ಬದೊಡನೆ (ಭಗವತಿ) ಪೂವ್ವದಿಯಪ್ಪೆಯ ಹಬ್ಬ ಸಹಯೋಗಗೊಂಡು ನಡೆಯುತ್ತದೆ. ಹಾಲೇರಿ ವಂಶದ ಹೊರಮಲೆ ಶಾಖೆಯ ಅರಸರ ರಾಜದೇವತೆ ಈ ಭದ್ರಕಾಳಿ. ರಾಜರ ಕಾಲದಲ್ಲಿ ಈಕೆಗೆ ೧೮





ದಿನಗಳ ಹಬ್ಬವಿತ್ತು. ಈಗ ೮ ದಿನಗಳಿಗೆ ಸೀಮಿತಗೊಂಡಿದೆ. ಎರಡು ವರ್ಷಕ್ಕೊಮ್ಮೆ ಇಲ್ಲಿ ಭದ್ರಕಾಳಿಯ ದೊಡ್ಡ ಹಬ್ಬ ನಡೆಯುತ್ತದೆ. ಹಬ್ಬದ ಮೊದಲ ದಿನ 'ಕೊಡಿ ತೆಗೆಯುವುದು' (ಧ್ವಜ ಪಟ ಹಾರಿಸುವುದು), ಕೈತಲೆ ಆಟ, ಬೊಳಕಾಟ, ಆಡುಕರೆದು ಕಾಳೆ ಓಡಿಸುವುದು, **ತಲೆಗೆ ಹುಲ್ಲಿನ ಕೊಂಬು** ಕಟ್ಟಿಕೊಂಡು ಕುಣಿಯುವುದು, ಕುದುರೆ ಬೋಡು (ಕುಣಿತ), ಆಳುಕುದುರೆ ಹತ್ತುವುದು, ಇತ್ಯಾದಿಗಳು ನಡೆಯುತ್ತವೆ.

**ಮುವತ್ತೊಕ್ಕಲು ಭದ್ರಕಾಳಿ** ಉದ್ಭವ ದೇವತೆ ಎಂದು ಹೆಸರುಗೊಂಡವಳು. ಗೋವು ಬಂದು ಈಕೆಯ ನೆಲೆಗೆ ಹಾಲು ಕರೆಯುತ್ತಿದ್ದುದನ್ನು ಕಂಡು, ಮನೆಯವರು, ಊರವರು, ಎಲರಿಗೂ ದೇವತೆ ಎನಿಸಿದಳು. **ಕಾಟಕೇರಿ ಭದ್ರಕಾಳಿ,** ಭದ್ರಕಾಳಿ ಬನದಲ್ಲಿ ನೆಲೆ ಹೊಂದಿದ್ದಾಳೆ. ಇವಳಿಗೆ ಹಸು-ಕರು ಒಟ್ಟಿಗಿರುವ ಬದುಕು ಕಾಣಲು ಆಸೆ. ಉಳಿದೆಡೆಯ ಭದ್ರಕಾಳಿ ಕೊಳ್ಳುವ ಪೂಜೆಯಲ್ಲಿನ ಭಾಗವು ಈಕೆಗೆ ಮೀಸಲಂತೆ. ಕೊಡಗಿನ ಆಷಾಢ ಮಾಸವಾದ 'ಕಕ್ಕಡ ಮಾಸ'ದಲ್ಲಿ ಈಕೆಗೆ ಪೂಜಾದಿಗಳಿಲ್ಲ ; 'ಕೈದೀಪ' ಹಿಡಿದು ಕುಣಿಯುವ ಪದ್ಧತಿ ಇಲ್ಲಿದೆ. ಕೆದಕಲ್ ಭದ್ರಕಾಳಿ ಹಾಲೇರಿಗೆ ಸನಿಹವಿರುವ ಏಳನೆಯ ನೆಲೆ ಎನ್ನುತ್ತಾರೆ. ಟೀಪೂವಿನ ಸೈನ್ಯವನ್ನು ಸೋಲಿಸಿದ ನೆಲೆ ಇದು ಎನ್ನುವುದಿದೆ ; ಇಪ್ಪನಿವಳವಾಡಿ ಭದ್ರಕಾಳಿ ಹಬ್ಬದಲ್ಲಿ ಕೊಡಿ ಆಟ್, ಚೌರಿ ಆಟ್, ನವಿಲುಗರಿ ಕಂತೆಗಳನ್ನು ಹಿಡಿದು ಆಡುವ ಎಳ ಬಗೆ ಪೀಲಿ ಆಟ್. 'ತಂಗೆಪ್ಪೋರು' 'ಕೊಂಬಾಟ್', 'ಪಡುವ ಮಣ' (ಬಾರಿ ಮೃದಂಗದ ತಾಡನ) ತೆಂಗಿನ ಈಡು ಸ್ಪರ್ಧೆ, ಮುಡಿತೆರೆ ಇತ್ಯಾದಿಗಳು ಈ ದೇವತೆಗೆ ಅರ್ಪಿತವಾಗುತ್ತದೆ. ಇದೆಲ್ಲ ಒಂದು ಸಾಂಸ್ಕೃತಿಕ ಆರಾಧನೆಯ ಸ್ವರೂಪವೆನಿಸುತ್ತದೆ.

ಹೀಗೆಯೇ ಕುಂದಕುಕ್ಲೂರು ಭದ್ರಕಾಳಿ ಹಬ್ಬದಲ್ಲಿ ದಲಿತ ವರ್ಗದ 'ಅಡಿಯ'ರ ಕೊಟ್ಟಗಾರ ಪರೆ ಹೊಡೆಯುವಿಕೆಗೆ ಪ್ರಾಶಸ್ತ್ಯವಿದೆ. ಕುದುರೆಕಳಿ, ಬೋಡುಕಳಿ, ಭದ್ರಕಾಳಿ ಮೊಗವಾಡವಿಟ್ಟ 'ತಾಯಿತೆರೆ' ಕೈಯಲ್ಲಿ ಬತ್ತಿ ಉರಿಸುವ 'ಪಡತಿರಿ', ಪಾರಕುಂಞ ಇತ್ಯಾದಿ ದೇವಾರಾಧನೆಯ ಜನಪದ ಆಚರಣೆಗಳಿವೆ. ನಾಪೋಕ್ಲು ಭಗವತಿ ಹಬ್ಬದಲ್ಲಿ 'ಭದ್ರಕಾಳಿ ಕೋಲ'ವು ವಿಶೇಷವಾಗಿ ನಡೆಯುತ್ತದೆ. ದೇವರಪುರದ ಭದ್ರಕಾಳಿ ಹಬ್ಬವು **'ಕುಂಡೆ ಹಬ್ಬ'**ವೆಂದು ಪ್ರಸಿದ್ಧವಾಗಿದೆ. ಬುಡಕಟ್ಟು ದಲಿತ ಜನಾಂಗದವರು (ಜೇನು ಕುರುಬ, ಬೆಟ್ಟ ಕುರುಬ, ಕೆಂಬಟ್ಟಿಗಳು ಸೇರಿ) ದೇವ ದೇವಿಯರನ್ನು ನಿಂದಾರಾಧನೆ ಮಾಡಿ ಕ್ಷಮೆ ಕೇಳುವ ಸಂಪ್ರದಾಯದ ಹಬ್ಬವಿದಾಗಿದೆ. ಈ ಹಬ್ಬಕ್ಕೆ ೨೦೦ ವರ್ಷದ ಇತಿಹಾಸವಿದೆ ಎನ್ನಲಾಗಿದೆ.

ಅರಮೇರಿಯ ಭಗವತಿ, ಗರ್ವಾಲೆಯ ಭಗವತಿ (ನಾಡಮ್ಮ) ಹಾಗೂ ಮಾದೇಶ್ವರನ ಮಡೆ, ಕರವಲೆ ಬಾಡಗ ಹೆಬ್ಬೆಟ್ಟಗೇರಿ ಭಗವತಿ, ಭದ್ರಕಾಳಿ, ಮೈತಲಪ್ಪ (ಮೈತಲೆಯಪ್ಪ -ವೀರಭದ್ರ) ಹಬ್ಬಗಳಲ್ಲಿ ನಡೆಯುವ ಜಾನಪದ ಆರಾಧನೆಗಳು ಆಕರ್ಷಕ ಆರಾಧನೆಗಳಾಗಿವೆ. ಬಲ್ಲಮಾವಟಿಯ **ರಾಟೆ ಭಗವತಿ, ಭದ್ರಕಾಳಿ** ಹಬ್ಬಗಳಲ್ಲಿ ೨೧ ಅಡಿ ಎತ್ತರದ ತಿರುಮುಡಿ ತೆರೆ, ರಾಟೆಯ ಸುತ್ತ ಪ್ರದಕ್ಷಿಣ ನೃತ್ಯ, 'ಆಂಗೋಲಿ-ಪೋಂಗೋಲಿ' ಹರಕೆ ಸಮರ್ಪಣೆ, ವಾಟೆ ಕಡ್ಡಿಗಳ ರೂಪಿತ ತ್ರಿಭುಜಾಕೃತಿಯ 'ಕೊಡಿಕಳೆ' ಪ್ರದರ್ಶನ, ಅರುಪು (ದೇವ ಚಿಹ್ನೆ), ದೇವರ ಓಟ, ಇತ್ಯಾದಿಗಳು ಮನೆತನಗಳು ಕೂಡಿದ ಸಾರ್ವಜನಿಕ ಹಬ್ಬದಾರಾಧನೆಯ ಸಾಂಸ್ಕೃತಿಕ ಚರ್ಯೆಗಳಾಗಿವೆ. ಇದೇ ಬಲ್ಲಮಾವಟಿಯ ಪೇರಿಕಾಡಿನ ಪೊಣೇಲಯ್ಯಪ್ಪನ ಹಬ್ಬದ ಸಮಯದಲ್ಲಿ ಕುರ್ಚಿಂದಲೆ ಕಾಡಿನಲ್ಲಿ ಕುರ್ಚಿಂದಲೆ ಅಯ್ಯಪ್ಪನಿಗೆ ಹೆಂಗಳೆಯರಿಂದ ಹುಟ್ಟುಡುಗೆಯಲ್ಲಿ ರೊಟ್ಟಿ ಮಾಡಿ ಎಡೆ ಮಾಡಿ ಶೃಂಗಾರದ ಹಾಡು ಹೇಳಿ ನೃತ್ಯಾರಾಧನೆ ಅರ್ಪಿಸುವರು. ಸೂರ್ಲಬಿನಾಡು ಮುಟ್ಲು ಗ್ರಾಮದಲ್ಲಿ ಮಂಜುನಾಥನ ನೆಲೆ ಇದೆ. ಹಾಲೇರಿ ಅರಸರ ಕಾಲದಲ್ಲಿ ಚಿನ್ನದ ಕಿರೀಟ, ಕೊಡೆ, ಥಳುಕಿನ ಮಾಲೆ, ಒಡಿಕತ್ತಿ, ತೊಟ್ಟಿಲು,

ಬೆಳ್ಳಿ ಕೊಡೆ ಈ ದೇವರಿಗೆ ದಾನವಾಗಿ ಬಂದಿತ್ತು. ಬಹುಶಃ ಆಗಿದ್ದ ಉತ್ಸವಮೂರ್ತಿ ಇಂದು ಕಾಣಬರುತ್ತಿಲ್ಲ. ತೆರೆದ ವೇದಿಕೆಯ ಮೇಲೆ ಲಿಂಗರೂಪ ಮಾತ್ರ ಉಳಿದಿದೆ. ಮಂಜುನಾಥ ಸಂಬಂಧೀ ಆರಾಧನೆಗಳನ್ನು ಅಮ್ಮ ಕೊಡವ ಚಿಲ್ಲಜ್ಜಮ್ಮ ಹಾಗು ನಾಳಿಯಮ್ಮನ ಮನೆತನದವರು ನಿರ್ವಹಿಸುತ್ತಿದ್ದು ಈ ನಾಡಿನ ೨೩ ಮನೆತನದವರು ಒಟ್ಟಾಗಿ ವಾರ್ಷಿಕ ಆಚಾರಗಳನ್ನು ನಡೆಸುತ್ತಾರೆ. **ಪಾಲು ಬೈವಾಡು** (ಅಕ್ಕಿ, ಹಾಲು ನಿವೇದನೆ), ತರುವುದು ನಾಡಿನ ಗಂಡಸರ ಹೊಣೆ. ಆದರೆ 'ಅಕ್ಕಿ ಪೊರಟ' ಒಯ್ಯುವುದು ಹೆಂಗಸರಿಗೆ ಬಿಟ್ಟ ಆಚಾರವಾಗಿದೆ. ಕೊಕ್ಕಲು ತೆಗೆಯುವುದು (ಶುದ್ಧೀಕರಣ) ಮಡೆಕಲ (ಮಡೆಕೂಳು), ಉಮ್ಮತ್ತಾಟ್, ಬೊಳಕಾಟ್, ಕೋಲುಮುರಿಯುವುದು (ಸೊಪ್ಪು ಸಹಿತ ಕೋಲು ಹಿಡಿದು ಮಾಡುವ ಹೋರಾಟ), ಇತ್ಯಾದಿಗಳ ಆಚರಣೆ ಇಲ್ಲುಂಟು. ಈ ಹೊಡೆದಾಟದಲ್ಲಿ ನಿಯಮ ತಪ್ಪಿ ಹೊಡೆದರೆ, ದೇವರಿಗೆ **ತಪ್ಪೊಡಕ** ಕಟ್ಟಬೇಕು.

**ಪಾಡಿ ಇಗ್ಗುತಪ್ಪ** ಕೊಡಗಿನ ಕೃಷಿಯ ಅಧಿದೇವತೆ. ಹುತ್ತರಿಯೊಡನೆ ಅವಿಭಾಜ್ಯ ಸಂಬಂಧ ಹೊಂದಿದವ. ಹಾಲೇರಿ ಅರಸರ ಕಾಲದಲಿ **ಇಗ್ಗುತಪ್ಪನ ಪೊಳ್ದು** (ಹುತ್ತರಿ) ನಂತರವೆ **ಅರಮನೆ ಪೊಳ್ದು**. ಆನಂತರ ನಾಡಪೊಳ್ದು (ಊರವರ ಹುತ್ತರಿ) ನಡೆಯುತ್ತಿತ್ತು. 'ಹುತ್ತರಿ'ಯು ಹೊಸ ಅಕ್ಕಿ ಇರುವ ಭತ್ತದ ಕದಿರನ್ನು ಮನೆಗೆ ತರುವ ಹಬ್ಬ.



ಕೊಡಗಿಗೆ ಸುಮಾರು ೧೩ನೇ ಶತಮಾನದಲ್ಲಿ ಕೇರಳದಿಂದ ಇಗ್ಗುತಪ್ಪ ಬರುವ ಮುನ್ನವೂ ಹುತ್ತರಿ ನಡೆಯುತ್ತಿತ್ತು. ಕೊಡಗಿನ ಗಂಗರ ಶಾಸನಗಳಲ್ಲಿನ ಕೃಷಿ, ಪೆಣ್ಣೆಕಡಜ್ಗ–ಪನ್ಯಕಡಂಗಗಳ ವರ್ಣನೆಯಿಂದ ಇದು ಸೂಚಿತವಾಗುತ್ತದೆ. ಇಗ್ಗುತಪ್ಪನ ಕಾರಣ, ಕೇರಳದ ಓಣಂ ಪ್ರಭಾವ ಕೊಡಗಿನ ಹುತ್ತರಿಯ ಮೇಲೆ ಆಗಿ ಏಳಕ್ಕಿ ಪುತ್ತರಿ (ಮಾಗೂಳಿ, ಏಳು ಓಣಂ ಕಾಳು ಆರಿಸಿ ತಂದವ) ಎಂದೂ ಹೆಸರಾಯಿತು. ಆಗ ಇಗ್ಗುತಪ್ಪನ ಕಲಾಡ್ಜ (ಹಬ್ಬ) ಇಲ್ಲಿನ ಹುತ್ತರಿಯೊಡನೆ ಸಮನ್ವಯಗೊಂಡಿತು. ಹುತ್ತರಿ ಹಬ್ಬದಲ್ಲಿ ಕದಿರು ತರುವ ಮನೆಗಳ ವಿವಿಧ ಭಿತ್ತಿ, ಕಿಟಕಿ ಭಾಗಗಳಲ್ಲಿ ಅಕ್ಕಿ ಹಿಟ್ಟಿನಲ್ಲಿ ಅದ್ದಿದ ಪೀರೆಕ್ಕೆ ಕಾಯಿ ಹೋಳನಿಂದ ಸೂರ್ಯ, ಹಸ್ತ, ಗರಿಗೆರೆ ಇತ್ಯಾದಿ ಚಿತ್ರಗಳನ್ನು ಕಲಾತ್ಮಕವಾಗಿ ಮೂಡಿಸುತ್ತಾರೆ. ಪ್ರಾಗೈತಿಹಾಸಿಕ ಪದ್ಧತಿಯ ಒಂದು ಸಾಂಕೇತಿಕ ರೂಪವಾಗಿ ಈ ಹಬ್ಬದಾಚರಣೆಗಳು ಹೀಗೆ ಕಾಣಿಸಿಕೊಳ್ಳುತ್ತವೆ. ಇಗ್ಗುತಪ್ಪನ ಹಬ್ಬದಲ್ಲಿ ಹುತ್ತರಿ ಕೋಲಾಟ, (ದೇವರ ಕೋಲು, ನಾಡಕೋಲು), ಪಡಕಳಿ, ಪರೆಯಕಳಿ, ಮನೆ ಮನೆ ಹಾಡುವ, ಪುತ್ತರಿ ಒಟ್ಟೆಪಾಟ್, ಹುತ್ತರಿ ಕಳಿಪಾಟ್ ಇತ್ಯಾದಿ ಸಾಂಸ್ಕೃತಿಕ ಆಚರಣೆಗಳು ಬದುಕಿನ ಪ್ರತೀಕವಾಗಿ ನಡೆಯುತ್ತ ಬಂದಿವೆ.

**ಗುಹ್ಯ ಅಗಸ್ತ್ಯೇಶ್ವರ** ದೇಗುಲವೊಂದು ಸಿಲಿಂಡರಾಕಾರದ ಶ್ರೀ ಗೋಲದ ವಾಸ್ತುರಚನೆಯದಾಗಿದೆ. ಕಾವೇರಿ ತೀರ್ಥೋದ್ಭವದ ನಂತರ ಅಮಾವಾಸ್ಯೆಯ ದಿನ ಇಲ್ಲಿ ಜಾತ್ರೆ ನಡೆಯುತ್ತದೆ. ಹನ್ನೊಂದು ಬಗೆ 'ತಡಂಬು' ಹೊತ್ತ ನೃತ್ಯವಿಲ್ಲಿದೆ. ದೇವಗುಂಡಿಯಲ್ಲಿ (ಕಾವೇರಿ) ಜಳಕವಾದ ಈ ದೇವರಿಗೆ ದೇಗುಲದಲ್ಲಿ ರುದ್ರಾಭಿಷೇಕ, ಉತ್ಸವ, 'ಬಟ್ಟಲುಗಾಣಿಕೆ' ಅರ್ಪಣೆ ಇರುತ್ತದೆ. ಈ ದೇವರ ಜೊತೆಗೆ



ಸಾಲಿಗ್ರಾಮದಿಂದ ಹಾವರ ಸಮ್ಮುಖದ ಪೂಜೆ ನಡೆಯುತ್ತದೆ. ತುಲಾ ಸಂಕ್ರಮಣದಲ್ಲಿ ಕೊಡಗಿನ ಗದ್ದೆಗಳಲ್ಲಿ ಸಾಮಾನ್ಯವಾಗಿ 'ಬೊತ್ತಲೆ' ('X' ಆಕಾರದ ಬಿದುರುಕಡ್ಡಿಯ ಮೇಲೆ ಕಾವೇರಿ ಬಳ್ಳಿಯನ್ನು ವೃತ್ತಾಕಾರದಲ್ಲಿರಿಸುವುದು) ಇಡುವ ಪದ್ಧತಿ ಇದೆ. ಆದರೆ ಇಲ್ಲಿ ದೀಪಾವಳಿಯಲ್ಲಿ ಮಾತ್ರ ಉತ್ತರ ಕೊಡಗಿನ ವೀರಶೈವ ಮಠಗಳ ಪದ್ಧತಿಯಂತೆ 'ದೇವರಗದ್ದೆ'ಯಲ್ಲಿ ಬೊತ್ತಲೆ ಇಡುತ್ತಾರೆ. ಕಾವೇರಿ ಪ್ರತೀಕ 'ಕಣಿಪೂಜು'ವನ್ನು ದೀಪಾವಳಿಯಲ್ಲಿಯೆ ಇಡುತ್ತಾರೆ. ಅದು ಈ ಪ್ರದೇಶದ ಪದ್ಧತಿಯಾಗಿ ಮುಂದುವರೆದಿದೆ.





ನಂಜರಾಯಪಟ್ಟಣದ ಕಾವೇರಿ ದಂಡೆಯಲ್ಲಿ **ನಂಜುಂಡೇಶ್ವರ ದೇಗುಲ**ವಿದೆ. ಊರಾಚೆ ಪಟ್ಟಲಮ್ಮ ದೇವನೆಲೆ ಇದೆ. ಈ ದೇಗುಲ ಕ್ರಿ.ಶ. ೧೬೪೧ರ ಹಾಲೇರಿ ವಂಶದ ಮುದ್ದರಾಜನ ಕಾಲದಿಂದಲೂ ಪ್ರಸಿದ್ಧಿಗೊಂಡಿದೆ. ನಂಜುಂಡೇಶ್ವರ ದೇಗುಲದಲ್ಲಿ ಹೊಯ್ಸಳ ಶೈಲಿಯ ದೇವೀರಮ್ಮ ಶಿಲ್ಪವಿದ್ದು ಬಹಳ ಆಕರ್ಷಕವಾಗಿದೆ. ಚಂಗಾಳ್ವರ ಕಾಲದ ವೀರಭದ್ರ ಗುಡಿಯು ಇಲಿದ್ದುದು, ಈಗ ಶಿಥಿಲಗೊಂಡಿದೆ. ಈ ಕಾರಣ ಅಲ್ಲಿ ನಡೆಯುತ್ತಿದ್ದ ಹಬ್ಬದಾಚರಣೆಗಳು ಯುಗಾದಿಯ ನಂತರ ನಡೆಯುವ ನಂಜುಂಡೇಶ್ವರ ದೇವರ ದೊಡ್ಡಹಬ್ಬದ ಸಮಯದಲ್ಲಿ ಈ ದೇವಸನ್ನಿಧಿ ಬಳಿಗೆ ವರ್ಗಾವಣೆ ಗೊಂಡಂತಿದೆ. ರುದ್ರಾಭಿಷೇಕ, ಅನ್ನದಾಸೋಹ ಆಚರಣೆಗಳೂ ಇಲ್ಲಿವೆ. ವೀರಭದ್ರ ಹಲಗೆ ತೊಟ್ಟ ಲಿಂಗಜೀರರು ಕಾವೇರಿಯಲ್ಲಿ ಮಿಂದು ವೀರಭದ್ರ ಖಡ್ಗ ಸಮೇತ ದೇಗುಲಕ್ಕೆ ಬಂದು ವಡಬುಗಳನ್ನು ಉಗ್ಗಡಿಸುತ್ತಾರೆ. ಹೀಗೆಯೇ ಕನ್ನಂಬಾಡಿ ಅಮ್ಮ, ಮೆರೆಯುವ ಕುರ್ಚಿ (ಮೆರೆವಿಗ್ರಹ ಪಲ್ಲಕ್ಕಿಯಲ್ಲಿ ಉತ್ಸವಮೂರ್ತಿ) ದೇಗುಲಕ್ಕೆ ಸಡೆಮುಡಿ ಹಾಸಿನ ಮೇಲೆ ಹಾಯ್ದು ಬರುತ್ತದೆ. ನಂತರ ಕೆಂಡೋತ್ಸವವೂ ನಡೆಯುತ್ತದೆ. ಚಂಗಾಳ್ವರ ಕೊನೆ ಅರಸು (ಹಾಲೇರಿ ವಂಶದಿಂದ ದತ್ತು ಹೋದ) ನಂಜುಂಡರಸುವಿನ ಗದ್ದುಗೆ ಬಸವ, ನಂಜುಂಡೇಶ್ವರ ಗುಡಿಯ ಎದುರಿಗೆ ಮಂಟಪದಲ್ಲಿದೆ. ನಂಜುಂಡೇಶ್ವರ ದೇಗುಲ ದ್ರಾವಿಡ ಶೈಲಿಯದಾಗಿದೆ. ಇದೊಂದು ದ್ವಿಕೂಟಾಚಲ ಗುಡಿ. ಮುಖಮಂಟಪದಲ್ಲಿ ಸಾಲು ಗುಡಿಕೋಷ್ಠಗಳಿವೆ.

ಹಿಂಬದಿಯಲ್ಲಿ ಪರಶುರಾಮರ ಗುಡಿ ಇದೆ. ಧರ್ಮಸ್ಥಳದ ಶ್ರೀ ವೀರೇಂದ್ರಹೆಗ್ಗಡೆಯವರು ಟ್ರಸ್ಟ್ ವತಿಯಿಂದ ದೇಗುಲದ ಜೀರ್ಣೋದ್ಧಾರ ಮಾಡಿದ್ದಾರೆ. ನಂಜರಾಯಪಟ್ಟಣದಲ್ಲಿ ಜಿನ ಬಸದಿ ಹಾಗೂ ಪ್ರತಿಮೆಯೊಂದಿದ್ದುದು. ಈಗ ಭೂಮಿಯಲ್ಲಿ ಹೂತು ಹೋಗಿದೆ. ಈ ಪ್ರದೇಶವೂ ಸೇರಿದಂತೆ ಮೊದಲಿಗೆ **ಕೊಡಗು ಶ್ರೀರಂಗಪಟ್ಟಣ** ಎಂಬ ಹೆಸರುಟ್ಟು ಚಂಗಾಳ್ವರ ರಾಜಧಾನಿಯಾಗಿ ಕ್ರಿ.ಶ. ೧೨೪೫ರಲ್ಲಿ ಮೆರೆದಿತ್ತು. ಕ್ರಿ.ಶ. ೧೫೦೧ರ ಸುಮಾರಿನಲ್ಲಿ ಚಂಗಾಳ್ವ ನಂಜರಾಜನ ಕಾರಣ ನಂಜರಾಯಪಟ್ಟಣ ಹೆಸರು ಅಸ್ತಿತ್ವಕ್ಕೆ ಬಂತು.

ಪೊನ್ನಪ್ಪಸಂತೆಯ ಅಷ್ಟಮುಖಿ ಭಿತ್ತಿಯ ಕಲ್ಲುಗುಡ್ಡೇಶ್ವರ, ಬೆಂಗುನಾಡು ಕೊಳಗದಾಳು ಬಳಿಯ ಶಾಕತ್ತಮ್ಮ, ಕುಟ್ಟದ ಕರಿಂಗಾಳಿ ಅಮ್ಮ, ಕಂಡಂಗಾಲದ ರುದ್ರಗುಪ್ಪೆಲಮ್ಮ, ಕುಸುಬೂರು ಮತ್ತು ಹುದಿಕೇರಿಯ ಮಹಾಲಿಂಗೇಶ್ವರ ದೇವಾಲಯ, ಚಿಕ್ಕಮಂಡೂರಿನ ನಂಜುಂಡರಸು ಅಚ್ಚುನಾಯಕನ ನಿರಂಧಾರ ಶೈಲಿಯ ದೇಗುಲ, ಶಾಂತಳ್ಳಿಯ ಕುಮಾರಲಿಂಗೇಶ್ವರ ದೇಗುಲ ಇತ್ಯಾದಿಗಳು ದೈವಾರಾಧನೆಗೆ ಪ್ರಸಿದ್ಧಿಗೊಂಡಿವೆ.

**ಮಡಿಕೇರಿಯ ಓಂಕಾರೇಶ್ವರ** ದೇಗುಲವು ಹಾಲೇರಿ ವಂಶದ ೨ನೇ ಲಿಂಗರಾಜೇಂದ್ರ ಒಡೆಯನ ಕಾಲದಲ್ಲಿ ರಚಿತವಾದ ಶಾಸನೋಕ್ತ ದೇಗುಲವಾಗಿದೆ. ಹಿಂದೂ-ಆದಿಲ್‌ಶಾಹಿ ಶೈಲಿಯಲ್ಲಿ ರಚಿತವಾದ ಅಷ್ಟಮುಖಿ ಮೇಲ್ಮಂಟಪ ಸಹಿತವಾಗಿ ಆಕರ್ಷಕ ದೇಗುಲವಾಗಿದೆ. ಗುಡಿಯ



ಮುಂದೆ ಸುಂದರವಾದ ಕುಶಲ ಮಂಟಪದೊಡನೆ ಪುಷ್ಕರಿಣಿ ಇದೆ. ದೇಗುಲದಲ್ಲಿ ಪಾರ್ಶ್ವದೇವತೆಗಳಾಗಿ ಗಣಾಧೀಶ್ವರ, ಕುಮಾರೇಶ್ವರ, ನಂದೀಶ್ವರ ದೇವತೆಗಳಿದ್ದು ಶಾಸನೋಕ್ತವಾಗಿವೆ. ದೇಗುಲಕ್ಕೆ ದಾನಾದಿಗಳು, ಆಚಾರ ವಿಚಾರಗಳು ಕುರಿತು ರಾಜನು ನೀಡಿರುವ ದೀರ್ಘ ಸಾಂಸ್ಕೃತಿಕ ನಿರೂಪವೂ ಇದ್ದು 'ಇತಿಹಾಸ ದರ್ಶನ'ದಲ್ಲಿ ಪ್ರಕಟವಾಗಿದೆ.

ಕೊಡಗಿನ ಗಡಿ ಭಾಗದ ತೊಡಿಕಾನ ಮಲ್ಲಿಕಾರ್ಜುನ ದೇಗುಲವು ಕೇರಳ ವಾಸ್ತುಶೈಲಿಯದು. ಭಾಗಮಂಡಲ ಬಳಿ ಚೆಟ್ಟಿಮಾನಿ ಬಳಿಯ ಕುಂದಚೇರಿ ಕಲ್ಲುತಿರಿಕೆ ದೇಗುಲವು ಚೆಟ್ಟಿಬಾವು ಅರಸರಿಂದ ನಿರ್ಮಿತವಾದದ್ದು. ಶಿವರಾತ್ರಿಯ ನಂತರ ಇಲ್ಲಿ ಉತ್ಸವಾದಿಗಳು ನಡೆಯುತ್ತವೆ. ರುದ್ರಾಭಿಷೇಕ, ದೇವರ ಬಲಿ, ಬೇಡುಪಟ್ಟಣಿಯಲ್ಲಿ ಕಿರಾತ ವೇಷ ನರ್ತನ, ಭದ್ರಕಾಳಿ, ವಿಷ್ಣುಮೂರ್ತಿ ಹಾಗು ಬೀರ ಇರವುಗಳ ವಾರ್ಷಿಕ ತೆರೆ ಮತ್ತು ಕೋಲಗಳು ನಡೆಯುತ್ತವೆ.

**ಕೊಡಗಿನ ಬಸದಿಗಳು** : ವೀರರಾಜೇಂದ್ರಪೇಟೆ ತಾ. ಬಿಳಿಯೂರು, (ಕ್ರಿ.ಶ. ೮೮೮) ಪೆಗ್ಗೂರು, ನಲ್ಲೂರುಗಳಲ್ಲಿ ಬಸದಿಗಳು ಇದ್ದ ಬಗ್ಗೆ ಶಾಸನಗಳಿಂದ ತಿಳಿಯುತ್ತದೆ. ಸತ್ಯವಾಕ್ಯ ಜಿನಾಲಯ, ಪಾರ್ಶ್ವನಾಥ, ಶಾಂತಿನಾಥ, ಚಂದ್ರನಾಥ ಹಾಗೂ ಅರನಾಥ ಬಸದಿಗಳೂ ಇದ್ದುವು. ವಿಜಯನಗರ ಕಾಲದ ಅಂಜನಗೇರಿ ಬಸದಿ (ಕ್ರಿ.ಶ. ೧೫೪೧) ಪ್ರಸಿದ್ಧಿಯಾಗಿತ್ತು. ಕಲ್ಕಂದೂರಿನಲ್ಲಿ ಈಗಲೂ ಜಿನಾರಾಧನೆ ನಡೆಯುತ್ತಿದೆ. ಹಾಲೇರಿ ಅರಸರ ಕಾಲದ ಕ್ರಿ.ಶ. ೧೮೦೬ರ ದೊಡ್ಡವೀರ ರಾಜೇಂದ್ರನ ನಿರೂಪದ ರೀತ್ಯಾ, 'ಬಸ್ತಿ' (ಬಸದಿ), 'ಪಳ್ಳಿ'ಗಳಿಗೂ ದಾನಾದಿಗಳು ಒದಗಿದ್ದ ಬಗ್ಗೆ ನಿರೂಪವಿದೆ. ಬಸದಿ ಅಥವಾ ಪವಿತ್ರ ಜಿನಕಾಡುಗಳೂ ಇದ್ದುವು.

ಹಾಲೇರಿ ವಂಶದ ಮುದ್ದಯ್ಯರಾಜರ ಕಾಲದಲ್ಲಿ (ಕ್ರಿ.ಶ. ೧೭೭೮) ರೋಮನ್ ಕ್ಯಾಥೋಲಿಕ್ ಪಂಥದ **ಸೆಂಟ್ ಮೈಕೇಲ್ ಚರ್ಚ್**, ಮಡಿಕೇರಿಯಲ್ಲಿ ನಿರ್ಮಾಣಗೊಂಡಿತು.



ಗಾಥಿಕ್ ಶೈಲಿಯ ಈ ಚರ್ಚ್ ಆಕರ್ಷಕ ವಾಸ್ತುವನ್ನು ಹೊಂದಿದೆ. ಕ್ರಿ.ಶ. ೧೭೯೨ರಲ್ಲಿ ದೊಡ್ಡ ವೀರರಾಜೇಂದ್ರ ಒಡೆಯನು ವೀರರಾಜೇಂದ್ರ ಪೇಟೆಯಲ್ಲಿ **ಸಂತಅನ್ನಮ್ಮ** (ಸೆಂಟ್ ಆನಿಸ್ ಚರ್ಚ್) ದೇವಾಲಯವನ್ನು ಕಟ್ಟಿಸಿಕೊಟ್ಟು, ದೀಪಾಲೆಕಂಬ ಚಿನ್ನದ ಪೆಟ್ಟಿಗೆಯನ್ನು ದಾನವಾಗಿ ನೀಡಿದ. ಆ ದೀಪಾವಲೆ ಕಂಬ ಅದು ಇಂದಿಗೂ ಬಳಕೆಯಲ್ಲಿದೆ. ಭವ್ಯ ಗೋಥಿಕ್ ಶೈಲಿಯ ಶೃಂಗತ್ರಿಕೋನ ಬಾಗು ಬಾಹುಗಳ ಮುಖಗೋಪುರವನ್ನು ಈ ಚರ್ಚೆ ಹೊಂದಿದೆ. ಇಲ್ಲಿರುವ ಕ್ರಿಸ್ತನ 'ಪಿಯಾತ' ಸ್ಥಿತಿಯ ಸುಂದರ ಶಿಲ್ಪ, ಯೇಸುವನ್ನು ಶಿಲುಬೆಗೇರಿಸುವ ಶಿಲ್ಪವು ಮಾನವ ಭಾವನೆಗಳ ಪ್ರದರ್ಶನಕ್ಕೆ ಅನುಗುಣವಾದ ಶಿಲ್ಪಗಳಾಗಿವೆ. ಯೇಸುವಿನ ತಿರು ಶರೀರ ಶಿಲ್ಪ ಸುಂದರವಾಗಿದೆ.



(ಪಳ್ಳಿ) **ಮಸೀದಿಗಳು**, ಕೇರಳದ ಪ್ರಭಾವದಿಂದಾಗಿ ಮಸೀದಿಗಳಿಗೆ 'ಪಳ್ಳಿ' ಎಂಬ ಹೆಸರು ಇಲ್ಲಿ ಬಂದಿದೆ. ಪೊನ್ನಂಪೇಟೆ ಬಳಿಯ ಕಾರ್ಖಾನೆ ಮಸೀದಿ, ಅರಮೇರಿ ಮೈತಾಡಿ ಚಾಮಿಯಾಲ್‌ನಲ್ಲಿದ್ದ ಪಳ್ಳಿ ಮಸೀದಿ ಕೊಡಗಿನ ಐನ್ ಮನೆಯನ್ನು ಹೋಲುವಂತಿದ್ದುವು. ಈಗ ಆ ವಾಸ್ತುವನ್ನು ಬದಲಾಯಿಸಿ ಬೇರೆ ಕಟ್ಟಿದ್ದಾರೆ. ಇವಕ್ಕೆ ದೇವರ ಕಾಡಿನಂತೆ ಪಳ್ಳಿಕಾಡುಗಳೂ ಕೂಡ ಇವೆ. ಮಡಿಕೇರಿಯ ಲಷ್ಕರ್ ಮಸೀದಿ, ಬಿಸ್ಮಿಲ್ಲಾ ಷಾವಲಿ ಮಕಾನ್ ಮಸೀದಿ ಇಂಡೊ ಸಾರ್ಸೆನಿಕ್ ಶೈಲಿಯದಾಗಿದೆ.

ಹೀಗೆ ದೇಗುಲ, ಬಸದಿ, ಮಸೀದಿ, ಚರ್ಚುಗಳು ಆರಾಧನೆ–ಆಚರಣಾ ನೆಲೆಗಳಾಗಿ ಸಾಗಿಬಂದಿವೆ. ಧಾರ್ಮಿಕ ಸಾಮರಸ್ಯದೊಡನೆ ಇವು ಸಹ ಜೀವನ ನಡೆಸುತ್ತಿವೆ ಎನ್ನಬೇಕು.



ಇರ್ಪು ರಾಮೇಶ್ವರ ದೇಗುಲ ಮತ್ತು ದೇವರ ಕಾಡು. ಮೇಲಿನ ಕಟ್ಟಡವು ಹಾಲೇರಿ ವಂಶದ ದೊಡ್ಡವೀರ ರಾಜೇಂದ್ರನ ಕಾಲದಲ್ಲಿ ಜೀರ್ಣೋದ್ಧಾರವಾಯಿತೆಂದು ಹೇಳಲಾಗಿದೆ.

## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು


೧. ಎಂ.ಜಿ. ನಾಗರಾಜ್ 'ಕೊಡಗಿನ ಎರಡು ಅಪೂರ್ವ ಜೈನ ಮತ್ತು ಬೌದ್ಧ ಶಿಲಾ ಶಿಲ್ಪ ಫಲಕಗಳು' ಇತಿಹಾಸ ದರ್ಶನ, ಸಂ. ೧೧/೧೯೯೬. ಪು. ೮೨.

೨. K. Mammen, 1942, *Kerala Culture*, pp. 80-81.

೩. A.C. Burnel., 1968, *Elements of south Indian palaeography*, Delhi, p. 47.

೪. ಎ.ಕ. ಸಂಪುಟ ೧ ಪರಿಷ್ಕೃತ ೧೯೭೨, ಕೊಡಗು ಜಿಲ್ಲೆ, ಮಡಿಕೇರಿ ೨, ಮೈ.ವಿ.ವಿ.

೫. ಅದೇ., ಮಾಲಂಬಿ ೬೫, ಕ್ರಿ.ಶ. ೧೦೦೪.

೬ ಎಂ.ಜಿ. ನಾಗರಾಜ್, 'ಕೊಡಗು, ಬೆಂಗಳೂರು, ತುಮಕೂರು ಜಿಲ್ಲೆಯ ಕೆಲವು ಅಪ್ರಕಟಿತ ಶಾಸನಗಳು', ಇತಿಹಾಸ ದರ್ಶನ, ಸ. ೨೦ ೨೦೦೫. ಪು. ೧೧೦.

೭. i. ಎಂ.ಜಿ. ನಾಗರಾಜ್., ೨೦೦೪, ಕೊಡಗಿನ ಕೈಮಡಗಳು, ಕನ್ನಡ ಸಾಹಿತ್ಯ ಪರಿಷತ್ತು, ಪು. ೧೧೩.
ii. ಅದೇ., ೧೯೯೩, ಕಂಬಟ್ಟಿ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪು. ೨೬೫.
iii. ಅದೇ., ೨೦೦೪, ಕೊಡಗಿನ ಹಾಲೇರಿ ರಾಜವಂಶವು ಭಾಗ-೧, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಪು. ೨೦೩.

ಶ್ರೀಮತಿ ವಿ. ಅನುರಾಧ*

# ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ದೇವಾಲಯಗಳ ಜಾಲವಾತಾಯನಗಳು

ಕಲ್ಲಿನ ಮತ್ತು ಮರದ ಕಿಟಕಿಗಳನ್ನು 'ಜಾಲಗಳು' ಅಥವಾ 'ಜಾಲಕ'ಗಳು ಎಂದು ಕರೆಯಲಾಗಿದೆ. ಭಾರತದ ವಾಸ್ತು ಗ್ರಂಥಗಳನ್ನು ವಿವಿಧ ರೀತಿಯ ಜಾಲಕಗಳ ಬಗ್ಗೆ ವಿವರಣೆಯನ್ನು ನೀಡಿವೆ. ವಾಸ್ತು ಕೃತಿಗಳಲ್ಲಿ ಜಾಲಕಗಳನ್ನು 'ಜಾಲವಾತಾಯನ'[1] ಎಂದು ಸಂಭೋದಿಸಲಾಗುತ್ತದೆ. ಇವು ದೇವಾಲಯದ ಒಳಭಾಗಕ್ಕೆ ಅವಶ್ಯವಿರುವ ಬೆಳಕನ್ನು ಒದಗಿಸುತ್ತವೆ. ಜಾಲವಾತಾಯನಗಳು ಸಾಮಾನ್ಯವಾಗಿ ನವರಂಗ, ಅಂತರಾಳ, ಅರ್ಧಮಂಟಪ ಮತ್ತು ಪ್ರದಕ್ಷಿಣಪಥಗಳ ಭಿತ್ತಿಗಳಲ್ಲಿ ಕಂಡು ಬರುತ್ತವೆ. ಅಪರೂಪವಾಗಿ ಗರ್ಭಗೃಹದ ಭಿತ್ತಿಯಲ್ಲೂ ಜಾಲವಾತಾಯನವನ್ನು ಗಮನಿಸಬಹುದು.[2] ಜಾಲವಾತಾಯನಗಳು ದೇವಾಲಯದ ಒಳಭಾಗಕ್ಕೆ ಮಂದಬೆಳಕನ್ನು ನೀಡುವುದರಿಂದ ಗರ್ಭಗೃಹ ಮತ್ತು ದೇವಾಲಯದ ಇತರ ಭಾಗಗಳು ಗಹನವಾದ ಮತ್ತು ಕತ್ತಲು ಮಿಶ್ರಿತ ಬೆಳಕಿನ ವಾತಾವರಣ ಹೊಂದಲು ಸಾಧ್ಯವಾಗುತ್ತದೆ. ಕರ್ನಾಟಕದಲ್ಲಿ ಹೊಯ್ಸಳ ದೇವಾಲಯಗಳಲ್ಲಿ ಅಂತರಾಳದ ಬಾಗಿಲುವಾಡದ ಮೇಲೆ ಆಕರ್ಷಿತವಾದ ಜಾಲವಾತಾಯನಗಳನ್ನು ರಚಿಸುವುದು ವಾಡಿಕೆ.

ಜಾಲವಾತಾಯುನಗಳನ್ನು ಹೆಚ್ಚಾಗಿ ಕಲ್ಲಿನಲ್ಲಿ ರಚಿಸುತ್ತಿದ್ದರು. ಕಲ್ಲು ಹೆಚ್ಚು ಶಾಶ್ವತವೂ ಮತ್ತು ಭಿತ್ತಿಯ ಜೊತೆ ಅಂದವಾಗಿ ಹೊಂದಿಕೊಳ್ಳಲೂ ಸಾಧ್ಯವಾಗಿರುವುದರಿಂದ ದೇವಾಲಯಗಳಲ್ಲಿ ಕಲ್ಲಿನ ಜಾಲಗಳನ್ನು ಬಳಸುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಮರದ ಜಾಲವಾತಾಯನಗಳೂ ಕೂಡ ದೊರೆತಿವೆ, ವಾಸ್ತುಕೃತಿಗಳು ಮರದ ಜಾಲವಾತಾಯನಗಳನ್ನು ಕುರಿತು ಸಾಕಷ್ಟು ಮಾಹಿತಿಗಳನ್ನು ಒದಗಿಸುತ್ತವೆ.[3] ಆದರೆ ನಮಗೆ ಯಾವುದೇ ಮರದ ಜಾಲವಾತಾಯನಗಳು ದೇವಾಲಯಗಳಲ್ಲಿ ಲಭ್ಯವಾಗಿಲ್ಲ. ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಜಾಲವಾತಾಯನಗಳು ತಮ್ಮ ವಿಶೇಷ ಶೈಲಿ ಮತ್ತು ಕೆತ್ತನೆಯ ಉತ್ಕೃಷ್ಟತೆಯಿಂದ ವಿಶೇಷವಾಗಿವೆ. ನೊಳಂಬವಾಡಿಯ ಜಾಲವಾತಾಯನಗಳು ಗುಣಮಟ್ಟ, ಕಾರ್ಯಕೌಶಲ್ಯ ಹಾಗೂ ಅಗಾಧ ಕಲ್ಪನೆಗೆ ಹೆಸರುವಾಸಿಯಾಗಿವೆ. ರಾಜೇಂದ್ರ ಚೋಳನು ನೊಳಂಬವಾಡಿಯನ್ನು ಮುತ್ತಿಗೆ ಹಾಕಿದಾಗ, ಈ ಜಾಲವಾತಾಯನಗಳ ಸೌಂದರ್ಯಕ್ಕೆ ಮನಸೋತು, ಅವುಗಳನ್ನು ತನ್ನ ಯುದ್ಧದ ವಿಜಯದ ಪತಾಕೆಯ ಸಂಕೇತವಾಗಿ ತನ್ನೊಡನೆ ಕೊಂಡೊಯ್ದನು. ಈ ರೀತಿ ಕೊಂಡೊಯ್ದ ಜಾಲವಾತಾಯನಗಳಲ್ಲಿ ಒಂದು ತಂಜಾವೂರಿನ ಬೃಹದೇಶ್ವರ ದೇವಾಲಯದ ಆವರಣದಲ್ಲಿ ಈಗಲೂ ಕಂಡುಬರುತ್ತದೆ.[4]

ಕರ್ನಾಟಕದ ದೇವಾಲಯಗಳಲ್ಲಿ ಜಾಲವಾತಾಯನಗಳ ಬಳಕೆಯು ಬಾದಾಮಿ ಚಾಲುಕ್ಯರ ಕಾಲದಿಂದ ಪ್ರಾರಂಭವಾಗಿದೆ. ಲಾಡ್‌ಖಾನ್, ದುರ್ಗಿ ಇನ್ನಿತರ ದೇವಾಲಯಗಳಲ್ಲಿ ಶಾಸ್ತ್ರೀಯವಾಗಿ ನಿರ್ಮಿಸಿರುವ ಜಾಲಕಗಳು ಕಾಣುತ್ತವೆ. ೮ನೇ ಶತಮಾನದ ಹೊತ್ತಿಗಾಗಲೇ ಶಿಲ್ಪಿಗಳು ಜಾಲವಾತಾಯನಗಳನ್ನು ರಚಿಸುವುದರಲ್ಲಿ ಸಾಕಷ್ಟು ಪರಿಣತಿಯನ್ನು ಹೊಂದಿದ್ದರು ಎಂಬುದು ಪಟ್ಟದ ಕಲ್ಲಿನ ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳ ಜಾಲವಾತಾಯನಗಳಿಂದ ತಿಳಿದುಬರುತ್ತದೆ. ಹಲವು ಆಗಮಗಳು ಮತ್ತು ವಾಸ್ತು ಗ್ರಂಥಗಳು ಜಾಲಕಗಳ ಬಗ್ಗೆ ಮಾಹಿತಿ ನೀಡಿದ್ದರೂ, 'ಮಯಮತ'ವು ಹೆಚ್ಚು ವಿಸ್ತಾರವಾದ ಪಟ್ಟಿಯನ್ನು ಒದಗಿಸುತ್ತದೆ. ಮಯಮತವು ಹತ್ತು ಬಗೆಯ ಜಾಲಕಗಳನ್ನು ಹೆಸರಿಸಿದರೆ 'ಮಾನಸಾರ'ವು ಎಂಟು ಬಗೆಯ ಜಾಲವಾತಾಯನಗಳ ಬಗ್ಗೆ ವಿವರಣೆ ನೀಡಿದೆ. ದೇವಾಲಯಗಳಲ್ಲಿ ದೊರೆತಿರುವ ಕೆಲವು ಜಾಲವಾತಾಯನಗಳ ವಿಧಗಳನ್ನು ಯಾವುದೇ ಶಾಸ್ತ್ರಗ್ರಂಥಗಳಲ್ಲೂ ಹೆಸರಿಸಿಲ್ಲ. ಸಾಮಾನ್ಯವಾಗಿ ಜಾಲವಾತಾಯನಗಳ ಆಕೃತಿ, ಅವುಗಳ ವಿನ್ಯಾಸಗಳನ್ನು ಆಧರಿಸಿ ಜಾಲವಾತಾಯನಗಳನ್ನು ಹೆಸರಿಸಲಾಗಿದೆ. ಶಾಸ್ತ್ರಗ್ರಂಥಗಳಲ್ಲಿ ಹೆಸರಿಸದಿರುವ ಜಾಲ ವಿನ್ಯಾಸಗಳೂ ದೊರೆತಿರುವುದರಿಂದ ಅವುಗಳನ್ನು 'ಸಂಕರ ಮಾದರಿ'ಗಳೆಂದು ಗುರುತಿಸಲಾಗಿದೆ. ಹಲವು ಬಾರಿ ಶಿಲ್ಪಿಯ ಕಲ್ಪನೆ ಮತ್ತು ಭಾವನೆಗಳನ್ನು ಯಥಾವತ್ತಾಗಿ ಬಿಂಬಿಸುವ ಜಾಲಗಳೂ ಸಹ ದೊರೆತಿವೆ. ಈ ರೀತಿಯ ಜಾಲವಾತಾಯನಗಳು ಕರ್ನಾಟಕದ ಬೇರೆ ಬೇರೆ ಕಲಾ ಶೈಲಿಗಳ ಶ್ರೇಷ್ಠ ಕೃತಿಗಳಾಗಿ ಉಳಿದಿವೆ. ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ

* ಇತಿಹಾಸ ಉಪನ್ಯಾಸಕಿ, ಮಹಾರಾಣಿ ಮಹಿಳಾ ಕಲಾ ಕಾಲೇಜು, ಬೆಂಗಳೂರು.

ದೇವಾಲಯಗಳ ಜಾಲಕಗಳನ್ನು ಅವುಗಳ ಶಿಲ್ಪ ವಿನ್ಯಾಸ ಮತ್ತು ಆಕೃತಿಗಳನ್ನು ಆಧುನಿಕ ಶಾಸ್ತ್ರೀಯವಾಗಿ ವಿವರಿಸುವುದು ಈ ಲೇಖನದ ಉದ್ದೇಶ.

ಶಾಸ್ತ್ರ ಗ್ರಂಥಗಳು ಈ ಜಾಲವಾತಾಯನಗಳ ರಚನಾ ವಿಧಾನವನ್ನು ತಿಳಿಸಿಲ್ಲ. ಆದರೆ ಜಾಲವಾತಾಯನಗಳನ್ನು ಕಲ್ಲಿನ ಬಂಡೆ (ಶಿಲಾಫಲಕ) ಗಳಿಂದ ಅಥವಾ ಮರದ

| ಕ್ರ.ಸಂ. | ಜಾಲವಾತಾಯನದ ವಿಧಾನಗಳು | ಗ್ರಂಥ/ಅಧ್ಯಾಯ/ಶ್ಲೋಕ | ವಿವರಣೆ |
|---|---|---|---|
| ೧. | ಸ್ವಸ್ತಿಕಾ | ಮಯಮತ -೧೬-೬೩<br>ಮಾನಸಾರ - ೧೭/೩೦-೩೬ | ಸ್ವಸ್ತಿಕ ಆಕಾರವನ್ನು ಹೋಲುತ್ತದೆ. |
| ೨. | ನಂದ್ಯಾವರ್ತ | ಮಯಮತ - ೧೬/೫೮೭ - ೫೯೨<br>ಮಾನಸಾರ -೧೭/೨೭-೩೦<br>ಕಾಮಿಕಾಗಮ - ೫೫/೧೬೨-೧೬೩<br>ಈಶಾನಶಿವಗುರುದೇವಪದ್ಧತಿ | ಅಕ್ಷಯಸ್ವಸ್ತಿಕ ಹೋಲುತ್ತದೆ. |
| ೩. | ರುಜುಜಾಲಿಕ | ಮಯಮತ -<br>ಕಾಮಿಕಾಗಮ - ೫೫/೧೫೭-೧೫೮<br>ಈಶಾನಶಿವಗುರುದೇವಪದ್ಧತಿ | ಹಗ್ಗದ ಆಕಾರವನ್ನು ಹೋಲುತ್ತದೆ. |
| ೪. | ಚತುರಾಶ್ರ | - | ಚತುರಶ್ರಾಕಾರವನ್ನು ಹೋಲುತ್ತದೆ. |
| ೫. | ಕುಂಜರಾಕ್ಷ/ಗಜಾಕ್ಷ | ಮಯಮತ<br>ಮಾನಸಾರ -೩೩/೫೮೧-೫೮೨-೫೮೫<br>ಕಾಮಿಕಾಗಮ - ೫೫/೧೫೭ ೧೫೮<br>ಈಶಾನಶಿವಗುರುದೇವಪದ್ಧತಿ | ಆನೆಯ ಕಣ್ಣಿನಾಕಾರ ವನ್ನು |
| ೬. | ಗವಾಕ್ಷ | ಮಯಮತ<br>ಮಾನಸಾರ ೧೮-೨೯೦<br>ಕಾಮಿಕಾಗಮ - ೫೫/೧೫೭-೧೫೮<br>ಈಶಾನಶಿವಗುರುದೇವಪದ್ಧತಿ | ಹಸುವಿನ ಕಣ್ಣಿನಾಕಾರವನ್ನು ಹೋಲುತ್ತದೆ. |
| ೭. | ಗುಳಿಕ | ಮಯಮತ<br>ಕಾಮಿಕಾಗಮ - ೯೪, ೧೫೮-೧೬೩<br>ಈಶಾನಶಿವಗುರುದೇವಪದ್ಧತಿ | ಹೂವು ಮತ್ತು ಚಿತ್ರಗಳ ವಿನ್ಯಾಸವನ್ನು ಹೋಲುತ್ತದೆ. |
| ೮. | ನಾಗಬಂಧ | ಮಾನಸಾರ - ೩೩/೫೮೧ | ಎರಡು ಸರ್ಪಗಳು ಸುತ್ತಿಕೊಂಡಿರುವ ಆಕಾರದಲ್ಲಿರುತ್ತದೆ |
| ೯. | ಪತ್ರಜಾಲಕ | ಕಾಮಿಕಾಗಮ - ೫೫, ೧೬೧-೧೬೨<br>ಮಾನಸಾರ XLIV / ೨೨-೩೩ | ವಿವಿಧ ಎಲೆಗಳ ಮತ್ತು ಹೂಗಳ ಆಕಾರವನ್ನು ಹೋಲುತ್ತದೆ. |
| ೧೦. | ವರ್ಧಮಾನ | ಮಯಮತ | |
| ೧೧. | ಸರ್ವತೋಭದ್ರ | ಮಯಮತ<br>ಮಾನಸಾರ | |
| ೧೨. | ಶಕರ್ಣ | ಮಯಮತ | |
| ೧೩. | ವಲ್ಲಿ | ಮಾನಸಾರ - ೩೩/೪೮೩ | ಗಿಡದ ಬಳ್ಳಿಯ ಆಕಾರ ವನ್ನು ಹೋಲುತ್ತದೆ. |
| ೧೪. | ಪುಷ್ಪಖಂಡ | ಮಯಮತ/ಕಾಮಿಕಾಗಮ<br>೧೫೮-೧೫೩ | ಹೂವು ಪತ್ರಗಳ ಆಕಾರವನ್ನು ಹೋಲುತ್ತದೆ. |



ಈಶ್ವರ ದೇವಸ್ಥಾನ
ಬೆಳ್ಳೂರು



ಜೋಳೇಶ್ವರ ದೇವಸ್ಥಾನ
ಬೇಗೂರು



ಚಂಪಕಧಾಮ ದೇವಸ್ಥಾನ
ಬನ್ನೇರುಘಟ್ಟ



ಸೋಮೇಶ್ವರ ದೇವಸ್ಥಾನ
ಕುರುಡುಮಲೆ



ನಗರೇಶ್ವರಸ್ವಾಮಿ ದೇವಸ್ಥಾನ
ಬೇಗೂರು



ವೆಂಕಟರಮಣಸ್ವಾಮಿ ದೇವಸ್ಥಾನ
ದೇವರಗುಡಿಪಲ್ಲಿ



ಭೋಗನಂದೀಶ್ವರ ದೇವಸ್ಥಾನ
ನಂದಿ



ಲಕ್ಷ್ಮಣೇಶ್ವರ ದೇವಸ್ಥಾನ
ಆವನಿ



ಅಮರನಾರಾಯಣ ದೇವಸ್ಥಾನ
ಕೈವಾರ



ನಗರೇಶ್ವರಸ್ವಾಮಿ ದೇವಸ್ಥಾನ
ಬೇಗೂರು



ಭೋಗನಂದೀಶ್ವರ ದೇವಸ್ಥಾನ
ನಂದಿ



ಕಪಿಲೇಶ್ವರ ದೇವಸ್ಥಾನ
ಮನ್ನೆ



ಲಕ್ಷ್ಮಣೇಶ್ವರ ದೇವಸ್ಥಾನ
ಆವನಿ



ಭೈರವೇಶ್ವರ ದೇವಸ್ಥಾನ
ಆವನಿ



ಭರತೇಶ್ವರ ದೇವಸ್ಥಾನ
ಆವನಿ



ಲಕ್ಷ್ಮಣೇಶ್ವರ ದೇವಸ್ಥಾನ
ಆವನಿ



ಭೈರವೇಶ್ವರ ದೇವಸ್ಥಾನ
ಆವನಿ



ಭೋಗನಂದೀಶ್ವರ ದೇವಸ್ಥಾನ
ನಂದಿ

ಫಲಕ (ದಾರುಫಲಕ)ಗಳಿಂದ ತಯಾರಿಸಬಹುದೆಂದು ಹೇಳಿವೆ.

ಶಿಲ್ಪಿಗಳು ಕಲ್ಲಿನ ಜಾಲವಾತಾಯನಗಳನ್ನು ಶಾಸ್ತ್ರಗ್ರಂಥಗಳನ್ನಾಧರಿಸಿ ವಿನ್ಯಾಸಗೊಳಿಸಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಕಲ್ಲಿನ ಆಯ್ಕೆ ಮತ್ತು ಅಲಂಕಾರಗಳಲ್ಲಿ ವರ್ಧಕಿಯು ತನ್ನ ಸ್ವಂತ ಜ್ಞಾನ ಮತ್ತು ಕಲ್ಪನೆಗಳನ್ನು ಬಳಸಿ ಉತ್ತಮ ಕಲಾಕೃತಿಗಳನ್ನು ರಚಿಸಿರುವ ಸ್ವಾತಂತ್ರ್ಯ ಕಂಡುಬರುತ್ತದೆ. ಇಡೀ ದೇವಾಲಯವನ್ನು ಕಟ್ಟಿದ ಕಲ್ಲಿಗಿಂತ ಬೇರೆಯಾದ ಕಲ್ಲಿನಲ್ಲಿ ಜಾಲವಾತಾಯನಗಳನ್ನು ನಿರ್ಮಿಸಿರುವುದು ಹತ್ತನೆಯ ಶತಮಾನದ ನೊಳಂಬರ ಕಾಲದಲ್ಲಿ ಕಂಡುಬರುವ ಒಂದು ವಿಶೇಷತೆಯಾಗಿದೆ. ನೊಳಂಬರ ಕಾಲದಲ್ಲಿ ಹಸಿರು ಮಿಶ್ರಿತ ನೀಲಿ ಬಣ್ಣದ ಅಗ್ನಿಶಿಲೆ ಕಲ್ಲನ್ನು ಜಾಲವಾತಾಯನ, ಬಾಗಿಲುವಾಡ, ಸ್ತಂಭ ಮತ್ತು ವಿಗ್ರಹಗಳ ತಯಾರಿಕೆಯಲ್ಲಿ ಬಳಸುತ್ತಿದ್ದರು. ದೇವಾಲಯವನ್ನು ಮಾತ್ರ ಕಗ್ಗಲ್ಲಿನಿಂದ ನಿರ್ಮಾಣ ಮಾಡುತ್ತಿದ್ದರು. ಅಗ್ನಿಶಿಲೆಯ ಕಲ್ಲು ಕೆತ್ತನೆಗೆ ಹೆಚ್ಚು ಯೋಗ್ಯವಾಗಿರುವುದರಿಂದ ಇದರಲ್ಲಿ ರಚಿಸಿರುವ ಕಲಾಕೃತಿಗಳು ವಿಶೇಷವಾದ ಮೆರುಗನ್ನು ಹೊಂದಿರುತ್ತದೆ. ಈ ಕಲಾಕೃತಿಗಳು ಹೆಚ್ಚು ಸ್ಪಷ್ಟವಾಗಿದ್ದು ಲೋಹದ ರೀತಿಯ ಹೊಳಪನ್ನು ಹೊಂದಿರುತ್ತವೆ.

ಸಾಮಾನ್ಯವಾಗಿ ಜಾಲವಾತಾಯನಗಳನ್ನು ದೇವಾಲಯದ ಕೋಷ್ಠಗಳಲ್ಲಿ ಕಾಣಬಹುದು. ಕೆಲವೊಮ್ಮೆ ಭಿತ್ತಿಯ ನಿರ್ಮಾಣದಲ್ಲಿ ಉಪಯೋಗಿಸಿದ ಕಲ್ಲನ್ನೇ ಜಾಲಕಕ್ಕೂ ಉಪಯೋಗಿಸಿರುವ ಉದಾಹರಣೆಗಳೂ ಇವೆ. ಹೆಚ್ಚಾಗಿ ಜಾಲಕಕ್ಕೆ ಪ್ರತ್ಯೇಕವಾದ ಕಲ್ಲಿನ ಫಲಕವೊಂದನ್ನು ಬಳಸುವುದು ವಾಡಿಕೆ. ಅದನ್ನು ಭಿತ್ತಿಯ ಮಧ್ಯದಲ್ಲಿ ಸೂಕ್ತವಾದ ಕೋಷ್ಠಗಳಲ್ಲಿ ಸೇರಿಸಿರುವುದು ಕಂಡುಬರುತ್ತದೆ. ಜಾಲವಾತಾಯನದ ಅಂಚುಗಳು ಹೆಚ್ಚು ಅಲಂಕರಣಗಳನ್ನು ಹೊಂದಿದ್ದು ಇವು ಜಾಲಕದ ಕಲ್ಲಿನಲ್ಲೇ ರಚನೆಗೊಂಡಿರುತ್ತವೆ. ಇಲ್ಲವೇ ಗೋಡೆಯ ಮೇಲೆ ರಚನೆಗೊಂಡಿದ್ದು, ಜಾಲಕಕ್ಕೆ ಹೊಂದಿಕೊಳ್ಳುವಂತೆ ವಿನ್ಯಾಸಗೊಳಿಸಿರುತ್ತಾರೆ. ಭಿತ್ತಿಯ ಭಾಗದಲ್ಲಿ ತೋರಣಾಕೃತಿಯು ಇಲ್ಲದಿದ್ದಲಿ ಜಾಲವಾತಾಯನದ ಕಲ್ಲಿನಮೇಲೆ ತೋರಣಾಕೃತಿಯನ್ನು ರಚಿಸಿರುವುದು ಕಂಡುಬರುತ್ತದೆ.[೫]

ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಜಾಲವಾತಾಯನಗಳು ಎಂಟನೆಯ ಶತಮಾನದ ಅಂತ್ಯದಲ್ಲಿ ಕಂಡುಬಂದಿವೆ.[೬] ಇಲ್ಲಿ ದೊರೆತಿರುವ ಜಾಲಕಗಳು ಸರಳವಾಗಿದ್ದು ಶಾಸ್ತ್ರೀಯವಾಗಿ ನಿರ್ಮಾಣಗೊಂಡಿವೆ. ಕಾಲಕ್ರಮೇಣ ಜಾಲಕಗಳ ಪರಿಕಲ್ಪನೆಗೆ ವಿಪುಲವಾದ ವಸ್ತು ವಿಷಯಗಳನ್ನು ಬಳಸಿಕೊಂಡಿದ್ದು ಈ ಕ್ಷೇತ್ರದಲ್ಲಿ ದೊರೆತಿರುವ ಜಾಲಕಗಳು, ಪತ್ರ ಪುಷ್ಪಗಳು, ದೇವದೇವೀ ಮೂರ್ತಿಗಳು ವಾಸ್ತು ಅಲಂಕರಣಗಳನ್ನೂ ಸಹ ಹೊಂದಿವೆ. ಹತ್ತನೆಯ ಶತಮಾನದ ನೊಳಂಬರ ಕಾಲದ ಜಾಲಕಗಳನ್ನು ಈ ಕ್ಷೇತ್ರದ ಅತ್ಯಂತ ಉತ್ಕೃಷ್ಟ ಮಟ್ಟದ ಜಾಲಕಗಳೆಂದು ಪರಿಗಣಿಸಲಾಗಿದೆ.[೭] ಹತ್ತನೆಯ ಶತಮಾನದ ಕೊನೆಯ ಹೊತ್ತಿಗೆ ಚೋಳರು ನೊಳಂಬವಾಡಿಯನ್ನು ಮುತ್ತಿಗೆ ಹಾಕಿ ಈ ಪ್ರಾಂತ್ಯಗಳನ್ನು ವಶಪಡಿಸಿಕೊಂಡರು. ಹನ್ನೊಂದನೆಯ ಶತಮಾನದ ನಂತರ ಈ ಪ್ರಾಂತ್ಯದಲ್ಲಿರುವ ದೇವಾಲಯಗಳಲ್ಲಿ ಜಾಲಕಗಳನ್ನು ಬಳಸುವ ಪದ್ಧತಿ ಕಡಿಮೆಯಾಯಿತು. ಅವುಗಳ ಗುಣಮಟ್ಟ ಮತ್ತು ವಿನ್ಯಾಸ ವಿಧಗಳಲ್ಲೂ ಕೂಡ ಗಣನೀಯ ಪ್ರಮಾಣವಾದ ಇಳಿಮುಖ ಕಂಡುಬಂತು. ವಿಜಯನಗರ ಕಾಲದ ಶಿಲ್ಪಿಗಳು ದೇವಾಲಯದ ಅಧಿಷ್ಠಾನ, ಸ್ತಂಭ ಮತ್ತು ಭಿತ್ತಿಯ ಅಲಂಕರಣಕ್ಕೆ ಪ್ರಾಮುಖ್ಯತೆ ನೀಡಿದರೆ ಹೊರತು ಉತ್ಕೃಷ್ಟ ಮಟ್ಟದ ಜಾಲವಾತಾಯನಗಳ ತಯಾರಿಕೆಯಲ್ಲಿ ಅಷ್ಟೊಂದು ಪರಿಣತರಾಗಿರಲಿಲ್ಲ. ಏಕ ಕಾಲದಲ್ಲಿ ಸರಳ ಮತ್ತು ಅತ್ಯಂತ ಕ್ಲಿಷ್ಟ ಅಲಂಕರಣಗಳನ್ನು ಹೊಂದಿರುವ ಜಾಲವಾತಾಯನಗಳು ಈ ಕ್ಷೇತ್ರದಲ್ಲಿ ಕಂಡುಬಂದಿವೆ. ಈ ಕ್ಷೇತ್ರದ ಜಾಲವಾತಾಯನಗಳನ್ನು ಅವುಗಳ ವಿನ್ಯಾಸಗಳನ್ನು ಆಧರಿಸಿ ಈ ಕೆಳಗಿನ ಶೀರ್ಷಿಕೆಯಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಿದ್ದೇನೆ.

**ರೇಖಾ ವಿನ್ಯಾಸಗಳು :** ಜಾಲವಾತಾಯನಗಳ ರಂಧ್ರಗಳನ್ನು ಗಮನಿಸಿ ಅವುಗಳನ್ನು ಎರಡು ಪ್ರಮುಖ ವಿಧಗಳಾಗಿ ವಿಂಗಡಿಸಲಾಗಿದೆ. ಅವು ಚೌಕಾಕೃತಿ ಮತ್ತು ವಜ್ರಾಕೃತಿ. ಕೆಲವೊಮ್ಮೆ ಒಂದೇ ಜಾಲಕದಲ್ಲಿ ಚೌಕಾಕೃತಿ ಮತ್ತು ವಜ್ರಾಕೃತಿಗಳನ್ನು ಗುಂಪಾಗಿ ಅಥವಾ ಸಾಲು ಸಾಲಾಗಿ ಜಾಲಕದ ಆಕೃತಿಗೆ ಅನುಗುಣವಾಗಿ ನಿರ್ಮಿಸಿರುತ್ತಾರೆ.[೮] ಒಂದೆರಡು ಜಾಲಕಗಳಲ್ಲಿ ಚೌಕಾಕೃತಿ ಹಾಗೂ ವಜ್ರಾಕೃತಿಗಳನ್ನೂ ಒಟ್ಟಿಗೆ ಬಳಸಿರುವುದು ಉಂಟು.[೯] ಚೌಕಾಕೃತಿಯ ಜಾಲಕವನ್ನು ತುರ್ಯ್ಯಾಶ್ರ ಜಾಲಕವೆಂದು ಚತುರಾಶ್ರ ಜಾಲಕವೆಂದು ಕರೆದರೆ, ವಜ್ರಾಕೃತಿಯ ರಂಧ್ರಗಳನ್ನು ಹೊಂದಿರುವ ಜಾಲಕವನ್ನು ಗವಾಕ್ಷ[೧೦] ಅಥವಾ ಗೋನೇತ್ರ ಜಾಲಕಗಳೆಂದು ಪರಿಗಣಿಸಲಾಗಿದೆ.

**ಪುಷ್ಪವಿನ್ಯಾಸಗಳು :** ಪುಷ್ಪವಿನ್ಯಾಸಗಳನ್ನು ಹೊಂದಿರುವ ಜಾಲಕಗಳು ಹೆಚ್ಚು ಸಂಖ್ಯೆಯಲ್ಲಿ ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ದೇವಾಲಯಗಳಲ್ಲಿ ಕಂಡುಬಂದಿರುವುದು ಒಂದು ಗಮನಾರ್ಹ ಸಂಗತಿಯಾಗಿದೆ. ಇದು ಕಲಾಕಾರರ ಅತ್ಯಂತ ನೆಚ್ಚಿನ ವಸ್ತು ವಿಷಯವಾಗಿತ್ತು ಎಂಬುದನ್ನು ಸೂಚಿಸುತ್ತದೆ.

ಮೊದಲಿನಿಂದಲೂ ಈ ವಸ್ತುವನ್ನು ಹೊಂದಿರುವ ಜಾಲಕಗಳು ಲಭ್ಯವಾಗಿವೆ, ಇವು ಅತ್ಯಂತ ಸುಂದರ ಮತ್ತು ಸೂಕ್ಷ್ಮ ಕೆತ್ತನೆಯನ್ನು ಹೊಂದಿವೆ. ಹೂವು ಮತ್ತು ಬಳ್ಳಿಗಳ ನಡುವೆ ಹಲವು ವಿಧದ ಎಲೆಗಳು, ಹಣ್ಣುಗಳು ಕೆತ್ತಲ್ಪಟ್ಟಿರುತ್ತವೆ. ಈ ರೀತಿಯ ಜಾಲಕವನ್ನು ಶಾಸ್ತ್ರಗ್ರಂಥಗಳು **ವಲ್ಲಿ ಜಾಲಕ**[೧೧] ಎಂದು ಹೆಸರಿಸಿವೆ. ಈ ಜಾಲಕಗಳ ನಡುವೆ ಸುರುಳಿಯ ಮಧ್ಯದಲ್ಲಿ ಗಣಗಳು, ನೃತ್ಯಗಾರ್ತಿಯರು ನೃತ್ಯಗಾರರು, ಗಿಣಿಗಳು, ಪಕ್ಷಿಗಳು ಇನ್ನೂ ಹಲವು ವಿಷಯ ವಸ್ತುಗಳನ್ನು ಚಿತ್ರಿಸಿರುವುದು ಈ ಕ್ಷೇತ್ರದ ಜಾಲಕಗಳ ವಿಶೇಷತೆಯಾಗಿದೆ.[೧೨] ಆದರೆ ವಾಸ್ತುಗ್ರಂಥಗಳು ಈ ಬಗೆಯ ಜಾಲಕಗಳ ಬಗ್ಗೆ ವಿವರಣೆಯನ್ನು ನೀಡುವುದಿಲ್ಲ. ಹಾಗಾಗಿ ಇದನ್ನು ವಲ್ಲಿ ಜಾಲಕದ ಅಡ್ಡ ಬಗೆ ಅಥವಾ ಸಂಕರ ವಿಧಾನ ಎಂದು ಪರಿಗಣಿಸಬೇಕಾಗುವುದು. ಸಾಮಾನ್ಯವಾಗಿ ಬಳ್ಳಿಗಳ ನಡುವೆ ಗಣಗಳು, ಹೆಣ್ಣು ಮತ್ತು ಗಂಡು ನೃತ್ಯಗಾರರು, ಯಕ್ಷರು ಕಿನ್ನರರು ಮತ್ತು ಕುಬ್ಜರಾಗಿರುತ್ತಾರೆ. ಇವರು ಕೆಲವೊಮ್ಮೆ ನೃತ್ಯ ಭಂಗಿಯಲ್ಲಿ ಇನ್ನೂ ಕೆಲವೊಮ್ಮೆ ಮೈಥುನ ಭಾವದಲ್ಲಿ ಇರುವುದು ಗಮನಿಸಬೇಕಾದ ಅಂಶ, ಒಂದು ವಿಶೇಷವಾದ ಜಾಲವಾತಾಯನ ಬೆಂಗಳೂರು ಜಿಲ್ಲೆಯಲ್ಲಿ ಕಂಡುಬಂದಿದ್ದು ಅದು ವಾತ್ಸ್ಯಾಯನನ ಕಾಮಸೂತ್ರದಲ್ಲಿ ವರ್ಣಿಸಿರುವ ಪ್ರೇಮದ ಆರು ಹಂತಗಳನ್ನು ಸಾಂಕೇತಿಕವಾಗಿ ವಿವರಿಸಿದೆ. ಈ ಜಾಲಕವು ಹೆಚ್ಚು ಪ್ರಭಾವಶಾಲಿಯಾಗಿರುವುದಲ್ಲದೆ, ಬೋಧಪ್ರದವೂ ಆಗಿರುವುದು ಗಮನಿಸಬೇಕಾದ ಅಂಶ. ಇದು ಒಂಭತ್ತನೆಯ ಶತಮಾನದ ಜಾಲಕವಾಗಿದ್ದು ಮನ್ನೆಯ ಕಪಿಲೇಶ್ವರ ದೇವಾಲಯದ ಭಿತ್ತಿಯಲ್ಲಿ ಲಭ್ಯವಾಗಿದೆ.[೧೩] ವಾತ್ಸ್ಯಾಯನನ ಕಾಮಸೂತ್ರದಲ್ಲಿ ಪ್ರೇಮದ ಆರು ಹಂತಗಳನ್ನು ಆರು ಅಧಿಕಾರಗಳಾಗಿ ವಿವರಿಸಿದ್ದಾರೆ. ಅವು ನಕಾಕ್ಷಾಧಿಕಾರ, ವಾಜಿಕರಣಾಧಿಕಾರ, ದತಕ್ಷಾಧಿಕಾರ, ಚುಂಬಾಧಿಕಾರ, ಆಲಿಂಗನಾಧಿಕಾರ ಮತ್ತು ಸಂಭೋಗಾಧಿಕಾರ ಎಂದು ಹೇಳಲಾಗಿದೆ. ಈ ಎಲ್ಲ ಅಧಿಕಾರಗಳನ್ನು ಈ ಜಾಲವಾತಾಯನದಲ್ಲಿ ಆಕರ್ಷಕ ರೀತಿಯಲ್ಲಿ ಶಿಲ್ಪಿಯು ಮೂಡಿಸಿದ್ದಾನೆ.

**ಮಾನವನಾಕೃತಿಯನ್ನು ಹೋಲುವ ವಿನ್ಯಾಸಗಳು :** ಕುಬ್ಜರು, ಗಣಗಳು, ನೃತ್ತಗಾರರು, ಭೂತಗಳು, ಅಪ್ಸರೆಯರು, ಗಂಧರ್ವರನ್ನು ಹೋಲುವ ಹಲವಾರು ಆಕೃತಿಗಳು ಜಾಲವಾತಾಯನಗಳಲ್ಲಿ ಕಂಡುಬರುತ್ತವೆ. ಇದರಲ್ಲಿ ಕೆಲವು ಧಾರ್ಮಿಕವಸ್ತು ವಿಷಯಗಳನ್ನು[೧೪] ಹೊಂದಿದ್ದರೆ ಮತ್ತೆ ಕೆಲವು ಲೌಕಿಕವಸ್ತು ವಿಷಯಗಳನ್ನು[೧೫] ಹೊಂದಿರುತ್ತವೆ. ಸಾಮಾನ್ಯವಾಗಿ ಈ ವಸ್ತುವಿಷಯಗಳನ್ನು ಚೌಕಟ್ಟಾದ ಅಥವಾ ಅಯತಾಕಾರದ ಮೈಕಟ್ಟಿನ ಒಳಗೆ ವಿನ್ಯಾಸಗೊಳಿಸಿರುತ್ತಾರೆ.[೧೬] ಭಿತ್ತಿಯಲ್ಲಿರುವ ಕೋಷ್ಠಗಳಲ್ಲಿಯೂ ಈ ರೀತಿಯ ರಚನೆಗಳನ್ನು ಕಾಣಬಹುದು. ಕೆಲವೊಮ್ಮೆ ಜಾಲಕವನ್ನು ಎರಡು ಅಥವಾ ಮೂರು ಅಡ್ಡ ಪಟ್ಟಿಗಳನ್ನಾಗಿ ವಿಭಜಿಸಿ, ಅದರೊಳಗೆ ಗಣಗಳನ್ನು ವಿನ್ಯಾಸಗೊಳಿಸಿರುತ್ತಾರೆ.[೧೭] ಇಂತಹ ಜಾಲಕವನ್ನು **ಗುಳಿಕಜಾಲಕ**[೧೮] ಎಂದು ವಾಸ್ತುಗ್ರಂಥಗಳು ಹೇಳಿವೆ. ಈ ರೀತಿಯ ಜಾಲಕಗಳು ಹೆಚ್ಚು ಸಂಖ್ಯೆಯಲ್ಲಿ ಬೆಂಗಳೂರು ಮತ್ತು ಕೋಲಾರ ಜಿಲ್ಲೆಯಲ್ಲಿ ದೊರೆತಿವೆ. ಕೆಲವೊಮ್ಮೆ ಗಣಗಳು, ಕುಬ್ಜರ ಜೊತೆಗೆ ವಲ್ಲಿಗಳನ್ನೂ ಪುಷ್ಪಗಳನ್ನೂ ರಚಿಸಿರುವುದು ಕಂಡುಬರುತ್ತವೆ. ಇವು ಬಹುಶಃ ಗುಳಿಕ ಜಾಲವಾತಾಯನದ ಸಂಕರ ವಿಧಾನಗಳು ಇರಬಹುದು.

**ಧಾರ್ಮಿಕ ವಸ್ತು ವಿಷಯಗಳು :** ಆಸೀನ, ಶಯನ, ಸ್ಥಾನಕ ಮತ್ತು ನೃತ್ಯಭಂಗಿಯಲ್ಲಿ ಹಿಂದೂ ದೇವ–ದೇವತೆಗಳ ಮೂರ್ತಿಗಳನ್ನು ಹೊಂದಿರುವ ಹಲವು ಜಾಲಕಗಳು ದೊರೆತಿವೆ. ವಿಷ್ಣು[೧೯], ಶಿವ, ನಟರಾಜ[೨೦], ಮಹಿಷಮರ್ದಿನಿ[೨೧] ಹಾಗೂ ಹಲವು ದೇವತೆಗಳ ಮೂರ್ತಿಗಳನ್ನು ಹೊಂದಿರುವ ಜಾಲಗಳು ಪತ್ತೆಯಾಗಿವೆ. ಈ ಮೂರ್ತಿಗಳನ್ನು ರಚಿಸಿದ ನಂತರ ಉಳಿದ ಭಾಗದಲ್ಲಿ ಚೌಕಟ್ಟಾದ, ತ್ರಿಕೋನಾಕಾರವಾದ ವಜ್ರಾಕೃತಿಯ[೨೨] ರಂಧ್ರಗಳನ್ನು ಹೊಂದಿರುವ ಜಾಲಕಗಳು ಲಭ್ಯವಾಗಿವೆ.

ಅಲೌಕಿಕ ವಸ್ತುವಿಷಯಗಳು ಈ ವಿಧಾನದಲ್ಲಿ ೨ ಪ್ರಮುಖ ಬಗೆಗಳನ್ನು ಗಮನಿಸಬಹುದು. ಹಾಡುತ್ತಾ, ಕುಣಿಯುತ್ತಾ ವಾದ್ಯಗಳೊಂದಿಗೆ ಸಂಗೀತ ಗೋಷ್ಠಿಯನ್ನು ನಡೆಸುತ್ತಾ ನಾದ ಮಾಧುರ್ಯದಲ್ಲಿ ಮೈ ಮರೆತಿರುವ ಹಲವು ಭಂಗಿಗಳ ಕುಬ್ಜರು, ಗಣಗಳು, ಭೂತಗಳು ಮೊದಲಾದ ವಸ್ತು ವಿಷಯವನ್ನು ರಚಿಸಿದ್ದಾರೆ. ಈ ಕುಬ್ಜರು ಹಲವು ರೀತಿಯ ವಾದ್ಯಗಳನ್ನು ಕೊಂಬು, ಕಹಳೆ, ಕೊಳಲು. ಮೃದಂಗ, ಗೆಜ್ಜೆ, ಖಂಜರಗಳನ್ನು ಹೊಂದಿರುವ ಗಣಗಳನ್ನು ಕಾಣಬಹುದು[೨೩]. ಇವರ ಉನ್ಮಾದ ಮತ್ತು ಆನಂದವನ್ನು ಈ ಜಾಲಕಗಳಲ್ಲಿ ಅದ್ಭುತವಾಗಿ ಚಿತ್ರಿಸಲಾಗಿದೆ. ನೃತ್ಯಾನಂದದಲ್ಲಿ ಮುಳುಗಿರುವ ಜೋಡಿಗಳ ಕಲ್ಪನೆ ಕಲಾಕಾರರಿಗೆ ಅತ್ಯಂತ ಪ್ರಿಯವಾದ ವಿಷಯವಾಗಿತ್ತೆಂಬುದರಲ್ಲಿ ಅತಿಶಯೋಕ್ತಿ ಇಲ್ಲ[೨೪]. ಇದೇ ವಿಧಾನದಲ್ಲಿ ಕಂಡು ಬರುವ ಮತ್ತೊಂದು ಪ್ರಮುಖವಾದ ವಸ್ತು ವಿಷಯವೇ ಒಂದನ್ನೊಂದು ಸುತ್ತಿಕೊಂಡಿರುವ ನಾಗರಗಳು. ಇದನ್ನು ಶಾಸ್ತ್ರಗ್ರಂಥಗಳು ನಾಗಬಂಧ ಜಾಲಕವೆಂದು[೨೫] ಹೆಸರಿಸಿವೆ. ಈ ರೀತಿಯ ಕೆಲವು ಜಾಲಕಗಳು ಈ ಕ್ಷೇತ್ರದಲ್ಲಿ ಲಭ್ಯವಾಗಿವೆ. ಭಾರತದ ವಾಸ್ತು ಕೃತಿಗಳು ಜಾಲಕಗಳನ್ನು ಎಲ್ಲೆಲ್ಲಿ ಬಳಸಬೇಕೆಂಬುದನ್ನೂ ಸೂಚಿಸಿವೆ. ವೇದಿಕೆಯ



ರಂಗನಾಥಸ್ವಾಮಿ ದೇವಸ್ಥಾನ
ರಂಗಸ್ಥಳ



ಭೋಗನಂದೀಶ್ವರ ದೇವಸ್ಥಾನ
ನಂದಿ



ಭರತೇಶ್ವರ ದೇವಸ್ಥಾನ
ಆವನಿ

ಮಧ್ಯಭಾಗ[೨೬], ಪ್ರಾಸಾದದ ಮಧ್ಯಭಾಗ, ಗ್ರೀವಭಾಗ ಹಾಗೂ ಭಿತ್ತಿಗಳಲ್ಲಿ, ಜಾಲಕಗಳು ಇರಬೇಕೆಂದು ಶಾಸ್ತ್ರಗ್ರಂಥಗಳು ಹೇಳುತ್ತವೆ. ಕಾಶ್ಯಪಶಿಲ್ಪವು ಜಾಲವಾತಾಯನಗಳು ಪ್ರಾಸಾದದ ಗ್ರೀವಭಾಗದಲ್ಲಿ ಇರಬೇಕೆಂದು ಹೇಳಿದರೆ[೨೭], ಮಾನಸಾರವು ಜಾಲಕಗಳು ಭಿತ್ತಿಯಲ್ಲಿ, ಗೋಪುರಗಳಲ್ಲಿ ಹಾಗೂ ವಿಮಾನದಲ್ಲಿರಬೇಕೆಂದು ಹೇಳುತ್ತವೆ.[೨೮] ಚಾಲುಕ್ಯರ ದೇವಾಲಯದ ಸೂರಿನಲ್ಲಿ ಜಾಲಕಗಳು ಲಭ್ಯವಾಗಿವೆ.[೨೯]

ಬೆಂಗಳೂರು ಮತ್ತು ಕೋಲಾರ ದೇವಾಲಯಗಳ ಭಿತ್ತಿಯ ಭಾಗಗಳಲ್ಲಿ ಮಾತ್ರ ಜಾಲಕಗಳು ದೊರೆತಿವೆ. ಹಲವು ದೇವಾಲಯಗಳ ಪ್ರಾಸಾದಗಳು ನಶಿಸಿ ಹೋಗಿರುವುದರಿಂದ, ಪುನರ್ರಚನೆಯಾಗಿರುವುದರಿಂದ, ಪ್ರಾಸಾದಲ್ಲಿನ ಜಾಲಕಗಳು ನಮಗೆ ಲಭ್ಯವಾಗಿಲ್ಲ.

ರಂಗಸ್ಥಳದ ರಂಗನಾಥಸ್ವಾಮಿ ದೇವಾಲಯದ ಗರ್ಭಗೃಹದ ಭಿತ್ತಿಯಲ್ಲಿ ನಾಗಬಂಧ ರೀತಿಯ ಅಪರೂಪದ ಜಾಲವಾತಾಯನವಿದೆ.[೩೦] ಸಾಮಾನ್ಯವಾಗಿ ದೇವಾಲಯದ ಗರ್ಭಗೃಹಕ್ಕೆ ಜಾಲಕಗಳು ಇರುವುದಿಲ್ಲ. ಇಲ್ಲಿ ಗರ್ಭಗೃಹದ ಒಳಭಾಗದಲ್ಲಿ ಶಯನಮೂರ್ತಿ ಇದೆ. ಸುತ್ತಲು ವೈಕುಂಠದ ಚಿತ್ರಣವಿದೆ. ವಿಷ್ಣುವಿನ ಎಲ್ಲಾ ಆಯುಧಗಳು ಕಲ್ಪವೃಕ್ಷ, ಕಾಮಧೇನು, ಸಪ್ತಋಷಿಗಳು, ಯಕ್ಷರು, ಮಂಗಳ ಚಿಹ್ನೆಗಳು ಗರ್ಭಗೃಹದಲ್ಲಿ ಸೊಗಸಾಗಿ ಚಿತ್ರಿಸಲಾಗಿದೆ. ಈ ನಾಗಬಂಧಗಳು ಭಗವಂತನ ಯೋಗನಿದ್ರೆಗೆ ಭಂಗ ಬಾರದಂತೆ ಸರ್ಪಗಾವಲಾಗಿವೆ.

ಈ ಜಾಲಕದ ಮೂಲಕ ಜನವರಿಯ ಸಂಕ್ರಾಂತಿಯ ದಿನದಂದು ಸೂರ್ಯ ರಶ್ಮಿಯು ಭಗವಂತನ ಪಾದದ ಮೇಲೆ ಬೀಳುತ್ತದೆ. ಈ ಜಾಲಕದ ಮೂಲಕ ಪಾದದರ್ಶನ ಮಾಡಲು ಸಾಧ್ಯವಾಗುತ್ತದೆ.



ಭರತೇಶ್ವರ ದೇವಸ್ಥಾನ
ಆವನಿ

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಮಯಮತದ ಹದಿನಾರನೆಯ ಅಧ್ಯಾಯ ಮತ್ತು ಮಾನಸಾರದ ಹದಿನೇಳನೆಯ ಅಧ್ಯಾಯ ಜಾಲವಾತಾಯನಗಳನ್ನು ಕುರಿತು ತಿಳಿಸುತ್ತದೆ.
೨. ರಂಗನಾಥಸ್ವಾಮಿ ದೇವಾಲಯ, ರಂಗಸ್ಥಳ, ಚಿಕ್ಕಬಳ್ಳಾಪುರ ತಾಲ್ಲೂಕು, ಕೋಲಾರ ಜಿಲ್ಲೆ, ಗರ್ಭಗೃಹದಲ್ಲಿ ಜಾಲಕಗಳನ್ನು ಹೊಂದಿದೆ.
೩. ಮಯಮತ, ಅಧ್ಯಾಯ ೧೨.
೪. ಡಾ. ಎಂ.ಎಸ್. ಕೃಷ್ಣಮೂರ್ತಿ., ದ ನೊಳಂಬಾಸ್, ಎ ಪೊಲಿಟಿಕಲ್ ಅಂಡ್ ಕಲ್ಚರಲ್ ಸ್ಟಡೀ, ಪುಟ ೧೯೮, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ.
೫. ಆವನಿಯ ಲಕ್ಷ್ಮಣೇಶ್ವರ ದೇವಾಲಯದ ಉತ್ತರ ಭಾಗದ ಭಿತ್ತಿಯಲ್ಲಿರುವ ಕೋಷ್ಠ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ, ನಟರಾಜ ಮೂರ್ತಿ, ಲಕ್ಷ್ಮಣೇಶ್ವರ ದೇವಾಲಯದ ಅಂತರಾಳದ ಗೋಡೆಯ ಮೇಲಿದೆ. ಆವನಿ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ.
೬. ಕಪಿಲೇಶ್ವರ ದೇವಾಲಯ, ಮನ್ನೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ.
೭. ಆವನಿಯ ಲಕ್ಷ್ಮಣೇಶ್ವರ ದೇವಾಲಯದ ಜಾಲಗಳು ಈ ಕ್ಷೇತ್ರದ ಅತ್ಯಂತ ಸುಂದರ ಜಾಲಗಳಾಗಿವೆ.
೮. ಬನ್ನೇರುಘಟ್ಟದ ಚಂಪಕಧಾಮಸ್ವಾಮಿ ದೇವಾಲಯ ಮತ್ತು ಕುರುಡುಮಲೆಯ ಸೋಮೇಶ್ವರ ದೇವಾಲಯ.
೯. ಈಶ್ವರ ದೇವಾಲಯ, ಬೆಳ್ಳೂರು, ಕೋಲಾರ ಜಿಲ್ಲೆ.
೧೦. ಮಯಮತ, ಅಧ್ಯಾಯ–೧೬, ಶ್ಲೋಕ ೫೭–ಬಿ.
೧೧. ಮಯಮತ, ಅಧ್ಯಾಯ–೧೬, ಶ್ಲೋಕ ೬೦–ಎ.
೧೨. ವೆಂಕಟರಮಣಸ್ವಾಮಿ ದೇವಾಲಯ, ದೇವರಗುಡಿಪಲ್ಲಿ, ಬಾಗೇಪಲ್ಲಿ ತಾಲ್ಲೂಕು, ಕೋಲಾರ ಜಿಲ್ಲೆ.
೧೩. ಜನವಶ್ಯ–ಕಲ್ಲರಸ, ಮೈಸೂರು ವಿಶ್ವವಿದ್ಯಾಲಯ ಪ್ರಸಾರಾಂಗ.
೧೪. ಭೋಗನಂದೀಶ್ವರ ದೇವಾಲಯ, ನಂದಿ, ಚಿಕ್ಕಬಳ್ಳಾಪುರ ತಾಲ್ಲೂಕು, ಮಹಿಷಮರ್ದಿನಿ ಮತ್ತು ನಟರಾಜ ಜಾಲಕಗಳನ್ನು ಹೊಂದಿವೆ.
೧೫. ಅರುಣಾಚಲೇಶ್ವರ ದೇವಾಲಯ, ನಂದಿಯಲ್ಲಿ ಗಣಗಳು, ನೃತ್ಯದ ಭಂಗಿಯಲ್ಲಿರುವ ಜಾಲಕಗಳನ್ನು ರಚಿಸಿದ್ದಾರೆ.
೧೬. ಶತೃಘ್ನೇಶ್ವರ ದೇವಾಲಯ, ಆವನಿ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ.
೧೭. ಶತೃಘ್ನೇಶ್ವರ ದೇವಾಲಯ, ಆವನಿ, ಮುಳಬಾಗಿಲು ತಾಲ್ಲುಕು, ಕೋಲಾರ ಜಿಲ್ಲೆ.
೧೮. ಮಯಮತ, ಅಧ್ಯಾಯ – ೧೬, ಶ್ಲೋಕ, ೬೨ – ಎ.
೧೯. ಲಕ್ಷ್ಮಣೇಶ್ವರ ದೇವಾಲಯ, ಆವನಿ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ ಮತ್ತು ಮುಕ್ತಿನಾಥೇಶ್ವರ ದೇವಾಲಯ, ಭಿನ್ನಮಂಗಲ, ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ.
೨೦. ಅರುಣಾಚಲೇಶ್ವರ ದೇವಾಲಯ, ನಂದಿ, ಚಿಕ್ಕಬಳ್ಳಾಪುರ ತಾಲ್ಲೂಕು, ಕೋಲಾರ ಜಿಲ್ಲೆ ಮತ್ತು ಲಕ್ಷ್ಮಣೇಶ್ವರ ದೇವಾಲಯ, ಆವನಿ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ.
೨೧. ಲಕ್ಷ್ಮಣೇಶ್ವರ ದೇವಾಲಯ, ಆವನಿ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ.
೨೨. ಲಕ್ಷ್ಮಣೇಶ್ವರ ದೇವಾಲಯ ಮತ್ತು ಶತೃಘ್ನೇಶ್ವರ ದೇವಾಲಯ, ಆವನಿ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ.
೨೩. ಭೋಗನಂದೀಶ್ವರ ದೇವಾಲಯ, ಚಿಕ್ಕಬಳ್ಳಾಪುರ ತಾಲ್ಲೂಕು, ಕೋಲಾರ ಜಿಲ್ಲೆ.
೨೪. ಲಕ್ಷ್ಮಣೇಶ್ವರ ದೇವಾಲಯ, ಆವನಿ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ.
೨೫. ಮಾನಸಾರ, ಅಧ್ಯಾಯ – ೧೭, ಶ್ಲೋಕ – ೩೨.
೨೬. ಅನಂತಶಯನಗುಡಿ, ೧೫೨೬, ಅನಂತಶಯನ ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ.
೨೭. ಕಾಶ್ಯಪಶಿಲ್ಪ, ಪಟಲ – ೯, ಶ್ಲೋಕ – ೯.
೨೮. ಮಾನಸಾರ, ಅಧ್ಯಾಯ – ೧೬, ಶ್ಲೋಕ – ೨೩.
೨೯. ಪಾಪನಾಥದೇವಾಲಯ, ಪಟ್ಟದಕಲ್ಲು, ಕರ್ನಾಟಕ.
೩೦. ರಂಗನಾಥಸ್ವಾಮಿ ದೇವಾಲಯ, ರಂಗಸ್ಥಳ, ಬೋಧಿಗೇನಹಳ್ಳಿ, ಚಿಕ್ಕಬಳ್ಳಾಪುರ ತಾಲ್ಲೂಕು, ಕೋಲಾರ ಜಿಲ್ಲೆ.

ಡಾ. ಕೆ.ಎನ್. ಮೋಹನ್*

# ಹಾಸನ ಮತ್ತು ಮಂಡ್ಯ ಜಿಲ್ಲೆಯ ಹೊಯ್ಸಳ ಸೋಮೇಶ್ವರನ ಕಾಲದ ದೇವಾಲಯಗಳ ಶಿಲ್ಪಗಳಲ್ಲಿ ಪ್ರಾಣಿ ಮತ್ತು ಸಸ್ಯಸಂಪತ್ತು

ಹೊಯ್ಸಳ ಕಲಾವಿದ ಶಿಲ್ಪಗಳಲ್ಲಿ ನೈಸರ್ಗಿಕ ಸೌಂದರ್ಯವನ್ನು ಅರ್ಥಗರ್ಭಿತವಾಗಿ ತೋರಿಸಿದ್ದಾನೆ. ಆ ಕಾಲದಲ್ಲಿ ತನ್ನ ಸುತ್ತಲಿನ ಪರಿಸರದಲ್ಲಿ ಕಂಡುಬರುವ ಸಸ್ಯ ಮತ್ತು ಪ್ರಾಣಿ ಸಂಪತ್ತು ಅದನ್ನು ಸಮಯೋಚಿತವಾಗಿ ಶಿಲ್ಪಗಳಲ್ಲಿ ಬಳಸಿಕೊಂಡಿದ್ದಾನೆ. ಪ್ರಾಚೀನ ಕಾವ್ಯಗಳಲ್ಲಿ ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ನೋಡುವುದಾದರೆ ವೇದಪುರಾಣಗಳಲ್ಲಿಯೂ ಸಹ ನದಿದೇವತೆ, ವೃಕ್ಷದೇವತೆ, ಪ್ರಾಣಿಗಳಿಗೂ ಸಹ ದೇವತಾ ಸ್ವರೂಪ ನೀಡಿ ಗೌರವಿಸಿ ಪೂಜಿಸುವುದು ಕಂಡುಬರುತ್ತದೆ. ಇವುಗಳಿಗೂ ಒಬ್ಬ ಅದಿದೇವತೆ ಇದ್ದದ್ದು ಸಹ ತಿಳಿದುಬರುತ್ತದೆ. ಹಾಗೆಯೇ ಶ್ರೇಷ್ಠ ಮತ್ತು ಜನೋಪಯೋಗಿ ಸಸ್ಯ, ಪ್ರಾಣಿಗಳಿಗೆ ಅಂದಿನ ಸಮಾಜಗಳಲ್ಲಿ ಬಹುವಾದ ಗೌರವವಿತ್ತು. ಇದೇ ಸಂಪ್ರದಾಯ ನಂತರದ ಐತಿಹಾಸಿಕ ಕಾಲದಲ್ಲಿಯೂ ಮುಂದುವರೆದು ಕೊಂಡು ಬಂದು ಕಾವ್ಯಗಳಲ್ಲಿ ವಿಶೇಷ ವರ್ಣನೆಗೆ ಪಾತ್ರವಾಗಿರುವಂತಹದು ಸಹ ಕಂಡುಬರುತ್ತದೆ.

ಹೊಯ್ಸಳ ಶಾಸನಗಳಲ್ಲಿ ಸಸ್ಯ ಮತ್ತು ಪ್ರಾಣಿ ಹೆಸರು ಉಲ್ಲೇಖಿಸಿರುವುದು ಕಂಡುಬರುತ್ತದೆ. ಹೊಸಬೂದನೂರು ಶಾಸನದಲ್ಲಿ ತೆಂಗು ಹಾಗೂ ಅಡಕೆ ಮರಗಳ ಉಲ್ಲೇಖ ನಾಗಮಂಗಲದ ಶಾಸನವು ನೇರಳೆ, ಬೇಲ ಹಾಗೂ ಪಾರಿಜಾತ ಪುಷ್ಪಗಳ ಬಗ್ಗೆ ತಿಳಿಸಿದರೆ, ಗುಂಡ್ಲುಪೇಟೆಯ ರಾಘವಪುರ ಶಾಸನದಲ್ಲಿ ಆಲ, ಮತ್ತಿ, ಕಗ್ಗಲಿ, ತುಗ್ಗಲಿ ಮತ್ತು ಅರಳಿಮರಗಳ ವಿವರಗಳಿವೆ. ಸೋಮನಾಥಪುರ ಶಾಸನದಲ್ಲಿ ಅಡಕೆ, ಹುಣಸೆ, ಶ್ರೀಗಂಧ, ಏಲಕ್ಕಿಗಳ ಬಗ್ಗೆ ಉಲ್ಲೇಖ ಇದೆ. ಜನ್ನನ ಅನಂತನಾಥಪುರಾಣದಲ್ಲಿ ಚಂಪಕ, ಮಲ್ಲಿಗೆ ಹೂವುಗಳ ಉಲ್ಲೇಖ ದೊರೆಯುತ್ತದೆ. ಅದಕ್ಕೂ ಹಿಂದೆ ಕಾಳಿದಾಸನ ರಘುವಂಶದಲ್ಲಿ ತರುಲತೆ, ಹೂಬಳ್ಳಿ ಮತ್ತು ನದಿ, ಬೆಟ್ಟಗುಡ್ಡಗಳ ಉಲ್ಲೇಖ ಮಾಡಿರುವುದು ಬಹು ಸೊಗಸಾಗಿದೆ.

## ಸಸ್ಯ ಸಂಪತ್ತು

ಹೊಯ್ಸಳ ಶಿಲ್ಪಿಗಳು ಕಲಾತ್ಮಕ ಮತ್ತು ವೈವಿಧ್ಯಮಯವಾದ ವೃಕ್ಷಗಳನ್ನು ಪ್ರಾಣಿಗಳನ್ನು ಶಿಲ್ಪದಲ್ಲಿ ತೋರಿಸಿದ್ದಾರೆ. ದೇವಾಲಯ ಭಿತ್ತಿಯಲ್ಲಿನ ಶಿಲ್ಪಗಳಲ್ಲಿ ಕಂಡುಬರುವ ವೃಕ್ಷಸಂಪತ್ತಿನ ವಿನ್ಯಾಸ ಅತ್ಯಂತ ವಿಶಿಷ್ಟ. ಬೇಲೂರು, ಹಳೇಬೀಡು, ಅರಸೀಕೆರೆ, ಜಾವಗಲ್ಲು, ಸೋಮನಾಥಪುರ ಪ್ರಸ್ತುತ ಅಧ್ಯಯನ ವ್ಯಾಪ್ತಿಯು ನುಗ್ಗಿಹಳ್ಳಿ ಮತ್ತು ಹೊಸಹೊಳಲು ದೇವಾಲಯದ ಶಿಲ್ಪಗಳಲ್ಲಿ ತುಂಬಾ ವಿಶಿಷ್ಟ ರೀತಿಯ ಪ್ರಾಣಿಗಳು ಮತ್ತು ಸಸ್ಯ ಸಂಕುಲ ಚಿತ್ರಿತವಾಗಿರುವುದು ಕಂಡುಬರುತ್ತದೆ.

**ಪಾರಿಜಾತ :** ಇದು ದೇವಲೋಕದ ಅನರ್ಘ್ಯ ವೃಕ್ಷ. ಕಲಾವಿದ ನುಗ್ಗಿಹಳ್ಳಿ ಮತ್ತು ಹೊಸಹೊಳಲು ಎರಡರಲ್ಲಿಯೂ ಪಾರಿಜಾತ ವೃಕ್ಷವನ್ನು ತೋರಿಸಿದ್ದಾನೆ. ಗರುಡನ ಮೇಲೆ ಕುಳಿತಿರುವ ಕೃಷ್ಣ ಸತ್ಯಭಾಮೆ ಚಿತ್ರದಲ್ಲಿ ಗರುಡನ ಎಡಗೈಯಲ್ಲಿ ಬೇರುಸಹಿತ ಕಿತ್ತು ತಂದ ಪಾರಿಜಾತ ವೃಕ್ಷ ಹಿಡಿದಿದ್ದಾನೆ.

**ಅರಳಿ, ಅಶ್ವತ್ಥ, ಆಲ, ತಾಳೆ, ಮಾವು ವೃಕ್ಷಗಳು :** ಈ ವೃಕ್ಷಗಳು ಪ್ರಸ್ತುತ ದೊಡ್ಡ ಮರಗಳಾಗಿವೆ ಇವುಗಳನ್ನು ಕಲಾವಿದರು ಭಿತ್ತಿ ಶಿಲ್ಪಗಳಲ್ಲಿ ನೇರವಾಗಿ ಬಳಸದೆ ಹಲವಾರು ರೀತಿಯಲ್ಲಿ ತೋರಿದ್ದಾರೆ. ನುಗ್ಗಿಹಳ್ಳಿಯಲ್ಲಿ ರೂವಾರಿ ಬೈಚೋಜ ಕೆತ್ತಿರುವ ವೇಣುಗೋಪಾಲನ ಶಿಲ್ಪದ ಮೇಲೆ ಅಶ್ವತ್ಥ ವೃಕ್ಷದ ಕೆತ್ತನೆ ಕಂಡುಬರುತ್ತದೆ. ನುಗ್ಗಿಹಳ್ಳಿಯ ಮಲ್ಲಿತಮ್ಮ ಮತ್ತು ಬೈಚೋಜರಿಬ್ಬರೂ ಮಾವಿನ ವೃಕ್ಷಗಳನ್ನು ಮತ್ತು ಮಾವಿನ ಹಣ್ಣುಗಳನ್ನು ತಮ್ಮ ಶಿಲ್ಪಗಳಲ್ಲಿ ಅಲಂಕಾರಿಕವಾಗಿ ಉಪಯೋಗಿಸಿರುವುದನ್ನು ಕಾಣಬಹುದು. ಭಾಗವತದ ಶಿಲ್ಪ ಸಾಲಿನಲ್ಲಿ ಕೃಷ್ಣನನ್ನು ಕಟ್ಟಿಹಾಕಿದ ಯಮಳಾರ್ಜುನ ವೃಕ್ಷ ಆಲವಾಗಿದೆ. ಕೃಷ್ಣನ ಚೇಷ್ಟೆಗಳು, ರಾಸಕ್ರೀಡೆಗಳನ್ನು ತೋರಿಸುವಾಗ ಕಾಡಿನ ಸಂಪತ್ತನ್ನು ಸಾಂಕೇತಿಕವಾಗಿ ಸೂಚಿಸುವ ವೃಕ್ಷಗಳ ಮಧ್ಯದಲ್ಲಿಯೇ ತೋರಿಸಲಾಗಿದೆ. ಇವುಗಳನ್ನೇ ಇಂತಹವೆಂದು ಗುರುತಿಸುವುದು ಕಷ್ಟ. ವಿಶಾಲ ವೃಕ್ಷಗಳಾಗಿರುವುದರಿಂದ ಬಹುಶಃ ಆಲ, ಹುಣಸೆ, ಅರಳಿ, ಹಲಸು ಇತ್ಯಾದಿ ವೃಕ್ಷಗಳಾಗಿರಬಹುದು. ಹೊಸಹೊಳಲಿನ ಕಥಾನಕ ಶಿಲ್ಪಗಳಲ್ಲಿಯೂ ಸಹ ಹಲವಾರು ವಿಧವಾದ ವೃಕ್ಷಸಂಪತ್ತು ತೋರಿಸಲಾಗಿದೆ. ತಾಳೆ ವೃಕ್ಷಗಳನ್ನು ರಾಮಾಯಣದ ದೃಶ್ಯದಲ್ಲಿ ತೋರಿಸಲಾಗಿ ಕಂಬದಂತಹ

*ಇತಿಹಾಸ ಉಪನ್ಯಾಸಕರು, ಬಿ.ಎಂ. ಶೆಟ್ಟಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೊಣನೂರು - ೫೭೩ ೧೩೦.









ಉದ್ದನೆಯ ಕಾಂಡವುಳ್ಳ ತಾಳೆ ಮರಗಳನ್ನು ರಾಮನು ಸುಗ್ರೀವನಿಗೆ ತನ್ನ ಶಕ್ತಿಪ್ರದರ್ಶನವನ್ನು ತೋರಿಸುವಲ್ಲಿ ಚಿತ್ರಿಸಲಾಗಿದೆ. ಹೊಸಹೊಳಲಿನ ರಾಮಾಯಣ ಕಥಾನಕ ಶಿಲ್ಪಗಳಲ್ಲಿ ಸಪ್ತತಾಳೆ ಮರಗಳ ಚಿತ್ರಣ ಕಂಡುಬರುತ್ತದೆ. ಇಲ್ಲಿ ಏಳು ತಾಳೆ ಮರಗಳನ್ನು ರಾಮನು ಒಂದೇ ಬಾಣದಿಂದ ಕಂಬದಂತಿರುವ ಸಪ್ತ ತಾಳೆ ವೃಕ್ಷಗಳನ್ನು ಛೇದಿಸಿ ಸುಗ್ರೀವನಿಗೆ ತನ್ನ ಶಕ್ತಿ ಪ್ರದರ್ಶಿಸುತ್ತಿರುವುದನ್ನು ಚಿತ್ರಿಸಲಾಗಿದೆ. ರೂವಾರಿ ಮಲ್ಲಿತಮ್ಮನು ನುಗ್ಗಿಹಳ್ಳಿಯ ದೇವಾಲಯದಲ್ಲಿ ಮಾವಿನ ಹಣ್ಣನ್ನು ವಿಶಿಷ್ಟ ರೀತಿಯಲ್ಲಿ ವಿನ್ಯಾಸಗಳ ಭಾಗವಾಗಿ ಹೂಗುಚ್ಚಗಳಂತೆ ಗೊಂಚಲು ಗೊಂಚಲುಗಳಾಗಿ ಹಲವಾರು ಶಿಲ್ಪಗಳಲ್ಲಿ ಇವುಗಳ ಜೊತೆಗಳ ಬಳ್ಳಿಗಳನ್ನು ಬಹಳ ಅರ್ಥವತ್ತಾಗಿ ಬಳಸಿಕೊಂಡಿರುವುದನ್ನು ಕಾಣಬಹುದು. ಹೂಗಳನ್ನು ಗುಚ್ಚಗಳ ರೀತಿಯಲ್ಲಿ ಚಿತ್ರಣವಿರುವುದನ್ನು ಕಾಣಬಹುದು. ಇವುಗಳ ಕಲಾವಿದನು ಸ್ತ್ರೀದೇವತೆಯರ ಕೈಯ್ಯಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ.

**ಕಬ್ಬು ಮತ್ತು ಬಾಳೆ :** ಕಬ್ಬು ಮನ್ಮಥನ ಕೈಯಲ್ಲಿ ಅವನ ಬಿಲ್ಲಿನಂತೆ ಇರುತ್ತದೆ ನುಗ್ಗಿಹಳ್ಳಿಯಲ್ಲಿ ಮಾತ್ರ ಮನ್ಮಥನ ಮತ್ತು ರಥಿಯರ ಶಿಲ್ಪಗಳಲ್ಲಿ ಕಂಡುಬರುತ್ತದೆ. ಅದೇ ರೀತಿ ಬಾಳೆ ವೃಕ್ಷಗಳೂ ಸಹ ಕೃಷ್ಣ ರುಕ್ಮಿಣಿಯರ ಡೋಲೋತ್ಸವ ಶಿಲ್ಪದ ರಚನೆಯ ಸಂದರ್ಭದಲ್ಲಿ ಕಂಬಗಳ ಹಾಗೆ ಬಾಳೆ ವೃಕ್ಷಗಳನ್ನು ಗೊನೆಗಳಿಂದ ಮತ್ತು ಅವುಗಳ ಪ್ರಿಯರಾದ ಕೋತಿಗಳ ಚಿತ್ರಣದಿಂದ ತೋರಿಸಲಾಗಿದೆ.

**ಪ್ರಾಣಿಗಳು**

ಹೊಯ್ಸಳ ಕಲಾವಿದ ಪ್ರಾಣಿಪಕ್ಷಿಗಳು, ಜಲವಾಸಿಗಳು ಮತ್ತು ಕಾಲ್ಪನಿಕ ಮತ್ತು ಪೌರಾಣಿಕ ಪ್ರಾಣಿಗಳನ್ನು ಅತ್ಯಂತ ಸುಂದರವಾಗಿ ಚಿತ್ರಿಸಿದ್ದಾನೆ. ಇವುಗಳ ಉಲ್ಲೇಖ ಅತ್ಯಂತ ಪ್ರಾಚೀನ ಕಾಲದಿಂದಲೂ ದೊರೆಯುತ್ತವೆ. ಮಾನವ ತನ್ನ ದೈನಂದಿನ ಜೀವನದಲ್ಲಿ ಪ್ರಾಣಿಗಳನ್ನು ಉಪಯೋಗಿಸಿದ ರೀತಿ ವಿಶಿಷ್ಟವಾಗಿದೆ. ನಾಯಿ, ಎಮ್ಮೆ, ಕುದುರೆ, ಎತ್ತುಗಳನ್ನು ಸಾಮಾಜಿಕ ಪ್ರಾಣಿಗಳಂತೆ ಉಪಯೋಗಿಸಿದರೆ, ಜಿಂಕೆ, ಮುಂಗುಸಿಗಳನ್ನೂ ಸಹ ಅಲಂಕಾರಿಕ ಪ್ರಾಣಿಗಳಂತೆ ದುಡಿಸಿಕೊಂಡಿದ್ದಾನೆ. ರಾಮನ ವನವಾಸ, ಕಾಳಿದಾಸನ ಶಕುಂತಲದಲ್ಲಿ, ಕಣ್ವ ಆಶ್ರಮಗಳಲ್ಲಿ ಜಿಂಕೆ, ಹಂಸ, ನವಿಲುಗಳು ಇವರ ಸ್ನೇಹಿತರಾಗಿದ್ದವು.

ಹೊಸಹೊಳಲು ಮತ್ತು ನುಗ್ಗಿಹಳ್ಳಿ ದೇವಾಲಯಗಳಲ್ಲಿ ಕಂಡುಬರುವ ಪ್ರಾಣಿಗಳನ್ನು ಸಾಧು, ಕ್ರೂರ ಪ್ರಾಣಿಗಳೆಂದು. ಸರೀಸೃಪಗಳು, ಪಕ್ಷಿಗಳನ್ನು ಮತ್ತು ಕಾಲ್ಪನಿಕ ಪ್ರಾಣಿಗಳೆಂದು ವಿಂಗಡಿಸಿದ್ದಾನೆ. ಕಾಲ್ಪನಿಕ ಪ್ರಾಣಿಗಳಲ್ಲಿ ಮಕರ ಮತ್ತು ವ್ಯಾಘ್ರಗಳನ್ನು ಅಧಿಷ್ಠಾನದ ಅಲಂಕಾರಕ್ಕೆ ಮೊಸಳೆ ಮತ್ತು ಸಿಂಹಗಳ ಮುಖಗಳನ್ನು ಹೂಬಳ್ಳಿಗಳೊಂದಿಗೆ ಚತುಷ್ಪಾದದೊಂದಿಗೆ ತೋರಣಗಳಾಗಿ ಬಳಸಿದ್ದಾರೆ.

## ಸಾಧು ಪ್ರಾಣಿಗಳು

**ಜಿಂಕೆ** : ಹೊಸಹೊಳಲಿನ ರಾಮಾಯಣದ ಕಥಾನಕ ಶಿಲ್ಪಗಳಲ್ಲಿ ಮಾಯಾಮೃತದ ಭೇಟೆಯಲ್ಲಿ ಜಿಂಕೆಯನ್ನು ತೋರಿಸಲಾಗಿದೆ.

**ಕುದುರೆ** : ಇವುಗಳನ್ನು ಶಿಲ್ಪಿಗಳು ಅಧಿಷ್ಠಾನದ ಎರಡನೇ ಪಟ್ಟಿಕೆಯಾಗಿ ಉಪಯೋಗಿಸಿರುವುದು ನುಗ್ಗಿಹಳ್ಳಿ ಮತ್ತು ಹೊಸಹೊಳಲು ಎರಡು ದೇವಾಲಯಗಳ ಅದಿಷ್ಠಾನ ಮತ್ತು ಭಿತ್ತಿಗಳಲ್ಲಿ ಇವುಗಳಿಗೆ ಚಲನವಲನ ಮತ್ತು ಯುದ್ಧೋತ್ಸಾಹ ತುಂಬಿ ಚಿತ್ರಿಸಿದ್ದಾನೆ.

**ಒಂಟೆ** : ಹೊಸಹೊಳಲು ಮತ್ತು ನುಗ್ಗಿಹಳ್ಳಿ ದೇವಾಲಯಗಳೆರಡರಲ್ಲಿಯೂ ಕುದುರೆಗಳ ಸಾಲಿನಲ್ಲಿಯೇ ಹಲವಾರು ಚಿತ್ರವಿದ್ದು ಇವುಗಳನ್ನು ಯುದ್ಧ ಸಾಮಗ್ರಿ ಹಾಗೂ ರಣವಾದ್ಯಗಳನ್ನು ಹೊರುವುದಕ್ಕೆ ಉಪಯೋಗಿಸುತ್ತಿದ್ದರು.

**ನಾಯಿ** : ಇದು ಅತ್ಯಂತ ನಂಬಿಕೆಯ ಪ್ರಾಣಿ. ಶ್ವಾನದ ಚಿತ್ರಣವು ನುಗ್ಗಿಹಳ್ಳಿಯ ಭೈರವನ ಶಿಲ್ಪದಲ್ಲಿ ರುಂಡದಿಂದ ಬೀಳುವ ರಕ್ತವನ್ನು ಕುಡಿಯಲು ನೆಗೆಯುತ್ತಿರುವಂತೆ ತೋರಿಸಿದ್ದಾನೆ.

**ಮೀನು, ಆಮೆ, ಸರ್ಪ, ಮೊಸಳೆ** : ಮೀನು ಮತ್ತು ಮೊಸಳೆಗಳನ್ನು ಎರಡು ದೇವಾಲಯಗಳಲ್ಲಿಯೂ ವಿಷ್ಣುವಿನ ಅವತಾರಗಳಂತೆ ತೋರಿಸಲಾಗಿರುವ ಶಿಲ್ಪದಲ್ಲಿ ಸರಿಸೃಪಗಳನ್ನು ತೋರಿಸಿದ್ದಾನೆ. ಹಾಗೆಯೇ ಕಾಳಿಂಗ ಮರ್ದನ ಸರ್ಪಶಿಲ್ಪದಲ್ಲಿ ತೋರಿಸಿದ್ದು. ತ್ರಿವಿಕ್ರಮನ ಶಿಲ್ಪದಲ್ಲಿ ಗಂಗಾ ನದಿಯನ್ನು ತೋರಿಸುವಾಗ ಅದರ ಪ್ರವಾಹದಲ್ಲಿ ಸರಿಸೃಪಗಳನ್ನು ತೋರಿಸಿದ್ದಾನೆ. ವಿಷ್ಣುವಿನ ಆಸನವಾಗಿ ಸರ್ಪವನ್ನು ಉಪಯೋಗಿಸಿರುವುದು ಎರಡು ಸ್ಥಳಗಳ ಅಮರನಾರಾಯಣ ಶಿಲ್ಪಗಳಲ್ಲಿ ಕಂಡುಬರುತ್ತದೆ. ಕಾಳಿಂಗ ಧಮನ ಶಿಲ್ಪದಲ್ಲಿ ಏಳು ಹೆಡೆಗಳ ಸರ್ಪ ಅರ್ಧ ಮನುಷ್ಯ ಮತ್ತು ಅರ್ದ ಸರಿಸೃಪರೂಪದಲ್ಲಿ ನಾಗದೇವತೆ ಶಿಲ್ಪಗಳು ಕಂಡುಬರುತ್ತವೆ. ಹೊಸಹೊಳಲಿನ ಶಿಲ್ಪಗಳಲ್ಲಿ ಸರ್ಪವನ್ನು ಸಮುದ್ರ ಮಂಥನಕ್ಕೆ ಕಡೆಗೋಲನ್ನಾಗಿ ಕಡೆಯಲು ಬಳಸಿರುವುದು ತುಂಬಾ ಮನೋಜ್ಞವಾಗಿ ಕಂಡುಬರುತ್ತದೆ.

**ಟಗರು** : ಸಾದು ಪ್ರಾಣಿಯಾದ ಇದು ಅಷ್ಟದಿಕ್ಪಾಲಕರ ಶಿಲ್ಪದಲ್ಲಿ ಟಗರು ಅಗ್ನಿಯ ವಾಹನವಾಗಿ ತುಂಬಾ ಆಕರ್ಷಕವಾಗಿದೆ.

**ವಾನರು** : ನುಗ್ಗಿಹಳ್ಳಿ ಮತ್ತು ಹೊಸಹೊಳಲು ಎರಡೂ ದೇವಾಲಯಗಳಲ್ಲಿ ವಾನರರನ್ನು ಹಲವಾರು ರೂಪಗಳಲ್ಲಿ ತೋರಿಸಲಾಗಿದೆ. ಮೋಹಿನಿಯ ಸೀರೆಯನ್ನು ಎಳೆಯುತ್ತಿರುವಂತೆ ನುಗ್ಗಿಹಳ್ಳಿಯ ಡೋಲೋತ್ಸವ ಶಿಲ್ಪದಲ್ಲಿ ಬಾಳೆಮರ ಹಾಗೂ ಕೃಷ್ಣನ ಗೋವರ್ಧನ ಶಿಲ್ಪದಲ್ಲಿ ಗಿರಿಯ ಮೇಲೂ ಸಹ ವಾನರ ಶಿಲ್ಪವನ್ನು ತುಂಬಾ ಆಕರ್ಷಕವಾಗಿ ಕೆತ್ತಲಾಗಿದೆ.

## ಕ್ರೂರಪ್ರಾಣಿಗಳು

ಜನ್ನ ತನ್ನ ಅನಂತನಾಥಪುರಾಣದಲ್ಲಿ ಕ್ರೂರಪ್ರಾಣಿಗಳು ಒಂದಕ್ಕೊಂದು ಹೇಗೆ ವೈರಿಗಳೆಂದು ಹೇಳುತ್ತಾ – ಹುಲಿ–ಸಿಂಹ–ಆನೆ–ಸಾರಂಗ–ಹಾವು–ಶಾರ್ದೂಲವೆಂಬ ಕಾಲ್ಪನಿಕ ಪ್ರಾಣಿಯ ವಿವರ ನೀಡುತ್ತಾನೆ. ಇವು ಎಷ್ಟು ಕ್ರೂರವಾಗಿದ್ದರೂ ತಮ್ಮ ಆತ್ಮರಕ್ಷಣೆಗೆ ಸ್ವತಃ ಹೋರಾಟ ನಡೆಸುತ್ತವೆ ಎಂದು ತಿಳಿಸುತ್ತಾನೆ. ಇವುಗಳ ಮೂಲಗುಣಧರ್ಮದಿಂದ ಈ ಪ್ರಾಣಿಗಳಿಗೆ ಈ ಹೆಸರು ಬಂದಿದೆ. ಆನೆಯು ಹೊಯ್ಸಳ ಶಿಲ್ಪದಲ್ಲಿ ಗಜಲಕ್ಷ್ಮಿ ಮತ್ತು ಅದಿಷ್ಟಾನದಲ್ಲಿ ಕಂಡುಬರುತ್ತದೆ. ಹುಲಿ ಮತ್ತು ಸಿಂಹಗಳ ಶಿಲ್ಪ ಈ ದೇವಾಲಯಗಳಲ್ಲಿ ತುಂಬಾ ವಿರಳ.

**ಸಿಂಹ** : ಸಿಂಹವನ್ನು ರಾಜನಿಗೆ ಹೋಲಿಸಿ ರಾಜಸಿಂಹಾಸನವನ್ನಾಗಿ ಹೆಸರಿಸಿದ್ದಾರೆ. ಸಿಂಹದ ವಿವಿಧ ವಿನ್ಯಾಸಗಳಾಗಿ ವ್ಯಾಳ, ಶಾರ್ದೂಲ, ಮಕರ ಇವುಗಳ ದೇಹವಾಗಿ ಸಿಂಹದ ದೇಹವನ್ನು ಅಳವಡಿಸಿದ್ದಾರೆ. ನುಗ್ಗಿಹಳ್ಳಿಯ ದುರ್ಗಾಮಹಿಷಮರ್ದಿನಿಯ ಶಿಲ್ಪವು ಪೀಠದಲ್ಲಿ ಸಿಂಹವನ್ನು ಹೊಂದಿದೆ. ಸದಾಶಿವ ದೇವಾಲಯದ ಮಹಿಷಮರ್ದಿನಿ ಶಿಲ್ಪದಲ್ಲಿ, ಹೊಸಹೊಳಲು ದೇವಾಲಯದ ಗರ್ಭಗೃಹ ಮತ್ತು ದ್ವಾರಬಂಧಗಳ ಪಾರ್ಶ್ವದಲ್ಲಿ ಅಲಂಕಾರಿಕವಾಗಿ ಸಿಂಹ ಮುಖಗಳನ್ನು ತೋರಿಸಲಾಗಿದೆ. ಸಿಂಹವು ವಾಹನವಲ್ಲದೆ ಶಿಲ್ಪಗಳ ಕೀರ್ತಿಮುಖಗಳು, ಆಭರಣ, ಕಿರೀಟ ಮತ್ತು ಪ್ರಭಾವಳಿಗಳಲ್ಲಿ ಅಲಂಕಾರಿಕ ರೂಪವನ್ನು ಎಲ್ಲಕ್ಕೂ ಮಿಗಿಲಾಗಿ ವಿಷ್ಣುವಿನ ನಾಲ್ಕನೇ ಅವತಾರವಾದ ನರಸಿಂಹನನ್ನು ಸ್ಪಷ್ಟವಾಗಿ ಉದಾಹರಿಸಲಾಗಿದೆ.

**ಆನೆ** : ಆನೆಯು ಕ್ರೂರ ಪ್ರಾಣಿಯಾದರೂ ಸಹ ದೇವತೆಗಳ ಜೊತೆಗಾರನಾಗಿ ಇರುವುದನ್ನು ಕಾಣಬಹುದು. ಲಕ್ಷ್ಮಿ ಮತ್ತು ಇಂದ್ರನ ವಾಹನವಾಗಿದೆ. ಅಶೋಕನ ಕಾಲದಲ್ಲಿನ ಸ್ತಂಭಗಳಲ್ಲಿ ಕಂಡುಬರುವ ಪ್ರಾಣಿ. ಇತ್ತೀಚಿನ ವಿಜಯನಗರ ಕಾಲದವರೆಗೂ ದೇವಾಲಯದ ಅಧಿಷ್ಠಾನದ ಉಪಾನಗಳಲ್ಲಿ ಸಾಂಕೇತಿಕವಾಗಿ ಆನೆಗಳನ್ನು ಶಿಲ್ಪಿ ದುಡಿಸಿಕೊಂಡಿದ್ದಾನೆ. ನುಗ್ಗಿಹಳ್ಳಿ ಮತ್ತು ಹೊಸಹೊಳಲು ದೇವಾಲಯಗಳಲ್ಲಿ ಇಂದ್ರ ಗಜಾರೂಡನಾಗಿ ಕಾಣುತ್ತಾನೆ. ಎರಡೂ ದೇವಾಲಯದ ಭಿತ್ತಿಗಳಲ್ಲಿ ಗಜಾರೂಢ ಇಂದ್ರಶಚಿಯರ ಶಿಲ್ಪ. ಲಕ್ಷ್ಮಿನಾರಾಯಣರ ಶಿಲ್ಪದಲ್ಲಿಯೂ ಸಹ ಕಿರಿದಾದ ಕೆತ್ತನೆ ಇದೆ. ಭಾರವಾಹಕಗಳಾಗಿರುವ ಆನೆಗಳನ್ನು ಎರಡೂ ದೇವಾಲಯದ ಅದಿಷ್ಟಾನದಲ್ಲಿ ಕೆತ್ತಲಾಗಿದೆ. ಗಜವದನದ ಗಣೇಶನ ಮುಖವು ಆನೆಯದು. ಹೀಗೆ ಆನೆ ಎರಡೂ ದೇವಾಲಯಗಳಲ್ಲಿ ಕಂಡುಬರುತ್ತದೆ.

**ವ್ಯಾಘ್ರ :** ಈ ಮನೆತನದ ಸಳನು ಹುಲಿಯೊಡನೆ ಸೆಣಸುತ್ತಿರುವ ದೃಶ್ಯ ಅತ್ಯಂತ ವಿಶಿಷ್ಟ. ಹೊಯ್ಸಳ ದೇವಾಲಯದ ಒಂದಲ್ಲಾ ಒಂದು ಚಿತ್ರದಲ್ಲಿ ಹುಲಿ ಕಂಡುಬಂದರೂ ನುಗ್ಗಿಹಳ್ಳಿ ದೇವಾಲಯದಲ್ಲಿ ಎರಡು ಬಾರಿ, ಹೊಸಹೊಳಲಿನ ಮಂಟಪದ ಕಕ್ಷಾಸನಗಳ ಮೇಲೆ ಮತ್ತು ದ್ವಾರಬಂಧಗಳ ಎರಡೂ ಬದಿಗಳಲ್ಲಿ ಹುಲಿಯನ್ನು ಅಲಂಕಾರಿಕವಾಗಿ ಕೆತ್ತಲಾಗಿದೆ.

**ಹಂದಿ :** ಇದು ಸಾದು ಮತ್ತು ಕ್ರೂರ ಪ್ರಾಣಿ ಎರಡೂ ಹೌದು. ವರಾಹವು ವಿಷ್ಣುವಿನ ದಶಾವತಾರದಲ್ಲಿ ಮೂರನೆಯದು. ವರಾಹನ ಶಿಲ್ಪವು ಎರಡೂ ಕಡೆಗಳಲ್ಲಿ ಕಂಡುಬರುತ್ತವೆ. ಹೊಸಹೊಳಲಿನ ಕಿರಾತಾರ್ಜುನಿಯ ಶಿಲ್ಪದಲ್ಲಿ ಹಂದಿ ಕಂಡರೆ ರಾಮಾಯಣದ ಪರ್ಣಕುಟೀರ ದಲ್ಲಿನ ದೃಶ್ಯದಲ್ಲಿ ಕಾಡಿನ ಚಿತ್ರಣವಿರುವಲ್ಲಿ ಹಂದಿಯ ಕೆತ್ತನೆ ಇದೆ.

### ಪಕ್ಷಿಗಳು

ಹೊಯ್ಸಳ ಕಲಾವಿದರು ನಿಸರ್ಗಪ್ರಿಯರು ಎಂಬುದಕ್ಕೆ ಪಕ್ಷಿಗಳು ಶಿಲ್ಪಗಳಲ್ಲಿ ಕಂಡುಬಂದಿರುವುದನ್ನು ಗಮನಿಸಬಹುದು. ಹಂಸ, ನವಿಲು, ಗಿಳಿ, ಗರುಡ ಮೊದಲಾದ ಪಕ್ಷಿಗಳು ಅಲಂಕಾರಿಕ ರೂಪದಲ್ಲಿ ಮತ್ತು ದೇವತೆಗಳ ವಾಹನಗಳಾಗಿ ಹಂಸವನ್ನು ಅಲಂಕಾರಿಕ ಪಟ್ಟಿಕೆಯಂತೆ ವಿನ್ಯಾಸಪಡಿಸಿದ್ದಾರೆ. ಗರುಡನನ್ನು ಮನುಷ್ಯನ ರೂಪದಲ್ಲಿ ವಿಷ್ಣುವಿನ ಹಲವಾರು ರೂಪಗಳ ಪೀಠದ ಪಟ್ಟಿಕೆಯ ಮೇಲೆ ಕೆತ್ತಲಾಗಿದೆ. ಎರಡೂ ದೇವಾಲಯದಲ್ಲಿಯೂ ಆಕರ್ಷಕ ಶರೀರ ಹೊಂದಿರುವ ರೆಕ್ಕೆಗಳನ್ನು ಸಹಿತ ತೋರಿಸಲಾಗಿದೆ. ಕೃಷ್ಣ ಸತ್ಯಭಾಮೆಯರನ್ನು ಹೆಗಲ ಮೇಲೆ ಕೂಡಿಸಿಕೊಂಡು ಕೈಯ್ಯಲ್ಲಿ ಪಾರಿಜಾತ ಹಿಡಿದುಕೊಂಡಿರುವ ಶಿಲ್ಪ ಆಕರ್ಷಕ. ಹೊಸಹೊಳಲಿನ ಕಥಾನಕ ಶಿಲ್ಪಗಳಲ್ಲಿ ದೇವತೆಗಳೊಂದಿಗೆ ಕಾದಾಟದ ದೃಶ್ಯದ ಶಿಲ್ಪಗಳಲ್ಲಿ ತೋರಿಸಲಾಗಿದೆ.

**ಗಿಳಿ :** ಮನ್ಮಥನ ವಾಹನ ಗಿಳಿ. ಇದು ಎಲ್ಲಿಯೂ ಮನ್ಮಥ ಶಿಲ್ಪದೊಂದಿಗೆ ಕಾಣುವುದಿಲ್ಲ. ಹೊಸಹೊಳಲಿನ ಸ್ತ್ರೀಯ ಶಿಲ್ಪದಲ್ಲಿ ಮುಂಗೈಮೇಲ ಗಿಳಿಯನ್ನು ತೋರಿಸಿ ಸ್ತ್ರೀ ಸಂಭಾಷಿಸುತ್ತಿರುವಂತೆ ಕೆತ್ತಲಾಗಿದೆ.

**ನವಿಲು :** ಹೊಸಹೊಳಲಿನ ಪಾರ್ವತಿ ಶಿಲ್ಪದಲ್ಲಿನ ಕುಮಾರಸ್ವಾಮಿ ವಿಗ್ರಹದಲ್ಲಿ ವಾಹನವಾಗಿ ನವಿಲು ನುಗ್ಗಿಹಳ್ಳಿಯ ಸದಾಶಿವ ದೇವಾಲಯದ ಬಿಡಿ ವಿಗ್ರಹದಲ್ಲಿ ನವಿಲಿನ ಚಿತ್ರ ಗಮನ ಸೆಳೆಯುತ್ತದೆ.

ಹೊಯ್ಸಳ ಶಿಲ್ಪಿಗಳು ಎಲ್ಲಾ ವಿಧವಾದ ಪ್ರಾಣಿಪಕ್ಷಿಗಳನ್ನು ಮತ್ತು ಸಸ್ಯಸಂಪತ್ತನ್ನು ಶಿಲ್ಪಗಳ ರೂಪದಲ್ಲಿ ಬಳಸಿ ಬೆಳೆಸಿರುವುದನ್ನು ಕಾಣಬಹುದು. ಸಮಾಜಕ್ಕೆ ಪೂರಕವಾದ ಸಕಲ ಜೀವಜಂತುಗಳೂ ಸಹ ಅವನೊಡನೆ ಬೇಕು ಎಂಬುದನ್ನು ಅರಿತು ಪ್ರಾಚೀನ ಕಲಾವಿದರು ಮರಗಿಡ, ಬಳ್ಳಿ, ಫಲಪುಷ್ಪ ಎಲ್ಲಾ ರೀತಿಯ ಪ್ರಾಣಿಗಳು ಮತ್ತು ಪಕ್ಷಿಗಳನ್ನು ನೈಜವಾಗಿ ಅತ್ಯುತ್ತಮವಾಗಿ ರೂಪಿಸಿದ್ದಾರೆ ಎಂದು ಹೇಳಬಹುದು.

## ಆಧಾರಸೂಚಿ ಮತ್ತು ಟಿಪ್ಪಣಿಗಳು


. **ಎಪಿಗ್ರಾಫಿಯಾ ಕರ್ನಾಟಿಕ**–V, ಬೇಲೂರು, ನುಗ್ಗಿಹಳ್ಳಿ.
. **ಎಪಿಗ್ರಫಿಯಾ ಕರ್ನಾಟಿಕ**–VII, ಮಂಡ್ಯ.
. **ರಘುವಂಶ,** (ಕನ್ನಡಕ್ಕೆ ಎಸ್.ವಿ. ಪರಮೇಶ್ವರಭಟ್ಟ)
. I) ಪಟೇಲ್ ದಯಾನಂದ ಟಿ.. "ಹೊಯ್ಸಳ ಶಿಲ್ಪಗಳಲ್ಲಿ ಕಂಡುಬರುವ ಸಸ್ಯ ಸಂಪತ್ತು" **ಇತಿಹಾಸ ದರ್ಶನ**–೧೯೯೮.
II) Flora as represented in Hoysala sculptures, *Mysore University Journal*, art section Vol. XLVII - 1985.
. Shivaram Murthy C., *Birds and animals in Indian sculptures.*
. S.K. Meti., *Master pieces of Hoysala art.*
. R. Narasimhachar., 1919, *The Laxmidevi temple at Doddagaddavalli*, Bangalore.
. ಪಾಂಡುಕುಮಾರ., ೧೯೯೮, **ಅರಸೀಕೆರೆ, ಹಾರ್ನಹಳ್ಳಿ, ಜಾವಗಲ್ಲು ಹೊಯ್ಸಳ ದೇವಾಲಯಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನ,** ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ.
. **ಜಗನ್ನಾಥ ವಿಜಯ.**
೧೦. **ಅನಂತನಾಥ ಪುರಾಣ.**


### ಪೌರಾಣಿಕ ಆಧಾರಗಳು

. ಇಂದ್ರನ ಆನೆ ಐರಾವತ.
. ಗಜಲಕ್ಷ್ಮೀಯ ಶಿಲ್ಪಗಳು.
. ಅಷ್ಟದಿಕ್ಪಾಲರಿಗೆ ವಾಹನಗಳು.
. ಸಳನು ಕೊಲ್ಲುತ್ತಿರುವ ಹುಲಿಯ ಚಿತ್ರ.
. ದೇವಾಲಯದ ಅಧಿಷ್ಠಾನದಲ್ಲಿ ಶಕ್ತಿ ಸಂಕೇತವಾಗಿ ಕಂಡುಬರುವ ಆನೆ, ಒಂಟೆ ಮತ್ತು ಕುದುರೆ ಸಾಲುಗಳು.

ಡಾ. ವೈ. ಉಮಾನಾಥಶೆಣೈ*

# ಶ್ರೀಕ್ಷೇತ್ರ ಧರ್ಮಸ್ಥಳದ ಉಗಮ ಮತ್ತು ಬೆಳವಣಿಗೆ

ಧರ್ಮಸ್ಥಳವು ಪ್ರಾಚೀನ ಕಾಲದಿಂದಲೂ ಕುಡುಮ ಎಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು. ಇಲ್ಲಿ ನಡೆಯುತ್ತಿದ್ದ ದಾನ ಧರ್ಮಗಳಿಂದಾಗಿ ಕೊಡುವ ಕ್ಷೇತ್ರ ಎಂಬ ಅರ್ಥ ಬರುವಂತೆ ಕುಡುಮ ಎಂಬ ಹೆಸರಿನಿಂದ ಕರೆಯುತ್ತಿರಬೇಕು. ಎರಡನೆಯದಾಗಿ ಈ ಹೆಸರಿಗೆ ಇಲ್ಲಿ ಕಾಳರಾಹು, ಕಾಳರ್ಕಾಯಿ, ಕನ್ಯಾಕುಮಾರಿ ಮತ್ತು ಕುಮಾರಸ್ವಾಮಿ ಎಂಬ ಧರ್ಮದೇವತೆಗಳು ನೆಲೆಸಿರುವುದು ಕಾರಣವೆಂದು ಹೇಳಲಾಗುತ್ತದೆ. ಮೂರನೆಯದಾಗಿ ಶೈವ, ವೈಷ್ಣವ, ಜೈನ ಮತ್ತು ಬೌದ್ಧ ಧರ್ಮ ಮೂಲದ ಶ್ರೀ ಮಂಜುನಾಥ ಸ್ವಾಮಿಯು ಆರಾಧಿಸಲ್ಪಡುವ ಇಲ್ಲಿ ಎಲ್ಲ ಧರ್ಮಗಳವರಿಗೂ ಶ್ರದ್ಧೆಯ ಕೇಂದ್ರವಾಗಿರುವುದರಿಂದ ಇದನ್ನು ಧರ್ಮಸ್ಥಳವೆಂದು ಕರೆಯುವ ಸಂಪ್ರದಾಯ ಬೆಳೆದು ಬಂದಿರಬೇಕು.

ಆದರೆ ಈ ಮೂರು ಕಾರಣಗಳ ಪೈಕಿ ಇಲ್ಲಿ ನಡೆಯುವ ದಾನಧರ್ಮಗಳಿಂದಾಗಿ ಈ ಹೆಸರು ಬಂದಿರಬೇಕೆನ್ನುವುದು ಹೆಚ್ಚು ಸರಿಯಾದೀತೆಂದು ಕಾಣುತ್ತದೆ. ಏಕೆಂದರೆ ಕ್ರಿ.ಶ. ೧೭೩೧ರ ಕೊಡಗಿನ ಅರಸ ಹಾಲೇರಿ ದೊಡ್ಡ ವೀರಪ್ಪ ಒಡೆಯನ ಹೆಗ್ಗಡೆಹಳ್ಳಿ ಶಾಸನ ಹಾಗೂ ಕ್ರಿ.ಶ. ೧೭೭೨ರ ದೇವಪ್ಪ ರಾಜ ಒಡೆಯರ ಕಾಂಚೋಡು ಶಾಸನದಲ್ಲಿಯೂ 'ಕುಡುಮದ ಮಂಜುನಾಥ'ನ ಉಲ್ಲೇಖವಿದ್ದು ಧರ್ಮಸ್ಥಳವನ್ನು ಕುಡುಮ ಎಂಬ ಹೆಸರಿನಿಂದ ಕರೆಯಲಾಗಿದೆ. ಆದರೆ ಕುಡುಮ ಎಂಬ ಈ ದೇಸಿ ಹೆಸರನ್ನು ಇಲ್ಲಿಗೆ ಆಗಮಿಸುತ್ತಿದ್ದ ಉಡುಪಿ ಸೋದೆ ಮಠದ ಯತಿಗಳಾದ ಶ್ರೀ ವಾದಿರಾಜ ಸ್ವಾಮಿಗಳು (ಕ್ರಿ.ಶ. ೧೪೮೦–೧೬೦೦) ಅದೇ ಅರ್ಥ ಬರುವಂತೆ ಕುಡುಮವನ್ನು ಧರ್ಮಸ್ಥಳವೆಂದು ಸಂಸ್ಕೃತೀಕರಣಗೊಳಿಸಿದರೆಂದು ಹೇಳಲಾಗಿದೆ. ಇದಕ್ಕಿರುವ ಸ್ಪಷ್ಟ ಪುರಾವೆಯೆಂದರೆ ಇಲ್ಲಿಯ ಹೆಗ್ಗಡೆಯವರಾಗಿದ್ದ ಕುಮಾರಯ್ಯ ಹೆಗ್ಗಡೆಯವರು ಕ್ರಿ.ಶ. ೧೮೨೦ರಲ್ಲಿ ಬ್ರಿಟಿಷರ ಸರ್ಕಾರಕ್ಕೆ ಕೊಟ್ಟ ಹೇಳಿಕೆ. (೧೮೨೦ರ ಸೆಪ್ಟೆಂಬರ್ ೪ರಂದು ಮದ್ರಾಸಿನ ಫೋರ್ಟ್ ಸೈಂಟ್ ಜಾರ್ಜ್‌ನಲ್ಲಿದ್ದ ಈಸ್ಟ್ ಇಂಡಿಯಾ ಕಂಪನಿಯ ಬೋರ್ಡ್ ಆಫ್ ರೆವಿನ್ಯೂವಿನ ಅಧ್ಯಕ್ಷರು ಮತ್ತು ಸದಸ್ಯರಿಗೆ ಮದರಾಸಿನ ಬ್ರಿಟಿಷ್ ಕಮಿಷನರ್ ಮಿ। ಹೆಚ್.ಎಸ್. ಗ್ರೇಮ್ಸ್ ಎಂಬವರು ಕಳುಹಿಸಿದ ವರದಿ ಇದು ತಮಿಳುನಾಡು ಆರ್ಕೈವ್ಸ್‌ನಲ್ಲಿರುವ ಮ್ಯಾನಸ್ಕ್ರಿಪ್ಟ್ ವಾಲ್ಯೂಂ ಸಂಖ್ಯೆ *864-Proceedings of the Board of Revenue for the year-1820)*

## ಅ. ಧರ್ಮಸ್ಥಳದ ಉಗಮ

ಕರ್ನಾಟಕದಲ್ಲಿ ಸಹ್ಯಾದ್ರಿ ಪರ್ವತಗಳ ಪಶ್ಚಿಮದ ಇಳಿಜಾರು ಪ್ರದೇಶವು ಹರಿದ್ವರ್ಣದ ಸಹಜ ಸಸ್ಯವರ್ಗದಿಂದ ತುಂಬಿದೆ. ಆದುದರಿಂದ ಉಷ್ಣವಲಯಕ್ಕೆ ಸೇರಿದ್ದರೂ, ಇಲ್ಲಿಯ ಪರಿಸರದ ಹವಾಗುಣ ತಂಪು. ಪಶ್ಚಿಮ ಘಟ್ಟದ ಶಿಖರಗಳು ಹಲವಾರು ನದಿಗಳಿಗೆ ಜನ್ಮ ಸ್ಥಾನವಾಗಿರುವಂತೆ, ಈ ಘಟ್ಟಗಳಿಂದ ಬೇರೆಯಾಗಿ ಪಶ್ಚಿಮ ದಿಕ್ಕಿಗೆ ಹರಡಿರುವ ಬೆಟ್ಟಗಳ ಸಾಲುಗಳ ಪೈಕಿ ಒಂದಾಗಿರುವ ಕುದುರೆಮುಖದಿಂದ ನೇತ್ರಾವತಿ ನದಿಯು ಹುಟ್ಟಿ ಇದೇ ಪ್ರದೇಶದಿಂದ ಹೊರಟು ಬರುವ ಹಲವಾರು ಚಿಕ್ಕ ನದಿ, ತೊರೆಗಳ ನೀರನ್ನು ಸೇರಿಸಿಕೊಳ್ಳುತ್ತಾ ಧರ್ಮಸ್ಥಳವಿರುವಂತಹ ಪ್ರದೇಶಕ್ಕೆ ಹರಿದು ಬರುತ್ತದೆ. ಹೀಗೆ ಧರ್ಮಸ್ಥಳಕ್ಕೆ ಬೇಕಾದ ನೀರನ್ನೂ, ಎಲ್ಲಾ ಕಾಲಗಳಲ್ಲಿ ಇಲ್ಲಿಗೆ ಬರುವ ಯಾತ್ರಿಕರ ನೀರಿನ ಬೇಡಿಕೆಯನ್ನೂ ಪೂರೈಸುತ್ತಿತ್ತು.

ಕರಾವಳಿ ಕರ್ನಾಟಕಕ್ಕೆ ಎಲ್ಲಾ ವರ್ಷಗಳಲ್ಲಿಯೂ ಅಧಿಕ ಮಳೆ ಬರುತ್ತಿರುವುದು ಎಲ್ಲರಿಗೂ ತಿಳಿದಿದೆ. ಇದಕ್ಕೆ ಇಲ್ಲಿ ಸಕಾಲಕ್ಕೆ ಬೀಸುವ ಮುಂಗಾರು ಮಾರುತಗಳು, ಹರಡಿರುವ ದಟ್ಟವಾದ ಸಸ್ಯವರ್ಗ ಮತ್ತು ಸಮುದ್ರದ ಸಾಮೀಪ್ಯವು ಕಾರಣ. ಈ ಮಳೆಯು ಇಲ್ಲಿಯ ನದಿ ಮತ್ತು ಕೆರೆಗಳಿಗೆ ಸಾಕಷ್ಟು ನೀರನ್ನು ಒದಗಿಸುವುದರ ಜೊತೆಗೆ ಇಲ್ಲಿಯ ದೈನಂದಿನ ಜನಜೀವನದ ವ್ಯವಸ್ಥೆಯನ್ನು ರೂಪಿಸಿದೆ, ಜನರು ಕೃಷಿಯನ್ನೇ ಹೆಚ್ಚು ಅವಲಂಬಿಸುವಂತೆ ಮಾಡಿದೆ. ಇದು ಇಲ್ಲಿಯ ಜನರನ್ನು ಕೈಗಾರಿಕೆಗಳ ಬದಲಾಗಿ ಕೃಷಿಯನ್ನು ಅನುಸರಿಸಿ ಶಿಕ್ಷಣ ಪಡೆದು, ಧರ್ಮ, ಸಂಸ್ಕೃತಿ ಪರಂಪರೆಯ ಉದ್ಯೋಗಗಳಲ್ಲಿ ಮನಸ್ಸು ತೊಡಗಿಸಿಕೊಳ್ಳುವಂತೆ ಮಾಡಿದೆ.

ಹೀಗೆ ಧನಾತ್ಮಕವಾದ ಪಾರಿಸರಿಕ ಲಕ್ಷಣಗಳನ್ನು ಒಳಗೊಂಡ ಬೆಳ್ತಂಗಡಿ ತಾಲೂಕಿನ ಪೂರ್ವ ಭಾಗವು

* ಮುಖ್ಯಸ್ಥರು, ಇತಿಹಾಸ ವಿಭಾಗ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ – ೫೭೪ ೨೪೦

ಧರ್ಮಸ್ಥಳದ ಉಗಮ ಮತ್ತು ಬೆಳವಣಿಗೆಗೆ ಪೂರಕವಾದ ಸನ್ನಿವೇಶಗಳನ್ನು ಒದಗಿಸಿದೆ. ಪರಿಣಾಮವಾಗಿ ಧರ್ಮಸ್ಥಳವು ಕ್ರಮಶಃ ವಿಕಸನಗೊಳ್ಳುತ್ತಾ ಬಂದಿದೆ.

ಕೃಷಿಯು ಧರ್ಮಸ್ಥಳಕ್ಕೆ ಬೇಕಾಗುವಷ್ಟು ಪ್ರಮಾಣದಲ್ಲಿ ಆಹಾರ ಧಾನ್ಯಗಳನ್ನು ಮತ್ತು ಇತರ ಕೃಷ್ಯುತ್ಪನ್ನಗಳನ್ನು ಪೂರೈಸುವಷ್ಟು ಸಬಲವಾಗಿರದಿದ್ದರೂ ನಿರಂತರವಾಗಿ ಅವುಗಳನ್ನು ಪೂರೈಸುತ್ತಾ ಇರುವಷ್ಟು ಸಶಕ್ತವಾಗಿಲ್ಲ. ಈ ಕೃಷ್ಯುತ್ಪನ್ನಗಳ ಪೈಕಿ ಕೆಲವು ಬೇಡಿಕೆಗಳಿಗಿಂತ ಅಧಿಕ ಪ್ರಮಾಣದಲ್ಲಿ ತಯಾರಾಗುತ್ತಿದ್ದುದರಿಂದ ಅವನ್ನು ಬೇಡಿಕೆ ಇರುವ ಬೇರೆ ಸ್ಥಳಗಳಿಗೆ ಸರಬರಾಜು ಮಾಡುವ ಅಗತ್ಯವಿತ್ತು ಮತ್ತು ಸಹಜವೂ ಆಗಿತ್ತು. ಆದುದರಿಂದ ಇಲ್ಲಿ ಬಹಳ ಪ್ರಮಾಣದಲ್ಲಿ ಮುಂದುವರಿಯದಿದ್ದರೂ ಕನಿಷ್ಠ ಪ್ರಮಾಣದ ಸಂಚಾರ ಸಾಗಾಟ ವ್ಯವಸ್ಥೆ ಪ್ರಾಚೀನ ಕಾಲದಿಂದಲೂ ಇತ್ತು. ಅಂತಹ ರಸ್ತೆಗಳಿದ್ದ ಗುರುತುಗಳನ್ನು ಇಂದೂ ಕಾಣಬಹುದು. ಅವುಗಳ ಪೈಕಿ ಮುಖ್ಯವಾದವು ಧರ್ಮಸ್ಥಳ-ಶಿಶಿಲ-ಅಮ್ಮೆದಿಕಲ್ಲು-ಮೂಡಿಗೆರೆ; ನೆರೆಯ-ಪುದುಬೆಟ್ಟು-ಧರ್ಮಸ್ಥಳ; ಉಡುಪಿ-ಮೂಡಬಿದಿರೆ-ಧರ್ಮಸ್ಥಳ-ಸುಬ್ರಹ್ಮಣ್ಯ. ಈ ಮಾರ್ಗಗಳು ಇದ್ದ ಕಾರಣವೇ ಕ್ರಿ.ಶ. ೧೬ನೇ ಶತಮಾನದಲ್ಲಿ ಸೋದೆಮಠದ ವಾದಿರಾಜ ಸ್ವಾಮಿಗಳು ಇಲ್ಲಿಗೆ ಆಗಮಿಸಲು ಸಾಧ್ಯವಾಗಿತ್ತು. ಈ ವ್ಯವಸ್ಥೆ ಧರ್ಮಸ್ಥಳಕ್ಕೆ ಬಂದು ಹೋಗುವ ಯಾತ್ರಿಕರ ಪ್ರಯಾಣಕ್ಕೆ ಇಂದಿಗೂ ಅನುಕೂಲಕರ. ಈ ಸಂಚಾರ ಸಾಗಾಟದ ರಸ್ತೆಗಳ ಅಸ್ತಿತ್ವವು ಚಿಕ್ಕ ಮಟ್ಟಿನ ಸ್ಥಳೀಯ ಮಾರುಕಟ್ಟೆಯ ವ್ಯವಸ್ಥೆಗೂ ಪೂರಕ. ಇಲ್ಲಿಯ ಕೆಲವು ಶ್ರೀಮಂತ ಕುಟುಂಬಗಳು ವಿಜಯನಗರ ಕಾಲದಲ್ಲಿ ಹಲವಾರು ರೈತಾಪಿ ಕುಟುಂಬಗಳಿಗೆ ಮತ್ತು ಇತರ ಕೃಷಿ ಸಂಬಂಧಿ ನೌಕರಿ ನಡೆಸುವವರಿಗೆ ಉದ್ಯೋಗದ ಅವಕಾಶವನ್ನು ಒದಗಿಸುತ್ತಿದ್ದವು. ಆದುದರಿಂದ ಧರ್ಮಸ್ಥಳದಲ್ಲಿ ಕ್ರಿ.ಶ. ೧೩-೧೪ನೇ ಶತಮಾನದ ಸಮಯದಲ್ಲಿದ್ದ ಬರ್ಮಣ್ಣ ಹೆಗ್ಗಡೆ-ಅಮ್ಮು ದೇವಿ ಬಲ್ಲಾಳ್ತಿಯರ ಮನೆತನವು ಹಲವಾರು ಜನಸಮುದಾಯಗಳಿಗೆ ಆಶ್ರಯವನ್ನಿತ್ತು ಅದನ್ನು ಒಂದು ಕುಟುಂಬದಂತೆ ನಡೆಸಿಕೊಂಡು ಹೋಗುತ್ತಿದ್ದರು. ಆದುದರಿಂದ ಕೆಲವು ಇತಿಹಾಸಕಾರರು ಈ ಕುಟುಂಬವೇ ಧರ್ಮಸ್ಥಳದ ಹಿಂದಿನ ಕುಡುಮ ಎಂಬ ಹೆಸರಿಗೆ ಕಾರಣವಾಗಿತ್ತು ಎಂದು ಹೇಳಿದ್ದಾರೆ.

ಇಲ್ಲಿ ಆಳುತ್ತಿದ್ದ ಆಲೂಪ ಅರಸು ಮನೆತನದ ಬಳಿಕ ರಾಜಕೀಯ ಅಧಿಕಾರವನ್ನು ಸ್ಥಾಪಿಸಿಕೊಂಡ ಜೈನ ಅರಸು ಮನೆತನಗಳು ಪರಧರ್ಮ ಸಹಿಷ್ಣುತೆ ಮತ್ತು ಪರಧರ್ಮ ಪುರಸ್ಕಾರದ ನೀತಿಯನ್ನು ಅನುಸರಿಸಿಕೊಂಡು ಬಂದುದರಿಂದ ಜನಸಾಮಾನ್ಯರಲ್ಲಿಯೂ ಈ ಸಾಮಾಜಿಕ ಮೌಲ್ಯವು ಪ್ರಚಲಿತವಾಗಿ ಅನುಸರಿಸಲ್ಪಡುತ್ತಿತ್ತು. ಧರ್ಮಸ್ಥಳ ಪರಿಸರವನ್ನಾಳುತ್ತಿದ್ದ ಬಂಗಾಡಿಯ ಬಂಗರಸರು ಮತ್ತು ಬೈಲಂಗಡಿಯ ಮೂಲರು ತಮ್ಮ ವೈಯಕ್ತಿಕ ಧರ್ಮವಾದ ಜೈನ ಧರ್ಮದೊಂದಿಗೆ ಹಿಂದೂ ಧರ್ಮವನ್ನು ಪುರಸ್ಕರಿಸುತ್ತಿದ್ದರು. ಅದರ ಬೆಳವಣಿಗೆಗೆ ಬೇಕಾದ ಆಶ್ರಯವನ್ನೂ, ಪ್ರೋತ್ಸಾಹವನ್ನೂ ಕೊಟ್ಟಿದ್ದರು. ಆದುದರಿಂದ ಧರ್ಮಸ್ಥಳದ ಪರಿಸರದ ದೈನಂದಿನ ಜೀವನದಲ್ಲಿ ಪರಧರ್ಮ ಪುರಸ್ಕಾರವು ಸಾಮಾಜಿಕ ಮೌಲ್ಯವಾಗಿ ಅನುಸರಿಸಲ್ಪಡುತ್ತಿತ್ತು.

ಧನಾತ್ಮಕವಾದ ಈ ಪರಿಸರ, ಅರ್ಥ ವ್ಯವಸ್ಥೆ, ಉದ್ಯೋಗಗಳು ಮತ್ತು ಸಾಮಾಜಿಕ ಮೌಲ್ಯಗಳ ಜೊತೆಗೆ ಧರ್ಮಸ್ಥಳದ ಉಗಮ ಅಥವಾ ನಿರ್ಮಾಣಕ್ಕೆ ಕಾರಣ ರಾದವರು ಇಲ್ಲಿ ನೆಲೆಯಾಗಿದ್ದ ಬರ್ಮಣ್ಣ ಹೆಗ್ಗಡೆ-ಅಮ್ಮುದೇವಿ ಬಲ್ಲಾಳ್ತಿಯವರ ಮನೆತನ. ಇವರು ಎಲ್ಲಾ ವರ್ಗದ ಜನರಿಗೆ ಹಿತವೆನಿಸುವ ಧಾರ್ಮಿಕ ತತ್ವಗಳನ್ನು ಅನುಸರಿಸುತ್ತಿದ್ದರು. ಜೈನ ಶ್ರಾವಕರಿಂದ ನಿರೀಕ್ಷಿತವಾದ ಚತುರ್ದಾನ ಪದ್ಧತಿಯನ್ನು ಇವರು ದೈನಂದಿನ ಜೀವನದ ಪದ್ಧತಿಯನ್ನಾಗಿ ಅನುಸರಿಸುತ್ತಿದ್ದರು. ಇವರು ಭೂಮಾಲಿಕ ರಾಗಿದ್ದುಕೊಂಡು ಆರ್ಥಿಕ ಸಬಲತೆಯನ್ನೂ ಹೊಂದಿದ್ದುದ ರಿಂದ ಇವರನ್ನು ಅವಲಂಬಿಸಿರುವವರು ಸಹಜವಾಗಿ ಅಭಯ ಮತ್ತು ಸುರಕ್ಷಿತತೆಯನ್ನು ಹೊಂದಿದ್ದರು. ಧರ್ಮಾಚರಣೆಯೇ ಪರಮ ಲಕ್ಷ್ಯವಾಗಿತ್ತು. ಈ ಜೈನ ಶ್ರಾವಕ ಕುಟುಂಬವು ಜೈನ ಧರ್ಮದ ಸತ್ಯ, ಅಹಿಂಸೆ, ಅಪರಿಗ್ರಹ ಮುಂತಾದ ಪಂಚಾಣು ವ್ರತಗಳು ಮತ್ತು ಇತರ ಸಾಮಾಜಿಕ ಮೌಲ್ಯಗಳನ್ನು ಅನುಸರಿಸುತ್ತಿದ್ದುದರಿಂದಲೇ ಇವರಲ್ಲಿಗೆ ಧರ್ಮ ದೇವತೆಗಳಾದ **ಕಾಳರಾಹು, ಕಾಳರ್ಕಾಯಿ, ಕುಮಾರಸ್ವಾಮಿ** ಮತ್ತು **ಕನ್ಯಾಕುಮಾರಿಯವರು** ಆಗಮಿಸಿದ್ದರು ಎನ್ನಲಾಗಿದೆ.

ಧರ್ಮಸ್ಥಳ ಇತಿಹಾಸದ ಪ್ರಾರಂಭದಲ್ಲಿ ನಡೆದ ಘಟನೆ ಈ ಧರ್ಮ ದೇವತೆಗಳ ಆಗಮನ ಮತ್ತು ಅವುಗಳು ಇಲ್ಲಿ ನೆಲೆಗೊಳ್ಳುವಿಕೆ ಆಗಿರುವುದರಿಂದ ಅದರ ಬಗ್ಗೆ ವಿವರಗಳನ್ನು ಪರಿಶೀಲಿಸಬೇಕು. ಅವುಗಳ ಅನುಸಾರ ಈ ಕ್ಷೇತ್ರದಲ್ಲಿ ಬರ್ಮಣ್ಣ ಹೆಗ್ಗಡೆ-ಅಮ್ಮು ಬಲ್ಲಾಳ್ತಿ ದಂಪತಿಗಳು ವಾಸವಾಗಿದ್ದ ಕಾಲದಲ್ಲಿ ಅವರ ಸಚ್ಚಾರಿತ್ರ್ಯ ದಾನಶೀಲತೆ, ಅತಿಥಿ ಸತ್ಕಾರ ಮತ್ತು ಆಗಮಿಸುವವರಿಗೆ ಆಶ್ರಯ ಕೊಡುವ ಗುಣಗಳಿಂದಾಗಿ ಈ ಧರ್ಮ ದೇವತೆಗಳು ಇಲ್ಲಿಗೆ ಆಗಮಿಸಿದವು. ಅದಕ್ಕಿಂತ ಮೊದಲು ಕೈಲಾಸದಲ್ಲಿ ಶಿವ ಪಾರ್ವತಿ ಮತ್ತು ಅವರ ಗಣಗಳೊಳಗೆ - ಭೂಲೋಕದಲ್ಲಿ ಧರ್ಮವು ನೆಲೆಸಿರುವ ಕ್ಷೇತ್ರ ಯಾವುದೆಂದು ವಿಮರ್ಶೆ ನಡೆದಾಗ ನಾಲ್ಕು ದೇವತೆಗಳು ಅಂತಹ ಸ್ಥಳವನ್ನು

ಹುಡುಕುತ್ತಾ ಭೂಲೋಕಕ್ಕೆ ಬಂದರಂತೆ. ಧರ್ಮಸ್ಥಳದ ಈ ಹೆಗ್ಗಡೆ ದಂಪತಿಗಳ ಮನೆಯಲ್ಲಿ ಎಂದಿನ ಪದ್ಧತಿಯಂತೆ ಅವರನ್ನು ಸ್ವಾಗತಿಸಿ ಸತ್ಕರಿಸಿದರು. ಇಲ್ಲಿ ನಡೆಯುತ್ತಿದ್ದ ದಾನ ಧರ್ಮಗಳನ್ನು ಕಂಡು ಅವರು ಸಂತುಷ್ಟರಾದರು. ಆದುದರಿಂದ ಈ ಧರ್ಮದ ನೆಲೆಯಲ್ಲಿ ಅವರು ನೆಲೆಸುವ ನಿರ್ಧಾರವನ್ನು ಕೈಗೊಂಡರು.

ಅದೇ ದಿನ ರಾತ್ರಿ ಈ ದಂಪತಿಗಳಿಗೆ ಆ ವ್ಯಕ್ತಿಗಳು ತಮ್ಮ ನಿಜವಾದ ದೇವತೆಗಳ ರೂಪದಿಂದ ಕನಸಿನಲ್ಲಿ ಗೋಚರವಾಗಿ ಅತಿಥಿಗಳಾಗಿ ಬಂದ ತಾವುಗಳು ಸಾಮಾನ್ಯ ಜನರಲ್ಲ, ಬದಲಾಗಿ ಜಗತ್ತಿನಲ್ಲಿ ಧರ್ಮವನ್ನು ಸಂಸ್ಥಾಪಿಸಿ ಅದನ್ನು ನಡೆಸಿಕೊಂಡು ಬರುವ ಧರ್ಮದೇವತೆಗಳು. ಆದುದರಿಂದ ಸದಾ ದಾನ ಧರ್ಮಗಳು ನಡೆಯುವ ಈ ಪುಣ್ಯ ಸ್ಥಳದಲ್ಲಿರುವ ನೆಲ್ಯಾಡಿ ಬೀಡೆಂಬ ಈ ನಿಮ್ಮ ಮನೆಯನ್ನೇ ನಮ್ಮ ಇರುವಿಕೆಗೆ ಬಿಟ್ಟುಕೊಡಿರೆಂದು ಹೇಳಿದರು. ಈ ಹೇಳಿಕೆಯ ಅನುಸಾರ ಆ ಮನೆಯಲ್ಲಿ ಒಂದು ತೂಗು ಮಂಚವನ್ನು ಸ್ಥಾಪಿಸಿ ಅದರ ಮೇಲೆ ಅವರ ಖಡ್ಗಗಳನ್ನಿಟ್ಟು, ದೀಪ ಬೆಳಗಿಸಿ ಅವುಗಳನ್ನೇ ಪೂಜಿಸತೊಡಗಿದರು. ಈ ಪದ್ಧತಿ ಇಂದಿಗೂ ಇಲ್ಲಿ ನಡೆದುಕೊಂಡು ಬಂದಿದೆ. ಕೆಲಕಾಲದ ನಂತರ ಕಾಳರಾಹು, ಕಾಳರ್ಕಾಯಿ, ಕುಮಾರಸ್ವಾಮಿ ಮತ್ತು ಕನ್ಯಾಕುಮಾರಿ ಎಂಬ ಈ ಧರ್ಮದೇವತೆಗಳು ಪುನಃ ಕನಸಿನಲ್ಲಿ ಕಾಣಿಸಿಕೊಂಡು ತಾವು ತೋರಿಸಿದ ಸ್ಥಳದಲ್ಲಿ ತಮಗೆ ಪ್ರತ್ಯೇಕ ಪ್ರತ್ಯೇಕವಾದ ಗುಡಿಗಳನ್ನು ಕಟ್ಟಿಸಬೇಕು, ಉತ್ತಮ ಕುಲದ ಇಬ್ಬರು ನಿಷ್ಠಾವಂತ ವ್ಯಕ್ತಿಗಳನ್ನು ತಮ್ಮ ಪಾತ್ರಿಗಳನ್ನಾಗಿ ನೇಮಿಸಬೇಕು. ಮುಂದಿನ ಕಾಲದಲ್ಲಿ ತಾವೇ ಪ್ರತ್ಯೇಕವಾಗಿ ಆದೇಶಗಳನ್ನು ಕೊಡುವ ಬದಲು ಆ ಪಾತ್ರಿಗಳ ಮುಖಾಂತರ ನಿಮಗೆ ಸಂದೇಶಗಳನ್ನು ಕೊಡುತ್ತೇವೆ. ತಮ್ಮ ದೂತನಾದ ಅಣ್ಣಪ್ಪನ ಮುಖಾಂತರ ಕೆಲಸಗಳನ್ನು ಮಾಡಿಸಿಕೊಳ್ಳುತ್ತೇವೆ. ಆದರೆ ದೈನಂದಿನ ಆಡಳಿತದಲ್ಲಿ ನಿಮ್ಮ ಸ್ವಂತ ಆಲೋಚನೆಗಳಿಂದ ಕಾರ್ಯಗಳನ್ನು ನಿರ್ವಹಿಸಿಕೊಂಡು ಬರಬೇಕು ಎಂದು ಸೂಚಿಸಿದರು. ಮಾತ್ರವಲ್ಲದೆ ಧರ್ಮಸ್ಥಳದಲ್ಲಿ ಶಾಶ್ವತವಾಗಿ ದಾನ ಧರ್ಮಾದಿಗಳನ್ನೂ, ಪೂಜೆ ನಿತ್ಯಾನುಷ್ಠಾನಗಳನ್ನೂ ಸಾಂಗವಾಗಿ ನಡೆಸಿಕೊಂಡು ಬರಬೇಕು. ಇವೆಲ್ಲದಕ್ಕೂ ಬೇಕಾದ ಸಂಪತ್ತನ್ನು ನಾವು ಒದಗಿಸಿಕೊಡುವೆವು. ನೀವು ಧರ್ಮವನ್ನು ಪರಿಪಾಲಿಸಬೇಕು. ನಾವು ನಿಮ್ಮನ್ನು ಮತ್ತು ಈ ಧರ್ಮವನ್ನು ಪಾಲಿಸಿಕೊಂಡು ಬರುವ ನಿಮ್ಮ ಉತ್ತರಾಧಿಕಾರಿಗಳನ್ನು ಹೆತ್ತ ತಾಯಿಯಂತೆ ಸಲಹುವೆವು ಎಂದು ಅಭಯವಿತ್ತರು.

ಧರ್ಮಸ್ಥಳದಲ್ಲಿ ಈ ಧರ್ಮದೇವತೆಗಳು ಮತ್ತು ಅವರ ದೂತನಾದ ಅಣ್ಣಪ್ಪನು ನೆಲೆಗೊಳ್ಳುವುದರ ಮುಖಾಂತರ ಈ ಕ್ಷೇತ್ರದಲ್ಲಿ ದೈವಿಕ ಶಕ್ತಿ ಸಂಚಯನವಾದಂತೆ ಕಂಡುಬರತೊಡಗಿತು. ದಾನಧರ್ಮಾದಿಗಳು ಹೆಚ್ಚಿದವು. ಧರ್ಮದೇವತೆಗಳು ಬಂದಿದ್ದ ಕೈಲಾಸದ ಒಡೆಯನಾದ ಶಿವನನ್ನು ಸಹ ಈ ಕ್ಷೇತ್ರದಲ್ಲಿ ಪ್ರತಿಷ್ಠಾಪಿಸುವ ನಿರ್ಧಾರವನ್ನು ಈ ಹೆಗ್ಗಡೆ ದಂಪತಿಗಳು ಕೈಗೊಂಡರು. ಆ ಸಮಯಕ್ಕೆ ತುಳುನಾಡಿನಲ್ಲಿ ಪ್ರಸಿದ್ಧ ಕ್ಷೇತ್ರವಾಗಿದ್ದ ಕದಿರೆಯ ಮಂಜುನಾಥ ದೇವಾಲಯದಲ್ಲಿ ಪ್ರತಿಷ್ಠಾಪನೆಗೆ ಸಿದ್ಧವಾಗಿದ್ದ ಶಿವಲಿಂಗ ಒಂದು ಇದೆಯೆಂದು ತಿಳಿದಿತ್ತು. ಈ ದಂಪತಿಗಳ ನಿರ್ಧಾರವನ್ನು ಅರಿತಿದ್ದ ಧರ್ಮದೇವತೆಗಳು ತಮ್ಮ ದೂತನಾದ ಅಣ್ಣಪ್ಪನನ್ನು ಮಂಗಳೂರಿಗೆ ಕಳುಹಿಸಿ ಆ ಶಿವಲಿಂಗವನ್ನು ಕದಿರೆಯಿಂದ ತರಿಸಿಕೊಂಡರು. ಹೀಗೆ ಅಣ್ಣಪ್ಪ ಸ್ವಾಮಿಯೇ ಹೋಗಿ ಶಿವಲಿಂಗವನ್ನು ತಂದನೆಂದೂ, ಇನ್ನೊಂದು ಅಭಿಪ್ರಾಯದಲ್ಲಿ ಉಳಿದ ನಾಲ್ಕು ಧರ್ಮದೇವತೆಗಳೂ ಈ ಶಿವಲಿಂಗವನ್ನು ತರುವಾಗ ಜೊತೆಗಿದ್ದವೆಂದು ಹೇಳಲಾಗಿದೆ. ಕದಿರೆಯಿಂದ ತಂದ ಶಿವಲಿಂಗವನ್ನು ಧರ್ಮಸ್ಥಳದಲ್ಲಿ ನಿರ್ಮಿಸಿದ ದೇವಾಲಯದಲ್ಲಿ ಪ್ರತಿಷ್ಠೆ ಮಾಡಿ ಪೂಜಿಸ ಲಾರಂಭಿಸಲಾಯಿತು. ಮೇಲೆ ಉಲ್ಲೇಖಿಸಿದ ಮದ್ರಾಸಿನಲ್ಲಿ ಬ್ರಿಟಿಷ್ ಕಮಿಷನರ್ ಆಗಿದ್ದ ಮಿ। ಎಚ್.ಎಸ್. ಗ್ರೇಮ್ ೧೮೨೦ನೇ ಸೆಪ್ಟೆಂಬರ್ ೪ರಂದು ಕಳುಹಿಸಿದ್ದ ವರದಿಯಲ್ಲಿ ಧರ್ಮಸ್ಥಳದ ಕುಮಾರ ಹೆಗ್ಗಡೆಯವರು ಧರ್ಮಸ್ಥಳ ದೇವಾಲಯವು ೩೫೦ ವರ್ಷಗಳ ಹಿಂದೆ ಸ್ಥಾಪಿಸಲ್ಪಟ್ಟಿತ್ತು ಎಂದು ಹೇಳಿದ್ದರು ಎಂದು ತಿಳಿಸಲಾಗಿದೆ.

ಕುಡುಮದ ಮಂಜುನಾಥ ದೇವರಿಗೆ ವರ್ಷಕ್ಕೆ ಎರಡು ಹಾನೆ ಎಣ್ಣೆ ಮತ್ತು ಹೆಗ್ಗಡೆಯವರಿಗೆ ಎರಡು ಮುಡಿ ಭತ್ತವನ್ನು ಕೊಡಬೇಕೆಂದು ನಿರ್ದೇಶಿಸುವ ಒಂದು ಶಿಲಾ ಶಾಸನವು ಕಾರ್ಕಳ ತಾಲೂಕು ಈದು ಗ್ರಾಮದಲ್ಲಿರುವ ಮೂಜ್ಲುನ್ನಾಯ ದೇವಾಲಯದ ಬಳಿ ದೊರಕುತ್ತದೆ. ಇದು ಶಾಲಿವಾಹನ ಶಕ ೧೩೧೨ ಪ್ರಮೋದೂತ ಸಂವತ್ಸರ ಧನುರ್ಮಾಸ ಶುದ್ಧ ಪಾಡ್ಯ ಗುರುವಾರಕ್ಕೆ ಅಂದರೆ ಕ್ರಿ.ಶ. ೧೪೫೦ನೇ ಇಸವಿ ದಶಂಬರ ತಿಂಗಳ ೮ನೇ ತಾರೀಕೆಗೆ ಸಂಬಂಧಿಸಿದುದು. ಆದುದರಿಂದ ಸದ್ರಿ ಮಂಜುನಾಥ ದೇವಾಲಯವು ಅದಕ್ಕಿಂತ ಹಿಂದೆಯೇ ನಿರ್ಮಾಣಗೊಂಡು ಪ್ರಸಿದ್ಧವಾಗಿತ್ತು ಎಂದು ಧಾರಾಳವಾಗಿ ಹೇಳಬಹುದು. ಒಟ್ಟಿನಲ್ಲಿ ಧರ್ಮಸ್ಥಳದ ಈ ಮಂಜುನಾಥ ದೇವಾಲಯವು ಕ್ರಿ.ಶ. ೧೩೦೦ ಮತ್ತು ೧೪೫೦ರ ಮಧ್ಯದ ಕಾಲದಲ್ಲಿ ನಿರ್ಮಾಣಗೊಂಡಿರ ಬೇಕೆಂದೂ, ಆ ಹೆಗ್ಗಡೆ ದಂಪತಿಗಳು ಆ ಸಮಯಕ್ಕಿಂತ ಸ್ವಲ್ಪ ಮೊದಲಿನಿಂದ ಇಲ್ಲಿ ವಾಸವಾಗಿದ್ದರೆಂದೂ ಹೇಳಬಹುದು.

### ೬. ಧರ್ಮಸ್ಥಳದ ಹೆಗ್ಗಡೆಯವರುಗಳು ಮತ್ತು ಅವರ ಕಾಲದಲ್ಲಾದ ಶ್ರೀ ಕ್ಷೇತ್ರದ ಬೆಳವಣಿಗೆ

ಧರ್ಮಸ್ಥಳದಲ್ಲಿ ಧರ್ಮದೇವತೆಗಳು, ಅಣ್ಣಪ್ಪಸ್ವಾಮಿ ಮತ್ತು ಮಂಜುನಾಥ ಸ್ವಾಮಿಯನ್ನು ಪ್ರತಿಷ್ಠಾಪಿಸುವ ಮಹತ್ಕಾರ್ಯವನ್ನು ಪೂರೈಸಿದ ಬರ್ಮಣ್ಣ ಹೆಗ್ಗಡೆ – ಅಮ್ಮು ಬಲ್ಲಾಳ್ತಿ ದಂಪತಿಗಳ ಬಳಿಕ ಪದ್ಮಯ್ಯ ಹೆಗ್ಗಡೆ ಎಂಬವರು ಇಲ್ಲಿ ಆಡಳಿತ ನಡೆಸಿದರು. ಇವರು ಸಜ್ಜನರು ಮತ್ತು ಸಮಾಜ ಸೇವಾಸಕ್ತರು ಎಂದು ಹೇಳಲಾಗಿದೆ. ಇವರ ಕಾಲದಲ್ಲಿ ಧರ್ಮಸ್ಥಳದ ಸಮೀಪವಿರುವ ಕಲ್ಲೇರಿ ಎಂಬಲ್ಲಿದ್ದ ಒಂದು ಬ್ರಾಹ್ಮಣ ಮನೆತನದವರು ಕಲ್ಲೇರಿತ್ತಾಯ ಎಂಬ ದೈವವನ್ನು ಆರಾಧಿಸುತ್ತಿದ್ದರು. ಆದರೆ ಆಣೆ ಮಾತಿನ ಸಂಬಂಧವಾಗಿ ಈ ದೈವವು ಮಂಜುನಾಥ ಸ್ವಾಮಿಯ ಸನ್ನಿಧಿಗೆ ತರಲ್ಪಟ್ಟು ದೇವಸ್ಥಾನದ ಉತ್ತರ ಭಾಗದಲ್ಲಿ ನೆಲೆಗೊಳಿಸಲ್ಪಟ್ಟಿತು. ಈ ದೈವವು ಅಣ್ಣಪ್ಪಸ್ವಾಮಿಯ ಸಹಾಯಕನಾಗಿ ಈ ಕ್ಷೇತ್ರದ ಕಾರ್ಯಕಮ್ರಗಳನ್ನು ನಿರ್ವಹಿಸುತ್ತಿದೆ.

ಪದ್ಮಯ್ಯ ಹೆಗ್ಗಡೆ ಕ್ರಿ.ಶ. ೧೪೩೨ರಲ್ಲಿ ದಿವಂಗತರಾದರು ಎಂದು ಹೇಳಲಾಗಿದೆ. ಇವರಿಗೆ ಸಂತತಿ ಇರಲಿಲ್ಲ. ಆದ್ದರಿಂದ ಇವರ ತಂಗಿ ಗುಮ್ಮಕ್ಕ ಎಂಬವರ ಮಗನಾಗಿದ್ದ ಚಂದಯ್ಯ ಎಂಬುವವರನ್ನು ದತ್ತು ತೆಗೆದುಕೊಂಡಿದ್ದರು. ಹಾಗೆಯೇ ಪದ್ಮಯ್ಯ ಹೆಗ್ಗಡೆಯವರ ಬಳಿಕ ಚಂದಯ್ಯ ಹೆಗ್ಗಡೆಯವರು ಇಲ್ಲಿಯ ಆಡಳಿತವನ್ನು ನಡೆಸಿಕೊಂಡು ಹೋದರು. ಆದರೆ ಚಂದಯ್ಯ ಹೆಗ್ಗಡೆಯವರು ಆರೋಗ್ಯವಂತರಾಗಿರಲಿಲ್ಲವೆಂದು ಹೇಳಲಾಗಿದೆ. ಆ ಕಾರಣದಿಂದ ಅವರು ತನ್ನ ಆರೋಗ್ಯ ಸುಧಾರಣೆಗಾಗಿ ಶ್ರೀ ಮಂಜುನಾಥನಿಗೆ ಹರಕೆ ಹೊತ್ತು ಕೊಂಡಿದ್ದರು. ಪರಿಣಾಮವಾಗಿ ಕ್ರಮೇಣ ಅವರ ಆರೋಗ್ಯ ಸುಧಾರಣೆಯಾಗುತ್ತಾ ಬಂತು. ಪೂರ್ಣ ಆರೋಗ್ಯ ಪಡೆದ ಬಳಿಕ ಅವರು ಶಾಲಿವಾಹನ ಶಕ ೧೪೦೨ ಶಾರ್ವರಿ ನಾಮ ಸಂವತ್ಸರದ ಮೇಷ ಮಾಸದಲ್ಲಿ ಅಂದರೆ ಕ್ರಿ.ಶ. ೧೪೮೦ನೇ ಇಸವಿ ಮೇ ತಿಂಗಳಲ್ಲಿ ಚಿನ್ನದ ನಾಗಾಭರಣ ವನ್ನು ಮಾಡಿಸಿ ಶ್ರೀ ಮಂಜುನಾಥನಿಗೆ ಅರ್ಪಿಸಿದರು. ಕ್ರಿ.ಶ. ೧೫೦೩ರ ವರೆಗೆ ಆಡಳಿತವನ್ನು ನಡೆಸಿದರು. ಅವರಿಗೆ ಸಂತತಿ ಇಲ್ಲದ ಕಾರಣ ತಂಗಿಯ ಮಗ ದೇವರಾಜ ಹೆಗ್ಗಡೆ ಎಂಬುವರನ್ನು ದತ್ತಕ್ಕೆ ತೆಗೆದುಕೊಂಡರು. ಅವರೇ ಮುಂದೆ ಧರ್ಮಸ್ಥಳದ ಹೆಗ್ಗಡೆಯವರಾಗಿ ಆಡಳಿತ ವಹಿಸಿಕೊಂಡರು.

ಈ ದೇವರಾಜ ಹೆಗ್ಗಡೆಯವರ ಆಡಳಿತಾವಧಿಯಲ್ಲಿ ಧರ್ಮಸ್ಥಳಕ್ಕೆ ಉಡುಪಿಯ ಸೋಂದೆ ಮಠದ ಮಠಾಧೀಶ ರಾದ ವಾದಿರಾಜ ಸ್ವಾಮಿಗಳು (ಕ್ರಿ.ಶ. ೧೪೮೦–೧೬೦೦) ಆಗಮಿಸಿದ್ದರು. ಈ ಸಂದರ್ಭದಲ್ಲಿ ದೇವರಾಜ ಹೆಗ್ಗಡೆ ಯವರು ಸ್ವಾಮಿಗಳಲ್ಲಿ ಮಂಜುನಾಥನ ಲಿಂಗ ಪ್ರತಿಷ್ಠೆಯಾಗಿ ೩೦೦ ವರ್ಷಗಳು ಸಂದಿವೆ. ಆದುದರಿಂದ ಈಗ ಪುನಃ ಅಷ್ಟಬಂಧ, ಬ್ರಹ್ಮಕಲಶಾಭಿಷೇಕ ಪೂರ್ವಕ ಮಂಜುನಾಥನಿಗೆ ಪ್ರಾಣ ಪ್ರತಿಷ್ಠೆ ಮಾಡಬೇಕೆಂದು ಕೇಳಿಕೊಂಡರೆಂದು ಹೇಳಲಾಗಿದೆ. ಈ ಪ್ರಾರ್ಥನೆಯ ಅನುಸಾರ ವಾದಿರಾಜ ಸ್ವಾಮಿಗಳು ಮಂಜುನಾಥನ ಪುನರ್ ಪ್ರತಿಷ್ಠೆಯನ್ನು ಮಾಡಿದರು. ಮತ್ತು ಧರ್ಮಸ್ಥಳದಲ್ಲಿ ನಡೆಯುತ್ತಿದ್ದ ಅನ್ನದಾನ ಮತ್ತು ಇತರ ದಾನಗಳಿಂದಾಗಿ ಕೊಡುವ ಸ್ಥಳವಾದ ಈ ಕುಡುಮವನ್ನು ಧರ್ಮಸ್ಥಳವೆಂದು ಪುನರ್‌ನಾಮಕರಿಸಿದರು. ಆದರೆ ವಾದಿರಾಜ ಸ್ವಾಮಿಗಳು ಈ ಕ್ಷೇತ್ರಕ್ಕೆ ಬಂದು ಈ ಕಾರ್ಯಕ್ರಮವನ್ನು ಯಾವ ವರ್ಷದಲ್ಲಿ ಅಥವಾ ಯಾವ ಇಸವಿಯಲ್ಲಿ ನಡೆಸಿದರೆಂದು ಸ್ಪಷ್ಟವಾಗಿ ಯಾವ ದಾಖಲೆಗಳೂ ತಿಳಿಸುವುದಿಲ್ಲ. ಕೈಫಿಯತ್ತಿನಲ್ಲಿ "ಶ್ಯಾಲಿವಾಹನಶಕ ವರುಷ ೧೪೩೬ನೇ ಖರ ಸಂವತ್ಸರದಲ್ಲು ಉಡುಪಿನ ಸೊಂದೆ ಮಠದ ವಾದಿರಾಜ ಸ್ವಾಮಿಗಳು ಯೀ ಧರ್ಮಸ್ಥಳದ ಮಾರ್ಗವಾಗಿ ಬಂದಿಲ್ಲಿ ಯೀ ಸ್ಥಳದಲ್ಲಿ ನಾಳಿನ ದಿವಸ ನಿಂತು ಬಿಕ್ಷಾ ತೆಗೆದುಕೊಂಡು ಹೋಗಬೇಕೆಂದು ಸದರಿ ಬಲ್ಲಾಳ್ತಿಯು ಹೇಳಿಕೊಂಡಲ್ಲಿ ಸ್ವಾಮಿಗಳು......ದೇವತಾ ಪ್ರತಿಷ್ಠೆ" ಮಾಡಿದರೆಂದು ಹೇಳಿದೆ. ಅಂದರೆ ಅವರು ಇಲ್ಲಿಗೆ ಬಂದ ವರ್ಷ ಕ್ರಿ.ಶ. ೧೪೭೪. ಈ ಸಂದರ್ಭದಲ್ಲಿ ಗಮನಿಸಿಕೊಳ್ಳ ಬೇಕಾದ ವಿಷಯವೆಂದರೆ ಸ್ವಾಮೀಜಿಯವರು ತಮ್ಮ ತೀರ್ಥ ಪ್ರಬಂಧವೆಂಬ ಪ್ರವಾಸ ಕಥನದ ಗ್ರಂಥದಲ್ಲಿ ನೇತ್ರಾವತಿ ನದಿಯ ವರ್ಣನೆಯನ್ನು ಮಾಡಿದ್ದರೂ ಕೂಡ ಅಲ್ಲಿಯೇ ಪಕ್ಕದಲ್ಲಿರುವ ಧರ್ಮಸ್ಥಳದ ಬಗ್ಗೆ ಏನನ್ನೂ ಹೇಳಿಲ್ಲ. ಹೀಗಿದ್ದರೂ ವಾದಿರಾಜ ಸ್ವಾಮಿಗಳು ಬಂದು ಮಂಜುನಾಥ ಸ್ವಾಮಿಯ ಪುನರ್‌ಪ್ರತಿಷ್ಠಾಪನೆ ಮಾಡಿದ್ದರೆ ಅದು ಕ್ಷೇತ್ರದ ವಿಕಾಸದಲ್ಲಿ ಇನ್ನೊಂದು ಮಹತ್ವದ ಮಜಲು ಹಾಗೂ ದೇವರಾಜ ಹೆಗ್ಗಡೆಯವರ ಕಾಲದಲ್ಲಿ ನಡೆದ ಐತಿಹಾಸಿಕ ಘಟನೆ.

ದೇವರಾಜ ಹೆಗ್ಗಡೆಯವರ ಬಳಿಕ ಮಂಜಯ್ಯ ಹೆಗ್ಗಡೆ ಎಂಬವರು ಇಲ್ಲಿ ೩೩ ವರ್ಷಗಳ ಕಾಲ ಆಡಳಿತವನ್ನು ನಡೆಸಿದರೆಂದು ತಿಳಿಯುತ್ತದೆ. ಕ್ರಿ.ಶ. ೧೫೦೩ರಲ್ಲಿ ಪಟ್ಟಕ್ಕೆ ಬಂದ ದೇವರಾಜ ಹೆಗ್ಗಡೆಯವರು ಸುಮಾರು ೮೦ ವರ್ಷ ಬದುಕಿರಬಹುದೆಂದಾದರೆ ಆ ಶತಮಾನದ ಅಂತ್ಯಕ್ಕೆ ಮಂಜಯ್ಯ ಹೆಗ್ಗಡೆಯವರು ಅಧಿಕಾರವನ್ನು ಪಡೆದು ಮತ್ತೆ ಕೆಲವು ವರ್ಷಗಳ ಕಾಲ ಆಡಳಿತವನ್ನು ನಡೆಸಿರಬಹುದು. ಕ್ರಿ.ಶ. ೧೭ನೇ ಶತಮಾನ ಮತ್ತು ೧೮ನೇ ಶತಮಾನದಲ್ಲಿ ಈ ಕ್ಷೇತ್ರದ ಆಡಳಿತೆಯನ್ನು ನಡೆಸಿದವರು ಯಾವ ಹೆಗ್ಗಡೆಯವರು ಮತ್ತು ಅವರ ಸಾಧನೆಗಳೇನು ಎಂಬುದರ ಬಗ್ಗೆ ನಮಗೆ ವಿವರಗಳು ತಿಳಿದು ಬರುವುದಿಲ್ಲ. ಅವರ

ಹೆಸರುಗಳು ಮಾತ್ರ ಧರ್ಮಸ್ಥಳದ ಇತಿಹಾಸದಲ್ಲಿ ಉಲ್ಲೇಖಿಸಲ್ಪಟ್ಟಿವೆ. ಅವರ ಹೆಸರುಗಳು ಅನುಕ್ರಮವಾಗಿ ಈ ರೀತಿ ಇವೆ :–

ಜಿನ್ನಪ್ಪ ಹೆಗ್ಗಡೆ

ಇಮ್ಮಡಿ ಚಂದಯ್ಯ ಹೆಗ್ಗಡೆ

ದೇವಪ್ಪರಾಜ ಹೆಗ್ಗಡೆ

ಅನಂತಯ್ಯ ಹೆಗ್ಗಡೆ

ವೃಷಭಯ್ಯ ಹೆಗ್ಗಡೆ

ಗುಮ್ಮಣ್ಣ ಹೆಗ್ಗಡೆ

ವರ್ಧಯ್ಯ ಹೆಗ್ಗಡೆ

ಮುಮ್ಮಡಿ ಚಂದಯ್ಯ ಹೆಗ್ಗಡೆ

ಇವರ ಪೈಕಿ ಕೊನೆಯವರಾದ ಮುಮ್ಮಡಿ ಚಂದಯ್ಯ ಹೆಗ್ಗಡೆಯವರ ಬಳಿಕ ಧರ್ಮಸ್ಥಳದ ಇತಿಹಾಸದಲ್ಲಿ ಬಹಳ ಪ್ರಸಿದ್ಧರಾದ ಕುಮಾರಯ್ಯ ಹೆಗ್ಗಡೆಯವರು ಕ್ರಿ.ಶ. ೧೭೮೫ರಲ್ಲಿ ಅಧಿಕಾರಕ್ಕೆ ಬಂದರು.

**ಕುಮಾರಯ್ಯ ಹೆಗ್ಗಡೆಯವರ ಕಾಲದಲ್ಲಿ ಶ್ರೀ ಕ್ಷೇತ್ರದ ಬೆಳವಣಿಗೆ**

ಇವರು ಧರ್ಮಸ್ಥಳದಲ್ಲಿ ೧೭೮೫ರಿಂದ ಅಧಿಕಾರ ನಡೆಸುತ್ತಿದ್ದರು. ಆದರೆ ಮೈಸೂರಿನ ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರು ಇಲ್ಲಿ ಮಂಜಯ್ಯ ಹೆಗ್ಗಡೆಯವರಿಗೆ ೧೨–೧೧–೧೮೬೭ರಂದು ಬರೆದಿರುವ ಪತ್ರದಲ್ಲಿ ಹಿಂದಿನ ಅಂಗೀರಸ ಸಂವತ್ಸರ (ಕ್ರಿ.ಶ. ೧೮೧೨)ರಲ್ಲಿ 'ನಿಂಮ ತಂದೆ ಕೊಮಾರ ಹೆಗ್ಗಡೀರು.....' ಇತ್ಯಾದಿ ಬರೆದಿರುವುದರಿಂದ, ಕ್ರಿ.ಸ. ೧೮೧೨ರಲ್ಲೇ ಮೈಸೂರು ಅರಸರಿಗೂ, ಕುಮಾರಯ್ಯ ಹೆಗ್ಗಡೆಯವರಿಗೂ ಬಹಳ ಪರಿಚಯ ಇದ್ದಿರಬೇಕೆಂದು ಕಾಣುತ್ತದೆ.

ಕುಮಾರಯ್ಯ ಹೆಗ್ಗಡೆಯವರ ಕಾಲದಲ್ಲಿ ನಡೆದ ಇಲ್ಲಿನ ವಂಶ ಪಾರಂಪರ್ಯದ ಹಕ್ಕಿನಲ್ಲಿ ಆದ ಬದಲಾವಣೆಯು ಗಮನೀಯವಾದುದು. ಅದೇನೆಂದರೆ ಜೈನರಲ್ಲಿ ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು. ಆದರೆ ಕುಮಾರಯ್ಯ ಹೆಗ್ಗಡೆಯವರು ಅಧಿಕಾರ ವಹಿಸಿದ ಘಟನೆಯಿಂದ ಸಂಪತ್ತು ಮತ್ತು ಅಧಿಕಾರದ ಹಕ್ಕು ಮಗಳು ಮತ್ತು ಆಕೆಯ ಗಂಡನಾದ ಅಳಿಯನ ಬದಲಾಗಿ ಗಂಡು ಮಕ್ಕಳಿಗೆ ಬರುವಂತಹ ಮಕ್ಕಳ ಸಂತಾನ (ಮಕ್ಕಳ ಕಟ್ಟು) ಪದ್ಧತಿ ಜಾರಿಗೆ ಬಂತು. ಕುಮಾರಯ್ಯ ಹೆಗ್ಗಡೆಯವರೇ ಹೇಳಿರುವಂತೆ ಅವರು ಪದ್ಮ ಹೆಗ್ಗಡೆಯವರ ಮಗ.

ಕುಮಾರಯ್ಯ ಹೆಗ್ಗಡೆಯವರು ಈ ಸಂದರ್ಭದಲ್ಲಿ ಧರ್ಮಸ್ಥಳದ ಹೆಗ್ಗಡೆಯವರ ಅಧಿಕಾರದ ಬಗ್ಗೆ ಒಂದು ಮಹತ್ವದ ಮಾತನ್ನು ಹೇಳಿದ್ದಾರೆ. ಅದು 'ನನ್ನ ಸಂಪತ್ತು ಮತ್ತು ದೇವಾಲಯದ ಸಂಪತ್ತಿನಲ್ಲಿ ವ್ಯತ್ಯಾಸವಿಲ್ಲ. ದೇವಾಲಯದ ಮೇಲೆ ಅಧಿಕಾರ ಸ್ಥಾಪನೆ ಮತ್ತು ಅದರ ಕೀರ್ತಿ ಹರಡಿಸುವುದರ ಕರ್ತವ್ಯ ಆಜ್ಞೆ ಮಾಡಲ್ಪಟ್ಟಿದೆ. ಆದುದರಿಂದ ದೇವಾಲಯದ ಉತ್ಸವಗಳು, ದಾನ ಧರ್ಮಗಳು, ನೌಕರರನ್ನು ಇಟ್ಟುಕೊಳ್ಳುವುದು ಮತ್ತು ವಜಾ ಮಾಡುವುದು, ಭೂಮಿಯನ್ನು ಖರೀದಿಸುವುದು ಇತ್ಯಾದಿಗಳ ಮೇಲೆ ನನ್ನ ಅಧಿಕಾರ ಪರಿಪೂರ್ಣ. ಮತ್ತು ನಾಲ್ವಿಕೆಯರು ಅದರಲ್ಲಿ ಮಧ್ಯ ಪ್ರವೇಶಿಸಲಿಕ್ಕಿಲ್ಲ. ಆದರೆ ನನ್ನ ಆಜ್ಞೆಗಳನ್ನು ಕೇವಲ ಪಾಲಿಸುವುದು.

ಕುಮಾರಯ್ಯ ಹೆಗ್ಗಡೆಯವರ ಕಾಲದಲ್ಲಿ ನಡೆದ ಇನ್ನೊಂದು ಮಹತ್ವದ ಘಟನೆಯೆಂದರೆ ಧರ್ಮಸ್ಥಳದ ಇತಿಹಾಸವನ್ನು ಬರೆಸಿದ್ದು. ಕಂಪೆನಿ ಸರಕಾರದ ಸೈನ್ಯಾಧಿಕಾರಿಯಾಗಿ ಮಧ್ಯ ಭಾರತದಿಂದ ಪ್ರಾರಂಭಿಸಿ ದಕ್ಷಿಣದ ಎಲ್ಲ ಭಾಗಗಳಲ್ಲಿಯೂ ಸಂಚರಿಸಿದ ಕರ್ನಲ್ ಕಾಲಿನ್ ಮೆಕೆಂಜ್ಜಿಯು ೧೮ನೇ ಶತಮಾನದ ಕೊನೆಯ ಭಾಗದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಂಚರಿಸುತ್ತಿದ್ದ. ಧರ್ಮಸ್ಥಳದ ಬಗ್ಗೆ ವಿವರಣೆಗಳನ್ನು ಕೇಳಿ ಬರೆಸಿಕೊಂಡ. ಕುಮಾರಯ್ಯ ಹೆಗ್ಗಡೆಯವರ ಮಜಕೂರನು ಶ್ರೀ ಕ್ಷೇತ್ರದ ಕುರಿತಾದ ವಿಷಯಗಳನ್ನು ಸಂಗ್ರಹಿಸಿ ತನಗೆ ಗೊತ್ತಿದ್ದುದನ್ನು ಬರೆದು ಕಳುಹಿಸಿದ.

ಕುಮಾರಯ್ಯ ಹೆಗ್ಗಡೆಯವರಿಗೆ ಮೈಸೂರನ್ನು ಆಳುತ್ತಿದ್ದ ಮಹಾರಾಜ ಮುಮ್ಮಡಿ ಕೃಷ್ಣ ಒಡೆಯರೊಡನೆ ಆತ್ಮೀಯ ಸಖ್ಯವಿತ್ತು. ಕ್ರಿ.ಶ. ೧೮೧೨ರಲ್ಲಿ ಕುಮಾರಯ್ಯ ಹೆಗ್ಗಡೆಯವರು ಧರ್ಮಸ್ಥಳದಲ್ಲಿ ಆಗಲೇ ಪ್ರಖ್ಯಾತವಾಗಿದ್ದ ಯಕ್ಷಗಾನ ಬಯಲಾಟದವರನ್ನು ಕರೆದುಕೊಂಡು ಮೈಸೂರು ಅರಮನೆಗೆ ಹೋಗಿದ್ದರು. ಕುಮಾರಯ್ಯ ಹೆಗ್ಗಡೆಯವರ ವ್ಯಕ್ತಿತ್ವ, ಆಡಳಿತ, ಮುತ್ಸದ್ದಿತನ ಮತ್ತು ಕಲಾ ಪೋಷಣೆಯಿಂದ ಪ್ರಭಾವಿತರಾದ ಮಹಾರಾಜರು ತಮ್ಮ ಪ್ರೀತಿಯ ದ್ಯೋತಕವಾಗಿ ಏನಾದರೂ ಕೊಡುಗೆಯೊಂದನ್ನು ಸ್ವೀಕರಿಸಬೇಕೆಂದು ಕೇಳಿಕೊಂಡಾಗ ಕುಮಾರಯ್ಯ ಹೆಗ್ಗಡೆಯವರು ತಮಗೇನೂ ಬೇಡ, ಒಂದು ವೇಳೆ ಕೊಡಬೇಕೆಂದಿದ್ದರೆ ಶ್ರವಣಬೆಳಗೊಳ ಕ್ಷೇತ್ರಕ್ಕೆ ಏನಾದರೂ ಕೊಡಬಹುದೆಂದು ಅಭಿಪ್ರಾಯ ಪಟ್ಟರಂತೆ. ಅದರ ಅನುಸಾರ ಈ ಸವಿನೆನಪಿಗಾಗಿ ಕಬ್ಬಾಳು ಎಂಬ ಗ್ರಾಮವನ್ನು ಆ ಕ್ಷೇತ್ರಕ್ಕೆ ಉಂಬಳಿಯಾಗಿ ಬಿಟ್ಟುಕೊಟ್ಟರು. ಮಾತ್ರವಲ್ಲ ಈ ಆತ್ಮೀಯತೆಯ ಫಲವಾಗಿ ಮುಮ್ಮಡಿಯವರು ಸ್ವತಃ ಶಾಲಿವಾಹನ ಶಕ ೧೭೪೩ನೇ ವಿಕ್ರಮ ಸಂವತ್ಸರದ ಪುಷ್ಯ

ಬಹುಳ (೧೮೨೩ನೇ ಇಸವಿ ದಶಂಬರ ತಿಂಗಳ ಕೊನೆಯ ಭಾಗ)ದಲ್ಲಿ ಧರ್ಮಸ್ಥಳಕ್ಕೆ ಆಗಮಿಸಿದರು.

ಮೈಸೂರು ಒಡೆಯರೊಂದಿಗೆ ಆತ್ಮೀಯ ಸಂಬಂಧವನ್ನು ಹೊಂದಿದ್ದಂತೆ ನೆರೆಯ ಕೊಡಗು ರಾಜನೊಂದಿಗೆ ಸಖ್ಯವನ್ನು ಹೊಂದಿದ್ದರು. ಕೊಡಗಿನ ಅರಮನೆಗೆ ಹೋಗಿ ಅರಸ ವೀರರಾಜೇಂದ್ರರನ್ನು ಭೇಟಿಯಾಗಿ, ಅವರಿಂದ ರಾಜೋಪಚಾರ, ಗೌರವಗಳನ್ನು ಪಡೆದುಕೊಂಡು ಬಂದಿದ್ದರು. ಅನಂತರ ವೀರರಾಜೇಂದ್ರರು ಧರ್ಮಸ್ಥಳಕ್ಕೆ ಆಗಮಿಸಿದ್ದರು.

## ಇಮ್ಮಡಿ ಮಂಜಯ್ಯ ಹೆಗ್ಗಡೆಯವರ ಕಾಲದಲ್ಲಾದ ವಿಕಸನ

ಕುಮಾರಯ್ಯ ಹೆಗ್ಗಡೆಯವರ ಎರಡನೇ ದತ್ತು ಮಗನಾದ ಮಂಜಯ್ಯ ಹೆಗ್ಗಡೆಯವರು ಕ್ಷೇತ್ರದ ಆಡಳಿತವನ್ನು ವಹಿಸಿಕೊಂಡಂದಿನಿಂದ ಇದರ ವ್ಯಾಪಕ ವಿಕಸನವು ಪ್ರಾರಂಭವಾಯಿತು. ಇವರ ಕಾಲದಲ್ಲಿ ಮತ್ತೊಮ್ಮೆ ಮೈಸೂರು ಅರಮನೆ ಮತ್ತು ಧರ್ಮಸ್ಥಳದ ಜೀಡಿನೊಳಗಿನ ಸಂಬಂಧವು ಕೊನರೊಡೆಯಿತು. ಮೈಸೂರು ಅರಸ ಮುಮ್ಮಡಿ ಕೃಷ್ಣರಾಜ ಒಡೆಯರು ಕ್ರಿ.ಶ. ೧೮೬೭ನೇ ನವೆಂಬರ್ ೧೨ನೇ ತಾರೀಕಿನಂದು ಇವರಿಗೆ ವೈಯಕ್ತಿಕ ಪತ್ರವನ್ನು ಬರೆದು ಅರಮನೆಗೆ ಆಮಂತ್ರಿಸಿದ್ದರು.

ಮಂಜಯ್ಯ ಹೆಗ್ಗಡೆಯವರು ತಮ್ಮ ಆಡಳಿತ ಕಾಲದಲ್ಲಿ ಧರ್ಮಸ್ಥಳಕ್ಕೆ ಹೊಸ ಜೀವಕಳೆ ಬರುವಂತೆ ಮಾಡಿದ್ದರು. ದೇವಾಲಯದ ಸುತ್ತಲಿನ ಪ್ರಕಾರವನ್ನು ಕಟ್ಟಿ ಸುಂದರಗೊಳಿಸಿದರು. ಪ್ರಸ್ತುತ ದೇವಾಲಯದ ಪೂರ್ವ ದಿಕ್ಕಿಗೆ ಮಹಡಿ ಇರುವ ಗೋಪುರವನ್ನು ಇವರೇ ಕಟ್ಟಿಸಿದ್ದರೆಂದು ಹೇಳಲಾಗುತ್ತದೆ. ಬ್ರಾಹ್ಮಣರ ನೂತನ ಭೋಜನ ಶಾಲೆಯ ನಿರ್ಮಾಣ, ಜಮಾ ಉಗ್ರಾಣದ ವಿಸ್ತರಣೆ ಮುಂತಾದವುಗಳು ಇವರ ನಿರ್ಮಾಣ ಕಾರ್ಯಗಳು. ಎರಡು ವರ್ಷಗಳ ಹಿಂದೆ ಧರ್ಮಸ್ಥಳದ ಶ್ರೀ ಚಂದ್ರನಾಥ ಬಸದಿಯನ್ನು ಪುನರ್ ನಿರ್ಮಿಸಲಿಕ್ಕಾಗಿ ಹಳೆಯ ಕಟ್ಟಡವನ್ನು ಕೆಡವುತ್ತಿದ್ದಾಗ ಆಶ್ಚರ್ಯಕರವೆನಿಸುವಂತೆ ಬಸದಿಯ ಗರ್ಭಗೃಹದ ಶಿಲಾಸ್ತಂಭದ ಮೇಲೆ ಇವರು ಬರೆಸಿದ ಶಾಸನವೊಂದು ಕಂಡುಬಂದಿತ್ತು. ಅದರ ಅನುಸಾರ ಇವರು ಈ ಬಸದಿಯನ್ನು ಜೀರ್ಣೋದ್ಧಾರಗೊಳಿಸಿ ಪಂಚಕಲ್ಯಾಣೋತ್ಸವವನ್ನು ನೆರವೇರಿಸಿದ್ದರು. ಇಲ್ಲಿಯ ದೈವದೇವರುಗಳ ಪ್ರೀತ್ಯರ್ಥವಾಗಿ ಮೂರು ಬಾರಿ ಮಹಾನಡಾವಳಿಯನ್ನು ನಡೆಸಿದ ವಿಶಿಷ್ಟ ಸಾಧನೆ ಇವರದು. ಇವರು ಕಣ್ಣು ನೋವಿನ ಬಾಧೆಗೆ ಒಳಗಾಗಿದ್ದ ವಿಚಾರ ಮೈಸೂರು ಅರಮನೆಗೂ ತಲುಪಿ ಮುಮ್ಮಡಿ ಕೃಷ್ಣರಾಜ ಒಡೆಯರ ಬಳಿಕ ರಾಜ್ಯವಾಳುತ್ತಿದ್ದ ೧೦ನೇ ಚಾಮರಾಜ ಒಡೆಯರು ತನ್ನ ಅರಮನೆಯ ಖಾಸಾ ವೈದ್ಯನಾಗಿದ್ದ ನಂಜುಂಡ ಪಂಡಿತ ಎಂಬುವನನ್ನು ಇವರ ಕಣ್ಣಿನ ಶುಶ್ರೂಷೆಗಾಗಿ ೧೮೮೯ರಲ್ಲಿ ಇಲ್ಲಿಗೆ ಕಳುಹಿಸಿದ್ದರು. ೮೦ ವರ್ಷಗಳ ದೀರ್ಘಕಾಲ ಬಾಳಿ ಧರ್ಮಸ್ಥಳದ ವ್ಯವಸ್ಥಿತ ಆಡಳಿತಕ್ಕೆ ಅಸ್ತಿವಾರ ಹಾಕಿ ಶ್ರೀ ಕ್ಷೇತ್ರದ ಕೀರ್ತಿಗೆ ಇನ್ನಷ್ಟು ಶೋಭೆಯನ್ನು ಕೊಟ್ಟು ಕ್ರಿ.ಶ. ೧೮೯೫ರಲ್ಲಿ ಇವರು ದಿವಂಗತರಾದರು.

ಧರ್ಮಸ್ಥಳದ ಇತಿಹಾಸದಲ್ಲಿ ಕಂಡು ಬರುವ ಪ್ರಸಿದ್ಧ ಮಹಿಳೆಯರ ಪೈಕಿ ಲಕ್ಷ್ಮೀಮತಿ ಅಮ್ಮ ಒಬ್ಬರು. ಇವರು ಹಿಂದಿನ ಹೆಗ್ಗಡೆಯವರಾಗಿದ್ದ ಕೀರ್ತಿಶೇಷ ಐದನೇ ಚಂದಯ್ಯ ಹೆಗ್ಗಡೆಯವರ (೧೮೯೭-೧೯೧೮) ಮತ್ತು ಮೂರನೇ ಮಂಜಯ್ಯ ಹೆಗ್ಗಡೆಯವರ (ಕ್ರಿ.ಶ. ೧೯೧೫ ರಿಂದ ೧೯೫೫) ಸಾಕುತಾಯಿ. ಅವರಿಬ್ಬರ ಪಾಲನೆ ಪೋಷಣೆಯನ್ನು ಮಾಡಿ ಅವರಲ್ಲಿ ಉನ್ನತ ವ್ಯಕ್ತಿತ್ವವನ್ನು ರೂಪಿಸಿದ್ದರು.

ಲಕ್ಷ್ಮೀಮತಿ ಅಮ್ಮನವರು ದೇವಾಲಯದ ನಿತ್ಯಾನುಷ್ಠಾನಗಳನ್ನು ನಡೆಸಲು ಹೆಗ್ಗಡೆಯವರ ಅಗತ್ಯವಿರುವ ಕಾರಣ ಈ ಇಬ್ಬರ ಪೈಕಿ ವಯಸ್ಸಿನಲ್ಲಿ ಹಿರಿಯರಾಗಿದ್ದ ಚಂದಯ್ಯರಿಗೆ ಪಟ್ಟವನ್ನು ಕಟ್ಟಿ ಚಂದಯ್ಯ ಹೆಗ್ಗಡೆಯವರೆಂದು ನಾಮಾಂಕಿತಗೊಳಿಸಿದರು. ಆಗ ಚಂದಯ್ಯ ಹೆಗ್ಗಡೆಯವರಿಗೆ ಕೇವಲ ೧೩ ವರ್ಷ ವಯಸ್ಸಾಗಿದ್ದ ಕಾರಣ ತಾನು ಅವರ ಬೆಂಗಾವಲಾಗಿ ನಿಂತರು. ಮುಂದೆ ಶ್ರೀ ಕ್ಷೇತ್ರದ ಭವ್ಯ ಬೆಳವಣಿಗೆಗೆ ಕಾರಣರಾದ ಚಂದಯ್ಯ ಹೆಗ್ಗಡೆಯವರಿಗೆ ಸರಿಯಾದ ತರಬೇತಿಯನ್ನು ಕೊಟ್ಟು ಯುಕ್ತ ಮಾರ್ಗದಲ್ಲಿ ನಡೆಸುತ್ತಿದ್ದರು.

ಚಂದಯ್ಯ ಹೆಗ್ಗಡೆಯವರು ಅಧಿಕಾರಕ್ಕೆ ಬಂದ ಕೂಡಲೇ ಧರ್ಮಸ್ಥಳಕ್ಕೆ ಬರುತ್ತಿದ್ದ ಯಾತ್ರಿಕರ ಸಂಖ್ಯೆ ಹೆಚ್ಚಾಗುತ್ತಿರುವುದನ್ನು ಕಂಡು ಅವರಿಗೆ ಬೇಕಾದ ವಸತಿ ಸೌಕರ್ಯಗಳನ್ನು ಹೆಚ್ಚಿಸಲು ಪ್ರಯತ್ನಿಸಿದರು. ಧರ್ಮಛತ್ರ ಗಳನ್ನು ದೊಡ್ಡದಾಗಿ ಕಟ್ಟಿಸಿದರು. ಕೇವಲ ಬಾವಿಗಳಿಂದ ಸೇದುವ ನೀರು ಸಾಕಾಗದಿದ್ದುದರಿಂದ ಶುದ್ಧವಾದ ನಳ್ಳಿಯ ನೀರಿನ ವ್ಯವಸ್ಥೆಯನ್ನು ಕೈಗೊಂಡರು.

ಧರ್ಮಸ್ಥಳದ ಚಂದ್ರನಾಥ ಬಸದಿಯನ್ನು ೧೯೧೮ರಲ್ಲಿ ಜೀರ್ಣೋದ್ಧಾರಗೊಳಿಸಿದ ಪಂಚ ಕಲ್ಯಾಣವನ್ನು ಏರ್ಪಡಿಸಿದ್ದರು. ತಮ್ಮ ಅಲ್ಪಾವಧಿ ಕಾಲದ ಆಡಳಿತದಲ್ಲಿ ಒಂದು ಮಹಾನಡಾವಳಿಯನ್ನೂ ನಡೆಸಿದ್ದರು. ಜಮಾ ಉಗ್ರಾಣದ ಕೆಳಭಾಗದ ಗೋಡೆಗಳನ್ನು ಶಿಲೆಯಿಂದ ನಿರ್ಮಿಸಿ ಅದನ್ನು ಬಲಗೊಳಿಸಿದರು. ದೈವಗಳ ಗುಡಿಗಳನ್ನು ಹೊಸದಾಗಿ ಕಟ್ಟಿಸಿದರು.

## ಮಂಜಯ್ಯ ಹೆಗ್ಗಡೆಯವರ ಕಾಲದಲ್ಲಿ ಶ್ರೀ ಕ್ಷೇತ್ರದ ವಿಸ್ತರಣೆ

ಚಂದಯ್ಯ ಹೆಗ್ಗಡೆಯವರು ನಿಧನರಾದಾಗ ಅವರ ಪುತ್ರರಾದ ರತ್ನವರ್ಮ ಹೆಗ್ಗಡೆಯವರು ಕೇವಲ ಆರು ತಿಂಗಳ ಮಗುವಾಗಿದ್ದುದರಿಂದ ಹಿಂದಿನ ಲಕ್ಷ್ಮೀಮತಿ ಅಮ್ಮನವರು ದತ್ತು ಸ್ವೀಕರಿಸಿಕೊಂಡಿದ್ದ ಮಂಜಯ್ಯ ಹೆಗ್ಗಡೆಯವರೇ ಇಲ್ಲಿಯ ಹೆಗ್ಗಡೆಯವರಾಗಿ ಅಧಿಕಾರ ವಹಿಸಿಕೊಳ್ಳಬೇಕಾಯಿತು.

ಧರ್ಮಸ್ಥಳಕ್ಕೆ ಆಗಮಿಸುತ್ತಿದ್ದ ಯಾತ್ರಿಕರಿಗೆ ಪಡಿ ಅಕ್ಕಿಯನ್ನು ಕೊಟ್ಟು ಅದರಿಂದ ಆಹಾರವನ್ನು ಸಿದ್ಧಗೊಳಿಸ

ರಿಕ್ಕಾಗಿ ಪಾತ್ರೆ ಮತ್ತಿತರ ವಸ್ತುಗಳನ್ನು ಕೊಡುವ ಪದ್ಧತಿ ಇತ್ತು. ಇದರ ಬದಲು ಕ್ಷೇತ್ರದ ವತಿಯಿಂದಲೇ ಊಟವನ್ನು ತಯಾರಿಸಿ ಎಲ್ಲಾ ಭಕ್ತರಿಗೆ ಅದನ್ನು ಒದಗಿಸಿಕೊಡುವ ಆಧುನಿಕ ಸಾಮೂಹಿಕ ಭೋಜನ ವ್ಯವಸ್ಥೆಯನ್ನು ಮಂಜಯ್ಯ ಹೆಗ್ಗಡೆಯವರು ಪ್ರಾರಂಭಿಸಿದರು.

ದಕ್ಷಿಣ ಭಾರತದ ಎಲ್ಲಾ ದೇವಾಲಯಗಳಲ್ಲಿದ್ದಂತೆ ಧರ್ಮಸ್ಥಳದಲ್ಲಿಯೂ ದೇವದಾಸಿ ಪದ್ಧತಿ ಅಸ್ತಿತ್ವದಲ್ಲಿತ್ತು. ಇದು ಸಾಮಾಜಿಕ ದೃಷ್ಟಿಯಿಂದ ಆರೋಗ್ಯಕರ ಪದ್ಧತಿಯಾಗಿ ಮುಂದುವರೆಯುತ್ತಿರಲಿಲ್ಲ. ಇದನ್ನು ಮನಗಂಡ ಮಂಜಯ್ಯ ಹೆಗ್ಗಡೆಯವರು ಕೆಲವು ಧಾರ್ಮಿಕ ಗುರುಗಳು, ವೈದಿಕರು ಮತ್ತು ಆಡಳಿತಗಾರರೊಂದಿಗೆ ಸಮಾಲೋಚಿಸಿ ಇಲ್ಲಿ ಈ ಪದ್ಧತಿಯನ್ನು ೨೦ನೇ ಶತಮಾನದ ಎರಡನೇ ದಶಕದಲ್ಲಿ ರದ್ದುಗೊಳಿಸಿದರು.

ಮಂಜಯ್ಯ ಹೆಗ್ಗಡೆಯವರು ಧರ್ಮಸ್ಥಳದಲ್ಲಿ ನಡೆಯುತ್ತಿದ್ದ ವಾರ್ಷಿಕ ದೀಪೋತ್ಸವ ಸಂದರ್ಭದಲ್ಲಿ ಸರ್ವಧರ್ಮ ಮತ್ತು ಸಾಹಿತ್ಯ ಸಮ್ಮೇಳನಗಳನ್ನು ೧೯೩೨ರಲ್ಲಿ ಪ್ರಾರಂಭಿಸಿದರು. ಇದರಲ್ಲಿ ವಿಭಿನ್ನ ಮತಗಳ ಪಂಡಿತರನ್ನು ಆಹ್ವಾನಿಸಿ ಅವರವರ ಧರ್ಮಗಳ ಮುಖ್ಯ ತತ್ವಗಳನ್ನೂ, ಅದರಲ್ಲಿ ಅಡಗಿರುವ ಸಾಮಾಜಿಕ ಮಹತ್ವದ ಪರಧರ್ಮ ಸಹಿಷ್ಣುತೆ ಮತ್ತು ಮತೀಯ ಸೌಹಾರ್ದವನ್ನು ವಿವರಿಸಿ ಹೇಳುವಂತೆ ತಿಳಿಸುತ್ತಿದ್ದರು.

ಮಂಜಯ್ಯ ಹೆಗ್ಗಡೆಯವರು ೧೯೪೦ರಲ್ಲಿ ಉಜಿರೆ ಯಲ್ಲಿ ಸಿದ್ಧವನ ಗುರುಕುಲವನ್ನು ಪ್ರಾರಂಭಿಸಿ, ಸಂಸ್ಕೃತ, ಕನ್ನಡ, ಹಿಂದಿ, ಇಂಗ್ಲಿಷ್ ಭಾಷೆಗಳಲ್ಲಿ ವಿದ್ಯಾಭ್ಯಾಸವನ್ನೂ, ಧಾರ್ಮಿಕ ಶಿಕ್ಷಣವನ್ನೂ ಎಲ್ಲಾ ಮತದ ವಿದ್ಯಾರ್ಥಿಗಳಿಗೆ ಧರ್ಮಾರ್ಥವಾಗಿ ಕೊಡುವ ಏರ್ಪಾಡು ಮಾಡಿದರು. ೧೯೪೭ರಲ್ಲಿ ಉಜಿರೆಯ ಪ್ರಶಾಂತ ವಾತಾವರಣದಲ್ಲಿ ಕರ್ನಾಟಕ ವಿದ್ಯಾಲಯವೆಂಬ ಪ್ರೌಢ ಶಿಕ್ಷಣ ಸಂಸ್ಥೆಯು ಹೆಗ್ಗಡೆಯವರ ಅವಿಶ್ರಾಂತ ದುಡಿಮೆಯ ಫಲಸ್ವರೂಪವಾಗಿ ರೂಪುಗೊಂಡಿತು.

ಧರ್ಮಭೀರುಗಳಾದ ಮಂಜಯ್ಯ ಹೆಗ್ಗಡೆಯವರು ಪರಿಸರದಲ್ಲಿ ಮಲೇರಿಯಾ ಬಾಧೆಯಿಂದ ದಿನದಿಂದ ದಿನಕ್ಕೆ ಕ್ಷೀಣಿಸುತ್ತಿದ್ದ ಜನಸಂಖ್ಯೆಯನ್ನು ಉಳಿಸಿದರು.

ಹಳ್ಳಿಯ ಬಡರೋಗಿಗಳು ಸರಿಯಾದ ವೈದ್ಯಕೀಯ ನೆರವು ಇಲ್ಲದೆ ನರಳುತ್ತಿರುವುದನ್ನು ಕಂಡ ಮಂಜಯ್ಯ ಹೆಗ್ಗಡೆಯವರು ಬಡರೋಗಿಗಳಿಗೆ ಸಾಧ್ಯವಾದಷ್ಟು ಮಟ್ಟಿಗೆ ಚಿಕಿತ್ಸೆಯ ನೆರವನ್ನು ಧರ್ಮಾರ್ಥವಾಗಿ ನೀಡಲು ಸಂಚಾರಿ ಆಸ್ಪತ್ರೆಯೊಂದನ್ನು ಯೋಜಿಸಿದರು. ತಾನೂ ಸ್ವತಃ ಶ್ರಮಿಸಿ ಹಳ್ಳಿ-ಹಳ್ಳಿಗಳಲ್ಲಿ ಇಂತಹ ಯೋಜನೆಯ ಉಪಯೋಗವನ್ನು ಸರ್ವರಿಗೂ ಮನದಟ್ಟು ಮಾಡಿದರು. ನೇತ್ರ ಚಿಕಿತ್ಸಕ ಡಾ। ಮೋದಿಯವರನ್ನು ಕರೆಯಿಸಿ, ಅವರಿಂದ ಶ್ರೀ ಧರ್ಮಸ್ಥಳ ಗ್ರಾಮದ ಹಾಗೂ ದೂರದೂರದ ಅನೇಕ ಊರುಗಳ ನೇತ್ರರೋಗಿಗಳಿಗೆ ನೇತ್ರದಾನ ಮಾಡಿಸಿದರು.

## ರತ್ನವರ್ಮ ಹೆಗ್ಗಡೆಯವರ ಕಾಲದಲ್ಲಾದ ಪುರೋಭಿವೃದ್ಧಿ

ರತ್ನವರ್ಮ ಹೆಗ್ಗಡೆಯವರು ಧರ್ಮಸ್ಥಳ ಕ್ಷೇತ್ರದಲ್ಲಿ ಆಧುನಿಕ ಯುಗವೊಂದರ ಆರಂಭಕ್ಕೆ ಕಾರಣರಾದ ವಿಶಿಷ್ಟ ಪುರುಷರು. ಡಿ. ಮಂಜಯ್ಯ ಹೆಗ್ಗಡೆಯವರು ದಿವಂಗತರಾದ ನಂತರ ಧರ್ಮಸ್ಥಳದ ಧರ್ಮಾಧಿಕಾರಿಗಳಾಗಿ ಪಟ್ಟಾಭಿಷಿಕ್ತರಾದ ಡಿ. ರತ್ನವರ್ಮ ಹೆಗ್ಗಡೆಯವರ ಆಡಳಿತದ ಅವಧಿ ಎಣಿಕೆಯಲ್ಲಿ ಚಿಕ್ಕದು. ಕೇವಲ ೧೫ ವರ್ಷ. ಆದರೆ ಅವರ ಸಾಧನೆಗಳಲ್ಲಿ ಈ ಅವಧಿ ಭಾರೀ ದೊಡ್ಡದು. ನೂರ ಮೂವತ್ತು ವರ್ಷಗಳಲ್ಲಿ ಸಾಧಿಸಬಹುದಾದಷ್ಟನ್ನು ಅವರು ಈ ಚಿಕ್ಕ ಅವಧಿಯಲ್ಲಿ ಸಾಧಿಸಿದರು. ಅದಕ್ಕೆ ಕಾರಣ, ಇವರ ಕಾರ್ಯ ಕೌಶಲ್ಯದ ಚಮತ್ಕೃತಿ.

ಶುಚಿತ್ವವು ದೈವತ್ವದ ಜೊತೆಗೆ ಬರುವ ಎರಡನೇ ಅಂಶವೆಂದು ತಿಳಿದಿದ್ದ ರತ್ನವರ್ಮ ಹೆಗ್ಗಡೆಯವರು ದೇವಾಲಯ, ಬೀಡು, ಪೇಟೆ, ಬೀದಿ, ಸುತ್ತಮುತ್ತ ಶುಚಿತ್ವ ಕಾಪಾಡುವ ಕಡೆಗೆ ತುರ್ತಾಗಿ ಗಮನಹರಿಸಿದರು. ವಸಂತ ಮಹಲು, ಬೆಳ್ಳಿ ರಥದ ಕೆಲಸವನ್ನು ಮುಗಿಸಿಕೊಂಡರು. ಭೋಜನ ಶಾಲೆಯ ವಿಸ್ತರಣೆ, ಹೊಸ ಬೀಡಿನ ಚಾವಡಿಯ ನವೀಕರಣ, ಸಂದರ್ಶಕರಿಗೆ ಅನುಕೂಲತೆ ವ್ಯವಸ್ಥೆ ಮುಂತಾದವುಗಳು ನಡೆದವು. ದೇವಾಲಯದ ಗೋಪುರದ ಕಂಬಗಳಿಗೆ, ಗಣಪತಿ ಬಾಗಿಲಿಗೆ ಬೆಳ್ಳಿಯ ತಗಡಿನ ಹೊದಿಕೆ, ಪ್ರಾಂಗಣ ಉದ್ಯಾನ, ಕೆರೆ, ಅಣ್ಣಪ್ಪನ ಬೆಟ್ಟ, ನೆಲ್ಯಾಡಿಬೀಡು, ಬಸದಿ, ಮಹಾದ್ವಾರಗಳು ಹೊಸಕಳೆಯಿಂದ ಶೋಭಿಸಿದವು.

ಉಜಿರೆಯಿಂದ ಧರ್ಮಸ್ಥಳದವರೆಗಿನ ರಸ್ತೆಗೆ ಡಾಮರು, ನೇತ್ರಾವತಿಗೆ ದೊಡ್ಡ ಸೇತುವೆ, ಯಾತ್ರಾರ್ಥಿಗಳಿಗೆ ಮೂರು ಅಂತಸ್ತಿನ ನೂತನ ಕಟ್ಟಡಗಳು ನಿರ್ಮಾಣವಾದವು. ಪೇಟೆ, ಬೀದಿಯ ಬಳಿಯಲ್ಲಿದ್ದ ಹಳೆಯ ಕಟ್ಟಡಗಳ ಜಾಗದಲ್ಲಿ ಸುಂದರವಾದ ಹೊಸ ಕಟ್ಟಡಗಳು, ಅಂಗಡಿ ಸಾಲುಗಳು ಎಲ್ಲಾ ಕಡೆ ನೇತ್ರಾವತಿ ನೀರಿನ ಸರಬರಾಜು ಬಹಳ ಬೇಗನೆ ಅಸ್ತಿತ್ವಕ್ಕೆ ಬಂದವು.

ಜನರು ಮುಂದಿಡುತ್ತಿದ್ದ ನೂರಾರು ಬೇಡಿಕೆಗಳಿಗೆ ಕ್ಷೇತ್ರದ ಪರಂಪರಾಗತ ದಾನ ಪದ್ಧತಿ ಅನುಸಾರ ಮತ್ತು ತಮ್ಮ ಉದಾರ ಹೃದಯದಿಂದ ಧನ ಸಹಾಯವನ್ನು ನೀಡುತ್ತಿದ್ದರು. ಹಲವಾರು ಸಂಘ ಸಂಸ್ಥೆಗಳು, ಧರ್ಮಪೀಠಗಳು ಮತ್ತು ವಿದ್ಯಾಸಂಸ್ಥೆಗಳಿಗೆ ಧನಸಹಾಯ, ಬೆಂಬಲ ಮತ್ತು ಮಾರ್ಗದರ್ಶನಗಳನ್ನು ನೀಡುತ್ತಿದ್ದುದರಿಂದ ವಿಶೇಷ ಮಾನ್ಯತೆಯನ್ನು ಗಳಿಸಿಕೊಂಡರು.

೧೯೬೬ರಲ್ಲಿ ಉಜಿರೆಯಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಎಜುಕೇಶನಲ್ ಟ್ರಸ್ಟ್ ಎಂಬ ರಿಜಿಸ್ಟರ್ಡ್ ಸಂಸ್ಥೆಯನ್ನು ಸ್ಥಾಪಿಸಿ ಅದರ ಮೂಲಕ ಈ ಮಲೆನಾಡಿಗೆ ಉಚ್ಚ ಶಿಕ್ಷಣದ ಅನುಕೂಲತೆಯನ್ನು ಒದಗಿಸುವ ಯೋಜನೆಯನ್ನು ಕೈಗೊಂಡರು. ತಮ್ಮ ದೂರದರ್ಶಿತ್ವ, ದ್ರವ್ಯದ ಲಭ್ಯತೆ ವಿದ್ಯಾಪ್ರೇಮ ಮತ್ತು ಉತ್ಸಾಹ ಇವುಗಳಿಂದಾಗಿ ೧೯೬೬ ಜನವರಿ ೨೬ರಂದು ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ

ಕಾಲೇಜನ್ನು ಸ್ಥಾಪಿಸಿದರು. ಸಿದ್ಧವನ ಗುರುಕುಲದಲ್ಲಿ ಪ್ರಾರಂಭಗೊಂಡ ಈ ಮಹಾವಿದ್ಯಾಲಯಕ್ಕೆ ಒಪ್ಪುವಂತಹ ಬಹು ಸುಂದರವಾದ ಕಟ್ಟಡವನ್ನು ಇವರ ಸುಪುತ್ರರಾದ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರು ನಿರ್ಮಿಸಿದರು. ಈ ವರೆಗಿನ ಹೆಗ್ಗಡೆಯವರು ಶಿಕ್ಷಣಕ್ಕೆ ಕೊಡುತ್ತಿದ್ದ ಪ್ರೋತ್ಸಾಹ ಹಾಗೂ ನಿರ್ಮಿಸುತ್ತಿದ್ದ ವಿದ್ಯಾಸಂಸ್ಥೆಗಳಿಗೆ ಕಿರೀಟಪ್ರಾಯವಾಗಿ ಈ ಮಹಾವಿದ್ಯಾಲಯವು ಈ ಕಾಲದಲ್ಲಿ ನಿರ್ಮಾಣಗೊಂಡಿತು ಎಂಬುದನ್ನು ಒಪ್ಪಬೇಕಾಗುತ್ತದೆ.

ಶ್ರೀ ರತ್ನವರ್ಮ ಹೆಗ್ಗಡೆಯವರು ಧರ್ಮಸ್ಥಳದ ಪುರೋಭಿವೃದ್ಧಿಗಾಗಿ ದಣಿವರಿಯದೆ ತಮ್ಮ ಚಿರಂತರ ಉತ್ಸಾಹ ಮತ್ತು ನಿಷ್ಠೆಯಿಂದ ಶ್ರಮಿಸಿ, ಶ್ರೇಯೋವಂತರಾದರು. ಈ ಕ್ಷೇತ್ರವು ರಾಷ್ಟ್ರ ಮತ್ತು ಅಂತರ್ ರಾಷ್ಟ್ರೀಯ ಮಟ್ಟಕ್ಕೆ ಬೆಳೆಯಲು ಬೇಕಾದ ಯೋಜನೆಗಳನ್ನು ಕಲ್ಪಿಸಿಕೊಂಡಿದ್ದು ಅದಕ್ಕೆ ಬೇಕಾದ ಧನ ಸಂಪತ್ತುಗಳ ಕ್ರೋಢೀಕರಣಕ್ಕೂ ಪ್ರಯತ್ನಿಸಿದ್ದರು. ಸಾಂಸ್ಕೃತಿಕ ರಂಗದ ಹಿರಿಯ ವ್ಯಕ್ತಿಗಳು, ಚಿಕಿತ್ಸಕ ಮನೋವೃತ್ತಿಯ ಆಡಳಿತಗಾರರು, ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸುವ ಅಧಿಕಾರಿಗಳು ಮತ್ತು ಜೀವನದಲ್ಲಿ ಪೂರ್ಣ ಶ್ರೇಯಸ್ಸನ್ನು ಕಂಡಿರುವ ಹಿರಿಯ ಚೇತನಗಳು ರತ್ನವರ್ಮ ಹೆಗ್ಗಡೆಯವರಿಗೆ ಆತ್ಮೀಯರಾಗಿದ್ದರು.

## ಡಾ. ವೀರೇಂದ್ರ ಹೆಗ್ಗಡೆಯವರಿಂದಾದ ಪ್ರವರ್ಧಮಾನ ಬೆಳವಣಿಗೆ, ವಿಸ್ತರಣೆ

ಇವರು ಅಕ್ಟೋಬರ್ ೨೪, ೧೯೬೮ರಂದು ಶ್ರೀ ಕ್ಷೇತ್ರದಲ್ಲಿ ಪಟ್ಟಾಭಿಷಿಕ್ತರಾಗಿ ಅಧಿಕಾರ ಮತ್ತು ಜವಾಬ್ದಾರಿಯನ್ನು ವಹಿಸಿಕೊಂಡಂದಿನಿಂದ, ಇಲ್ಲಿಯ ಆಡಳಿತದಲಿ ವಿದ್ಯುತ್ ಸಂಚಾರವಾದಂತಾಗಿ, ಪರಂಪರಾಗತ ಚತುರ್ದಾನ ಪದ್ಧತಿಯ ಷೋಡಶ ದಾನಗಳ ಆಯಾಮವನ್ನು ಪಡೆದುಕೊಂಡಷ್ಟು ವಿಸ್ತಾರಗೊಂಡಿತು. ಶ್ರೀ ಕ್ಷೇತ್ರದಲ್ಲಿ ನೇತ್ರಾವತಿ, ವೈಶಾಲಿ, ಶರಾವತಿ, ಗಾಯತ್ರಿ, ಗಂಗೋತ್ರಿ, ಸಾಕೇತವೆಂಬ ಬೃಹತ್ ಗೃಹಗಳು ನಿರ್ಮಾಣವಾಗಿ, ಅವುಗಳ ನಿರ್ವಹಣೆಯೂ ಉನ್ನತಗೊಂಡು, ಸೌಕರ್ಯಗಳು ವೃದ್ಧಿಗೊಂಡು ಯಾತ್ರಾರ್ಥಿಗಳು ತಮ್ಮ ಮನೆಗೇ ಬಂದಿದ್ದೇವೆನ್ನುವಷ್ಟು ನಿರಾಳ ಹಾಗೂ ನೆಮ್ಮದಿಯಿಂದ ಇರುವ ವಾತಾವರಣವು ನಿರ್ಮಾಣಗೊಂಡಿತು.

ಶ್ರೀ ಕ್ಷೇತ್ರದಲ್ಲಿ ಭಗವಾನ್ ಬಾಹುಬಲಿ ಸ್ವಾಮಿಯ ಪ್ರತಿಷ್ಠಾಪನೆ ಮತ್ತು ಮಹಾ ಮಸ್ತಕಾಭಿಷೇಕ, ಶ್ರೀ ಮಂಜುನಾಥ ಸ್ವಾಮಿಯ ನೂತನ ಗರ್ಭಗೃಹದ ನಿರ್ಮಾಣ, ಭಗವಾನ್ ಶ್ರೀ ಚಂದ್ರನಾಥ ಸ್ವಾಮಿ ಬಸದಿಯ ಪುನರ ನಿರ್ಮಾಣ, ಮಹಾನಡಾವಳಿಯ ನಿರ್ವಹಣೆಯಂತಹ ಐತಿಹಾಸಿಕ ಕಾರ್ಯಕ್ರಮಗಳು ನಡೆದವು. ಶಿಕ್ಷಣ, ಗ್ರಾಮಾಭಿವೃದ್ಧಿ, ಜನಜಾಗೃತಿ, ಪ್ರಾಚೀನ ದೇವಾಲಯಗಳ ಪುನರುತ್ಥಾನ–ಸಾಹಿತ್ಯಿಕ–ಸಾಂಸ್ಕೃತಿಕ ಚಟುವಟಿಕೆಗಳು ಬಹು ವಿಸ್ತಾರಗೊಂಡು, ಶ್ರೀ ಕ್ಷೇತ್ರದ ಹೆಸರು ರಾಷ್ಟ್ರಮಟ್ಟದಲ್ಲಿ ಮನೆ ಮಾತಾಯಿತು.

ಡಾ. ವೀರೇಂದ್ರ ಹೆಗ್ಗಡೆಯವರೂ, ರಾಷ್ಟ್ರ, ಅಂತರ್ ರಾಷ್ಟ್ರಮಟ್ಟಕ್ಕೆ ಬೆಳೆದು, ಸರ್ವವರ್ಗ, ಸರ್ವಧರ್ಮ, ಸರ್ವ ಸಿದ್ಧಾಂತಗಳವರಿಂದ ಮಾನ್ಯರಾದರು. ಹಲವು ಬಿರುದು, ಉಪಾಧಿ, ಪ್ರಶಸ್ತಿಗಳಿಂದ ಅಲಂಕೃತ ರಾಗುವುದಲ್ಲದೆ, ವಿಶ್ವವಿದ್ಯಾಲಯಗಳಿಂದ ಡಾಕ್ಟರೇಟ್ ಪದವಿಗಳು, ಭಾರತದ ರಾಷ್ಟ್ರಪತಿಯವರಿಂದ ರಾಜರ್ಷಿ ಉಪಾಧಿ ಭಾರತದ ಸರಕಾರದ ಪದ್ಮಭೂಷಣದೊಂದಿಗೆ ಗೌರವಿಸಲ್ಪಟ್ಟರು. ಬ್ರಿಟನಿನ ಗ್ಲಾಸ್ಗೊ ವಿಶ್ವವಿದ್ಯಾಲಯದಿಂದ ಎಫ್.ಆರ್.ಸಿ.ಎಸ್. ಪದವಿಯೊಂದಿಗೆ ಅಂತರ್ ರಾಷ್ಟ್ರಮಟ್ಟ ದಲ್ಲಿ ಗುರುತಿಸಲ್ಪಟ್ಟರು.

ಇವರ ಆಡಳಿತದಲ್ಲಿ ಶ್ರೀ ಕ್ಷೇತ್ರದ ಸಹಾಯ ಹಸ್ತವು ಶೈಕ್ಷಣಿಕ, ಧಾರ್ಮಿಕ, ಸಾಂಸ್ಕೃತಿಕ, ಸಮಾಜೋನ್ನತಿಯ ಹಾಗೂ ಆಧ್ಯಾತ್ಮಿಕ ರಂಗಗಳಲ್ಲಿ ರಾಷ್ಟ್ರಮಟ್ಟಕ್ಕೆ ವಿಸ್ತರಿಸಲ್ಪಟ್ಟಿತು. ಜೀವನದಲ್ಲಿ ಮಹತ್ತನ್ನು ಸಾಧಿಸಬೇಕೆನ್ನುವವರು ಮಾರ್ಗದರ್ಶನಕ್ಕಾಗಿ ಶ್ರೀ ಕ್ಷೇತ್ರವನ್ನು ಆದರ್ಶವಾಗಿಟ್ಟುಕೊಳ್ಳು ವಂತಾಯಿತು. ಯುವಜನರ ಭವಿಷ್ಯಕ್ಕೆ ದಾರಿದೀಪವಾಯಿತು.

ಸಮಾಜದ ಹಲವು ಸಮಸ್ಯೆಗಳನ್ನು ಚಿಕಿತ್ಸಕ ವಿಧಾನದಿಂದ ಪರಿಹರಿಸುವಲ್ಲಿ ಶ್ರೀ ಕ್ಷೇತ್ರವು ಯಶಸ್ವಿಯಾಗುತ್ತಿದೆ. ಜನಜೀವನದ ಎಲ್ಲ ರಂಗಗಳಿಗೂ ಧನಾತ್ಮಕ ಪ್ರಭಾವವನ್ನು ಬೀರಿ ಅದು ಪುರೋಭಿವೃದ್ಧಿಯಲ್ಲಿ ಮುನ್ನಡೆಯುವಂತೆ ಮಾಡುತ್ತಿದೆ. ಧಾರ್ಮಿಕ ಸಂಸ್ಥೆಯೊಂದು ಸಮಾಜಮುಖಿ ಯಾಗಿ ಸಮಗ್ರ ಸಮಾಜವನ್ನು ಅತ್ಯಾಧುನಿಕ ರೀತಿಯಲ್ಲಿ ಹೇಗೆ ಮುನ್ನಡೆಸಬಹುದೆಂಬುದಕ್ಕೆ ಒಂದು ಅನುಸರಣೀಯ ಮಾದರಿಯಾಗಿ ಬೆಳೆಯುತ್ತಿದೆ.

ಶ್ರೀ ಕ್ಷೇತ್ರದ ಮೂಲ ಸಾನ್ನಿಧ್ಯದ ರಕ್ಷಣೆ ಮತ್ತು ಅದರ ಸುಪ್ರಸನ್ನತೆ ನನ್ನ ಮೊದಲ ಆದ್ಯತೆ. ಆ ಕರ್ತವ್ಯವನ್ನು ನಾವೆಷ್ಟು ಶ್ರದ್ಧೆಯಿಂದ ನಿರ್ವಹಿಸುತ್ತಾ ಬರುತ್ತೇವೋ ಅಷ್ಟು ಸಂಪ್ರೀತರಾಗಿ ಕ್ಷೇತ್ರವನ್ನು ರಕ್ಷಿಸುತ್ತಾರೆ. ಕ್ಷೇತ್ರಕ್ಕೆ ಬರುವ ಭಕ್ತರನ್ನು ಹರಸುತ್ತಾರೆ. ಕ್ಷೇತ್ರದ ಈ ಎಲ್ಲಾ ವಿಸ್ತರಣೆ, ಬೆಳವಣಿಗೆ, ಉನ್ನತಿ, ಮಹೋತ್ಸವಗಳು ನಡೆಯುತ್ತಿರುವಾಗ ನಾವು ಇದ್ದೇವೆ ಎಂಬುದು ನಮ್ಮ ಜನ್ಮದ ಸಾರ್ಥಕತೆ ಎಂಬುದು ಸನ್ಮಾನ್ಯ ವೀರೇಂದ್ರ ಹೆಗ್ಗಡೆಯವರ ವಿನಮ್ರ ನಂಬಿಕೆ. ಇದೆಲ್ಲವನ್ನು ತಿಳಿದುಕೊಂಡಿದ್ದ ಹಿರಿಯ ಜೀವ, ನೋಬೆಲ್ ಪ್ರಶಸ್ತಿ ವಿಜೇತೆ, ಭಾರತರತ್ನ ಮದರ್ ಥೆರೆಸಾರವರು ಇವರನ್ನು ಉದ್ದೇಶಿಸಿ, "ನನಗಿಂತ ನಿಮ್ಮ ಸೇವಾ ಕ್ಷೇತ್ರ ದೊಡ್ಡದು. ನಿಮಗೆ ಧನ ಬಲ, ಜನಬಲವಿದೆ. ದೀನದಲಿತರನ್ನು ಕಂಡು ಸ್ಪಂದಿಸುವ ಅಂತಃಕರಣ ನಿಮ್ಮಲ್ಲಿದೆ. ನಿಮಗೆ ದೇವರ ಅನುಗ್ರಹವಿದೆ. ನಿಮ್ಮಿಂದ ಇನ್ನೂ ಹೆಚ್ಚಿನ ಸೇವೆ ಸಲ್ಲಲಿ ಎಂದು ದೇವರನ್ನು ಪ್ರಾರ್ಥಿಸುತ್ತೇನೆ" ಎಂದು ಹಾರೈಸಿರುವರು.

ಡಾ. ಬಿ. ರಾಜಶೇಖರಪ್ಪ *

# ನಾಯಕನಹಟ್ಟಿ ತಿಪ್ಪೇಸ್ವಾಮಿಯ (ತಿಪ್ಪೇರುದ್ರಸ್ವಾಮಿಯ) ಚಾರಿತ್ರಿಕತೆ

ಕರ್ನಾಟಕದ ಪ್ರಖ್ಯಾತ ಯೋಗಿಪುರುಷರಲ್ಲಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿಯ ತಿಪ್ಪೇಸ್ವಾಮಿಯವರೂ ಒಬ್ಬರಾಗಿದ್ದಾರೆ. ಇವರನ್ನು ಶ್ರೀಗುರು ತಿಪ್ಪೇರುದ್ರಸ್ವಾಮಿ ಎಂದು ಕರೆಯುವುದು ಹೆಚ್ಚು ರೂಢಿಯಲ್ಲಿದೆ. ಅವರ ಕಾರ್ಯಕ್ಷೇತ್ರವಾಗಿದ್ದ ಕಾರಣ ನಾಯಕನಹಟ್ಟಿ ಪುಣ್ಯಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಅಲ್ಲಿಯ ಒಳಮಠ ಮತ್ತು ಹೊರಮಠ ಎಂಬ ಎರಡು ಆರಾಧನಾ ಸ್ಥಳಗಳಲ್ಲಿ ಪೂಜೆಗೊಳ್ಳುತ್ತಿರುವ ಅವರಿಗೆ ಎಲ್ಲ ಜಾತಿ ಜನಾಂಗಗಳ ಅಸಂಖ್ಯಾತ ಭಕ್ತರಿದ್ದಾರೆ. ಅವರು ಕಾರಣಪುರುಷರು ಪವಾಡಪುರುಷರು ಎಂಬ ನಂಬಿಕೆ ಜನಮನದಲ್ಲಿದೆ. ಪವಾಡ ಮಹಿಮೆಗಳು ಸುತ್ತಿಕೊಂಡ ಯೋಗಿಪುರುಷನ ವಾಸ್ತವಿಕ ಚರಿತ್ರೆ ಮಸಕಾಗಿ ಹೋಗುವುದು ಸಾಮಾನ್ಯ. ತಿಪ್ಪೇಸ್ವಾಮಿಯ ವಿಷಯದಲ್ಲಿ ಆಗಿರುವುದೂ ಇದೇ. ಅವರೊಬ್ಬ ಪವಾಡಪುರುಷರೆಂಬ ಚಹರೆಯಲ್ಲಿ ಕೀರ್ತಿಸುವ ಒಂದು ಪದ್ಯರೂಪದ ಪುರಾಣಕೃತಿ, ಕೆಲವು ಕಿರುಹೊತ್ತಗೆಗಳು ಮತ್ತು ಹಲವಾರು ಲೇಖನಗಳು ಈಚಿನ ಕಾಲದಲ್ಲಿ ಪ್ರಚುರವಾಗಿವೆ. ಅವರ ಚರಿತ್ರೆಯನ್ನು ಗರ್ಭೀಕರಿಸಿಕೊಂಡಿರುವ ಕೆಲವು ಹಳೆಯ ಆಕರಗಳಿರುವುದಾದರೂ ಅವು ಸರಿಯಾಗಿ ಜನಮನಕ್ಕೆ ಮುಟ್ಟದೆ, ಒಂದು ರೀತಿಯಲ್ಲಿ ಅವರ ಚರಿತ್ರೆ ಅಜ್ಞಾತವಾಗಿದೆ. ಅಂಥ ಆಕರಗಳಿಂದ ಲಭ್ಯವಾಗುವ ಚರಿತ್ರಾಂಶಗಳನ್ನು ಕ್ರೋಡೀಕರಿಸಿ ಅವರ ಚರಿತ್ರೆಯನ್ನು ಸಾದರಪಡಿಸುವ ಸಣ್ಣ ಒಂದು ಪ್ರಯತ್ನವನ್ನು ಇಲ್ಲಿ ಕೈಕೊಳ್ಳಲಾಗಿದೆ. ಮೊದಲಿಗೆ ಕೆಲವು ತೊಡಕಿನ ಅಂಶಗಳನ್ನು ಪರಿಶೀಲಿಸಬೇಕಾಗಿದೆ.

## ೧. ಪಂಚಗಣಾಧೀಶ್ವರರಲ್ಲಿ ಇವರು ಒಬ್ಬರೇ ?

ಕಲ್ಯಾಣದಿಂದ ಧರ್ಮಸಂಚಾರ ಕೈಕೊಂಡ ಪಂಚಗಣಾಧೀಶ್ವರರಲ್ಲಿ ಇವರೂ ಒಬ್ಬರೆಂದು ಕೆಲವರು ಬರೆದರೆ, ಇವರು ಶ್ರೀಶೈಲದ ಕಡೆಯಿಂದ ಧರ್ಮಸಂಚಾರ ಕೈಕೊಂಡು ಬಂದರೆಂದು ಇನ್ನು ಕೆಲವರು ಬರೆದಿದ್ದಾರೆ. ಆ ಪಂಚಗಣಾಧೀಶ್ವರರು ಕೋಲಶಾಂತಯ್ಯ, ಕೆಂಪಯ್ಯ, ಬಸವೇಶ್ವರ, ಚನ್ನಬಸವೇಶ್ವರ ಮತ್ತು ತಿಪ್ಪೇರುದ್ರಸ್ವಾಮಿ ಎಂದೂ ಅವರ ಐಕ್ಯಸ್ಥಳಗಳು ಅನುಕ್ರಮವಾಗಿ ಅರಸೀಕೆರೆ (ಬಳ್ಳಾರಿ ಜಿಲ್ಲೆ), ರಾಯದುರ್ಗ (ಅನಂತಪುರ ಜಿಲ್ಲೆ, ಆಂಧ್ರಪ್ರದೇಶ ರಾಜ್ಯ), ಕೊಟ್ಟೂರು (ಬಳ್ಳಾರಿ ಜಿಲ್ಲೆ), ಗುಬ್ಬಿ (ತುಮಕೂರು ಜಿಲ್ಲೆ), ನಾಯಕನಹಟ್ಟಿ (ಚಿತ್ರದುರ್ಗ ಜಿಲ್ಲೆ) ಎಂದೂ ಕೆಲವರು ಬರೆದರೆ, ಇನ್ನು ಕೆಲವರು ಅವುಗಳಲ್ಲಿ ಒಂದೆರಡು ಹೆಸರುಗಳನ್ನು ಅವರ ಐಕ್ಯಸ್ಥಳಗಳನ್ನೂ ಬೇರೆ ರೀತಿಯಾಗಿ ಹೇಳಿದ್ದಾರೆ. ಇವಲ್ಲದೆ ಕೊಟ್ಟೂರು, ಕೂಲಹಳ್ಳಿ (ಬಳ್ಳಾರಿ ಜಿಲ್ಲೆ) ಈ ಎರಡೂ ಸ್ಥಳಗಳಲ್ಲಿರುವ ಪ್ರಮುಖ ದೇವಾಲಯ ಮಠಗಳಲ್ಲಿ ಗೋಡೆಗಳ ಮೇಲೆ ಫಲಕಗಳಲ್ಲಿ '೧೨ನೇ ಶತಮಾನದಲ್ಲಿ ಕಲ್ಯಾಣದಿಂದ ಹೊರಟು ಬಂದ ಪಂಚಗಣಾಧೀಶ್ವರರು ಶ್ರೀ ಗುರುಗಳಾದ ತಿಪ್ಪೇರುದ್ರಸ್ವಾಮಿ, ಕೆಂಪೇಶ್ವರಸ್ವಾಮಿ, ಕೊಟ್ಟೂರೇಶ್ವರಸ್ವಾಮಿ, ಕೋಲಶಾಂತೇಶ್ವರ ಸ್ವಾಮಿ, ಮದ್ದಾನೇಶ್ವರ ಸ್ವಾಮಿ, ಎಂದೂ 'ಅವರ ಐಕ್ಯಸ್ಥಳಗಳು ಅನುಕ್ರಮವಾಗಿ ನಾಯಕನಹಟ್ಟಿ, ಹರಪನಹಳ್ಳಿ (ಬಳ್ಳಾರಿ ಜಿಲ್ಲೆ), ಕೊಟ್ಟೂರು, ಅರಸೀಕೆರೆ, ಕೂಲಹಳ್ಳಿ' ಎಂದೂ ಬರೆಸಿರುತ್ತಾರೆ. ಹೀಗೆ ಪಂಚಗಣಾಧೀಶ್ವರರನ್ನೂ ಅವರ ಐಕ್ಯಸ್ಥಳಗಳನ್ನೂ ಹೆಸರಿಸುವಲ್ಲಿ ಏಕಾಭಿಪ್ರಾಯವಿಲ್ಲ. ಕೆಲವರು ಇವರ ಕಾಲ ಒಂದೇ ಎಂದು ಭಾವಿಸಿದರೆ, ಇನ್ನು ಕೆಲವರು ಇವರ ಕಾಲ ಬೇರೆ ಎಂದು ಅಭಿಪ್ರಾಯಿಸಿದ್ದಾರೆ. ಇಲ್ಲಿ ಎರಡನೆಯ ಅಭಿಪ್ರಾಯ ಸಮಂಜಸವೆನಿಸಿದರೂ ಅವರು ಸೂಚಿಸುವ ಕಾಲ ಸಮಂಜಸವಿಲ್ಲ. ಒಟ್ಟಿನಲ್ಲಿ ಇವರಲ್ಲಿ ಬಹುತೇಕರು ಬೇರೆ ಬೇರೆ ಕಾಲದವರಿದ್ದರೂ, ಇವರನ್ನು ಪಂಚಗಣಾಧೀಶ್ವರರೆಂದು ಒಂದು ಸಂಖ್ಯೆಯ ಗುಂಪಿನಲ್ಲಿ ಹೇಳುವ ವಾಡಿಕೆ ಅಥವಾ ಪರಿಕಲ್ಪನೆ ಹೇಗೆ ಬಂತೆಂಬುದೇ ಆಶ್ಚರ್ಯಕರವಾಗಿದೆ.

## ೨. ತಿಪ್ಪೆಯ ಮೇಲಿದ್ದುದರಿಂದ ತಿಪ್ಪೇರುದ್ರಸ್ವಾಮಿ ಆದರೆ?

ಇದೇ ರೀತಿಯ ಮತ್ತೊಂದು ಆಶ್ಚರ್ಯದ ಸಂಗತಿ ಎಂದರೆ, ಇವರ ಮೊದಲ ಹೆಸರು ರುದ್ರಸ್ವಾಮಿ ಎಂದೂ (ಹಳೆಯ ಆಕರಗಳು ಇದನ್ನು ಸಮರ್ಥಿಸುತ್ತವೆ), ರಾಯದುರ್ಗದಲ್ಲಿ ಕೆಂಪಯ್ಯನವರ ಮೆರವಣಿಗೆ ವಿಜೃಂಭಣೆಯಿಂದ ನಡೆಯುತ್ತಿದ್ದಾಗ, ಅವರಿಗೆ ಜ್ಞಾನೋದಯ

* ಪ್ರಾಂಶುಪಾಲರು (ವಿಶ್ರಾಂತ), ೨ನೇ ಅಡ್ಡರಸ್ತೆ (ಪಶ್ಚಿಮ), ಜೆ.ಸಿ.ಆರ್. ಬಡಾವಣೆ, ಚಿತ್ರದುರ್ಗ – ೫೭೭೦೦೦೧

ಉಂಟು ಮಾಡಲು ರುದ್ರಸ್ವಾಮಿಗಳು ಹುಚ್ಚನ ಹಾಗೆ ತಿಪ್ಪೆಯ ಮೇಲೆ ಕುಣಿದಾಡಿದರೆಂದೂ ಆ ಕಾರಣಕ್ಕೇ ಅವರ ಹೆಸರು ತಿಪ್ಪೇರುದ್ರಸ್ವಾಮಿ ಎಂದಾಯಿತೆಂದೂ ಕೆಲವರು ಬರೆದರೆ, ಇನ್ನೊಬ್ಬರು ಇವರ ಮೊದಲಿನ ಹೆಸರು ತ್ರಿಪುರ ರುದ್ರ ಎಂದಿದ್ದಿತೆಂದು (ಅದೇ ಮುಂದೆ ತಿಪ್ಪೆಯರುದ್ರ ಎಂದಾಗಿರಬೇಕೆಂದು ಪರೋಕ್ಷವಾಗಿ ಸೂಚಿಸುವಂತೆ) ಬರೆದಿದ್ದಾರೆ. ಇದಲ್ಲದೆ, ಲೋಕಾಪವಾದಕ್ಕೆ ಅಂಜಿ ತಿಪ್ಪೆಗೆ ಹಾಕಿದ ಮಗು ಮುಂದೆ ಬೆಳೆದು ದೊಡ್ಡವನಾಗಿ ತಿಪ್ಪರಾಜ ಎಂದು ಪ್ರಸಿದ್ಧನಾದ ಎನ್ನುವ ನಿಡಗಲ್ಲು ದೊರೆಗಳ ವಂಶಾವಳಿಯ ಆರಂಭದಲ್ಲಿ ಬರುವ ಒಂದು ಅಂಶವನ್ನು ಕೆಲವರು ತಿಪ್ಪೇರುದ್ರಸ್ವಾಮಿಗೆ ಬೇರೆ ಬೇರೆ ರೀತಿ ತಳಕು ಹಾಕಿ ಬರೆದಿರುತ್ತಾರೆ. ನಿಡಗಲ್ಲು ಎಂಬುದನ್ನು ನಿಜಗಲ್ಲು ಎಂದು ತಪ್ಪಾಗಿ ಹೆಸರಿಸಿದವರೂ ಇದ್ದಾರೆ. ಅದೆಲ್ಲದರ ವಿಶದವಾದ ವಿಮರ್ಶೆಗೆ ಇಲ್ಲಿ ಹೋಗಲಾಗುವುದಿಲ್ಲ. ಇವರಿಗೆ ತಿಪ್ಪೆಯ ಸಂಬಂಧದಿಂದ ಆ ಹೆಸರು ಬಂತೆಂದು ಹೇಳುವುದು ಕೇವಲ ಜಾನಪದ ಆಶಯರೂಪದ ಹೇಳಿಕೆಯೇ ಹೊರತು ಸತ್ಯಸಂಗತಿ ಇರಲಾರದು. ಏಕೆಂದರೆ ತಿಪ್ಪಯ್ಯ ಇತ್ಯಾದಿ ಹೆಸರಿನ ರೂಪಗಳು ನಮ್ಮ ನಾಡಿನ ಶಾಸನಗಳಲ್ಲಿ ಕ್ರಿ.ಶ.ಸು. ೯ನೆಯ ಶತಮಾನದಷ್ಟು ಹಿಂದಿನಿಂದಲೇ ಕಾಣಸಿಕ್ಕುತ್ತವೆ. ಅಲ್ಲದೆ ಈ ಹೆಸರನ್ನು – ತಿಪ್ಪಾಭಟ್ಟ, ತಿಪ್ಪಣಭಟ್ಟ, ತಿಪ್ಪಾಶಾಸ್ತ್ರಿ, ತಿಪ್ಪಣ ಪಂಡಿತ, ತಿಪ್ಪಣ್ಣ ಜೋಯಿಸ, ತಿಪ್ಪಣಾರ್ಯ ಎಂದು ಮುಂತಾಗಿ ಬ್ರಾಹ್ಮಣರಿಂದ ಮೊದಲುಗೊಂಡು, ತಿಪ್ಪಣ್ಣ ಒಡೆಯ, ತಿಪ್ಪಣ ಗವುಡ, ತಿಪ್ಪರಾಜ, ತಿಪ್ನಾಯಕ, ತಿಪ್ಪೋವ, ತಿಪ್ಪಯ್ಯ ಎಂದು ಮುಂತಾಗಿ – ಸಮಾಜದ ಎಲ್ಲ ಸ್ತರದ ಜಾತಿಗಳವರೆಗೆ ಎಲ್ಲರೂ ಇಡುತ್ತ ಬಂದಿರುವುದನ್ನು ಶಾಸನಗಳು ತೋರಿಸಿಕೊಡುತ್ತವೆ. ರುದ್ರಸ್ವಾಮಿಗಳೆಂದೇ ಪರಿಚಿತರಾಗಿದ್ದ ಇವರು ತಮ್ಮ ಕೊನೆಗಾಲದಲ್ಲಿ ನಾಯಕನಹಟ್ಟಿಯಲ್ಲಿ ತಿಪ್ಪೆ ಇದ್ದ ಸ್ಥಳದಲ್ಲಿ ಕಟ್ಟಿಸಲಾದ ಮಠದಲ್ಲಿ ಸಮಾಧಿಸ್ಥರಾದ್ದರಿಂದ ಅವರಿಗೆ ತಿಪ್ಪೆಯರುದ್ರಸ್ವಾಮಿಗಳೆಂಬ ಹೆಸರು ಪ್ರಚಲಿತವಾಯಿತೆಂದು ಹಳೆಯ ಆಕರವೊಂದು ಹೇಳಿರುವುದು ಸತ್ಯಕ್ಕೆ ಹತ್ತಿರವಾದ ಹೇಳಿಕೆ ಎನಿಸುತ್ತದೆ.

### ೩. ಹಟ್ಟಿಯ ದೊರೆ ಬೋಡಿ ಮಲ್ಲಪ್ಪನಾಯಕನಿಗೆ ಇವರು ಗುರುಗಳಾಗಿದ್ದರೆ ?

ನಾಯಕನಹಟ್ಟಿಯ (ಹಿಂದಿನ ಹೆಸರು ಹಟ್ಟಿ ಎಂದಷ್ಟೇ ಇತ್ತು) ದೊರೆಯಾಗಿದ್ದ ಬೋಡಿ ಮಲ್ಲಪ್ಪ ನಾಯಕ ಇವರಿಗೆ ಭಕ್ತನಾಗಿದ್ದನೆಂದು ಹೇಳುತ್ತ ಬರಲಾಗಿರುವ ಹೇಳಿಕೆಯ ಬಗೆಗೂ ಇಲ್ಲಿ ಗಮನಿಸುವುದು ಅಗತ್ಯ. ಇದು ಕೂಡಾ ಸಮರ್ಪಕವಲ್ಲ. ಏಕೆಂದರೆ ಕ್ರಿ.ಶ. ೧೬ನೆಯ ಶತಮಾನದ ಆರಂಭಕಾಲಕ್ಕೆ ಆಗಿಹೋದಂತೆ ತಿಳಿದುಬರುವ ತಿಪ್ಪೇರುದ್ರಸ್ವಾಮಿಗಳು, ಕ್ರಿ.ಶ. ೧೭ನೆಯ ಶತಮಾನದಲ್ಲಿದ್ದಂತೆ ತಿಳಿದುಬರುವ ಬೋಡಿ ಮಲ್ಲಪ್ಪನಾಯಕ ಪರಸ್ಪರ ಸಂಪರ್ಕಕ್ಕೆ ಬರುವುದು ಹೇಗೆ ಸಾಧ್ಯ ಎಂಬುದು ಇಲ್ಲಿ ವಿಚಾರಣೀಯ. ನಾಯಕನಹಟ್ಟಿಯನ್ನಾಳಿದ ದೊರೆಗಳಿಗೂ ಮಹಿಮಾವಂತ ಗುರುವೆನಿಸಿದ ತಿಪ್ಪೇರುದ್ರಸ್ವಾಮಿಗಳಿಗೂ ಏನಾದರೊಂದು ರೀತಿಯಲ್ಲಿ ಸಂಪರ್ಕವಿರಬೇಕೆಂಬ ಭಾವನೆ ಇಂಥದೊಂದು ಹೇಳಿಕೆಗೆ ಕಾರಣವಾಗಿರಬೇಕು. ಆದರೆ ನಾಯಕನಹಟ್ಟಿಯ ದೊರೆಗಳ ವಂಶದಲ್ಲಿ ಬರುವ, ಆ ಪಾಳೆಯಗಾರರ ವಂಶಾವಳಿಯಲ್ಲಿ ಶರಣನ ಹಾಗೆ ಇದ್ದವನೆಂಬ ಸೂಚನೆ ಇರುವ ಪಾಪನಾಯಕ (ಇವರು ಜಗಲೂರು ಪಾಪನಾಯಕರೆಂದೇ ಹೆಚ್ಚು ಪ್ರಸಿದ್ಧ) ತಿಪ್ಪೇರುದ್ರಸ್ವಾಮಿಗಳ ಸಂಪರ್ಕವಿದ್ದಂತೆ ಜಾನಪದ ಸಾಹಿತ್ಯದಲ್ಲಿ ಹೇಳಿರುವುದು ಸ್ವೀಕರಣೀಯವಾಗಿ ಕಾಣುತ್ತದೆ. ಏಕೆಂದರೆ ಪಾಪನಾಯಕರ ಕಾಲಕ್ಕೆ ಈ ಪ್ರದೇಶದಲ್ಲಿ ಅವರ ವಂಶದವರ ಆಳ್ವಿಕೆ ಇನ್ನೂ ಆರಂಭವಾಗಿರಲೇ ಇಲ್ಲ. ಅದು ೧೬ನೇ ಶತಮಾನದ ಆರಂಭಕಾಲ ಇದ್ದಿರಬೇಕು. ಅಲ್ಲದೆ ಈ ವಂಶದವರೊಂದಿಗೆ ತಿಪ್ಪೇರುದ್ರಸ್ವಾಮಿಗಳಿಗೆ ಸಂಪರ್ಕವಿದ್ದಿತೆಂಬುದಕ್ಕೆ ಆ ದೊರೆಗಳ ವಂಶಾವಳಿಯಲ್ಲಾಗಲಿ, ಅವರ ಶಾಸನಗಳಲ್ಲಾಗಲಿ ಏನೂ ಸೂಚನೆಯಿಲ್ಲ. ಪ್ರಾಯಶಃ ೧೮ನೆಯ ಶತಮಾನದವರೆಗೂ, ತಿಪ್ಪೇರುದ್ರಸ್ವಾಮಿಗಳ ಪ್ರಭಾವ ಆ ವಂಶದವರ ಮೇಲೆ ಆದುದಕ್ಕೆ ಸೂಚನೆಗಳಿಲ್ಲ. ಆದರೆ ೧೮ನೆಯ ಶತಮಾನದಲ್ಲಿ ಅವರಲ್ಲಿ ತಿಪ್ಪಯ್ಯ, ತಿಪ್ಪನಾಯ್ಕ, ದೊಡ್ಡತಿಪ್ಪಯ್ಯ, ಸಣ್ಣತಿಪ್ಪಯ್ಯ, ರುದ್ರಯ್ಯ, ತಿಪ್ಪಯ್ಯ ಎಂಬ ಹೆಸರಿನವರು ಕಾಣಸಿಗುತ್ತಾರಾದ್ದರಿಂದ ಅಷ್ಟು ಹೊತ್ತಿಗೆ ತಿಪ್ಪೇರುದ್ರಸ್ವಾಮಿಗಳ ಬಗ್ಗೆ ಆ ವಂಶದವರಲ್ಲಿ ಪೂಜ್ಯತೆಯ ಭಾವನೆ ಬೆಳೆದಿರುವುದು ಸ್ಪಷ್ಟ. ಓೀಗಾಗಿ ತಿಪ್ಪೇರುದ್ರಸ್ವಾಮಿಗಳಿಗೆ ಬೋಡಿ ಮಲ್ಲಪ್ಪನಾಯಕ ಭಕ್ತನಾಗಿದ್ದನೆನ್ನುವುದೂ ಅವರ ಪ್ರೇರಣೆಯಿಂದಲೇ ಈ ಭಾಗದಲ್ಲಿ ಕೆಲವು ಕೆರೆಗಳನ್ನು ಕಟ್ಟಿಸಿದನೆನ್ನುವುದೂ, ಸಾಧಾರವಾಗಿ ಸಮರ್ಥಿತವಾಗುವುದಿಲ್ಲ.

### ಟಿಪ್ಪುಸುಲ್ತಾನ್ ತಿಪ್ಪೇಸ್ವಾಮಿಯ ಅನುಗ್ರಹದಿಂದ ಹುಟ್ಟಿದನೇ?

ಇದೇ ಸಂದರ್ಭದಲ್ಲಿ ಮತ್ತೊಂದು ವಿಚಾರವನ್ನೂ ಇಲ್ಲಿ ಪರಿಶೀಲಿಸಬೇಕು. ಇತಿಹಾಸದಲ್ಲಿ ಖ್ಯಾತನಾಗಿರುವ ಹೈದರ್ ಅಲೀ ತಿಪ್ಪೇರುದ್ರಸ್ವಾಮಿಗಳ ಭಕ್ತನಾಗಿದ್ದನೆಂದೂ, ಇವರ ಅನುಗ್ರಹದಿಂದಲೇ ಅವನಿಗೆ ಗಂಡುಮಗುವಾಗಿ ಅವನಿಗೆ ಇವರ ಹೆಸರಲ್ಲಿ ತಿಪ್ಪು ಸಾಬ್ ಎಂದು ಹೆಸರಿಟ್ಟದ್ದೇ ಮುಂದೆ ಟಿಪ್ಪು ಸಾಬ್ ಎಂದಾಯಿತೆಂದೂ ಐತಿಹ್ಯವೊಂದಿರುವುದಾಗಿ ಕೆಲವರು ಹೇಳುತ್ತಿದ್ದಾರೆ. ಅದು ಈಚಿನ ಕಾಲದಲ್ಲಿ ಪ್ರಚಲಿತವಾಗಿರುವ ಒಂದು ಕಥೆಯೇ ವಿನಾ ಬಹು ಹಿಂದಿನಿಂದ ಪ್ರಚಲಿತವಾಗಿ ಬಂದಿರುವ

ಪರಿಣಾಮವೇ ಅಲ್ಲ. ಇನ್ನು ಒಬ್ಬ ಗ್ರಂಥಕರ್ತೃಗಳಂತೂ "ಹೈದರ್ ಮತ್ತು ಟಿಪ್ಪು ಸಹ ಸ್ವಾಮಿಯ ಭಕ್ತರಾಗಿದ್ದು ಅನೇಕ ಕೊಡುಗೆಗಳನ್ನು ನೀಡಿದ್ದಾರೆ" ಎಂದು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಆಧಾರಗಳಿಲ್ಲದ ಹೇಳಿಕೆಯನ್ನು ಕೊಟ್ಟಿದ್ದಾರೆ. ತಿಪ್ಪೇರುದ್ರಸ್ವಾಮಿಗಳ ಸಮಾಧಿ ಮಂದಿರದ ರಚನೆ ಇಂಡೋ ಇಸ್ಲಾಮಿಕ್ ವಾಸ್ತುಶಿಲ್ಪ ಶೈಲಿಯ ಗುಂಬಜನ್ನು ಹೋಲುವಂತಿರುವುದರಿಂದ ಮತ್ತು ಟಿಪ್ಪು ಎಂಬ ಹೆಸರು ತಿಪ್ಪೇಸ್ವಾಮಿ ಹೆಸರಿನ ಆರಂಭ ಭಾಗಕ್ಕೆ ಸಾದೃಶ್ಯ ಹೊಂದಿರುವುದರಿಂದ ಹಾಗೂ ಕೆಲವರು ಮುಸ್ಲಿಮರು ತಿಪ್ಪೇರುದ್ರಸ್ವಾಮಿಗಳಿಗೆ ಭಕ್ತರಾಗಿ ನಡೆದು ಕೊಳ್ಳುತ್ತಿರುವುದರಿಂದ, ಇಂಥದೊಂದು ಕಥೆ ಹುಟ್ಟಲು ಕಾರಣವಾಗಿರಬೇಕು. ಈಗಾಗಲೇ ಸ್ಪಷ್ಟವಾಗಿರುವಂತೆ ಹೈದರ್ ಅಲಿಯ ಎರಡನೆಯ ಪತ್ನಿ ಫಕ್ರುನ್ನೀಸಾ (ಫಾತಿಮಾ) ಬೇಗಂಳಿಗೆ ಐದು ವರ್ಷ ಕಾಲ ಏನೊಂದು ಮಗುವೂ ಆಗದಿದ್ದಾಗ, ಆರ್ಕಾಟ್‌ನಲ್ಲಿ ಬೇವಿನಮರವೊಂದರ ಅಡಿಯಲ್ಲೇ ತನ್ನ ಸಂತ ಜೀವನವನ್ನು ಕಳೆದ ಹಜರತ್ ಟೀಪು ಮಸ್ತಾನ್ ಎಂಬ ಸೂಫಿ ಸಂತನು ಕನಸಿಗೆ ಬಂದು ಕರೆದಂತಾದುದ ರಿಂದ ದಂಪತಿಗಳಿಬ್ಬರೂ ಆರ್ಕಾಟಿಗೆ ಧಾವಿಸಿ, ಸಂತನ ಸಮಾಧಿಗೆ ಭಕ್ತಿ ಸಲ್ಲಿಸಿ ಪ್ರಾರ್ಥನೆ ಮಾಡಿಕೊಂಡ ಮೇಲೆ ಅವರಿಗೆ ಗಂಡು ಮಗು ಹುಟ್ಟಿತೆನ್ನುವುದೂ ಆ ಗುರುವಿನ ಮೇಲಿನ ಗೌರವದಿಂದ ಆ ಮಗುವಿಗೆ ಟೀಪುಸುಲ್ತಾನ್ ಎಂದು ಹೆಸರಿಟ್ಟರೆನ್ನುವುದೂ ಈಗಾಗಲೇ ಸ್ಪಷ್ಟವಾಗಿರುವ ಸಂಗತಿ. ಇದರಿಂದ ತಿಪ್ಪೇರುದ್ರಸ್ವಾಮಿಗಳ ಅನುಗ್ರಹದಿಂದ ತಿಪ್ಪು ಸಾಬ್ ಹುಟ್ಟಿದನೆನ್ನುವುದೂ, ಅವನೇ ಮುಂದೆ ಟಿಪ್ಪು ಆದನೆನ್ನುವುದೂ, ಆ ತಂದೆ ಮಕ್ಕಳಿಬ್ಬರೂ ತಿಪ್ಪೇರುದ್ರಸ್ವಾಮಿಗೆ ಅನೇಕ ಕಾಣಿಕೆ ನೀಡಿದ್ದಾರೆ ಎನ್ನುವುದೂ ಈಚಿನ ಕಾಲದಲ್ಲಿ, ಒಮ್ಮಿಂದೊಮ್ಮೆಗೇ ಐತಿಹ್ಯದ ಹೆಸರಲ್ಲಿ ಯಾರೋ ಚತುರರಿಂದ ಪ್ರಚಾರವಾದ ಕಲ್ಪನೆ ಮಾತ್ರವೇ ಹೊರತು ವಾಸ್ತವ ಸಂಗತಿಯಲ್ಲ ಎನ್ನುವುದನ್ನು ಗಮನಿಸಬೇಕು.

'ಹೊರಮಠ' ಎಂದು ಕರೆಯಲಾಗುವ ತಿಪ್ಪೇರುದ್ರ ಸ್ವಾಮಿಗಳ ಸಮಾಧಿಮಠ– (ಈಗ ನಾವು ನೋಡುತ್ತಿರುವ ರೂಪದಲ್ಲಿ) ಕಟ್ಟಿಸಿದವರು ಚಿತ್ರದುರ್ಗದ ಪಾಳೆಯಗಾರರು ಎಂಬ ಸಂಗತಿ ಅವರ ವಂಶಾವಳಿಗಳಿಂದ ತಿಳಿದುಬರುತ್ತದೆ. ಚಿತ್ರದುರ್ಗದ ದೊರೆ ಬರಮಣ್ಣನಾಯಕನ ಕಾಲದಲ್ಲಿ (ಕ್ರಿ.ಶ. ೧೬೮೯–೧೭೨೧), ಅವನಲ್ಲಿ ಅಧಿಕಾರಿಗಳಾಗಿದ್ದ ಗುಂಟನೂರು ಮಲ್ಲಪ್ಪ ನರಸಪ್ಪಯ್ಯ ಎಂಬುವರು ಈ ಸಮಾಧಿಯ ಮಠವನ್ನು ಮಾಡಿಸಿದರು. ವಿಜಯನಗರ ಕಾಲದಿಂದ ಭಾರತೀಯ ಮತ್ತು ಇಸ್ಲಾಮಿಕ್ ಮಿಶ್ರಣದ ಇಂಡೋ ಇಸ್ಲಾಮಿಕ್ ವಾಸ್ತುಶಿಲ್ಪ ಶೈಲಿ ಆಗಲೇ ಹೆಚ್ಚು ಪ್ರಚುರಗೊಂಡು ಜನಪ್ರಿಯವಾಗಿದ್ದುದರಿಂದ, ಅದೇ ಶೈಲಿಯಲ್ಲೇ ಇದರ ರಚನೆಯನ್ನು ಮೂಡಿಸಲು ಆ ಅಧಿಕಾರಿಗಳು ಮನದಂದು ಹಾಗೆ ಮಾಡಿರಬೇಕೆಂದು ಕಾಣುತ್ತದೆ.

### ೫. ತಿಪ್ಪೇರುದ್ರಸ್ವಾಮಿಗಳು ವಾಲ್ಮೀಕಿ ಕುಲದವರೇ ?

ತಿಪ್ಪೇರುದ್ರಸ್ವಾಮಿಗಳ ಗದ್ದಿಗೆಯನ್ನು ಈಗ ಅರ್ಚಕರಾಗಿ ಪೂಜಿಸುತ್ತಿರುವವರು ವಾಲ್ಮೀಕಿ ಜನಾಂಗದವರಿರುವುದರಿಂದ, ಸ್ವಾಮಿಗಳು ಬೇಡ ಮೂಲದವರಿದ್ದಿರಬಹುದೇ ಎಂದು ಈಚೆಗೆ ಕೆಲವರು ಸಂದೇಹ ವ್ಯಕ್ತಪಡಿಸಿರುವುದುಂಟು. ಆದರೆ ಇದು ಕೂಡಾ ಸಮರ್ಪಕವಲ್ಲ. ಎಷ್ಟೋ ಶರಣರು ಸಂತರು ಕೆಳಸ್ತರದ ಮೂಲದವರಿದ್ದರೂ ಅವರೆಲ್ಲ ಜಾತಿತಾರತಮ್ಯವಿಲ್ಲದೆ ಸರ್ವರಿಂದ ಸ್ವೀಕೃತರಾಗಿದ್ದಾರೆ ; ಗೌರವಣೀಯರೆನಿಸಿದ್ದಾರೆ. ಅವರ ವಿಷಯದಲ್ಲಿ ಪೂಜ್ಯಭಾವನೆ ತೋರಲು ಅವರ ಜಾತಿಮೂಲ ಎಲ್ಲೂ ಅಡ್ಡಿಯೆನಿಸಿಲ್ಲ; ಅದು ಒಂದು ಕುಂದಕವೂ ಆಗಿಲ್ಲ. ಹಾಗಿರುವಲ್ಲಿ ಇವರು ಬೇಡ ಮೂಲದವರೆಂಬುದು ಸತ್ಯ ಸಂಗತಿಯಾಗಿದ್ದರೆ ಅವರನ್ನೂ ಹಾಗೆ ಗೌರವದಿಂದ ಸ್ವೀಕರಿಸುವಲ್ಲಿ ಯಾವ ಅಡ್ಡಿಯೂ ಇಲ್ಲ. ಆದರೆ ಸತ್ಯಸಂಗತಿ ಅದಲ್ಲ, ಅವರು ವೀರಶೈವರಿದ್ದ ರೆಂಬುದೇ ಸತ್ಯಸಂಗತಿ. ಈ ಅಂಶ ಮುಂದೆ ಹೇಳುವ ಆಕರಗಳಲ್ಲಿ ಸ್ಪಷ್ಟವಾಗಿದೆ. ಅಂಥ ಆಕರಗಳಿರುವುದರ ವಿಚಾರವೇ ಗಮನಕ್ಕೆ ಬರದ ಕೆಲವರು, ಈ ಸ್ವಾಮಿಗಳ ಬಗ್ಗೆ ಒಂದು ಲಿಖಿತ ದಾಖಲೆಯೂ ಇಲ್ಲ ಎಂದು ಹೇಳುವುದಷ್ಟೇ ಅಲ್ಲ, ಅವರನ್ನು ಅನಾಮತ್ತಾಗಿ ಬೇಡಮೂಲದವರೆಂದೂ ಬುಡಕಟ್ಟು ಸಂಸ್ಕೃತಿಯವರೆಂದೂ ಹೇಳಲು ಯತ್ನಿಸಿರುವುದು ಒಂದು ಅಸಂಗತ ಹೇಳಿಕೆಯಾಗಿದೆ.

ಹಾಗಿದ್ದರೆ ಸ್ವಾಮಿಗಳ ಗದ್ದಿಗೆಯ ಅರ್ಚಕರು ಬೇಡರಿರುವುದಕ್ಕೆ ಕಾರಣವೇನು, ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಬೇರೆಯದೇ ಒಂದು ಹಿನ್ನೆಲೆ ಕಾರಣವಾಗಿದ್ದಂತೆ ಕಾಣುತ್ತದೆ : ನಾಯಕನಹಟ್ಟಿ ಪಾಳೆಯಗಾರರ ವಂಶಾವಳಿಯ ಮತ್ತು ದೊಡ್ಡಮದಕೇರಿನಾಯಕನ ಕೈಫಿಯತ್ತಿನ ಪ್ರಕಾರ ಇಲ್ಲಿ ಕೆಲವು ಅಂಶಗಳನ್ನು ಗಮನಿಸಬೇಕು. ಆ ವಂಶದಲ್ಲಿ ಬರುವ ಬಂಗಾರನಾಯಕ ಎಂಬುವನು ಚಿತ್ರದುರ್ಗದ ದೊಡ್ಡಮದಕೇರಿ ನಾಯಕನ ಸಮಕಾಲೀನನನಾಗಿದ್ದವನು. ಈ ದೊಡ್ಡಮದಕೇರಿ ನಾಯಕ ಚಿತ್ರದುರ್ಗದ ಕೊನೆಯ ದೊರೆಯಾಗಿದ್ದ ಮದಕೇರಿನಾಯಕನ (=ಚಿಕ್ಕ ಮದಕೇರಿ ನಾಯಕನ) (ಕ್ರಿ.ಶ. ೧೭೫೪–೧೭೭೯) ಸೋದರ ಸಂಬಂಧದ ಅಣ್ಣನಾಗಿದ್ದವನು. ೧೭೭೯ರಲ್ಲಿ ಹೈದರ್ ಅಲೀಯಿಂದ ಚಿತ್ರದುರ್ಗದ ಪತನವಾದ ಮೇಲೆ ದೊರೆಯೊಂದಿಗೆ ಇವನೂ ಸಹ ಸೆರೆಯಾಳಾಗಿ ಕೆಲಕಾಲ ಶ್ರೀರಂಗಪಟ್ಟಣದಲ್ಲಿದ್ದು, ಮುಂದೆ ಬಂಧಮುಕ್ತನಾಗಿ ಕೇರಳಕ್ಕೆ ಕಳುಹಿಸಲ್ಪಟ್ಟಾಗ ಅಲ್ಲಿ

ಕೆಲ ಕಾಲ ಕಲ್ಲಿಕೋಟೆ ಮತ್ತಿತರ ಕಡೆಗಳಲ್ಲಿದ್ದಾಗ, ಟಿಪ್ಪು ಇವನನ್ನು ಮುಗಿಸುವ ಸಂಚು ಮಾಡಿರುವುದು ತಿಳಿದು, ತಿರುವನಂತಪುರಕ್ಕೆ ಹೋಗಿ ಕೇರಳದ ರಾಜನಲ್ಲಿ ಆಶ್ರಯ ಪಡೆದನು. ಆಮೇಲೆ ನಾಲ್ಕನೆಯ ಮೈಸೂರು ಯುದ್ಧದಲ್ಲಿ ಇಂಗ್ಲಿಷರಿಗೆ ನೆರವಾಗಿ ಶ್ರೀರಂಗಪಟ್ಟಣದ ಮುತ್ತಿಗೆಯಲ್ಲಿ ಭಾಗವಹಿಸಿ, ಚಿತ್ರದುರ್ಗ ಸಂಸ್ಥಾನವನ್ನು ಮರಳಿ ಪಡೆಯಲು ಯತ್ನಿಸಿದನಾದರೂ ಅದು ಕೈಗೂಡದೆ ಚಳ್ಳಕೆರೆ ಬಳಿಯ ಕಾಟಪ್ಪನಹಟ್ಟಿಯಲ್ಲಿ ಕ್ರಿ.ಶ. ೧೮೨೫ರಲ್ಲಿ ಮರಣಿಸಿದವನು. ಈ ದೊಡ್ಡಮದಕೇರಿನಾಯಕನು ಮೇಲೆ ಹೇಳಿದ ಬಂಗಾರನಾಯಕನಿಗೆ ಗೌಡಗೆರೆ (ನಾಯಕನಹಟ್ಟಿಯ ಸಮೀಪದ ಒಂದು ಗ್ರಾಮ) ಗ್ರಾಮವನ್ನೂ ತಿಂಗಳೊಂದಕ್ಕೆ ೨೦ ವರಹ ರಾಜಧನವನ್ನೂ ನೀಡಲು ಕಾರಣನಾಗಿದ್ದನು. ಈ ಬಂಗಾರನಾಯಕನಿಗೆ ಜರಿಮಲೆ ಪಾಳೆಯಗಾರ ಇಮ್ಮಡಿನಾಯಕನ ತಂಗಿಯಾಗಿದ್ದ ಪಾಪಮ್ಮನಾಗತಿಯಲ್ಲಿ ಹುಟ್ಟಿದ ಬಂಗಾರಮಲ್ಲಪ್ಪನಾಯಕ ದೊಡ್ಡಮದಕೇರಿ ನಾಯಕನ ಜೊತೆಯಲ್ಲಿದ್ದಾಗ ಕಲ್ಲಿಕೋಟೆ ಕಾಳಗದಲ್ಲಿ ಮಡಿದನು. ಅದು ಪ್ರಾಯಶಃ ೧೭೮೨ರಲ್ಲಿ ನಡೆದಿದ್ದಿರ ಬಹುದು. ಅವನಿಗೆ ಮಕ್ಕಳು ಯಾರೂ ಇರಲಿಲ್ಲ. ಈ ಬಂಗಾರಿನಾಯಕನ ಇನ್ನೊಬ್ಬ ಪತ್ನಿ ನಾಯಕನಹಟ್ಟಿಯ ಹೊರಮಠದ ಅಯ್ಯಸ್ವಾಮಿ ಎಂಬುವನ ತಂಗಿ ಅಕ್ಕಮ್ಮ ಎಂಬಾಕೆ. ಈ ಅಯ್ಯಾಸ್ವಾಮಿ ತಿಪ್ಪೇರುದ್ರಸ್ವಾಮಿಗಳ ಗದ್ದಿಗೆಯ ಪೂಜೆ ಮತ್ತಿತರ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದ ಒಬ್ಬ ಜಂಗಮನಿರುವಂತೆ ತೋರುತ್ತದೆ. ಈ ಅಕ್ಕಮ್ಮನಲ್ಲಿ ಮಲ್ಲಪ್ಪನಾಯಕ, ತಿಪ್ಪನಾಯಕ ಮತ್ತು ಕಸ್ತೂರಿನಾಯಕ ಎಂಬ ಮೂವರು ಗಂಡುಮಕ್ಕಳು (ಮತ್ತು ಏಳು ಜನ ಹೆಣ್ಣು ಮಕ್ಕಳು). ಗಂಡು ಸಂತತಿಯಲ್ಲಿ ತಿಪ್ಪನಾಯಕನೊಬ್ಬನಿಗೆ ಮಾತ್ರ ಮಕ್ಕಳಾದರು. ಉಳಿದ ಇಬ್ಬರಿಗೆ ಮಕ್ಕಳಿಲ್ಲ. ಈ ತಿಪ್ಪನಾಯಕನಿಗೆ ಮೂರು ಅಥವಾ ನಾಲ್ಕು ಮಕ್ಕಳಿದ್ದಂತೆ ತಿಳಿದುಬರುತ್ತದೆ. ಅವರೆಲ್ಲರೂ ಅವನಿಗೆ ಕಾಮಗೇತಲಹಳ್ಳಿಯ (ಜಗಳೂರು ತಾ.) ಪೂಜಾರಿ ನಾಯಕನ ಮಗಳು ಚಿನ್ನಮ್ಮ ನಾಗತಿಯಲ್ಲಿ ಹುಟ್ಟಿದವರು. ವಂಶಾವಳಿ ಈ ತಿಪ್ಪನಾಯಕನ ಸಂತತಿಯ ವಿವರ ತಿಳಿಸಿ ಅಲ್ಲಿಗೆ ನಿಂತುಬಿಟ್ಟಿದೆ ಅಥವಾ ಮುಕ್ತಾಯಗೊಂಡಿದೆ.

ಈ ಮೇಲಿನ ವಿವರದಿಂದ ನಾಯಕನಹಟ್ಟಿ ಪಾಳೆಯಗಾರ ವಂಶಸ್ಥರು ತಿಪ್ಪೇರುದ್ರಸ್ವಾಮಿಗಳ ಹೊರಮಠ ಅಥವಾ ಅವರ ಗದ್ದಿಗೆಯ ಉಸ್ತುವಾರಿಯಲ್ಲಿದ್ದ ಜಂಗಮ ಜಾತಿಯ ಹೆಣ್ಣನ್ನು ಪತ್ನಿಯನ್ನಾಗಿ ಮಾಡಿಕೊಂಡಿದ್ದಂತೆ ಕಾಣುತ್ತದೆ. ಯಾವುದೇ ಒಂದು ಸಂದರ್ಭದ ಹಿನ್ನೆಲೆಯಲ್ಲಿ ಈ ಸಂಬಂಧ ಏರ್ಪಟ್ಟಿರಬಹುದು. ಹೇಗೂ ಒಳಮಠ ಲಿಂಗಾಯತರ ಪೂಜಾರಿಕೆಯಲ್ಲಿ ಇದೆ ಎಂಬ ಸಮಾಧಾನ ದಿಂದ, ಜಾತಿಕೆಟ್ಟ ಜಂಗಮರಿದ್ದ ಹೊರಮಠಕ್ಕೆ ಇತರ ಜಂಗಮರು ಬಾರದೆ ಹೊರಗುಳಿದಂತೆ, ಹೀಗಾಗಿ ಪಾಳೆಯಗಾರರ ಸಂತತಿಯವರು ಅಥವಾ ಸಂಬಂಧಿಗಳು ಇಲ್ಲವೆ ಅವರ ಕಡೆಯ ನಾಯಕರು ಪೂಜಾರಿಗಳಾಗಿ ಅದರ ಉಸ್ತುವಾರಿಗೆ ನಿಂತಂತೆ ಕಾಣುತ್ತದೆ. ಈಗ ಹೊರಮಠದಲ್ಲಿ ನಾಯಕ ಜನಾಂಗದವರು ಪೂಜೆ ಮಾಡುತ್ತ ಬಂದಿರುವುದಕ್ಕೆ ಇಂಥ ಒಂದು ಹಿನ್ನೆಲೆ ಇದ್ದಿರಬೇಕೆನಿಸುತ್ತದೆ. ಪಾಳೆಯಗಾರರ ಬಗೆಗಿನ ಭಯದ ಕಾರಣವಾಗಿಯೂ ಈ ಹಿನ್ನೆಲೆ ರಾಜಾರೋಷವಾಗಿ ಮಾತಾಡುವಷ್ಟು ಧ್ವನಿಯಿಲ್ಲದೆ ಕ್ರಮೇಣ ಮಸಕಾಗಿ ಹೋಗಿರಬಹುದು. ಇದಾವುದನ್ನೂ ಪರಿಶೀಲಿಸದೆ, ಈಗ ಅರ್ಚಕರು ಬೇಡ ಜನಾಂಗದವರಿರು ವರೆಂದು ಅಷ್ಟನ್ನೇ ನೋಡಿ, ತಿಪ್ಪೇರುದ್ರಸ್ವಾಮಿಗಳೂ ಬೇಡ ಮೂಲದವರಿರಬಹುದೆ ಎಂದು ಶಂಕಿಸುವುದು ಅಸಂಗತ ವಾಗಿ ಕಾಣುತ್ತದೆ.

### ೬. ಶೂನ್ಯಪೀಠ ಪರಂಪರೆ ಮತ್ತು ತಿಪ್ಪೇರುದ್ರಸ್ವಾಮಿಗಳು

ವೀರಶೈವ ಧಾರ್ಮಿಕ ಪರಂಪರೆಯಲ್ಲಿ 'ಶೂನ್ಯಪೀಠ' ಎಂದು ಹೆಸರಾಗಿರುವ ಚಿತ್ರದುರ್ಗದ ಮುರುಘರಾಜೇಂದ್ರ ಮಠದ ಸ್ಥಾಪಕರಾದ ಮುರಿಗೆಯ ಶಾಂತವೀರ ಸ್ವಾಮಿಗಳ (ಅಂದರೆ ೧ನೆಯ ಮುರಿಗೆ ಸ್ವಾಮಿಗಳ) ಹಿಂದಿನ ಗುರುಪರಂಪರೆಯಲ್ಲಿ ತಿಪ್ಪೇರುದ್ರಸ್ವಾಮಿಗಳೂ ಒಬ್ಬರೆಂದು 'ನಿರಂಜನ ವಂಶ ರತ್ನಾಕರ'ವೆಂಬ ಗದ್ಯದ ಆಕರ ತಿಳಿಸುತ್ತದೆ. (ಶ್ರೀ ಫ.ಗು. ಹಳಕಟ್ಟಿ ಅವರು ತಮಗೆ ದೊರೆತ ಒಂದೇ ಒಂದು ಹಸ್ತಪ್ರತಿಯನ್ನು ಸಂಪಾದಿಸಿ ಇದನ್ನು ೧೯೩೨ರಲ್ಲಿ ಪ್ರಕಟಿಸಿರುತ್ತಾರೆ. ಅದರಲ್ಲಿ ಈ ಸ್ವಾಮಿಗಳ ಮೊದಲಿನ ಹೆಸರು ರುದ್ರಮುನಿ ಸ್ವಾಮಿಗಳೆಂದು ಇದ್ದುದಾಗಿ ಹೇಳಲಾಗಿದೆ.) ಈ ಆಕರ ಹೇಳುವ ಗುರುಪರಂಪರೆಯನ್ನು ಕ್ರಿ.ಶ. ೧೬ನೆಯ ಶತಮಾನದ ಉತ್ತರಾರ್ಧದಲ್ಲಿ ವೀರಶೈವ ಧರ್ಮಕ್ಕೆ ನವಚೈತನ್ಯವನ್ನು ತಂದ ಎಡೆಯೂರಿನ ತೋಂಟದ ಸಿದ್ಧಲಿಂಗೇಶ್ವರರು ತಮ್ಮ ಒಂದು ವಚನದಲ್ಲಿ ಹೇಳುತ್ತ ಇವರನ್ನು ರುದ್ರನೆಂಬ ಗಣೇಶ್ವರ ಎಂದು ಹೆಸರಿಸಿದ್ದಾರೆ. ಇವರ ಕಾಲಕ್ಕೆ ಹತ್ತಿರವಿದ್ದ ತುಮಕೂರು ಪ್ರದೇಶದ ಕವಿ ವಿರಕ್ತ ತೋಂಟದಾರ್ಯನೂ ಸಹ ತನ್ನ 'ಸಿದ್ಧೇಶ್ವರ ಪುರಾಣ'ದಲ್ಲಿ ಇದೇ ಗುರುಪರಂಪರೆಯನ್ನೇ ಪುನರುಚ್ಚರಿಸುತ್ತ ಇವರನ್ನು 'ರುದ್ರದೇವ' ಎಂದು ಹೆಸರಿಸಿದ್ದಾನೆ. ನಾಯಕನಹಟ್ಟಿ ಪ್ರದೇಶದ ಜನಪದ ಸಾಹಿತ್ಯದಲ್ಲಿ ಇವರನ್ನು ತಿಪ್ಪಣ್ಣ, ತಿಪ್ಪೇಸ್ವಾಮಿ, ತಿಪ್ಪೇಶ, ತಿಪ್ಪಯ್ಯ ಎಂದು ಹೆಸರಿಸಿರುವಂತೆ ಸ್ವಾಮಿ ರುದ್ರ, ರುದ್ರ, ರುದ್ರ ತಿಪ್ಪಯ್ಯ, ಹಟ್ಟೇಶ ಎಂದೂ ಹೆಸರಿಸಿರುವುದನ್ನು ಗಮನಿಸಬೇಕು.

## ೭. ವಿವಿಧ ಆಕರಗಳಿಂದ ವ್ಯಕ್ತಪಡಿಸುವ ಇವರ ಚರಿತ್ರೆ

'ನಿರಂಜನ ವಂಶ ರತ್ನಾಕರ' ದಿಂದ ರುದ್ರಮುನಿ ಸ್ವಾಮಿಗಳು ಶಿವಾನುಭವ ನಿರಂಜನ ಪಟ್ಟಾಧಿಕಾರಿಗಳಲ್ಲಿ ೧೧ನೆಯವರೆಂದೂ, ಅವರು ಚೋಳ ದೇಶದ ಅಂದರೆ ತಮಿಳುನಾಡಿನ ಕಡೆಯಿಂದ ಬಂದು ಇಲ್ಲಿ ನೆಲೆ ನಿಂತರೆಂದೂ ವ್ಯಕ್ತವಾಗುತ್ತದೆ. ಇಲ್ಲಿ ಹೇಳಬೇಕಾದ ಮತ್ತೊಂದು ವಿಶೇಷ ಸಂಗತಿ ಎಂದರೆ, ಹಿಂದೆ ಹೇಳಿದ ಶೂನ್ಯಪೀಠದ ಗುರು ಪರಂಪರೆಯಲ್ಲಿ ಮುರಿಗೆ ಶಾಂತವೀರ ಸ್ವಾಮಿಗಳ (ಅಥವಾ ೧ನೆಯ ಮುರಿಗೆ ಸ್ವಾಮಿಗಳ) ಪೂರ್ವದಲ್ಲಿ ಬರುವ ಗುರುಗಳಲ್ಲೊಬ್ಬರಾದ ಅಧ್ಯಾತ್ಮ ಗಣವರರು ಅಥವಾ ಅಧ್ಯಾತ್ಮ ಗಣನಾಥರು ಈ ರುದ್ರಮುನಿ ಸ್ವಾಮಿಗಳ ಗುರುಗಳು. ಗುರುಗಳಾದ ಅಧ್ಯಾತ್ಮ ಗಣನಾಥರು ಕನ್ನಡ ನಾಡಿನಿಂದ ತಮಿಳು ನಾಡಿಗೆ ಹೋಗಿ ಅಲ್ಲಿ ನೆಲೆಸಿದರೆ, ಅವರ ಶಿಷ್ಯರಾದ ರುದ್ರಮುನಿಸ್ವಾಮಿಗಳು ತಮಿಳುನಾಡಿನಿಂದ ಕನ್ನಡ ನಾಡಿಗೆ ಬಂದು ನೆಲೆಸಿದರು. ಗುರುಗಳಾಗಿದ್ದ ಅಧ್ಯಾತ್ಮ ಗಣವರರು ತಮ್ಮ ಶಿಷ್ಯಸಮೂಹದೊಂದಿಗೆ ತಮಿಳುನಾಡಿಗೆ ಹೋಗಿ ಅಲ್ಲಿ ವೀರಶೈವ ಧರ್ಮವನ್ನು ಹರಡಿದರು. ಚಿದಂಬರಂ ಮುಂತಾದ ಕೆಲವು ಸ್ಥಳಗಳಲ್ಲಿ ಸಂಚರಿಸಿ, ಶಿವಭಕ್ತರಿಗೆ ಉಪದೇಶ ನೀಡುತ್ತಾ ಕಡೆಯಲ್ಲಿ ತಿರುವಣ್ಣಾಮಲೈಗೆ ಬಂದರು. ಅಲ್ಲಿಯ ಬೆಟ್ಟದ ಒಂದು ಗವಿಯಲ್ಲಿ ಶಿಷ್ಯರೊಂದಿಗೆ ನೆಲೆಸಿ, ಲಿಂಗಪೂಜೆ ಜಂಗಮ ದಾಸೋಹಗಳನ್ನು ಮಾಡುತ್ತಾ ಕೆಲ ಕಾಲ ಇದ್ದು, ತಮ್ಮ ಶಿಷ್ಯಗಣದಲ್ಲಿ ಒಬ್ಬರಾಗಿದ್ದ ರುದ್ರಮುನಿಸ್ವಾಮಿಗಳಿಗೆ ಗುರುಪಟ್ಟವನ್ನು ಮಾಡಿ, ಅಲ್ಲಿಯೇ ಐಕ್ಯರಾದರು. ತಮಿಳುನಾಡಿನಲ್ಲಿ ವೀರಶೈವವನ್ನು ಹರಡಿದವರಲ್ಲಿ ಪ್ರಾಯಃ ಈ ಅಧ್ಯಾತ್ಮ ಗಣವರರು ಮೊದಲಿಗರಾಗಿದ್ದಾರೆ. ಮುಂದೆ ಆ ಕೆಲಸವನ್ನು ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರಂಥವರು ಮುಂದುವರಿಸಿದ್ದನ್ನು ಕಾಣುತ್ತೇವೆ.

ಗುರುಗಳ ತರುವಾಯ ರುದ್ರಮುನಿ ಸ್ವಾಮಿಗಳು ತಿರುವಣ್ಣಾಮಲೈಯಲ್ಲಿ ಇರುತ್ತ, ತಮ್ಮ ಗುರುಗಳ ಧಾರ್ಮಿಕ ಕಾರ್ಯವನ್ನು ಮುಂದುವರಿಸಿದರು. ಇವರು ಮೂಲತಃ ಯಾವ ಊರಿನವರು, ಆರಂಭ ಕಾಲದ ಇವರ ಬದುಕಿನ ವಿವರಗಳೇನು ಅದಾವುದೂ ತಿಳಿಯದು. ಹಾಗೆಂದೇ 'ತಿಪ್ಪೇರುದ್ರನ ಪಲ್ಲಕ್ಕಿ ತಾರಾವಳಿ' ಎಂಬ ಪದ್ಯ ಕೃತಿಯ ಆಕರವೊಂದು ಈ ಸ್ವಾಮಿಗಳನ್ನು ಕುರಿತು 'ಹುಟ್ಟಿದ ನೆಲೆಯಿಲ್ಲ, ಕುರುಹನಾರರಿಯರು' ಎಂದೂ ಆದರೆ ಅವರು 'ಅಷ್ಟಾಂಗ ಯೋಗಿ' 'ಆರೂಢ' ಎಂದೂ ಹೇಳುತ್ತದೆ. ಅವರು ತಮ್ಮ ಶಿಷ್ಯಗಣದಲ್ಲಿ ಒಬ್ಬರಾದ ಗುರು ನಮಃಶಿವಾಯರು ಅಥವಾ ಗುರುಬಸವದೇವರು ಎಂಬುವರನ್ನು ಚಿದಂಬರಂನ ಮಠದಲ್ಲಿರಲು ಕಳಿಸಿಕೊಟ್ಟರು. ಶಿವಜ್ಞಾನಿ ಎಂಬ ಇನ್ನೊಬ್ಬರನ್ನು ಅಲ್ಲೇ ಇನ್ನೊಂದು ಊರಿನ (ಬಹುಶಃ ತಂಜಾವೂರು ಇಲ್ಲವೆ ಜಿಂಜಿ) ಮಠದಲ್ಲಿರಬೇಕೆಂದು ಕಳಿಸಿಕೊಟ್ಟರು. ಶಂಕರೇಶ ಎಂಬ ಮತ್ತೊಬ್ಬರನ್ನು ತಮ್ಮ ಗುರುಗಳೂ ತಾವೂ ಇದ್ದ ತಿರುವಣ್ಣಾಮಲೆಯ ಮಠದಲ್ಲಿರಲು ಅಪ್ಪಣೆ ಮಾಡಿದರು. ಆಮೇಲೆ ಅವರು ಬೊಮ್ಮಯ್ಯನಪಾಳ್ಯ ಪುಲಚೇರಿ ಮುಂತಾದ ಸ್ಥಳಗಳಲ್ಲಿ ಕೆಲವರು ಶಿಷ್ಯರಿಗೆ ಷಟ್‌ಸ್ಥಲ ಜ್ಞಾನೋಪದೇಶವನ್ನು ನೀಡಿ, ದೇಶ ಸಂಚಾರವನ್ನು ಕೈಕೊಂಡು ವೀರಶೈವ ಧರ್ಮಪ್ರಚಾರ ಮಾಡುತ್ತಾ (ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಯ) ತೀರ್ಥಮಲ್ಯೆಗೆ ಬಂದರು. ಅಲ್ಲಿದ್ದ ಶೈವರಿಗೆ ವೀರಶೈವ ದೀಕ್ಷೆ ನೀಡಿ, ಆಮೇಲೆ ಕನ್ನಡ ನಾಡನ್ನು ಪ್ರವೇಶಿಸಿ ಯಳಂದೂರು, ಹದಿನಾಡು ಮುಂತಾದ ಪ್ರದೇಶಗಳಲ್ಲಿ ಸಂಚರಿಸುತ್ತಾ ನಿಡುಗಲ್ಲಿಗೆ ಬಂದರು. ಆಗ ಅಲ್ಲಿದ್ದ ವಾಲ್ಮೀಕಿ ಜನಾಂಗದ ದೊರೆ ಅವರ ಭಕ್ತನಾದನು. ಅವರು ಅಲ್ಲಿಯೇ ಕೆಲಕಾಲ ಲಿಂಗಪೂಜೆ ಜಂಗಮ ದಾಸೋಹಗಳನ್ನು ನಡೆಸುತ್ತಾ ಇದ್ದರು. ಆಗ ಅಲ್ಲಿ 'ಶರಣಲೀಲಾಮೃತ' ಎಂಬ ಯಕ್ಷಗಾನ ಕಾವ್ಯವನ್ನು 'ನಿಡುಗಲ್ಲು ದುರ್ಗದ ಶಿಖರದ ಬಸವನ ತಾರಾವಳಿ' ಎಂಬ ಕೃತಿಯನ್ನೂ ರಚಿಸಿ ಖ್ಯಾತನಾಗಿದ್ದ, ಪಂಚವಣ್ಣಿಗೆ ಚೆನ್ನಮಲ್ಲಿಕಾರ್ಜುನರೆಂಬವರ ಶಿಷ್ಯನೂ ಆಗಿದ್ದ ಚೆನ್ನಪ್ಪ ಎಂಬ ಕವಿ ಇವರ ಶಿಷ್ಯನಾಗಿ ಇವರಿಂದ ಜ್ಞಾನೋಪದೇಶವನ್ನು ಪಡೆದನು. ನಿಡಗಲ್ಲಿನಲ್ಲಿ ಆಗ ಇದ್ದ ದೊರೆ ಯಾರು ಎಂಬುದು ನಿರ್ದಿಷ್ಟವಾಗಿ ತಿಳಿಯದು.

ಕರ್ನಾಟಕ ಕವಿಚರಿತೆಕಾರರು ಈ ಚೆನ್ನಪ್ಪ ಕವಿ ಪೂರ್ವ ಕವಿಗಳಲ್ಲಿ ಮಲ್ಲಣ್ಣಾರ್ಯನನ್ನು ಸ್ಮರಿಸಿರುವುದರಿಂದ ಇವನ ಕಾಲ (೧೫೩೦) ಆಗಬಹುದು ಎಂದು ಬರೆದಿದ್ದಾರೆ. ಆದರೆ ಕ್ರಿ.ಶ. ೧೬ನೇ ಶತಮಾನದ ಉತ್ತರಾರ್ಧದಲ್ಲಿ ಕಾರ್ಯಶೀಲರಾಗಿದ್ದು ಸುಮಾರು ೧೫೭೦ ರಷ್ಟು ಹೊತ್ತಿಗೆ ಲಿಂಗೈಕ್ಯರಾದ ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರು ತಿಪ್ಪೇರುದ್ರಸ್ವಾಮಿಗಳನ್ನು ಸ್ಮರಿಸಿರುವುದಲ್ಲದೆ ಅವರ ತರುವಾಯ ಏಳು ಜನರಾದ ಮೇಲೆ ಎಂಟನೆಯವರಾಗಿ ತಾವು ಬಂದವರೆಂದು ಸೂಚಿಸಿರುವುದರಿಂದ, ತಿಪ್ಪೇರುದ್ರಸ್ವಾಮಿಗಳು ೧೫ನೆಯ ಶತಮಾನದ ಅಂತ್ಯದಲ್ಲಿ ಹಾಗೂ ೧೬ನೆಯ ಶತಮಾನದ ಆರಂಭದಲ್ಲಿ ಇದ್ದರೆಂದು ಸ್ಪಷ್ಟಪಡುವುದರಿಂದ, ಅವರ ಶಿಷ್ಯನಾದ ಚೆನ್ನಪ್ಪ ಕವಿ ಹಾಗೂ ಅವನು ಸ್ಮರಿಸಿರುವ ಗುಬ್ಬಿಯ ಮಲ್ಲಣಾರ್ಯ ಇವರ ಕಾಲ ಇನ್ನೂ ಹಿಂದಕ್ಕೆ ಅಂದರೆ ಬಹುತೇಕ ೧೫೦೦ ರ ಕಾಲಕ್ಕೆ ಹೋಗಬೇಕಾಗುತ್ತದೆ. ಈ ಬಗ್ಗೆ ಸೂಕ್ತ ಪುನರ್ವಿಮರ್ಶೆ ನಡೆಯುವುದು ಅಗತ್ಯವಾಗಿದೆ.

ತರುವಾಯದಲ್ಲಿ ರುದ್ರಮುನಿ ಸ್ವಾಮಿಗಳು ನಾಯಕನಹಟ್ಟಿಗೆ ಆಗಮಿಸಿದರು. ರಾಯದುರ್ಗದ ಸಂತೆಗೆ ಬಂದಿದ್ದ ನಾಯಕನಹಟ್ಟಿಯ ವ್ಯಾಪಾರಿ ಫಣಿಯಪ್ಪ ಎಂಬುವ ನೊಂದಿಗೆ ರುದ್ರಮುನಿ ಸ್ವಾಮಿಗಳು ನಾಯಕನ ಹಟ್ಟಿಯತ್ತ ಬಂದರೆಂದೂ, ಅದಕ್ಕೆ ಮುಂಚೆ ಅವರು ಲೌಕಿಕದ ಮೆರವಣಿಗೆಯ ಅಮಲಿನಲ್ಲಿದ್ದ ಕೆಂಪಯ್ಯ ಎಂಬ ಶಿವಯೋಗಿಯ ಕಣ್ಣು ತೆರೆಸಲು ರಾಯದುರ್ಗದಲ್ಲಿ ತಿಪ್ಪೆಯ ಮೇಲೆ ಕುಣಿದರೆಂದೂ ವಾಡಿಕೆಯಲ್ಲಿ ಹೇಳಲಾಗುತ್ತಿದೆ. ಫಣಿಯಪ್ಪನು ಬುತ್ತಿ ಬಿಚ್ಚಿ ಊಟ ಮಾಡಲು ಕುಳಿತಾಗ ಬಡಜಂಗಮನಂತೆ ಬಂದಿದ್ದ ಈ ಅಪರಿಚಿತ ಶಿವಯೋಗಿ ರುದ್ರಮುನಿ ಸ್ವಾಮಿಗಳಿಗೂ ಬುತ್ತಿಯಲ್ಲಿ ಪಾಲು ಕೊಟ್ಟನೆಂದೂ, ಆಗ ಇವರು ಆ ಬುತ್ತಿಯನ್ನು ಅಕ್ಷಯ ಮಾಡಿದರೆಂದೂ ಸಹ ವಾಡಿಕೆಯಲ್ಲಿ ಹೇಳಲಾಗುತ್ತಿದೆ. ಅಂತೂ ಹೇಗೋ ರುದ್ರಮುನಿ ಸ್ವಾಮಿಗಳು ನಾಯಕನಹಟ್ಟಿಗೆ ಬಂದರು. 'ನಿರಂಜನ ವಂಶ ರತ್ನಾಕರ' ಹೇಳುವಂತೆ ಇಲ್ಲಿಯ ವಾಲ್ಮೀಕಿ ಮತಸ್ಥರ ಭಕ್ತರ ಭಕ್ತಿಗೆ ಒಲಿದ ಅವರು ಇಲ್ಲಿಯೇ ನೆಲಸಿದರು. ಈ ಅವಧಿಯಲ್ಲೇ ಅವರಿಗೆ, ಜಾನಪದ ಸಾಹಿತ್ಯ ತಿಳಿಸುವಂತೆ, ಈಗಾಗಲೇ ಮೇಲೆ ವಿವರಿಸಿರುವಂತೆ ನಾಯಕನಹಟ್ಟಿಯ ದೊರೆಗಳ ವಂಶದ ಪೂರ್ವಿಕರಲ್ಲಿ ಒಬ್ಬರಾಗಿ 'ಶರಣ' ಎಂದು ಮಾನ್ಯರಾಗಿದ್ದ ಪಾಪನಾಯಕರೊಂದಿಗೆ (ಇವರು ಮುಂದೆ ಜಗಲೂರು ಪಾಪನಾಯಕ ಎಂದು ಪ್ರಸಿದ್ಧರಾಗಿದ್ದಾರೆ) ಸಂಪರ್ಕ ಉಂಟಾಗಿರಬೇಕು. ವಾಲ್ಮೀಕಿ ಜನಾಂಗದವರು ಹೆಚ್ಚಾಗಿ ಅವರ ಭಕ್ತರಾಗಲು, ನಂತರದಲ್ಲಿ ಅವರ ಸಮಾಧಿಯನ್ನು ಪೂಜಿಸುವ ಅರ್ಚಕ ಸ್ಥಾನ ಪಡೆಯಲು ಈ ಹಿನ್ನೆಲೆ ಸಹ ಪೂರಕವಾಗಿರುವ ಸಾಧ್ಯತೆ ಇದೆ. ಹಾಗೆಯೇ 'ಹಟ್ಟಿ ಮಾಯೆಯ ಗೆದ್ದ, ಕೃಪದಿಂದಲಿ ಬದ್ಧ' ಎಂದು ಹಿಂದೆ ಹೇಳಿದ ತಾರಾವಳಿ ಕೃತಿ ಹೇಳಿರುವುದು, ಅವರಿಂದಾಗಿ ಗ್ರಾಮದೇವತೆ ಮಾರಮ್ಮ ನಾಯಕನಹಟ್ಟಿಯನ್ನು ತೊರೆದು ಗಡ್ಡಿನಹಳ್ಳಿಯನ್ನು ಸೇರಿದುದಾಗಿ, ಆ ದೇವತೆಗೆ ಜಾಗವೇ ಇಲ್ಲದಂತೆ ಗುಡಿಯ ತುಂಬ ತಿಪ್ಪೇರುದ್ರಸ್ವಾಮಿಗಳು ಬೆತ್ತ ಮತ್ತು ಜೋಳಿಗೆಗಳು ಅಸಂಖ್ಯಾತವಾಗಿ ತುಂಬಿಕೊಳ್ಳುವಂತೆ ಪವಾಡ ಮಾಡಿದರೆಂದು ಹೇಳುವ ಕಥೆಯೊಂದಿಗೆ ಜನ ಹೇಳುವ ಘಟನೆಯನ್ನೂ ಅವರು ಪರಮವಿರಕ್ತರೆಂಬುದನ್ನು ಸೂಚಿಸಿರುವಂತಿದೆ. ಅದರ ಜೊತೆಗೆ ಅವರು ಹುಲಿ ಚರ್ಮವನ್ನು ಉಟ್ಟಿರುತ್ತಿದ್ದರು ; ತಲೆಗೂದಲನ್ನು ಹಾಗೇ ಬಿಟ್ಟುಕೊಂಡಿರುತ್ತಿದ್ದರು ; ಕಿವಿಯಲ್ಲಿ (ಬಹುಶಃ ರುದ್ರಾಕ್ಷಿಯ) ಕುಂಡಲಗಳನ್ನು ಹೊಂದಿದ್ದರು ; ಭಸ್ಮವನ್ನು ಮೈಗೆಲ್ಲ ಲೇಪಿಸಿಕೊಂಡಿರುತ್ತಿದ್ದರು ; ಹೆಗಲಲ್ಲಿ ತ್ರಿಶೂಲವನ್ನು ಇಟ್ಟುಕೊಂಡಿರುತ್ತಿದ್ದರು – ಹೀಗೆ ಆ ಕೃತಿ ವರ್ಣಿಸುತ್ತದೆ. ಅವರು ಜೋಳಿಗೆ ಹಿಡಿಯುತ್ತಿದ್ದರೆಂದೂ ಭಿಕ್ಷವನ್ನು ಬೇಡುತ್ತಿದ್ದರೆಂದೂ, ಬೆತ್ತವನ್ನು ಹಿಡಿದಿರುತ್ತಿದ್ದರೆಂದೂ ಜನಪದ ಸಾಹಿತ್ಯ ತಿಳಿಸುತ್ತದೆ.

ಇದೇ ಕಾಲದಲ್ಲಿ ಅವರೊಂದಿಗೆ ಫಣಿಯಪ್ಪ ಮತ್ತು ಮಾಳಮ್ಮ ಎಂಬ ಭಕ್ತ ದಂಪತಿಗಳು ಹಾರ್ದಿಕ ಸಂಬಂಧ ಹೊಂದಿದ್ದರು. ಅಲ್ಲಿ ಅವರು ಒಂದು ಬೇಡರ ಮನೆಯಲ್ಲಿ ಇರುತ್ತಿದ್ದರು. ಆಗೊಮ್ಮೆ ಅವರು ಏಕಕಾಲದಲ್ಲೇ ಫಣಿಯಪ್ಪನ ಮನೆಯಲ್ಲೂ, ಮಾದಿಗ ಜನಾಂಗದ ಇನ್ನೊಬ್ಬ ಭಕ್ತನ ಮನೆಯಲ್ಲಿ ಶಿವಪೂಜೆ ಮಾಡುವ ಪವಾಡವನ್ನು ತೋರಿದರು. ಅವರು ಮಾದಿಗರ ಮನೆಯಲ್ಲಿ ಶಿವಪೂಜೆ ಕೈಕೊಂಡರೆಂಬ ಕಾರಣಕ್ಕೆ ಅಸಮಾಧಾನಪಟ್ಟುಕೊಂಡ ಫಣಿಯಪ್ಪನಿಗೆ ಕಣ್ಣು ತೆರೆಯುವಂತೆ ಮಾಡಿದರು. ಸತ್ತ ಎಮ್ಮೆಯ ಹಾಲು ಕರೆಯುವುದು, ವಾಡೇವಿನ ಕಾಳು ಅಕ್ಷಯವಾಗುವುದು, ಕೆರೆ ಕಟ್ಟಿದ ಕೂಲಿಕಾರರಿಗೆ ಒಬ್ಬೊಬ್ಬರೂ ಒಂದೊಂದು ಮಣ್ಣಿನ ಸಣ್ಣ ರಾಶಿ ಮಾಡಹೇಳಿ ಒಂದೊಂದು ರಾಶಿಯ ಸುತ್ತಲೂ ತಮ್ಮ ಬೆತ್ತ ಆಡಿಸಿ 'ಮಾಡಿದವರಿಗೆ ನೀಡು ಭಿಕ್ಷಾ' ಎನ್ನುತ್ತಿದ್ದಂತೆ ಆ ಮಣ್ಣಿನ ರಾಶಿಗಳೊಳಗೆ ಅವರ ಶ್ರಮಕ್ಕೆ ತಕ್ಕ ಕೂಲಿ ಹಣ ದೊರೆಯುವುದು ಇವೇ ಮೊದಲಾದ ಪವಾಡಗಳನ್ನು ಮಾಡಿದರು ಎಂಬುದನ್ನು ಜನರ ವಾಡಿಕೆಯ ಮಾತು ಜನಪದ ಸಾಹಿತ್ಯ ತಿಳಿಸುತ್ತವೆ. ಇಷ್ಟೇ ಅಲ್ಲದೆ ಅವರು ದನಗಾಹಿ ಕುರಿಗಾಹಿಗಳನ್ನೂ ಅಲ್ಲಿ ಇಲ್ಲಿ ಆಡುವ ಮಕ್ಕಳನ್ನೂ ಕರೆದುಕೊಂಡು ಕೆರೆ ಕಟ್ಟಿದರೆಂದೂ, (ನಾಯಕನಹಟ್ಟಿಗೆ ಸಮೀಪವಿರುವ) ಹೊಸಗುಡ್ಡದಲ್ಲಿ ನಂದಿಯ ಒಂದು ಮೂರ್ತಿಯನ್ನು ಮಾಡಿಸಿದರೆಂದೂ ಜನಪದ ಸಾಹಿತ್ಯ ಸೂಚಿಸುತ್ತದೆ. ಪವಾಡದ ವಿಷಯ ಅದೇನೆ ಇದ್ದರೂ ಅವರು ಮಾಡಿದ ಪವಾಡವೆಂದರೆ ಜನೋಪಯೋಗಿಯಾದ ಕೆರೆಗಳ ನಿರ್ಮಾಣ ಎಂದು ಹೇಳಬಹುದು.

ಕಡೆಯಲ್ಲಿ ಅವರು ಲಿಂಗೈಕ್ಯರಾದಾಗ ಅವರಲ್ಲಿ ಲಿಂಗವೂ ಇರಲಿಲ್ಲ, ರುದ್ರಾಕ್ಷಿಯೂ ಇರಲಿಲ್ಲ ಎಂದು ಅಲ್ಲಿ ಹೇಳಿರುವುದಂತೂ ಸಾಹಿತ್ಯಿಕವಾಗಿ ಅವರ ವ್ಯಕ್ತಿತ್ವದ ಉನ್ನತಿಯನ್ನು ಸಾಂಕೇತಿಕವಾಗಿ ಸೂಚಿಸಿದಂತಿದೆ. ಅವರು ಜಂಗಮರಿದ್ದರೂ, ಜಾತಿಮೇಲ್ಮೆಯ ಗುಂಗಿನಲ್ಲಿದ್ದ ಜಂಗಮರಿಂದ ದೂರವಿದ್ದು, ಜಾತಿಭೇದವಿಲ್ಲದೆ, ಕೀಳೆನಿಸಿದ್ದ ಜನಾಂಗದವರೊಂದಿಗೂ ಬೆರೆತಿದ್ದುದನ್ನೂ ಒಂದು ರೀತಿಯಲ್ಲಿ ಅವಧೂತರಂತೆ ಇದ್ದುದನ್ನೂ ಸಹ ಸೂಚಿಸುವಂತಿದೆ, ಜನಪದ ಸಾಹಿತ್ಯ.

'ನಿರಂಜನ ವಂಶ ರತ್ನಾಕರ'ದ ಪ್ರಕಾರ, ಅವರು ಬಸವಪ್ರಭು ಸ್ವಾಮಿಗಳೆಂಬ ಶಿಷ್ಯರಿಗೆ ಪಟ್ಟವನ್ನು ಮಾಡಿ, ನಾಯಕನಹಟ್ಟಿಯಲ್ಲಿಯೇ ಬಯಲಾದರು. ಹಿಂದೆಯೇ

ಹೇಳಿದಂತೆ ಆ ಊರಲ್ಲಿ ತಿಪ್ಪೆ ಇದ್ದ ಸ್ಥಳದಲ್ಲಿ ಮಠ ಕಟ್ಟಿಸಿ ಅದರೊಳಗೆ ಅವರು ಸಮಾಧಿಸ್ಥರಾದ್ದರಿಂದ ಅವರಿಗೆ ಮುಂದೆ ತಿಪ್ಪೇರುದ್ರಸ್ವಾಮಿಗಳೆಂಬ ಹೆಸರೇ ರೂಢಿಯಾಯಿತು ಎಂದು ಆ ಆಕರ ಹೇಳುತ್ತದೆ.

ಇವರು ನಾಯಕನಹಟ್ಟಿಯಲ್ಲಿ ಇದ್ದಾಗ್ಗೆ, ಇದೇ ಪರಿಸರದಲ್ಲಿರುವ ತುರುವನೂರಿಗೆ ಹೋಗಿದ್ದರೆಂದೂ, ಕೆರೆ ಕಟ್ಟುವಾಗ ಕೆರೆಗೆ ನೀರನ್ನು ಭರ್ತಿ ಮಾಡಲು ಇವರು ತುರುವನೂರಿನ ಹಳ್ಳದ ದಿಕ್ಕನ್ನೇ ಬದಲಿಸಿ, ಕೆರೆಗೆ ನೀರು ಪೂರೈಕೆಯಾಗುವಂತೆ ಮಾಡಿದರೆಂದೂ ಸಹ ಜನಪದ ಸಾಹಿತ್ಯದಿಂದ ತಿಳಿಯುತ್ತದೆ. ಇದಲ್ಲದೆ ಚಿತ್ರದುರ್ಗದ ಸಮೀಪ ಈಶಾನ್ಯ ದಿಕ್ಕಿನಲ್ಲಿರುವ ಗೋನೂರು ಗ್ರಾಮದಲ್ಲಿ ಕೂಡಾ ಇವರು ಕೆಲಕಾಲ ಇದ್ದರೆಂದೂ, ಅಲ್ಲಿ ಕೂಡಾ ಪ್ರಾಚೀನ ಕಾಲದ ಕೆಲವು ಕಲ್ಲಿನ ಕಟ್ಟಡಗಳಿದ್ದು ಅವು ಅವರ ಮಠ ಮತ್ತು ಗದ್ದಿಗೆ ಎಂಬುದಾಗಿ ಸ್ಥಳೀಯರು ಹೇಳುತ್ತಾರೆ. ಗೋನೂರು ಗ್ರಾಮದೊಂದಿಗಿನ ಅವರ ಸಂಬಂಧದ ಬಗ್ ಕೂಡಾ ಸಂಶೋಧನೆ ಮುಂದುವರಿಯಬೇಕಾಗಿದೆ. ಹೀಗೆ ಅವರ ಸಂಪರ್ಕವಿದ್ದಂತೆ ಇನ್ನು ಕೆಲವು ಸ್ಥಳಗಳ ಬಗ್ಗೆಯೂ ಹೇಳಲಾಗುತ್ತಿದೆ. ಉದಾಹರಣೆಗೆ ಬಳ್ಳಾರಿ ಜಿಲ್ಲೆ ಕೂಡ್ಲಿ ತಾಲ್ಲೂಕಿನ ಕುಪ್ಪಿನಕೆರೆ ಇತ್ಯಾದಿ. ಇವುಗಳ ಬಗ್ಗೆ ಸ ಸಂಶೋಧನೆ ಮುಂದುವರಿಯಬೇಕಾದ ಅಗತ್ಯವಿದೆ ಹೀಗೆಯೇ ಹಿರಿಯೂರು ತಾಲ್ಲೂಕಿನ ಹರತಿ ಗ್ರಾಮ (ಈಗಿನ ಹರ್ತಿಕೋಟೆ) ಕುರುಬ ಜನಾಂಗಕ್ಕೆ ಸೇರಿದ ಗೌಡ ಮನೆತನದವರು ಈ ಸ್ವಾಮಿಗೆ ವಿಶೇಷ ಭಕ್ತಿ ಸೇವೆ ನಡೆಸು ಬಂದಿರುವ ಸಂಪ್ರದಾಯವಿದೆ. ಹಾಗೆಯೇ ನಾಯಕನಹಟ್ಟಿಯ ಗೌಡರ ಮನೆತನದವರು ಕೂಡಾ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದುದನ್ನು ಜನಪದ ಸಾಹಿತ್ಯ ಸೂಚಿಸುತ್ತದೆ ಈ ಎರಡೂ ವಿಷಯಗಳ ಬಗೆಗೆ ಚಾರಿತ್ರಿಕ ಹಿನ್ನೆ ಏನಾದರೂ ಇದೆಯೆ ಎಂದೂ ಸ್ಪಷ್ಟವಾಗಬೇಕಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಸಿದ್ಧೇಶ್ವರ ಪುರಾಣ** ; (ಸಂ.), ಅಯ್ಯನಗೌಡ ಪಾಟೀಲ, ಲಿಂಗಪ್ಪ ಹೊಂಬಳ, ಗದಗ, ೧೯೫೧.
೨. **ಶ್ರೀ ಕೊಟ್ಟೂರು ಬಸವ ಪುರಾಣ**, ಸಿದ್ಧಲಿಂಗಕವಿ (ಕ್ರಿ.ಶ. ೧೬೭೮).
೩. **ಶ್ರೀ ತಿಪ್ಪೇರುದ್ರಸ್ವಾಮಿ ಪುರಾಣ**, ಸಿದ್ಧವೀರ ಕವಿ ಸೊಕ್ಕೆ.
೪. **ನಿರಂಜನ ವಂಶ ರತ್ನಾಕರ**, (ಸಂ:), ಫ.ಗು. ಹಳಕಟ್ಟಿ, ವಿಜಾಪುರ, ೧೯೩೨.
೫. ತೋಂಟದ ಸಿದ್ಧಲಿಂಗ ಶಿವಯೋಗಿ ವಿರಚಿತ '**ಷಟ್‌ಸ್ಥಲ ಜ್ಞಾನ ಸಾರಾಮೃತ**' (ಸಂ:) ಡಾ. ಆರ್.ಸಿ. ಹಿರೇಮಠ ; ಗದಗ, ೧೯೮೩.
೬ **ವೀರಶೈವ ತಾರಾವಳಿ ಸಂಪುಟ**, (ಸಂ) : ಡಾ. ವೀರಣ್ಣ ರಾಜೂರ, ಗದಗ, ೧೯೯೪.
೭. **ಕಾಡುಗೊಲ್ಲರ ಜನಪದ ಗೀತೆಗಳು** ; (ಸಂ), ಎ. ಹಿರಿಯಣ್ಣ, ಮೈಸೂರು, ೧೯೭೮.
೮. **ಚಿತ್ರದುರ್ಗ ಪಾಳೆಯಗಾರರ ದಾಖಲೆಗಳು** ; (ಸಂ), ಡಾ. ಬಿ.ರಾಜಶೇಖರಪ್ಪ, ಬೆಂಗಳೂರು, ೨೦೦೭.
೯. **ನಾಯಕನಹಟ್ಟಿ ದೊರೆಗಳ ವಂಶಾವಳಿ**, ಮರು ಸಂಪಾದನೆ : ಡಾ. ಬಿ. ರಾಜಶೇಖರಪ್ಪ, ಅಪ್ರಕಟಿತ. (ಇದೇ 'ನಾಯಕನಹಟ್ಟಿ ಬಖೈರು' ಎಂಬ ಹೆಸರಿನಲ್ಲಿ ಎಂ.ಎಸ್. ಪ್ರಭಾಕರ್ ಅವರಿಂದ ಸಂಪಾದಿತವಾಗಿ ೧೯೭೫ರಲ್ಲಿ 'ಚಂದ್ರವಳ್ಳಿ' ಸಂಪುಟದಲ್ಲಿ ಪ್ರಕಟವಾಗಿದೆ. (ಸಂ.) ಲಕ್ಷ್ಮಣ ತೆಲಗಾವಿ ಮತ್ತು ಡಾ. ಎಂ.ವಿ. ಶ್ರೀನಿವಾಸ್)
೧೦. **ಮರದ ಮೇಲೆರಡು ಗಿಳಿ ಕುಂತು ನುಡಿದಾವೆ** ; (ಸಂ.), ಕೆ.ಎಂ. ರೇವಣ್ಣ, ನಾಯಕನಹಟ್ಟಿ, ೨೦೦೪.
೧೧. ಟಿ. ಗಿರಿಜ., ೧೯೯೧, **ಚಿತ್ರದುರ್ಗ ಜಿಲ್ಲಾ ದರ್ಶಿನಿ**, ದಾವಣಗೆರೆ.
೧೨. ಟಿ. ಗಿರಿಜ., ೨೦೦೧, **ದಾವಣಗೆರೆ ಇದು ನಮ್ಮ ಜಿಲ್ಲೆ**, ದಾವಣಗೆರೆ.
೧೩. ಕುಂಬಾಸ., ೧೯೯೦, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ**, ಕುಂಚೂರು (ಹರಪನಹಳ್ಳಿ ತಾ).
೧೪. ಡಿ. ಬಸವರಾಜ., **ನಾಯ್ಕನಹಟ್ಟಿ ಶ್ರೀ ತಿಪ್ಪೇರುದ್ರಸ್ವಾಮಿ ಚರಿತ್ರೆ**, ಬುಕ್ ಸೇಲರ್, ಹುಬ್ಬಳ್ಳಿ.
೧೫. ದೊಡ್ಡಬಾಣಗೆರೆ ಪ್ರಕಾಶಮೂರ್ತಿ., ೧೯೭೧, **ತಿಪ್ಪೇಶ ಲೀಲೆ**, ಚಿತ್ರದುರ್ಗ.
೧೬. ಪ್ರೊ. ಡಿ.ಟಿ. ರಂಗಸ್ವಾಮಿ., ೧೯೯೧, **ಶ್ರೀ ಗುರು ತಿಪ್ಪೇರುದ್ರಸ್ವಾಮಿ ಮಹಿಮಾಮೃತ**, ನಾಯಕನಹಟ್ಟಿ.
೧೭. ಚಂದ್ರಶೇಖರ ವಿ., **ಕಾಯಕಯೋಗಿ ಶ್ರೀಗುರು ತಿಪ್ಪೇರುದ್ರಸ್ವಾಮಿ**, ದಾವಣಗೇರಿ.
೧೮. ಬಿ. ರಾಜಶೇಖರಪ್ಪ., ೨೦೦೧, **ದುರ್ಗಶೋಧನ**, ಬೆಂಗಳೂರು.
೧೯. Rahman Azer., 1998, *Tiger Sultan*, Bangalore, Rev. Edn.
೨೦. ಎಸ್. ಮಲ್ಲಿಕಾರ್ಜುನಪ್ಪ, ೨೦೦೮, **ಶೋಧ ಭಾಗ ೧ ಮತ್ತು ಭಾಗ ೨**, ದಾವಣಗೆರೆ.
೨೧. **ಕರ್ನಾಟಕ ಕವಿಚರಿತೆ, ತೃತೀಯ ಸಂಪುಟ**, ೧೯೭೪, (ಸಂ), ಡಾ. ನರಸಿಂಹಾಚಾರ್, ಬೆಂಗಳೂರು, ತಿದ್ದಿದ ಮುದ್ರಣ.
೨೨. **ತಿಪ್ಪೇರುದ್ರ ಶತಕ**, ೧೯೭೭, (ಅಪೂರ್ಣ), (ಸಂ.), ಎಂ.ಎಸ್. ಪ್ರಭಾಕರ್, ತರಳಬಾಳು ಸಂಪುಟ ೨-, ಸಂಚಿಕೆ ೨, ಜನವರಿ.
೨೩. '**ಸಮಗ್ರ ಸುದ್ದಿ**' ಕನ್ನಡ ದಿನಪತ್ರಿಕೆ, ಚಳ್ಳಕೆರೆ, ಶ್ರೀ ಗುರು ತಿಪ್ಪೇರುದ್ರಸ್ವಾಮಿ ವಿಶೇಷ ಸಂಚಿಕೆ, ದಿ. ೨೦-೦೩-೧೯೯೨.
೨೪. '**ಜನನಾಡಿ**' ಕನ್ನಡ ದಿನಪತ್ರಿಕೆ, ಚಿತ್ರದುರ್ಗ, ನಾಯಕನಹಟ್ಟಿ ಶ್ರೀಗುರು ತಿಪ್ಪೇರುದ್ರಸ್ವಾಮಿ ಜಾತ್ರಾ ಮಹೋತ್ಸವದ ವಿಶೇಷಾಂಕ, ಮಾರ್ಚ್ ೨೦೦೧.

ಟಿ.ಎಸ್. ಜಯದೇವ್*

# ಮತ್ತಿತಿಮ್ಮಣ್ಣನಾಯಕರ ಸಮಾಧಿ ಅವಶೇಷಗಳು

**ಹುಟ್ಟು** : ಕರ್ನಾಟಕ ರಾಜ್ಯ ದಾವಣಗೆರೆ ಜಿಲ್ಲೆ ುತ್ತು ತಾಲ್ಲೂಕು ಮತ್ತಿಗ್ರಾಮ ಪ್ರಾಂತ್ಯದ ಪಾಳೆಗಾರ ರಾಜಾ ುತ್ತಿ ತಿಮ್ಮಣ್ಣನಾಯಕರು ಕ್ರಿ.ಶ. ೧೪೪೪ರಲ್ಲಿ ಜನಿಸಿದರು. ್ರಿ.ಶ. ೧೪೭೦ರಲ್ಲಿ ಪಟ್ಟಕ್ಕೆ ಬಂದರು. ಹಿರೇಹನುಮಪ್ಪ ಾಯಕನು ಚಂದ್ರಗಿರಿಯ ರಾಜ ನಾಗತಿಯ ಮಗಳಾದ ೇವಿನಾಗತಿಯುವರು ಹಾಗೂ ಮತ್ತಿಪ್ರಾಂತ್ಯದ ಲ್ಲಪ್ಪನಾಯಕರ ಮಗಳಾದ ಕರಿಯಮ್ಮನಾಗತಿಯವರನ್ನು ುದುವೆಯೊಂದಿಗೆ ಪತ್ನಿಯಾಗಿ ಸ್ವೀಕರಿಸಿದ, ಇವರ ಹೊಟ್ಟೆಯಲ್ಲಿ ಕ್ರಿ.ಶ. ೧೪೪೮ರಲ್ಲಿ ಮತ್ತಿಪ್ರಾಂತ್ಯದಲ್ಲಿ ಜನಿಸಿದವರೇ ಮತ್ತಿತಿಮ್ಮಣ್ಣನಾಯಕರು.

ಸಬ್ಬಡಿ ಓಬಣ್ಣನಾಯಕರ ಮೊಮ್ಮಗ ಅರ್ಥಾತ್ ಿರಿಹನುಮಪ್ಪನಾಯಕರ ಮಗ ರಾಜ ಮತ್ತಿತಿಮ್ಮಣ್ಣ ಾಯಕರು.

ಕ್ರಿ.ಶ. ೧೪೯೧ರಲ್ಲಿ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಸಾಳ್ವ ಇಮ್ಮಡಿನರಸಿಂಹರಾಯರ ಆಳ್ವಿಕೆ ಅವಧಿಯಲ್ಲಿ ವೀರತೆ, ಧೀರತನ, ಸಾಹಸ, ಸಮರ ಕೌಶಲ್ಯಗಳ ುಗ್ಗೆ ಪರಿಶೀಲನೆ ಪರಿಗಣನೆಯೊಂದಿಗೆ ಹಲವು ಬಿರುದುಗಳಲ್ಲಿ ಒಂದಾದ "ಹಗಲು ಕಗ್ಗೊಲೆ" ಮಾನ್ಯ ಬಿರುದಾಂಕಿತರಾದರು.

**ಪ್ರಸಂಗ** : ಕ್ರಿ.ಶ. ೧೫೧೨ರಲ್ಲಿ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಸಾಳ್ವನರಸಿಂಹರಾಯರು ದುರ್ಗಸೀಮೆಯ ಮತ್ತಿಪ್ರಾಂತ್ಯದ ಮೇಲೆ ತನ್ನ ಅಪಾರ ಸೈನ್ಯ ದಂಡಿನೊಡನೆ ಮುತ್ತಿಗೆ ಹಾಕಲು ಸಕಲ ಯುದ್ಧ ಸಿದ್ಧತೆಯೊಂದಿಗೆ ಚಿತ್ರದುರ್ಗದ ವ್ಯಾಪ್ತಿಯಲ್ಲಿ ಬಿಡಾರ ಹಾಕಿದಂತಹ ಸಂದರ್ಭದಲ್ಲಿ, ಮತ್ತಿತಿಮ್ಮಣ್ಣನಾಯಕರು ಂಟಿಸಲಗದಂತೆ ಏಕಾಂಗಿಯಾಗಿ ಶತ್ರು ಸೈನ್ಯ ಬಿಡಾರದೊಳಕ್ಕೆ ರಾತ್ರಿ ನುಗ್ಗಿ, ಸಾಳ್ವನರಸಿಂಹರಾಯರ ಪಾಳೆಗಾರ ಚಕ್ರವರ್ತಿಯ ಪಟ್ಟದ ಕುದುರೆಯನ್ನು ಅಪಹರಿಸುತ್ತಿರುವ ಸಂದಿಗ್ಧತೆಯ ಘಳಿಗೆಯಲ್ಲಿ ಕುದುರೆ ಕೆನೆತದಿಂದ ಎಚ್ಚರಗೊಂಡು ಕಾಸ್ತಾರನು ುದುರೆ ಲಾಯದೊಳಕ್ಕೆ ಬಂದಾಗ ಅವನಿಂದ ತಪ್ಪಿಸಿಕೊಳ್ಳಲು ಯೋಚಿನಂತೆ, ಉಪಾಯದೊಂದಿಗೆ, ಕುದುರೆಗಳಿಗೆ ಮೇಯಲು ಹಾಕುತ್ತಿದ್ದ ಹುಲ್ಲನ್ನು ಮೈಮೇಲೆ ಹಾಕಿಕೊಂಡು ಶತ್ರುವಿನ ಕಣ್ಣಿನಿಂದ ತಪ್ಪಿಸಿಕೊಂಡನು. ಒಳಬಂದ ಕುದುರೆ ಕಾಸ್ತಾರನು ಕಬ್ಬಿಣದ ಗೂಟ ಕಿತ್ತುಕೊಂಡಿದ್ದಂತಹ ಕುದುರೆಯನ್ನು ನೋಡಿ "ಓ ಕುದುರೆ ಯಾಕೋ ಕಿತ್ತುಕೊಂಡಿದೆ, ಅದಕ್ಕಾಗಿ ಕೆನೆದಿದೆ ಎನ್ನುತ್ತಾ ಕುದುರೆಯನ್ನು ಮೊದಲಿನ ಸ್ಥಿತಿಗೆ ತರಲು ಕಿತ್ತಿದ ಕಬ್ಬಿಣದ ಗೂಟವನ್ನು ಪುನಃ ನೆಲಕ್ಕೆ ಹೊಡೆಯಲು ಯತ್ನಿಸಿದ. ಅದು ಸರಾಗವಾಗಿ ಒಳ ಹೋಗದಿದ್ದನ್ನು ಮನಗೊಂಡು ಸುತ್ತಿಗೆಯನ್ನು ತಂದು ಶಕ್ತಿ ಪ್ರಯೋಗಿಸಿ ನೆಲಕ್ಕೆ ಬಲವಾಗಿ ಹೊಡೆದು ತನ್ನ ಮಲಗುವ ಶಿಬಿರಕ್ಕೆ ಧಾವಿಸಿದ.

ಸಿಂಹಾವನಾಲೋಕನದಲ್ಲಿದ್ದಂತಹ ಮತ್ತಿತಿಮ್ಮಣ್ಣ ನಾಯಕರು ತನ್ನ ಅಂಗೈ ನಡುವೆ ಕುದುರೆ ಗೂಟ ಹೊಡೆದಿರುವುದನ್ನು ತುಟಿಪಿಟಕ್ಕೆನ್ನದೆ, ರಕ್ತ ಹರಿಯುತ್ತಿದ್ದರೂ, ನೋವಾದರೂ, ಸಹಿಸಿಕೊಂಡು ಶತ್ರು ಹೊರಹೋದ ಕೂಡಲೇ ತನ್ನ ಅಂಗೈ ಒಳಗೆ ಹೊಡೆದಿದ್ದ ಕಬ್ಬಿಣದ ಗೂಟವನ್ನು ಎಲ್ಲಾ ರೀತಿಯ ಪ್ರಯತ್ನದಿಂದಲೂ ಕೀಳಲು ವಿಫಲವಾದ ನಂತರ ತನ್ನ ಸೊಂಟದಲ್ಲಿದ್ದಂತಹ ಗುದ್ದು ಬಾಕುವನ್ನು ಹೊರ ಎಳೆದುಕೊಂಡು ಕುದುರೆ ಹಗ್ಗದೊಂದಿಗೆ ತನ್ನ ಮುಂಗೈಯನ್ನು ಕತ್ತರಿಸಿಕೊಂಡು ರಕ್ತ ಧಾರಾಕಾರವಾಗಿ ಸುರಿಯುತ್ತಿದ್ದರೂ ಲೆಕ್ಕಿಸದೇ ನೋವಿನಿಂದ ವಿಚಲಿತನಾಗದೇ, ನೋವನ್ನು ಸಹಿಸಿಕೊಂಡು ಪಟ್ಟದ ಕುದುರೆಯನ್ನು ಅಪಹರಿಸಿಕೊಂಡು ತನ್ನ ಪ್ರಾಂತ್ಯಕ್ಕೆ ಹಿಂತಿರುಗುತ್ತಾನೆ.

ಬೆಳಿಗ್ಗೆ ಆಗುತ್ತಲೆ ಸಾಳ್ವ ನರಸಿಂಹರಾಯರ ಯುದ್ಧ ಬಿಡಾರದಲ್ಲಿ ಆದ ಸುದ್ದಿ, ಗುಲ್ಲು ಗುಲ್ಲಾಗಿ ಎಲ್ಲಾ ಕಡೆ ಹಬ್ಬುತ್ತದೆ. ಕೊನೆಗೆ ಚಕ್ರವರ್ತಿ ನರಸಿಂಹರಾಯರು ಆಶ್ಚರ್ಯ ಚಕಿತರಾಗಿ ಭಯ ಭೀತರಾಗಿ ಚಿಂತೆಗೀಡಾಗುತ್ತಾನೆ. ಮಂತ್ರಿ ಜೊತೆ ಸಮಾಲೋಚನೆ ಮಾಡಿ, ಶತ್ರು ಸೈನ್ಯ ಬಿಡಾರದಿಂದ ಪಟ್ಟದ ಕುದುರೆಯನ್ನು ಅಪಹರಿಸಿದಂತಹ ಹೋರಾಟಗಾರ, "ಮತ್ತಿತಿಮ್ಮಣ್ಣನಾಯಕರ" ಶೌರ್ಯ, ಸಾಹಸ, ಯುದ್ಧ ಕೌಶಲ್ಯ ಧೀರತನಕ್ಕೆ ಸೋತು, ಇನ್ನೂ ಮುಂದೆ ಚಿತ್ರದುರ್ಗ ನಾಯಕರಾದ ಮತ್ತಿತಿಮ್ಮಣ್ಣನಾಯಕರ ಪಾಳೆಗಾರಿಕೆಯ ವಿರುದ್ಧ ಯುದ್ಧ ಬೇಡವೆಂದು ತೀರ್ಮಾನಿಸಿ ಸ್ನೇಹ ಸಂಧಾನ ಮಾಡಿಕೊಂಡು ತಮ್ಮ ರಾಜ್ಯಕ್ಕೆ ವಾಪಸ್ಸು ಧಾವಿಸಿದರು.

* ತ್ಯಾವಣಗಿ, ಚನ್ನಗಿರಿ ತಾಲ್ಲೂಕು.

ಕ್ರಿ.ಶ. ೧೫೩೧ರಲ್ಲಿ ವಿಜಯನಗರ ನಾಯಕ ರಾಜರಿಗೆ ಅಭೇದ್ಯವಾಗಿದ್ದ ಗುಲ್ಬರ್ಗ ಪಾಳೆಗಾರರ ಕೋಟೆಯನ್ನೆ ಗೆದ್ದು ವಿಜಯನಗರ ಸಾಮ್ರಾಜ್ಯಕ್ಕೆ ಒಪ್ಪಿಸಿ "ಹಗಲು ಕಗ್ಗೊಲೆ ಮಾನ್ಯ" ಬಿರುದು ಪಡೆದದ್ದು ಮತ್ತೊಂದು ದಾಖಲೆಯ ವೀರತ್ವದ ಪ್ರತೀಕ, ತ್ಯಾಗದ, ಶೌರ್ಯ ಸಾಹಸದ ದ್ಯೋತಕ.

ಕ್ರಿ.ಶ. ೧೫೭೭ರಲ್ಲಿ ಪೋರ್ಚುಗೀಸ ಇತಿಹಾಸ ತಜ್ಞರು, ವಿದ್ವಾಂಸರು, 'ಕ್ರಿಸ್ತೊವಾವೋದ ದಷಿ ಗೋರೊಡೊವಿ' ಎಂಬುವರು ಚಿತ್ರದುರ್ಗಕ್ಕೆ ಸ್ನೇಹ ಸಂದರ್ಶನ ನೀಡಿರುವುದು ವಾಸ್ತವಿಕ ಹಾಗೂ ಕ್ರಿ.ಶ. ೧೫೭೯ರಲ್ಲಿ ಮತ್ತಿತಿಮ್ಮಣ್ಣನಾಯಕರ ಆಳ್ವಿಕೆಯ ಅವಧಿಯಲ್ಲಿ ಸಮೀಪ ಸಂಬಂಧಿ ಕಸ್ತೂರಿ ನಾಯಕರು ದಾವಣಗೆರೆ ಜಿಲ್ಲೆಯ ಜಗಲೂರು ಪ್ರಾಂತ್ಯದ ಕಣಕುಪ್ಪೆಯನ್ನು ರಾಜಧಾನಿಯಾಗಿರಿಸಿಕೊಂಡು ಆಳ್ವಿಕೆ ಮಾಡುತ್ತಿದ್ದಂತಹ ಸಂದರ್ಭದಲ್ಲಿ ಕೆಂಪೇಗೌಡ (ಒಂದನೇ)ನು ಸ್ನೇಹಪರ ಸಂಕೇತವಾಗಿ ಭೇಟಿ ಮಾಡಿದ್ದಂತಹ ಐತಿಹಾಸಿಕ ದಾಖಲಾತಿಗಳ ಉಲ್ಲೇಖವಿದೆ.

ಕ್ರಿ.ಶ. ೧೫೦೩ರಲ್ಲಿ ಹೊಳಲ್‌ಕೆರೆ ನಾಯಕತ್ವವನ್ನು, ಕ್ರಿ.ಶ. ೧೫೧೪ರಲ್ಲಿ ಚಿತ್ರದುರ್ಗದ ನಾಯಕತ್ವವನ್ನು ಹಾಗೂ ಕ್ರಿ.ಶ. ೧೫೧೮ರಲ್ಲಿ ಹಿರಿಯೂರಿನ ನಾಯಕತ್ವವನ್ನು ಪಡೆದು ಆಳ್ವಿಕೆ ಮಾಡಲಾಯಿತು.

ಈ ನಾಯಕನು ಚಿತ್ರದುರ್ಗದಲ್ಲಿ ಪ್ರಕೃತಿದತ್ತವಾದ ಕಲ್ಲು ಬಂಡೆಗಳ ಕೊರಿಗಿಯಿಂದ ಕೂಡಿದ ಉಕ್ಕಿನ ಕೋಟೆ ಎಂದೇ ಪ್ರಸಿದ್ಧವಾಗಿದ್ದ ಕೋಟೆ ಕೊತ್ತಲಗಳನ್ನು ಬಲಪಡಿಸಿ ಕೆರೆ, ಕಟ್ಟೆಗಳನ್ನು ಕಟ್ಟಿಸಿ ಪ್ರಜಾ ಉಪಕಾರಿ ಅನೇಕ ಕಾಮಗಾರಿಗಳನ್ನು ಮಾಡಿಸಿ ಜನಪ್ರಿಯ ಬಲಿಷ್ಠ ಹಾಗೂ ದಕ್ಷ ಆಡಳಿತಗಾರ ನಾಗಿದ್ದನು.

ಕ್ರಿ.ಶ. ೧೪೯೧ರ ಅವಧಿಯಲ್ಲಿ ಸಾಳ್ವ ವಂಶದ ನರಸಿಂಹ ರಾಯರ ಆಳ್ವಿಕೆಯಲ್ಲಿ ರಾಜ ಮತ್ತಿತಿಮ್ಮಣ್ಣನಾಯಕರು ಪ್ರಸಿದ್ಧಿ ಮತ್ತು ಹೆಸರು ಪಡೆದಿದ್ದರು.

ದಾವಣಗೆರೆ ಜಿಲ್ಲೆ ಮತ್ತು ತಾಲ್ಲೂಕು ಮತ್ತಿ ಗ್ರಾಮದಲ್ಲಿ ಭದ್ರವಾದ ಅನೇಕ ಸುತ್ತಿನ ಕೋಟೆ ನಿರ್ಮಾಣ ಮಾಡಿ ದಕ್ಷ ಹಾಗೂ ಹೆಸರಾಂತ ಪಾಳೆಗಾರನಾಗಿ ಆಳ್ವಿಕೆಯ ಕುರುಹುಗಳು ದಟ್ಟವಾಗಿದೆ. ಇಂದಿಗೂ, 'ಕೋಟೆ', 'ಕೋಟೆ ಅಟ್ಟಿ' ಎಂತಲೂ ಕೋಟೆಯ ಕೇಂದ್ರ ಬಿಂದುವಿನಲ್ಲಿ ತಿಮ್ಮಣ್ಣನಾಯಕರ ಕೆರೆ, ಅರ್ಥಾತ್ ಅಗ್ನಿಕುಂಡ ಎಂದು ಕರೆಯುತ್ತಿರುವ ಸ್ಮಾರಕ, ತಿಮ್ಮಣ್ಣನಾಯಕರ ವೀರಮಾಸ್ತಿಕಲ್ಲು ಇಂದಿಗೂ ಸ್ಮಾರಕಗಳಾಗಿ ಉಳಿದಿವೆ. ಈ ತಿಮ್ಮಣ್ಣನಾಯಕರ ಮಾಸ್ತಿಕಲ್ಲು ಮತ್ತು ಸ್ತ್ರೀಯರ ಎರಡು ಶಿಲಾಮೂರ್ತಿಗಳು ತಿಮ್ಮಣ್ಣನಾಯಕರ ಸಮಾಧಿ ಇದ್ದ ಸ್ಥಳದಲ್ಲಿ, ಸಮಾಧಿ ಹಾಳಾಗಿದ್ದು ಮಣ್ಣಿನಲ್ಲಿ ಪ್ರತಿಷ್ಠಾಪಿಸಿದ್ದಾರೆ. ಈ ಮೂರ್ತಿಗಳಿಗೆ ದೇವರೆಂದು ಊರಿನ ಸುತ್ತಮುತ್ತಲಿನ ಜನರು ಅನನ್ಯ ಭಕ್ತಿಯಿಂದ ಪೂಜೆ ಸಲ್ಲಿಸುತ್ತಾರೆ. ತಿಮ್ಮಣ್ಣ ನಾಯಕರ ವೀರಗಲ್ಲಿನ ಮೇಲ್ಭಾಗದಲ್ಲಿ ಈಶ್ವರ ಲಿಂಗವಿದೆ. ಅದರ ಅಕ್ಕಪಕ್ಕದಲ್ಲಿ ಪೂಜೆಗೆ ಪೂರಕವಾ[illegible] ದ್ವೀಪಸ್ತಂಭಗಳಿವೆ. ಅದರ ಮೇಲ್ಭಾಗದಲ್ಲಿ ಒಂದು ಕ[illegible] ಚಂದ್ರನ, ಮತ್ತೊಂದು ಕಡೆ ಸೂರ್ಯನ ಚಿತ್ರ[illegible] ಉಲ್ಲೇಖವಿದೆ.

ಪಟ್ಟದ ಕುದುರೆಯ ಮೇಲೆ ಸವಾರಿ ಮಾಡುತ್ತಿರು[illegible] ತಿಮ್ಮಣ್ಣನಾಯಕರ ಮೂರ್ತಿ ಇದ್ದು, ಕೈಯಲ್ಲಿ ಕತ್ತಿಯನ್[illegible] ಎತ್ತಿ ಹಿಡಿದಿರುವ, ಅಕ್ಕಪಕ್ಕದಲ್ಲಿ ಸೇವಕರುಗಳು ಗಾ[illegible] ಹಾಕುತ್ತಿರುವ ಸಾಧನದ ಚಿತ್ರವಿದೆ ? ಸವಾರಿ ಮಾಡುತ್ತಿರು[illegible] ಪಟ್ಟದ ಕುದುರೆಯ ಮುಂಭಾಗದಲ್ಲಿ ಬಿಲ್ಲು ಬಾಣ ಆಯುಧ[illegible] ದೊಂದಿಗಿರುವ ಸೈನಿಕರ ಚಿತ್ರಣವಿದೆ. ಆದ್ದರಿಂದ ಇದ[illegible] ರಾಜಾ ಮತ್ತಿ ತಿಮ್ಮಣ್ಣನಾಯಕರ ಶಿಲಾಮೂರ್ತಿ ಎಂಬುದ[illegible] ಮತ್ತು ಮತ್ತಿಯಲ್ಲಿ ಕೋಟೆ ಇತ್ತು ಎಂಬುದು ಮತ್ತಿ ಪ್ರಾಂತ್ಯದ[illegible] ಆಳ್ವಿಕೆ ನಡೆದಿರುವುದು ಸ್ಪಷ್ಟವಾಗಿದೆ.

ಇತ್ತೀಚಿನ ದಿನಗಳಲ್ಲಿ ಮತ್ತಿತಿಮ್ಮಣ್ಣನಾಯಕರ ಕೋಟೆ[illegible] ಒಳಭಾಗದಲ್ಲಿ ಬೀರದೇವರ ದೇವಸ್ಥಾನ ಕಟ್ಟಲಾಗಿದೆ. 'ಕೋಟೆ ಅಟ್ಟಿ' ಎನ್ನುತ್ತಿರುವ ಮಧ್ಯಭಾಗದಲ್ಲಿ ಇಂದಿಗೂ ಭರಮನಾಯಕ ಎಂತಲೂ ಅರ್ಥಾತ್ ಭರಮದೇವರು ಎಂತಲೂ ಕರೆಯುತ್ತಾರೆ. ಪೂರ್ವಕಾಲದ ಉದ್ದನೆಯ ಕಲ್ಲು ಕಂಬ ಅಲ್ಲಿದೆ.

ಗ್ರಾಮದ ಮತ್ತು ಸುತ್ತಮುತ್ತಲಿನ ಜನರು ಇಂದಿಗೂ ಸದಾ ಪೂಜಿಸುತ್ತಾ ತಮ್ಮ ಭಯ ಭಕ್ತಿ ಸಲ್ಲಿಸುತ್ತಿದ್ದಾರೆ. ತಿಮ್ಮಣ್ಣನಾಯಕರ ಕೆರೆ ಸಂಪೂರ್ಣ ಮುಚ್ಚಿಹೋಗಿದ್ದು ಪಾಚಿ ಕಟ್ಟಿ ದಯಾನಿಯ ಸ್ಥಿತಿಯಲ್ಲಿ ಕೊಳೆತು ನಾರುತಿದೆ. ಶ್ರೀ ಬೀರದೇವರ ದೇವಸ್ಥಾನ ನಿರ್ಮಿಸಿರುವ ಪಕ್ಕದಲ್ಲಿ ಶ್ರೀ ರಾಜಾ ಮತ್ತಿತಿಮ್ಮಣ್ಣನಾಯಕರ ವೀರಗಲ್ಲು ಸುಂದರವಾದ, ತುಂಬಾ ಗಂಭೀರವಾದ ಎರಡು ಮೂರು ಶಿಲಾ ವಿಗ್ರಹಗಳಿರುವ ಭಾಗವು ಮತ್ತಿ ಗ್ರಾಮದಲ್ಲಿ ಕೋಟೆ ಕಟ್ಟಿ ಆಳ್ವಿಕೆ ಮಾಡಿದ "ರಾಜ ಮತ್ತಿ ತಿಮ್ಮಣ್ಣನಾಯಕರ ಮತ್ತು ಹೆಂಡತಿಯವರ" ಶಿಲಾಮೂರ್ತಿ ಎಂದು ಪೂಜೆ ಮಾಡುತ್ತಿದ್ದಾರೆ ವಿಶಿಷ್ಟವಾಗಿ ಊರಲ್ಲಿ ಸುತ್ತಮುತ್ತಲಿನ ಊರ ಜನರು ಸಹ ತಮ್ಮ ಸಾಮಾಜಿಕ ಶುಭ ಗಳಿಗೆ ಮೂರ್ತಗಳಲ್ಲಿ ಹೊಸ ಮನೆ ಪ್ರವೇಶ, ಮದುವೆ ಮುಂಜಿ ಸಮಾರಂಭಕ್ಕೆ ಮುಂದೆ ರಾಜಾ ತಿಮ್ಮಣ್ಣ ನಾಯಕರ ಸಮಾಧಿ ಸ್ಥಳಕ್ಕೆ ಬಂದು ಪೂಜೆ ಸಲ್ಲಿಸಿ ಎಡೆ, ನೈವೇದ್ಯ ನೀಡಿ ತದನಂತರ ತಮ್ಮ ತಮ್ಮ ಶುಭಕಾರ್ಯ ಪ್ರಾರಂಭ ಮಾಡುವ ಸಂಪ್ರದಾಯ, ಸಾಮಾಜಿಕ ಕಟ್ಟಳೆಗಳೊಂದಿಗೆ ಇಂದಿಗೂ ಪ್ರಸಿದ್ಧವಾಗಿ ಸಾಂಗೋಪ ಸಾಂಗವಾಗಿ ನಡೆದುಕೊಂಡು ಬರುತ್ತಿದೆ ಎಂದು ಊರಿನ ಹಿರಿಯರು, ಯುವಪೀಳಿಗೆಯೂ ಸಹ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

ಡಾ. ಕೆಳದಿ ವೆಂಕಟೇಶ್ ಜೋಯಿಸ್*

# ಕೆಳದಿ ಕಾಲದಲ್ಲಿ ಚಿಕ್ಕರಮನೆ ಕುಟುಂಬ ಮತ್ತು ಶ್ರೀ ಭದ್ರಾಂಬಿಕೇಶ್ವರ ದೇವಸ್ಥಾನ

ಗೋವಾದಲ್ಲಿ ಪೋರ್ಚುಗೀಸರು ಕ್ರಿ.ಶ. ೧೫೬೦ರ ಅವಧಿಯಲ್ಲಿ ಧರ್ಮ ಪರಿವರ್ತನೆ, ಮತಾಂತರಗಳನ್ನು ಬಲಾತ್ಕಾರದಿಂದ ನಡೆಸಿದುದು ಹಿಂದೂ ದೇವಾಲಯಗಳು ಚರ್ಚ್‌ಗಳಾಗಿ ಪರಿವರ್ತಿತಗೊಂಡವು. ಅಲ್ಲಿಯ ಸಾರಸ್ವತರು ಈ ಧಾರ್ಮಿಕ ವಿಪ್ಲವಗಳಿಂದ ಕಂಗೆಟ್ಟುದಲ್ಲದೆ ಅವರು ಬೇರೆಡೆ ನೆಲೆ ಹುಡುಕುವಂತಾಯಿತು. ಪೋರ್ಚುಗೀಸರು ಗೋವಾದಲ್ಲಿ ನಡೆಸಿದ ಈ ಸಂದರ್ಭವನ್ನು ಕುರಿತು ದಿ॥ ಮಂಜೇಶ್ವರ ಗೋವಿಂದ ಪೈರವರು ಕ್ರೈಸ್ತ ಗ್ರಂಥಗಳನ್ನು ಆಧರಿಸಿ-

In the year 1560 AA the jesuits proceeded to evangelize in the province of Salsette. 1. which became thense foreword the chief field of their labors, The village of cortalim being the first to witness the celebration of mass by them. The conversion of the inhabitants of this province was indeed very rapid, hundreds and thousand of them being baptized almost every year. Owing to this several churches wee erected on the ruins of Hindu temples, 280 of which are said to have been razed to the ground in 1567.

Also the ruins of 200 idol temples which Viceroy de Noronha totally demolished that no memory might remain of monuments of such gross idolatry.

There were also jews who had their own synagogues and their own mode of worship but the Hindus were not allowed the public exercise of their religion. 2.

ಹೀಗೆ ಬರೆಯುತ್ತಾರೆ.

ಇಲ್ಲಿ ಉಲ್ಲೇಖಿಸಿರುವ ಗೋವೆಯ ಸಾಸಷ್ಟಿ ಪ್ರಾಂತ ಪೋರ್ಚುಗೀಸರಿಗೂ ಮೊದಲು ಹಿಂದೂಗಳಿಗೆ ಸೇರಿದ್ದಿತು ಈ ಪ್ರಾಂತದಲ್ಲಿದ್ದ ಎಲ್ಲಾ ದೇವಾಲಯಗಳು ಹೆಚ್ಚು ಕಮ್ಮಿ ಗೌಡ ಸಾರಸ್ವತ ಬ್ರಾಹ್ಮಣರ ಕುಲದೇವರ ದೇವಾಲಯಗಳಾಗಿದ್ದವು. ಪೋರ್ಚುಗೀಸರ ನಂತರದಲ್ಲಿ ಅವುಗಳು ಇಗರ್ಜಿಗಳಾಗಿ ಪರಿವರ್ತಿತಗೊಂಡವು. ಈ ಸಂದರ್ಭದಲ್ಲಿ ಗೋವಾದಲ್ಲಿ ಈ ಕೆಳಗಿನ ವೈಸರಾಯಿಗಳು ಆಡಳಿತ ನಡೆಸುತ್ತಿದ್ದುದು ದಾಖಲೆಗಳಿಂದ ತಿಳಿದುಬರುತ್ತದೆ.

೧. ಡೊಂ ಕಾಂಸ್ಟಾಂಟಿಂಗ್ ಡಿ ಬ್ರಗಾಂಜಾ ೧. ಕ್ರಿ.ಶ. ೧೫೫೮-೧೫೬೧()

೨. ಡೊಂ ಫ್ರಾನ್ಸಿಸ್ಕೋ ಕಂಟಿನ್ಹೋ ಕೊಂಡೆ ಡಿ ರೆಡಂಡೋ ಕ್ರಿ.ಶ. ೧೫೬೧-೧೫೬೪.

೩. ಡೊಂ ಆಂಟೋನಿಯೋ ಡಿ ನರೋನ್ಹಾ ಕ್ರಿ.ಶ. ೧೫೬೪-೧೫೬೮.

**ಕೆಳದಿ ಕಾಲದಲ್ಲಿ ಸಾರಸ್ವತ ಬ್ರಾಹ್ಮಣರು :** ಶಿವ ಶಕ್ತಿಯರ ಉಪಾಸಕರಾದ ಮೂಲ ಗೋವಾ ದಾಕ್ಷಿಣಾತ್ಯ ಸಾರಸ್ವತರಲ್ಲಿ ಸಾರಸ್ವತ ವೈಷ್ಣವ, ಗೌಡ ಸಾರಸ್ವತ, ಸ್ಮಾರ್ತ ಮತ್ತು ಚಿತ್ರಾಪುರ ಸಾರಸ್ವತರು ಎಂಬ ವಿಭಾಗಗಳಿವೆ. ಆದರೆ ಸಾಂಸ್ಕೃತಿಕವಾಗಿ ಇವರುಗಳಲ್ಲಿ ಯಾವ ಭೇದವೂ ಕಂಡುಬರುವುದಿಲ್ಲ. ಹಾಗಾಗಿ ಇವರುಗಳನ್ನು ಗೌಡ ಸಾರಸ್ವತ ಬ್ರಾಹ್ಮಣರೆಂದು ಕರೆಯಲ್ಪಡುತ್ತದೆ. ಕನ್ನಡಿಗರು ಇವರನ್ನು ಕೊಂಕಣಿಗರೆಂದು ಗುರುತಿಸುತ್ತಾರೆ. ಮೂಲತಃ ಇವರು ಕವಳೆ ಮಠದ ಅನುಯಾಯಿಗಳಾಗಿದ್ದು ಕ್ರಿ.ಶ. ೧೭೦೮ರ ಚಿತ್ರಾಪುರ ಮಠದ ಅನುಯಾಯಿಗಳಾದರು. ದಾಕ್ಷಿಣಾತ್ಯ ಸಾರಸ್ವತರಲ್ಲಿ ಕುಶಸ್ಥಳೀಯರು ಹಾಗೂ ಸಾಷ್ಟಿಕರು (ಗೋವಾ ಕಡೆಗಳಲ್ಲಿ ಸಾಸಷ್ಟಿಗಳೆಂದು ಕರೆಯಲ್ಪಡುತ್ತಾರೆ) ಎಂದು ಗುರುತಿಸಲ್ಪಡುತ್ತಾರೆ. ಕುಶ್ಯಸ್ಥಳಿಯರು ಮೊದಲಿನಿಂದಲೂ ಸ್ಮಾರ್ಥರಾಗಿದ್ದು ಹಾಗೆಯೇ ಉಳಿದುಕೊಂಡು ಬಂದರೆ ಸಾಸಷ್ಟಿಗಳು ಮೊದಲು ಶೈವರಾಗಿ ಮಧ್ವಾಚಾರ್ಯರ ಆಗಮನದ ನಂತರದಲ್ಲಿ ವೈಷ್ಣವ ಧರ್ಮವನ್ನು ಅವಲಂಭಿಸಿದರು. ಚಿತ್ರಾಪುರ ಮಠದವರು ಮೊದಲಿನಿಂದಲೂ ಕುಶಸ್ಥಳೀಯರಾಗಿಯೇ ಇದ್ದವರಾಗಿದ್ದಾರೆ. ವಿಜಯನಗರ ಅರಸರ ಕಾಲದಲ್ಲಿ ಕರಾವಳಿಯ ಮಂಗಳೂರು ಬಾರ್ಕೂರುಗಳಿಗೆ ಅಧಿಪತಿಯಾಗಿ ಸದಾಶಿವನಾಯಕನು ಆಡಳಿತ ನಡೆಸಿದನು. ಇವನ ಕಾಲದಲ್ಲಿಯೇ ೧೫೬೫ರ ರಕ್ಕಸಗಿ ತಂಗಡಗಿ ಎಂಬಲ್ಲಿ ಘೋರ ಯುದ್ಧ ನಡೆಯಿತು. ಈ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯ ಪತನ ಹೊಂದಿತು. ಕೆಳದಿ ಮತ್ತು ಮೈಸೂರು

* ಕ್ಯುರೇಟರ್, ಕೆಳದಿ ವಸ್ತು ಸಂಗ್ರಹಾಲಯ, (ಕುವೆಂಪು ವಿಶ್ವವಿದ್ಯಾನಿಲಯ), ಕೆಳದಿ, ಶಿವಮೊಗ್ಗ ಜಿಲ್ಲೆ.

ಸ್ವಾತಂತ್ರ್ಯ ಪಡೆದವು. ಸರಿ ಸುಮಾರಾಗಿ ಪಡುಗಡಲ ಪ್ರಾಂತ್ಯಗಳ ಅಧಿಪತಿಗಳಾಗಿದ್ದ ಕೆಳದಿ ಅರಸರು ಗೋವಾ ಪ್ರಾಂತ್ಯಗಳಿಂದ ವಲಸೆ ಬಂದ ಆಗಂತುಕರಿಗೆ ಆಶ್ರಯ ನೀಡಿ ಹೊನ್ನಾವರ, ಭಟ್ಕಳ, ಬಸರೂರು, ಬಾರಕೂರು, ಬ್ರಹ್ಮಾವರ, ಮುಲ್ಕಿ, ಮಂಗಳೂರು, ಉಳ್ಳಾಳ ಮೊದಲಾದ ಊರುಗಳಲ್ಲಿ ನೆಲೆಸಲು ಅವಕಾಶ ಮಾಡಿಕೊಟ್ಟರು. ಇವರುಗಳು ಈ ಮೊದಲು ವೈದಿಕ ಸಂಪ್ರದಾಯ, ಪೌರೋಹಿತ್ಯಗಳಲ್ಲಿ ಹೆಚ್ಚು ತೊಡಗಿಕೊಂಡಿದ್ದರು. ಅಂತಹವರುಗಳಲ್ಲಿ ಹಲವು ವಿಭಾಗಗಳಿದ್ದು ಮುಖ್ಯವಾಗಿ ಚಿಕ್ಕರಮನೆ, ಚಿತ್ತಾರ, ಹೊನಾವರ್, ಕಂದ್ಲುರುಮ್ ಕರ್ಕಿ, ಮನೆವಾರ್ತೆ, ಮಂಕಿ, ವಾಗ್ಲೆ, ನಿಲೆಕಣಿ, ತಲಗೇರಿ, ತವನಂದಿ, ತೊಂಬಟ್, ಉಗ್ರಾಣ ಉಲ್ಮನ್ ಮೊದಲಾದ ಕುಟುಂಬಗಳಿವೆ.

ಪೋರ್ಚುಗೀಸರ ಬರುವಿಕೆಯಿಂದ ಈ ಜನ ತಮ್ಮ ಮೂಲವೃತ್ತಿಯನ್ನು ಬಿಟ್ಟು ಪರಸ್ಥಳಕ್ಕೆ ಹೋಗುವಂತಾಯಿತು. ಹಾಗಾಗಿ ತಮ್ಮ ಜೀವನಾಧಾರಕ್ಕೆ ಬೇರೆ ವೃತ್ತಿಗಳನ್ನು ಹುಡುಕುವಂತಾಯಿತು. ಕೆಳದಿ ಅರಸರು ಅರಮನೆಯ ಉಸ್ತುವಾರಿ, ಲೆಕ್ಕಪತ್ರಗಳ ದಾಖಲೆ, ಊರ ಆಡಳಿತ, ವಾಣಿಜ್ಯೋದ್ಯಮ ವ್ಯವಹಾರಗಳು ಮೊದಲಾದವುಗಳನ್ನು ನೋಡಿಕೊಳ್ಳಲು ಇವರನ್ನು ನೇಮಿಸಿಕೊಂಡರು. ಇವರಲ್ಲಿ ಹಲವರು ದ್ವಿಭಾಷಿಗಳೂ ಇದ್ದರು. ಅಂತಹವರನ್ನು ಕೆಳದಿ ರಾಜ್ಯಕ್ಕೆ ವಿದೇಶದಿಂದ ಬರುವವರಿಗೆ ದ್ವಿಭಾಷಿಗಳಾಗಿ ಕಾರ್ಯನಿರ್ವಹಿಸುವ, ಅವರೊಡನೆ ಒಡಂಬಡಿಕೆಗಳನ್ನು ಏರ್ಪಡಿಸುವುದು ಮೊದಲಾದ ಹುದ್ದೆಗಳನ್ನು ಇವರಿಗೆ ಗೊತ್ತು ಮಾಡಿ ನೇಮಿಸಿಕೊಂಡರು. ಕ್ರಿ.ಶ. ೧೫೮೬-೧೬೩೦ರಲ್ಲಿ ಕೆಳದಿಯನ್ನಾಳಿದ ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ವಿಠ್ಠಲಶಣೈ, ವಿದೇಶೀಯ ವ್ಯವಹಾರದ ಅಧಿಕಾರಿಯಾಗಿ ನೇಮಕವಾಗಿದ್ದನು. ಈತನು ಪೋರ್ಚುಗೀಸ್ ಭಾಷೆಯನ್ನು ಅರಿತಿದ್ದು, ಕೆಳದಿ ರಾಜಧಾನಿಗೆ ೧೬೨೩ರಲ್ಲಿ ಆಗಮಿಸಿದ್ದ ಇಟಲಿ ಪ್ರವಾಸಿ ಪಿಯತ್ರೋ ಡೆಲ್ಲವಲ್ಲೆಗೆ ಈ ರಾಜ್ಯದ ಪರಿಚಯ ಮಾಡಿಕೊಟ್ಟವನಿವನು. ಹೀಗೆ ವ್ಯಾಪಾರ ವ್ಯವಹಾರದ ಜೊತೆಗೆ ಅರಮನೆ ಆಡಳಿತವನ್ನು ನೋಡಿಕೊಳ್ಳಲು ಈ ಸಂದರ್ಭದಲ್ಲಿ ನೇಮಕಗೊಂಡ ಒಂದು ಕುಟುಂಬವೇ ಚಿಕ್ಕರಮನೆ ಕುಟುಂಬ.[1] ಗೋವಾದಲ್ಲಿ ಇವರನ್ನು ವಾಗಳೆ ಎಂದು ಕರೆಯುತ್ತಾರೆ. ಈಗ ಈ ಕುಟುಂಬದ ಸುಮಾರು ೧೦ನೇ ತಲೆಮಾರಿನವರು ಇದ್ದಾರೆ. ಇವರಲ್ಲಿ ಸುಮಾರು ೧೩ ಶಾಖೆಗಳಿವೆ. ಇವರ ಗೋತ್ರ ಕೌಂಡಿನ್ಯ, ಮನೆ ದೇವರು ಮಂಗೇಶ. ಮಹಾಲಕ್ಷ್ಮಿ ಮತ್ತು ಶಾಂತದುರ್ಗದೇವರ ಆರಾಧಕರಿವರು. ಈ ಕುಟುಂಬ ಕವಲು ಸುಮಾರು ೧೭ನೇ ಶತಮಾನದಲ್ಲಿ ಕವಲಾಗಿ ಒಡೆದು ಒಂದು ಕುಟುಂಬ ಗೋಕರ್ಣದಲ್ಲಿ ಸೈನಿಕ ವಿಭಾಗದಲ್ಲಿ ಮುಖ್ಯಸ್ಥರಾಗಿದ್ದರೆಂದು ಕ್ರಿ.ಶ. ಸುಮಾರು ೧೭೪೯ರ ದಾಖಲೆ ತಿಳಿಸುತ್ತದೆ. ಈ ಕುಟುಂಬದವರು ಕೆಳದಿ ಆಡಳಿತದಲ್ಲಿ ನಂಬಿಕೆ ಅರ್ಹರಾದವರಲ್ಲಿ ಪ್ರಮುಖರಾಗಿದ್ದರು. ಇವರ ಇಷ್ಟ ದೇವ ಮಂಕಿಮಡಿಯಲ್ಲಿರುವ ಭದ್ರಾಂಬಿಕೇಶ್ವರ ಆಗಿದ್ದು ಇದನ್ನು ಕ್ರಿ.ಶ. ೧೭೦೪ರಲ್ಲಿ ನಿರ್ಮಿಸಲಾಯಿತು. ಈ ದೇವಾಲಯಕ್ಕೆ ಕೆಳದಿ ಅರಸ ಎರಡನೇ ಸೋಮಶೇಖರ ನಾಯಕನಿಂದ ಇನಾಂ ಆಗಿ ಉಳವರೆ (ಉಳವರೆ)[2] ಭೂಮಿಯನ್ನು ಕ್ರಿ.ಶ. ೧೭೪೯ರಲ್ಲಿ ಪಡೆದಿದ್ದರು. ಈ ಕುಟುಂಬದವರೇ ಕೆಳದಿ ಆಡಳಿತದಲ್ಲಿ ಕೆನರಾದಲ್ಲಿ ಸಣ್ಣ ಸೈನ್ಯ ಇದ್ದು ಇದು ರಾಜನಿಗೆ ಅಗತ್ಯವಿದ್ದಾಗ ಸಹಾಯಕ್ಕಾಗಿ ಹೋಗುತ್ತಿದ್ದರೆಂದು ತಿಳಿದುಬರುತ್ತದೆ.

ಚಿಕ್ಕರಮನೆ ಭವಾನಿ ಶಂಕರ ಎಂಬುವವರು ಒಂದು ಸಣ್ಣ ಚಿದಾನಂದೇಶ್ವರ ದೇವಸ್ಥಾನವನ್ನು ಗೋಕರ್ಣದ ಕೋಟಿ ತೀರ್ಥದ ಹತ್ತಿರ ನಿರ್ಮಿಸಿದ್ದಲ್ಲದೆ ಈ ದೇವರಿಗೆ ಗೋಕರ್ಣದ ಭಟ್ಟರನ್ನು ನೇಮಿಸಿದ್ದರು.

ಕ್ರಿ.ಶ. ೧೭೦೪ರಲ್ಲಿ (ಕೆಳದಿ ರಾಜಧಾನಿ ಬಿದನೂರು ನಂತರ ನಗರವಾಯಿತು) ನಗರದಿಂದ ಕೆಳದಿ ಸೋಮಶೇಖರನು ಆಡಳಿತ ನಡೆಸುತ್ತಿದ್ದನು. ಇವನ ಆಡಳಿತಕ್ಕೆ ದಕ್ಷಿಣ ಕನ್ನಡ, ಉತ್ತರ ಕನ್ನಡದ ಹಲವು ಪ್ರದೇಶಗಳು ಒಳಗೊಂಡಿತ್ತು. ಅವನ ಆಡಳಿತದ ಕುರುಹಾಗಿ ಇಂದು ಆ ಜಿಲ್ಲೆಗಳಲ್ಲಿ ಸಾಕಷ್ಟು ಅವಶೇಷಗಳು ಉಳಿದುಬಂದಿವೆ. ಅಂತೆಯೇ ಹೊನ್ನಾವರ ತಾಲೂಕಿನ ಮಂಕಿಮಡಿಯಲ್ಲಿಯೂ ಸಹ ಆ ಕಾಲದ ಕೋಟೆಯ ಅವಶೇಷವಿದೆ. (ಈ ಮಂಕಿಮಡಿಯು ಹೊನ್ನಾವರದಿಂದ ದಕ್ಷಿಣಕ್ಕೆ ಸುಮಾರು ೧೨ ರಿಂದ ೧೫ ಮೈಲು ದೂರದಲ್ಲಿದೆ.) ಇದರ ಜೊತೆಗೆ ಅಂದಿನ ಕಾಲದ ಹಲವು ದೇವಾಲಯಗಳ ಅವಶೇಷಗಳು ಅಲ್ಲಿವೆ. ಅವುಗಳಲ್ಲಿ ಮುಖ್ಯವಾಗಿ ಶ್ರೀ ಭದ್ರಾಂಬಿಕೇಶ್ವರನ ದೇವಸ್ಥಾನವನ್ನು ಉಲ್ಲೇಖಿಸಬೇಕಾಗುತ್ತದೆ. ಸೋಮಶೇಖರ ನಾಯಕನು ಹೊನ್ನಾವರದ ಕಡೆ ಬಂದಾಗ ಈ ಕೋಟೆಯಲ್ಲಿದ್ದ ಅರಮನೆಯಲ್ಲಿ ಉಳಿಯುತ್ತಿದ್ದನೆಂದೂ, ಅಲ್ಲದೆ ತನ್ನ ಹಿತಚಿಂತಕನೂ, ವಿಶ್ವಾಸಿಯೂ ಆದ ಗಣಪಣ್ಣನೆಂಬವನಿಗೆ ತನ್ನ ಈ ಚಿಕ್ಕ ಅರಮನೆಯ ಅಧಿಕಾರವನ್ನು ಕೊಟ್ಟಿದ್ದನೆಂದು ಪ್ರತೀತಿಯಿದೆ. ಅಂದಿನಿಂದ ಚಿಕ್ಕರಮನೆ ಎಂಬ ಉಪನಾಮವು ಗಣಪಣ್ಣನ ಕುಟುಂಬಕ್ಕೆ ಬಂದಿದೆ ಎಂದು ತಿಳಿದುಬರುತ್ತದೆ.

ಒಮ್ಮೆ ಈ ಚಿಕ್ಕರಮನೆಕಾರರು ಕಾಶಿಯಾತ್ರೆಗೆ ಹೋಗಿ ಮರಳಿ ಬರುವಾಗ ಒಂದು ಶಿವಲಿಂಗವನ್ನು ತಂದಿದ್ದರು. ಇಲ್ಲಿ ಅದೇ ಸಮಯದಲ್ಲಿ ಸೋಮಶೇಖರ ನಾಯಕನ

ಮೆಚ್ಚಿನ ಮಡದಿಯಾದ ಭದ್ರಾಂಬೆಯು ಅತಿಶಯವಾದ ಬೇನೆಯಿಂದ ಬಳಲುತ್ತಿದ್ದಳು. ಸೋಮಶೇಖರ ನಾಯಕನು ಅನೇಕ ಪಂಡಿತರನ್ನು ಕರೆಸಿ ಔಷದೋಪಚಾರ ಮಾಡಿಸಿದರೂ ಯಾವುದೇ ಪ್ರಯೋಜನ ಕಾಣಲಿಲ್ಲ. ಭದ್ರಾಂಬೆಯ ರೋಗವನ್ನು ಗುಣಪಡಿಸುವುದರಲ್ಲಿ ಅವುಗಳೆಲ್ಲಾ ವಿಫಲವಾಗಿತ್ತು. ಆಗ ಚಿಕ್ಕರಮನೆಕಾರರು ಗಿಡಮೂಲಿಕೆ ಔಷಧಗಳಿಂದ ಆ ಕಠಿಣ ರೋಗವನ್ನು ಗುಣಪಡಿಸಿದರು. ಇದರಿಂದ ಸಂತೋಷಗೊಂಡ ಸೋಮಶೇಖರನಾಯಕನು ಗಣಪಣ್ಣನಿಗೆ ಏನು ಬೇಕಾದರೂ ಕೇಳಿಕೊಳ್ಳಲು ಅವಕಾಶವಿತ್ತನು. ಆಗ ಗಣಪಣ್ಣನು ತಾನು ಕಾಶಿಯಿಂದ ತಂದ ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಬೇಕೆಂದು ಆಶೆಯನ್ನು ವ್ಯಕ್ತಪಡಿಸಿದನಂತೆ. ಅದನ್ನು ಕೇಳಿದ ಸೋಮಶೇಖರನಾಯಕನು ಈಶ್ವರ ಹೆಸರು ಬರುವಂತೆ ಅದರ ಮುಂದೆ ತನ್ನ ಹೆಂಡತಿಯ ಹೆಸರಾದ ಭದ್ರಾಂಬೆಯ ಹೆಸರನ್ನು ಮೊದಲ್ಗೊಂಡು ಅವನಿಷ್ಟದೇವರ ಪ್ರತಿಷ್ಠಾಪನೆ ಮಾಡಲು ಒಪ್ಪಿಗೆಯಿತ್ತನು. ಅದರಂತೆ ಗಣಪಣ್ಣನು 'ಶ್ರೀ ಭದ್ರಾಂಬಿಕೇಶ್ವರ' ಎಂಬ ಹೆಸರಿನಿಂದ ಕಾಶಿಯಿಂದ ತಂದ ಶಿವಲಿಂಗವನ್ನು ಪ್ರತಿಷ್ಠಾಪಿಸಿದರು.

ಭದ್ರಾಂಬಿಕೇಶ್ವರ ದೇವಸ್ಥಾನವು ಪೂರ್ವಾಭಿಮುಖವಾಗಿದ್ದು ಪಶ್ಚಿಮಕ್ಕೆ ಸಮುದ್ರ, ದಕ್ಷಿಣೋತ್ತರವಾಗಿ ಪರ್ವತಗಳ ಸಾಲು ಇದೆ. ಸೋಮಶೇಖರ ನಾಯಕನು ದೇವರ ವಿನಿಯೋಗಕ್ಕೆ ಭೂಮಿಯನ್ನು ದಾನ ಮಾಡಿರುವ ಕುರಿತು ನಿರೂಪವೊಂದಿದೆ. ಈ ದೇವಾಲಯವನ್ನು ದಿನಾಂಕ ೧೮.೦೫.೧೯೯೬ರಲ್ಲಿ ಮತ್ತೊಮ್ಮೆ ಚಿಕ್ಕರಮನೆ ಕುಟುಂಬದವರಿಂದ ದುರಸ್ತಿಗೊಳಪಡಿಸಲಾಗಿದೆ. ಅಲ್ಲದೆ ಅಷ್ಟಬಂಧ ಕಲಶಾರೋಹಣ ಮೊದಲಾದ ಕಾರ್ಯಕ್ರಮಗಳನ್ನು ನಡೆಸಲಾಗಿದೆ.

ದೇವಾಲಯ ನಿರ್ಮಾಣವಾದ ಪ್ರಾರಂಭದಲ್ಲಿ ದೇವಾಲಯದ ಅರ್ಚಕರು ಕರ್ಹಾಡ (ಮರಾಠ ಬ್ರಾಹ್ಮಣರು) ಸನಾತನದವರಾಗಿದ್ದರೆಂದು ದೇವಾಲಯದಲ್ಲಿ ಬಳಕೆಯಲ್ಲಿರುವ ಪ್ರಾರ್ಥನಾ ಪದ್ಯಗಳಿಂದ ತಿಳಿದುಬರುತ್ತದೆ. ಕಾಲಕ್ರಮದಲ್ಲಿ ಯಾವುದೋ ಕಾರಣದಿಂದ ಇವರಲ್ಲೊಬ್ಬರ ರೀತಿಬಾಹಿರ ನಡವಳಿಕೆಗಳು ಚಿಕ್ಕರಮನೆಕಾರರಿಗೆ ಕನಸಿನಲ್ಲಿ ತಿಳಿದುಬಂದು ಆ ಬಗ್ಗೆ ತನಿಖೆ ನಡೆಸಿ ಅದು ಸತ್ಯವೆಂದು ದೃಢವಾದ್ದರಿಂದ, ಅನಂತರದಲ್ಲಿ ಸಾರಸ್ವತ ಅರ್ಚಕರನ್ನು ನೇಮಿಸಿರುವುದಾಗಿ ತಿಳಿದುಬರುತ್ತದೆ. ಇದು ಸುಮಾರು ೦ ವರ್ಷಗಳ ಹಿಂದೆ ನಡೆದಿರಬಹುದೆಂದು ತಿಳಿದುಬರುತ್ತದೆ. ಅಲ್ಲಿಂದ ಮುಂದೆ ಅದೇ ಸಾರಸ್ವತ ಅರ್ಚಕರು ವಿರೋಧಿ ಸಂವತ್ಸರದಿಂದ ಸರಾಗವಾಗಿ ನಡೆಸಿಕೊಂಡು ಬರುತ್ತಿರುವುದಾಗಿ ತಿಳಿದುಬರುತ್ತದೆ. ಚಿಕ್ಕರಮನೆಕಾರರು ಹಿಂದಿನಿಂದ ಇಂದಿನ ತನಕ ಶ್ರೀ ಭದ್ರಾಂಬಕೇಶ್ವರನನ್ನು ತಮ್ಮ ಇಷ್ಟದೇವರೆಂದು ಪೂಜಿಸುತ್ತ ಬರುತ್ತಿದ್ದಾರೆ. (ಗಣೇಶ ಮಂಜುನಾಥ ಭಟ್ ಸೌಕೂರ ಮಂಕಿಮಡಿ ಸೌಮ್ಯ ಸಂವತ್ಸರದ ವೈಶಾಖ ಶುಕ್ಲ ೧೪ ಗುರುವಾರ)

**ತಾಮ್ರಶಾಸನದ ಯಥಾ ಪ್ರತಿ :** ಮೊದಲು ಅವರಲ್ಲಿ ತಾಮ್ರಶಾಸನ ಇತ್ತಂತೆ. ಈಗ ಅದು ಇಲ್ಲವಂತೆ. ಕಾಗದದಲ್ಲಿ ಬರೆದುಕೊಂಡಿರುವ ನಿರೂಪವೊಂದು ಅವರಲ್ಲಿ ಸಿಗುತ್ತದೆ. ಅದೂ ಹೆಚ್ಚು ಕಮ್ಮಿ ಇತ್ತೀಚಿನ ಐವತ್ತು ಅರವತ್ತು ವರ್ಷಗಳ ಹಿಂದೆ ಬರೆದಿಟ್ಟುಕೊಂಡಿರುವುದು. ಅದರ ಮೂಲ ಪ್ರತಿಯನ್ನು ೧೮೭೩ರಲ್ಲಿ ಚಿಕ್ಕರಮನೆ ಮಂಗೇಶಯ್ಯನವರು ದಾವಾದಲ್ಲಿ ಹೊನ್ನಾವರ ಕೋರ್ಟಿನಲ್ಲಿ ಹಾಜರುಪಡಿಸಿರುವುದಾಗಿ ತಿಳಿದುಬರುತ್ತದೆ.

**ನಿರೂಪದ ಪಾಠ :** ಕ್ರೋಧಿ ಸಂವತ್ಸರ ಪುಷ್ಯ ಶುದ್ಧ ೧ ಶ್ರೀ ಮತ್ಕೆಳದಿಸೋಮಶೇಖರ ನಾಯಕರು ಸುಬ್ಬಗೆ ಬರಸಿ ಕಳುಹಿದ ಕಾಗದ. ಚಿಕ್ಕರಮನೆ ಗಣಪಂಣನು ಹುಜುರು ಬಂದು ಮಂಕಿ ಸೀಮೆ ಹೊನಾಡಗ್ರಾಮದ ಮಡಿಸ್ತಳದಲ್ಲು ಸಮುದ್ರ ತೀರದಲ್ಲಿ ದೇವಸ್ತಾನ ಕಟ್ಟಿಸಿ ಭದ್ರಾಂಬಿಕೇಶ್ವರ ದೇವರ ಪ್ರತಿಷ್ಠೆ ಮಾಡುತ್ತೇನೆ. ಈ ದೇವರ ಅಮೃತಪಡಿ ನಂದಾದೀಪ್ತಿ ಬೇರೆ ತಾನು ನಡೆಸುವ ಧರ್ಮದ ಬಗ್ಯೆ ಸಹಕ್ರಯ ಕೊಟ್ಟೇನು. ಸ್ವಾಸ್ತಿ ಉತಾರವ ಕೊಡಬೇಕೆಂದು ನಿರ್ವಾಣಯ್ಯ ಮಾವನವರು ಹೇಳಿದ ಸಂಬಂಧ ಯಿ ಗಣಪಂಣನ ಕೈಯ ಕ್ರಯ ೩೦೩ ॥=೮॥ ಮುಂನೂರಾ ಮೂರು ವರಹಂನು ಯಂಟು ಹಣ ಮುಪ್ಪಾಗವನ್ನು ಅರಮನೆಗೆ ತೆಗೆದುಕೊಂಡು ಉತಾರವ ಕೊಟ್ಟೆನು. ಮಂಕಿಸೀಮೆ ಸ್ಥಳ ಶೆನಬೋವ ಬರಕೊಟ್ಟ ಚಪ್ಪು ಪ್ರಮಾಣ ಯಿ ಸೀಮೆ ಹೊನಾಡ ಗ್ರಾಮದಿಂದ ಮಡಿಸ್ತಳದ ಶಿಸ್ತಿನಿಂದ ಗ ॥ ೧೯೨೦ ಪ್ರಾಕು ನಿಲ್ಲಸ್ತ ನಷ್ಟದಿಂದಾ ಗ ೩/೩॥= ಉಭಯಂ ಗ ೧೩॥೦॥=ಸ್ತಳದಿಂದಾ ಸಿಸ್ತಿನಿಂದ ಗ ೧೫॥೩॥= ನಿಲ್ಲಿಸ್ತ ಸಷ್ಟದಿಂದ ೪॥= ಉಭಯಂ ಗ ೧೬॥ ಉಭಯಂ ಗ ೩೦/೩= ಗೆ ವಿವರಾ ಅ ಸಿಸ್ತಿನಿಂದ ಗ ೨ ನಿಲಿಸ್ತ ನಷ್ಟದಿಂದ ಗ ೪/೩ ಉಭಯಂ ಗ ೩೦/೩॥= ಮೂವತ್ತು ವರಹಂನಾ ಅ ಮುಪ್ಪಾಗ ಬೆಳೆಯ ಸ್ವಾಸ್ತಿಯನು ಯಿ ಗಣಪಂಣನು ಹೊಸಾಡ ಗ್ರಾಮುದ ಮಡಿಸ್ತಳದಲ್ಲಿ ದೇವಸ್ತಾನವ ಕಟ್ಟಿಸಿ ಪ್ರತಿಷ್ಠೆ ಮಾಡುವ ಭದ್ರಾಂಬಿಕೇಶ್ವರ ದೇವರ ಅಮೃತ ಪಡಿ ನಂದಾದೀಪ್ತಿ ಬೇರೆ ನಡಿಸುವ ಧರ್ಮದ ಬಗ್ಗೆ ಸಹ ಶಿವಾರ್ಪಿತವಾಗಿ ಕೊಟ್ಟು ಯಿ ಭೂಮಿಗೆ ವಾಮನಮುದ್ರೆ ಶಿಲಾಸ್ಥಾಪಿತವ ಮಾಡಿಸುವಲ್ಲಿಗೆ ಹುಜುರಿಂದ

ಉಳಿಗದ ಸಂದ ಕಳುಹಿಸಿದ್ದೇವೆ ಚೌಗ್ರಾಮದವರ ಕರಿಶಿ ಕೊಂಡು ಗಡಿತಕರಾರು ಬಾರದ ರಿತಿ ಯಿವನ ಮುಂಡಿಟ್ಟು ದೇಶ ಪ್ರಮಾಣ ಭೂಮಿಗೆ ಶಿಲಸ್ಥಾಪಿತ ಮಾಡಿಶಿಕೊಟ್ಟು ೩ಮಿ ಕಾಗದ ಶೇನಬವರ ಕಡಿತಕ್ಕೆ ಬರಿಶಿ ಶಿರಿಗಿ ಇವನ ಹಸ್ತ ಕೊಡುವದಾಗಿ....

ಗಣಪಣ್ಣ ಸ್ಮಾರ್ತ ಭಾಗವತ ಸಂಪ್ರದಾಯದವರು. ನಿರ್ವಾಣಯ್ಯ ಕೆಳದಿ ಕಿರಿಯ ಸೋಮಶೇಖರ ನಾಯಕನ ಮಂತ್ರಿ ಹಾಗೂ ಮಾವ. ಇವನ ಕಾಲ ೧೭೨೪ (ಸಾ.ಶಿ. ಮರುಳಯ್ಯ, ಸಂಶೋಧನೆ ಪುಟ ೪೫೪,೪೫೫,೪೫೬) ಶಿವಪ್ಪನಾಯಕನ ಹೆಂಡತಿ ಭದ್ರಮ್ಮಾಜಿ. ಈ ಚಿಕ್ಕರಮನೆ ಪೀಳಿಗೆಯವರು ಶೃಂಗೇರಿ ಮಠ ಸಂಪ್ರದಾಯಕ್ಕೆ ಸೇರಿದ ಚಿತ್ರಾಪುರ ಮಠಕ್ಕೆ ಸೇರಿದವರಾಗಿದ್ದಾರೆ.

**ಈ ಭದ್ರಾಂಬಿಕೇಶ್ವರ ದೇವಾಲಯದಲ್ಲಿ ಪ್ರಚಲಿತವಿರುವ ಪುಷ್ಪಾಂಜಲಿಗಳು**

**ಪದ್ಯ ೧**

ಪೊರೆಯೋ ಶಂಕರ, ಭದ್ರಾಂಬಿಕೇಶ್ವರ ॥ ಪ ॥
ಪೊರೆಯೋ ಶಂಕರ ಭದ್ರಾಂಬಿಕೇಶ್ವರ
ಶರಣಾಗತರ ಕರುಣಾ ನಿಧಿಯೇ ॥ ಅ ॥ ಪ ॥
ನೀಲಕಂಠ ನಿಗಮವಂದ್ಯ । ಶೂಲಡಮರು ಕಪಾಲಧರನೆ
ಫಾಲನಯನ ಇಂದು ಮೌಳೀ । ವ್ಯಾಲಭೂಷಲಾಲಸರಿಕೆ ॥ ೧ ॥
ನಗರ ಸಂಸ್ಥಾನದಿಂದ । ಲಗುವೆ ಜಹಾಗೀರಿ ದೊರೆವ
ಜಗದೊಳು ಚಿಕ್ಕರಮನೆಯ । ಗಣಪಣ್ಣನು ಸ್ಥಾಪಿಸಿದರಿಂ ॥ ೨ ॥
ಚಂದ್ರ ಚೂಡ ಭೂಪ ಬಂದು । ಭಕ್ತಿಯಿಂದ ನಿನ್ನ ಭಜಿಸಿ
ಕಾಮಿತಾರ್ಥವನ್ನೆ ಪಡೆದ । ಹಾನೆ ನಿನ್ನ ಕೃಪೆಯೊಳು ॥ ೩ ॥
ಇಷ್ಟ ದೇವರೆಂದು ನಿನ್ನ । ನಿಷ್ಠೆಯಿಂದ ಭಜಿಸಿ
ನಿತ್ಯ ಶ್ರೇಷ್ಠವಾದ ವಸ್ತ್ರಗಳನು । ಪ್ರೇಮದಿಂದ ಅರ್ಪಿಸಿಹನು ॥೪॥
ಕಾಣಿಕೆಯನುಕೊಟ್ಟು ಇಷ್ಟ । ಭೂಪ ಪೌತ್ರರಿಗೆ ತರಿಸಿ
ನಿನ್ನ ಪಾದ ಮೆಚ್ಚುವಂತೆ । ಸೇವೆಗೊಂಡು ಕರುಣಿಸಿರುವ ॥೫॥
ಕಪ್ಪು ಗೊರಳ ದೇವದೇವ । ಎನ್ನ ತಪ್ಪುಗಳನು ಕ್ಷಮಿಸು
ಗುರುವಾಗಿಹ ಪಾಂಡುರಂಗನೀ । ನಪ್ಪವಾಗಿ ಕರುಣೆಯಿಂದ॥೬॥

**ಪದ್ಯ ೨**

ಬಣ್ಣಿಸಲ್ವ್ಯಾಗೆ ನಾ ನಿನ್ನನು, ಕಣ್ಣಿಂದ ನೋಡಿ ನಾ ॥ಪಲ್ಲ॥
ಬಣ್ಣಿಸಲ್ವ್ಯಾಗೆ ಕಣ್ಣಿಂದ ನೋಡಿ ಪುಣ್ಯ ಮಾರುತಿ ಮುಕ್ಕಣ್ಣ ಸ್ವಾಮಿಯೆ
ನಗರ ರಾಜನಾಗಿ ಮೆರೆದ ಜಗದೊಳ್ ಖ್ಯಾತ ಸೋಮಶೇಖರ
ಅಗಜೆಯಪತಿ ನಿನ್ನನು ಲಗುವೇ ಸ್ಥಾಪಿಸಿದರಿಂ ॥ ೨ ॥
ಚಿಕ್ಕರಮನೆಯ ಗಣಪಣ್ಣಗೆ ಇಕ್ಕರಿಸಿದ ಪಾರುಪತ್ಯ
ತತ್ಕಾಲಕೆಕರ್ಥಾಡಿಭಟರೇ ಚೊಕ್ಕವೆಂದು ಸೇವೆಗೊಂಡಂಥ ॥ ೩ ॥
ಸಾರಸ್ವತ ಕುಲದ ವಿಪ್ರ ಮಂಜುನಾಥನಿಂದ ಪೂಜೆ
ವಿರೋಧಿ ಸಂವತ್ಸರದಿಂದ ಸರಾಗವಾಗಿ ನಡೆಸಿ ಕೊಂಬುವ ॥೪॥
ಸರ್ವರಿಗೂ ಸನ್ಮತಿ ಇತ್ತು ಸರ್ವದಾ ನೀ ರಕ್ಷಿಸುತಿಹೆ
ಸಾರ್ವಭೌಮ ಭದ್ರಾಂಬಿಕೇಶ ಭುವಿಯೊಳಗೆ ಮಡಿಪುರೇಶ ॥೫॥

**ಪದ್ಯ ೩ ರಾಗ ಆನಂದ ಭೈರವಿ**

ನೋಡಿದೆ, ಭದ್ರಾಂಬಿಕೇಶಾ ನಾಡಿಗಧಿಕಮಡಿ ಪುರೇಶ ।
ನೋಡಿದೆ, ಕೀರ್ತಿಯ ಪಾಡಿದೆ ॥ ಪಲ್ಲ ॥
ಒಂದೊಮ್ಮೆ ನಿನ್ನದೊಳ್ ನಿಂತು ಪೊಗಳದಂತೆ ಜಗದೊಳ್
ಮೆರೆಸಿದೆ । ನೀನೆ ಭರಿಸಿದೆ ॥ ೧ ॥
ಚಿಕ್ಕರಮನೆಯ ಜನರೊಳುಕ್ಕಿಹ ಕರುಣಾ ದೃಷ್ಟಿಯೊಳ್
ಕಾವನೇ ಮಹಾದೇವನೇ ॥ ೨ ॥
ಗಂಗೆಯ ಪೊತ್ತಿಹ ಮಹಾಲಿಂಗ ನೀನೆಯೆಂದು
ಸರ್ವರು ಪೊಗಳುತಿಹರು ॥ ೩ ॥
ಕಂದುಗೊರಳ ನಂದಿಯೇರಿ ಬಂದಿರ್ಪಂತ ಕಂದರ್ಪಾರಿ
ನೀನೆಂದುನುತಿಸುವೆ ನಾನಿಂದು ॥ ೪ ॥
ವರಿದೌತಾಂಬರದೊಳ್ನಿಂದ ಗುರುಪಾಂಡುರಂಗನಾನಂದ
ಭರಿತನೇ, ಪುಣ್ಯಚರಿತನೇ ॥ ೫ ॥

**ಪದ್ಯ ೫ (ಮಂಗಲ ಪದ್ಯ)**

ಮಂಗಲಂ ಭದ್ರಾಂಬಿಕೇಶ್ವರಗೆ । ಮಂಗಲಂ ಸುಜನ ವಂದಿತಪದಗೆ
ಮಂಗಲಂ ವಿಭುದಾವಳಿ ಪೂಜಿತಗೆ । ಮಂಗಲಂ ಸದ್ಗುರು
ಶಂಕರಗೆ । ಮಂಗಲಂ ಜಯ ಮಂಗಲಂ ॥ ೧ ॥
ಕಿಡಿಗಣ್ಣ ಕೆಂಜಡೆ ಹೊತ್ತವಗೆ । ಉಡುಗಣಾಧಿಪನ ಮುಡಿದವಗೆ
ಮಡಿಯೊಳು ನಿಂತು ತಾನೊಲಿದು ಭಕ್ತರ ಕಾಯ್ವಮೃಡನಾಗಿಹ
ಮಹೇಶನಿಗೆ । ಮಂಗಲಂ ಜಯ ಮಂಗಲಂ ॥ ೨ ॥
ಪುಲಿದೊಗಲನು ಹೊತ್ತು ಮೆರೆದವರೆ । ಕುಲಭೇದವನರಿಯದವಗೆ
ಹಲವು ಭೂತಾಳಿಗಳೊಡನಾಡಿ ನಲಿವಗೆ । ಚೆಲುವ ಚಿತಾಭಸ್ಮ
ಭೂಷಿತಗೆ । ಮಂಗಲಂ ಜಯ ಮಂಗಲಂ ॥ ೩ ॥
ಬಸವನೇರಥಮಾಡಿ ಕುಳಿತವಗೆ । ರತಿ ಪತಿಯನು ಮರ್ದಿನಿವಗೆ
ಸತಿ ಸಹಿತಲೆ ಭೂತಲಕೆ ತಾ ಬಂದು ನಿಜ ಭಕ್ತ ಗಣಪಣ್ಣ
ಗೊಲಿದವಗೆ । ಮಂಗಲಂ ಜಯ ಮಂಗಲಂ ॥ ೪ ॥
ನಾಗಚರ್ಮಂಬರ ಭೂಷಿತಗೆ । ನಾಗಕುಂಡಲ ವಿಭೂಷಿತಗೆ ।
ನಾಗೇಂದ್ರ ಧ್ವಜನುತ ನಾಗಾನನಪಿತ । ನಾಗೇಂದ್ರಮಣಿ ಹಾರ
ಭೂಷಿತಗೆ । ಮಂಗಲಂ ಜಯ ಮಂಗಲಂ ॥ ೫ ॥
ತರತರದಲಿ ಕೀರ್ತಿಯಗೊಂಬಾ । ಗುರುಪಾಂಡುರಂಗನೊಳ್
ಪ್ರೀತಿಬಿಂಬಾ । ಎರಕವಾಗಿಹ ಸೋಮಶೇಖರ ಭೂಪನ ಪೊರೆದ
ಭದ್ರಾಂಬಿಕೇಶ್ವರನಿಗೆ । ಮಂಗಲಂ ಜಯ ಮಂಗಲಂ ॥ ೬ ॥

ಹೀಗೆ ಈ ದೇವಾಲಯದಲ್ಲಿ ಹಲವು ಪ್ರಾರ್ಥನಾ ಪದ್ಯಗಳು ಈಗಲೂ ಪ್ರಚಲಿತವಿದೆ.

(ಈ ಲೇಖನವನ್ನು ಸಿದ್ಧಪಡಿಸುವಲ್ಲಿ ನನಗೆ ಶ್ರೀ ಎಸ್.ಎಂ. ಚಿಕ್ಕರಮನೆ, ಐ.ಆರ್.ಎಸ್., ಬೆಂಗಳೂರು ಇವರು ಛಾಯಾಚಿತ್ರವನ್ನು ಒದಗಿಸಿದ್ದಾರೆ. ಶ್ರೀ ಸಂಕರ್ಷಣ ಗುರುದತ್ತ ಶುಕ್ಲ, ಶಿರಾಲಿ. ಚಿತ್ರಾಪುರ ಮಠ ಇವರು ಈ ಕುಟುಂಬದ ವಂಶವೃಕ್ಷವನ್ನು ಒದಗಿಸುವುದರ ಜೊತೆಗೆ ನನಗೆ ಈ ಲೇಖನ ಸಿದ್ಧಪಡಿಸುವಲ್ಲಿ ಸಾಕಷ್ಟು ಮಾಹಿತಿಯನ್ನು ಒದಗಿಸಿದ್ದಾರೆ. ನನ್ನ ತಂದೆ ಶ್ರೀ ಕೆಳದಿ ಗುಂಡಾಜೋಯಿಸ್ ಮಾಹಿತಿ ನೀಡಿ ಸಹಕರಿಸಿದ್ದಾರೆ. ಕುವೆಂಪು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಈ ವಿಚಾರ ಸಂಕಿರಣದಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಇವರೆಲ್ಲರಿಗೂ ನಾನು ಅಭಾರಿಯಾಗಿದ್ದೇನೆ.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

ಹಳೆ ನಗರದ ಕೋಟೆಯ ಹತಿರ ಇರುವ ಇಂದು ಚರ್ಚ್ ಇರುವ ಸ್ಥಳವನು ಚಿಕ್ಕರಮನೆ ಎಂದು ಕರೆಯುವುದು ರೂಢಿಯಲ್ಲಿದೆ.

The original stock of these families seems to have settled in Shirali about the fifteenth century A.D One branch of it went to Chittar near Manki in Honavar and settled there and the main family stock removed itself to Kandlur in kundapur in the neighbourhood of Hattiangdi. Some members of the Kandlur family came back to settle at Shirali. One Narnappaya of this branch settled in a hamlet known as Ulman, about one and a half miles from Shirali, For three generations this family retained the name of Kandlur and thereafter it began to be called Ulman.

In the adoption deep made in 1860, executed by Subbaraya of this family his father is described as Kandlur Gopalaya, A member of this Shirali Kandlur family married a girl of the Mankikar family and thereafter settled at Manki and assumed the latter surname. The descendants of this branch now call themselves by the surname Wagle and Row. Another member of this kandlur family by name Rangappaya obtained the Talgeri land in Shirali about the year 1781 and thereafter became known as Talgeri Rangappaya's son became Keshavashram Swami of the Chitrapur Math. Kandlur and Talgeri families jointly owned lands in Shirali showing the relationshiip of the two families. One member of the Talgeri family went to Sagar to practise there as a pleader, but retained his original name. Another member who settled at Tavanandi in Sagar assumed this latter surname.

Some members of this family distinguished themselves as officers under Keladi Kings after the capital was removed to Nagar in 1654. The first member of the Kandlur family who went there became the Manevarte Heggade. (See para 71 of the Introduction to Part 1 for an explanation of the term Heggade.) Later on another member went there and became Ugranada Heggade, and a member of the Chittar branch who also went there became Chickaramane Heggade. After the downfall of the Keladi Kingdom, the Ugran and Manevarte families returned to Kundapur and the Chickermane family to Chittar. There are no members of the original Kandlur family in Kundapur or any where in South Kanara, their descendants viz, the Ugrankars and Tombatkars only exist there.

Some years after their return from Nagar a few members of the Ugran family returned to Shirali. Thus there are two branches of Ugrdan, one in Kundapur and the other in Shirali. The Tombat family is a branch of the Kundapur ugran, their progenitor being Ugranada Santaya who was a Shanbhog under in Tombat. Branches of the Chickeman family settled at karki in Honavar, at Nilekani in Sirsi and at Gokarn. The first two of these have assumed the local surname of Karki and Nilekani, but the last branch still retains the old name. Some members of the family residing in Chittar call themselves by that name. The Nilekani branch when it had first settled in Honavar was known as Sthalada Honavar (........) as is seen in some documents relating to the Gopalkrishna Temple of Honavar, this branch having taken a prominent part in establishing this temple. But after it permanently settled in Nilekani, the members have assumed the name of that place as surname. The family has also built a temple at Nilekani. Some members of Karki branch have recently assumed the surname Honavar. Thus the family has the following branches arranged alphabetically : 1. Chickarmane, 2. Chittar, 3. Honavar, 4. Kandlur, 5. Karki, 6. Manevarte, 7. Manki, including Wagle and Row, 8. Nilekani, 9. Talgeri, 10. Tavanandi, 11. Tombat, 12. Ugran and 13. Ulman.

Of these the Manervarte family has left no male issues. One Kandlur Anantaya of this branch materially helped in building up the Gopalkrishna Temple of Hattiangadi about the beginning of the seventeenth century and his grandson known as Manevare Anantaya took prominent part in the appoinment of the first and second Swamis of the Chitrapur Math in the years 1708 and 1720. This branch, it seems, was closely related to the Hattiangdi family of Vatsa Gotra.The Chickermane family seems to have played a prominent part in Nagar. The family temple of their Ishata Deva Bhadrambika at Chittar was built in 1724 with help of a grant received from the Nagar King and the family received an **Inam land in Ulvare by a deed of the year 1739** for maintaining a small standing army in Kanara to be placed at the disposal of the King when required.

Mr. Chickarmane Bhavanishankraya built a small Chidanandeshwar Temple near Kotitheerti, in Gokarn. The worship is conducetd by Gokarn Priests by turn. The Ugran family was one of the prominent familis which took part in the apointment of the first two Chitrapur Swamis. Ugranand Devappya was one of the signatories to the writing given to the first and the second Swamis. The original name of the whole group of 13 familis described above was, it seems, "Wagle" according to Goa records of Mangeshi tmple. This name has been assumed by a branch of the family.

**Ugran, Chickarmane and other related Families (No. 492)**

Chitrapur Sardaswat Series Saraswat Families, Part II by Shripad S. Talmaki Kanara Saraswat Association. Published on 1st Feb 1939.

The crown land in the Uluvari village belonging to the Gerasoppe chief Saluva Krishna also, included garden, house, a house site as known from an epigraph dated A.D. 1550 A.D. (KIVi No. 70. The crown land of Chennabahira Devi of Sangitapur in Batkala comprised Mekke, Suggipady fields as known from an inscription dated in the same year (ibid iii Pt. i No. 14) (western Karnataka - Itts Agrarian Relations 1500-1800 AD p. 79)

Usually, the crown lands were cultivated either by tenants or different individuals who received the lands as balike. For instance, the crown land in the Uluvari village (N.K.) was leased to tenants who paid rent known as Muli Geni. (SII Vii No. 269) In the saka era 1485 A.D. 1562 the Aramaneya Bhandara sthala situated in the place, Gopadi of the Kotesvara village was cultivated by one Anna Hattavara. (Ibid ix Pt. ii No. 675) (Western Karnataka Itts Agrarian Relations 1500-1800 AD p. 79)

The same things followed in the villages of Ulvari, Tonse and Uppuru, Manjesvaraand Kumbala as known from a paper document and a Kadatta dated Siddarti and Raktakshai Samvatsara (1739 and 1748 A.D.) (Chitrapura Basavappa Nayakana Bhasapatra, Heras A Sand of Basavappa Nayaka of Ikkeri PIHRC Xii p. 36-40 (1929). (Western Karnataka - Its Agrarian Relations 1500-1800 AD p. 123)

If an individual wanted to purchase nearby lands for some other purposes, he had to take the permission of the ruler. This has been illustrated in a paper documents belinging to the year A.D. 1739 and 1743. According to paper document dated 1739, one Anantayya of manavarte, personally approached to Keladi ruler) and applied for the Uttara of Jadinasthala in the Uluvari village of Saiganahalli Magani of Medje Sime, for construction of the Bhavani Sankara Matha at Bandageri, near Kotitirtha in Gokarna. (A copy of paper docuent of Basavappa Nayaka found in the Chitrapura Matha at Sirali N.K. Fifty years Bliss (Ed. by H. Gopal Rao) pp. 327-28. and (Western Karnataka-Itts Agrarian Relations 1550-1800 AD p. 79)

ಹೊನ್ನಾವರದಿಂದ ದಕ್ಷಿಣಕ್ಕೆ ಮಂಕಿಮಡಿ ಸುಮಾರು ೧೨-೧೫ ಮೈಲು ದೂರದಲ್ಲಿದೆ.

ಡಾ. ಡಿ.ಜಿ. ಕುಲಕರ್ಣಿ*

# ಹಾನಗಲ್ಲ ನಾಡಹಬ್ಬ

ಹಾವೇರಿ ಜಿಲ್ಲೆಯ ಹಾನಗಲ್ಲು ಎಂದಾಕ್ಷಣ ಕೆಲವು ಸಂಗತಿಗಳು ತಕ್ಷಣ ನೆನಪಿಗೆ ಬರುತ್ತವೆ. ಪಾಂಡವರ ಕಾಲದ ವಿರಾಟನಗರವೆಂದೂ, ಕಲ್ಯಾಣದ ಚಾಲುಕ್ಯರ ಮುಖ್ಯ ಸಾಮಂತರಾಗಿ ೩೦೦ ವರ್ಷಗಳ ಕಾಲ ಆಳ್ವಿಕೆ ನಡೆಸಿದ ಹಾನಗಲ್ಲ ಕದಂಬರ ಕಾರ್ಯ ಕ್ಷೇತ್ರವೆಂದೂ, ಜೊತೆಗೆ ಕದಂಬರ ಕೊಡುಗೆಗಳಾದ ಹಾನಗಲ್ಲಿನ ಐದು ಸುತ್ತಿನ ಕೋಟೆ, ತಾರಕೇಶ್ವರ, ಬಿಲ್ಲೇಶ್ವರ ದೇವಾಲಯಗಳು, ಭೂಮಿಜ ಶೈಲಿಯ ಶಿಖರವನ್ನು ಹೊಂದಿದ ಅಪರೂಪದ ಗಣಪತಿ ದೇವಾಲಯ ನೆನಪಾಗುತ್ತವೆ. ಇನ್ನು ಆಧುನಿಕ ಕಾಲಕ್ಕೆ ಬಂದರೆ ಅಂಧರ ಬಾಳಿಗೆ ಬೆಳಕನ್ನು ನೀಡಿದ ಮಹಾನ್ ಚೇತನ ಶ್ರೀ ಕುಮಾರ ಸ್ವಾಮಿಗಳು, ಪ್ರಸಿದ್ಧ ಸಂಗೀತಗಾರರಾದ ಲಿಂಗೈಕ್ಯ ಪಂಡಿತ ಪಂಚಾಕ್ಷರಿ ಗವಾಯಿಗಳು, ಹಿಂದೂಸ್ತಾನಿ ಸೇವಾ ದಳದ ಸ್ಥಾಪಕರಾದ ನಾ.ಸೂ. ಹರ್ಡಿಕರ, ಸಂಗೀತ ವಿದೂಷಿ ಡಾ. ಗಂಗೂಬಾಯಿ ಹಾನಗಲ್ಲ ನೆನಪಿಗೆ ಬರುತ್ತಾರೆ. ಹೀಗೆ ಹಾನಗಲ್ಲು ಹಲವಾರು ಪ್ರಸಿದ್ಧ ವ್ಯಕ್ತಿಗಳನ್ನು, ಸಂಗತಿಗಳನ್ನು ತನ್ನೊಡಲಲ್ಲಿ ಹುದುಗಿಸಿಕೊಂಡಿದೆ. ಇದೇ ನಿಟ್ಟಿನಲ್ಲಿ ಹಾನಗಲ್ಲಿನಲ್ಲಿ ಪ್ರತಿ ವರ್ಷ ಆಶ್ವೀಜ ಮಾಸ ಪಾಡ್ಯದಿಂದ ವಿಜಯದಶಮಿವರೆಗೂ ನಡೆಯುವ ನಾಡಹಬ್ಬವು ಸ್ತುತ್ಯಾರ್ಹ. ೧೯೩೬ರಿಂದ ಇಂದಿನವರೆಗೂ ೭೧ ವರ್ಷಗಳ ಕಾಲ ಅವ್ಯಾಹತವಾಗಿ ಸರಕಾರಕ್ಕೆ ಕೈಚಾಚದೆ, ಊರಿನವರೇ ಕೂಡಿಕೊಂಡು ನಾಡಹಬ್ಬವನ್ನು ನಡೆಸಿಕೊಂಡು ಬಂದಿದ್ದಾರೆ ಎಂಬುದು ಇಲ್ಲಿ ಗಮನಾರ್ಹ ಸಂಗತಿ.

ಕರ್ನಾಟಕದಲ್ಲಿ ನಾಡಹಬ್ಬದ ಆಚರಣೆಗೆ ವಿಜಯನಗರ ಕಾಲದ ನವರಾತ್ರಿ ಉತ್ಸವ ಕಾರಣ ಎಂದು ಕಂಡುಬಂದರೂ ಆ ನವರಾತ್ರಿ ಹಬ್ಬ ನಾಡಹಬ್ಬವಾಗಿ ರೂಪಗೊಂಡಿದ್ದು ೧೯೨೬ರಲ್ಲಿ. ಧಾರವಾಡದ ವರಕವಿ ಬೇಂದ್ರೆ ಹಾಗೂ ಅವರ ಗೆಳೆಯರಾದ ಶಂಭಾ ಜೋಶಿ, ಸಿಂಪಿ ಲಿಂಗಣ್ಣ, ಗೋಕಾಕ, ರಂ.ಶ್ರೀ. ಮುಗಳಿ ಮುಂತಾದವರು ನಾಡಹಬ್ಬ ರೂಪಗೊಳ್ಳಲು ಕಾರಣರಾದರು. ಮುಂದೆ ಇದು ಬೇರೆ ಬೇರೆ ಊರುಗಳಲ್ಲಿ ವಿಸ್ತರಿಸತೊಡಗಿತು.

ನಾಡಹಬ್ಬದ ಘನತೆ, ವೈಭವಗಳ ಕುರಿತು ಬೇಂದ್ರೆ ಅವರು ಈ ಕೆಳಗಿನಂತೆ ಹೇಳಿದ್ದಾರೆ. "ನಾಡಹಬ್ಬವು ರಾಷ್ಟ್ರೈಕ್ಯದ, ಭೂಮಂಡಲೈಕ್ಯದ ತ್ರಿಲೋಕೈಕ್ಯದ ಕುರುಹಿನ ಹಬ್ಬ ಪರ್ವ. ಶ್ರೀ ಕೃಷ್ಣನಿಗೆ ಪಂಚಪ್ರಾಣರಾದ ಪಾಂಡವರ ಹಿರಿಯ ಧರ್ಮರಾಜನನ್ನು ರತ್ನಸಿಂಹಾಸನದಲ್ಲಿ ಪಟ್ಟಗಟ್ಟಿದಾಗ 'ಸತ್ಯಮೇವ ಉದ್ಧರಾಮ್ಯಹಂ' ಎಂಬ ಬಿರುದಿನ ಈ ಹಬ್ಬವು ರೂಪಗೊಂಡಿತು. ಆ ರತ್ನ ಸಿಂಹಾಸನವು ಶಕಕರ್ತ ವಿಕ್ರಮನಿಗೂ ಮುಂದೆ ಭೋಜರಾಜನಿಗೂ, ಅವನಿಂದ ಕರ್ನಾಟಕದಲ್ಲಿ ಹೊಯ್ಸಳ, ವಿಜಯನಗರದ ನರಪತಿರಾಜರು, ಅವರಿಂದ ಶ್ರೀರಂಗರಾಯರ ಮುಖಾಂತರ ತಲಕಾಡಿನಲ್ಲಿ ಮೈಸೂರಿನ ರಾಜ ಒಡೆಯರ ಕೈ ಸೇರಿತು. ಮಹಾನವಮಿಯ ಹಬ್ಬವನ್ನು ವಿಜಯನಗರದ ಅರಸರು ಪಾಲಿಸುತ್ತಿದ್ದರು. ಮೈಸೂರು ಒಡೆಯರು ಅದನ್ನು ಜಂಬೂಸವಾರಿ ಹಬ್ಬವಾಗಿ ಮೆರೆಯಿಸಿದರು." ಎಂದು ಬೇಂದ್ರೆಯವರು ನಾಡಹಬ್ಬದ ಬಗ್ಗೆ ಹೇಳಿರುವರು. ಬೇಂದ್ರೆಯವರ ಈ ನಾಡಹಬ್ಬಕ್ಕೆ ಹೊಸ ಅರ್ಥವನ್ನು ಕಲ್ಪಿಸಿ ಅದಕ್ಕೆ ಪ್ರಚಾರ ಕೊಟ್ಟವರು ಶಿವರಾಮ ಕಾರಂತರು. ಇವರು ತಮ್ಮ ಪುತ್ತೂರಿನ ಬಾಲವನದಲ್ಲಿ ತಮ್ಮ ವೈಯಕ್ತಿಕ ಸಾಹಸವಾಗಿ ನಾಡಹಬ್ಬ ಆಚರಿಸಿದರು. ಹೀಗೆ 'ನಾಡಹಬ್ಬ' ಎನ್ನುವ ಕನ್ನಡ ನಾಡು ನುಡಿಯ ನಂದಾದೀಪ ೧೯೩೬ರಲ್ಲಿ ಹಾನಗಲ್ಲಿನಲ್ಲಿ ಮೊಟ್ಟಮೊದಲು ಬೆಳಗಿತು. ಆ ನಂದಾದೀಪ ೭೧ ವರ್ಷಗಳಷ್ಟು ದೀರ್ಘಾವಧಿ ಕಾಲ ಬೆಳೆಸುತ್ತಾ ವರ್ಷದಿಂದ ವರ್ಷಕ್ಕೆ ಪ್ರಜ್ವಲಿಸುತ್ತಾ ಕಳೆದ ವರ್ಷ ತನ್ನ ೭೦ರ ಹುಟ್ಟು ಹಬ್ಬವನ್ನು ಬಹು ವಿಜೃಂಭಣೆಯಿಂದ ಆಚರಿಸಿಕೊಂಡಿತು.

ಹಾನಗಲ್ಲಿನಲ್ಲಿ ನಾಡಹಬ್ಬ ಆರಂಭಗೊಂಡ ಹಿನ್ನೆಲೆಯತ್ತ ಗಮನಹರಿಸಿದರೆ ನಾಡಹಬ್ಬಕ್ಕೆ ಪೂರಕವಾದ ವಾತಾವರಣ ಅದರ ಇಪ್ಪತ್ತು ವರ್ಷಗಳಷ್ಟು ಹಿಂದೆಯೇ ನಿರ್ಮಾಣವಾಗಿತ್ತು ಎಂದು ಕಂಡುಬರುತ್ತದೆ. ಬಾಲಗಂಗಾಧರ ತಿಲಕರ ಶಿಷ್ಯರಾದ ಹಾನಗಲ್ಲಿನ ದಿ. ಹಾವನೂರ ಬಾಳಂಭಟ್ಟರು ತಿಲಕರ ಮಾತಿನಂತೆ ಸಾರ್ವಜನಿಕ ಗಜಾನನೋತ್ಸವವನ್ನು ೧೯೧೬ರ ಸುಮಾರಿಗೆ ಹಾನಗಲ್ಲಿನಲ್ಲಿ ಪ್ರಾರಂಭಿಸಿದ್ದರು. ಅದು ೨೧ ವರ್ಷಗಳ ಕಾಲ ನಡೆದುಕೊಂಡು ಬಂದಿತು. ಸ್ವತಂತ್ರ ಚಳುವಳಿಯ ರಂಗೇರಿದ್ದ ಆ

* ಇತಿಹಾಸ ಅಧ್ಯಾಪಕ, ನರಸಾಪುರ ಕಲಾ ಹಾಗೂ ಶಿರೂರ ವಾಣಿಜ್ಯ ಮಹಾವಿದ್ಯಾಲಯ, ಬಾಗಲಕೋಟೆ.

ಕಾಲದಲ್ಲಿ ಹಾನಗಲ್ಲಿನ ಬಲಭೀಮ ವ್ಯಾಯಾಮಶಾಲೆ ಆ ಊರಿನ ಸ್ವತಂತ್ರ ಚಳುವಳಿಗಾರರ ಕೇಂದ್ರ ಸ್ಥಳವಾಗಿತ್ತು. ದಿ. ಶ್ರೀ ಅ.ನಾ. ಕುಂದಾಪುರ ಗುರುಗಳು ವ್ಯಾಯಾಮ ಶಾಲೆಯ ಜವಾಬ್ದಾರಿ ಹೊತ್ತಿದ್ದರು. ಇಲ್ಲಿ ಪ್ರಗತಿಪರ, ಸುಶೀಲ, ಸದೃಢ, ಸೇವಾ ಮನೋಭಾವ ಹೊಂದಿದ್ದ ತರುಣರ ಒಂದು ದೊಡ್ಡ ಗುಂಪೇ ಇದ್ದಿತು. ಇದೇ ಸಮಯದಲ್ಲಿ ರಾಷ್ಟ್ರೀಯ ಧುರೀಣರು, ದೇಶದ ಸ್ವತಂತ್ರ ಚಳುವಳಿಯಲ್ಲಿ ಜನತೆಯನ್ನು ಜಾಗೃತಗೊಳಿಸಲು ರಾಷ್ಟ್ರಪಿತ ಮಹಾತ್ಮಗಾಂಧೀಜಿ ಅವರು ಅಕ್ಕಿ ಆಲೂರಿಗೂ, ಪಂಡಿತ ಜವಾಹರಲಾಲ ನೆಹರು ಅವರು ಹಾನಗಲ್ಲಿಗೂ ಆಗಮಿಸಿ ಸ್ವತಂತ್ರ ಚಳುವಳಿಯ ಸ್ಫೂರ್ತಿಯನ್ನು ತುಂಬಿದ್ದರು. ಹಾನಗಲ್ಲ ಜನತೆ ಅದಕ್ಕೆ ಹೃತ್ಪೂರ್ವಕವಾಗಿ ಸ್ಪಂದಿಸಿತು. ಮೈಲಾರ ಮಹದೇವಪ್ಪ, ನಾಗೇಶ ವೆಂಕಟರಾವ ದೇಸಾಯಿ, ಕೃಷ್ಣ ಹ. ಚಿಮ್ಮಲಗಿ, ಮಾರ್ತಂಡರಾವ ಕುಲಕರ್ಣಿ, ನಾರಾಯಣಗೌಡ ಬಹದ್ದೂರ ದೇಸಾಯಿ, ಶ್ರೀಪಾದಗೌಡ ಬಹದ್ದೂರ ದೇಸಾಯಿ ಮುಂತಾದ ಧುರೀಣರನ್ನು ಇಲ್ಲಿ ನೆನೆಯಬಹುದು. ಮಾತ್ರವಲ್ಲದೆ ಗಾಂಧೀಜಿಯವರು ಹುಟ್ಟುಹಾಕಿದ ಉಪ್ಪಿನ ಸತ್ಯಾಗ್ರಹಕ್ಕೆ ಕಾರವಾರದ ಕಡೆ ಹೋಗುವ ಚಳುವಳಿಗಾರರಿಗೆ ಹಾನಗಲ್ಲು ತರಬೇತಿ ನೀಡುವ ಕೇಂದ್ರವಾಗಿತ್ತು. ಶ್ರೀ ತಮ್ಮಣ್ಣದೇಸಾಯಿ ಅವರ ಮನೆ ಇಂಥ ಚಟುವಟಿಕೆಗಳಿಗೆ ಮೀಸಲಾಗಿತ್ತು.

ಸ್ವಾತಂತ್ರ ಚಳುವಳಿಯ ಜೊತೆ ಜೊತೆಗೆ ಕನ್ನಡ ನಾಡನ್ನು ಕಟ್ಟುವ ಕೆಲಸವು ಭರದಿಂದ ಸಾಗಿತ್ತು. ಈ ನಿಟ್ಟಿನಲ್ಲಿಯೂ ಹಾನಗಲ್ಲು ಅವಿಸ್ಮರಣೀಯ ಸೇವೆಯನ್ನು ಸಲ್ಲಿಸಿದೆ. ಶ್ರೀ ಬಲಭೀಮ ವ್ಯಾಯಾಮ ಶಾಲೆಯಲ್ಲಿ ಪ್ರತಿ ವರ್ಷವೂ ನಡೆಯುತ್ತಿದ್ದ ವಸಂತೋತ್ಸವ ಸಮಾರಂಭಕ್ಕೆ ಅಧ್ಯಕ್ಷರಾಗಿ ಕನ್ನಡದ ಕಣ್ವ ಎಂದು ಕರೆಸಿಕೊಂಡ ಶ್ರೀ ಬಿ.ಎಂ.ಶ್ರೀ ಅವರು ೧೯೩೭ರಲ್ಲಿ ಆಗಮಿಸಿದ್ದರು. ಅವರು ತಮ್ಮ ಭಾಷಣದಲ್ಲಿ ಕನ್ನಡ ನಾಡು ನುಡಿಯ ಬಗ್ಗೆ, ಕನ್ನಡಿಗರ ನಿಷ್ಕ್ರಿಯತೆಯ ಬಗ್ಗೆ ನೊಂದು ಮಾತನಾಡಿ ಕನ್ನಡಿಗರನ್ನು ಜಾಗೃತಿಗೊಳಿಸಿದರು. ಅತ್ಯಂತ ಪರಿಣಾಮಕಾರಿಯಾದ ಬಿ.ಎಂ.ಶ್ರೀ ಅವರ ಭಾಷಣ ಹಾನಗಲ್ಲಿನ ತರುಣರಲ್ಲಿ ಕನ್ನಡದ ನಾಡು ನುಡಿಯ ಬಗ್ಗೆ ಸ್ಫೂರ್ತಿ ತುಂಬಿತು. ಆ ಘಳಿಗೆಯೇ ಹಾನಗಲ್ಲಿನ ನಾಡಹಬ್ಬಕ್ಕೆ ಕಾರಣವಾಯಿತು. ೧೯೩೭ರ ನವರಾತ್ರಿ ಹಬ್ಬದಲ್ಲಿ ಪ್ರಾರಂಭವಾದ ನಾಡಹಬ್ಬ ಇಂದಿನವರೆಗೂ ನಡೆದುಕೊಂಡು ಬಂದಿದೆ. ಅನೇಕ ಅನಾನುಕೂಲ, ತೊಂದರೆಗಳನ್ನು ಎದುರಿಸಿದರೂ ಸಹ ಹಾನಗಲ್ಲ ಜನತೆ ಅದು ತಮ್ಮ ಮನೆಯ ಹಬ್ಬವೆಂಬಂತೆ ಜವಾಬ್ದಾರಿಯಿಂದ ನಡೆಸಿಕೊಂಡು ಬಂದಿದ್ದಾರೆ. ಎಂಬುದು ಅತ್ಯಂತ ಮುಖ್ಯ ವಿಷಯ. ಈ ಸಂಘರ್ಷ ಕಾಲಾವಧಿಯಲ್ಲಿ ಕನ್ನಡನಾಡಿನ ಅನೇಕ ಗಣ್ಯರು ಹಾನಗಲ್ಲಿನ ನಾಡಹಬ್ಬದ ವೇದಿಕೆಯಲ್ಲಿ ಮಾತನಾಡಿದ್ದಾರೆ. ಆಲೂರು ವೆಂಕಟರಾಯರು, ಬಿ.ಎಂ.ಶ್ರೀ., ದ.ರಾ. ಬೇಂದ್ರೆ, ಎಂ. ಅಕ್ಬರ ಅಲಿ, ಚನ್ನವೀರ ಕಣವಿ, ಬಿ.ಟಿ. ಶಿವರಾಮ ಕಾರಂತ, ಬಿಂದಾಚಾರ್ಯ ಬುರ್ಲಿ, ರಮಾಕಾಂತ ಗೂಳಿಕೇರಿ, ಅಣ್ಣಾಗುರುಜಿ, ಪಾಟೀಲ ಪುಟ್ಟಪ್ಪ, ಶ್ಯಾಮಸುಂದರ ಬಿದರಕುಂದಿ, ಚನ್ನಕ್ಕ ಪಾವಟೆ, ಸಂತೋಷ ಕುಮಾರ ಗುಲ್ವಾಡಿ, ಹೀಗೆ ಅನೇಕರು ಬಹುದೂರದಿಂದ ಆಗಮಿಸಿ ತಮ್ಮ ನುಡಿಸೇವೆ ಕಲಾಸೇವೆಯನ್ನು ಸಲ್ಲಿಸಿದ್ದಾರೆ.

ಪ್ರತಿ ವರ್ಷ ಆಶ್ವೀಜಮಾಸ ಪಾಂಡ್ಯದಿಂದ ವಿಜಯ ದಶಮಿಯವರೆಗೆ ನಡೆಯುವ ಈ ಕಾರ್ಯಕ್ರಮವು ಭುವನೇಶ್ವರಿಯ ಮೆರವಣಿಗೆಯೊಂದಿಗೆ ಪ್ರಾರಂಭವಾಗುತ್ತದೆ. ಹಾನಗಲ್ಲ ಶ್ರೀ ಮ.ನಿ.ಪ್ರ. ಕುಮಾರಸ್ವಾಮಿಗಳು ಹಾಗೂ ತಾಲ್ಲೂಕು ತಹಶೀಲ್ದಾರರಿಂದ ಮೆರವಣಿಗೆ ಉದ್ಘಾಟಿಸಲ್ಪಡುತ್ತದೆ. ಸಂಜೆ ಉಪನ್ಯಾಸ ಕಾರ್ಯಕ್ರಮಗಳು ನಡೆಯುತ್ತವೆ. ವಿವಿಧ ಗೋಷ್ಠಿಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಸ್ಥಳೀಯ ಹಾಗೂ ನಾಡಿನ ಎಲ್ಲ ಕಲಾವಿದರಿಗೂ ಇಲ್ಲಿ ಅವಕಾಶ ಕಲ್ಪಿಸಿ ಕೊಡಲಾಗುತ್ತದೆ. ಸಾವಿರಾರು ಸಂಖ್ಯೆಯಲ್ಲಿ ಕಲಾಪ್ರಿಯರು ಸೇರುತ್ತಾರೆ. ಹಾನಗಲ್ಲಿನ ಜನರ ಒಂದು ವಿಶೇಷತೆ ಎಂದರೆ ನಾಡಹಬ್ಬಕ್ಕೆ ಬಂದ ಅತಿಥಿಗಳನ್ನು ಹೋಟೆಲ್ ಇಲ್ಲವೆ ಲಾಡ್ಜ್‌ನಲ್ಲಿ ಇರಿಸುವ ಪದ್ಧತಿ ಇಲ್ಲ. ಮನೆ ಮನೆಗಳಲ್ಲಿ ಊಟದ ಆತಿಥ್ಯವನ್ನು ನೀಡುತ್ತಾರೆ. ರುಚಿರುಚಿಯಾದ ಅಡಿಗೆಯನ್ನು ಮಾಡಿ ಆತ್ಮೀಯತೆಯಿಂದ ಬಡಿಸುತ್ತಾರೆ. ಕೆಲವೇ ತಾಸುಗಳಲ್ಲಿ ಬಂದ ಅತಿಥಿಗಳು ಹಾನಗಲ್ಲಿನವರೇ ಆಗಿಬಿಡುತ್ತಾರೆ.

ಹೀಗೆ ನಾಡು ನುಡಿ ಸಂಸ್ಕೃತಿಯ ಬೆಳವಣಿಗೆಗೆ ಹಾಗೂ ಅಭಿಮಾನಕ್ಕಾಗಿ ಪ್ರತಿ ವರ್ಷ ಹರ್ಷೋದ್ಗಾರಗಳಿಂದ ನಡೆಯುವ ಈ ನಾಡಹಬ್ಬ ನಿತ್ಯನೂತನವಾಗಿ ಹೊಸ ಹೊಸ ಚಿಂತನೆ ಅಭಿವೃದ್ಧಿಪರ ಆಲೋಚನೆಗಳನ್ನೊಳಗೊಂಡು ನಿರಂತರವಾಗಿ ನಡೆಯಲಿ ಎಂದು ಹಾರೈಸೋಣ. ಹಾಗೆಯೇ ಹಾನಗಲ್ಲಿನವನೇ ಆದ ನಾನು ನಿಮ್ಮನ್ನು ನಾಡಹಬ್ಬಕ್ಕೆ ಆತ್ಮೀಯವಾಗಿ ಸ್ವಾಗತ ಕೋರುತ್ತೇನೆ.

ಕುಂ.ಬಾ. ಸದಾಶಿವಪ್ಪ*

# ಸವಣೂರು ನವಾಬರ, ಇತಿಹಾಸ – ಒಂದು ಪರಿಶೀಲನೆ

ಸಂಕ್ಷಿಪ್ತ ಇತಿಹಾಸ :ಸವಣೂರು ಸಂಸ್ಥಾನ ಸ್ಥಾಪನೆ ಆಗಿದ್ದು, ಡಾ. ಕೆ.ಎನ್. ಚಿಟ್ನೀಸ್ ಪ್ರಕಾರ ಕ್ರಿ.ಶ. ೧೬೭೨ರಲ್ಲಿ: ಆಗ ನವಾಬ ಅಬ್ದುಲ್ ಕರೀಂಖಾನನಿಗೆ ಬಿಜಾಪುರದ ಸಿಕಂದರ್ ಆದಿಲ್ ಷಹನು ೨೨ ಮಹಲುಗಳ ಬಂಕಾಪುರ ಜಹಗೀರನ್ನು ಕೊಟ್ಟನು. ನವಾಬ್ ಅಬ್ದುಲ್ ಕರೀಂಖಾನನ ನಂತರ ನವಾಬ ಅಬ್ದುಲ್ ರವೂಫ್ ಖಾನನಿಗೆ ೧೬೮೬ರಲ್ಲಿ ಮುಘಲ್ ಸಾಮ್ರಾಟ್ ಔರಂಗಜೇಬನು ೭೦೦೦ ಜಾತ ಮತ್ತು ೬೦೦೦ ಸ್ವಾರ್ ತರಗತಿಯ ಮನಸುಬಾದರನನ್ನಾಗಿ ನೇಮಿಸಿ, ದಿಲೇರ ಖಾನ್ ಬಹದ್ದೂರ್, ದಿಲೇರ್ ಜಂಗ್ ಎಂಬ ಪದಪಿಯನ್ನು ಕೊಟ್ಟನು. ಕೆಲವು ಮಹಲು ತೋರಗಲ್ ಸರಕಾರಗಳನ್ನು ಬಿಟ್ಟುಕೊಟ್ಟನು. ಉತ್ತರ ಬೀಳಗಿಯಿಂದ ದಕ್ಷಿಣದ ಮಾಸೂರುವರೆಗೆ ಪಶ್ಚಿಮದಲ್ಲಿ ಮಿಶ್ರೀಕೋಟೆಯಿಂದ ಪೂರ್ವದಲ್ಲಿ ಕೊಪ್ಪಳದವರೆಗೆ ಸವಣೂರು ರಾಜ್ಯ ವಿಸ್ತರಿಸಿದ್ದಿತು.

ಗೋವಿಂದಮೂರ್ತಿ ದೇಸಾಯಿ ಪ್ರಕಾರ ಸವಣೂರು ರಾಜ್ಯ ಸ್ಥಾಪನೆಯಾಗಿದ್ದು ಕ್ರಿ.ಶ. ೧೬೮೬–೮೭ರ ಮಧ್ಯೆ. ಈ ರಾಜ್ಯದ ಮೊದಲ ರಾಜಧಾನಿ ಬಂಕಾಪುರ. ಅಬ್ದುಲ್ ರವೂಫ್ ಖಾನನು ಕರೀಂಖಾನನ ಪುತ್ರ, ಅವನು ಹೊಸ ರಾಜಧಾನಿಯನ್ನು ಸ್ಥಾಪಿಸಲು ಯೋಚಿಸಿದನು. ಬಂಕಾಪುರದ ಪಕ್ಕದ ಸ್ಥಳವನ್ನು ಗುರುತಿಸಿದನು. ಅದೇ ಸವಣೂರು ರಾಜ್ಯ.

### ಹೆಸರಿಗೆ ಕಾರಣಗಳು

೧. ೧೮೪೨ರಲ್ಲಿ ಪ್ರಕಟವಾದ ದಿಲೇರ ಜಂಗೀ ಕಾವ್ಯದಲ್ಲಿ ಸವಣೂರು ಪಟ್ಟಣಕ್ಕೆ ಶಹಾನೂರು ಎಂದಿದೆ. ೧೫ನೇ ಪ್ರಕರಣದಲ್ಲಿ ಸಾವನಹಳ್ಳಿ ಎಂದಿದೆ.

೨. ಜನ್ಮರನಹಳ್ಳಿ ಎಂಬ ಉಲ್ಲೇಖವಿದೆ.

೩. ಮೊಲ ನಾಯಿಯನ್ನು ಹೆದರಿಸಿದ ಕಥೆ, ಇತರೆ ಸಾಮ್ರಾಜ್ಯಗಳ ಸ್ಥಾಪನೆಗಳಲ್ಲಿಕಂಡುಬಂದಂತೆ ಇಲ್ಲಿಯೂ ಇಣುಕಿದೆ.

೪. ಶ್ರಾವಣ ಮಾಸದಲ್ಲಿ ಹೊಸ ರಾಜಧಾನಿ ಸ್ಥಾಪನೆ ಆಗಿದ್ದರಿಂದ ಸವಣೂರು ಎಂದು ಕರೆದಿರುವರು ಎಂಬ ಹೇಳಿಕೆ.



೫. ಹೊಸ ರಾಜಧಾನಿಗೆ ಶ್ರೀಮಂತರು ಬಂದು ನೆಲೆಸಿದ್ದರಿಂದ ಇದಕ್ಕೆ ಸುಗಂಧವರ್ತಿ ಎಂದು ಕರೆದರು.

೬. ಒಂದು ಕಾಲದಲ್ಲಿ ಬಂಕಾಪುರ ಜೈನರ ಪ್ರಸಿದ್ಧ ಮತ್ತು ಪವಿತ್ರ ಸ್ಥಳ. ಅಲ್ಲಿ ಜೈನ ಸನ್ಯಾಸಿಗಳು ನೆಲೆಸಿದ್ದು



* ಹರಪನಹಳ್ಳಿ

ಜೈನ ಸನ್ಯಾಸಿಗಳಿಗೆ ಸವಣರು ಎಂದು ಕರೆಯುವರು. ಸವಣರ+ಊರು=ಸವಣೂರು ಎಂದಾಗಿರಬೇಕು. ಡಾ. ಚಿಟ್ನೀಸರ ಪ್ರಕಾರ ಸವಣೂರನ್ನು ೧೪ ಜನ ಪ್ರಮುಖ ನವಾಬರು ಆಳಿರುವರು. ಗೋವಿಂದಮೂರ್ತಿ ದೇಸಾಯಿಗಳ ಪ್ರಕಾರ ಸವಣೂರು ರಾಜ್ಯವನ್ನು ೧೫ ಜನ ನವಾಬರು ಆಳಿದರು. ಉಳಿದ ಏಳು ಜನ ಪುರುಷರಿಗೆ ಆಳುವ ಅವಕಾಶವಿಲ್ಲದಾಯಿತು.

ಸವಣೂರಿನ ಜನರ ಪ್ರಕಾರ ಸವಣೂರನ್ನು ಆಳಿದವರು ೧೫ ಜನ ಪುರುಷರು ಮತ್ತು ಒಬ್ಬ ಸ್ತ್ರೀ. ಇವರು ಬೇಗಂ ಬಲೀಕುನ್ನೀಸಾ, ಎರಡನೇ ಅಬ್ದುಲ್ ಮಜೀದ್ ಖಾನನ ಮಡದಿ, ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಪದವೀದರಳು. ಗಂಡನ ಹೆಸರಿನಲ್ಲಿಯೇ ಮೊದಲ ಮಹಾಯುದ್ಧ ಮುಗಿಯುವವರೆಗೂ ರಾಜ್ಯವಾಳಿದಳು. ಅಬ್ದುಲ್ ಹಕೀಂಖಾನರು ೭ ವರ್ಷಗಳ ಕಾಲ ಮೀರಜ್-ಮಣಿ ಇತರೆ ಸ್ಥಳಗಳಲ್ಲಿದ್ದಾಗ ದಿವಾನರು ಸವಣೂರನ್ನು ಆಳಿದರು.

೧) ಸವಣೂರು ನವಾಬರಲ್ಲಿ ಪುರುಷರು-೨೨ ಜನರು: ಒಬ್ಬ ಸ್ತ್ರೀ.

೨) ಸ್ತ್ರೀಯರು-೧.

೩) ರಾಜ್ಯ ಆಳುವ ಅವಕಾಶವಿಲ್ಲದವರು-೭ ಜನರು.

೧.ರಗಟೆ ಬಹುಲೋಲ ಖಾನ್, ೨. ಅಬ್ದುಲ್ ಹಮೀದ್ ಖಾನ್, ೩. ಅಬ್ದುಲ್ ಕರೀಂ ಖಾನ್, ೪. ಅಬ್ದುಲ್ ಸತ್ತಾರ್ ಖಾನ್, ೫. ಅಬ್ದುಲ್ ಕರೀಂ ಖಾನ್, ೬. ಅಬ್ದುಲ್ ಮಹಮದ್ ಖಾನ್, ೭. ಅಬ್ದುಲ್ ಮಹಮದ್ ಖಾನ್.

### ೪) ರಾಜ್ಯ ಆಳಿದವರು

೧. ಅಬ್ದುಲ್ ರಾವುಫ್‌ಖಾನ್ -೧೬೮೬ – ೧೭೧೯ = ೨೩ ವರ್ಷ

೨. ಅಬ್ದುಲ್ ಫತ್ತೇಖಾನ್ – ೬ ತಿಂಗಳು – ೬ ತಿಂಗಳು

೩. ಅಬ್ದುಲ್ ಯಾದ್ ಖಾನ್ – ೬ ತಿಂಗಳು – ೬ ತಿಂಗಳು

೪. ಅಬ್ದುಲ್ ಗಫಾರ್ ಖಾನ್ – ೧೭೧೯ – ೧೭೨೫ = ೬ ವರ್ಷ

೫. ಮೊದಲ ಅಬ್ದುಲ್ ಮಜೀದ್ ಖಾನ್ – ೧೭೩೦ ೧೭೫೪ = ೨೪ ವರ್ಷ

೬. ಅಬ್ದುಲ್ ಹಕೀಂ ಖಾನ್ – ೧೭೫೪ – ೧೭೦೫ = ೪೧ ವರ್ಷ

೭. ಅಬ್ದುಲ್ ಹುಸೇನ್ ಖಾನ್ – ೧೭೯೫ – ೧೭೯೮ = ೨ ವರ್ಷ

೮. ಅಬ್ದುಲ್ ಖೈರ್ ಖಾನ್ – ೧೭೯೮ – ೧೮೨೭ = ೩೨ ವರ್ಷ

೯. ಅಬ್ದುಲ್ ಫಯಾಜ್ ಖಾನ್ – ೨ ತಿಂಗಳು – ೨ ತಿಂಗಳು

೧೦. ಅಬ್ದುಲ್ ಮುನಾವರ್ ಖಾನ್ – ೧೮೨೮ – ೧೮೩೪ = ೬ ವರ್ಷ

೧೧. ಅಬ್ದುಲ್ ದಿಲೇರ ಖಾನ್ – ೧೮೩೪ – ೧೮೬೨ = ೧೮ ವರ್ಷ

೧೨. ಎರಡನೇ ಅಬ್ದುಲ್ ಖೈರ್‌ಖಾನ್ – ೧೮೬೨ – ೧೮೬೮ = ೬ ವರ್ಷ

೧೩. ಅಬ್ದುಲ್ ಭೋಟಾ ದಿಲೇರಖಾನ್ – ೧೮೬೮ – ೧೮೮೪ = ೧೬ ವರ್ಷ

೧೪. ತಜ್ರೀಬ್ ಖಾನ್ – ೧೮೮೫ – ೧೮೯೨ = ೭ ವರ್ಷ

೧೫. ಎರಡನೇ ಅಬ್ದುಲ್ ಮಜೀದ್ ಖಾನ್ – ಇಬ್ಬರೂ ಸೇರಿ
೧೯೧೨ ರಿಂದ ೧೯೪೮–೩೧ ವರ್ಷ ಒಟ್ಟು ೩೬ ವರ್ಷ

೧೬. ಬೇಗಂ ಬಲೀಕುನ್ನೀಸಾ – ೧–೯–೧೯೧೪
ರಿಂದ ೧೧–೧೧–೧೯೧೮ = ೫ ವರ್ಷ

### ೫) ರಾಜ್ಯ ಆಳಿದ ಅಲ್ಪಾಯುಷಿಗಳು

೧. ಅಬ್ದುಲ್ ಫತ್ತೇ ಖಾನ್ – ೬ ತಿಂಗಳು

೨. ಅಬ್ದುಲ್ ಯಾದ್ ಖಾನ್ – ೬ ತಿಂಗಳು

೩. ಅಬ್ದುಲ್ ಪಯಾಜ್ ಖಾನ್ – ೨ ತಿಂಗಳು

ಅಬ್ದುಲ್ ರವೂಫ್ ಖಾನ್, ಅಬ್ದುಲ್ ಗಫಾರ್ ಖಾನ್, ಮೊದಲ ಅಬ್ದುಲ್ ಮಜೀದ್ ಖಾನರು ಸ್ವತಂತ್ರ ಆಡಳಿತ ನಡೆಸಿದರು.

ಸವಣೂರು ಸಂಸ್ಥಾನಕ್ಕೆ ಉತ್ತಮ ಆಡಳಿತ ಕೊಟ್ಟು ಜನಪರ ಕಾಳಜಿ ವಹಿಸಿದವರು :

೧) ಅಬ್ದುಲ್ ರವೂಫ್ ಖಾನ್

೨) ಅಬ್ದಲ್ ಮಜೀದ್ ಖಾನ್

೩) ಅಬ್ದುಲ್ ದಿಲೇರ ಖಾನ್ ದಿಲೇರ ಜಂಗ್ ಬಹದ್ದೂರ್

೪) ಎರಡನೆಯ ಅಬ್ದುಲ್ ಮಜೀದ್ ಖಾನ್

೫) ಎರಡನೆಯ ಅಬ್ದುಲ್ ಖಾನನ ಮಡದಿ ಬೇಗಂ ಖಲೀಕುನ್ನೀಸಾ

೧) ಮೊದಲ ನವಾಬ ಸವಣೂರು ಸ್ಥಾಪಿಸಿ ಅದಕ್ಕೆ ಎಂಟು ಪೇಟೆಗಳು ಮತ್ತು ೮ ಅಗಸೆಗಳನ್ನು ರಚಿಸಿದ.

೨) ಮೊದಲ ಅಬ್ದುಲ್ ಮಜೀದ್ ಖಾನ್ ಸವಣೂರು ಕೋಟೆ ದುರಸ್ತಿ ಮಾಡಿಸಿದ. ಹೊಸ ಹುಬ್ಬಳ್ಳಿ ನಿರ್ಮಿಸಿ, ಮಜೀದ್ ಪುರವೆಂದು ಹೆಸರು ಕರೆದ. ರೂ. ೬೪೦೦೦ ಖರ್ಚು ಮಾಡಿ ಮೋತಿ ತಲಾಬ್ ರಚಿಸಿ ಅದಕ್ಕೆ ಹೊಂದಿದ ಇತರೆ ಎರಡು ಚಿಕ್ಕ ಕೆರೆಗಳನ್ನು ನಿರ್ಮಿಸಿದ.

೩) ಅಬ್ದುಲ್ ದಿಲೇರ ಖಾನ್ ಸಿರಾಜುಲ್ ಇಂತಿಜಾಮ್ ಉರ್ದು ಕಾನೂನು ಗ್ರಂಥ ರಚಿಸಿದನು. ತಪ್ಪು ಮಾಡಿದವರಿಗೆ ಕಠಿಣ ಶಿಕ್ಷೆ ವಿಧಿಸಿ ರಾಜ್ಯದಲ್ಲಿ ಶಾಂತಿ ಕಾಪಾಡಿದನು. ಆಂಗ್ಲರಿಂದ ಕಂದಾಯ, ದಿವಾಣಿ, ಫೌಜುದಾರಿ ಅಧಿಕಾರವನ್ನು ಪಡೆದ.

೪) ೩೨ ಎಕರೆ ಜಮೀನಿನಲ್ಲಿ ಎರಡನೆಯ ಅಬ್ದುಲ್ ಮಜೀದ್ ಖಾನನು ೧,೪೪, ೨೪೬ ರೂಪಾಯಿಗಳು ಖರ್ಚು ಮಾಡಿ ಮಜೀದ್ ಕ್ಯಾಸಲ್ ಅರಮನೆಯನ್ನು ನಿರ್ಮಿಸಿದ. ೧೯೨೯ರಲ್ಲಿ ದುಂಡೀ ಬಯಲು ಪ್ರದೇಶದಲ್ಲಿ ೨೩,೬೫೫ ರೂಪಾಯಿಗಳು ಖರ್ಚು ಮಾಡಿ ವಿದ್ಯುತ್ ದೀಪ ಒದಗಿಸಿದ. ಹತ್ತಿ ಗಿರಣಿ ಸ್ಥಾಪಿಸಿದ. ರೈತರ ತೋಟಗಳಿಗೆ ಕೊಳವೆ ಬಾವಿಗಳನ್ನು ಕೊರೆಯುವ ಯಂತ್ರಗಳನ್ನು ಒದಗಿಸಿದ. ಮಜೀದ್ ಪ್ರೌಢಶಾಲೆಯನ್ನು ಸ್ಥಾಪಿಸಿದ. ರೊದ್ದ ಶ್ರೀನಿವಾಸ ರಾಯರು ಅಲ್ಲಿ ಕೆಲಸ ಮಾಡಿದರು. ಕ್ರಿಶ. ೧೯೨೬ರಲ್ಲಿ ವಿ.ಕೃ. ಗೋಕಾಕರು ಅಲ್ಲಿಯೇ ಶಿಕ್ಷಣ ಪಡೆದರು. ನವಾಬರು ಧಾರವಾಡದ ವಿದ್ಯಾವರ್ಧಕ ಸಂಘಕ್ಕೆ ಕ್ರಿಶ. ೧೯೧೬ ರಿಂದ ೧೯೧೯ರ ವರೆಗೆ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು.

೫) ಬೇಗಂ ಖಲೀಕುನ್ನೀಸಾ ಪತಿಯು ಮೊದಲ ಮಹಾಯುದ್ಧದಲ್ಲಿ ಬ್ರಿಟಿಷರ ಪರವಾಗಿ ಯುದ್ಧ ಮಾಡಲು ಪರದೇಶದಲ್ಲಿದ್ದಾಗ ತಾನೇ ಸವಣೂರಿನ ಆಡಳಿತವನ್ನು ದಿವಾನರ ಮುಖಾಂತರ ನಡೆಸಿದಳು
ರಾಜ್ಯದಲ್ಲಿ ಶಾಂತಿ ನೆಲೆಸಿದ್ದಿತು. ಸದಾ ಕಾಲ ಸ
ಬಿಡುವ ಗಿಡಗಳು ಉತ್ತಮ ಮಾಪಿನ ಗಿಡಗಳನ್ನು
ನೆಡಿಸಿದಳು. ಬೇರೆ ಪ್ರದೇಶಗಳಿಂದ ಹಸುಗಳನ್ನು ತರಿ
ರೈತರಿಗೆ ವಿತರಿಸಿದಳು. ಸವಣೂರು ಮತ್ತು ಇತ
ಸಂತೆಗಳಲ್ಲಿ ಕೆಲವು ಪುಢಾರಿಗಳು ಗಂಟೆ ಚೌ
ಅರಬರು ಅಂಗಡಿಕಾರರಿಗೆ ಪದಾರ್ಥ ಇಲ್ಲವೆ ಹ
ಕೇಳುವುದು, ಅವರು ಕೊಡದಿದ್ದರೆ ಅಂಗಡಿ ಲೂ
ಮಾಡುತ್ತಿದ್ದರು. ಅಂಗಡಿಕಾರರ ದೂರುಗಳನ್ನು ಕೇ
ಸೇನಾ ಸರದಾರರನ್ನು ಕಳಿಸಿ, ಕುದುರೆಗಳ ಮೇ
ಸಂತೆಯಲ್ಲಿ ತಿರುಗಾಡುವುದು. ಅಂಗಡಿ ಕೊ
ಹೊಡೆಯುವ, ಅಂಗಡಿಕಾರರಿಗೆ ತೊಂದ
ಕೊಡುವವರನ್ನು ಎಚ್ಚರಿಸಿ ಅವರಿಗೆ ಶಿಕ್ಷೆ ಕೊಡುತ್ತಿದ್ದರು
ಈ ವ್ಯವಸ್ಥೆಯನ್ನು ರಾಣಿ ಮಾಡುತ್ತಿದ್ದಳು.

[ಶಿಶುನಾಳ ಶರೀಫ್ ಸಾಹೇಬರ ಪದದಲ್ಲಿ ಇದ
ತಿಳಿಯುವುದು–

[ಬಿದ್ದೀಯಾ ಬೇ ಮುದುಕೀ]

**ಪರಿಶೀಲನೆ**

೧) ಆದಿಲ್‌ಶಾಯಿ ಸಾಮ್ರಾಜ್ಯದ ಮೊಹರನ್ನು ಕೊಡ
ಬಂದ ಅಬ್ದುಲ್ ರವೂಫ್ ಖಾನನನ್ನು ನೋ
ಔರಂಗಜೇಬನು ಆಕರ್ಷಿತನಾದ. ಮೊಗ
ಸೇವೆಯನ್ನು ಸ್ವೀಕರಿಸಲು ಆಹ್ವಾನವನ್ನಿತ್ತನು. ಅವ
ರೂಪ, ಬುದ್ಧಿಮತ್ತೆ, ಶೌರ್ಯ ಮತ್ತು ದರ್ಪವನ
ಮೊದಲೇ ತಿಳಿದುಕೊಂಡಿದ್ದನೆಂದು, ದಿಲೇರಜಂ
ಕಾವ್ಯದಲ್ಲಿ ಹೇಳಿದೆ. ಇದಕ್ಕಿಂತ ಪ್ರಮುಖ ಅಂಶವೆಂದ
ಅಬ್ದುಲ್ ರವೂಫ್ ಖಾನನು ಕರ್ನಾಟಕದ
ಮೊಗಲರ ಪರವಾಗಿ ಆಳ್ವಿಕೆ ನಡೆಯಿಸಿ, ಕಿತ್ತೂ
ಕೊಣ್ಣೂರು, ಹೊಸರಿತ್ತಿ, ನವಲಗುಂದ, ಹುನಗುಂ
ಜಾಲಿಹಾಳ, ಕೌಜಲಗಿ, ಹಳೇ ಹುಬ್ಬಳ್ಳಿ, ಮುಳಗುಂ
ಗದಗ್, ಡಂಬಳ, ಕುಂಕೂರು, ಜಮೀನುದಾರ
ದೇಸಾಯಿಗಳನ್ನು ಅಂಕೆಯಲ್ಲಿಟ್ಟು, ಅವರಿಂ
ಖಂಡರಣಿ ಎತ್ತಿ ಔರಂಗಜೇಬನಿಗೆ ಮುಟ್ಟಿಸುವು
ಮುಖ್ಯ ಉದ್ದೇಶ ಆಗಿದ್ದಿತು.

೨) ಅಬ್ದುಲ್ ರವೂಫ್ ಖಾನನು ಹೊಸ ಪಟ್ಟ
ಸವಣೂರನ್ನು ನಿರ್ಮಿಸಿದ. ಅದಕ್ಕೆ ಹೆಸ
ಉಂಟಾಗಲು ಕೆಲ ಕಾರಣಗಳನ್ನು ಒದಗಿಸಿದೆ.

೩) ಹೊಸ ಪಟ್ಟಣ ಸವಣೂರನ್ನು ನಿರ್ಮಿಸಿ ಅಬ್ದು
ರವೂಫ್ ಖಾನನು ಅದಕ್ಕೆ ಆರು ಅಗಸೆ ಅಥ

ಬಾಗಿಲುಗಳನ್ನು ರಚಿಸಿದ ಎಂದಿದೆ. ಆರನೇ ಬಾಗಿಲು ಮೋತಿ ತಲಾವ್ ಬಾಗಿಲು. ಮೋತಿ ತಲಾವ್ ಮೊದಲ ಅಬ್ದುಲ್ ಮಜೀದ್ ಖಾನನು ನಿರ್ಮಿಸಿದ ಎಂದಿದೆ. ಹಾಗಾದರೆ ಅದು ಅವನಿಗಿಂತ ಮೊದಲೇ ಹೇಗೆ ಉಂಟಾಯಿತು ?

೨) ಕ್ರಿ.ಶ. ೧೭೩೭ರ ನಂತರ ಮರಾಠರು ಬಾಪೂಜಿ ನಾಯಕ ಬಾರಾಮತಿಯನ್ನು ಒಂದೂವರೆ ಲಕ್ಷ ಸೈನ್ಯದೊಂದಿಗೆ ಸವಣೂರಿಗೆ ಕಳಿಸಿ, ಕಪ್ಪವನ್ನು ಕೇಳಿದರು. ಆಗ ಅಬ್ದುಲ್ ಮಜೀದ್ ಖಾನ್ ಮೊದಲನೆಯವನು ಕಪ್ಪ ಕೊಡಲು ನಿರಾಕರಿಸಿದ. ಕಮಡೊಳ್ಳಿ ಮುಂದೆ ಪಾಳ್ಯದಲ್ಲಿ ಎರಡೂ ಸೈನ್ಯಗಳಿಗೆ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಯಾರಿಗೆ ಸೋಲಾಯಿತೋ ತಿಳಿಯಲಿಲ್ಲ ಎಂದು ತಿಳಿಸಿದೆ. ಹಾಗಿದ್ದಲ್ಲಿ ಯುದ್ಧ ವಿರಾಮ ಒಡಂಬಡಿಕೆ ಸವಣೂರಲ್ಲಿ ನಡೆದು ೩೬ ಪರಗಣಗಳು ನವಾಬರು ಪೇಶ್ವೆಯರಿಗೆ ಏಕೆ ಕೊಟ್ಟರು ?

೩) ದಿಲೇರಜಂಗೀ ಕಾವ್ಯದಲ್ಲಿ ಚಿತ್ರದುರ್ಗದ ಹಿರೇಮದಕರಿ ನಾಯಕನನ್ನು ಸವಣೂರು ಅಬ್ದುಲ್ ಮಜೀದ್ ಖಾನ್ ಮೊದಲನೆಯವನು ಗಾಯಗೊಳಿಸಿದ್ದರಿಂದ ಅವನು ಸತ್ತನು ಎಂದು ತಿಳಿಸಿದೆ. ಇದು ಸತ್ಯಕ್ಕೆ ದೂರ. ದಿನಾಂಕ ೨೪-೩-೧೭೪೮ ರಲ್ಲಿ ಈಗಿನ ಮಾಯಕೊಂಡ ದಾವಣಗೆರೆ ಬಳಿ ನಡೆದ ಯುದ್ಧದಲ್ಲಿ ಹರಪನಹಳ್ಳಿ ಪಾಳೆಯಗಾರ ಮೊದಲ ಸೋಮಶೇಖರ ನಾಯಕನಿಂದ ಚಿತ್ರದುರ್ಗದ ಹಿರೇಮದಕರಿನಾಯಕ ಕೊಲ್ಲಲ್ಪಟ್ಟನು. ಈ ಯುದ್ಧಲ್ಲಿ ೧) ರಾಯದುರ್ಗದ ಪೆದ್ದ ತಿಮ್ಮಪ್ಪ ನಾಯಕನ ಮಗ ಕೋನೇರಿ ನಾಯಕ, ೨) ಕೆಳದಿ ಪಾಳೆಗಾರ ಇಮ್ಮಡಿ ಬಸವಪ್ಪನಾಯಕ, ೩) ಸವಣೂರಿನ ನವಾಬ ಮೊದಲ ಅಬ್ದುಲ್ ಮಜೀದ್ ಖಾನ್ ಇವರು ಸೈನಿಕ ನೆರವನ್ನು ಹರಪನಹಳ್ಳಿ ಪಾಳೆಯಗಾರರಿಗೆ ಒದಗಿಸಿದ್ದು ತಿಳಿದು ಬರುತ್ತದೆ.

೦ : ಹರಪುರದರಸನು ಮುಂಭಾ
ರುರತರ ಸವಣೂರ ಪತಿ ನವಾಬನ ಫೌಜು
ಬರಿಸಿ ಬಹು ಸೈನ್ಯ ಸಹಿತಂ
ತೆರಳಿಸೀವರಸಬ್ಬು ನೀಸ ಕೃಷ್ಣಕ್ಪನುಮಂ
[ಕೆಳದಿ ನೃಪ ವಿಜಯದಿಂದ]

ಆಧಾರ : ಹರಪನಹಳ್ಳಿ ಪಾಳೆಯಗಾರರ ಚರಿತ್ರೆ,
ಕೆಳದಿ ನೃಪವಿಜಯ, ಬ್ರಿಟಿಷ್ ಗ್ಯಾಸೆಟಿಯರ್.)

೬) ಅಬ್ದುಲ್ ರವೂಫ್ ಖಾನನಿಗೆ ಔರಂಗಜೇಬನು ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿದ್ದನು ಎಂಬುದಕ್ಕೆ ಆಧಾರಗಳಿಲ್ಲ.

೭) ಹೈದರಾಲಿ ಸವಣೂರನ್ನು ಕೊಳ್ಳೆ ಹೊಡೆದು ಒಪ್ಪಂದ ಮಾಡಿ ಮೂವತ್ತಾರು ಸಾವಿರ ರೂಪಾಯಿಗಳನ್ನು ಕೊಡಲು ನವಾಬರಿಗೆ ಒತ್ತಾಯಿಸಿದಾಗ ಅಬ್ದುಲ್ ಹಕೀಂ ಖಾನರ ಬಳಿ ಹಣವಿಲ್ಲದೇ ವ್ಯಥೆಪಟ್ಟು ಹೆಚ್ಚು ಬೆಲೆ ಬಾಳುವ ಶಾಲು, ಶಿಲ್ಕು, ಬಟ್ಟೆ ಮಲ್ ಮಲ್ ಜಮಖಾನ ಮುಂತಾದ ವಸ್ತುಗಳನ್ನು ಕೊಟ್ಟನು ಎಂದಿದೆ. ಟಿಪ್ಪುಸುಲ್ತಾನನು ಬಂಕಾಪುರಕ್ಕೆ ಬಂದು ಸವಣೂರಿನ ಮೇಲೆ ಧಾಳಿ ಮಾಡಿ ಕೊಳ್ಳೆ ಹೊಡೆದಾಗ, ಅಬ್ದುಲ್ ಹಕೀಮ ಖಾನರು ನಾಲ್ಕು ಕೋಟಿ ಹಣವನ್ನು ಎತ್ತಿಕೊಂಡು ಪರಿವಾರದವರನ್ನು ಕೂಡಿ ಗುಪ್ತವಾಗಿ ಮೀರಜ್, ಪುಣೆಗೆ ಸಾಗಿದನು ಎಂದಿದೆ. ಅವನಿಗೆ ಅಷ್ಟು ಹಣ ದಿಢೀರನೆ ಹೇಗೆ ಬಂದಿತು ?

೮) ಸವಣೂರು ಮತ್ತು ಇತರ ಹಳ್ಳಿ ಸಂತೆಗಳು ವಾರಕ್ಕೊಮ್ಮೆ ನಡೆಯುತ್ತಿದ್ದುದು ಸಹಜ. ಅವುಗಳಲ್ಲಿ ಕೆಲವು ಪುಢಾರಿಗಳು, ಗಂಟೆ ಚೌಡಿಯರು, ಅರಬರು ಅಂಗಡಿಕಾರರಿಗೆ ಪದಾರ್ಥ ಇಲ್ಲವೇ ಹಣ ಕೇಳುವುದು ಕೊಡದಿದ್ದರೆ, ಅಂಗಡಿ ಲೂಟಿ ಮಾಡುವುದು ಆಗಿನ ಕಾಲದಲ್ಲಿದ್ದಿತು. ನಾಗರೀಕರು ಬ್ರಿಟಿಷ್ ಅಧಿಕಾರಿಗಳಿಗೆ ದೂರು ಸಲ್ಲಿಸುತ್ತಿದ್ದರು. ಆಗ ಅಧಿಕಾರಿಗಳು ಕುದುರೆ ಏರಿ ಸಂತೆಗಳಲ್ಲಿ ಪಹರೆ ಸುತ್ತುತ್ತಿದ್ದರು. ಇದು ಶ್ಲಾಘನೀಯ ಕಾರ್ಯ.

೯) ಅಬ್ದುಲ್ ಖೈರ್ ಖಾನನು ದಾಯಾದಿಗಳಿಗೆ ಹೆದರಿ ದೋಂಡೋಪಂತ ಗೋಖಲೆ ನೆರವು ಕೇಳಿ, ಅವನ ಜೊತೆ ರೋಣಕ್ಕೆ ಹೋಗಿ ಗೋಖಲೆ ನಿಜಾಮನನ್ನು ಸೋಲಿಸಿ ಬರುವವರೆಗೆ ಅಲ್ಲಿಯೆ ಉಳಿದಿದ್ದನು. ಇದರಿಂದ ನವಾಬರಿಗೆ ಪೇಶ್ವೆಗಳ ನೆರವು ಅನಿವಾರ್ಯ ಆಗಿದ್ದಿತು.

೧೦) ಹೈದರಾಲಿ, ಟಿಪ್ಪು ಸುಲ್ತಾನ ಮತ್ತು ಮರಾಠರು, ಸವಣೂರು ರಾಜ್ಯದ ಮೇಲೆ ಧಾಳಿ ನಡೆಸಿದಾಗ, ನವಾಬರು ಅವರ ಕೂಡ ಯುದ್ಧ ಮಾಡಿ ಅವರನ್ನು ಹಿಮ್ಮೆಟ್ಟಿಸುವುದರ ಬದಲು, ಶಾಂತಿ ಸಂಧಾನ ನಡೆಯಿಸಿ, ಅವರು ಕೇಳಿದಷ್ಟು ಹಣ ಇಲ್ಲವೇ ಭೂ ಪ್ರದೇಶಗಳನ್ನು ಅವರಿಗೆ ಬಿಟ್ಟುಕೊಡುತ್ತಿದ್ದರು. ಆದ್ದರಿಂದ ರಾಜ್ಯ ಚಿಕ್ಕದಾಯಿತು.

೧೧) ಹಣದ ಅವಶ್ಯಕತೆ ಉಂಟಾದಾಗ ದೇಸಾಯಿಗಳ ಮನೆಗಳಿಂದ ಸಾಲ ಪಡೆದು ಆನೆ ಒಂಟೆಗಳ ಮೇಲೆ ಹಣವನ್ನು ಹೇರಿಸಿ ಸವಣೂರು ಅರಮನೆಗೆ ಸಾಗಿಸುತ್ತಿದ್ದರು. ಇದು ಕಾಟನಹಳ್ಳಿ ದೇಸಾಯಿ ವಾರಸುದಾರರಿಂದ ತಿಳಿದುಬರುವುದು.

೧೨) ನವಾಬ ಹಕೀಮ ಖಾನನ ಕಾಲದಲ್ಲಿಯೇ ಚಕ್ರೀಮೋತಿ ಚಕ್ರಾಕಾರದ ಮುತ್ತು ಎಂದು ಕರೆಯಿಸಿಕೊಂಡ ಹೊನ್ನು [ವರಾಹ] ಅದರ ಬೆಲೆ ೩-೧೨-೦ ಎನ್ನುವ ನಾಣ್ಯಗಳ ಚಲಾಣೆಯಲ್ಲಿದ್ದು ಅವುಗಳನ್ನು ಮುದ್ರಿಸುವ ಟಂಕಸಾಲೆ ಸವಣೂರಿನಲ್ಲಿದ್ದಿತು. ಇದು ಸವಣೂರು ನವಾಬರ

ಮೊಂದೇ? ಏನೋ ಎಂದು ಗೋವಿಂದಮೂರ್ತಿ ದೇಸಾಯಿ ಹೇಳಿರುವರು. ಚಲಾವಣೆಯ ಹಣ ಮುದ್ರಣದ ಟಂಕಸಾಲೆಗಳು ಅವುಗಳ ವ್ಯವಸ್ಥೆಯನ್ನು ಹಲವು ಪಾಳೆಗಾರರು ಹೊಂದಿದ್ದರು. ಹರಪನಹಳ್ಳಿಯ ಪಾಳೆಯಗಾರರು ಹತ್ತೂವರೆ ಆಣೆವುಳ್ಳ ಹೊನ್ನು ಅದರ ಒಂದು ಮುಖ ಆಂಜನೇಯ ಮತ್ತೊಂದು ಮುಖ ಉಚ್ಚಂಗೆಮ್ಮ ಚಿತ್ರಗಳಿದ್ದವು. ಅವುಗಳನ್ನು ಟಂಕಿಸಿ ಚಲಾವಣೆ ಮಾಡುತ್ತಿದ್ದರು.

೧೩) ವೆಲ್ಲೆಸ್ಲಿ ಪುಣೆಯಲ್ಲಿ ಪೇಶ್ವೆಯವರೊಂದಿಗೆ ಮಾತನಾಡಿ ಸವಣೂರು ನವಾಬರಿಗೆ ತಿಂಗಳಿಗೆ ಕೊಡುವ ನಾಲ್ಕು ಸಾವಿರ ರೂಪಾಯಿಗಳ ಬದಲು ಸವಣೂರಿನ ಸುತ್ತು ಇದ್ದು ಅಷ್ಟು ವರಮಾನ ದೊರಕುವ ಹಳ್ಳಿಗಳನ್ನು ಕೊಡಿಸಿದನು. ಅವುಗಳ ಕಂದಾಯವನ್ನು ನವಾಬರು ಪಡೆದರು. ಈ ವ್ಯವಸ್ಥೆ ಆಗದಿದ್ದರೆ, ನವಾಬರು ಸವಣೂರು ರಾಜ್ಯಕ್ಕೆ ಅರಸರಾಗಿ ಮುಂದುವರಿಯುತ್ತಿರಲಿಲ್ಲ. ಇದು ನಡೆದದ್ದು ೧೦-೯-೧೮೦೦ ರಲ್ಲಿ, ಆಗ ಅಬ್ದುಲ್ ಖೈರ್ ಖಾನನು ಸವಣೂರಿನ ನವಾಬನಿದ್ದನು.

೧೪) ಸವಣೂರು ನವಾಬರಲ್ಲಿ ತರಬೇತಿ ಪಡೆದ ಸುಸಜ್ಜಿತ ಸೇನೆ ಇದ್ದಿಲ್ಲ. ಮದ್ದು ಬಳಸಿ ತೋಪು ಹಾರಿಸುವ ಕೌಶಲ್ಯವಿದ್ದಿಲ್ಲ. ಸೈನಿಕರಿಗೆ ಸಂಬಳ ಕೊಡುವಷ್ಟು ಹಣವಿರಲಿಲ್ಲ. ಸದಾ ಹಣದ ಕೊರತೆ, ಬಹುಜನ ನವಾಬರು ವಿಲಾಸಿಗಳು ಮತ್ತು ದುರ್ಬಲರು, ಪ್ರಜೆಗಳಿಂದ ದೊರೆತ ತೆರಿಗೆ ಹಣ ಅವರ ಪರಿವಾರ ಮತ್ತು ಅವರ ವಿಲಾಸಿ ಜೀವನಕ್ಕೆ ಸಾಲದಾಗುತ್ತಿತ್ತು. ಅಭಿವೃದ್ಧಿ ಕೆಲಸಗಳಿಗೆ ಎಲ್ಲಿಂದ ಹಣ ದೊರಕಬೇಕು?

೧೫) 'ದಿಲೇರ ಜಂಗೀ ಕಾವ್ಯ' ಬರೆಯಿಸಿದವರು ಸವಾಬರು. ನವಾಬ ಹಜರೇ ಜಂಗ ಬಹದ್ದೂರ್. ಇವನು ದಲೇರ ಖಾನ್ ಉರ್ಫ್ ದಿಲೇರ ಖಾನ್ ನವಾಬನು. ನವಾಬನ ಸೇನೆಯಲ್ಲಿದ್ದ ಮೊಹಮದ್ ಗೌಸ್ ಖಾನ್ ಬಹದ್ದೂರ್ ರಿಸಾಲದಾರ. ಕಾವ್ಯವನ್ನು ಕ್ರಿ.ಶ. ೧೮೪೨ರಲ್ಲಿ ಬರೆದು ಪ್ರಕಟಿಸಿದರು. ಅದರಲ್ಲಿ ಕೆಲವು ಒಪ್ಪು-ತಪ್ಪುಗಳು, ಊಹೆ, ಉತ್ಪ್ರೇಕ್ಷೆ ಕಂಡು ಬಂದರೂ ಕ್ರಿ.ಶ. ೧೮೪೨ ವರೆಗೆ ನವಾಬರ ಇತಿಹಾಸಕ್ಕೆ ನೆರವಾಗುವುದು.

೧೬) ಅಬ್ದುಲ್ ರವೂಫ್ ಖಾನ್, ಅಬ್ದುಲ್ ಗಫಾರ್ ಖಾನ್, ಮೊದಲ ಅಬ್ದುಲ್ ಮಜೀದ್ ಖಾನರು ಸ್ವತಂತ್ರವಾಗಿ ರಾಜ್ಯವಾಳಿದರು. ಅವರು ಶೂರರಾಗಿದ್ದರು. ಕೊನೆಯಲ್ಲಿ ಬಂದ ಅಬ್ದುಲ್ ದಿಲೇರ ಖಾನ್, ಎರಡನೇ ಅಬ್ದುಲ್ ಮಜೀದ್ ಖಾನ್ ಮತ್ತು ಅವನ ಮಡದಿ ಬೇಗಂ ಖಲೀಕುನ್ನೀಸಾ ಅವರು ಸುಶಿಕ್ಷಿತರು ಬ್ರಿಟಿಷರ ಕೂಡ ಅವರ ಮಧುರ ಸಂಬಂಧ ಹೊಂದಿ ಅವರ ನೆರವಿನಿಂದ ರಾಜ್ಯವಾಳಿದರು. ಸವಣೂರಿಗೆ ಕೆಲ ಸೌಕರ್ಯಗಳನ್ನು ಒದಗಿಸಿದರು. ಕೆಲವೊಂದು ಪ್ರಸಂಗಗಳಲ್ಲಿ ಅನ್ಯರ ಮಾತು ಕೇಳಿ ಸಿಡುಕು ಮತ್ತು ದುಡುಕುಗಳಿಂದ ಪ್ರಜೆಗಳಿಗೆ ತೊಂದರೆಗಳನ್ನು ಕೊಟ್ಟರು.

(ನೆರವು : ಡಾ. ಕೆ.ಎನ್. ಚೆಟ್ಟೀಸ್, ಕ್ಷೇತ್ರ ಕಾರ್ಯಕ್ಕೆ ನೆರವು : ಶ್ರೀ ಕಬ್ಬಳ್ಳಿ ಹನುಮಪ್ಪನವರು, ನಿವೃತ್ತ ಮುಖ್ಯಾಧಿಕಾರಿಗಳು, ತಾಲ್ಲೂಕು ಪಂಚಾಯಿತಿ, ಸವಣೂರು.)

## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು


೧. ದಿಲೇರ ಜಂಗೀ ಗ್ರಂಥದ ಮಾಹಿತಿ ಮರಾಠಿ ಮಿತ್ರರಿಂದ [ಮುಂಬಯಿ ವಿಶ್ವವಿದ್ಯಾಲಯ]
೨. ಪುಣೆ ಕರ್ನಾಟಕ ಜಮಾತೆ.
೩. ವಾಸುದೇವ ಶಾಸ್ತ್ರಿ ಖರೆ ಐತಿಹಾಸಿಕ ಲೇಖನ ಸಂಗ್ರಹ.
೪. ಡಾ. ಕೆ.ಎನ್. ಚೆಟ್ಟೀಸ್ ಅವರ ಸವಣೂರು ನವಾಬರ ಮರಾಠರ ಸಂಬಂಧದ ಲೇಖನ.
೫. ಗೋವಿಂದಮೂರ್ತಿ ದೇಸಾಯಿ ಬರೆದ **ಸವಣೂರು ನವಾಬರು,** ಪ್ರಕಟಣೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.
೬. ಕೆ.ಆರ್. ರಿತ್ತಿ ಅವರ ಹೇಳಿಕೆ.
೭. ಸವಣೂರು ವಯೋವೃದ್ಧರ ಮತ್ತು ಕಾಟನಹಳ್ಳಿ ದೇಸಾಯಿ ವಂಶದವರ ಹೇಳಿಕೆಗಳು.
೮. ಹರಪನಹಳ್ಳಿ ಪಾಳೆಯಗಾರರ ಕಡತಗಳು.
೯. ಲಿಂಗಣ್ಣ ಕವಿಯ **ಕೆಳದಿ ನೃಪ ವಿಜಯ.**
೧೦. Selections from the Peshwa Daftar.

ಡಾ. ಎಫ್.ಟಿ. ಹಳ್ಳಿಕೇರಿ*

# ಇತಿಹಾಸ ಮತ್ತು ಸಂಸ್ಕೃತಿ ಸಂಶೋಧಕ ವಿ.ಆರ್. ಹನುಮಂತಯ್ಯ

ಕಳೆದ ಶತಮಾನದ ಆರಂಭದ ದಶಕಗಳಲ್ಲಿ ಕರ್ನಾಟಕದ ಇತಿಹಾಸ ಸಂಸ್ಕೃತಿ ಸಾಹಿತ್ಯ ಸಮಾಜ ಕುರಿತು ಚಿಂತನೆ ನಡೆಸಿದವರು ಅನೇಕರು. ಅಂಥವರಲ್ಲಿ ಬೆಂಗಳೂರಿನ ವಿ.ಆರ್. ಹನುಮಂತಯ್ಯನವರು ಒಬ್ಬರು. ಎಲೆಮರೆಯ ಕಾಯಿಯಂತೆ ಸಂಶೋಧನೆ ನಡೆಸಿದ ಹನುಮಂತಯ್ಯನವರು, ಮೂಲತಃ ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದವರು. ತಮ್ಮ ಅಪಾರವಾದ ಓದು ಮತ್ತು ಚಿಂತನೆಗಳಿಂದ ಇತಿಹಾಸ ಸಮಾಜ ಸಂಸ್ಕೃತಿಯ ಬಗೆಗೆ ಚಿಂತನೆ ಮಾಡಿದ್ದಾರೆ. ಕುರುಬರ ಚರಿತ್ರೆ, ಭಾರತ ದೇಶದ ಕುರುಬರ ಚರಿತ್ರೆ, ವಿಜಯನಗರ ಸಾಮ್ರಾಜ್ಯ ಚರಿತ್ರೆ, ಆನೆಗೊಂದಿ ಮಹಾಸಂಸ್ಥಾನ ಚರಿತ್ರೆ, ಭೋಜರಾಜ ಕಾಳಿದಾಸ ಚರಿತ್ರೆ ಇತ್ಯಾದಿ ಗ್ರಂಥಗಳನ್ನು ರಚಿಸಿದ್ದಾರೆ. ಈ ಕೃತಿಗಳನ್ನು ಅವಲೋಕಿಸಿದಾಗ ಹನುಮಂತಯ್ಯನವರ ಸಂಶೋಧನೆಯ ವಿವಿಧ ಆಯಾಮಗಳನ್ನು ಗುರುತಿಸಬಹುದು. ಮೊದಲ ಬಾರಿಗೆ ಕುರುಬ ಸಮುದಾಯದ ಪ್ರಾಚೀನತೆ, ಆಚಾರ ವಿಚಾರಗಳು ಸಂಪ್ರದಾಯಗಳು, ಗುರುಪರಂಪರೆ ಮುಂತಾದ ಸಂಗತಿಗಳನ್ನು ಆಧಾರಸಹಿತವಾಗಿ ಸ್ಪಷ್ಟಪಡಿಸಿದರು. ಒಬ್ಬ ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದುಕೊಂಡು ಇತಿಹಾಸ ಸಂಸ್ಕೃತಿ ಸಾಹಿತ್ಯದ ಬಗೆಗೆ ಅಪಾರ ಒಲವನ್ನು ಹೊಂದಿದ ಹನುಮಂತಯ್ಯನವರು ತಮ್ಮ ಜೀವಿತದ ಕೊನೆಯವರೆಗೂ ಓದು ಬರವಣಿಗೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು. ಇಂಥ ವಿಶಿಷ್ಟ ವ್ಯಕ್ತಿಯಾಗಿದ್ದ ಹನುಮಂತಯ್ಯನವರ ಜೀವನ ಮತ್ತು ಅವರ ಕೃತಿಗಳ ಕುರಿತು ಅವಲೋಕಿಸುವುದು. ಆ ಮೂಲಕ ಮರೆತು ಹೋದ ಇತಿಹಾಸ ಮತ್ತು ಸಂಸ್ಕೃತಿ ಸಂಶೋಧಕರೊಬ್ಬರನ್ನು ಸ್ಮರಣೆಗೆ ತಂದುಕೊಳ್ಳುವುದು ಈ ಸಂಪ್ರಬಂಧದ ಬಹುಮುಖ್ಯ ಉದ್ದೇಶವಾಗಿದೆ.



## ಅ. ಹನುಮಂತಯ್ಯನವರ ಜೀವನ

ಬೆಂಗಳೂರು ಉತ್ತರ ತಾಲೂಕು ಹೆಸರಘಟ್ಟ ಹೋಬಳಿಯ ವಿಶ್ವನಾಥಪುರ ಹನುಮಂತಯ್ಯನವರ ಮೂಲ ಸ್ಥಳ. ತಂದೆ ಬೀದಿಮನೆ ರಂಗಣ್ಣ, ತಾಯಿ ತಿಮ್ಮಕ್ಕ, ಆ ಊರಲ್ಲಿ ಇವರಿಗೆ ಬೀದಿಮನೆಯವರೆಂದೇ ಪ್ರಸಿದ್ಧಿಯನ್ನು ಪಡೆದವರು. ಹನುಮಂತಯ್ಯನವರು ಹುಟ್ಟಿದ್ದು ೧೮೭೬ರಲ್ಲಿ. ಬೆಂಗಳೂರಿನ ಕಾಟನ್‌ಪೇಟೆಯ ಪ್ರಾಥಮಿಕ ಶಾಲೆಯಲ್ಲಿ ಮೆಟ್ರಿಕ್ಯುಲೇಷನ್‌ವರೆಗೆ ವಿದ್ಯಾಭ್ಯಾಸ ಮುಗಿಸಿ ಮುಂದೆ ಶಾಲಾ ಶಿಕ್ಷಕರಾಗಿ ವೃತ್ತಿಜೀವನ ಆರಂಭಿಸಿದರು. ಎರಡು ದಶಕಗಳ ಕಾಲ ಶಿಕ್ಷಕರಾಗಿ ಸೇವೆ ಸಲ್ಲಿಸುವುದರ ಜೊತೆಗೆ ಸಾಹಿತ್ಯ ಸಂಸ್ಕೃತಿ ಚರಿತ್ರೆಯಂಥ ಸಂಶೋಧನ ಕ್ಷೇತ್ರದತ್ತ ತಮ್ಮ ಓದು ಅಭ್ಯಾಸವನ್ನು ವಿಸ್ತರಿಸಿಕೊಂಡರು. ಕನ್ನಡದ ಜೊತೆಗೆ ಸಂಸ್ಕೃತ, ಇಂಗ್ಲೀಷ್, ಓಂದಿ, ತೆಲುಗು, ತಮಿಳು ಹಾಗೂ ಮರಾಠಿ ಭಾಷೆಯನ್ನು ಕಲಿತು, ಅವುಗಳಲ್ಲಿ ವಿಶೇಷ ಪರಿಣತಿಯನ್ನು ಪಡೆದುಕೊಂಡರು. ಅಕ್ಕಯ್ಯಮ್ಮ ಹನುಮಂತಯ್ಯನವರ ಹೆಂಡತಿ. ಇವರಿಗೆ ರಂಗಸ್ವಾಮಿ ಹೆಸರಿನ ಒಬ್ಬನೇ ಮಗನಿದ್ದನು. ತಂದೆಯ ಹೆಸರನ್ನೇ ಮಗನಿಗೆ ಇಟ್ಟಿದ್ದರು. ರಂಗಸ್ವಾಮಿ

* ಪ್ರಾಧ್ಯಾಪಕರು ಮತ್ತು ಸಂಚಾಲಕರು, ಹಾಲುಮತ ಅಧ್ಯಯನ ಪೀಠ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೭೬.

ಕರ್ನಾಟಕ ಸರಕಾರದ ಅಬಕಾರಿ ಇಲಾಖೆಯಲ್ಲಿ ಅಧಿಕಾರಿಯಾಗಿ ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಸೇವೆ ಸಲ್ಲಿಸಿದವರು. ಪುಟ್ಟಮ್ಮ ರಂಗಸ್ವಾಮಿಯವರ ಹೆಂಡತಿ. ಇವರಿಗೆ ಹನ್ನೆರಡು ಜನ ಮಕ್ಕಳು. ಆರು ಜನ ಗಂಡು ಮಕ್ಕಳು. ವಿಶೇಷವೆಂದರೆ ವಿಜಯನಗರದ ಅರಸರ ಹೆಸರನ್ನು ತಮ್ಮ ಮೊಮ್ಮಕ್ಕಳಿಗೆ ಇಟ್ಟಿರುವುದು ಹನುಮಂತಯ್ಯನವರ ವಿಶಿಷ್ಟತೆ. ಆರು ಜನ ಗಂಡುಮಕ್ಕಳಿಗೆ ಕೃಷ್ಣದೇವರಾಯ, ವಿಜಯದೇವರಾಯ, ಬುಕ್ಕರಾಯ, ಪ್ರೌಢದೇವರಾಯ, ಹರಿಹರ ಹಾಗೂ ವಿಶ್ವನಾಥರಾಯ, ಆರು ಜನ ಹೆಣ್ಣುಮಕ್ಕಳಿಗೆ ನಾಗರತ್ನ, ಚಂದ್ರಾವತಿ, ಗೌರಮ್ಮ, ಅಹಲ್ಯಾದೇವಿ, ರಂಗಮಹಾಲಕ್ಷ್ಮಿ, ಶಂಕರಾಂಬ ಎಂದು ಹೆಸರನ್ನಿಟ್ಟಿದ್ದರು.

ಇಂದೋರಿನ ಹೋಳ್ಕರ ಮಹಾರಾಜರು ಹಾಗೂ ಮೈಸೂರಿನ ಒಡೆಯರ ಗೌರವಾದರಗಳಿಗೆ ಪಾತ್ರರಾದವರು ಹನುಮಂತಯ್ಯನವರು. ಇವರ ಸಂಶೋಧನೆಯನ್ನು ಮೆಚ್ಚಿಕೊಂಡು ಹನುಮಂತಯ್ಯನವರ ಪ್ರಕಟಣೆಗಳಿಗೆ ಅನೇಕರು ಉದಾರ ದಾನವನ್ನು ಹಾಗೂ ಪ್ರೋತ್ಸಾಹವನ್ನು ನೀಡಿದ್ದಾರೆ. ಅಂಥವರಲ್ಲಿ ಅಂದಿನ ವಿಧಾನ ಪರಿಷತ್ ಸದಸ್ಯರಾದ ಶ್ರೀಮಂತ ನೀಲಗಿರಿ ಜಿ. ಸಂಜೀವಯ್ಯ, ಟಿ. ರಾಘವಾಚಾರ್ಯರು, ಧಾರವಾಡ ಜಿಲ್ಲೆಯ ನಲವಡಿಯ ಶಾಲಾಶಿಕ್ಷಕರಾಗಿದ್ದ ಶ್ರೀಮಂತ ಶಂಕರಪ್ಪ ಹನುಮಪ್ಪ ಬೆಳ್ಳಟ್ಟಿ ಹರ್ಲಾಪುರ, ಹಾಲುಮತ ಪುರಾಣದ ಕರ್ತೃವಾದ ಹಾವೇರಿ ಜಿಲ್ಲೆಯ ಬಂಕಾಪುರದ ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ, ಹಾವೇರಿ ಜಿಲ್ಲೆಯ ಸವಣೂರು ತಾಲೂಕಿನ ಹಳ್ಳೂರಿನ ನ್ಯಾಯಾಧೀಶರಾಗಿ ಸೇವೆಗೈದ ಜೀರಪ್ಪ ನಿಂಗಪ್ಪ ಜಿಜ್ಞೂರ ಮುಂತಾದ ಮಹನೀಯರ ಸಹಾಯವನ್ನು ಹನುಮಂತಯ್ಯನವರು ತಮ್ಮ ಕೃತಿಗಳಲ್ಲಿ ಸ್ಮರಿಸಿದ್ದಾರೆ. ೬, ಸೆಪ್ಟೆಂಬರ್ ೧೯೭೧ರಂದು ಹನುಮಂತಯ್ಯನವರು ನಿಧನರಾದರು. ಹೀಗೆ ೯೫ ವರ್ಷಗಳ ತುಂಬು ಜೀವನ ನಡೆಸಿದ ಹನುಮಂತಯ್ಯನವರು ತಮ್ಮ ಕೃತಿಗಳ ಮೂಲಕ ಇಂದಿಗೂ ಜನಮಾನಸದಲ್ಲಿ ಅಚ್ಚಳಿಯದೇ ಉಳಿದಿದ್ದಾರೆ.

### ಆ. ಹನುಮಂತಯ್ಯನವರ ಸಂಶೋಧನೆ

ಶಾಲಾ ಶಿಕ್ಷಕರಾಗಿದ್ದುಕೊಂಡು ಹನುಮಂತಯ್ಯನವರು ಅನೇಕ ಆಕರಗ್ರಂಥಗಳನ್ನು ತಲಸ್ಪರ್ಶಿ ಅಭ್ಯಾಸ ಮಾಡಿ ಕುರುಬರ ಚರಿತ್ರೆ (The History of the Sheperds), ಸಂಕ್ಷಿಪ್ತ ವಿಜಯನಗರ ಚರಿತ್ರೆ, ವಿಜಯನಗರ ಸಾಮ್ರಾಜ್ಯ ಚರಿತ್ರೆ (The History of Vijayanagar Empire), ಭಾರತದ ಕುರುಬರ ಚರಿತ್ರೆ (The History of the Shepherds of India), ಆನೆಗೊಂದಿ ಮಹಾಸಂಸ್ಥಾನ ಚರಿತ್ರೆ, ಭೋಜರಾಜ ಕಾಳಿದಾಸ ಚರಿತ್ರೆ ಇತ್ಯಾದಿ ಕೃತಿಗಳನ್ನು ರಚಿಸಿದ್ದಾರೆ. ಜೊತೆಗೆ ಸುಬೋಧ, ಜಯಕರ್ನಾಟಕಗಳಂಥ ಅಂದಿನ ನಿಯತಕಾಲಿಕಗಳಲ್ಲಿ ಸಂಶೋಧನಾತ್ಮಕಲೇಖನಗಳನ್ನು ಪ್ರಕಟಿಸಿರುವುದು ಹನುಮಂತಯ್ಯನವರ ಬಹುಮುಖಿ ಅಧ್ಯಯನಕ್ಕೆ ನಿದರ್ಶನವಾಗಿದೆ. ಯಾವುದೇ ಕೃತಿರಚನೆಗೆ ತೊಡಗುವ ಪೂರ್ವದಲ್ಲಿ ಆ ವಿಷಯಕ್ಕೆ ಸಂಬಂಧಿಸಿದಂತೆ ವೈವಿಧ್ಯಪೂರ್ಣವಾದ ಆಕರಗಳನ್ನು ಸಂಗ್ರಹಿಸುವುದು, ಅವುಗಳನ್ನು ಕ್ರಮಬದ್ಧವಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡುವುದು, ಪೂರಕವಾಗಿ ಆಕರಗಳನ್ನು ನೀಡುವುದು, ಆ ಮೂಲಕ ಸಂಶೋಧನೆಗೆ ಸಮಗ್ರತೆಯನ್ನು ತಂದುಕೊಡುವುದು ಹನುಮಂತಯ್ಯನವರ ಸಂಶೋಧನೆಯ ವಿಶಿಷ್ಟತೆ. ಇಂಥ ವಿಶಿಷ್ಟ ಕ್ರಮವನ್ನು ಅವರ ಎಲ್ಲ ಕೃತಿಗಳಲ್ಲಿ ಕಾಣಬಹುದು. ಶಾಸನ, ಸನ್ನದು, ಕಾವ್ಯ ಪುರಾಣ, ಗೆಝೆಟಿಯರ್, ನಿಘಂಟು, ಮೌಖಿಕ ಆಕರಗಳ ಜೊತೆಗೆ ಸ್ವದೇಶಿ ಮತ್ತು ವಿದೇಶಿ ವಿದ್ವಾಂಸರ ಅಭಿಪ್ರಾಯಗಳನ್ನು ಪೂರಕವಾಗಿ ಬಳಸಿಕೊಂಡು ಜನಾಂಗಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ಮರುರೂಪಿಸಿದ್ದಾರೆ. ಈಗ ಲಭ್ಯವಿದ್ದ ಅವರ ಕೃತಿಗಳ ಸ್ವರೂಪ ಮತ್ತು ವಿಶಿಷ್ಟತೆಗಳನ್ನು ಕುರಿತು ಆಲೋಚಿಸಬಹುದು.

### ಕುರುಬರ ಚರಿತ್ರೆ (The History of the Shepherds) - 1926

ಹನುಮಂತಯ್ಯನವರ ಮೊದಲ ಕೃತಿ ಕುರುಬರ ಚರಿತ್ರೆ ೧೯೨೬ರಲ್ಲಿ ರಚನೆಗೊಂಡು ಪ್ರಕಟವಾಗಿದೆ. ೧೮೮ ಪುಟಗಳನ್ನೊಳಗೊಂಡಿದೆ. ಉಪೋದ್ಘಾತದಲ್ಲಿ ಕೃತಿಯ ಉದ್ದೇಶ ಹಾಗೂ ತಮ್ಮ ಆಶಯವನ್ನು ಹೀಗೆ ಹೇಳಿಕೊಂಡಿದ್ದಾರೆ. "ಈ ಪುಸ್ತಕದಲ್ಲಿ ನಮ್ಮ ಹಿಂದೂ ದೇಶದ (ಭರತಖಂಡ) ಚರಿತ್ರ ಸಂಬಂಧವೇ ಬಹಳವಾಗಿರುವುದರಿಂದ ಇದನ್ನು ಎಲ್ಲಾ ಸಮಾಜದ ವಿದ್ಯಾರ್ಥಿಗಳೂ ಓದಲು ಅರ್ಹವಾಗಿರುವುದಲ್ಲದೆ, ನಮ್ಮ ಸಮಾಜದ ಸಮಸ್ತ ಸ್ತ್ರೀ ಪುರುಷರೂ, ಬಾಲಕ ಬಾಲಕಿಯರೂ ಅತ್ಯಂತಾದರದಿಂದ ಓದತಕ್ಕುದಾಗಿರುವುದು. ಈಗಿನ ನಮ್ಮ ಬಾಲಕ ಬಾಲಕಿಯರ ನಿರ್ಮಲ ಹೃದಯವೆಂಬ ಸುಕ್ಷೇತ್ರದಲ್ಲಿ ಈ ಮಹತ್ತಾದ ಸ್ವಧರ್ಮಾಭಿಮಾನ, ಸ್ವಜನಾಭಿಮಾನ, ಸ್ವದೇಶಾಭಿಮಾನ, ರಾಜಭಕ್ತಿ ಮತ್ತು ದೈವಭಕ್ತಿಗಳೆಂಬ ಸದ್ಬೀಜಗಳು ಈಗಿನಿಂದಲೇ ಅಂಕುರಿಸಿ ಅವು ಮುಂದೆ ಪ್ರಬಲವಾದ ವೃಕ್ಷಗಳಾಗಿ ಫಲಗಳನ್ನು ಬಿಟ್ಟು ನಮ್ಮ ಸಮಾಜದವರು ಅನುಭವಿಸಿ ಆನಂದಿಸಿದರೆ ಅಂದಿಗೆ ನನ್ನೀ ಶ್ರಮವು ಸಾರ್ಥಕವಾಗುವುದು. ಇದೇ ನನ್ನ ಮುಖ್ಯಾಶಯವು ಮತ್ತು ಇದೇ ನನ್ನ ಮತಸೇವೆಯು."

ಒಂಭತ್ತು ಪ್ರಕರಣಗಳಲ್ಲಿ ಈ ಕೃತಿ ವಿಸ್ತೃತಗೊಂಡಿದ್ದು, ಆರಂಭದಲ್ಲಿ ಸಂಕ್ಷಿಪ್ತ ಚರಿತ್ರೆಯನ್ನು ನಿರೂಪಿಸಲಾಗಿದೆ.

ಎರಡನೆಯ ಪ್ರಕರಣದಲ್ಲಿ ಕುರುಬರ ಪ್ರಾಚೀನತೆಯನ್ನು ಗುರುತಿಸುತ್ತ ಕುರುಬ ಎಂಬ ಹೆಸರು ಬರಲು ಕಾರಣಗಳನ್ನು ಶೋಧಿಸಿದ್ದಾರೆ. ಅಲ್ಲದೇ ಕುರುಬರಲ್ಲಿ ಎರಡು ದೊಡ್ಡ ಪಂಗಡಗಳಾದ ಹತ್ತಿ ಕಂಕಣ ಮತ್ತು ಉಣ್ಣೆ ಕಂಕಣ ಕುರುಬರ ಆಚಾರ ವಿಚಾರ ಸಾಮ್ಯತೆ, ಭಿನ್ನತೆಗಳನ್ನು ಆಕರಗಳ ಮೂಲಕ ವಿವರಿಸುವ ಪ್ರಯತ್ನವನ್ನು ಹನುಮಂತಯ್ಯನವರು ಮಾಡಿದ್ದಾರೆ. ಮೂರನೆಯ ಪ್ರಕರಣವು ಕರ್ನಾಟಕದ ಕುರುಬರ ಒಳಪಂಗಡಗಳು, ಆಹಾರ, ಉಡುಗೆ ತೊಡುಗೆ, ಉದ್ಯೋಗ, ಜನನ, ವಿವಾಹ, ಗುರುಮಠಗಳು, ಕುಲದೇವರು, ವಿಧವಾವಿವಾಹ ಇತ್ಯಾದಿ ಸಂಗತಿಗಳನ್ನು ಲಭ್ಯ ಆಕರಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಕಂಬಳಿ ಕುರುಬರು, ಹಂಡೆ ಕುರುಬರು, ವಾರದ ಕುರುಬರು, ಒಡೆಯರು ಮುಂತಾದ ಹತ್ತು ಒಳಪಂಗಡಗಳನ್ನು ಗುರುತಿಸಿ ಅವುಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಮೊದಲ ಬಾರಿಗೆ ಅಧ್ಯಯನಕ್ಕೊಳಪಡಿಸಲಾಗಿದೆ. ಆಂಧ್ರಪ್ರದೇಶ, ಮಹಾರಾಷ್ಟ್ರ, ದ್ರಾವಿಡ (ತಮಿಳು) ನಾಡಿನ ಕುರುಬರ ಆಚಾರ ವಿಚಾರ ಸಂಪ್ರದಾಯ, ಗೋತ್ರ ಇತ್ಯಾದಿ ವಿವರಗಳನ್ನು ನಾಲ್ಕು, ಐದು ಮತ್ತು ಆರನೆಯ ಪ್ರಕರಣಗಳಲ್ಲಿ ಸಾದ್ಯಂತವಾಗಿ ತಿಳಿಸಲಾಗಿದೆ. ಏಳನೆಯ ಪ್ರಕರಣ ಕುರುಬರ ರಾಜಕೀಯ ಚರಿತ್ರೆಗೆ ಮೀಸಲಾಗಿದೆ. ಪಲ್ಲವರು, ಕದಂಬರು, ಗೋವೆಯ ಕದಂಬರು, ದೇವಗಿರಿ ಯಾದವರು, ವಿಜಯನಗರ ಅರಸರು, ಬಳ್ಳಾರಿ ಪಾಳೆಯಗಾರರು, ಕುರುಗೋಡು, ಇಂದೋರ್ ಹೋಳ್ಕರ್ ಮನೆತನದ ರಾಜಮಹಾರಾಜರು ರಾಜ್ಯವನ್ನು ಸ್ಥಾಪಿಸಿ ವಿಸ್ತರಿಸಿದ ರೀತಿಯನ್ನು ಸಂಕ್ಷಿಪ್ತವಾಗಿ ಕೊಟ್ಟಿರುವುದು ಹನುಮಂತಯ್ಯನವರ ಇತಿಹಾಸ ಪ್ರಜ್ಞೆಗೆ ನಿದರ್ಶನವಾಗಿದೆ.

ಕನಕದಾಸ, ಕಾಳಿದಾಸ, ಅಹಲ್ಯಾಬಾಯಿ ಹೋಳ್ಕರ್, ಸಿದ್ಧಪ್ಪಯ್ಯ ಒಡೆಯರ ಮುಂತಾದ ಮಹನೀಯರ ಜೀವನ ಹಾಗೂ ಕಾರ್ಯಸಾಧನೆಗಳ ಅವಲೋಕನ ಎಂಟನೆಯ ಪ್ರಕರಣವು ಒಳಗೊಂಡಿದೆ. ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಹುಲ್ಲೂರಿನಲ್ಲಿ ನಡೆದ ಹಾಲುಮತ ಮಹಾಸಭೆಯ ಅಧ್ಯಕ್ಷರ ಭಾಷಣ ಮತ್ತು ಇತರೆ ವಿಷಯಗಳನ್ನು ಅನುಬಂಧ ರೂಪದಲ್ಲಿ ಒಂಭತ್ತನೆಯ ಪ್ರಕರಣದಲ್ಲಿ ಅಳವಡಿಸಲಾಗಿದೆ. ಇದು ಕುರುಬರ ಚರಿತ್ರೆಯ ಸ್ಥೂಲ ಸ್ವರೂಪ. ಕುರುಬ ಸಮುದಾಯದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಕ್ರಮಬದ್ಧವಾಗಿ ವಿವರಿಸುವ ಮೊದಲ ಕೃತಿ ಇದಾಗಿದೆ. ಹೀಗಾಗಿ ಈ ಕೃತಿಗೆ ಐತಿಹಾಸಿಕ ಮಹತ್ವ ಪ್ರಾಪ್ತವಾಗಿದೆ. ಈ ಹಿನ್ನೆಲೆಯಲ್ಲಿ ಕುರುಬ ಸಮುದಾಯ ಅಥವಾ ಇತರೆ ಸಮುದಾಯ ಕುರಿತು ಅಧ್ಯಯನ ಮಾಡುವವರಿಗೆ ಇದೊಂದು ಮಾರ್ಗದರ್ಶಿ ಕೃತಿಯಾಗಿ ನಮಗೆ ನೆರವಾಗುತ್ತದೆ. ಹನುಮಂತಯ್ಯನವರು ಕುರುಬರ ಸಂಘಕ್ಕೆ ಅಜೀವ ಸದಸ್ಯರಾಗಲು ೧೫೦ ರೂ.ಗಳಿಗೆ ಪ್ರತಿಯಾಗಿ ಕುರುಬರ ಚರಿತ್ರೆಯ ೨೦೦ ಪ್ರತಿಗಳನ್ನು ನೀಡಿರುವುದನ್ನು ಜಗತ್ಪಾವನ ಪತ್ರಿಕೆ ೧೯೨೭ನೇ ಜುಲೈ ಸಂಚಿಕೆ ಪುಟ ೭೮ ರಲ್ಲಿ ದಾಖಲಿಸಲಾಗಿದೆ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ತನ್ನ ಸಮಾಜದ ಚರಿತ್ರೆಯನ್ನು ಓದಿ ತಿಳಿದುಕೊಳ್ಳಬೇಕೆಂಬ ಅಭಿಲಾಷೆ ಹನುಮಂತಯ್ಯನವರಿಗೆ ಇತ್ತು ಎಂಬುದು ಇದರಿಂದ ಗೊತ್ತಾಗುತ್ತದೆ.

**ಭಾರತ ಕುರುಬರ ಚರಿತ್ರೆ (The History of the Shepherds of India) - 1958**

ಕುರುಬರ ಚರಿತ್ರೆಯ ವಿಸ್ತೃತ ಮತ್ತು ಪರಿಷ್ಕೃತ ಆವೃತ್ತಿಯಿದು. ೧೯೫೮ರಲ್ಲಿ ಪ್ರಕಟಗೊಂಡ ಈ ಕೃತಿ ೩೨೪ ಪುಟಗಳನ್ನು ಒಳಗೊಂಡಿದೆ. ಸಂಸ್ಕೃತ ರತ್ನ, ಕವಿಭೂಷಣ ರೆಂದು ಪ್ರಸಿದ್ಧರಾಗಿದ್ದ ಪಂಡಿತ ಎಮ್.ಸಿ. ಕೃಷ್ಣಸ್ವಾಮಿ ಅಯ್ಯಂಗಾರ್ ಈ ಕೃತಿಗೆ ಮುನ್ನುಡಿ ಬರೆಯುತ್ತ ಕೃತಿಯ ವಿಶೇಷತೆಯನ್ನು ತುಂಬ ವಸ್ತುನಿಷ್ಠವಾಗಿ ಗುರುತಿಸಿದ್ದಾರೆ. "The author sri V.R. Hanumanthaiah though as old 80 by now, is so full of verve, vigour and enthusiasm as to bring out a second, improved and exhaustive edition of his work 'The History of the shepherds' in india called out from various authentic sources, in a handbook of about 350 pages, which I have been able to persue from beginning to end I am of opinion that it is a book intended for all the youngsters and the old. It may prove very usefull to all students, especially of both sexes. The book is one well fit to be kept in all the libraries of the state. ......It may be also usefull for every future Research scholar in history who has to go through it with a chronologically and Scientifically critical eye."

ಇದು ಮುಖ್ಯವಾಗಿ ನಾಲ್ಕು ಭಾಗಗಳನ್ನು ಒಳಗೊಂಡಿದೆ. ಮೊದಲ ಭಾಗದಲ್ಲಿ ಕುರುಬರ ಮೂಲ ಚರಿತ್ರೆಯ ಬಗೆಗೆ ಚರ್ಚಿಸುತ್ತ ಅಂದಿನ ಆರ್ಯರೇ ಇಂದಿನ ಕುರುಬರು ಎಂಬುದಕ್ಕೆ ಅನೇಕ ಸಾಕ್ಷ್ಯಾಧಾರಗಳನ್ನು ಒದಗಿಸುತ್ತ ವಿಶ್ಲೇಷಣೆಗೊಳಪಡಿಸಿರುವುದು ಹನುಮಂತಯ್ಯ ನವರ ವ್ಯಾಪಕ ಅಧ್ಯಯನಕ್ಕೆ ಒಂದು ಉತ್ತಮ ನಿದರ್ಶನ. ವಿಶೇಷವಾಗಿ ಪಶುಪಾಲಕರು, ಅವರ ಭಾಷೆ, ಆರ್ಯರ ಪಶುಪಾಲನ ವೃತ್ತಿ, ಆರ್ಯರಿಂದ ಅನೇಕ ಜಾತಿಗಳು ಜನ್ಮ ತಳೆದದ್ದು, ಕುರುಬರು ವ್ಯವಸಾಯ ವೃತ್ತಿಯನ್ನವಲಂಬಿಸಿ ಬೇರೆಯಾದುದು ಹೀಗೆ ಅನೇಕ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಎರಡನೆಯ ಭಾಗ ಕರ್ನಾಟಕದ

ಕುರುಬರನ್ನು ಕುರಿತದ್ದಾಗಿದೆ. ಜೊತೆಗೆ ಒಳಪಂಗಡಗಳು, ಅವರ ಆಚಾರ ವ್ಯವಹಾರಾದಿಗಳು, ಭಾರತದ ಇತರೆ ರಾಜ್ಯಗಳಲ್ಲಿರುವ ಕುರುಬರನ್ನು ಅಂಕಿಸಂಖ್ಯೆಗಳೊಂದಿಗೆ ಇಲ್ಲಿ ಪರಿಚಯಿಸಿದ್ದು ವಿಶೇಷ. ದಕ್ಷಿಣ ಭಾರತೀಯ ರಾಜರ ಚರಿತ್ರೆಯನ್ನು ಮೂರನೆಯ ಭಾಗ ಒಳಗೊಂಡಿದೆ. ಆನೆಗೊಂದಿ ಅರಸರ ವಂಶಾವಳಿ, ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಹಕ್ಕಬುಕ್ಕರು ಕುರುಬ ಸಮುದಾಯದವರು ಎಂಬುದನ್ನು ಸಮಗ್ರ ಆಕರಗಳೊಂದಿಗೆ ಸ್ಪಷ್ಟಪಡಿಸಿರುವುದು ಹನುಮಂತಯ್ಯನವರ ಸಂಶೋಧನ ನಿಖರತೆಗೆ ಸಾಕ್ಷಿಯಾಗಿದೆ. ನಾಲ್ಕನೆಯ ಭಾಗ ಕಾಳಿದಾಸ, ಶಿವಾಜಿ ಮಹಾರಾಜ, ತುಲಜಂತಿ ಸಿದ್ಧ (ಮಾಳಿಂಗರಾಯ), ಸಂಗೊಳ್ಳಿ ರಾಯಣ್ಣ, ಅಹಲ್ಯಾಬಾಯಿ ಹೋಳ್ಕರ್, ದುರ್ಗಾವತಿ ದೇವಿ ಚಂದೇಲ್ ಮುಂತಾದ ಸಾಧಕರ ಚರಿತ್ರೆಯನ್ನು ಒಳಗೊಂಡಿದೆ. ಹೀಗೆ ಈ ಕೃತಿ ಕುರುಬರ ಚರಿತ್ರೆಯ ವಿಸ್ತೃತ ಮತ್ತು ಪರಿಷ್ಕೃತ ಆವೃತ್ತಿಯಾಗಿ ಅನೇಕ ಹೊಸ ಸಂಗತಿಗಳನ್ನು ಮೊದಲ ಬಾರಿಗೆ ತಿಳಿಸುವಲ್ಲಿ ಯಶಸ್ವಿಯಾಗಿದೆ. ಈ ಕೃತಿಗೆ ಇಂದೂರ ಸಂಸ್ಥಾನದ ಶ್ರೀಮನ್ಮಹರಾಜ ಯಶವಂತರಾವ್ ಹೋಳ್ಕರ್ ಮಹಾರಾಜರು ಆ ಕಾಲಕ್ಕೆ ರೂ. ೫೦೦ಗಳನ್ನು ಬಹುಮಾನ ರೂಪದಲ್ಲಿ ಹನುಮಂತಯ್ಯನವರಿಗೆ ನೀಡಿ ಗೌರವಿಸಿರುವುದನ್ನು ಭೋಜರಾಜ ಕಾಳಿದಾಸ ಚರಿತ್ರೆ ಗ್ರಂಥ (ಪುಟ. ೫)ರಲ್ಲಿ ದಾಖಲಿಸಲಾಗಿದೆ.

### ವಿಜಯನಗರ ಸಾಮ್ರಾಜ್ಯ ಚರಿತ್ರೆ (The History of Vijayanagar Empire) - 1952

ದಕ್ಷಿಣ ಭಾರತದ ಪ್ರಮುಖ ರಾಜಮನೆತನವಾದ ವಿಜಯನಗರ ಸಾಮ್ರಾಜ್ಯದ ಇತಿಹಾಸ ಮತ್ತು ಸಂಸ್ಕೃತಿ ಕುರಿತು ಕನ್ನಡದಲ್ಲಿ ಅನೇಕ ಕೃತಿಗಳು ರಚನೆಗೊಂಡಿದೆ. ಅವುಗಳಲ್ಲಿ ಹನುಮಂತಯ್ಯನವರ ವಿಜಯನಗರ ಸಾಮ್ರಾಜ್ಯ ಚರಿತ್ರೆಯೂ ಒಂದು. ೧೧೪ ಪುಟಗಳನ್ನೊಳಗೊಂಡ ಈ ಕೃತಿ ೧೯೫೨ರಲ್ಲಿ ಪ್ರಕಟಗೊಂಡಿದೆ. "ಇಂದು ನಮ್ಮಲ್ಲಿ ಗೊಲ್ಲರು, ಕುರುಬರು ಎಂದು ಕರೆಯಲ್ಪಡುವ ಜನಾಂಗಗಳು ಹಿಂದೆ ಯಾದವ ಪೌರವರೆಂಬ ಕ್ಷತ್ರಿಯ ವಂಶಕ್ಕೆ ಸೇರಿದವರಾಗಿದ್ದು ಅವರು ಯಯಾತಿ ಎಂಬ ಚಂದ್ರವಂಶದ ಅರಸನ ಯದು, ಪೂರು ಎಂಬ ಮೂಲ ಪುರುಷರಿಗೆ ಸೇರಿದ್ದೆಂಬುದಕ್ಕೆ ಪೌರಾಣಿಕ ಆಧಾರಗಳು ದೊರೆಯುತ್ತವೆ. ಮೇಲಾಗಿ ಭಾರತಕ್ಕೆ ಮೊಟ್ಟಮೊದಲು ವಲಸೆ ಬಂದ ಆರ್ಯರು ಪಶುಪಾಲಕರಾಗಿದ್ದರೆಂಬುದು ಸುಪ್ರಸಿದ್ಧವಾಗಿಯೇ ಇರುತ್ತದೆ. ಅಷ್ಟೇ ಏಕೆ ಭಾರತೀಯರ ಆರಾಧ್ಯಮೂರ್ತಿಗಳಾದ ಶ್ರೀಕೃಷ್ಣನು ಗೋಪಾಲಕನು, ಸಾಕ್ಷಾತ್ ಪರಮೇಶ್ವರನು ಪಶುಪತಿ ಎಂಬ ಪವಿತ್ರ ನಾಮಗಳಿಂದ ಘೋಷಿತರಾಗಿದ್ದಾರೆ. ಕ್ರಿ.ಶ. ಐದನೆಯ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ಸ್ಥಾಪಿತವಾಗಿದ್ದ ಪಲ್ಲವ, ನೊಳಂಬ, ಕುರುಂಬ, ಕದಂಬ ಎಂಬ ಹೆಸರುಗಳಿಂದ ವಿರಾಜಿಸಿದವರು ಪುರಾತನ ಕುರುವಂಶ ಸಂಬಂಧವುಳ್ಳವರೆಂದು ತಿಳಿದುಬರುತ್ತದೆ. ಆದ್ದರಿಂದ ವಿಜಯನಗರದ ಅರಸರ ಮೂಲಪುರುಷರು ಕ್ಷೀರಸಾಗರ ಸಂಭವ, ಕ್ಷೀರವಂಶ ಮುಂತಾದ ವಿಶೇಷಣಗಳಿಂದ ಹಾಲುಮತದವರೆಂದು ಸಮರ್ಥಿಸಿರುವದು ಮನನೀಯವಾಗಿರುತ್ತದೆ.

ವಿಜಯನಗರ ಸಾಮ್ರಾಜ್ಯ ಚರಿತ್ರೆಯನ್ನು ಬರೆದಿರುವ ಶ್ರೀ ವಿ.ಆರ್. ಹನುಮಂತಯ್ಯನವರು ಹಾಲುಮತದ ಮುಖಂಡರೂ ಗುಣಜ್ಞರೂ ಆಗಿರುವುದಲ್ಲದೆ ಇವರು ಕುರುಬರ ಚರಿತ್ರೆ ಮತ್ತು ಇತರ ಸಂಶೋಧನಾತ್ಮಕ ಅನೇಕ ಗ್ರಂಥಗಳನ್ನು ಬರೆದು ಪ್ರಸಿದ್ಧರಾಗಿರುತ್ತಾರೆ. ಸುಮಾರು ಇಪ್ಪತ್ತೈದು ವರ್ಷಗಳಿಂದ ತಾವು ಸಂಗ್ರಹಿಸಿದ ಅನೇಕ ಆಧಾರಗಳ ಸಹಾಯದಿಂದ ಪ್ರಕೃತ ಗ್ರಂಥವನ್ನು ತಿಳಿಗನ್ನಡದಲ್ಲಿ ಬರೆದು ಕನ್ನಡಲೋಕಕ್ಕೆ ಉಪಕಾರ ಮಾಡಿರುತ್ತಾರೆ. ಹಾಲಿನಷ್ಟು ಶುಭ್ರವೂ ಮಧುರವೂ ಆದ ವಿಜಯನಗರ ಸಾಮ್ರಾಜ್ಯದ ಗತವೈಭವವನ್ನು ನೆನಪಿಸಿಕೊಟ್ಟಿರುವ ಶ್ರೀಯುತರ ಪರಿಶ್ರಮವನ್ನು ಕನ್ನಡಿಗರು ಸಾರ್ಥಕ ಪಡಿಸುವರೆಂದು ಆಶಿಸುತ್ತೇನೆ" ಎಂಬ ಎಂ.ಜಿ. ನಂಜುಂಡಾರಾಧ್ಯರು ಮುನ್ನುಡಿ ಬರೆಯುತ್ತ ಹೇಳಿರುವ ಮಾತುಗಳು ಹನುಮಂತಯ್ಯನವರ ಸಂಶೋಧನ ಗುಣಜ್ಞತೆಗೆ ಹಾಗೂ ಆಳವಾದ ಅಧ್ಯಯನಕ್ಕೆ ಹಿಡಿದ ಕನ್ನಡಿಯಂತಿವೆ. ಹಕ್ಕಬುಕ್ಕರು ಕುರುಬ ಸಮುದಾಯಕ್ಕೆ ಸೇರಿದವರು ಎಂಬುದಕ್ಕೆ ಇರುವ ಆಧಾರಗ್ರಂಥಗಳ ವಿವರ, ಈ ಸಾಮ್ರಾಜ್ಯ ಸ್ಥಾಪನೆಗೆ ಮೊದಲಿದ್ದ ಭರತಖಂಡದ ಭಯಂಕರ ಪರಿಸ್ಥಿತಿ, ಚರಿತ್ರಾರಂಭ, ಕೃಷ್ಣದೇವರಾಯನ ಕಾಲದಲ್ಲಿದ್ದ ಅಷ್ಟದಿಗ್ಗಜಗಳೆಂಬ ಕವಿಗಳು ಮತ್ತು ಅವರ ಕೃತಿಗಳು, ವಿಜಯನಗರ ದಸರಾ ಮಹೋತ್ಸವದ ಸಂಕ್ಷಿಪ್ತ ವರ್ಣನೆ, ಅಮಾತ್ಯ ಅಪ್ಪಾಜಿಯ ಅಲ್ಪ ಪರಿಚಯ, ರಾಮರಾಯನ ಬಖೈರು ಅಥವಾ ತಾಳಿಕೋಟೆ ಯುದ್ಧ, ವಿಜಯನಗರ ಪಟ್ಟಣದ ಸಂಕ್ಷಿಪ್ತ ವರ್ಣನೆ ಎಂಬ ಅಧ್ಯಾಯಗಳಲ್ಲಿ ವಿಜಯನಗರ ಅರಸು ಮನೆತನದ ಚರಿತ್ರೆಯನ್ನು ಅಚ್ಚುಕಟ್ಟಾಗಿ ಪರಿಚಯಿಸುವ ಪ್ರಯತ್ನವಿಲ್ಲಿದೆ. ವಿಷಯ ಸ್ಪಷ್ಟತೆಗಾಗಿ ಅಲ್ಲಲ್ಲಿ ಛಾಯಾಚಿತ್ರಗಳನ್ನು ಜೋಡಿಸಿದ್ದು ಓದುಗರಿಗೆ ಅನುಕೂಲವಾಗಿದೆ. ಒಟ್ಟಿನಲ್ಲಿ ಒಬ್ಬ ಸಾಮಾನ್ಯ ಓದುಗ ಅಥವಾ ಅಧ್ಯಯನಕಾರನಿಗೆ ವಿಜಯನಗರ ಸಾಮ್ರಾಜ್ಯದ ಚರಿತ್ರೆಯನ್ನು ತಿಳಿದುಕೊಳ್ಳಬೇಕೆಂದರೆ ಖಂಡಿತವಾಗಿ ಈ ಕೃತಿಯನ್ನು ಓದಬಹುದು.

## ಭೋಜರಾಜ ಕಾಳಿದಾಸ ಚರಿತ್ರೆ

ಕಾಳಿದಾಸ ಭೋಜರಾಜರ ಜೀವನ ಸಾಧನೆ ಸಿದ್ಧಿಗಳನ್ನು ತಿಳಿಸುವ ಈ ಕೃತಿ ೧೯೬೧ರಲ್ಲಿ ಪ್ರಕಟಗೊಂಡಿದೆ. ೧೯೨ ಪುಟಗಳ ವ್ಯಾಪ್ತಿಯನ್ನು ಹೊಂದಿರುವ ಭೋಜರಾಜ ಕಾಳಿದಾಸ ಚರಿತ್ರೆಯಲ್ಲಿ ಕವಿ ಕಾಳಿದಾಸನ ಬಾಲ್ಯ ವಿದ್ಯಾಭ್ಯಾಸ, ಜಾತಿ, ಕಾಲ, ಭೋಜರಾಜನ ಕಾಲದ ಸಾಮಾಜಿಕ ಪರಿಸರ, ಭಾರವಿ ಕವಿಯ ಜೀವನ ಚರಿತ್ರೆ, ಕನಕದಾಸರ ಮೇಲಿನ ಪ್ರಶಂಸೆಗಳು, ಕಂಬಳಿ ನೇಯ್ಗೆಯ ಕಲೆಯ ವೈಶಿಷ್ಟ್ಯತೆ ಮುಂತಾದ ೧೩ ಅಧ್ಯಾಯಗಳಿವೆ. ಮುನ್ನುಡಿ ಬರೆಯುತ್ತ ಎಂ.ಸಿ. ಕೃಷ್ಣಸ್ವಾಮಿ ಅಯ್ಯಂಗಾರ್ ಅವರು "ಗ್ರಂಥಕರ್ತರು ೫೦ ವರ್ಷಗಳ ಕಾಲ ಅವಿಶ್ರಾಂತವಾಗಿ ಅವಿಚ್ಛಿನ್ನವಾಗಿ ಕನ್ನಡ ಸಾಹಿತ್ಯ ಸೇವೆ, ಈಶ ಸೇವೆ, ಸ್ವದೇಶ ಸೇವೆಗಳನ್ನು ಸಲ್ಲಿಸಿರುವುದು ಶ್ಲಾಘ್ಯವೇ ಸರಿ. ಇವರಿಗೀಗ ೮೩ ವರ್ಷಗಳ ವಯಸ್ಸಾಗಿ ಮುಪ್ಪಿನ ದೆಶೆಯಲ್ಲಿದ್ದರೂ ಸಾಹಿತ್ಯ ಕ್ಷೇತ್ರದಲ್ಲಾಸಕ್ತರಾಗಿರುವುದನ್ನು ನೋಡಿ ತರುಣರು ಕೂಡಾ ತಲೆ ತಗ್ಗಿಸುವಂತಿದೆ. ಈ ಗ್ರಂಥವನ್ನು ಸರ್ವರೂ ಆದರದಿಂದ ಎಡಬಿಡದೆ ಓದತಕ್ಕದ್ದಷ್ಟೇ ಆಗಿರದೆ, ಎಲ್ಲಾ ಸರ್ಕಾರಿ ಸ್ಕೂಲ್, ಕಾಲೇಜ್, ಯುನಿವರ್ಸಿಟಿ ಲೈಬ್ರರಿಗಳಿಗೂ, ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೂ ಹೆಚ್ಚಾಗಿ ಇತಿಹಾಸ ಪ್ರೇಮಿಗಳಿಗೂ ಅತ್ಯಾವಶ್ಯಕವಾದ ಗ್ರಂಥವಾಗಿದೆ" ಎಂದು ಹೇಳಿರುವುದು ಈ ಕೃತಿಯ ವಿಶಿಷ್ಟತೆಯನ್ನು ತಿಳಿಸುತ್ತದೆ.

## ಸಂಶೋಧನ ಲೇಖನಗಳು

ನಾಡಿನ ವಿವಿಧ ನಿಯತಕಾಲಿಕಗಳಲ್ಲಿ ಹನುಮಂತಯ್ಯನವರು ಸಂಶೋಧನ ಲೇಖನಗಳನ್ನು ಪ್ರಕಟಿಸಿರುವುದು ಅವರ ಮತ್ತೊಂದು ಸಾಧನೆಯೆಂದೇ ಹೇಳಬೇಕು. The cowherd who helped a king New light on the History of Golkonda Fort ಎಂಬ ಹೆಸರಿನ ಇಂಗ್ಲೀಷ್ ಭಾಷೆಯಲ್ಲಿ ಒಂದು ಸವಿಸ್ತಾರವಾದ ಲೇಖನವನ್ನು ಶ್ರೀ ಫತುಲ್ಲಖಾನರು ೩೧.೦೮.೧೯೪೧ರ ಹಿಂದೂ ಸಂಡೆ ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಹನುಮಂತಯ್ಯನವರು ಅದನ್ನು "ಒಬ್ಬ ಕುರುಬರ (ಗೊಲ್ಲರ) ಗುರುವಿನ ಮಹತ್ವದ ಸನ್ನದು" ಎಂಬ ಹೆಸರಿನಿಂದ ಸಂಗ್ರಹಿಸಿ ಅನುವಾದಗೊಳಿಸಿ ಜಯಕರ್ನಾಟಕ ಪತ್ರಿಕೆ (ಸಂ. ೨೦-೪, ಏಪ್ರಿಲ್ ೧೯೪೨, ಪುಟ. ೧೮೧-೧೮೬)ಯಲ್ಲಿ ಪ್ರಕಟಿಸಿರುವರು. ಗೋವಳ ಕೊಂಡದ ನಿರ್ಮಾಣಕ್ಕೆ ಒಬ್ಬ ಕುರುಬರ (ಗೊಲ್ಲರ) ನಾಯಕನು ಹೇಗೆ ಕಾರಣನಾದನೆಂಬ ವಿಷಯವನ್ನು ಚಾರಿತ್ರಿಕವಾಗಿ ಈ ಲೇಖನ ತಿಳಿಸುತ್ತದೆ. ಮೂಲ ಲೇಖಕರ ಅಭಿಪ್ರಾಯಗಳಿಗೆ ಧಕ್ಕೆ ಬರದ ಹಾಗೆ ಲೇಖನವನ್ನು ಕನ್ನಡಕ್ಕೆ ಅನುವಾದಿಸಿರುವುದು ಹನುಮಂತಯ್ಯನವರ ಭಾಷಾಪ್ರೌಢಿಮೆಯನ್ನು ತೋರಿಸುತ್ತದೆ.

ಶ್ರೀ ಕನಕದಾಸರು ಕುರುಬರಲ್ಲವೇ ? ಎಂಬ ಲೇಖನವನ್ನು ಜಯಕರ್ನಾಟಕ ಪತ್ರಿಕೆ (ಸಂ. ೨೦-೪, ಏಪ್ರಿಲ್ ೧೯೪೨, ಪುಟ. ೧೮೧-೧೮೬) ಹಾಗೂ ಸುಬೋಧ ಪತ್ರಿಕೆ (ಸಂ. ೧೯-೧೧, ಪುಟ. ३२೨ - ३२೫) ಯಲ್ಲಿಯೂ ಪ್ರಕಟಿಸಿರುವರು. ದಾಸರಲ್ಲಿ ಕವಿ ಕವಿಗಳಲ್ಲಿ ದಾಸರೆಂದು ಹೆಸರುವಾಸಿಯಾದ ಕನಕದಾಸರ ಮತವಿಚಾರದ ಬಗೆಗೆ ಈ ಲೇಖನದಲ್ಲಿ ಚರ್ಚಿಸಲಾಗಿದೆ. ಅಂದು ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ ಕುರುಬರ ಪತ್ರಿಕೆಯ ೧.೭.೧೯೨೮ರ ಸಂಚಿಕೆಯಲ್ಲಿ ಹನುಮಂತಯ್ಯನವರು ಕುರುಬರು ಏಕೆ ಲಿಂಗ ಕಟ್ಟಿಕೊಳ್ಳಬೇಕು ? ಎಂಬ ಲೇಖನವನ್ನು ಪ್ರಕಟಿಸಿರುವರು. ಈ ಲೇಖನಕ್ಕೆ ಡಂಬಳದ ಐಯ್ಯಪ್ಪಯ್ಯಸ್ವಾಮಿ ಗುರುಪಿನ ಹಾಗೂ ಲಕ್ಷ್ಮೇಶ್ವರದ ಬ.ನೀ. ಹಳವಳ್ಳಿ ಅವರು ೧೫.೭.೧೯೨೮ರ ಸಂಚಿಕೆಯಲ್ಲಿ ಪ್ರತಿಕ್ರಿಯೆ ನೀಡಿದ್ದಾರೆ.

## ಭರತ ಪುತ್ರ ನಿಯತಕಾಲಿಕೆಯ ಸಂಪಾದಕತ್ವ

ಹತ್ತು ವರ್ಷಗಳ ಕಾಲ 'ಭರತ ಪುತ್ರ' ನಿಯತಕಾಲಿಕೆ ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದಾರೆ. ಈ ಪತ್ರಿಕೆಯ ಸ್ವರೂಪವೆಂತಹುದು, ಪ್ರಕಟಣೆಯ ಉದ್ದೇಶ ಇತ್ಯಾದಿಗಳನ್ನು ತಿಳಿದುಕೊಳ್ಳಬೇಕಾದರೆ ನಾವು ನಿಯತಕಾಲಿಕವನ್ನು ಅವಲೋಕಿಸಬೇಕಾಗುತ್ತದೆ. ಆದರೆ ಆ ನಿಯತಕಾಲಿಕೆಯ ಒಂದೂ ಸಂಚಿಕೆಯು ಈಗ ಲಭ್ಯವಾಗುತ್ತಿಲ್ಲ.

ಇಲ್ಲಿಯವರೆಗಿನ ಅವಲೋಕನದಿಂದ ಹನುಮಂತಯ್ಯನವರ ವಿಶಿಷ್ಟತೆಯನ್ನು ಈ ಕೆಳಗಿನಂತೆ ಕ್ರೋಢೀಕರಿಸಿ ಹೇಳಬಹುದು.

೦೧. ಉಪಲಬ್ಧವಿರುವ ಕೃತಿ ಮತ್ತು ಲೇಖನಗಳನ್ನು ಪರಾಮರ್ಶಿಸಿದಾಗ ಹನುಮಂತಯ್ಯನವರು ಕರ್ನಾಟಕದ ಪ್ರಮುಖ ಸಂಶೋಧಕರ ಸಾಲಿನಲ್ಲಿ ಸ್ಥಾನವನ್ನು ಪಡೆಯುತ್ತಾರೆಂದು ಖಂಡಿತವಾಗಿ ಹೇಳಬಹುದು.

೦೨. ಕುರುಬ ಸಮುದಾಯದ ಸಮಗ್ರ ಚರಿತ್ರೆಯನ್ನು ಮೊದಲ ಬಾರಿಗೆ ಕಟ್ಟಿಕೊಟ್ಟವರು ಹನುಮಂತಯ್ಯನವರು.

೦೩. ಈ ಹಿನ್ನೆಲೆಯಲ್ಲಿ ವಚನ ಸಾಹಿತ್ಯವನ್ನು ಶೋಧಿಸಿದ ಕಾರಣವಾಗಿ ಫ.ಗು. ಹಳಕಟ್ಟಿ ಅವರನ್ನು ವಚನ ಪಿತಾಮಹ ಎಂದು ಕರೆದಿದ್ದಾರೆಯೋ ಹಾಗೆಯೇ

ಹನುಮಂತಯ್ಯನವರನ್ನು "ಹಾಲುಮತ ಪಿತಾಮಹ" ಎಂದು ಕರೆಯುವುದರಲ್ಲಿ ಅತಿಶಯೋಕ್ತಿಯೇನಲ್ಲ.

೦೪. ಹತ್ತು ಹಲವು ನಿಟ್ಟಿನಿಂದ ಆಕರಗಳನ್ನು ಸಂಗ್ರಹಿಸಿ ವಿಷಯವನ್ನು ಸ್ಪಷ್ಟಪಡಿಸುವುದು ಹನುಮಂತಯ್ಯನವರ ವಿಶಿಷ್ಟ ಗುಣ. ಈ ಕಾರಣಕ್ಕಾಗಿ ಅವರ ಬರಹಗಳಲ್ಲಿ ಸರಳತೆಯಿದೆ. ವಿದ್ಯಾರ್ಥಿಗಳಿಗಾಗಿ ಮತ್ತು ಶ್ರೀಸಾಮಾನ್ಯರನ್ನು ಗಮನದಲ್ಲಿಟ್ಟುಕೊಂಡು ಕೃತಿ ರಚನೆ ಮಾಡಿದರೂ ಅವರ ಕೃತಿಗಳಲ್ಲಿ ಸಂಶೋಧನ ಸ್ಪರ್ಶವಿದೆ. ಮೇಲಾಗಿ ಹೊಸ ವಿಷಯಗಳನ್ನು ಹೇಳುವ ತುಡಿತವಿದೆ.

೦೫. ಪ್ರತಿಯೊಂದು ಗ್ರಂಥದಲ್ಲಿ ಕೊಟ್ಟಿರುವ ಅಡಿಟಿಪ್ಪಣಿಗಳು ಸಂಶೋಧಕರ ಅಧ್ಯಯನ ವ್ಯಾಪ್ತಿ, ಬಹುಭಾಷಾ ಪ್ರಭುತ್ವವನ್ನು ತೋರಿಸುತ್ತವೆ. ಕನ್ನಡವಂತೂ ಸರಿಯೇ, ಜೊತೆಗೆ ಇಂಗ್ಲೀಷ್, ತೆಲುಗು, ತಮಿಳು, ಮಲಯಾಳಂ, ಮರಾಠಿ ಹಾಗೂ ಸಂಸ್ಕೃತ ಭಾಷೆಗಳ ಮೇಲೆ ಹನುಮಂತಯ್ಯನವರಿಗಿದ್ದ ಪ್ರಭುತ್ವ ಮೆಚ್ಚಬೇಕಾದದ್ದು.

೦೬. ಕನ್ನಡ ಕಾವ್ಯ ಪುರಾಣಗಳಂಥ ಪ್ರಾಚೀನ ಸಾಹಿತ್ಯ, ಶಾಸನ, ಸನ್ನದು, ಬಖೈರುಗಳಂಥ ದಾಖಲು ಸಾಹಿತ್ಯದ ತಿಳುವಳಿಕೆ ಹನುಮಂತಯ್ಯನವರ ಸಾಹಿತ್ಯ ಮತ್ತು ಇತಿಹಾಸ ಪ್ರಜ್ಞೆಗೆ ನಿದರ್ಶನವಾಗಿವೆ.

೦೭. ಭರತ ಪುತ್ರ ನಿಯತಕಾಲಿಕೆಯ ಸಂಪಾದಕರಾಗಿಯೂ ಕಾರ್ಯನಿರ್ವಹಿಸಿದ್ದು ಹನುಮಂತಯ್ಯನವರ ಒಂದು ದೊಡ್ಡ ಸಾಧನೆ.

೦೮. ಇಂಥ ಅಪರೂಪದ ಇತಿಹಾಸ ಸಂಸ್ಕೃತಿ ಸಂಶೋಧಕರಿಂದ ವಿ.ಆರ್. ಹನುಮಂತಯ್ಯನವರು ಕನ್ನಡ ಸಂಶೋಧನ ಚರಿತ್ರೆಯಲ್ಲಿ ಅವಶ್ಯವಾಗಿ ಈಗಲಾದರೂ ದಾಖಲಿಸಬೇಕಾಗಿದೆ.

೦೯. ಸಂಶೋಧಕ ಹನುಮಂತಯ್ಯನವರ ಕೃತಿಗಳು, ಲೇಖನಗಳು ಹಾಗೂ ಯಾವುದೇ ಬರವಣಿಗೆಗಳು ತಮ್ಮ ಕಣ್ಣಿಗೆ ಬಿದ್ದರೆ ದಯವಿಟ್ಟು ನನಗೆ ತಿಳಿಸಿ ಸಹಕರಿಸಬೇಕಾಗಿ ಕೋರಿಕೆ.

೧೦. ಹನುಮಂತಯ್ಯನವರ ಬರವಣಿಗೆಯ ವ್ಯಾಪ್ತಿ ಎಷ್ಟು ಎಂಬುದನ್ನು ಗುರುತಿಸಿ, ಅವರ ಎಲ್ಲ ಕೃತಿ ಮತ್ತು ಲೇಖನಗಳನ್ನು ಶೋಧಿಸಿ ಸಂಪುಟ ರೂಪದಲ್ಲಿ ಪ್ರಕಟಿಸುವ ಕಾರ್ಯವನ್ನು ನಾನು ಈಗ ಕೈಕೊಂಡಿದ್ದೇನೆ. ಆ ಕಾರ್ಯದ ಮೊದಲ ಹಂತ ಈ ಸಂಪ್ರಬಂಧ ಮಂಡನೆ.

ವಿ. ರಮೇಶ್ ಕಾರಂತ್*

# ವಿಶಿಷ್ಟ ಕೃತಿಗಳು : ನ್ಯಾಯದರ್ಪಣ ಮತ್ತು ಹಿಂದೂ ಧರ್ಮಶಾಸ್ತ್ರ

"ಹಿರಣ್ಮಯೇನ ಪಾತ್ರೇಣ ಸತ್ಯಸಾಪಿ ಹಿತಂ ಮುಖಮ್।
ತತ್ವಮ್ ಪೂಷಾನ್ನ್ ಪಾವೃಣು ಸತ್ಯ ಧರ್ಮಾಯ
ದೃಷ್ಟಯೇ ॥"

ಎಂದು ವೇದಕಾಲದ ಋಷಿಗಳು ಪೂಷಾ ದೇವತೆಯನ್ನು ಪ್ರಾರ್ಥಿಸಿಕೊಳ್ಳುತ್ತಾರೆ. ಚ್ಯವನ ಮಹರ್ಷಿಯ ಬಳಿ ನಹುಷ ಮಹಾರಾಜನು ತನಗೆ ಯಾವಾಗಲೂ ಧರ್ಮದಲ್ಲಿ ಬುದ್ಧಿ ಸ್ಥಿರವಾಗುವಂತೆ ಅನುಗ್ರಹಿಸಬೇಕು ಎಂದು ಕೇಳಿದಾಗ ಋಷಿಗಳು 'ನಿನ್ನ ಬುದ್ಧಿಗೆ ಯಾವಾಗಲೂ ಧರ್ಮವು ಗೋಚರಿಸುತ್ತಿರಲಿ, ಆದರೆ ಇತರರಿಗೆ ಹೇಳಬೇಕಾಗಿ ಬಂದಲ್ಲಿ ಅವರು ಕೇಳಿದಾಗ ಸಕಾರಣವಾಗಿ ಅವರ ಮನಸಿಗೊಪ್ಪುವಂತೆ ವಿಷದವಾಗಿ ಹೇಳಬೇಕು. ಇಲ್ಲವಾದರೆ ಅದನ್ನು ಧರ್ಮದೇವನು ಒಪ್ಪುವುದಿಲ್ಲ' ಎಂಬ ಎಚ್ಚರಿಕೆಯೊಂದಿಗೆ ವರವೀಯುತ್ತಾರೆ. ಹಾಗೆಯೇ ನಹುಷನ ರಾಜಪುರೋಹಿತರು ಚ್ಯವನ ಮಹರ್ಷಿಗಳಲ್ಲಿ ಸಂದೇಹವನ್ನು ಪರಿಹರಿಸಿಕೊಳ್ಳುವ ಸಂದರ್ಭದಲ್ಲಿ ಹೀಗೆ ಹೇಳುತ್ತಾರೆ, 'ಭಗವನ್, ಧರ್ಮಕ್ಕೆ ಜಯವಾಗಲಿ, ಕೇಳುವ ನಮಗೂ ಹೇಳುವ ತಮಗೂ ಈ ವಿಷಯವನ್ನಾಲಿಸುವ ಈ ಸಭೆಯವರಿಗೆ ಮಂಗಲವಾಗಲಿ. ತಾವು ಹೇಳುವುದು ನಮಗೆ ಅರ್ಥವಾಗಲಿ...." ಎಂದು ಕೇಳಿಕೊಳ್ಳುತ್ತಾರೆ.

ಹೀಗೆ ಆದಿಯಿಂದಲೂ ಈ ಜಗತ್ತಿನಲ್ಲಿ ಉಳಿದುಕೊಂಡ ದ್ವಂದ್ವಗಳು, ಅವುಗಳ ಪರಿಹಾರಕ್ಕಾಗಿ ನಡೆಸಿದ ಪ್ರಯತ್ನದ ಫಲವೇ ನ್ಯಾಯಶಾಸ್ತ್ರ. ನ್ಯಾಯವನ್ನು ಗುರುತಿಸಬೇಕಾದಲ್ಲಿ ಅಲ್ಲಿ ಅನ್ಯಾಯವಿದೆ ಎಂದೇ ಅರ್ಥ. ಅಧರ್ಮ ಅನ್ಯಾಯಗಳು ಮೇರೆ ಮೀರಿದಾಗ ಧರ್ಮ, ನ್ಯಾಯವನ್ನು ತೋರಿಸುವ ಪ್ರಯತ್ನ ಕಾಲ ಕಾಲಕ್ಕೆ ನಡದೇ ಇದೆ. ಅಭ್ಯುತ್ಥಾನಮಧರ್ಮಸ್ಯ ಸಂಭವಾಮಿ ಯುಗೇ ಯುಗೇ ಎಂದ ಗೀತಾಚಾರ್ಯನ ಮಾತನ್ನು ಈಗಿನ ನ್ಯಾಯ ಪೀಠಗಳು ಸಾಕಾರಗೊಳಿಸುತ್ತಿವೆ. ಭಾರತದಲ್ಲಿ 'ನ್ಯಾಯ'ವು ಶಿಕ್ಷಣದ ಒಂದು ವಿಷಯವಾಗಿ ಸಹಸ್ರಾರು ವರ್ಷಗಳಿಂದ ಬೆಳೆದುಬಂದಿದೆ. ವ್ಯಾಕರಣ, ತರ್ಕ, ವಿಜ್ಞಾನದೊಂದಿಗೆ ನ್ಯಾಯಶಾಸ್ತ್ರವೂ ಕೂಡ ಅಧ್ಯಯನದ ಒಂದು ವಿಷಯವಾಗಿತ್ತು. ಯಾಜ್ಞವಲ್ಕ್ಯ, ಪರಾಶರ, ಬೋಧಾಯನ ಸಂಹಿತೆಗಳು, ಮನುಸ್ಮೃತಿ ಮುಂತಾದುವುಗಳು ಭಾರತೀಯ ನ್ಯಾಯಶಾಸ್ತ್ರಕ್ಕೆ ಭದ್ರ ತಳಪಾಯವನ್ನು ಒದಗಿಸಿವೆ. ನ್ಯಾಯ ನೀಡಿಕೆಯ ವಿಧಾನ ಬದಲಾದಂತೆ ನ್ಯಾಯದ ಸ್ವರೂಪವು ವ್ಯಕ್ತಿ, ಕಾಲ, ದೇಶ, ಸಂದರ್ಭಗಳನ್ನನುಸರಿಸಿ ಬದಲಾದುದರಿಂದ ಕಾಲ ಕಾಲಕ್ಕೆ ನ್ಯಾಯ-ತೀರ್ಪಿನಲ್ಲಿ ಮಾಡಿದ ತಿದ್ದುಪಡಿ, ಪರಿಷ್ಕರಣೆಗಳಿಂದಾಗಿ ಈ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಗ್ರಂಥಗಳ ರಾಶಿಯೇ ಮೈದಳೆದಿದೆ.

ಆದರೂ "ನ್ಯಾಯ" ಹೇಳುವ ನ್ಯಾಯಾಧೀಶರಿಗೂ ಕೇಳುವ ಜನತೆಗೂ ಅರ್ಥವಾಗುವಂತೆ ಸ್ಪಷ್ಟವಾಗಿ ಸಂದಿಗ್ಧತೆಗೆ ಎಡೆಯಿಲ್ಲದಂತೆ ಹೇಳಬೇಕಾದುದು ಅತೀ ಅವಶ್ಯವಾಗಿರುವುದರಿಂದ ಕೇಳುವ ಜನಗಳ ಭಾಷೆಯಲ್ಲಿ ಗ್ರಂಥ ರಚಿಸುವದು ಅನಿವಾರ್ಯವಾಯಿತು.

ಭಾರತದ ಈಗಿನ ನ್ಯಾಯ ಪದ್ಧತಿಗೆ ಶತಮಾನಗಳಿಂದ ಈ ದೇಶವನ್ನು ಆಳುತ್ತಿದ್ದ ಬ್ರಿಟೀಷ್ ಸರಕಾರದ ಆಡಳಿತ ಪದ್ಧತಿಯೇ ಮಾದರಿಯಾಗಿದೆ. ಅದೇ ಪದ್ಧತಿ, ರೀತಿ, ರಿವಾಜುಗಳು ಈಗಲೂ ನಡೆದುಕೊಂಡು ಬಂದಿವೆ. ನ್ಯಾಯಾಲಯ, ವಕೀಲರು, ಅಡ್ವೋಕೇಟರುಗಳು, ಜಡ್ಜರೆಂದರೆ ಇಂಗ್ಲೀಷೆಂದೇ ಅರ್ಥ. ವಕೀಲರು ಮಂಡಿಸುವ ವಾದ, ವಿವಾದ ಎಲ್ಲವೂ ಇಂಗ್ಲೀಷ್‌ಮಯ. ದೇಶೀಯ ಭಾಷೆಯಲ್ಲಿ ನಡೆಯುವ ಕೋರ್ಟು ವ್ಯವಹಾರದ ಚಿತ್ರ ಕೇವಲ ಟಿ.ವಿ. ಧಾರಾವಾಹಿ, ಸಿನೆಮಾಗಳಲ್ಲಿ ಮಾತ್ರ ಕಾಣಬಹುದೇನೋ ! ನಿಜ ಜೀವನದಲ್ಲಂತೂ ಆ ಸ್ಥಿತಿ ಬದಲಾಗಲಿಲ್ಲ. ನೂರೈವತ್ತು ವರ್ಷಗಳ ಹಿಂದೆ ಮೊದಲ ಸ್ವಾತಂತ್ರ್ಯ ಸಮರದ ಸರಿಸುಮಾರಿಗೆ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಕನ್ನಡದಲ್ಲಿ ನ್ಯಾಯದಾನವಾಗುತ್ತಿತ್ತು. ವಸಾಹತುಶಾಹಿ ಆಳ್ವಿಕೆಗಳೂ ಹಿಂದೆ ಭಾರತದಲ್ಲಿ ರಾಜರುಗಳ ಆಳ್ವಿಕೆಯ ಕಾಲದಲ್ಲಂತೂ ಪ್ರಾದೇಶಿಕ ಭಾಷೆಯಲ್ಲಿ ನ್ಯಾಯದಾನದ ಅಂತಿಮ ತೀರ್ಪಿನ ಹೊರತಾಗಿ ಉಳಿದೆಲ್ಲ ವಿಚಾರಣೆಗಳು ಸ್ಥಳೀಯ ಭಾಷೆಯಲ್ಲಿಯೇ ನಡೆಯುತ್ತಿದ್ದವು. ಇದಕ್ಕೆ ಕಾರಣವೇನು ವಿಶೇಷವಾಗಿರಲಿಲ್ಲ. ಬ್ರಿಟೀಷ್ ಅಧಿಪತ್ಯ ಇಡೀ ಭಾರತವನ್ನು ಆಕ್ರಮಿಸಿಕೊಂಡಿದ್ದರೂ ಇಂಗ್ಲೀಷ್ ಭಾಷೆ

* 'ಪುನರ್ವಸು' ಮುಖ್ಯರಸ್ತೆ, ಉಳವಿ, ಸೊರಬ ತಾಲ್ಲೂಕು - ೫೭೭ ೪೩೪. ಶಿವಮೊಗ್ಗ ಜಿಲ್ಲೆ.

ಭಾರತದ ನೆಲದಲ್ಲಿ ಕಾಲೂರುವ ಹಂತದಲ್ಲೇ ಇತ್ತು. ನ್ಯಾಯದ ಮುಂದೆ ಎಲ್ಲರೂ ಸಮಾನರು, ಅದರಲ್ಲೂ ಭಾರತೀಯರೆಲ್ಲರೂ ಸಮಾನರು ಎಂಬ ತತ್ವದಡಿಯಲ್ಲಿ ತನ್ನ ಅಧಿಕಾರ ಚಲಾವಣೆಯ ನೆಪದಲ್ಲಿ, ತನ್ನ ಒಡೆದು ಆಳುವ ಕುತಂತ್ರ ನೀತಿಯ ಅಂಗವಾಗಿ ಇಲ್ಲಿನ ಹಿಂದೂ ಸಮಾಜದಲ್ಲಿನ ವರ್ಗ ಸಂಘರ್ಷಕ್ಕೆ ನೀರೆರೆಯುವಂತೆ ತಾನು ಸೃಷ್ಟಿಸಿದ ಕಾನೂನಿನ ತೆಕ್ಕೆಗೆ ಜನಸಾಮಾನ್ಯರಿಂದ ರಾಜಮಹಾರಾಜರುಗಳೂ, ಮಠಾಧೀಶರುಗಳನ್ನೂ ಸೇರಿಸಿ ತಪ್ಪಿತಸ್ಥ ಎಂದು ಕಂಡುಬಂದಲ್ಲಿ ಸಾರ್ವಜನಿಕವಾಗಿ ಶಿಕ್ಷೆಗೆ ಒಳಪಡಿಸಿತ್ತು. ಮುಂದೆ ಶಿಕ್ಷಣದಲ್ಲಿ ಮೆಕಾಲಿಯವರ ಸೂತ್ರ ಜಾರಿಗೆ ಬರುವ ತನಕ ದೇಶದಲ್ಲಿ ಇಂಗ್ಲೀಷ್ ಬಲ್ಲ ದೇಶೀಯರ ಸಂಖ್ಯೆ ಕೈ ಬೆರಳೆಣಿಸುವಷ್ಟಿತ್ತು. ಇವರನ್ನೇ ದುಭಾಷಿಗಳನ್ನಾಗಿರಿಸಿಕೊಂಡು ಆಡಳಿತ ನಡೆಸಬೇಕಿತ್ತು. ಮುಂದೆ ಇಂಗ್ಲೀಷ್ ಭಾಷೆಯ ಕಲಿಕೆಗೆ ಹೆಚ್ಚಿನ ಒತ್ತಡ ಹಾಗೂ ಒತ್ತಾಸೆ ಬಂದುದರಿಂದ ಇಂಗ್ಲೀಷ್ ಬಲ್ಲವರ ಸಂಖ್ಯೆ ಗಣನೀಯವಾಗಿ ಹೆಚ್ಚಾಯಿತು. ಇದರಿಂದಾಗಿ ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ನ್ಯಾಯಾಲಯವನ್ನು ಪ್ರವೇಶಿಸಿದ ಇಂಗ್ಲೀಷ್ ದೇಶೀಯ ಭಾಷೆಯನ್ನು ತುಳಿದು ಇಂದಿಗೂ ವಿಜೃಂಭಿಸುತ್ತಿದೆ. ಆ ಕಾಲದ ನ್ಯಾಯಾಧಿಕರಣದ ಕೆಳ ಹಂತದ ನ್ಯಾಯಾಲಯವಾದ ಗ್ರಾಮ ಮುನ್ಸೀಫ್ (ಪಟೇಲ) ಕಛೇರಿಯಿಂದ ಮೊದಲುಗೊಂಡು ತಾಲೂಕು ಮುನ್ಸೀಫ್ ಕಛೇರಿ, ಜಿಲ್ಲಾ ಮುನ್ಸೀಫ್ ಕಛೇರಿ ಅಥವಾ ಸದರ್ ಅದಾಲತ್ ಕೋರ್ಟಿನ ವರೆಗಿನ ಎಲ್ಲಾ ವ್ಯವಹಾರಗಳೂ ಪ್ರಾದೇಶಿಕ ಭಾಷೆಯಲ್ಲಿಯೇ ನಡೆಯುತ್ತಿತ್ತು. ಜನಸಾಮಾನ್ಯರು ಕೂಡ ಕಾನೂನಿನ ಅರಿವಿದ್ದಲ್ಲಿ ತಾವೇ ಸ್ವತಃ ವಕಾಲತ್ತು ನಡೆಸಬಹುದಾಗಿತ್ತು. ಈ ಎಲ್ಲಾ ಕಾರಣಗಳಿಂದ ನ್ಯಾಯಶಾಸ್ತ್ರಕ್ಕೆ ಸಂಬಂಧಿಸಿದಂತೆ ದೇಶೀಯ ಭಾಷೆಯಲ್ಲಿ ಕಾನೂನಿನ ಪುಸ್ತಕಗಳನ್ನು ಹೊರತರುವ ಪ್ರಯತ್ನ ನಡೆದಿತ್ತು. ಆಗಿನ ಗ್ರಾಮ ಮುನ್ಸಿಫ್ ಕೋರ್ಟ್, ತಾಲೂಕ್‌ಮುನ್ಸಿಫ್ ಕೋರ್ಟು ಪ್ರಿನ್ಸಿಪಲ್-ಸದರಮೀನ ಕೋರ್ಟುಗಳ ತನಕ ವಕೀಲರು ದೇಶೀಯ ಭಾಷೆಯಲ್ಲಿಯೇ ವಾದ ಮಂಡಿಸುತ್ತಿದ್ದರು. ಕೆಲವೊಮ್ಮೆ ಕಕ್ಷಿದಾರರು ವಕೀಲರನ್ನಿರಿಸಿಕೊಳ್ಳದೆಯೇ ತಾವೇ ತಮ್ಮ ಪರವಾಗಿ ಸ್ವತಃ ವಾದ ಮಾಡುತ್ತಿದ್ದರು. ಇದಕ್ಕಾಗಿ ದೇಶೀಯ ಭಾಷೆಗಳಲ್ಲಿ ಕಾನೂನು ಪುಸ್ತಕಗಳನ್ನು ಸಿದ್ಧಗೊಳಿಸುತ್ತಿದ್ದರು. ಅಂತಹವುಗಳಲ್ಲಿ.

೧. **ಹಿಂದೂ ಧರ್ಮಶಾಸ್ತ್ರದ ಪುಸ್ತಕ** : ಲೇಖಕ : ಮಂಜೇಶ್ವರ ರಾಮಪ್ಪ (೧೮೫೭) (ಮೂಲ ಲೇಖಕರು ಸದರ್ ಅದಲತ್ ಕೋರ್ಟು ಜಡ್ಜರಾದ ಥಾಮಸ್ ಲುಮಿಸ್ಡನ್ ಸ್ಟ್ರೇಂಜ್ ದೊರೆಗಳವರು).

೨. **ನ್ಯಾಯ ದರ್ಪಣ** : ಲೇಖಕ : ತುಪಾಕಿ ಸುಬ್ಬಣ್ಣಾಚಾರ್ಯ (೧೮೬೯).

೩. **ಕ್ರಿಮಿನಲ್ ಪ್ರೊಸಿಜರ್ ಕೋಡ್ ಲೇಖಕ** : ಜಿ. ನರಸಿಂಗರಾವ್ (ಬೆಂಗಳೂರು ಸಿಟಿ ಲಾ ಗೆಜೆಟ್‌ನ ಸಂಪಾದಕರು (೧೯೦೩).

೪. ವ್ಯವಹಾರ ನಿರ್ಣಯ ಎಂಬ ಕನ್ನಡದ ಲಾ ಪುಸ್ತಕವು ಲೇಖಕ : ಎಮ್. ಮಲ್ಲಾರಾಧ್ಯ (೧೯೦೭) ಮುಖ್ಯವಾದವುಗಳು. ಇವಲ್ಲದೇ, 'ಕನ್ನಡದ ಇಂಡಿಯನ್ ಪಿನಲ್ ಕೋಡ್', 'ಸಿವಿಲ್, ಕ್ರಿಮಿನಲ್, ರೆವಿನ್ಯೂ ವ್ಯವಹಾರ ಭೋಧಿನಿ ಮತ್ತು ಹಿಂದೂ ಲಾ', 'ಪಟೇಲರ ಮ್ಯಾನ್ಯುವೆಲ್' ಎಂಬ ಗ್ರಾಮಾಧಿಕಾರಿಗಳ ಕರ್ತವ್ಯ ಮತ್ತು ಹತ್ತು ಹಲವು ಪುಸ್ತಕಗಳು ಕನ್ನಡ ಭಾಷೆಯಲ್ಲಿ ಹೊರಬಿದ್ದಿದ್ದವು ಎಂದು ತಿಳಿದು ಬರುತ್ತದೆ. ಈ ಎಲ್ಲಾ ಗ್ರಂಥಗಳ ಲೇಖಕರ ಏಕೈಕ ಉದ್ದೇಶವೆಂದರೆ, 'ಲೋಕ ವ್ಯವಹಾರಕ ವಿಷಯವನ್ನು ಸುಲಭವಾದ ರೀತಿಯಿಂದ ಜನರಿಗೆ ತಿಳಿಸುವುದೇ ಆಗಿದೆ'. ಈ ಗ್ರಂಥಗಳಲ್ಲಿ ಕೆಲವು ಅನುವಾದಿತ ಗ್ರಂಥಗಳು, ಇನ್ನು ಕೆಲವು ಕೋರ್ಟು ಪ್ರೊಸೀಡಿಂಗುಗಳು, ಕಾನೂನುಗಳ, ಕೋಡುಗಳ ಕನ್ನಡಾನುವಾದ. ಸ್ವತಂತ್ರ ಕೃತಿಗಳು ಕೇವಲ ಬೆರಳೆಣಿಕೆಯಷ್ಟು ಮಾತ್ರ. ಅಂಥವುಗಳಲ್ಲಿ ೧೮೬೯ರಲ್ಲಿ ಹೊರಬಂದ ತುಪಾಕಿ ಸುಬ್ಬಣ್ಣಾಚಾರ್ಯರ 'ನ್ಯಾಯದರ್ಪಣ ಪುಸ್ತಕವೂ ಒಂದು. ಇದು ಕನ್ನಡದ ಪ್ರಪ್ರಥಮ ಸ್ವತಂತ್ರ ಕಾನೂನು ಪುಸ್ತಕ' ಎಂಬುದಾಗಿ ತಿಳಿದುಬರುತ್ತದೆ.

" 'ನ್ಯಾಯದರ್ಪಣ' ಎಂಬ ದಕ್ಷಿಣ ಹಿಂದುಸ್ತಾನ ದೇಶದಲ್ಲಿ ನ್ಯಾಯ ತೀರಿಸುವಿಕೆಗೆ ಸಂಬಂಧಿಸಿದ ಶಾಸ್ತ್ರ ಸಂಗ್ರಹಗಳು" ಎಂಬ ಪುಸ್ತಕವು 'ಡೆಮಿ' ಆಕೃತಿಯಲ್ಲಿದ್ದು ಅವತರಣಿಕೆ ಹಾಗೂ ಅವಶಿಷ್ಟಗಳ ಹೊರತಾಗಿ ೫೧೪ ಪುಟಗಳ ಬೃಹತ್ ಗ್ರಂಥ. ಈ ಕೃತಿಯ ಲೇಖಕರು ತುಪಾಕಿ ಸುಬ್ಬಣ್ಣಾಚಾರ್ಯರು. ಇವರು ಆ ಕಾಲದ ಮಂಗಳೂರು ಜಿಲ್ಲಾ ಪುತ್ತೂರು ತಾಲೂಕು ಮುನ್ಸೀಫರಾಗಿಯೂ, 'ವಕೀಲರ ನಡವಳಿಕೆ', 'ವಕೀಲರ ಧರ್ಮ' ಎಂಬ ಎರಡು ಕೃತಿಗಳ ರಚಯಿತರಾಗಿ ಕಾನೂನು ವಿಷಯದಲ್ಲಿ ಅಪಾರ ಅನುಭವವನ್ನು ಹೊಂದಿದವರು. ಈ ಪುಸ್ತಕವು ೧೮೬೯ನೇ ಇಸವಿಯಲ್ಲಿ ಬೆಂಗಳೂರಿನ 'ಕೃಷ್ಣರಾಜ ವಿಲಾಸ' ಮುದ್ರಣಾಲಯದಲ್ಲಿ ಛಾಪಿಸಲ್ಪಟ್ಟಿತು.

ಗ್ರಂಥದ ಅವತರಣಿಕೆಯಲ್ಲಿ ಲೇಖಕರು, "ಈ ದೇಶದಲ್ಲಿ ನ್ಯಾಯ ತೀರಿಸುವವರ ನಡವಳಿಕೆಯ ಬಗ್ಗೆ ಉಂಟಾಗಿರುವ

ಕಾನೂನುಗಳಲ್ಲಿ ಖಂಡಿತವಾಗಿ ನಿರ್ಣಯವಿಲ್ಲದ ವಿಷಯಗಳಲ್ಲಿ ನೀತಿ ಮತ್ತು ನ್ಯಾಯ ಪ್ರಕಾರ ನಡೆಸಬೇಕಂತ ಹೇಳೋಣವಾಗಿದೆ, ಪರಂತು ನೀತಿಯಂದರೇನು ? ನ್ಯಾಯವೆಂದರೇನು ? ಅವುಗಳ ಸಂಪ್ರದಾಯಗಳೇನೆಂಬುದು ಹೇಳೋಣಾಗಲಿಲ್ಲ. ಆ ವಿವರಗಳು ಇಂಗ್ಲೀಷ್ ಜನರಿಂದ ರಚಿಸಲ್ಪಟ್ಟ ಅನೇಕ ವಿಧವಾದ ಗ್ರಂಥಗಳಲ್ಲಿ ಇರುತ್ತವೆ. ಆದರೆ ಆ ಭಾಷೆ ತಿಳಿಯದವರಾದ ನೇಟಿವ್ ಉದ್ಯೋಗಸ್ತರು, ವಕೀಲರು ಮುಂತಾದವರಿಗೆ ಅವುಗಳ ಅಭಿಪ್ರಾಯ ತಿಳಿಯುವ ಹಾಗೆ ಕನ್ನಡ ಭಾಷೆಯಲ್ಲಿ ಯಾವುದೊಂದು ಗ್ರಂಥಗಳು ಇಲ್ಲದೇ ಇರುವುದರಿಂದಲೂ ಅಂಥ ತಿಳುವಳಿಕೆ ಇಲ್ಲದೆ ಜನರು ಮೋಸ ಹೋಗುವುದರಿಂದ ಸಹ ಅಂಥ ಎಲ್ಲಾ ಜನರ ಪ್ರಯೋಜನಕ್ಕೋಸ್ಕರ....ಈ ಗ್ರಂಥವು ರಚಿಸಲ್ಪಟ್ಟಿದೆ" ಎಂದು ಕೃತಿಯ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ.

ಇಂತಹದೊಂದು ಗ್ರಂಥವನ್ನು ರಚಿಸಲು ಲೇಖಕರು ನೂರಾರು ಪೌರಾತ್ಯ ಹಾಗು ಪಾಶ್ಚಾತ್ಯ ಗ್ರಂಥಗಳನ್ನು ಅಧ್ಯಯನ ಮಾಡಿ ವಿಷಯಗಳನ್ನು ಕಲೆಹಾಕಿ ಜಾಗರೂಕರಾಗಿ ಕ್ರೋಢೀಕರಿಸಿ ದಾಖಲಿಸಿದ್ದಾರೆ. "ಸಾಮಾನ್ಯ ನ್ಯಾಯ'ವನ್ನು ವಿಷದಪಡಿಸಲು ಲೇಖಕರು, (೧) 'ಟೇಪ್ಸ್ ಲಾ ಆಫ್ ಮೈಂಟೆನೆನ್ಸ್ ಎಂಡ್ ಶೇಂಪರ್ಟಿ, ೨) ಹೊಲ್ದ ವರ್ತ'ಸ್" ಲಾ ಆಫ್‌ಕಂಟ್ರಿ ಕೋರ್ಟ್‌ಗೈಡ್', ೩) ಬ್ರೂನ್ಸ್‌ಕಮೆಂಟರೀಸ ಒನ ದಿ ಕೊಮನ್ ಲಾ ಆಫ್ ಇಂಗ್ಲೆಂಡ್–೧೮೫೬, ೪) ನೋರ್ಟನ್ಸ್ ಲಾ ಆಫ್ ಎವಿಡೆನ್ಸ್–೧೮೬೨ ಮುಂತಾದ ಇಪ್ಪತ್ತೆಂಟು ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ. ಹಿಂದೂ ನ್ಯಾಯ ಶಾಸ್ತ್ರಕ್ಕಾಗಿ, 'ಮನುಸ್ಮೃತಿ', 'ಪರಾಶರ ಮಾಧವೀಯ', (೧೮೬೮), ಸ್ಮೃತಿ ಚಂದ್ರಿಕಾ', 'ವ್ಯವಹಾರ ಮಯೂಖ'ದಲ್ಲಿನ ದಾಯಭಾಗ ಮಿತಾಕ್ಷರ', ದಾಯಕ್ರಮ ಸಂಗ್ರಹ, ದತ್ತ ಮೀಮಾಂಸ ಮತ್ತು ದತ್ತ ಚಂದ್ರಿಕಾ, ಭಾಗಗಳನ್ನೂ, ಜೀಮೂತವಾಹನನ' ಹಿಂದೂ ಉತ್ತರಾಧಿಕಾರಿ ನಿರ್ಣಯ' (೧೮೨೨) ಗ್ರಂಥಗಳಲ್ಲದೆ, ಥೋಮಸ್ ಸ್ಟ್ರೇಂಜ್‌ರವರ 'ಹಿಂದೂ ಲಾ', ಹಾಗೂ 'ಮೇನ್ಯುವಲ್ ಆಫ್ ಹಿಂದೂ ಲಾ' ಎಂಬ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ. ಇದಲ್ಲದೆ ಮುಸ್ಲಿಂ, ರೋಮನ ಕಾಯ್ದೆಗಳಿಗಾಗಿ ಮತ್ತು ಕ್ರಿಮಿನಲ್ ಕಾಯ್ದೆಯ ಬಗೆಗೂ ಹದಿನಾರಕ್ಕೂ ಹೆಚ್ಚು ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ.

ಲೇಖಕರು ತಮ್ಮ ಸುದೀರ್ಘ ಇಂಗ್ಲಿಷ್ ಮುನ್ನುಡಿಯಲ್ಲಿ, 'ಜಸ್ಟಿಸ್ ಈಸ್ ಡಿಸ್ಪೊಸಿಷನ್ ಆಫ್ ಮೈಂಡ್ ವಿಚ್ ರೆಂಡರ್ಸ್ ಟು ಎವೆರಿಒನ್ ಹಿಸ್ ರೈಟ್ ಅಂಡ್ ಈಸ್ ಒಪೋಸ್ಡ್ ಟು ಇಂಜುರಿ ಒರ್ ರೋಂಗ್ (ಪ್ರತಿಯೊಬ್ಬರಿಗೂ ತನ್ನ ಹಕ್ಕುಗಳ ಬಗೆಗಿರುವ ಅರಿವು ಮೂಡಿಸುವ ಹಾಗೂ ಇನ್ನೊಬ್ಬರ ಬಗೆಗೆ ತಪ್ಪೆಸಗದಂತೆ ನಡೆಸುವ ಆತ್ಮಸಾಕ್ಷಿಯ ತೀರ್ಮಾನವೇ ನ್ಯಾಯ) ಎನ್ನುತ್ತಾರೆ. ದೇಶ, ಕಾಲ ಎಂದು ಹೇಳುತ್ತ ಸರಿ ಯಾವುದು ತಪ್ಪು ಯಾವುದು ಎಂದು ನಿರ್ಣಯಿಸುವುದೇ ನ್ಯಾಯ ಎನ್ನುತ್ತಾರೆ. ನ್ಯಾಯವು ದೇಶ, ಕಾಲ ಜನಾಂಗಗಳಿಗನುಸಾರವಾಗಿ ಭಿನ್ನವಾದ ರೂಪ ತಾಳುತ್ತದೆ. ಇದಕ್ಕಾಗಿ ನ್ಯಾಯ ನೀಡುವಾತ, 'ದೇವರ ನ್ಯಾಯ', ಪ್ರಕೃತಿಯ ನ್ಯಾಯ' ಮತ್ತು 'ನೆಲದ ನ್ಯಾಯ'ಗಳನ್ನು ಅರಿತಿರಬೇಕು ಎಂದು ಎಚ್ಚರಿಸುತ್ತಾರೆ. ನಾಗರಿಕ ನಡುವಳಿಕೆ, ನಿಬಂಧನೆಗಳ ಬಗ್ಗೆ ಬ್ರಿಟಿಷ್ ಸರಕಾರವು ಬಹಳ ಉದಾರಿಯಾಗಿದ್ದು ಉತ್ತರಾಧಿಕಾರ ನಿರ್ಣಯ, ದತ್ತು ಸ್ವೀಕಾರ, ಮದುವೆ ಹಾಗೂ ಧಾರ್ಮಿಕ ಆಚರಣೆಗಳಲ್ಲಿ ಭಾರತದ ಎಲ್ಲಾ ಮತ ಧರ್ಮೀಯರು ಅವರವರ ಧರ್ಮದಂತೆ ನಡೆದುಕೊಳ್ಳಲು ಸೂಚಿಸಿದೆ. ಆದರೂ ನಾಗರಿಕ ನಡವಳಿಕೆಗೆ ಸಂಬಂಧಿಸಿದ ತೊಡಕಿಗೆ ಆಯಾ ನೆಲದ ನ್ಯಾಯ–ಶಾಸ್ತ್ರಗಳಲ್ಲಿ ಉತ್ತರ ಸಿಕ್ಕದಾದಾಗ ನ್ಯಾಯಾಧೀಶನು ತನ್ನ ಆತ್ಮಸಾಕ್ಷಿಗನುಗುಣವಾಗಿ ನ್ಯಾಯವೇ ಪ್ರಧಾನವಾಗಿರಿಸಿಕೊಂಡು ನಿಷ್ಪಕ್ಷಪಾತವಾಗಿ ತೀರ್ಪು ನೀಡಬೇಕು ಎನ್ನುತ್ತಾನೆ. ಅಂಗ್ರೇಜಿ ಆಳ್ವಿಕೆಯ ಭಾರತದಲ್ಲಿನ ನ್ಯಾಯಪದ್ಧತಿ ಇಂಗ್ಲೀಷರ ನ್ಯಾಯ ನೀಡುವಿಕೆಯ ಪದ್ಧತಿಯನ್ನನುಸರಿಸಿ ನಡೆಯುತ್ತಿರುವುದರಿಂದ ಹಾಗೂ ಸ್ಥಳೀಯ ನ್ಯಾಯ ನಿರ್ಣಯ ಪದ್ಧತಿಗೂ ಅವಕಾಶವಿರುವುದರಿಂದ ನ್ಯಾಯ ನಿರ್ಣಯ ಸಂಬಂಧಿ ಗ್ರಂಥಗಳ ರಾಶಿಯೇ ತುಂಬಿದ್ದು ಅವುಗಳ ಅಧ್ಯಯನವೆಂದರೆ ಅಂಧಕಾರದ ಕೂಪದಲ್ಲಿ ದೊಂದಿಯ ಬೆಳಕು ಹಾಯಿಸಿ ಕತ್ತಲಲ್ಲಿ ಕಣ್ಣಾಡಿಸಿ ನಮ್ಮ ಅಜ್ಞಾನವನ್ನು ನಾವು ಕಂಡುಕೊಂಡಂತಾಗುತ್ತದೆ. ಆದರೆ ನ್ಯಾಯಾಸ್ಥಾನದಲ್ಲಿ "ಅಜ್ಞಾನಕ್ಕೆ ಕ್ಷಮೆ ಇಲ್ಲ"ದ ಕಾರಣ ನ್ಯಾಯಾಧೀಶರು ಹಾಗೂ ತತ್ಸಂಬಂಧಿ ವ್ಯಕ್ತಿಗಳು ನ್ಯಾಯಶಾಸ್ತ್ರದ ಬಗೆಗೆ ವಿಶದವಾದ ತಿಳುವಳಿಕೆ ಹೊಂದಿರಬೇಕು ಎಂದಿದ್ದಾರೆ. ಆ ಕಾಲದಲ್ಲಿ ಲೇಖಕರೇ ಹೇಳುವಂತೆ ಕನ್ನಡ ಜಿಲ್ಲೆಯಲ್ಲಿ ಬಿ.ಎಲ್. ಪದವೀಧರರಾದ ಒಬ್ಬ ವ್ಯಕ್ತಿಯೂ ಇರಲಿಲ್ಲ. ಸ್ವತಃ ಲೇಖಕರೇ ಹೇಳುವಂತೆ, 'ತಾನು ಯಾವುದೇ ವಿಶ್ವ ವಿದ್ಯಾಲಯದ ಪದವಿ ಹೊಂದಿದವನಲ್ಲ', ಆದರೂ ತಾನು ಇಂಗ್ಲಿಷನಲ್ಲಿ ಬರೆದ 'ದ ವಕೀಲ್ಸ್ ಗೈಡ್', ಹಾಗೂ 'ಎ ಮೆನ್ಯುಅಲ್ ಆಫ್ ವಕೀಲ್ಸ್ ಡ್ಯೂಟೀಸ್' ಎಂಬೆರಡು ಗ್ರಂಥಗಳು ಮದ್ರಾಸ್ ಗವರ್ನರರಾದ ಲಾರ್ಡ್ ನೇಪಿಯರ್, ಮದ್ರಾಸ್ ಹೈಕೋರ್ಟಿನ ನ್ಯಾಯಾಧೀಶರೂ, ಐರೋಪ್ಯ ಅಧಿಕಾರಿಗಳೂ ಮತ್ತು ಮುಂಬೈ–ಮದ್ರಾಸ್ ಪ್ರಾಂತಗಳಲ್ಲಿ ಸರಕಾರಿ ಸೇವೆಯಲ್ಲಿರುವ ಅನೇಕ ಭಾರತೀಯರ ಮೆಚ್ಚುಗೆ ಗಳಿಸಿದ್ದ ಕಾರಣ ತಾನು ಈ ಬೃಹತ್ ಗ್ರಂಥದ ರಚನೆಗೆ ಧೈರ್ಯ ಮಾಡಿದ್ದೇನೆ ಎಂದಿದ್ದಾರೆ.

"ನ್ಯಾಯ ದರ್ಪಣ" ಎಂಬ ಈ ಗ್ರಂಥದ ವಿಷಯಗಳನ್ನು ಸೂಕ್ಷ್ಮವಾಗಿ ಹನ್ನೆರಡು ಅಧ್ಯಾಯಗಳನ್ನಾಗಿ ವಿಂಗಡಿಸಿದ್ದಾರೆ. (೧) ಶಾಸ್ತ್ರ ವಿವರಣೆ, (೨) ಮನುಷ್ಯರ ಸ್ವತಂತ್ರಗಳು, (೩) ವಸ್ತುಗಳು ವ ಅದರ ಮೇಲಿನ ಸ್ವತಂತ್ರಗಳು, (೪) ಕರಾರುಗಳು, (೫) ಸಿವಿಲ್ ವ್ಯಾಜ್ಯಕ್ಕೆ ಆಕಾರವಾದ ತಪ್ಪುಗಳು, (೬) ನ್ಯಾಯ ಸ್ಥಾನದ ವಿವರಣೆಗಳು, (೭) ಸಿವಿಲ್ ವ್ಯಾಜ್ಯಗಳ ವ್ಯವಹರಣೆ ಕ್ರಮಗಳು, (೮) ರುಜುವಾತು ಶಾಸ್ತ್ರದ ನಿಬಂಧನೆಗಳು, (೯) ದಸ್ತೈವೇಜುಗಳಿಗೆ ಅರ್ಥ ಮಾಡುವ ನಿಬಂಧನೆಗಳು, (೧೦) ನೀತಿಶಾಸ್ತ್ರದ ನಿಬಂಧನೆಗಳು, (೧೧) ದೇಶೀಯ ಶಾಸ್ತ್ರಗಳು, (೧೨) ಕ್ರಿಮಿನಲ್ ದಂಡ ನ್ಯಾಯಶಾಸ್ತ್ರಗಳು, ಪೀನಲ್ ಕೋಡು ಮತ್ತು ಅಪೆಂಡಿಕ್ಸ್ ಯಾನೆ ಪರಿಶಿಷ್ಟಗಳು. ಇದರಡಿಯಲ್ಲಿ (ಅ) ರಸ್ತೆ ನಿಬಂಧನೆ, (ಬ) ರಿಜಿಸ್ಟ್ರಿ ಆಕ್ಟು ನಿಬಂಧನೆ ಮತ್ತು (ಕ) ನ್ಯಾಯ ಸೂತ್ರಗಳು–ಗಾದೆಗಳು, ಸುವಾಖ್ಯೆಗಳು ಮತ್ತು ಪ್ರತಿಯೊಂದು ಅಧ್ಯಾಯವನ್ನು ವಿಷಯದ ವಿಸ್ತಾರಕ್ಕನುಗುಣವಾಗಿ ಹಲವರು ಚಿಕ್ಕ ಚಿಕ್ಕ ಸ್ವತಂತ್ರ ವಿಷಯಸೂಚಿಯನ್ನು ನೀಡಿ ಕೂಲಂಕಷವಾಗಿ ಚರ್ಚಿಸಿದ್ದಾರೆ.

೧ನೆಯ ಅಧ್ಯಾಯದಿಂದ ೧೧ನೆಯ ಅಧ್ಯಾಯದ ವಿಷಯಗಳನ್ನು ಹಿಂದೂ ಜನರ ಮತ ಸಂಬಂಧವಾದ ವೇದ, ಶಾಸ್ತ್ರ, ಪುರಾಣಗಳು, ನ್ಯಾಯ–ಶಾಸ್ತ್ರ ಅರ್ಥ ವಿವರವು, ಸಿವಿಲ್ ಶಾಸ್ತ್ರ, ಮನುಷ್ಯರ ಸ್ವತಂತ್ರಗಳು, ಕರಾರುಗಳು, ತಪ್ಪುಗಳು, ನಿವೃತ್ತಿ ಹೊಂದತಕ್ಕ ಮಾರ್ಗಗಳು, ಉಯಿಲುಗಳು, ಹಿಂದೂ–ಧರ್ಮಶಾಸ್ತ್ರ ಸಾರಾಂಶ ಮುಂತಾಗಿ ೨೮೩ ಉಪಶೀರ್ಷಿಕೆಯಡಿಯಲ್ಲಿ ೩೨೭ ಪುಟಗಳಲ್ಲಿ ವಿವರಿಸಿದ್ದಾರೆ. ನಂತರದ ಕ್ರಿಮಿನಲ್ ದಂಡ ನ್ಯಾಯಶಾಸ್ತ್ರ ಹಾಗೂ ಪೀನಲ್ ಕೋಡಿನ ವಿವರಣೆಗೆ ೧೮೫ಕ್ಕೂ ಹೆಚ್ಚು ಪುಟಗಳನ್ನು ಮೀಸಲಿರಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಈ ಎರಡು ಕೋಡುಗಳ ಅರ್ಥ, ವಿವರಣೆ, ಪೋಲೀಸಿನವರಿಗೆ ಸಂಬಂಧಿಸಿರುವ ಆಕ್ಟಿನ ಸಾರಾಂಶ, ಕ್ರಿಮಿನಲ್ ರೂಲ್ಸ್ ಪ್ರಾಕ್ಟಿಸ್ ಎಂಬ ನಡವಳಿಕೆ ಕ್ರಮ, ಮೊಖಾಫ, ಎಸೆಸ್ಸರು, ಅಡದಡ ಸವಾಲುಗಳು ಸಮನ್ಸಗಳು, ಮಾನನಷ್ಟ, ಬಲೋದ್ಬಂದಿ ವ ಜುಲುಮ್ ಮುಂತಾದ ವಿಷಯಗಳು ಸೇರಿವೆ. ಪೀನಲ್ ಕೋಡ್ ವಿಷಯವನ್ನು ಇಪ್ಪತ್ಮೂರು ಪ್ರತ್ಯೇಕ ಅಧ್ಯಾಯಗಳಲ್ಲಿ ವಿವರಿಸಿದ್ದಾರೆ. ಆ ಅಧ್ಯಾಯದೊಳಗೆ ಬರುವ ಪ್ರತೀ ವಿಷಯವನ್ನು ಉದಾಹರಣೆ ಸಹಿತ ಹೇಳಿ ಸ್ಪಷ್ಟಪಡಿಸಿದ್ದಾರೆ. ಉದಾಹರಣೆಗೆ 'ಬಲೋದ್ಬಂದಿ ವ ಜುಲುಮ್ ಬಗ್ಗೆ ಹೇಳುವಾಗ, ಬಲಾತ್ಕಾರವಾಗಿ ಒಬ್ಬನ ಸ್ವಾತಂತ್ರ್ಯವನ್ನು ನಿರ್ಬಂಧಿಸುವುದು ಬಲೋದ್ಬಂದಿಯಾದರೆ ಯಾರೊಬ್ಬನನ್ನು ಸನ್ನೆ ಮಾಡಿಯಾಗಲಿ, ಸನ್ನಾಹ ಮಾಡಿಯಾಗಲೀ ತಮ್ಮ ಎದುರಿರುವ ಇನ್ನೊಬ್ಬನ ಮೇಲೆ ಬಲೋದ್ಬಂದಿ ನಡೆಸುವುದಾಗಿ ಆತಗೆ ತೋರಬೇಕೆಂಬ ಇರಾದೆಯಿಂದ ಅಂಥ ಕೆಲಸ ಮಾಡಿದರೆ ಜುಲುಮ್ ನಡೆಸುವವನಂಥವ ಎಂದೆನಿಸಿಕೊಳ್ಳುತ್ತಾನೆ. ಉದಾ : 'ನಾನು ನಿನ್ನನ್ನು ಹೊಡೆಯುತ್ತೇನೆ ಒಬ್ಬನು ಹೇಳಿ ಕೈಯಲ್ಲಿ ಕೋಲು ಎತ್ತುವುದು,' ಹೀಗೆ ಪ್ರತಿ ವಿಷಯಕ್ಕು ಒಂದಕ್ಕಿಂತ ಹೆಚ್ಚು ಉದಾಹರಣೆಗಳನ್ನು ನೀಡಿದ್ದಾರೆ.

ಈ ಎಲ್ಲಾ ವಿಷಯಗಳನ್ನು ವಿವರಿಸುವಾಗ ಲೇಖಕರು ಬಳಸಿದ ಭಾಷೆ, ಭಾಷೆಯ ಶೈಲಿ, ಆ ಕಾಲದ ಗದ್ಯ ಬರಹಕ್ಕೊಂದು ಅಪರೂಪದ ಮಾದರಿಯಾಗಿದೆ. ನ್ಯಾಯಶಾಸ್ತ್ರದಂತಹ ಕರಾರುವಾಕ್ಕಾದ ವಿಷಯವನ್ನು ಸಂದಿಗ್ಧತೆಗೆ ಎಡೆ ಇಲ್ಲದಂತೆ ನಿಶ್ಚಿತವಾಗಿ ಹೇಳಬೇಕಾದ ಕಾರ್ಯವು ಕಠಿಣವಾದರೂ ಲೇಖಕರು ಇಲ್ಲಿ ಸಮರ್ಥವಾಗಿ ಸುಲಲಿತವಾಗಿ ನಿರ್ವಹಿಸಿದ್ದಾರೆ. ಲೇಖಕರು ಇಲ್ಲಿ ಶಬ್ದಕ್ಕಾಗಿ ತಡಕಾಡಲಿಲ್ಲ. ಆ ಕಾಲದಲ್ಲಿ ರೂಢಿಯಲ್ಲಿದ್ದ ಅಂಗ್ರೇಜಿ, ಉರ್ದು ಶಬ್ದಗಳನ್ನು ಕನ್ನಡಿಸಿ ಓದುಗರಿಗೆ ಕಗ್ಗಂಟಾಗಿಸುವ ಬದಲು ಅವುಗಳನ್ನು ಹಾಗಡಯಡ ಉಳಿಸಿಕೊಂಡು ಓದುಗರ ಶ್ರಮವನ್ನು ಹಗುರ ಮಾಡಿದ್ದಾರೆ. ಉದಾ : ಅಮಲ್‌ಜಾರಿ, ಬನಾವಣೆ, ಬಂದಿವಾನ, ಬರ್ತರ್ಫ, ಇರಾದೆ, ಇಂಕಾರ್, ಕೈಫಿಯತ್, ಮಾರಿಫತ್, ಪಡಿಚ್ಯಾ, ಫೈಸಲ್, ಜಿಂದಗಿ, ಐಲಾಮ್, ಇಂಡಾರ್ಸ್‌ಮೆಂಟ್, ರಿಟರ್ನ್, ರಿಫರ್, ಉಯಿಲ್, ಡಿಸ್ಮಿಸ್, ಪ್ರೋಸಿಡಿಂಗ್, ಅಫಿಲಾಂಟ್, ಕರೆಸ್ಪಾಂಡೆಂಟ್ ಇಂತಹ ಪರಭಾಷಿಕ ಶಬ್ದಗಳನ್ನು ಯಥಾವತ್ತಾಗಿ ಬಳಸಿಕೊಂಡುದು ಕೃತಿಯ ದೌರ್ಬಲ್ಯವೆಂದೆನಿಸುವುದಿಲ್ಲ. ಬದಲಿಗೆ ಆ ಕಾಲದಲ್ಲಿಯೇ ಕನ್ನಡದಲ್ಲಿ ಇಂತಹುದೊಂದು ಕಾನೂನು ಗ್ರಂಥವನ್ನು ಹೊರತರಬೇಕೆನ್ನುವ ಕಾಳಜಿಗೆ ಮೆಚ್ಚುಗೆ ಮೂಡಿಸುತ್ತದೆ.

"ನ್ಯಾಯ ದರ್ಪಣ" ಎಂಬ ಈ ಕಾನೂನು ಸಂಬಂಧಿ ಕೃತಿಯಲ್ಲಿ ಲೇಖಕರು ತಮ್ಮ ಸುದೀರ್ಘ ಕಾಲದ ವೃತ್ತಿಯನುಭವ, ನ್ಯಾಯನಿಷ್ಠೆ ಮತ್ತು ಪ್ರಾಮಾಣಿಕತೆಯನ್ನು ಮೆರೆಸಿದ್ದುದು ಅದರ ಅವಶಿಷ್ಟವೆಂಬ ಭಾಗದಲ್ಲಿ. ಈ ಭಾಗ ಆಗಿನ ಕಾನೂನು, ಕೋಡು, ಕಲಮುಗಳಿಗೆ ಸಂಬಂಧಿಸಿರದೆ ಮಾನವ ಬದುಕನ್ನು ಹೇಗೆ ನಡೆಸಬೇಕು ? ಕಾನೂನುಗಳು ಹೇಗಿರಬೇಕು ? ನ್ಯಾಯಾಧೀಶರುಗಳು ಹೇಗಿರಬೇಕು ? ನ್ಯಾಯ ನೀಡಿಕೆ ಹೇಗಿರಬೇಕು ? ಕರಾರುಗಳು, ದಾನಗಳ ಬಗೆಗೆ ಜನರು ಯಾವ ರೀತಿ ನಡೆದುಕೊಳ್ಳಬೇಕು ? ಮುಂತಾದ ವಿಷಯಗಳನ್ನು ಲೇಖಕರು ತಮ್ಮ ಸ್ವಂತ ಮಾತುಗಳಲ್ಲಿ ಸರಳವಾಗಿ, ಸ್ಪಷ್ಟವಾಗಿ ತಿಳಿಸಿದ್ದಾರೆ. ಲೇಖಕರು ದೇವರ ಕುರಿತು ಹೇಳುತ್ತಾ, ದೇವರ ಅನುಗ್ರಹದ ಗುರುತು

ಕಾಣುವವನ ವಿಷಯದಲ್ಲಿ ಜಾಗ್ರತೆಯಿಂದಿರಬೇಕು. ನೀನು ಬೇಕಂತ ಬಾವಿಯಲ್ಲಿ ಇಳಿದರೆ ನಿನ್ನನ್ನು ಮೇಲೆ ತೆಗೆಯುವುದು ದೇವರ ಕೆಲಸವಲ್ಲ, ಸುಳ್ಳು ಹೇಳುವ ನಾಲಿಗೆಯು ದೇವರಿಗೆ ವಿರುದ್ಧವಾಗಿರುತ್ತದೆ' ಎಂದಿದ್ದಾರೆ. ಲೋಕಕ್ಕೆ ಕ್ಷೇಮಕರವಾದ ಸಂಗತಿ ಯಾವುದೋ ಅದು ಶ್ರೇಷ್ಠವಾದ ಶಾಸ್ತ್ರವಾಗಿರುತ್ತದೆ. ಒಬ್ಬನ ಉದಾಹರಣೆ ಕೇಳದೆ ಆತನನ್ನು ಶಿಕ್ಷಿಸಬಾರದು, ನ್ಯಾಯಸ್ಥಾನದ ಕಾರ್ಯಗಳು ಯಾರಿಗೂ ಬಾಧಿಸಕೂಡದು, ನಿನ್ನ ವಸ್ತುಗಳನ್ನು ನೀನು ಅನುಭವಿಸುವಾಗ್ಗೆ ಇನ್ನೊಬ್ಬರ ವಸ್ತುವಿಗೆ ಬಾಧಿಸದ ಹಾಗೆ ಅನುಭವಿಸು. ಬರಿ ವಾಗ್ದಾನವು ವ್ಯಾಜ್ಯದ ಹೇತುವಾಗುವುದಿಲ್ಲ, ಶಾಸ್ತ್ರವು ಜಾಗರೂಕರಾಗಿರುವವರಿಗೆ ಸಹಾಯ ಮಾಡುತ್ತದೆಯೆ ಹೊರತು ತಮ್ಮ ಹಕ್ಕಿನ ಮೇಲೆ ನಿದ್ರೆ ಮಾಡುವವರಿಗೆ ಸಹಾಯ ಮಾಡುವುದಿಲ್ಲ, ವಾದಿಯಾಗಿ ಬಂದವನು ತನ್ನ ಹಕ್ಕು ರುಜು ಮಾಡಿ ವಸ್ತು ಪಡೆಯಬೇಕಲ್ಲದೆ ಎದುರಾಳಿಯ ಹಕ್ಕಿನಲ್ಲಿಯೇ ಕುಂದುಗಳಿಂದ ವಸ್ತು ಪಡೆಯತಕ್ಕವನಾಗುವುದಿಲ್ಲ. ಇಂಥ ನೂರಾರು ಅನುಭವದ ಹೇಳಿಕೆಗಳು ಈ ಭಾಗದಲ್ಲಿದ್ದು ಸಾಮಾನ್ಯ ಓದುಗರನ್ನೂ ಈ ಗ್ರಂಥವು ಆಕರ್ಷಿಸುತ್ತದೆ.

ಗ್ರಂಥದ ಕೊನೆಯ ನಾಲ್ಕಾರು ಪುಟಗಳನ್ನು ಫ್ರೇಜುಗಳು ಹಾಗೂ ಕನ್ನಡ ಗಾದೆ ಮಾತುಗಳಿಗಾಗಿ ಮೀಸಲಿರಿಸಿದ್ದಾರೆ. 'ನಿನ್ನ ಸ್ವಂತ ಗುಣವನ್ನಾಗಲೀ ದುರ್ಗುಣವನ್ನಾಗಲೀ ಹೇಳಿಕೊಳ್ಳಬೇಡ, ಯಾತಕ್ಕೆಂದರೆ ಅಂಥ ಸುಗುಣವನ್ನು ಪರಕೀಯರು ನಂಬರು, ದುರ್ಗುಣವನ್ನು ನೀನು ಹೇಳುವುದಕ್ಕಿಂತ ಹೆಚ್ಚು ಉಂಟೆಂದು ಗ್ರಹಿಸುತ್ತಾರೆ. "ಸಿಟ್ಟು ಮತ್ತು ಅವಸರವು ಒಳ್ಳೆಯ ಆಲೋಚನೆಯನ್ನು ಕೆಡಿಸುತ್ತದೆ', 'ಹೇಳುವ ಬುದ್ಧಿ ವರ್ಾರ್ಗವು ತತ್ಕಾಲದಲ್ಲಿ ನಿನಗೆ ಅವಶ್ಯವಿಲ್ಲವೆಂತ ಕಂಡಾಗ್ಯೂ ಅದನ್ನು ಬರೆದು ಇಟ್ಟುಕೊಳ್ಳಬೇಕು'. ಇಂತಹ ನೂರಾರು ಬೋಧಪ್ರದ ವ್ಯಾಖ್ಯೆಗಳನ್ನು ಲೇಖಕರು ಸಂಗ್ರಹಿಸಿ ದಾಖಲಿಸಿದ್ದಾರೆ. ಗಾದೆಗಳು ವೇದಕ್ಕೆ ಸಮವಂತೆ. ಅವು ಅಜರ-ಅಮರ,' ಸತ್ಯವಿದ್ದರೆ ಎತ್ತಲೂ ಭಯವಿಲ್ಲ', ನಾದವಿದ್ದರೆ ಘಂಟೆ ವಾದವಿದ್ದರೆ ತಂಟೆ', 'ದೋಷ ಮಾಡುವವನಿಗೆ ರೋಷ ಬಹಳ," ಅಲ್ಪ ಕಾರ್ಯಕ್ಕೆ ಅರಮನೆಗೆ ಹೋಗಕೂಡದು', ಎಂಬಂತಹ ಹಲವಾರು ಗಾದೆಗಳ ಸಂಗ್ರಹವು ಈ ಗ್ರಂಥಕ್ಕೆ ಮೆರುಗನ್ನು ತಂದಿದೆ.

"ನ್ಯಾಯ ದರ್ಪಣ"ವೆಂಬ ಈ ಗ್ರಂಥವು ನ್ಯಾಯಶಾಸ್ತ್ರಕ್ಕೆ ಸಂಬಂಧಿಸಿದ ಅಪರೂಪದ ಅಪೂರ್ವ ಹೊತ್ತಿಗೆ. ಗ್ರಂಥದ ಆದಿಯಿಂದ ಅಂತ್ಯದವರೆಗೂ ಎಲ್ಲೆಲ್ಲೂ ಕನ್ನಡದ ಅಂಕಿ ಅಕ್ಷರಗಳೇ ಕಾಣುತ್ತವೆ. ನೂರೈವತ್ತು ವರ್ಷಗಳ ಹಿಂದೆ ಕನ್ನಡನಾಡಿನಲ್ಲಿ ಎಲ್ಲೆಲ್ಲೂ ಆಡಳಿತದಲ್ಲಿ ಕನ್ನಡವೇ ಚಲಾವಣೆಯಲ್ಲಿತ್ತು. ಆಡಳಿತ ಭಾಷೆ, ಲಿಪಿಗಳೆರಡೂ ಕನ್ನಡವೇ ಆಗಿತ್ತು. ಆಳುವ ದೊರೆಗಳು ಆಂಗ್ಲರಾಗಿದ್ದರೂ ಭಾಷಾ ಬೆಳವಣಿಗೆಗೆ ತಡೆ ಇರಲಿಲ್ಲ. ಅದಕ್ಕೆ ತಕ್ಕಂತೆ ಜಗತ್ತಿನ ಎಲ್ಲಾ ಜ್ಞಾನವನ್ನು ಕನ್ನಡದಲ್ಲಿ ತರಬೇಕೆಂಬ ಪ್ರಾಮಾಣಿಕ ಕಾಳಜಿ, ಪ್ರಯತ್ನಗಳು ಅಂದಿನ ವಿದ್ಯಾವಂತ ಜನರಲ್ಲಿತ್ತು. ಇದರಿಂದಲೇ "ನ್ಯಾಯ ದರ್ಪಣ"ದಂತಹ ಅಮೂಲ್ಯ ಕೃತಿ ಕನ್ನಡದಲ್ಲಿ ಹೊರಬರಲು ಸಾಧ್ಯವಾಯಿತು. ಅದೇ ಪ್ರಯತ್ನ ಪರಿಶ್ರಮ ಮುಂದುವರಿದು ಬಂದಿದ್ದರೆ ಕರ್ನಾಟಕ ರಾಜ್ಯದಲ್ಲಿ ಕನ್ನಡವನ್ನು ಉಳಿಸಬೇಕೆಂಬ ಹೋರಾಟದ ಅವಶ್ಯಕತೆಯೇ ಬರುತ್ತಿರಲಿಲ್ಲ. ನ್ಯಾಯಾಲಯಗಳಲ್ಲಿ ಕನ್ನಡ ಬಳಕೆಗೆ ಕಾನೂನು ಪದ ಕೋಶವಿಲ್ಲವೆಂಬ ಅಪಸ್ವರವೂ ಕೇಳಿ ಬರುತ್ತಿರಲಿಲ್ಲ. ಇಂತಹುದೊಂದು ಅಪೂರ್ವ ಗ್ರಂಥವನ್ನು ಕನ್ನಡಿಗರಿಗೆ ನೀಡಿದ ಶ್ರೀ ತುಪಾಕಿ ಸುಬ್ಬಣ್ಣಾಚಾರ್ಯರು ನಿಜಕ್ಕೂ ಪ್ರಾತಃಸ್ಮರಣೀಯರು.

## ಹಿಂದೂ ಧರ್ಮಶಾಸ್ತ್ರದ ಪುಸ್ತಕವು

"ಹಿಂದೂ ಧರ್ಮಶಾಸ್ತದ ಪುಸ್ತಕ"ವು ಎಂಬ ಈ ಕಿರು ಹೊತ್ತಿಗೆಯು ೧೮೫೭ರಲ್ಲಿ ಮಂಗಳೂರಿನ ಜರ್ಮನ್ ಮಿಶನ್ ಛಾಪಖಾನೆಯಲ್ಲಿ ಮುದ್ರಣಗೊಂಡಿದ್ದು ಇದರ ಮೂಲ ಲೇಖಕರು ಆಗಿನ ಮಂಗಳೂರು ಜಿಲ್ಲಾ ಸದರ್ ಅದಾಲತ್ ಕೋರ್ಟು ಜಡ್ಜರಾದ ಥಾಮಸ್ ಲೂಮಿಸ್ಟನ್ ಸ್ಟ್ರೇಂಜ್ರವರು. ಇದನ್ನು ಮಂಗಳೂರು ಜಿಲ್ಲಾ ಸಿವಿಲ್ ಕೋರ್ಟು ಇಂಗ್ಲೀಷ್ ರೈಟರ್ ಮಂಜೇಶ್ವರ ರಾಮಪ್ಪನವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಇದು ಕನ್ನಡದಲ್ಲಿ ನ್ಯಾಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಪ್ರಥಮ ಕೃತಿಯಾಗಿದೆ. ಈ ಗ್ರಂಥವು ಅನುವಾದಿತ ಕೃತಿಯಾಗಿದ್ದರೂ ಹಿಂದೂ ಧರ್ಮಶಾಸ್ತ್ರವನ್ನು ತಿಳಿಯಬೇಕೆನ್ನುವವರಿಗೆ ಉತ್ತಮ ಮಾರ್ಗಸೂಚಿಯಾಗಬಲ್ಲದು.

ಇಂಗ್ಲೀಷರು ಭಾರತವನ್ನಾಳುತ್ತಿದ್ದಾಗ ಅವರು ಈ ನೆಲದಲ್ಲಿ ವಾಸಿಸುತ್ತಿದ್ದ ಹಿಂದೂ, ಮುಸ್ಲಿಂ, ಕ್ರೈಸ್ತ ಮತೀಯರಿಗೆ ಅವರವರ ಮತಾನುಸಾರ ನ್ಯಾಯ ಒದಗಿಸಲು ಪ್ರಯತ್ನಿಸಿದರು. ಇದಕ್ಕಾಗಿ ಹಿಂದೂ ಧರ್ಮೀಯರ ಧರ್ಮಶಾಸ್ತ್ರದ ಆದಿ ಗ್ರಂಥಗಳಾದ ವೇದಗಳು, ಸ್ಮೃತಿಗಳು ಅವುಗಳಿಂದ ಹುಟ್ಟಬಂದ "ಮಿತಾಕ್ಷರಿ", ಸ್ಮೃತಿ ಚಂದ್ರಿಕಾ", "ಮನುಸ್ಮೃತಿ", "ಜೀಮೂತವಾಹನನ ದಾಯಭಾಗ" ಮುಂತಾದ ಕೃತಿಗಳನ್ನು ಇಂಗ್ಲೀಷಿಗೆ ಭಾಷಾಂತರಿಸಿದರು. ಇವುಗಳಲ್ಲಿ ಕೋಲ್ ಬ್ರೂಕ್ ನ" ಯಾಜ್ಞವಲ್ಕ್ಯ ಸ್ಮೃತಿಯ ದಾಯಭಾಗ", ವಿ.ಎಚ್. ಮೆಕ್ನಾಟನ್‌ನ" ಯಾಜ್ಞವಲ್ಕ್ಯ ಸ್ಮೃತಿ", ಸರ್ ವಿಲಿಯಮ್ ಜಾನ್ಸನ್ ನ" ಮನುಸ್ಮೃತಿಯ ಅನುವಾದಗಳು" ಮುಖ್ಯವಾದವುಗಳು. ಇವಲ್ಲದೆ, ಥಾಮಸ್

ಸ್ಟ್ರೇಂಜ್, ಸ್ಟಾಕ್, ಮೋರ್ಲೆ ಮುಂತಾದ ವಿದ್ವಾಂಸರು ಈ ಕೆಲಸವಲ್ಲಿ ಕೈಜೋಡಿಸಿದರು. "ಹಿಂದೂ ಧರ್ಮಶಾಸ್ತ್ರದ ಪುಸ್ತಕವು" ಎಂಬ ಈ ಪುಸ್ತಕದ ಮುನ್ನುಡಿಯಲ್ಲಿ ಲೇಖಕರು, "ಸದರ್ ಅದಾಲತ್ ಕೋರ್ಟಿನ ಜಡ್ಜರಾದ ಥಾಮಸ್ ಲೂಮಿಸ್ಟನ್ ಸ್ಟ್ರೇಂಜ್ ದೊರೆಗಳವರು ಹಿಂದೂ ಧರ್ಮಶಾಸ್ತ್ರದ ವ್ಯವಹಾರಿಕ ಅನೇಕ ವಿಷಯಗಳನ್ನು ಸಂಗ್ರಹಿಸಿ ಮಾಡಿರುವ ಇಂಗ್ಲಿಷ್ ಪುಸ್ತಕದ ಉಪಯೋಗವು ಅಮೂಲ್ಯವಾಗಿದ್ದು, ಇಂಗ್ಲಿಷ್ ಭಾಷೆಯನ್ನು ಅರಿಯದಿರುವ ಈ ದೇಶಸ್ತರು ಅವುಗಳನ್ನು ಸಾಧಿಸಲಿಕ್ಕೆ ಕಷ್ಟವಾಗಿದ್ದುದರಿಂದಲೂ ವಕೀಲಿ ಉದ್ಯೋಗದ ಪರೀಕ್ಷೆಯನ್ನು ಕೊಡಲಪೇಕ್ಷಿತರಾದ ಜನರಲ್ಲಿ ಅನೇಕರು ಇಂಗ್ಲಿಷ್ ಅರಿಯದವರೇ ಆಗಿದ್ದುದರಿಂದಲೂ ಆ ಪರೀಕ್ಷೆಯಲ್ಲಿ ಹಿಂದೂಶಾಸ್ತ್ರದ ಪರೀಕ್ಷೆ ಸಹ ಕೊಡಬೇಕಾದ್ದ ರಿಂದಲೂ ಆ ಪುಸ್ತಕದ ಕನ್ನಡ ಭಾಷಾಂತರವನ್ನು ಮಾಡಲಿಕ್ಕಾಗಿ ಅವರು ಇಚ್ಛೈಸಿದ್ದರಿಂದ ಅವರಿಗೋಸ್ಕರವಾಗಿಯೂ ಹಾಗೆಯೇ ಇಂಗ್ಲಿಷ್ ಭಾಷೆ ಅರಿಯುದಿರುವ ಇತರ ಜನರ ಉಪಯೋಗಕ್ಕಾಗಿಯೂ ಈ ಭಾಷಾಂತರವನ್ನು ಮಾಡಿದೆ" ಎಂದಿದ್ದಾರೆ.

"ಹಿಂದೂ ಧರ್ಮಶಾಸ್ತ್ರದ ಪುಸ್ತಕವು" ನೂರ ಹದಿನೈದು ಪುಟಗಳ ಕಿರು ಹೊತ್ತಿಗೆ. ಇದರಲ್ಲಿ ಒಟ್ಟು ಹದಿನಾಲ್ಕು ಅಧ್ಯಾಯುಗಳಿವೆ. (೧) ಶಾಸ್ತ್ರದ ಮೂಲಗಳು, (೨) ವಿವಾಹವು, (೩) ದತ್ತವು, (೪) ಸಂರಕ್ಷಣೆ ಕರ್ತೃತ್ವವು, (೫) ಆಸ್ತಿಯು, (೬) ಪರಾಧೀನವು, (೭) ಮರಣಶಾಸನಗಳು, (೮) ಆಸ್ತಿಯಿಂದ ನಡೆಯಬೇಕಾದ ವ್ಯಯಗಳು, (೯) ಬಾಧ್ಯತೆ-ಅಯೋಗ್ಯತೆಯು, (೧೦) ವಿಭಾಗವು, (೧೧) ಬಾಧ್ಯತೆ ಕ್ರಮವರ್ತಿತ್ವವು, (೧೨) ಬಂಗಾಲ ಶಾಸ್ತ್ರವು, (೧೩) ಮಲೆಬಾರ ಶಾಸ್ತ್ರವು, (೧೪) ಕರಾರುಗಳು ಹೀಗೆ ಅನುಕ್ರಮಣಿಕೆಯಲ್ಲಿದೆ.

ಮೊದಲನೆಯ ಅಧ್ಯಾಯವಾದ "ಶಾಸ್ತ್ರದ ಮೂಲಗಳು" ಎಂಬ ಶೀರ್ಷಿಕೆಯಡಿಯಲ್ಲಿ ಹಿಂದೂ ಧರ್ಮಶಾಸ್ತ್ರದ ಆಧಾರ ಗ್ರಂಥಗಳ ಪರಿಚಯ ಮಾಡಿಕೊಡಲಾಗಿದೆ. ಇವುಗಳಲ್ಲಿ ಪಂಚಗ್ರಂಥಿಗಳೆಂದೇ ಕರೆಯಲಾಗುವ ವಿಜ್ಞಾನೇಶ್ವರ ಯೋಗಿಯ "ಮಿತಾಕ್ಷರಿ", ದೇವಣ್ಣ ಭಟ್ಟನ "ಸ್ಮೃತಿ ಚಂದ್ರಿಕಾ", ಪಾರಪರುದ್ಯಮುನಿನ "ಸರಸ್ವತಿ ವಿಲಾಸ", ನೀಲಕಂಠನ "ವ್ಯವಹಾರಮಯೂಖ" ಹಾಗೂ ಮಹಾದೇವಾಚಾರ್ಯನ "ಮಾಧವೀಯ" ಗ್ರಂಥಗಳಲ್ಲದೆ, ವರದರಾಜ ಕೃತ "ವರದರಾಜೀಯ", ಕಲೂಕಾ ಭಟ್ಟನ "ಕಲೂಕಾ ಭಟ್ಟಿ" (ಮನುಸ್ಮೃತಿ ವ್ಯಾಖ್ಯಾನ) ಜೀಮೂತವಾಹನನ "ದಾಯಭಾಗ", ನಂದ ಪಂಡಿತನ "ದತ್ತಕ ಮಿಮಾಂಸ", ವೈದ್ಯನಾಥ ದೀಕ್ಷಿತನ "ಸ್ಮೃತಿ ಮುಕ್ತಾಫಲ", ಕಮಲಾಕರ ಭಟ್ಟನ "ನಿರ್ಣಯ ಸಿಂಧು", ಮೆಕ್ನಾಟನ್ನನ "ಪ್ರಿನ್ಸಿಪಲ್ ಆಫ್ ಹಿಂದೂ ಲಾ", ಕೋಲ್ ಬ್ರೂಕ್‌ನ "ಡೈಜೆಸ್ಟ್ ಆನ್ ಕಾಂಟ್ರ್ಯಾಕ್ಟ್ ಎಂಡ್ ಸಕ್ಸೆಷನ್ ಹಾಗೂ ಲಾ ಆಫ್ ಇನ್ಹೆರಿಟೆನ್ಸ್" (೧೮೨೨) ಮುಂತಾದ ಗ್ರಂಥಗಳ ಉಲ್ಲೇಖವಿದ್ದು ಅವುಗಳ ಅಭಿಪ್ರಾಯವನ್ನು ಸೂಕ್ಷ್ಮವಾಗಿ ತಿಳಿಸಿ ಹಿಂದೂ ಧರ್ಮಶಾಸ್ತ್ರದ ಸುಭದ್ರ ಅಸ್ತಿವಾರದ ಮೇಲೆ ಬೆಳಕು ಚೆಲ್ಲಿದ್ದಾರೆ.

ಎರಡನೆಯ "ವಿವಾಹವು" ಎಂಬ ಅಧ್ಯಾಯದಲ್ಲಿ 'ಸ್ತ್ರೀಯರ ವಿವಾಹ', 'ಗಂಡನನ್ನು ಆರಿಸುವ ಸ್ವಾತಂತ್ರ್ಯ', 'ಪುರುಷರ ವಿವಾಹ ಕಾಲ', 'ಎಂಟು ವಿಧದ ವಿವಾಹ', 'ವಿಧವಾ ವಿವಾಹ', 'ವಿವಾಹ ಮಾಡಿಕೊಳ್ಳಕೂಡದಾದ ಸಂಬಂಧಿಕರು', 'ವಿವಾಹ ವಿಚ್ಛೇದನ', ಮುಂತಾದ ವಿಷಯಗಳ ಬಗೆಗೆ ಆಗಿನ ಕೋರ್ಟುಗಳಲ್ಲಿ ತೆಗೆದುಕೊಂಡ ನಿರ್ಣಯ, ಧರ್ಮಶಾಸ್ತ್ರಗಳು ಸೂಚಿಸಿದ ಅಭಿಪ್ರಾಯಗಳನ್ನು ಎತ್ತಿ ತೋರಿಸಲಾಗಿದೆ. ಇಲ್ಲಿ ನಿರೂಪಿಸಲಾದ ಎಲ್ಲಾ ವಿಷಯಗಳು ಸೂತ್ರಗಳೋಪಾದಿಯಲ್ಲಿ ಸಂಕ್ಷಿಪ್ತವಾಗಿದ್ದು ಮುಂದೆ ಇದು ಯಾರ ಅಭಿಪ್ರಾಯವೆಂದು ಸೂಚಿಸಿದೆ. ಉದಾಹರಣೆಗೆ-'ವಿವಾಹ ಪೂರ್ತಿಯಾಗಲು ಕನ್ಯೆಯನ್ನು ದಾನ ಕೊಡುವುದು, ಕೊಳ್ಳುವುದು ಮುಖ್ಯ ಅವಶ್ಯದ ಸಂಗತಿಗಳು. "ಸಪ್ತಪದಿ" ನಡೆದ ಮೇಲೆ ವಿವಾಹವು ಸಂಪೂರ್ಣವಾಗುತ್ತದೆ. ವರನು ಕನ್ಯೆಯ ಕುತ್ತಿಗೆಗೆ ತಾಳಿ ಕಟ್ಟುವುದು ಅಥವಾ "ತಾಳಿ ಕಟ್ಟುವ ಪದ್ಧತಿ"ಯು ಒಂದು ರೂಢಿ ಹೊರ್ತು ಶಾಸ್ತ್ರ ಪ್ರಕಾರ ಆಗಿರುವುದಿಲ್ಲ-"ಗ್ರಹ್ಯ ಸೂತ್ರ" ಕನ್ಯೆಗೆ ಎಂಟು ವರ್ಷ ಪ್ರಾಯವಾದ ನಂತರ ಆಕೆಯ ರಕ್ಷಕರಾರೂ ಮೂರು ವರ್ಷದವರೆಗೆ ಗಂಡನನ್ನು ಆರಿಸಿ ತೆಗೆಯದಿದ್ದರೆ ಅವಳೇ ಆರಿಸಿ ತೆಗೆಯಬಹುದು'-'ವೈದ್ಯನಾಥ ದೀಕ್ಷಿತೇಯಮ್" (೧-೩೬).

ಮೂರನೆಯ "ದತ್ತ"ವು ಎಂಬ ಅಧ್ಯಾಯವು ಸುದೀರ್ಘವಾಗಿದ್ದು ಸುಮಾರು ಮೂವತ್ತು ಪುಟಗಳಲ್ಲಿ ಎಪ್ಪತ್ತನಾಲ್ಕಕ್ಕೂ ಹೆಚ್ಚು ಹೇಳಿಕೆಗಳನ್ನು ಉಲ್ಲೇಖಿಸಲಾಗಿದೆ. ಧರ್ಮಶಾಸ್ತ್ರವು ಪುತ್ರ ಸಂತತಿಯು ಏಕೆ ಬೇಕೆಂಬುದನ್ನು ತಿಳಿಸುತ್ತಾ-"ಹಿಂದೂ ಜನರಲ್ಲಿ ಒಬ್ಬ ಮನುಷ್ಯನು ಮದುವೆಯಾದ ಸಂಬಂಧದಿಂದ ಸತ್ತ ನಂತರ "ಪೂತ" ಎಂಬ ಉಪದ್ರವವನ್ನು ಅನುಭವಿಸುವ ಸ್ಥಳಕ್ಕೆ ಹೋಗುತ್ತಾನೆ" ಎಂದು ತಿಳಕೊಳ್ಳುತ್ತಾನೆ. ಇದರಿಂದ ವಿಮೋಚನೆ ಪಡಕೊಳ್ಳಬೇಕಾದರೆ ಒಬ್ಬ ಮಗನ ತಂದೆಯಾಗಬೇಕು. ಆದ್ದರಿಂದ ಮಗನಿಗೆ "ಪುತ್ರ" ಎಂತಲೂ ಇಲ್ಲವೆ "ಪುತ"ದಿಂದುದ್ಧರಿಸುವಂಥವ ಎಂತಲೂ ಹೇಳುತ್ತಾರೆ. (ಮನು ಸ್ಮೃತಿ ೯-೧೩೮) ಮುಂದೆ "ದತ್ತಕ"ನ ಅವಶ್ಯಕತೆ, ದ್ವಿತೀಯ

ದತ್ತಕ ಪಡೆವ ಪ್ರಸಂಗ, ಸ್ತ್ರೀಯರು, ವಿಧವೆಯರು, ರೋಗಿಷ್ಠರು, ಜಾತಿ ಬಹಿಷ್ಕೃತರು, ಬಾಲ ವಿಧವೆಯರು ಮಾಡಿಕೊಳ್ಳುವ 'ದತ್ತಕ', ದತ್ತಕನು ಮಾಡಿಕೊಳ್ಳುವ ದತ್ತಕ, ದತ್ತಕ ಮಾಡಿಕೊಳ್ಳುವ ದಾನಿಗಳು ಹಾಗೂ 'ಸ್ವೀಕೃತ'ರಿಗಿರುವ ನಿರ್ಬಂಧ, ಇತಿಮಿತಿ, ಯಾರನ್ನು ದತ್ತಕ ಪಡೆಯಬಹುದು, ದತ್ತಕನ ವಯಸ್ಸಿನ ಮಿತಿ, ದತ್ತವಾದ ನಂತರ ಆತನ ಸಂಬಂಧಗಳು ಮುಂತಾದ ವಿಷಯಗಳ ಬಗೆಗೆ ಹಿಂದೂ ಧರ್ಮಶಾಸ್ತ್ರವು ಏನನ್ನು ಹೇಳುತ್ತದೆ ಎಂಬುದನ್ನು ಹಾಗೂ ಆ ಕಾಲದ ಕೋರ್ಟುಗಳಲ್ಲಿ ಇದನ್ನು ಬಳಸಿಕೊಂಡುದರ ಬಗೆಗೆ ಚುಟುಕಿನಲ್ಲಿ ಹೇಳಲಾಗಿದೆ. ಉದಾಹರಣೆಗೆ : "ದತ್ತ ಪುತ್ರನು ದತ್ತ ತಂದೆಯ ಕುಟುಂಬದಲ್ಲಿ ಸಂಬಂಧ ಮಾಡಕೂಡ ದಾದವರಲ್ಲಿ ಸಂಬಂಧ ಮಾಡಿಕೊಳ್ಳಕೂಡದು, ಸ್ವಕುಟುಂಬ ದಲ್ಲಿಯೂ ಕೂಡದು", (೧೪೧-ನಿರ್ಣಯ ಸಿಂಧು), 'ಸಹೋದರನ ದತ್ತಕ ಪಡಕೊಳ್ಳುವುದು ಸಿಂಧುವಲ್ಲ', (ಸ.ಅ. ೧-೮೫). ಹೀಗೆ ದತ್ತಕ ವಿಷಯಕ್ಕೆ ಸಂಬಂಧಿಸಿದಂತೆ ಎಲ್ಲಿಯೂ ಸಂದಿಗ್ಧತೆಗೆ ಎಡೆಯಿರದಂತೆ ಸೂಕ್ಷ್ಮವಾದ ವಿಷಯ ಗಳನ್ನು ಎತ್ತಿಕೊಂಡು ನಿರ್ಣಯಗಳನ್ನು ಸೂಚಿಸಲಾಗಿದೆ.

ನಾಲ್ಕನೆಯ "ಸಂರಕ್ಷಣೆಯ ಕರ್ತೃತ್ವವು" ಎಂಬ ಅಧ್ಯಾಯದಲ್ಲಿ ಅಪ್ರಾಪ್ತ ವಯಸ್ಕರ ಹಾಗೂ ಸ್ತ್ರೀಯರ ರಕ್ಷಣೆಯ ಕುರಿತು ಹೇಳುತ್ತಾ, 'ಆಸ್ತಿಯನ್ನು ಕುರಿತು ಬಾಲಕನು ನಡಸಿದ ಕೃತ್ಯಗಳು ಸಿಂಧುವಾಗುವುದಿಲ್ಲ', (ಮಿತಾಕ್ಷರಿ)' ವಿವಾಹವಾಗದ ಸ್ತ್ರೀಯಳು ಎಷ್ಟು ಪ್ರಾಯದವಳಾದರು ತಂದೆಯ ಸಂರಕ್ಷಣೆಯಲ್ಲಿ, ಅವನಿಲ್ಲದಿದ್ದರೆ ಅವನ ಬಂಧುಗಳ ಸಂರಕ್ಷಣೆಯಲ್ಲಿರುತ್ತಾಳೆ' (ಮೆಕ್ ನಾಟನ್ ಜ್ಯುನಿಯಲ್-೧-೧೦೪) ಎಂಬುದಾಗಿ ಹೇಳಿದೆ.

ಐದನೆಯ "ಆಸ್ತಿಯು" ಎಂಬ ಅಧ್ಯಾಯದಲ್ಲಿ ಸ್ಥಿರ-ಚರಾಸ್ಥಿ, ಸ್ವಯಾರ್ಜಿತ, ಪಿತ್ರಾರ್ಜಿತ ಆಸ್ತಿ, ಸ್ತ್ರೀಧನಗಳ ಬಗ್ಗೆ ಹಾಗೂ ಅವುಗಳ ನಿರ್ವಹಣೆಗಳ ಬಗ್ಗೆ ಸಂಕ್ಷಿಪ್ತವಾಗಿ, "ಮಿತಾಕ್ಷರಿ", "ಸ್ಮೃತಿ ಚಂದ್ರಿಕಾ", "ಸರಸ್ವತಿ ವಿಲಾಸ", "ವ್ಯವಹಾರ ಮಯೂಖ"ಗಳಲ್ಲಿ ಉಲ್ಲೇಖಿಸಿದ ನಿರ್ಣಯಗಳೊಂದಿಗೆ ೧೮೦೨ರ ಸ.ಅ. ಕೋರ್ಟು ನಿರ್ಣಯ, ೧೭/೦೮/೧೮೨೧ರ ತಿರ್ನಾವಲ್ಲಿ ಜಿಲ್ಲಾ ಕೋರ್ಟು ನಿರ್ಣಯವನ್ನು ಉಲ್ಲೇಖಿಸಲಾಗಿದೆ.

ಆರನೆಯ ಅಧ್ಯಾಯವು ಸ್ವತ್ತುಗಳ ಮೇಲಿನ ಹಕ್ಕುಗಳ ಹಸ್ತಾಂತರಕ್ಕೆ ಸಂಬಂಧಿಸಿದಂತೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದೆ. "ಹುಚ್ಚರು, ಅಪ್ರಾಪ್ತ ವಯಸ್ಕರು, ಭಯಸ್ಥರು, ಕಾಮ, ಮತ್ಸರ ಇತ್ಯಾದಿ ವಿಷಯಾಸಕ್ತಿ ಉಳ್ಳವರು, ಮತಿ ವಿಕಲ್ಪರು ಮಾಡಿದ ಪರಾಧೀನವು ಸಿಂಧುವಲ್ಲ" ಎಂದು ಸೂಚಿಸಿದೆ.

ಏಳನೆಯ ಅಧ್ಯಾಯವು "ಮರಣ ಶಾಸನ"ಕ್ಕೆ ಸಂಬಂಧಿಸಿದಂತೆ ಇದ್ದು, 'ಹಿಂದೂ ಶಾಸ್ತ್ರ"ದಲ್ಲಿ 'ಮರಣ ಶಾಸನ'ದಿಂದ ಕೊಡುವ ಸ್ವತಂತ್ರವು ಅಗೋಚರವಾಗಿರುತ್ತದೆ' ಎಂದು ಹೇಳಿದೆ'. ಮರಣ ಶಾಸನವು ಶಾಸ್ತ್ರಕ್ಕೆ ವಿರುದ್ಧವಾದರೆ ಸಿಂಧುವಲ್ಲ' (ಸ.ಅ.ವಿ.-೪೨೧) ಎಂದು ಹೇಳಿದ್ದಾರೆ. ಹಿಂದೂ ಧರ್ಮಶಾಸ್ತ್ರದ ಪ್ರಕಾರ ಸ್ವತ್ತುಗಳು ಸ್ವಾಧೀನ ಬಂದ ವಿನಃ ದಾನವು ಸಿಂಧುವಾಗುವುದಿಲ್ಲ. ಇದರಿಂದಾಗಿ ವಾಗ್ದಾನ ಗಳಾಗಲಿ ದಾನಗಳಾಗಲಿ ವ್ಯಕ್ತಿಯ ಮರಣದೊಂದಿಗೆ ತನ್ನ ಸ್ವತಂತ್ರತೆಯನ್ನು ಕಳಕೊಳ್ಳುತ್ತದೆ ಎನ್ನುವುದನ್ನು ಈ ಅಧ್ಯಾಯದಲ್ಲಿ ವಿಶದಪಡಿಸಿದೆ.

"ಆಸ್ತಿಮೇಲೆ ಹೊಂದಿದ ವ್ಯಯಗಳು" ಎಂಬ ಎಂಟನೆಯ ಅಧ್ಯಾಯದಲ್ಲಿ ಆಸ್ತಿಯ ಮೇಲೆ ಹೊಂದಿದ ವ್ಯಯಗಳ ಸ್ವಭಾವ, ಸಾಲ ತೀರಿಸುವಿಕೆ, ಸಾಲಗಾರ ಮೃತಪಟ್ಟಾಗ ಮೃತನು ಮಾಡಿದ ಸಾಲಕ್ಕೆ ಬಾಧ್ಯಸ್ಥರು, ವಿಧವೆಯ ಆಸ್ತಿ ಮೇಲಿನ ಸಾಲಕ್ಕೆ ಬಾಧ್ಯಸ್ಥರ ಹೊಣೆ, ಆಸ್ತಿಯನ್ನು ಅನುಭವಿಸುವವರು ಸಂರಕ್ಷಿಸಲೇಬೇಕಾದ ಕುಟುಂಬದ ವ್ಯಕ್ತಿಗಳು, "ಅಶನಾರ್ಥ"ದ ಇತಿಮಿತಿಗಳು ಮುಂತಾದ ವಿಷಯಗಳನ್ನು ಚರ್ಚಿಸಿದ್ದಾರೆ. ಒಟ್ಟಿನಲ್ಲಿ ಆಸ್ತಿ ಮೇಲೆ ಮಾಡಿದ ಸಾಲದ ಹೊಣೆ ಸಾಲಗಾರ ಸತ್ತಾಗ ಆತನ ಮಗನ ಮೇಲೆ ಬೀಳುತ್ತದೆ. ಆದರೆ ಆ ಆಸ್ತಿಯನ್ನು ನಿರಾಕರಿಸಿದವರಿಗೆ ಸಾಲದ ಹೊಣೆ ಇರುವುದಿಲ್ಲ. ತಂದೆಯ ಆಸ್ತಿಯನ್ನು ಮಗನು ಯಾವ ಪ್ರಮಾಣದಲ್ಲಿ ಹೊಂದಿರು ತ್ತಾನೋ ಅದೇ ಪ್ರಮಾಣದಲ್ಲಿ ತಂದೆಯ ಸಾಲಕ್ಕೂ ಮಗನು ಹೊಣೆಯಾಗುತ್ತಾನೆ. ಇಂತಹ ಹಲವು ನಿರ್ಣಯಗಳನ್ನು ಇಲ್ಲಿ ದಾಖಲಿಸಲಾಗಿದೆ.

ಮುಂದಿನ ಒಂಭತ್ತನೆಯ ಅಧ್ಯಾಯ "ಬಾಧ್ಯತೆಯ ಅಯೋಗ್ಯತೆಯು" ಎಂಬುದಾಗಿದ್ದು ತಂದೆಯ ಆಸ್ತಿಯನ್ನು ಹೊಂದುವಲ್ಲಿ ಯಾರ್ಯಾರು ಅನರ್ಹರಾಗುತ್ತಾರೆ ಮತ್ತು ಏಕೆ? ಹೇಗೆ ಅರ್ಹತೆಯನ್ನು ಕಳೆದುಕೊಳ್ಳುತ್ತಾರೆ ಎಂಬುದನ್ನು ತಿಳಿಸಿದೆ. ಅಲ್ಲದೆ ಹಾಗೆ ಅನರ್ಹಗೊಂಡವರ ಸಂತತಿಯು ಯೋಗ್ಯರಾಗಿದ್ದಲ್ಲಿ ಅವರು ಪಿತ್ರಾರ್ಜಿತ ಆಸ್ತಿಯನ್ನು ಅನುಭವಿಸುವ ಬಾಧ್ಯತೆ ಪಡೆದುಕೊಳ್ಳುತ್ತಾರೆ ಎಂದೂ ಹೇಳಿದೆ.

"ವಿಭಾಗವು" ಎಂಬ ಹತ್ತನೆಯ ಅಧ್ಯಾಯವು "ದತ್ತಕ" ಅಧ್ಯಾಯವನ್ನು ಹೊರತುಪಡಿಸಿದರೆ ಇದೇ ಎರಡನೆಯ ದೊಡ್ಡ ಅಧ್ಯಾಯ. ಇದರಲ್ಲಿ ಸಂಬಾಧ್ಯಸ್ಥರಲ್ಲಿ ಕೂಡಿರುವ ಸಂಬಂಧವು, ತಂದೆ ಮಗಂದಿರು, ಅನಾಗತರಾದವರ ಸಂಬಂಧವು, ಆಡಳಿತ ನಡೆಸುವವನ ಸ್ವತಂತ್ರವು, ಪಾಲು ಮಾಡಿಕೊಳ್ಳಲಿಕ್ಕೆ ತಂದೆಯನ್ನು ಒತ್ತಾಯ ಮಾಡಲು ಗಂಡು ಮಕ್ಕಳಿಗಿರುವ ಸ್ವತಂತ್ರವು, ಸ್ವಾರ್ಜಿತ-ಆಸ್ತಿ ವಿಭಾಗವು, ಪಾಲು

ಬಿಡುವಂಥಾದ್ದು, ವಿಭಾಗದ ಕೆಲವು ವಿಧಗಳು, ಅವಿಭಾಜ್ಯ ದ್ರವ್ಯವು, ವಿಭಾಗವಾಗಬಹುದಾದದ್ದು ಮುಂತಾಗಿ ಐವತ್ತೊಂದಕ್ಕೂ ಹೆಚ್ಚು ವಿಷಯಗಳ ಮೇಲೆ ಆಗಿನ ನ್ಯಾಯ ಪೀಠದ ನಿಲುವು, ನಿರ್ಣಯಗಳ ಅಡಿಯಲ್ಲಿ ಚರ್ಚಿಸಲಾಗಿದೆ. ಉದಾಹರಣೆಗೆ ಮಗಳಂದಿರು ತಮಗೆ ಬರುವ ಆಸ್ತಿಯನ್ನು ಮಗಂದಿರ ಹಾಗೆ ಸಮಪಾಲು ಮಾಡಿಕೊಳ್ಳಬಹುದು. (ದಕ್ಷಿಣ ಖಂಡ ಪ್ರಾವಿಜನಲ್ ಕೋರ್ಟು ಪಂಡಿತರು–೧೦ನೇ ಸೆಪ್ಟೆಂಬರ್ ೧೮೧೭), ಬಡತನ ಬಂದ ಪಕ್ಷದಲ್ಲಿ ತಂದೆಯು ಪುತ್ರರಿಗೆ ಪಾಲು ಮಾಡಿಕೊಟ್ಟ ತನ್ನ ಸ್ವಾರ್ಜಿತ ಆಸ್ತಿಯನ್ನು ತಿರುಗಿ ತೆಗೆದುಕೊಳ್ಳಬಹುದು (ಮಿತಾಕ್ಷರಿ:೧:೫:೫)', ತನ್ನ ಸ್ವಸಂಪಾದನೆಯ ಆಸ್ತಿಯನ್ನು ತಂದೆಯು ತಾನೇ ಇಟ್ಟುಕೊಳ್ಳಬಹುದು (ಮಿತಾಕ್ಷರಿ:೧:೧೯೭)_'. ಈ ರೀತಿಯಲ್ಲಿ ಎಲ್ಲಿಯೂ ಸಂದೇಹಕ್ಕೆ ಅವಕಾಶವಿಲ್ಲದಂತೆ ಎಳೆ ಎಳೆಯಾಗಿ "ವಿಭಾಗಕ್ಕೆ" ಸಂಬಂಧಿಸಿದ ಸಮಸ್ಯೆಯನ್ನು ಹಾಗೂ ಪರಿಹಾರ ಮಾರ್ಗವನ್ನೂ ತೆರೆದಿಟ್ಟಿದ್ದಾರೆ.

"ಬಾಧ್ಯತೆ ಕ್ರಮವರ್ತಿತ್ವವು" ಎಂಬ ಹನ್ನೊಂದನೆಯ ಅಧ್ಯಾಯದಲ್ಲಿ, 'ಬಾಧ್ಯತೆ ಯಾತರಿಂದ ಉಂಟಾಗುತ್ತದೆ ?' ಎಂಬ ಪ್ರಶ್ನೆಯನ್ನು ಎತ್ತಿಕೊಂಡು 'ಮರಣದಿಂದಲೂ, ಸನ್ಯಾಸತ್ವದಿಂದಲೂ, ಮೃತವಾಗಿದ್ದಾಗಿ ಊಹಿಸುವಷ್ಟು ದೀರ್ಘಕಾಲದವರೆಗೆ ಕೇಳದ ಅನಾಗತ್ವದಿಂದಲೂ ಬಾಧ್ಯಸ್ಥರಿಗೆ ಬಾಧ್ಯತೆಯುಂಟಾಗುತ್ತದೆ. (ಮಿ:೧:೧೨೨) ಎಂದು ಹೇಳಿ ಅನಾಗತನಾದ ಮನುಷ್ಯನು ಮೃತವಾದದ್ದಾಗಿ ತಿಳಿಯಲು ಕಾಯಬೇಕಾದ ಕಾಲಾವಧಿಯನ್ನು ತಿಳಿಸಿ ಮುಂದೆ ಯಾರು ಮೃತನ/ಮೃತನೆಂದು ತಿಳಿದ ವ್ಯಕ್ತಿಯ ಉತ್ತರ ಕ್ರಿಯೆ ಮಾಡಬಹುದೆಂದು ತಿಳಿಸುವುದಲ್ಲದೆ, ಯಾರು, ಏಕೆ ಅದಕ್ಕೆ ಅರ್ಹರಾಗುತ್ತಾರೆ/ಬಾಧ್ಯಸ್ಥರಾಗುವುದಿಲ್ಲ ಎಂಬುದನ್ನು ತಿಳಿಸುತ್ತದೆ. 'ಗಂಡು ಸಂಬಂಧದ ಕೆಳಗೆ ಆರು, ಮೇಲೆ ಆರು ತಲೆಯಾಂತರದವರೆಗನ ಗಂಡಸರು ಮತ್ತು ಈ ಆರು ಮೇಲಿನ ತಲೆಯಾಂತರದವರ ಆರು ತಲೆಯಾಂತರದವರೆಗಿನ ನೆಟ್ಟಗೆ ಗಂಡು ಸಂತತಿಯವರು ಸಹಾ 'ಸಮಾನೋದಕರು' ಆಗಿರುತ್ತಾರೆ. (ಮಿ.:೨:೬;ಸ್ಮೃತಿ ಚಂದ್ರಿಕಾ; ಸ್ಮೃತಿ ಮುಕ್ತಾಫಲ). ಬಾಧ್ಯತೆ ಸ್ವತಂತ್ರವು ಮೃತವಾದವಗೆ ಶ್ರಾದ್ಧಾದಿ ಕ್ರಿಯೆಗಳಿಂದ ಮಾಡುವುದಾಗಿ ತಿಳುಕೊಳ್ಳುವ ಪ್ರಯೋಜನಗಳಿಗೆ ಸಂಬಂಧಿಸಿ ಇರುತ್ತದೆ. ಇಂಥ ಕರ್ಮಾದಿಗಳನ್ನು ಮಾಡಲಿಕ್ಕೆ ಸಂಬಂಧ ಉಳ್ಳವರು ಅವನ ಬಾಧ್ಯಸ್ತರಾಗುತ್ತಾರೆ. (ಎಲ್ಬರ್ಲಿಂಗ್–೬೭) ಎಂಬ ಹೇಳಿಕೆಯನ್ನುದ್ಧರಿಸುತ್ತಾ ಬಾಧ್ಯಸ್ಥರಲ್ಲಿ ಸಪಿಂಡರು ಸಮಾನೋದಕರು, ಬಂಧುಗಳು ಎಂಬ ಮೂರು ವಿಧಗಳಿವೆ, ಎಂದು ತಿಳಿಸಿ ಈ ಮೂರು ವಿಧದ ಜನರಲ್ಲಿ ಯಾರು ಯಾರು ಹೇಗೆ ಬಾಧ್ಯಸ್ಥರಾಗುತ್ತಾರೆ ಎಂಬುದನ್ನು ವಿವರಿಸಿದ್ದಾರೆ. ಮೃತ ಸಂನ್ಯಾಸಿಯು, ದೇಶಾಂ ಸ್ತ್ರೀಯು, ಸ್ತ್ರೀಧನ ಪಡೆದ ಸ್ತ್ರೀಯರಿಗೆ ಯಾರು ಬಾಧ್ಯಸ್ಥರಾಗ ಬಹುದು ಎಂಬಂತಹ ೫೦ಕ್ಕೂ ಹೆಚ್ಚು ಹೇಳಿಕೆಗಳಿಂದ ಕೂಡಿದ ಈ ಅಧ್ಯಾಯದಲ್ಲಿ ಹಿಂದೂ ಸಮಾಜದಲ್ಲಿ ವ್ಯಕ್ತಿಯು ಮೃತನಾದ ನಂತರ ಹುಟ್ಟಿಕೊಳ್ಳುವ ಬಾಧ್ಯತೆಯ ಗೊಂದಲಗಳಿಗೆ ಶಾಸ್ತ್ರಾಧಾರಿತ ನಿರ್ಣಯಗಳನ್ನು ಸೂಚಿಸಿದೆ.

ಮುಂದಿನ "ಬಂಗಾಲಿ ಶಾಸ್ತ್ರ" ಎಂಬ ಅಧ್ಯಾಯದಲ್ಲಿ ಬಂಗಾಲದಲ್ಲಿ ಆಚರಿಸುವ ಶಾಸ್ತ್ರಕ್ಕೂ 'ಕಾಶಿ' ಮತಸ್ಥರಲ್ಲಿ ನಡೆಯುವ ಶಾಸ್ತ್ರಕ್ಕೂ, ಅದಕ್ಕೆ ಸಮಾನಾಂತರವಾಗಿ ಇರುವ ದ್ರಾವಿಡಶಾಸ್ತ್ರಗಳಿಗೂ ಇರುವ ಭೇದಗಳ ಮುಖ್ಯ ಸಂಗತಿಗಳನ್ನು ಚರ್ಚಿಸಲಾಗಿದೆ. ಬಂಗಾಲದಲ್ಲಿ ರೂಢಿಯಲ್ಲಿರುವ "ಜೀಮೂತವಾಹನನ 'ದಾಯಭಾಗ'ಕ್ಕೂ 'ಮಿತಾಕ್ಷರಿ'ಗೂ ಸುಮಾರು ಮೂವತ್ತಕ್ಕೂ ಹೆಚ್ಚು ವಿರೋಧ ಅಭಿಪ್ರಾಯಗಳಿರುವುದನ್ನು ಲೇಖಕರು ಗುರುತಿಸಿದ್ದಾರೆ.

"ಮಲಬಾರಶಾಸ್ತ್ರ" ಎಂಬ ಅಧ್ಯಾಯದಲ್ಲಿ ಕೇರಳ ಹಾಗೂ ದಕ್ಷಿಣಕನ್ನಡ ಜಿಲ್ಲೆಯ ಉತ್ತರ ಭಾಗದಲ್ಲಿ ಚಾಲ್ತಿಯಲ್ಲಿರುವ "ಮರಿಮಕ್ಕತ್ತಾಯ" ಇಲ್ಲವೆ "ಅಳಿಯ ಸಂತಾನ" ವೆಂಬ ಬಗ್ಗೆ ವಿವರವಾಗಿ ತಿಳಿಸಿರುವುದಲ್ಲದೆ ಇದೇ ಶಾಸ್ತ್ರಾಧಾರದಿಂದ ಆಗಿನ ಕೋರ್ಟುಗಳು ನೀಡಿದ ತೀರ್ಮಾನಗಳನ್ನು ಉಲ್ಲೇಖಿಸಿದೆ.

"ಹಿಂದೂ ಧರ್ಮಶಾಸ್ತ್ರವು" ಎಂಬ ಈ ಕಿರು ಹೊತ್ತಿಗೆಯು ಹಿಂದೂ ಧರ್ಮಶಾಸ್ತ್ರ ರೀತ್ಯಾ ನ್ಯಾಯಾಲಯ ಗಳು ಅನುಸರಿಸಬೇಕಾದ ಮಾರ್ಗವನ್ನು ತೋರುವ ನ್ಯಾಯವಾದಿಗಳ ಕೈಪಿಡಿಯಾಗಿದೆ. ನೂರೈವತ್ತು ವರ್ಷಗಳಿಗೂ ಹಿಂದೆ ಮುದ್ರಿತವಾದ ಈ ಗ್ರಂಥದ ಪುಟ ಪುಟಗಳನ್ನು ಅವಲೋಕಿಸಿದರೆ ಈಗಿನ ಭಾರತೀಯ ನ್ಯಾಯ ಪದ್ಧತಿಯಲ್ಲಿ ಉಳಿದುಕೊಂಡಿರುವ "ನ್ಯಾಯ ದಾನ" ಕ್ರಿಯೆಯ ತಾಯಿ ಬೇರುಗಳನ್ನು ಕಾಣಬಹುದು. ನಮ್ಮ ನ್ಯಾಯ ಪದ್ಧತಿಯ ಭವ್ಯ ಸೌಧಕ್ಕೆ ಇರುವ ತರ್ಕಬದ್ಧ ವೈಚಾರಿಕತೆ, ಮಾನವೀಯತೆಯ ನೆಲಗಟ್ಟಿನ ಮೇಲೆ ಬೆಳೆದು ನಿಂತ ಸುಭದ್ರ ಅಡಿಪಾಯವನ್ನು ಈ ಗ್ರಂಥದ ಮೂಲಕ ನೋಡಬಹುದಾಗಿದೆ. ಹಿಂದೂ ಧರ್ಮಶಾಸ್ತ್ರ ರೀತ್ಯಾ ನ್ಯಾಯ ನಿರ್ಣಯ ಪದ್ಧತಿಯು ಎಲ್ಲ ಕಾಲಕ್ಕೂ ಹೇಗೆ ಪ್ರಸ್ತುತವಾಗಿದೆ ಎಂಬುದನ್ನು ಈ ಗ್ರಂಥವು ವಿಶದಪಡಿಸುತ್ತದೆ.

ಈ ಗ್ರಂಥವು ಮುದ್ರಿತ ಕನ್ನಡ ಭಾಷೆಯ ಬರಹದ ದೃಷ್ಟಿಯಿಂದ ಬಹಳ ಪ್ರಮುಖವಾದುದು. ಕರ್ನಾಟಕದಲ್ಲಿ ಮುದ್ರಣ ಕಲೆಯ ಆರಂಭದ ಕಾಲದಲ್ಲಿ ಹೊರಬಂದ ಈ ಗ್ರಂಥವು "ಕನ್ನಡ ಲಿಪಿಶಾಸ್ತ್ರ"ದ ದೃಷ್ಟಿಯಿಂದಲೂ ಗಮನ ಸೆಳೆಯುತ್ತದೆ. ಇಲ್ಲಿನ ಅಕ್ಷರಗಳು ಆ ಕಾಲದ ಕೈ ಬರಹದ







ಅಕ್ಷರದಂತೆಯೇ ಇದೆ. ಈ ಗ್ರಂಥದಲ್ಲಿ ಬಳಸಿದ ಕನ್ನಡ ಅಕ್ಷರಗಳಾದ 'ಅ' 'ಆ' 'ಈ' 'ಹ' 'ಭ' ಮುಂತಾದವುಗಳು ಈಗ ಮರೆಯಾಗಿ ಹೊಸ ರೂಪ ಪಡೆದಿವೆ. ಕನ್ನಡ ಲಿಪಿಗೆ ಸಹಸ್ರಾರು ವರ್ಷಗಳ ಇತಿಹಾಸವಿದ್ದರೂ ಕೇವಲ ನೂರು ನೂರೈವತ್ತು ವರ್ಷಗಳ ಹಿಂದೆ ಬಳಕೆಯಲ್ಲಿದ್ದು ಭಾಷಾ ವಿಜ್ಞಾನಿಗಳ ಗಮನ ಸೆಳೆಯದೆ ಕಾಲನ ಗರ್ಭದಲ್ಲಿ ಸೇರಿಹೋದ ಈ ಪುಸ್ತಕದಲ್ಲಿನ ಹಲವು ಕನ್ನಡ ಅಕ್ಷರಗಳು ನಿಜಕ್ಕೂ ಚಿಂತನ ಯೋಗ್ಯವಾಗಿದೆ. ಈ ಪುಸ್ತಕದ ಪ್ರತಿ ಪುಟದಲ್ಲೂ ಕನ್ನಡ ಅಂಕಿಗಳ ಬಳಕೆಯನ್ನು ಕಾಣಬಹುದು. ಸಂಪೂರ್ಣ ಕನ್ನಡಮಯವಾದ ಈ ಕಿರು ಹೊತ್ತಿಗೆ ಕನ್ನಡ ಸರಸ್ವತಿ ಭಂಡಾರಕ್ಕೊಂದು ಅಮೂಲ್ಯ ರತ್ನವಾಗಿದೆ.

(ಈ ಎರಡು ಅಪೂರ್ವ ಪುಸ್ತಕಗಳನ್ನು ನನಗೆ ಆಶೀರ್ವದಿಸಿ ಇತ್ತ ಕುಂದಾಪುರದ ವಡೇರ ಹೋಬಳಿ ಗ್ರಾಮದ ಮಾಜಿ ಪಟೇಲರಾದ ದಿ. ಪಿ. ಸುಬ್ರಾಯ ಕಾರಂತ್ ಅವರನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.)

ಕಲ್ಲನಗೌಡ ತಿ. ಪಾಟೀಲ*

# ಪ್ರಾಚೀನ ಕಾಲದಿಂದಲೂ ಬಂದ ವಾದ್ಯಗಳು

ಪುರಾತನದಿಂದಲೂ ಕಾಡಿನ ಜನರು ತಮ್ಮ ಬಿಡುವಿನ ವೇಳೆಯಲ್ಲಿ ಮನರಂಜನೆಯ ಸಲುವಾಗಿ ರೂಪಿಸಿಕೊಂಡ ಕೆಲವು ವಾದ್ಯಗಳ ವಿವರಗಳು : ೧) ಕೊಳಲು, ೨) ತಪ್ಪಡಿ, ೩) ಡೋಲು, ೪) ಪುಂಗಿ, ೫) ತಂಬೂರಿ, ೬) ಚೌಡಕಿ, ೭) ಡಮರ, ೮) ಕಹಳೆ, ೯) ಸನಾದಿ, ೧೦) ಡೊಳ್ಳು, ೧೧) ಬುಡಬಡಕಿ, ೧೨) ಡೂಲ, ೧೩) ನಗಾರಿ, ೧೪) ಮೃದಂಗ, ೧೫) ಹಾರ್ಮೋನಿಯಮ್, ೧೬) ಜಾಗಟೆ, ೧೭) ತಬಲಾ, ೧೮) ಪೀಟಿಲು ಇತ್ಯಾದಿ; ಹೀಗೆಯೇ ಇನ್ನೂ ಅನೇಕ ವಾದ್ಯಗಳು ಹುಟ್ಟಲು ಪ್ರಾರಂಭವಾದವು. ಶಂಖ, ಕೊಂಬು, ಕಹಳೆ ಬಂದವು. ಪುಂಗಿ, ತಂಬೂರಿ ಕಾಡಿನ ಕಾಯಿಗಳಿಂದ ತಯಾರಿಸಿ ಊದಲು ಸ್ವರ ಹುಟ್ಟಿ ಸರಿಗಮ ನಾದದಲ್ಲಿ ಸಂಗೀತವಾಗಿ ಎಲ್ಲಾ ಸ್ವರ, ತಾಳ, ಲಯ ಹುಟ್ಟಿ ಮನರಂಜನೆಗಾಗಿ ಪದಗಳು ಹುಟ್ಟಿಕೊಂಡವು. ಜಾನಪದ ಹಾಡುಗಳು ಬಂದವು. ಕಾಡಿನ ಜನರು ಕಾಡಿನ ಬಿದರನ್ನೇ ಕಡಿದು ಕೊಳವೆ ಮಾಡಿಕೊಳ್ಳಲು ಮಾಡಿದರು. ಅದರಲ್ಲಿ ಸಂಗೀತದವರು ಸ್ವರ ಸರಿಗಮಗಳನ್ನು ಹುಟ್ಟಿಸಿಕೊಂಡರು. ಮರದ ಪೊರಟೆಯನ್ನು ತೆಗೆದು ತಪ್ಪಡಿ ಮಾಡಿದ್ದು ಡೋಲು ಡೊಳ್ಳು ಹೀಗೆ ಇನ್ನು ಪ್ರಾಣಿ ಚರ್ಮದಿಂದ ನಾದ ಹುಟ್ಟಿಸಿದರು. ತಪ್ಪಡಿಯನ್ನು ಹುಡಾ ಚರ್ಮವನ್ನು ತೆಗೆದು ತಪ್ಪಡಿ ಕಂಠಕ್ಕೆ ಬಿಗಿದು ನಾದಮಯವಾಗಿ, ಲಯಬದ್ಧವಾಗಿ ಬಡಿದು ಸಂಗೀತಕ್ಕೆ ಜೊತೆ ಮಾಡಿಕೊಂಡರು. ಇನ್ನು ಡೊಳ್ಳು ನಗಾರಿ, ಚಿಕ್ಕೆ ಬುಡಬುಡಕಿ, ಚೊಕ್ಕ ಡಮರು ಹಾಗೂ ಮುಂದೆ ಡೋಲು, ಮೃದಂಗ ನಗಾರಿಯಂಥ ವಾದ್ಯಗಳನ್ನು ತಯಾರು ಮಾಡಿದರು.

ಪರಮಾತ್ಮ ಪರಶಿವನಿಗೆ ಡಮರನ್ನು ಆಡಿಸುವಲ್ಲಿ ಆನಂದ. ಕೃಷ್ಣಪರಮಾತ್ಮನು ಕೊಳಲನ್ನು ಊದುತ್ತಾ ದನ ಕಾಯುತ್ತಿದ್ದದ್ದು ಹಿಂದೆ ದ್ವಾಪರ ಯುಗದಲ್ಲಿ ಮಹಾಭಾರತದಲ್ಲಿ ಬರುವ ಪ್ರಸಂಗ. ಇನ್ನು ಹಾವಾಡಿಸುವವರಿಗೆ ಪುಂಗಿ, ಕೊಳಲು. ಮಂಗವನ್ನಾಡಿಸು ವವರಿಗೆ ಡಮರು. ಕರಡಿ ಕುಣಿಸುವವರಿಗೆ ಜಾಗಟೆ ಹೀಗೆ ಇನ್ನೂ ಅನೇಕ ಭಿಕ್ಷುಕರಿಗೆ ಬೇಕಾಗುವ ಬುಡಬುಡಕೆ, ಡಮರು, ತಪ್ಪಡಿಗಳನ್ನು ಬಳಸಿ, ಜಾನಪದ ಗೀತೆಗಳು ಕಾಡಿನಲ್ಲಿ ಹುಟ್ಟಿ ಮೆರಗು ತಂದಿವೆ.

ರಾಜಮಹಾರಾಜರಿಗೆ ನಗಾರಿ, ಡೋಲು ಮುಖ್ಯವಾಗಿ ಬೇಕಾಗುವಂಥ ವಸ್ತುಗಳು. ಮೊದಲು ಪುರಾತನದಲ್ಲಿ ಕಾಡಿನ ಜನರು ದನಗಳ ಕೊಂಬುಗಳನ್ನೇ ಕಹಳೆ ಮಾಡಿ ಊದುತ್ತಾ ಕುಣಿ ಕುಣಿದು ಆಡುತ್ತಿದ್ದರು. ಬರುಬರುತ್ತಾ ಇವುಗಳನ್ನು ಮುಂದೆ ಹಿತ್ತಾಳೆಯಿಂದ ಮಾಡಹತ್ತಿದರು. ಇನ್ನು ಇವುಗಳನ್ನು ಮೋಜು ಮೆರವಣಿಗೆ ಕಾಲಕ್ಕೆ, ರಾಜ ದರ್ಬಾರಿಗೆ, ಯುದ್ಧಕ್ಕೆ (ಸನ್ನ)ದ್ಧರಾಗಲು ಬಳಸಲಾಗುತ್ತಿತ್ತು. ಇದರ ಜೊತೆಗೆ ವೈರಿಗಳು ಕೋಟೆ ಮುತ್ತಿಗೆ ಹಾಕಲು ಬಂದಾಗ ಇದೇ ಕಾಳೆಯು ಸೈನಿಕರನ್ನು ಒಗ್ಗೂಡಿಸಲು ಬೇಕಾಗಿತ್ತು. ಉದಾಹರಣೆ ಚಿತ್ರದುರ್ಗ ಕೋಟೆಗೆ ವೈರಿಗಳು ಮುತ್ತಿಗೆ ಹಾಕಿದಾಗ ಒನಕೆ ಓಬವ್ವನಿಗೆ ತಿಳಿದು ಊಟಕ್ಕೆ ಗಂಡ ನಿರತನಾದಾಗ ಕಾಳೆ ಕೂಗಿ ಎಚ್ಚರಗೊಳಿಸಿದ್ದು, ನಂತರ ಕಹಳೆ ಊದಿ ಗಂಡನು ಜನರನ್ನು ಒಗ್ಗೂಡಿಸಲು ಮುಂದಾದನು. ಇನ್ನು ನಗಾರಿ ಕೂಡಾ ಇದರ ಜೊತೆಗೆ ಬೇಕಾಗುತ್ತದೆ. ನಗಾರಿ ದೇವಸ್ಥಾನ. ಮಠ, ರಾಜಮಹಾರಾಜರ ದರ್ಬಾರಿನಲ್ಲಿ ಇರಲೇಬೇಕು. ದೇವರ ಪೂಜೆ ಮಾಡುವಾಗ ನಗಾರಿ ಜಾಗಟೆ ಗಂಟೆನಾದ ಇರಲೇಬೇಕು. ಇದರ ಜೊತೆಗೆ ಶಂಖ ಊದುವುದು ಸಹಜ. ಇನ್ನು ರಾಜ ದರ್ಬಾರು, ಮೋಜು, ಮೆರವಣಿಗೆಯಲ್ಲಿ ಡೊಳ್ಳು, ನಗಾರಿ, ಕಹಳೆ, ಸನಾದಿ, ಬಾಜಂತ್ರಿ ಮುಖ್ಯವಾಗಿ ಬೇಕಾಗುವುದು. ಶವ ಸಾಗುವ ಕಾಲಕ್ಕೆ ಹಿಂದು ಸಂಪ್ರದಾಯವಾಗಿ ಹಲಗೆ, ಡೋಲು, ಭಜನೆಗೆ ಮೃದಂಗ ಸಂಪ್ರದಾನಿ ಕಹಳೆ ಹೀಗೆ ಇನ್ನು ಅನೇಕ ವಾದ್ಯಗಳು ಬೇಕೇಬೇಕಾಗುತ್ತವೆ. ಜಾನಪದ ಸಂಗೀತಕ್ಕೆ ತಂಬೂರಿ, ತಪ್ಪಡಿ, ಜಾಗಟೆ, ಡೋಲು ಇವುಗಳು ಜೊತೆ ಇರಲೇಬೇಕು. ಇನ್ನು ನಾಟಕಕಾರರಿಗೆ ಹಾರ್ಮೋನಿಯಮ್, ತಬಲಾ, ಜಾಗಟೆ, ಪೀಟಿಲು, ಸಾರಂಗವಾದನ ಇವು ಮುಖ್ಯ ಬೇಕಾಗುತ್ತವೆ. ಇನ್ನು ಭಿಕ್ಷುಕರಿಗೆ ರೇಣುಕಾ, ಎಲ್ಲಮ್ಮ, ಹುಲಗೆಮ್ಮ, ಭಕ್ತರಿಗೆ ಚೌಡಕಿ, ವಿಠಲ, ಭಕ್ತರಿಗೆ ತಂಬೂರಿ, ತಾಳತಪ್ಪಡಿ, ಮೃದಂಗ, ಹರಿದಾಸರಿಗೆ

* ಬೆಳಧಡ್ತಿ, ಗದಗ.

ತಂಬೂರಿ, ಬುಡಬುಡಕಿ ನಾದ ಬೇಕಾಗುತ್ತದೆ. ಮೈಲಾರದೇವರ ಗೊರವಪ್ಪಗಳಿಗೆ ಡಮರು ನಾದ ಬೇಕು. ಇನ್ನು ವೇಷಗಾರರಿಗೆ ತಂಬೂರಿ, ತಪ್ಪಡಿ, ಹಾರ್ಮೋನಿಯಮ್, ಡಗ್ಗಾ, ಡೋಲು, ಹಾವುಗಾರರಿಗೆ ಪುಂಗಿ, ಡೋಲು, ಕವಲೆತ್ತ, ಬಾಲಬಸವ, ಆಡಿಸುವವರಿಗೆ ಸನಾದಿ, ತಳ ಹೀಗೆ ಇನ್ನು ಅನೇಕ. ಭಿಕ್ಷುಕರಿಗೆ ಕೊಳಲು, ಡಮರು, ತಂಬೂರಿ, ತಪ್ಪಡಿ ಮುಖ್ಯ ಬೇಕಾಗುವ ವಸ್ತುಗಳು. ಇನ್ನು ಮದುವೆ, ಹಬ್ಬ ಹರಿದಿನಗಳಲ್ಲಿ ಮನರಂಜನೆಗೆ ಬ್ಯಾಂಡ್ ಬಾಜಿ ಬೇಕಾಗುತ್ತದೆ.

ಇಂದಿಗೂ ಜಾತ್ರೆ, ಉತ್ಸವಗಳಲ್ಲಿ ಕೊಳಲುಗಳು ಮಾರಲ್ಪಡುತ್ತವೆ. ಇಂದಿನ ಚಿಕ್ಕ ಚಿಕ್ಕ ಮಕ್ಕಳಿಗೆ ಮುಖ್ಯವಾಗಿ ಬೇಕಾಗುತ್ತವೆ. ದನ ಕಾಯುವವ ಕುರಿ ಕಾಯುವವನಿಗೆ ಕೊಳಲು ಬೇಕು. ಊದುತ್ತಾ ಆನಂದಮಯವಾಗಿ ದನಕುರಿಗಳು ಆಯಾಗಿ ಕಾಡಿನಲ್ಲಿ ಮೇಯುತ್ತಾ ಸಾಗುತ್ತದೆ. ನಾಟಕದ ಹಾಡುಗಳಿಗೆ ಸಂಗೀತದಲ್ಲಿ ಭಾಗಿಯಾಗಿ ಒಳ್ಳೆ ನಾದಮಯವಾಗಿ ಕೇಳುವವರಿಗೆ ಆನಂದಮವಾಗುತ್ತದೆ. ನಗಾರಿಯ ನಾದಕ್ಕೆ ದೇವರು ಸಂತೃಪ್ತನಾಗುತ್ತಾನೆ. ಬೆಟ್ಟಗಳು ಕೇಕೆ ಹಾಕುತ್ತವೆ. ಇವು ಸಾಮಾನ್ಯವಾಗಿ ದರ್ಗಾ ದೇವಸ್ಥಾನಗಳಲ್ಲಿ ಸದಾ ಕಾಲ ವಾದ್ಯ ಮೊಳಗುತ್ತಾ ಬಂದಿವೆ. ಪುಂಗಿ ನಾದಕ್ಕೆ ಓಡುವ ಸರ್ಪ ಹೆಡೆಯೆತ್ತಿ ತಲೆಯಾಡಿಸಿ ಸಂತೃಪ್ತಿಪಡುತ್ತದೆ. ಇನ್ನು ಸಾಧು ಸಂತ ಸತ್ಪುರುಷರ ತಂಬೂರಿ ತಪ್ಪಡಿ ನಾದಮಯಕ್ಕೆ ತಮ್ಮ ಸುಖ ಸಂತೋಷಗಳನ್ನು ಹಂಚಿಕೊಳ್ಳುತ್ತಾರೆ. ಡೋಲು, ಪುಂಗಿ, ಕೊಳಲು ಇವು ಕೂಡಾ ಡಮರು ಸರ್ಕಸ್ಸಿನವರು ಆಟವಾಡುವ ಕಾಲಕ್ಕೆ ಇವುಗಳ ನಾದದಲ್ಲಿ ತಮ್ಮ ಕಸರತ್ತು ಮಾಡಿ ತೋರಿಸುತ್ತಾರೆ. ವಾದ್ಯಗಳ ನಾದದಲ್ಲಿ ಜನ ಆಕರ್ಷಿಸುತ್ತಾರೆ. ಇನ್ನು ವೀರಭದ್ರೇಶ್ವರ ಭಕ್ತರು ಪುರವಂತರ ಹಲಗೆ ಸಮ್ಮೇಳನದಲ್ಲಿ ದೇವರ ವೀರಗಾಸೆ ಪದಗಳನ್ನು ಹೇಳುತ್ತಾ ಕೇಳುಗರಿಗೆ ಆನಂದ ಮಯವಾಗಿ ಮಾಡುತ್ತಾರೆ. ಇನ್ನು ಗೀಗೀ ಪದ ಹಾಡುವವನಿಗೆ ಹಲಗೆ ಸಂಪ್ರದಾಯ ಚೌಡಕಿ ತಾಳಗಳು ಬೇಕೇ ಬೇಕು. ಒಂದರ ಮೇಲೆ ಒಂದು ಸವಾಲು ಪದ ಹಾಕುತ್ತಾ ಕುಣಿ ಕುಣಿದು ಹಾಡು ಹೇಳಿ ಜನರನ್ನು ಮುಗ್ಧಗೊಳಿಸುತ್ತಾನೆ.

ಡೊಳ್ಳು ಕುಣಿತ ಡೊಳ್ಳು ಬಡಿಯುವುದು ಇದು ಕೂಡಾ ಒಳ್ಳೆ ರಮ್ಯವಾದ ನಾದ. ಹೋಳಿ ಹುಣ್ಣಿಮೆಯಲ್ಲಿ ನಮ್ಮ ಉತ್ತರ ಕರ್ನಾಟಕದಲ್ಲಿ ರಗ್ಗು ಹಲಗೆ ಇವು ಬಹಳ ಪ್ರಾಮುಖ್ಯ ಪಡೆದಿವೆ. ಜಗ್ಗಲಗೆ ಇದು ಒಳ್ಳೆ ರೋಮಾಂಚಕ ವಾದ್ಯ ನಾದವಾಗಿರುತ್ತದೆ. ಸಂಗೀತಮಯ ಜೊತೆ ಆದಿಯಿಂದ ಇಂದಿನವರೆಗೆ ಮಣ್ಣಿನಿಂದ ಮಾಡಿದ ಬಿಂದಿಗೆಯನ್ನು ಹೊಟ್ಟೆಗೆ ಹಚ್ಚಿ ನಾದ ಹುಟ್ಟಿಸುತ್ತಾರೆ. ಇಂಥ ಇನ್ನು ಅನೇಕ ವಾದ್ಯಗಳು ನಮ್ಮ ಪುರಾತನರಿಂದ ಬಂದಿವೆ. ಇಂದಿಗೂ ಶಾಶ್ವತವಾಗಿ ಉಳಿದುಕೊಂಡಿವೆ.

ಇದರಂತೆ ಈಗಿನ ಕಾಲದ ಮಿಲ್ಟ್ರಿ ಸೈನಿಕರು, ಬ್ಯಾಂಡ್ ಡೋಲು, ಇನ್ನು ಅನೇಕ ವಾದ್ಯಗಳನ್ನು ಬಳಸಿ ಸಂಗೀತ ನೀಡುತ್ತಾರೆ. ಮನರಂಜನೆಯಾಗಿ ಸಿನಿಮಾ, ಸರ್ಕಸ್ಸು, ನಾಟಕ, ಮೋಜು, ಮಜಲು, ನಡೆಯುತ್ತಾ ಬಂದಿವೆ. ಇಂದಿಗೂ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಯಕ್ಷಗಾನದಲ್ಲಿ ಸಂಗೀತ ನಾದಕ್ಕೆ ವಾದ್ಯಗಳು, ಚಂಡಮದ್ದಳೆ, ಜಾಗಟೆ, ತಾಳ, ಇವುಗಳು ಇಂದಿಗೂ ಪಾರಂಪರಿಕ ಪುರಾತನತೆಯನ್ನು ಹೊಂದಿವೆ.

ಕೇಶವ ಉಮರ್ಜಿ*

# ಶೂರ್ಪಾಲಯ ಗ್ರಾಮ : ಹಿನ್ನೆಲೆ ಮತ್ತು ಇತಿಹಾಸ

ನಗರದ ಯಾವ ಗೌಜಿ ಗದ್ದಲಗಳಿಲ್ಲದ ಪ್ರಶಾಂತ ವಾತಾವರಣದಲ್ಲಿ ಕೃಷ್ಣೆಯ ತಟದಲ್ಲಿ ಭವ್ಯವಾಗಿ ತಲೆ ಎತ್ತಿ ನಿಂತ ವಿಷ್ಣುವಿನ ದಶಾವತಾರಗಳಲ್ಲೊಂದಾದ ಶ್ರೀ ನರಸಿಂಹ ಮೂರ್ತಿಯ ದೇವಸ್ಥಾನವಿದೆ. ಇದು ಅವರ್ಣನೀಯ ಸುಂದರ ಪರಿಸರವಾಗಿ ಸಾಧಕರು, ಸಾಹಿತಿಗಳು, ಇತಿಹಾಸಕಾರರು, ವಿರಾಗಿಗಳು ಮತ್ತು ಏಕಾಂತಪ್ರಿಯರನ್ನು ಕೈಬೀಸಿ ಕರೆಯುತ್ತಿದೆ. ಶ್ರೀಲಕ್ಷ್ಮೀ ನರಸಿಂಹ ದೇವಸ್ಥಾನವೆಂದು ಇದು ಪ್ರಸಿದ್ಧಿಯನ್ನು ಪಡೆದಿದೆ. ಆದರೆ ಇಂದು ಇದು ಆಲಮಟ್ಟಿ ಜಲಾಶಯದ ಹಿನ್ನೀರಿನಲ್ಲಿ ಮುಳುಗುವ ಸಂಭವದಲ್ಲಿಯೂ ಇದೆ.

ಬಾಗಲಕೋಟ ಜಿಲ್ಲೆಯ ತಾಲ್ಲೂಕು ಜಮಖಂಡಿಯಿಂದ ಅಂದಾಜು ಹದಿಮೂರು ಕಿಲೋಮೀಟರ್ ಅಂತರದಲ್ಲಿದ್ದರೂ ಸರಿಯಾದ ವಾಹನ ಸೌಕರ್ಯ ಅಥವಾ ಇನ್ನಾವುದೇ ನಾಗರಿಕ ಸೌಲಭ್ಯದಿಂದ ಈ ನೆಲೆ ವಂಚಿತವಾಗಿದೆ.



**ಗ್ರಾಮ ನಾಮ :** ಭೌಗೋಳಿಕವಾಗಿ ಈ ಗ್ರಾಮವನ್ನು ಕೃಷ್ಣಾನದಿಯು ಇಂಗ್ಲೀಷ್ ಎಲ್ "L" ಆಕಾರದಲ್ಲಿ ಸುತ್ತುವರೆದು ಮತ್ತೊಂದು ಬದಿಗೆ ನದಿಯ ಒತ್ತು (ಚಿಕ್ಕ ಸರೋವರ) ಬಂದು ಸೇರಿಕೊಂಡು ಗ್ರಾಮಕ್ಕೆ "U" (ಇಂಗ್ಲೀಷ್ ಯು) ಆಕಾರ ತಂದಿದೆ. ಈ ಭಾಗದ ಗ್ರಾಮೀಣ ಜನರು ಈ ಗ್ರಾಮವು ಮೊರದಂತೆ ಆಗಿದೆ ಎಂದು ಮೊರನೂರು ಎಂದು ಕರೆಯತೊಡಗಿದರು. ಆದರೆ ಈ ಗ್ರಾಮದಲ್ಲಿ ಬ್ರಾಹ್ಮಣರ ಸಂಖ್ಯೆ ಒಂದಾನೊಂದು ಕಾಲಕ್ಕೆ ಜಾಸ್ತಿಯಾಗಿತ್ತು. ಗ್ರಾಮದ ಸುಮಾರು ೮೦% ಅವರೇ ಇದ್ದರು ಮತ್ತು ಅವರು ಸಂಸ್ಕೃತ ಬಲ್ಲವರಾಗಿದ್ದರು. ಹೀಗಾಗಿ 'ಮೊರ' ಇದನ್ನು ಸಂಸ್ಕೃತದಲ್ಲಿ 'ಶೂರ್ಪ'ವೆನ್ನುತ್ತಾರೆ ಎಂಬ ಕಾರಣದಿಂದ ಇದಕ್ಕೆ ಶೂರ್ಪಾಲಯವೆಂದು ಅವರು ಕರೆದರು. ಹೀಗಾಗಿ ಈ ಗ್ರಾಮ "ಮೊರನೂರು ಮತ್ತು ಶೂರ್ಪಾಲಯ" ಗಳೆಂಬ ಎರಡೂ ಹೆಸರುಗಳಿಂದಲೂ ಪ್ರಸಿದ್ಧವಾಗಿದೆ. ಇದಕ್ಕೆ ಇನ್ನೊಂದು ಪೌರಾಣಿಕ ಹಿನ್ನೆಲೆಯೂ ಇದೆ. ಕಾಶಿಯ ವಿಶ್ವನಾಥನು ತನ್ನೆದುರು ಹರಿಯುತ್ತಿರುವ ಭಾಗೀರಥಿಯನ್ನು ಕರೆದು "ನಿನ್ನ ಪಾಪ ಪರಿಹಾರಕ್ಕಾಗಿ ದಕ್ಷಿಣ ದಿಕ್ಕಿಗೆ ಹೋಗು, ಅಲ್ಲಿ ಪರಶುರಾಮ ಪ್ರತಿಷ್ಠಿತ ಶ್ರೀ ಲಕ್ಷ್ಮೀ ನರಸಿಂಹ ದೇವಸ್ಥಾನವಿದೆ. ಅದರ ಎದುರು ಬದಿ ಹರಿಯುವ ಕೃಷ್ಣಾನದಿಯಲ್ಲಿ ಮೊರದ ಬಾಗಿಣ ಅರ್ಪಿಸಿದರೆ ಪಾಪಿಗಳು ಸ್ನಾನ ಮಾಡುವಾಗ ಬಿಟ್ಟ ಪಾಪವು ನಿನಗಂಟಿಕೊಂಡಿರುವದಾಗಿ ಹೇಳುತ್ತಿರುವಿಯಲ್ಲ ಅದು ಪರಿಹಾರವಾಗುತ್ತದೆ." ಎಂದನಂತೆ. ಅದರಂತೆ ಗಂಗೆಯು ಶೂರ್ಪಾಲಯಕ್ಕೆ ಬಂದು ಮೊರದ ಬಾಗಿಣ ಅರ್ಪಿಸಿದ್ದರಿಂದ ಇದಕ್ಕೆ ಮೊರನೂರು ಎಂಬ ಹೆಸರು ಪ್ರಾಪ್ತವಾಯಿತು ಎಂದೂ ಹೇಳುತ್ತಾರೆ.

**ಮೂರ್ತಿ ಶಿಲ್ಪ ಮತ್ತು ದೇವಾಲಯ :** ಈ ದೇವಸ್ಥಾನವು ಪುರಾತನವಾಗಿದ್ದು ಐತಿಹಾಸಿಕ ಮಹತ್ವ ಪಡೆದಿದೆ ಎನ್ನಲು ಹಿಂದೆ ಆಳಿದ ರಾಜ-ಮಹಾರಾಜರು ಹಾಕಿಕೊಟ್ಟ ದಾನಪತ್ರ ಮತ್ತು ಉಂಬಳಿಗಳೇ ಸಾಕ್ಷಿ. ಅದರಂತೆ ಕ್ರಿಸ. ೧೭೩೦ ರಲ್ಲಿ ಮಹಾರಾಷ್ಟ್ರದ ಪುಣೆಯಲ್ಲಿ ಆಳುತ್ತಿದ್ದ ಶಾಹು ಮಹಾರಾಜರು ದೇವಸ್ಥಾನದ ಇಪ್ಪತ್ನಾಲ್ಕು ಜನ ಅರ್ಚಕರಿಗೆ ಜಮೀನು ಉಂಬಳಿಯನ್ನು ಹಾಕಿಕೊಟ್ಟ ಬಗ್ಗೆ ದಾಖಲೆ ಇದೆ. ಇದಕ್ಕೂ ಪೂರ್ವದಲ್ಲಿ ವಿಜಾಪುರವನ್ನಾಳುತ್ತಿದ್ದ ಆದಿಲ್‌ಶಹಾನು ಭೂಮಿ, ಮಾಸಿಕ ಇನಾಮು ಮತ್ತಿತರ ವಸ್ತುರೂಪದ ದಾನಗಳನ್ನು ನೀಡಿದುದರ ದಾಖಲೆಗಳಿವೆ.

* ಅಗಸ್ತ್ಯ ಕುಟೀರ, ಹುನ್ನೂರು – ೫೮೭ ೧೧೯. ತಾ. ಜಮಖಂಡಿ, ಜಿ. ಬಾಗಲಕೋಟ್.

೮ X ೮ ಅಡಿಗಳ ಅಳತೆಯ ಚಿಕ್ಕ ಗರ್ಭಗುಡಿಯ ಬಾಗಿಲು ದಕ್ಷಿಣಾಭಿಮುಖವಾಗಿದ್ದು ಕೃಷ್ಣಾನದಿಯೆಡೆಗೆ ಮುಖ ಮಾಡಿ ತಲೆ ಎತ್ತಿ ನಿಂತಿದೆ. ಸುತ್ತಲೂ ವಿಶಾಲವಾದ ಪ್ರಾಂಗಣ ಕಟ್ಟಡವಿದ್ದು ಇತ್ತೀಚೆಗೆ ಇದನ್ನು ನವೀಕರಿಸಿದ್ದಾರೆ.

ಗರ್ಭಗುಡಿಯಲ್ಲಿರುವ ಮೂರ್ತಿಯು ೪ ೧/೨ ಅಡಿ ಎತ್ತರವಿದ್ದು, ಉತ್ತರ ಗೋಡೆಗೆ ಬೆನ್ನು ಮಾಡಿ ಹೊಂದಿಕೊಂಡು ಕಮಲಾಕಾರದ ಪಾಣಿಪೀಠದ ಮೇಲೆ ಬಾಗಿಲಿಗೆ ಎದುರಾಗಿ ದಕ್ಷಿಣಾಭಿಮುಖವಾಗಿದೆ. ಪ್ರಾಚೀನವಾದ, ಕಪ್ಪು ಸಾಲಿಗ್ರಾಮದ ಏಕಶಿಲೆಯಲ್ಲಿ ಸುಂದರವಾಗಿ ಕೆತ್ತಲಾದ ಶ್ರೀಲಕ್ಷ್ಮೀ ನರಸಿಂಹ ದೇವರ ವಿಗ್ರಹ ಕಲ್ಯಾಣದ ಚಾಲುಕ್ಯರ ಕಾಲದ್ದಿರಬಹುದೆಂದು ಹೇಳುತ್ತಾರೆ. ಮೂಲಮೂರ್ತಿ ನರಸಿಂಹನ ತೊಡೆಯ ಮೇಲೆ ಎಡಬದಿಗೆ ಲಕ್ಷ್ಮಿಯ ಮೂರ್ತಿಯನ್ನು ಕೆತ್ತಿದ್ದಾನೆ ಶಿಲ್ಪಿ. ಶ್ರೀ ನರಸಿಂಹ ಮೂರ್ತಿಗೆ ನಾಲ್ಕು ಹಸ್ತಗಳಿದ್ದು ಮೇಲಿನೆರಡು ಕೈಗಳ ಪೈಕಿ ಎಡಗೈ ಶಂಖವನ್ನೂ, ಬಲಗೈ ಚಕ್ರವನ್ನೂ ಹಿಡಿದಿದೆ. ಕೆಳಗಿನ ಬಲಗೈ ಆಶೀರ್ವಾದ ಮುದ್ರೆ ಇದ್ದರೆ, ಎಡಗೈ ಲಕ್ಷ್ಮಿಯ ನಡುವನ್ನು ಬಳಸಿದೆ. ಈ ಮೂರ್ತಿಯನ್ನು ಪರಶುರಾಮನು ಸ್ಥಾಪಿಸಿದನೆಂದೂ ಹೇಳುತ್ತಾರೆ. ದೇವಾಲಯ ಜೀರ್ಣೋದ್ಧಾರ ಸಮಯದಲ್ಲಿ ಈ ಮೂರ್ತಿಯನ್ನು ಪುನರ್ಪ್ರತಿಷ್ಠಾಪಿಸಲಾಗಿದೆಯಂತೆ. ಕೆಲವರು ನವೀಕರಿಸಲಾಗಿದೆ ಎಂದೂ ಹೇಳುತ್ತಾರೆ. ಇವಾವುದಕ್ಕೂ ಯಾವುದೇ ಆಧಾರವಿಲ್ಲ.

ಗರ್ಭಗುಡಿಯ ಎದುರಿಗೆ ಪುರಾತನ ಕಾಲದ ಒಂದು ಬೃಹತ್ ಅಶ್ವತ್ಥ ವೃಕ್ಷವಿದೆ. ಈ ವೃಕ್ಷವನ್ನು ಪರಶುರಾಮ ಪ್ರತಿಷ್ಠೆ ಎಂದು ಹೇಳಲಾಗುತ್ತದೆ.

ಇನ್ನು ದೇವಸ್ಥಾನವು ಕೃಷ್ಣಾ ನದಿಯ ದಡದ ಮೇಲೆ ಅಂದಾಜು ಐವತ್ತು ಅಡಿ ಎತ್ತರದ ಮಣ್ಣುಗುಡ್ಡೆಯ ಮೇಲೆ ನಿಂತಿದೆ. ಸುತ್ತಲೂ ಎತ್ತರವಾದ ಗೋಡೆಯನ್ನು ಕಟ್ಟಿ ದೇವಸ್ಥಾನಕ್ಕೆ ಹೋಗಲು ಕೃಷ್ಣಾನದಿಯಿಂದ ದೇವಸ್ಥಾನದ ಗರ್ಭಗುಡಿಯ ಎದುರಿನವರೆಗೆ ಪಾವಟಿಗೆಗಳನ್ನು ನಿರ್ಮಿಸಿದ್ದಾರೆ.

ಪ್ರತಿವರ್ಷ ಮಳೆಗಾಲದಲ್ಲಿ ಇನ್ನೂರು ವರ್ಷಗಳ ಹಿಂದೆ ಜಮಖಂಡಿ ಸಂಸ್ಥಾನವನ್ನು ಆಳುತ್ತಿದ್ದ ಪಟವರ್ಧನ ಮಹಾರಾಜನು ಅದನ್ನು ಜೀರ್ಣೋದ್ಧಾರ ಮಾಡಿ ನದಿಗೆ ಮೆಟ್ಟಿಲುಗಳನ್ನು ಮತ್ತು ದೇವಸ್ಥಾನಕ್ಕೆ ಸುತ್ತಲ ತಡೆಗೋಡೆಯನ್ನು ರಿಪೇರಿ ಮಾಡಿಸಿದ ದಾಖಲೆ ಇದೆ. ಮತ್ತೊಮ್ಮೆ ಪಂಡಿತ ಶಾಮಾಚಾರ್ಯ ಮಹಿಷಿಯವರು ಕೋಟೆಯ ಗೋಡೆಗಳಿಗೆ ಇರುವಂತೆ ಈ ದೇವಸ್ಥಾನದ ಗೋಡೆಗೂ ರಿಪೇರಿ ಮಾಡಿಸಿ ದುಂಡಗಾದ ಎತ್ತರವಾದ ಒಂದು ಹುಡೆಯನ್ನು ನೈಋತ್ಯ ದಿಕ್ಕಿನಲ್ಲಿ ಕಟ್ಟಿಸಿದರು. ಈಗಲೂ ಜನ ಇದು ಶ್ಯಾಮಾಚಾರ್ಯರು ಕಟ್ಟಿಸಿದ ಹುಡೆ ಎಂದು ತೋರಿಸುತ್ತಾರೆ. ಮತ್ತೊಂದು ಬದಿಗೆ ಇದೇ ಪ್ರಕಾರದ ಎತ್ತರದ ಹುಡೆಯನ್ನು ಶ್ರೀನಿವಾಸರಾವ ಕಮಲಾಪುರರವರು ಕಟ್ಟಿಸಿದ್ದಾರೆ.

**ಪೌರಾಣಿಕ ಹಿನ್ನೆಲೆ** : ಈ ಶೂರ್ಪಾಲಯ ಕ್ಷೇತ್ರವು ಅತಿ ಪುರಾತನ ಕಾಲದ್ದಾಗಿದ್ದು ಪೌರಾಣಿಕ ಹಿನ್ನೆಲೆಯನ್ನು ಹೊಂದಿದೆ ಎಂದು ಸಂಸ್ಕೃತದಲ್ಲಿರುವ ತಾಡವಾಲೆ ಲಿಪಿಯು ಹೇಳುತ್ತದೆ. ಅದರ ಸಾರಾಂಶವನ್ನು ನೋಡಲಾಗಿ :

ಶೌನಕಾದಿ ಋಷಿಗಳು ಒಮ್ಮೆ ಸೂತಪುರಾಣಿಕರನ್ನು ಕಂಡು ಕೇಳಿದರು.

"ಕ್ಷೇತ್ರಗಳಲ್ಲಿ ಶ್ರೇಷ್ಠವಾದ ಕ್ಷೇತ್ರ ಯಾವುದು ? ಅದರ ಮಹಿಮೆ ಏನು ?" ಎಂದು ಪ್ರಶ್ನೆ ಮಾಡಿದರು.

ಅದಕ್ಕೆ ಪ್ರತ್ಯುತ್ತರವಾಗಿ ಸೂತರು – ಶೂರ್ಪಾಲಯವೆಂಬ ಕ್ಷೇತ್ರವಿದೆ. ಅಲ್ಲಿ ಕೋಟಿ, ಚಕ್ರ, ಕಂಕ, ಉತ್ತುಂಗ, ಮಧು, ಚಲಕ, ಪಿತೃಮೋಚನ ಮತ್ತು ಋಣಮೋಚನಗಳೆಂಬ ಎಂಟು ತೀರ್ಥಗಳಿವೆ. ಮತ್ತು ಕಾಶೀ ವಿಶ್ವೇಶ್ವರನ ಮೂರು ರೂಪುಗಳಾದ ಕೋಟೇಶ್ವರ, ಬೈಲೇಶ್ವರ ಮತ್ತು ಗುಹೇಶ್ವರ ಎಂಬ ಗುಡಿಗಳೂ ಇವೆ. ಈ ಮೂರು ರೂಪುಗಳನ್ನು ಗಂಗೆಯು ಪೂಜಿಸಿದಳೆಂದು ಪ್ರತೀತಿ. ಆದ್ದರಿಂದ ರವಿವಾರ ಸರ್ವ ತೀರ್ಥಗಳ ಸನ್ನಿಧಾನವನ್ನು ಸ್ಮರಿಸಿ ಸ್ನಾನ ಮಾಡಿದರೆ ತಮ್ಮ ಪಾಪ ಕಳೆದುಕೊಂಡು ಪವಿತ್ರ ದೇಹಿಗಳಾಗುತ್ತಾರೆ ಎಂದು ಹೇಳುತ್ತ ಅಶ್ವತ್ಥ ವೃಕ್ಷದ ಮಹಿಮೆಯನ್ನು ಸೂತ ಮಹರ್ಷಿಗಳು ಮುಂದುವರಿಸಿದರು.

ಇಲ್ಲಿಯ ಕೃಷ್ಣಾತೀರದ ರಮಣೀಯತೆಯನ್ನು ಕಂಡು ಪರಶುರಾಮನು ಸಂತಸಗೊಂಡು ಆನಂದ ಭಾಷ್ಪವನ್ನು ಉದುರಿಸಿದನು. ಆ ಜಲಬಿಂದುವಿನಿಂದ ಚಿತ್ರವಿಚಿತ್ರವಾದ ಎಲೆ ಶಾಖೆಗಳಿಂದೊಡಗೂಡಿದ ಆಶ್ಚರ್ಯಕರ ಅಶ್ವತ್ಥ ವೃಕ್ಷವು ಹುಟ್ಟಿಕೊಂಡಿತು. ಯಾರು ಈ ವೃಕ್ಷಕ್ಕೆ ಪೂಜೆ ಪ್ರದಕ್ಷಿಣೆ ಸಲ್ಲಿಸುತ್ತಾರೋ ಅವರಿಗೆ ಇಷ್ಟಾರ್ಥ ಸಿದ್ಧಿಯಾಗುತ್ತದೆ ಎಂದು ವರವನ್ನು ಕೊಟ್ಟರು. ಮತ್ತು ಮಹಾದೇವರು ಕೋಟೇಶ್ವರ ರೂಪದಿಂದ ಅಶ್ವತ್ಥರೂಪಿ ಪರಶುರಾಮನ ಸೇವೆಗೈಯುತ್ತಾ ಇಲ್ಲಿ ವಾಸವಾಗಿದ್ದಾರೆ. ಈ ಕಲಿಯುಗದಲ್ಲಿ ಪರಶುರಾಮನೇ ಲಕ್ಷ್ಮೀನರಸಿಂಹ ರೂಪದಿಂದ ಕ್ಷೇತ್ರ ಮೂರ್ತಿಯಾಗಿ ಕೃಷ್ಣಾತೀರದಲ್ಲಿ ವಾಸ ಮಾಡಿದ್ದಾನೆ.

ಪ್ರಯಾಗ, ಪುಷ್ಕರ, ಗಯಾ, ಬದರಿ, ರಾಮೇಶ್ವರ ಕ್ಷೇತ್ರಗಳು (ಮೊದಲಿನ ಕಾಲದಲ್ಲಿ) ಅಸಾಧ್ಯವಾಗಿದ್ದವು. ಅಲ್ಲಿ ಹೋಗಲಾರದವರು ಶೂರ್ಪಾಲಯಕ್ಕೆ ಬಂದು ಸ್ನಾನ – ಪೂಜಾದಿಗಳನ್ನು ಮಾಡಿದರೆ ಈ ಮೇಲಿನ ಯಾತ್ರೆಗಳ ಫಲಕ್ಕಿಂತ ನೂರು ಪಾಲು ಅಧಿಕ. ಇಲ್ಲಿಯ ವಾಯು ಸೇವನೆ ಪವಿತ್ರ. ಕೃಷ್ಣಾತೀರದ ನಾಲ್ಕು ಕ್ಷೇತ್ರಗಳು ಪ್ರಖ್ಯಾತ. ಶೂರ್ಪಾಲಯ, ಸಂಗಮ, ಛಾಯಾ ಮತ್ತು ಶ್ರೀಶೈಲ. ಒಂದೊಂದು ಯುಗಕ್ಕೆ ಒಂದೊಂದು ಕ್ಷೇತ್ರವೆಂದು ವಿಶೇಷ. ಅದರಂತೆ ಕಲಿಯುಗದಲ್ಲಿ ಶೂರ್ಪಾಲಯವು ಅಧಿಕ ಮಹಿಮೆಯುಳ್ಳದ್ದೆಂದು ಸೂತರು ಹೇಳುತ್ತ ತಮ್ಮ ನಿತ್ಯಾಹ್ನಿಕ ಕರ್ಮದೆಡೆಗೆ ತೆರಳಿದರು.

ಇಂಥ ಮಹಾನ್ ಐತಿಹಾಸಿಕ, ಪೌರಾಣಿಕ ಮಹತ್ವ ಪಡೆದ ಧಾರ್ಮಿಕ ಕೇಂದ್ರ, ಪವಿತ್ರ ಕ್ಷೇತ್ರ ಶೂರ್ಪಾಲಯದ ಶ್ರೀಲಕ್ಷ್ಮೀ ನರಸಿಂಹ ದೇವಸ್ಥಾನವು ಆಲಮಟ್ಟಿ ಹಿನ್ನೀರಿನಲ್ಲಿ ಕೃಷ್ಣಾನದಿಯಲ್ಲಿ ಕೃಷ್ಣಾರ್ಪಣವಾಗುವ ಭೀತಿಯಲ್ಲಿದೆ. ಒಂದು ವೇಳೆ ಹಾಗೇನಾದರೂ ಘಟಿಸಿದರೆ, ಪುರಾತನ ಭವ್ಯ ಪರಂಪರೆಯು ಗತ ಜೀವನದ ವಿಶಾಲ ಕುರುಹನ್ನೇ ತನ್ನ ಮಡಿಲಿಗೆ ಕೊಂಡೊಯ್ಯುಂತಾಗುವವರಲ್ಲಿ ಅತಿಶಯೋಕ್ತಿ ಏನಿಲ್ಲ.

ಡಾ. ಕರೆಪ್ಪಗೌಡ ಸಿ. ಪಾಟೀಲ*

# ಹೂಲಿ : ಒಂದು ಜೈನಕೇಂದ್ರ

ಬೆಳಗಾವಿ ಜಿಲ್ಲೆಯ ಸವದತ್ತಿಯಿಂದ ೯ ಕಿ.ಮೀ. ಅಂತರದಲ್ಲಿರುವ ಹೂಲಿಯು ಕ್ರಿಶ. ೧೦-೧೨ ನೆಯ ಶತಮಾನದಲ್ಲಿ ಬೆಳ್ವೊಲ-೩೦೦ರ ಆಡಳಿತ ವಿಭಾಗದ ಒಂದು ಚಿಕ್ಕ ಗ್ರಾಮ. ಶಾಸನಗಳಲ್ಲಿ ಇದನ್ನು ಪೂಲಿ, ಪೂವಲ್ಲಿ, ಹೂಲಿ ಎಂದು ಉಲ್ಲೇಖಿಸಿದೆ. ಅಲ್ಲದೆ ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಹೂಲಿಯು "ಚಾಳುಕ್ಯ ಚಕ್ರವರ್ತಿ ಮಹಾಅಗ್ರಹಾರ" ವೆನಿಸಿದ್ದು ಕಾಳಾಮುಖ ಶೈವರ ಕೇಂದ್ರವೂ ಆಗಿತ್ತು.

ಸ್ಥಳೀಯವಾಗಿ ದೊರೆತ ಜೈನ ಅವಶೇಷಗಳ ಹಿನ್ನೆಲೆಯಲ್ಲಿ ಹೂಲಿಯು ಒಂದು ಜೈನಕೇಂದ್ರವಾಗಿತ್ತೆನ್ನಬೇಕು. ಹೂಲಿಯಲ್ಲಿ ಈವರೆಗೆ ಒಟ್ಟು ಜೈನಧರ್ಮದ ೫ ಶಿಲಾಶಾಸನಗಳು ಮತ್ತು ಒಂದು ತಾಮ್ರಪಟವು ದೊರೆತಿದೆ. ಬಾದಾಮಿ ಚಲುಕ್ಯ ಮನೆತನದ ಅರಸನಾದ ಮಂಗಳೇಶನ (ಮಂಗಳರಾಜ) ತಾಮ್ರಪಟಶಾಸನದಲ್ಲಿ ಉಲ್ಲೇಖಿಸಿರುವ ಹಾಗೆ ಸೇಂದ್ರಕ ಮನೆತನದ ಅರಸರು ಹೂಲಿ ಪ್ರದೇಶದ ಕಿರುವಟ್ಟಿಗೆರೆಯನ್ನು ಕೇಂದ್ರವನ್ನಾಗಿಟ್ಟು ಕೊಂಡು ಆಳ್ವಿಕೆ ಮಾಡಿದ ಬಗ್ಗೆ ಮತ್ತು ಈ ಮನೆತನದ ಕನ್ನಶಕ್ತಿಯ ಮಗನಾದ ರವಿಶಕ್ತಿಯು ಕಿರುವಟ್ಟಿಗೆರೆಯ ಶಾಂತಿನಾಥ ಬಸದಿಗೆ ೫೦ ನಿವರ್ತನ ಭೂಮಿಯನ್ನು ದಾನ ಮಾಡಿದ ಬಗ್ಗೆ ಮಾಹಿತಿ ಇದೆ. ಅಲ್ಲದೆ ಈ ದಾನವನ್ನು ಪರಲೂರ ಸಂಘದ ಶ್ರೀನಂದಿಯ ಶಿಷ್ಯನಾದ ಅಭಯ ನಂದಿಯು ಸ್ವೀಕರಿಸಿದನು.[೧]

ಕಲ್ಯಾಣದ ಚಾಳುಕ್ಯ ಅರಸ ಮೊದಲನೆಯ ಸೋಮೇಶ್ವರ (ಕ್ರಿ.ಶ. ೧೦೪೨-೧೦೬೮)ನು ರಾಜ್ಯವಾಳುತ್ತಿರುವಾಗ ರಟ್ಟ ಅರಸುಮನೆತನದ ಲಚ್ಚಿಯಬ್ಬರಸಿಯು ಹೂಲಿಯಲ್ಲಿ ಬಸದಿಯೊಂದನ್ನು ಮಾಡಿಸಿ, ಆ ಬಸದಿಯ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ೬ ಮತ್ತರುಭೂಮಿಯನ್ನು, ಯಾಪನೀಯ ಸಂಘದ ಪುನ್ನಾಗವೃಕ್ಷ ಮೂಲಗಣದ ಶ್ರೀ ಬಾಳಚಂದ್ರ ಭಟ್ಟಾರಕದೇವರ ಪಾದವನ್ನು ತೊಳೆದು ದಾನ ಮಾಡಿದಳು.[೨] ಇವಳು ಕುಹೂಂಡಿ-೩೦೦೦ ಆಡಳಿತ ಪ್ರದೇಶದ ರಾಜ್ಯಾಧ್ಯಕ್ಷನಾದ ಅಂಕಪಾಲ (ಅಂಕರಸ)ನ ಮಡದಿಯಾಗಿದ್ದಳು.

ಈ ಗ್ರಾಮದ ಮಧ್ಯದಲ್ಲಿರುವ ಪಂಚಲಿಂಗೇಶ್ವರ ದೇವಾಲಯವು ಮೂಲತಃ ಚೌವ್ವೀಸ ತೀರ್ಥಂಕರರ ಬಸದಿಯಾಗಿತ್ತು ಎಂಬುದಕ್ಕೆ ಕಲ್ಯಾಣದ ಚಾಳುಕ್ಯ ಅರಸನಾದ ೬ನೆಯ ವಿಕ್ರಮಾದಿತ್ಯನ ಶಾಸನವು ಉಲ್ಲೇಖಿಸುತ್ತದೆ. ಈ ಚೌವ್ವೀಸ ತೀರ್ಥಂಕರರ ಬಸದಿಯು ಈತನ ಆಳ್ವಿಕೆಯಲ್ಲಿ ನಿರ್ಮಾಣವಾಗಿದ್ದು, ಈ ಬಸದಿಯ ಮುಂಭಾಗದಲ್ಲಿರುವ ಅಗ್ರಮಂಟಪವು ಕಳಚೂರಿ ಅರಸ ಬಿಜ್ಜಳನ ಆಳ್ವಿಕೆಯಲ್ಲಿ ಸೇರ್ಪಡೆಯಾಗಿರಬೇಕು. ಬಸದಿಯ ಮೊದಲನೆಯ ಮತ್ತು ಮೂರನೆಯ ಗರ್ಭಗೃಹಗಳ ದ್ವಾರಶಾಖೆಯ ಮೇಲಿರುವ ಕ್ರಿಸ. ೧೨೨೦ರ ಶಾಸನವು ಈ ಬಸದಿಯನ್ನು "ಮಾಣಿಕ್ಯ ತೀರ್ಥ" ಬಸದಿ ಎಂದು ಪ್ರಸ್ತಾಪಿಸಿದೆ.[೩] ಈ ಬಸದಿಯನ್ನು ಕೆಂಪುಮರಳು ಶಿಲೆಯಿಂದ ನಿರ್ಮಿಸಿದ್ದರಿಂದ ಇದಕ್ಕೆ ಈ ಹೆಸರು ಬಂದಿರಬಹುದು. ಈ ಬಸದಿಯು ತಳವಿನ್ಯಾಸದಲ್ಲಿ ಆಯತಾಕಾರವಾಗಿದ್ದು, ವಿಶಾಲವಾದ ಗರ್ಭಗೃಹವನ್ನು ಹೊಂದಿದೆ. ಈ ಗರ್ಭಗೃಹದಲ್ಲಿ ೨೪ ತೀರ್ಥಂಕರರ ವಿಗ್ರಹಗಳನ್ನು ಸಾಲಾಗಿ ಪ್ರತಿಷ್ಠಾಪಿಸಿರಬೇಕು. ತದನಂತರದ ಕಾಲದಲ್ಲಿ ಉತ್ತರ ಮತ್ತು ದಕ್ಷಿಣಾಭಿಮುಖವಾಗಿ ಇನ್ನೆರಡು ಗರ್ಭಗೃಹಗಳನ್ನು ನಿರ್ಮಿಸಿದ್ದು ಇವುಗಳಲ್ಲಿ ಈಗ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಪೂರ್ವಕ್ಕೆ ಮುಖ ಮಾಡಿದ ಆಯತಾಕಾರದ ಗರ್ಭಗೃಹಕ್ಕೆ ೩ ದ್ವಾರಬಂಧಗಳನ್ನು ಮಾಡಿರುವುದು ವಿಶೇಷವಾಗಿದೆ. ಅಂಧಕಾಸುರ ದೇವಾಲಯದ ಕಾಳಾಮುಖಪಂಥದ ಗುರುಗಳಾದ ಶ್ರೀ ಜ್ಞಾನಶಕ್ತಿಯ ಶಿಷ್ಯರಾದ ನಾಗರಾಶಿ ಮತ್ತು ಕವದಿಯ ಮಾದಿಗೌಡರು ಈ ಬಸದಿಯ ಅಗ್ರಮಂಟಪದಲ್ಲಿರುವ ಸ್ತಂಭಗಳನ್ನು ಮಾಡಿಸಿದರು.[೪]

ಈ ಬಸದಿಯು ತ್ರಿತಳ ದ್ರಾವಿಡವಿಮಾನ ಮಾದರಿಯ ಶಿಖರವನ್ನು ಹೊಂದಿದ್ದು, ಪೂರ್ವಕ್ಕೆ ಮುಖ ಮಾಡಿದ ಆಯತಾಕಾರದ ಗರ್ಭಗೃಹದ ಮೇಲೆ ೩ ಶಿಖರಗಳನ್ನು, ಉತ್ತರ ಮತ್ತು ದಕ್ಷಿಣಗರ್ಭಗೃಹಗಳ ಮೇಲೆ ಎರಡು ಶಿಖರಗಳನ್ನು ನಿರ್ಮಿಸಲಾಗಿದೆ. ಹೀಗೆ ಒಟ್ಟು ೫ ಶಿಖರಗಳು ಇರುವುದರಿಂದ ಇದಕ್ಕೆ ಈಗ ಪಂಚಲಿಂಗೇಶ್ವರ ದೇವಾಲಯ ಎಂದು ಕರೆಯುತ್ತಾರೆ. ಬಸದಿಯ ಭಿತ್ತಿಯು ಕುಡ್ಯಸ್ತಂಭಗಳಿಂದ

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನರಗುಂದ, ಜಿಲ್ಲೆ : ಗದಗ - ೫೮೨ ೨೦೭.

ಅಲಂಕೃತವಾಗಿದ್ದು, ಭಿತ್ತಿಯ ಮೇಲ್ಭಾಗದಲ್ಲಿರುವ ಪ್ರಸ್ತಾರದಲ್ಲಿ ಕೂಟ, ಪಂಜರ ಮತ್ತು ಶಾಲಾಗಳಿವೆ. ಶಾಲಾದಲ್ಲಿ ಜೈನ ಯಕ್ಷ, ಯಕ್ಷಿ ಮತ್ತು ಜೈನಸರಸ್ವತಿ ಶಿಲ್ಪಗಳನ್ನು ಚಿತ್ರಿಸಲಾಗಿದೆ.

ಹೀಗೆ ಕ್ರಿ.ಶ. ೧೦ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ಹೂಲಿ ಜೈನಕೇಂದ್ರವಷ್ಟೆ ಅಲ್ಲದೆ ವಿದ್ಯಾಕೇಂದ್ರವೂ ಆಗಿತ್ತು. ಇಲ್ಲಿ ಸಾವಿರ ಮಹಾಜನರು ವಾಸಿಸುತ್ತಿದ್ದು, ಹೂಲಿಯ ಸ್ಥಳೀಯ ಆಡಳಿತವೆಲ್ಲವೂ ಇವರ ಅಧೀನಕ್ಕೆ ಒಳಪಟ್ಟಿತ್ತು.

## ಆಧಾರಸೂಚಿ


೧. ಪಿ.ಬಿ. ದೇಸಾಯಿ., ಹೂಲಿ ಪ್ಲೇಟ್ಸ್ ಆಫ್ ಮಂಗಳರಾಜ, ದಿ ಜರ್ನಲ್ ಆಫ್ ಕರ್ನಾಟಕ ಯುನಿವರ್ಸಿಟಿ, ಧಾರವಾಡ, ಸಂಪುಟ–V, ೧೯೬೯, ಪುಟ ೧೭೫–೧೮೧.

೨. ಎಪಿಗ್ರಾಫಿಯ ಇಂಡಿಕಾ, ಸಂಪುಟ–XVIII, ಹೂಲಿ–೨೨/ಬಿ, ಪುಟ–೧೭೨–೧೭೮.

೩. ಡಾ. ಶ್ರೀನಿವಾಸ. ವಿ. ಪಾಡಿಗಾರ, ಚರಿತ್ರೆ ಅಧ್ಯಯನ, ಸಂಪುಟ–೧, ಸಂಚಿಕೆ–೨, ಜನೇವರಿ–ಜೂನ್ ೨೦೦೬, ಪುಟ ೧೪೪–೧೪೯.

೪. ಎಪಿಗ್ರಾಫಿಯ ಇಂಡಿಕಾ, ಸಂಪುಟ–XVIII, ಹೂಲಿ–೨೨/ಐ/ಜೆ, ಪುಟ ೨೦೫–೨೦೬.

ಡಾ. ಕೆ. ರವೀಂದ್ರನಾಥ*

# ಮದಿಕೇರಿ ನಾಯಕನ ದಂಡಕ : ಮತ್ತೊಂದು ಪ್ರತಿ

೨೭ ಅಕ್ಷರಗಳ ನಾಲ್ಕು ಸಾಲುಗಳುಳ್ಳ ವೃತ್ತವನ್ನು ದಂಡಕವೆಂದು ಛಂದೋಶಾಸ್ತ್ರಜ್ಞರು ಗುರುತಿಸಿದ್ದಾರೆ. ಕನ್ನಡದಲ್ಲಿ ಮುಖ್ಯವಾಗಿ ೧೨೨೨ರ ಸೋಮರಾಜನ ಉದ್ಭಟ ಚರಿತ್ರೆಯಲ್ಲಿ ಬರುವ ವಿರೂಪಾಕ್ಷ ಸ್ತೋತ್ರದಂಡಕ, ಷಡಕ್ಷರ ಮಹಾಕವಿಯ ವೀರಭದ್ರದಂಡಕ, ಬಂಧುವರ್ಮನ ಹರಿವಂಶಾಭ್ಯುದಯದಲ್ಲಿ ಬರುವ ದಂಡಕಗಳು ಪ್ರಸಿದ್ಧವಾಗಿದೆ. ಇಲ್ಲೆಲ್ಲ ಸಂಸ್ಕೃತ ಅಥವಾ ಸಂಸ್ಕೃತ ಪದಗಳಿಂದಾಗಿ ಅಲ್ಲೊಂದು, ಇಲ್ಲೊಂದು ಕನ್ನಡ ಪದಗಳಿಂದ ಕೂಡಿದ ದಂಡಕ ಸಾಹಿತ್ಯವೇ ಹೆಚ್ಚು ಸಿಗುತ್ತದೆ.

ಇದುವರೆಗೆ ದಂಡಕಗಳು ಈ ಕೆಳಗಿನಂತೆ ಲಭ್ಯವಿದ್ದು ಅವುಗಳಲ್ಲಿ ಕೆಲವು ಪ್ರಕಟಗೊಂಡಿವೆ.

೧. ಈಶ್ವರ ದಂಡಕ : ಶ್ರೀ ತರಳಬಾಳು ಸಿರಿಗೇರಿ ಮಠದ ಭಾಂಡಾರದ ೨೬೧/೫ ನೇ ನಂಬರಿನ ಕಾಗದಪ್ರತಿ.

೨. ಮಹಾರುದ್ರನ ದಂಡಕ : ಬೆಂಗಳೂರು ವಿಶ್ವವಿದ್ಯಾಲಯ ಭಾಂಡಾರದ ೬೭೨/೨ನೇ ನಂಬರಿನ ಕಾಗದ ಪ್ರತಿ.

೩. ಕೊಟ್ಟೂರೇಶ್ವರ ದಂಡಕ : ದಾವಣಗೇರಿಯ ಎಸ್. ಉಮಾಪತಿ ಅವರ ಸಂಗ್ರಹ.

೪. ಕೊಟ್ಟೂರು ಬಸವೇಶ್ವರ ದಂಡಕ : ಕರ್ನಾಟಕ ವಿಶ್ವವಿದ್ಯಾಲಯ ಆರ್.ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠದ ೩೪೩೦ ನೇ ನಂಬರಿನ ಕಾಗದ ಪ್ರತಿ.

೫. ಚಂಪಕ ಸಿದ್ದೇಶ್ವರ ದಂಡಕ : ಇದು ಚಿತ್ರದುರ್ಗದ ಬೆಟ್ಟದ ಮೇಲಿನ ಸಂಪಿಗೆ ಸಿದ್ದೇಶ್ವರನ ಸ್ತುತಿರೂಪದ ಪ್ರತಿ. ಇದು ಸಿರಿಗೇರಿ ಬೃಹನ್ಮಠ ಭಾಂಡಾರದ ಕೆ. ೧೬/೬ ನಂಬರಿನ ಪ್ರತಿ.

೬. ವೀರಭದ್ರ ದಂಡಕ : ಬೆಂಗಳೂರು ವಿಶ್ವವಿದ್ಯಾಲಯ ಹಸ್ತಪ್ರತಿ ಭಂಡಾರದಲ್ಲಿ ಬಿ. ೬೭೩ನೇ ನಂಬರಿನ ಪ್ರತಿ.

೭. ಶರಭದಂಡಕ : 'ಸಿದ್ಧಶಾಂತ' ಅಂಕಿತದ ಈ ಕೃತಿ ಪ್ರೊ. ಸಿ. ಮಹಾದೇವಪ್ಪ ಅವರ ಸಂಗ್ರಹದಲ್ಲಿದೆ.

ಈ ಮೇಲಿನ ದಂಡಕಗಳನ್ನು ಉಲ್ಲೇಖಿಸಿರುವ ಉದ್ದೇಶವೇನೆಂದರೆ, ಇವೆಲ್ಲ ವೀರಶೈವ ದೈವ ಹಾಗೂ ಪೌರಾಣಿಕ ಕಥಾ ವಸ್ತುಗಳನ್ನಾಧರಿಸಿ ರಚನೆಗೊಂಡ ಕೃತಿಗಳಾಗಿವೆ. ಹೀಗಾಗಿ ಐತಿಹಾಸಿಕ ವೀರನೊಬ್ಬನ ವ್ಯಕ್ತಿತ್ವವನ್ನು ನಿರೂಪಿಸುವ 'ಮದಿಕೇರಿ ನಾಯಕನ ದಂಡಕ' ಹೆಸರಿನ ಹಸ್ತಪ್ರತಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ೫೯೭ನೇ ನಂಬರಿನ ಕಾಗದ ಪ್ರತಿ ಸಂರಕ್ಷಿತವಾಗಿದೆ. ಇದನ್ನು ಬಿಟ್ಟರೆ ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ವಚನ ಭಂಡಾರದಲ್ಲಿ ಒಂದು ಪ್ರತಿ ಇರುವುದನ್ನು "ವೀರಶೈವ ಅಪ್ರಕಟಿತ ಗ್ರಂಥಸೂಚಿಯಲ್ಲಿ" ದಿ. ಎಸ್. ಶಿವಣ್ಣ ಅವರು ಉಲ್ಲೇಖಿಸುತ್ತಾರೆ.

**ದಂಡಕದ ವಸ್ತು :** ಚಿತ್ರದುರ್ಗದ ವೀರಮದಕರಿ ನಾಯಕನ ದಿನಚರಿಯನ್ನು ನಿರೂಪಿಸುವುದು ಇಲ್ಲಿಯ ವಸ್ತು. ಆತನ ವ್ಯಕ್ತಿತ್ವವನ್ನು ಕುರಿತು :

"ಸಂಪತ್ಕಳಾ ರಾಜ್ಯಧಾನಿ ಭವ ಚಿನ್ಮಲಾದ್ರಿ ಪ್ರತಿಷ್ಠಾಪನಾಚಾರ್ಯ, ಕೊದಂಡ ಪಾಂಡಿತ್ಯ ಪರೀಣ ವೀರಾಧಿ ವೀರಾಗ್ರಣೆ ಕಾದುಂ ಪೆರ್ಬುಲಿ ಕಸ್ತೂರಿ ಭೋಜ, ಕರ್ನಾಟ, ಡಿಳ್ಳಿಪ ಮುಕ್ಕಣ್ಣ ಭಲ್ಲೇದ ಹಮ್ಮೀರ ಶುತ್ರುದ್ವಿಪಾಟೋಪ ಕಂಠೀರವ ಕಾಮಗೇತ್ಯಾಂನ್ವಯಾಂಭೋದಿ ಸಂಪೂರ್ಣ ಚಂದ್ರೋದಯಾಂ ವೀರಮದಕೇರಿ ರಾಜಾಧಿರಾಜಂ ಸುಧಾರಾಶಿ ತಾಳ್ದು ತೇಜಸ್ವಿಯಲ್ಲಿ ವಿಕ್ರಮಾದಿತ್ಯನಂತೆ, ಉದಾರದಲ್ಲಿ ಜನಾಶ್ರಯದಲ್ಲಿ ವಾರ್ಧಿಯಂತೆ ಇರುವ ಮದಕರಿನಾಯಕನನ್ನು ಸಾರ ಸಾರಾಗ್ನತಾ ಪ್ರೌಢಿಯಿಂದ ಧುರೀಣನೂ, ಕವಿನಾಂಕನೆಂಬಂತೆ ಸೌಂದರ್ಯದಲ್ಲಿ ಸಿಂಧುಗಾಂಭೀರ್ಯದಿಂದಿರುವವನೆಂದು ಬಣ್ಣಿಸುತ್ತದೆ. ಪ್ರತಿದಿನ ಮದಕರಿನಾಯಕನು ಚಂದ್ರಮೌಳೀಶ್ವರನ ಧ್ಯಾನ, ಹಸ್ತರೇಖಾ, ಪಂಚಾಂಗಗಳ ಕೇಳುವಿಕೆ, ಸ್ವಚ್ಛಂದ ದೇಹಾಲಂಕಾರ ಮಾಡಿಕೊಳ್ಳುವುದು, ನಾನಾ ವಿಧ ಭೋಜನಗಳಿಂದ ಹರ್ಷಚಿತ್ತನಾದ ಮದಕರಿ ನೇರವಾಗಿ ಗರುಡಿ ಮನೆಯನ್ನು ಹೊಕ್ಕು ಅಲ್ಲಿಯ ಜಟ್ಟಿಗಳೊಂದಿಗೆ ಕುಸ್ತಿಯಲ್ಲಿ ಪಾಲ್ಗೊಂಡು, ಸ್ನಾನ ಮಾಡಿ ಪೂಜಾ ವಿಧಿಗಳನ್ನು ಪೂರೈಸಿ ಮಿತ್ರರೊಂದಿಗೆ

* ಪ್ರವಾಚಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

ಪುತ್ರರೊಂದಿಗೆ ಸಂದ ಭೋಜನ ಮಾಡಿ ಸಿಂಹಾಸನದಲ್ಲಿ ಮಂಡಿಸಿ, ಕಪ್ಪ ನೀಡಿ ವಿಜ್ಞಾಪನೆಯನ್ನು ಮಾಳ್ಪ ಅನೇಕ ಅರಸರನ್ನು ವೀಕ್ಷಿಸುತ್ತಿದ್ದನು.

ಕರ್ನಾಟಕದ ಗಾದ್ರಿಮಲೆ, ಪೆರ್ಬುಲಿ, ಗೋಲಕೊಂಡ, ಬಿಜಾಪುರ, ಕಲ್ಯಾಣ, ಕಲಬುರ್ಗಿ, ಸವಣೂರು, ಶ್ರೀರಂಗ ಪಟ್ಟಣದ ಅರಸರಲ್ಲದೆ ಬಂಗಾಳ, ನೇಪಾಳ ರಾಜರಿಂದ, ಮಂತ್ರಿ ಮಾರ್ಥನ್ಯರಿಂದ ಹೊಗಳಿಕೆಗಳ ವಿಜ್ಞಾಪನೆಯನ್ನು ಆಲಿಸುತ್ತಿದ್ದನು. ಸಂಗೀತ-ಸಾಹಿತ್ಯ ಸ್ವಾರಸ್ಯವನ್ನು ಕೇಳಿ ಅವರನ್ನು ಕಾರಣ್ಯದಿಂದ ನೋಡಲು ಈತನ ಕಣ್ಣ ಬೆಳಕು ಆಸ್ತಾನವನ್ನು ದಾರಿದ್ರ್ಯ-ಕತ್ತಲಿನಿಂದ ಮುಕ್ತಿ ಮಾಡಿ ಪ್ರಕಾಶಮಾನವಾಗಿರುತ್ತಿತ್ತಂತೆ.

ಆಸ್ಥಾನದ ಸಂಗೀತಗೋಷ್ಠಿ ವರ್ಣನೆ, ಉತ್ಸವಾಂಬ ದೇವಿ, ವಸಂತೋತ್ಸವ ಮುಂತಾದ ಆಚರಣೆಗಳಲ್ಲದೆ ಏಕನಾಥೇಶ್ವರನ ಸಿಡಿ ಉತ್ಸವದ ನಂತರ ನಡೆಯುವ ಬೇಟೆ ಉತ್ಸವದ ವರ್ಣನೆಯನ್ನು ದಂಡಕ ಮನದುಂಬಿ ಬಣ್ಣಿಸುತ್ತದೆ.

ಚಿತ್ರದುರ್ಗ ಸಂಸ್ಥಾನದಲ್ಲಿ ಮದಕರಿನಾಯಕ ಹೆಸರಿನವರು ನಾಲ್ಕೈದು ಜನರಿದ್ದಾರೆ. ಅತೀ ಹೆಚ್ಚು ಪ್ರಸಿದ್ಧಿಗೆ ಬಂದ ಕೊನೆಯ ಅರಸನ ಕುರಿತು ಈ ದಂಡಕ ರಚನೆಯಾಗಿರಬೇಕು.

ಮದಕರಿನಾಯಕ ದಂಡಕ ಕುರಿತು ಪ್ರೊ. ಬಿ. ರಾಜಶೇಖರಪ್ಪ, ಪ್ರೊ. ಲಕ್ಷ್ಮಣ ತೆಲಗಾವಿ ಹಾಗೂ ಡಾ. ಬಿ. ಬಿ.ಆರ್. ಹಿರೇಮಠ ಅವರು ಕೃಷಿ ಮಾಡಿದ್ದಾರೆ. ವಿಶೇಷವಾಗಿ ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ದಂಡಕವನ್ನು ಮೊದಲ ಬಾರಿಗೆ ಪ್ರಕಟಿಸಿದ್ದಾರೆಂಬ ಅಂಶ ನನ್ನ ಗಮನಕ್ಕೆ ಬಂದಿದೆ. ಈ ಕಾರಣವಾಗಿ ಕನ್ನಡ ವಿಶ್ವವಿದ್ಯಾಲಯದ ನಾನು ಕ್ಷೇತ್ರ ಕಾರ್ಯ ಮಾಡಿ ಸಂಗ್ರಹಿಸಿದ ಈ ಪ್ರತಿಯಿಂದ ಭಾಷೆ, ಲಿಪಿ, ಸಂಗತಿ ಹಾಗೂ ಐತಿಹಾಸಿಕ ಸತ್ಯಾಸತ್ಯತೆಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡುವ ಸಾಧ್ಯತೆಗಳಿರುವುದನ್ನು ವಿದ್ವಾಂಸರ ಗಮನಕ್ಕೆ ತರಬಯಸುತ್ತೇನೆ.

ಪು. ಶ್ರೀನಿವಾಸಭಟ್ಟ*

# ಯಕ್ಷಗಾನ ಪ್ರಸಂಗ ಸಾಹಿತ್ಯದಲ್ಲಿ ಶ್ರೀ ಧರ್ಮಸ್ಥಳದ ನೆನವರಿಕೆಗಳು

ಶ್ರೀ ಕ್ಷೇತ್ರ ಧರ್ಮಸ್ಥಳದ ಭವ್ಯ ಪರಂಪರೆಯನ್ನು ಅವಲೋಕಿಸಿದಾಗ ಶತಮಾನಗಳ ಹಿಂದಿನಿಂದಲೂ ಅಲ್ಲಿ ಯಕ್ಷಗಾನ ಬಯಲಾಟಕ್ಕೆ ಪ್ರೋತ್ಸಾಹವಿದ್ದಂತೆ ತಿಳಿದುಬರುತ್ತದೆ. ಧರ್ಮಸ್ಥಳದ ಶ್ರೀ ಕುಮಾರಹೆಗ್ಗಡೆ (೧೭೮೫-೧೮೩೦)ಯವರು, ಶ್ರವಣಬೆಳಗುಳದ, ಗೊಮ್ಮಟಾಭಿಷೇಕದ ಉತ್ಸವದಲ್ಲಿ ಭಾಗವಹಿಸಿದ ಉಲ್ಲೇಖ ಚಂದ್ರಸಾಗರವರ್ಣಿ (೧೭೬೦-೧೮೩೫)ಯ ಒಂದು ಕೃತಿಯಲ್ಲಿ ಕಂಡುಬರುತ್ತದೆ.

**ಕೇಳಿಗೊಂಡೈದೆ ಕುಮಾರ ಹೆಗ್ಗಡೆ ಬಹು । ಲೀಲೆಯೊಳಗೆ ಬೆಳ್ಗುಳಗಿರಿಗೆ ॥**
**ಆತನಾಗಮನ ಕೇಳಿ ವಿನಿಯೋಗ ಜನಸಂ । ಪ್ರೀತಿಯಿಂದಲಿ ಪೂರ್ಣೈಯ್ಯಕರೆಸಿ॥**
**ಸಾತಿಶಯದೊಳಾಲಿಂಗನಗೈದತಿ । ನೂತನ ಭೂಪಣಂಗಳನಿತ್ತ ॥**

ಎಂದು ಹೇಳಲಾಗಿದೆ. ಅಲ್ಲಿಗೆ ಹೋಗುವಾಗ ಕುಮಾರ ಹೆಗ್ಗಡೆಯವರು ಒಂದು ಬಯಲಾಟದ ತಂಡವನ್ನು ಕರೆದುಕೊಂಡು ಹೋಗಿದ್ದರಂತೆ. ಪ್ರದರ್ಶನವನ್ನು ಕಂಡು ಹರ್ಷಚಿತ್ತರಾದ ಕೃಷ್ಣರಾಜ ಒಡೆಯರು ಒಂದು ಬಯಲಾಟ ತಂಡವನ್ನು ಮೈಸೂರಿಗೂ ತರಿಸುವ ವ್ಯವಸ್ಥೆ ಮಾಡಿದ್ದರಂತೆ. ನಮ್ಮಲ್ಲಿ ಆಟದವರಿಗೆ ಹಗಲು ಉಳಕೊಳ್ಳಲು ಕೊಡುವ ಸ್ಥಳಕ್ಕೆ ಬಿಡಾರವೆಂದು ಹೆಸರು. ಮೈಸೂರಿನಲ್ಲಿ ಆಟದ ಮೇಳದವರಿದ್ದ ಸ್ಥಳಕ್ಕೆ ಅದೇ ಹೆಸರಾಯಿತು. ಮುಂದೆ ಕ್ರಿಶ. ೧೮೬೭ರಲ್ಲಿ ಮತ್ತೆ ಕೆಲವು ವೇಷಧಾರಿಗಳನ್ನು ಕಳುಹಿಸಿ ಕೊಡಬೇಕೆಂದು ಮೈಸೂರು ಅರಮನೆಯಿಂದ ಧರ್ಮಸ್ಥಳಕ್ಕೆ ಬರೆದಿರುವ ಪತ್ರವೊಂದರ ಉಲ್ಲೇಖವಿದೆ. ಹೀಗೆಲ್ಲ ಹೋಗಿದ್ದ ಕಲಾವಿದರ ಬಳಗದಲ್ಲಿದ್ದ ನಂದಳಿಕೆ ವಿಶ್ವನಾಥಯ್ಯನವರ ಮಗನೇ ಜಗತ್ಪ್ರಸಿದ್ಧ ಸಂಗೀತ ವಿದ್ವಾಂಸ ಬಿಡಾರಂ ಕೃಷ್ಣಪ್ಪ ಕಲಾವಿದರಿದ್ದ ಬಿಡಾರದಿಂದ ಅವರಿಗೆ ಆ ಹೆಸರು ಬಂತಂತೆ.

ಆ ಕಾಲದಲ್ಲಿ ಬಯಲಾಟದ ಮೇಳಕ್ಕೆ ಪ್ರೋತ್ಸಾಹ ದೊರಕಿದಂತೆಯೆ, ಯಕ್ಷಗಾನ ಕವಿಗಳಿಗೂ ಇಲ್ಲಿ ಆಶ್ರಯ ದೊರಕಿದಂತಿದೆ. ಅವರಲ್ಲಿ ಪ್ರಮುಖನಾದವ ದೇವೀದಾಸನೆಂಬ ಯಕ್ಷಗಾನ ಪ್ರಸಂಗಕರ್ತನು ತನ್ನ ದ್ರೌಪದೀ ಸ್ವಯಂವರದಲ್ಲಿ ತಾನದನ್ನು "ಸಾರಹೃದಯ ಸಮಸ್ತ ವಿದ್ವ । ತ್ಸಾರಧೇನುವೆನಿಪ್ಪ ವರದಕು । ಮಾರ ನೃಪರಚಿಸೆಂದ ವಚನಾ । ಧಾರದಿಂದ" ಬರೆದೆನೆಂದು ಹೇಳಿಕೊಂಡಿದ್ದಾನೆ. ದೇವೀದಾಸನು ದೇವೀಮಹಾತ್ಮೆ, ದ್ರೌಪದೀ ಸ್ವಯಂವರ, ಚಿತ್ರಸೇನ ಕಾಳಗ, ಬಬ್ರುವಾಹನ ಕಾಳಗ, ಶ್ರೀಕೃಷ್ಣಸಂಧಾನ, ಗಿರಿಜಾಕಲ್ಯಾಣ, ಅಭಿಮನ್ಯು ಕಾಳಗ ಇತ್ಯಾದಿ ಪ್ರಸಂಗಗಳನ್ನು ರಚಿಸಿದಂತೆ ತಿಳಿದುಬರುತ್ತದೆ. ಎಲ್ಲಾ ಕೃತಿಗಳಲ್ಲೂ ಅವಕಾಶವಿದ್ದಾಗಲೆಲ್ಲ ಧರ್ಮಸ್ಥಳದ ಮಂಜುನಾಥಸ್ವಾಮಿ, ಮಹಾಗಣಪತಿ ದೇವರು, ಹಾಗೆಯೇ ಉಳಿದ ದೈವತಗಳನ್ನು ಕೂಡ ನೆನವರಿಕೆ ಮಾಡಿರುತ್ತಾನೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

**ಶ್ರೀಮತ್ಕುಡುಮಪುರೀಶಂ ।**
**ಸಾಮಜ ಧನುಜಹರಂ ಸರ್ವಾರ್ಥ ಪ್ರಧಾತಂ ॥**
**ಕಾಮಿತ ಫಲವಿಂದೆಮಗಂ ।**
**ಪ್ರೇಮದೊಳಿತ್ತಪುದುಮಂಜುನಾಥನತಿದಯದಿ ॥**
**(ಅಭಿಮನ್ಯು ಕಾಳಗ)**

ಮಧುರ ತರ ಜಂಬೂಫಲಾಶನ । ವಿಜಿತ ಮೂಷಕ ವಾಹನ ॥ ತ್ರಿದಶ ವಂದಿತ ಕುಡುಮಪುರವರ ॥ ಸದನ ವಿಭು ದ್ವೈಮಾತುರ ॥

**ರಾಗಮುಖಾರಿ – ಝಂಪೆತಾಳ**

**ಕುಡುಮಪುರವಾಸನಿಗೆ । ಕೋಟಿರವಿಭಾಸನಿಗೆ । ಬಿಡದೆ ಸುಜನರನು ಸಲಹುವ ದೇವಗೆ ॥**
**ಪೊಡವಿಗೆ ಚತುಃಶರಧಿ ವಲಯದಿ । ಪ್ರಕಾಶಿಸುವ ॥ ಒಡೆಯ ಶ್ರೀ ಮಂಜುನಾಥೇಶ್ವರನಿಗೆ ॥ ೧ ॥**
**ಸಂಗೀತ ಲೋಲನಿಗೆ । ಸರಸ ಗುಣಶೀಲನಿಗೆ । ಮಂಗಳಾಂಗಗೆ ಮಹೇಶ್ವರ ಬಾಲನಿಗೆ ॥**
**ಶೃಂಗಾರದಿಂದ ಧರ್ಮಸ್ಥಳದ ಶೋಭಿಸುವ । ಭಂಗಾರ ಗಜಮುಖದ ಗಣನಾಥಗೆ । ಜಯಮಂಗ ಳಂ ನಿತ್ಯಶುಭಮಂಗಳಂ । (ಚಿತ್ರಸೇನ ಕಾಳಗ)**

**ಶಾರ್ದೂಲ ವಿಕ್ರೀಡಿತ ವೃತ್ತ**

ಶ್ರೀ ದುರ್ಗಾ ವದನಾಂಬುಜಂ ಸ್ಥಿರರತಿಂ ಶ್ರೀ ಶೈಲನಾಥಂ ಶಿವಂ ।
ಶ್ರೀ ದಾತಾರ ಸಖಂ ಜಗತ್ರಯನುತಂ ಶ್ರೀಕಂಠಮೀಶಂ ಮೃಡಂ ।
ಶ್ರೀ ದಂಶಾಂತ ಕಲಾನಿಧಿಂ ಸುಲಲಿತಂ ಶ್ರೀಮತ್ಕರಂ ಶಂಕರಂ ।

* ನಿವೃತ್ತ ಶಿಕ್ಷಕ, ಪಂಚವಟಿ, ಕಟೀಲು – ೫೭೪ ೧೪೮. ದಕ್ಷಿಣ ಕನ್ನಡ.

ಶ್ರೀ ಧರ್ಮಸ್ಥಳ ಮಂದಿರಂ ಶುಭಕರಂ ಶ್ರೀ ಮಂಜುನಾಥಂ
ಭಜೇ ॥

ರಾಗ : ಮೋಹನ, ಅಷ್ಟತಾಳ

ಮಂಗಲ ಶ್ರೀ ಮಂಜುನಾಥನಿಗೆ । ಜಯ । ಮಂಗಲ ಕವಿ
ಪಾರಿಜಾತನಿಗೆ ॥ ಪ ॥ ಧರೆಗೆ ಚತುಃ
ಸಾಗರವಲಯದಿ ಕಪ್ಪ ತರಿಸಿ ಭಕ್ತರ ಪೊರೆವಗೆ ।
ಜಯಮಂಗಲಂ ॥ ಪರಿಪರಿ ಧರ್ಮವ ಮಾಡಿ
ಬೆಳಗುತಿರ್ಪ । ಹರಿಸಖನಿಗೆ ಜಯ ಮಂಗಲಂ ॥ ೧ ॥
ವನಧಿಯ ಮಥನದಿ ಹರನ ಓಂಕಾರದಿ ।
ಜನಿಸಿದ ಕಾಳರಾಹುಗೆ ಮಂಗಲಂ ॥ ಘನಮಹಿಮೆಯ
ತೋರಿ ಸಿಂಹವಾಹಿನಿಯೆಂ । ದೆನಿಸುವ ಖಳ
ರ್ಕಾಹಿಗೆ ಮಂಗಲಂ ॥ ೨ ॥ ಉನ್ನತ ಬಾಹುದಂಡೆಯ
ಸುಪ್ರಚಂಡೆಗೆ । ಚೆನ್ನಕುಮಾರ ಸ್ವಾಮಿಗೆ
ಮಂಗಲಂ ॥ ಮನ್ನಿಸಿ ಭಕುತರ ಸಲಹುವ ಸಿರಿವಂತೆ ।
ಕನ್ನೆಕುಮಾರಿಗೆ ಜಯಮಂಗಲಂ ॥ ೩ ॥
ಕಡುಬು ಕಜ್ಜಾಯಗಳಳವಡಿಸುತಬಲು । ದೃಢಭಕತರ
ಪೊರೆವವಗೆ ಮಂಗಲಂ । ಬಿಡದೆ ಪಶ್ಚಿಮ
ದಿಕ್ಕಿನೊಳಗೆ ಪ್ರಜ್ವಲಿಸುವ । ಕುಡುಮದ ಗಣನಾಥಗೆ
ಮಂಗಲಂ ॥ ೪ ॥ (ದ್ರೌಪದೀ ಸ್ವಯಂವರ)

ವಾರ್ಧಕ್ಯ

ಖಿಡಿಗಣ್ಣ ರುದ್ರನಂ ವಿದ್ಯಾಸಮುದ್ರನಂ ।
ಬಿಡುಗಣ್ಣರೊಡೆಯನಂ ಹೊಳೆವ ಕೆಂಜೆಡೆಯನಂ ।
ಕಡುಸುಪ್ರತಾಪನಂ ಸ್ಮರಭಸ್ಮಲೇಪನಂ ಚಾರು
ಚಂದ್ರಕಲಾಪನಂ ॥
ಜಡಮತಿ ವಿಭಂಗನಂ ಗೋಪತಿ ತುರಂಗನಂ ।
ದಢಿಗ ಖಳನಾಶನಂಗೋಕರ್ಣ ಭೂಷನಂ ।
ಕುಡುಮಪುರವಾಸನಂ ಮಂಜುನಾಥೇಶನಂ ದೃಡದೊಳಂ
ಧ್ಯಾನಿಸುವೆನು ॥ ೧ ॥
ಪೊಡವಿ ಚತುಃ ಶರಧಿ ವಲಯದೊಳ್ ಸರ್ವರಲಿ ।
ಝುಡಿದು ಕಾಣಿಕೆ ಕಪ್ಪಮಂಗೊಂಡು ಸುಜನರಂ ।
ಬಿಡದೆ ರಕ್ಷಿಪ ಷಡಾನನದೇವ ಸಂಜೀವ ವೈರಿ
ಕಾಂತಾರದಾವಾ ॥
ಕಡುಚೆಲ್ವೆಯಾದ ಕನ್ಯಾಕುಮಾರಿಯ ಕಾಂತ ।
ಕುಡುಮ ಪಟ್ಟಣದೆರೆಯ ತುರುಗವಾಹನ ತ್ರಿಜಗ ।
ದೊಡೆಯ ಕೊಳ್ಳಿಕುಮಾರ ಸ್ವಾಮಿಯೊಲಿದೆಮಗೆ ಸಕಲ
ಸಂಪದ ವೀವುದು ॥ ೨ ॥ (ಶ್ರೀ ದೇವೀ ಮಹಾತ್ಮೈ)

ದೇವೀದಾಸನ ಕೃತಿಗಳಲ್ಲಿ ಈ ರೀತಿ ಮತ್ತೆ ಕೆಲವು ಪದ್ಯಗಳನ್ನು ಸಂಗ್ರಹಿಸಬಹುದು. ಹೀಗೆಯೇ ಬೇರೆ ಕೆಲವರು ತಮ್ಮ ಕೃತಿಗಳಲ್ಲಿ ಧರ್ಮಸ್ಥಳದ ನೆನೆವರಿಕೆ ಮಾಡಿದ್ದಿದೆ. ಇದೇ ಅವಧಿಯಲ್ಲಿದ್ದ ನಗರಾಖ್ಯ ಪಟ್ಟಣದ ಗೌರಿ ಮತ್ತು ವಿಟ್ಠಲರ ಮಗ ಸುಬ್ಬನೆಂಬ ಕವಿ ಬರೆದಿರುವ ರಾವಣೋದ್ಭವ ಪ್ರಸಂಗದಲ್ಲಿರುವ ಮಂಜುನಾಥ ದೇವರ ಸ್ತುತಿ ಹೀಗಿದೆ.

ವೃತ್ತ

ಶ್ರೀ ಗೌರೀ ವರಮಿಂದು ಶೇಖರ ಜಟಾ – ಜೂಟಂ
ಜಗತ್ಪಾವನಂ ।
ಯೋಗೀಂದ್ರಾರ್ಚಿತ ಪಾದಪದ್ಮಯುಗಳಂ ಗಂಗಾಧರಂ,
ಶಂಕರಂ ॥
ಭೂಗೀರ್ವಾಣ ಸಮಸ್ತ ದೇವ ವಿನುತಂ ವ್ಯಾಘ್ರಾ
ಜಿನಾಲಂಕೃತಂ ।
ನಾಗಾರಾತಿ ತುರಂಗಮಿತ್ರ ನಮಿತಂ, ಶ್ರೀ ಮಂಜುನಾಥಂ
ಭಜೇ ॥ ೧ ॥

ಮೈಸೂರಿನ ಅಳಿಯ ಲಿಂಗರಾಜನ (೧೮೨೩–೧೮೭೪) ಆಶ್ರಯದಲ್ಲಿದ್ದ ನಂಜುಂಡನೆಂಬ ಕವಿಯು ತ್ರಿಪುರದಹನ, ರಾಧಾವಿಲಾಸ, ಸೋಮಶೇಖರ ಚಿತ್ರಶೇಖರ ಕತೆ, ಮೋಹವಿವೇಕ ಕಾಳಗ, ಹರಿಶ್ಚಂದ್ರೋಪಾಖ್ಯಾನ, ಸಾರಂಗಧರನ ಕತೆ, ಬಲಿಚಕ್ರವರ್ತಿ ಕತೆ ಮುಂತಾದ ಪ್ರಸಂಗಗಳನ್ನು ಬರೆದಿರುತ್ತಾನೆ. ಅವನು ಕುಡುಮ ಪುರಾಧೀಶ, ಮಂಜುನಾಥ, ಕೆಂಜೆಡೆಯವ ಇತ್ಯಾದಿ ನಾಮಧೇಯಗಳಿಂದ ಧರ್ಮಸ್ಥಳವನ್ನು ಸ್ಮರಿಸಿದ್ದಾನೆ. ಮೂಲಿಕೆ ವೆಂಕಣ್ಣ ಕವಿಯು ಮಾನಸ ಚರಿತ್ರೆ ಯಕ್ಷಗಾನವಲ್ಲದೆ, ದೇವರ ಸ್ತುತಿ ಪದ್ಯಗಳನ್ನೂ ಬರೆದಿರುತ್ತಾನೆ. ಅವನು ಒಂದು ದೀರ್ಘಪದ್ಯದಲ್ಲಿ ಧರ್ಮಸ್ಥಳದ ಕಾಳರಾಹು, ಕಾಳಾಕಾಣಂಬೆ, ಕೊಳ್ಳಿಕುಮಾರ, ಅಣ್ಣಪ್ಪ ಸ್ವಾಮಿಯನ್ನು ಕೊಂಡಾಡಿದ್ದಾನೆ. ಅದರ ಏಳನೆ ಚರಣದಲ್ಲಿ "ಪೊಡವಿಗಧಿತವೆನಿಸಿ । ರಾಜಿಸುತಿಹ । ಕುಡುಮ ಪುರದಿ ನೆಲಸೀ । ದಾನ ಧರ್ಮವ । ಬಿಡದನು ನಡೆಸೀ । ಕೀರ್ತಿಯಾ ಮೆರೆಸಿ । ಕಡುನಿಪುಣನಾಗಿಹ । ಕುಮಾರ ಹೆಗ್ಗಡೆ । ನರೇಂದ್ರರ ರಕ್ಷಿಸುತ ಪೆಸ । ರೊಡೆದು ನಂಬಿದ ಭಕ್ತರಿಷ್ಟವ ಕೊಡುವ ಮಂಜುನಾಥ" ಎಂದು ಹೊಗಳಿರುತ್ತಾನೆ. ಪಾವಂಜೆ ಲಕ್ಷ್ಮೀನಾರಾಯರ್ಣಪ್ಪಯ್ಯ (೧೮೫೪–೧೯೨೪)ನವರು "ಯಾಕೆನ್ನ ಮೇಲೆ ನಿರ್ದಯ । ಶ್ರೀ ಮಂಜುನಾಥ । ಲೋಕೇಶ ಮಾಡು ನಿರ್ಭಯ" ಎಂದು ಆರಂಭಗೊಳ್ಳುವ ಒಂದು ಹಾಡು ಬರೆದಿರುತ್ತಾರೆ. ಅದರ ಕೆಲವು ಸಾಲುಗಳಲ್ಲಿ "ಕಪ್ಪ ಕಾಣಿಕೆಗಳನು ತರಿಸುವರ । ಣ್ಣಪ್ಪ ದೈವದ ದೂತನು ॥ ತಪ್ಪದೆ ಚಂದಯ್ಯ ಹೆಗ್ಗಡೆಯರ ಮನದೋಳಿಪ್ಪ ದಧಿ ಮಥನ ತುಪ್ಪದಂತೆಸೆವ । ಕರ್ಪೂರ ಗೌರ ಸರ್ಪಭೂಷಣ ॥ ಎಂದು ಧರ್ಮಸ್ಥಳದ ಆ ಕಾಲದ ಧರ್ಮಾಧಿಕಾರಿಯ ಹೆಸರನ್ನು ಹೇಳಿಕೊಂಡಿದ್ದಾನೆ. ಒಂದು ಕಾಲದಲ್ಲಿ ಬ್ರಹ್ಮಕಪಾಲ ಪ್ರಸಂಗ ಮೂಲಕ ಧರ್ಮಸ್ಥಳ ಮೇಳದ ಹೆಸರು ದಕ್ಷಿಣೋತ್ತರ ಜಿಲ್ಲೆಗಳಲ್ಲಿ ಮನೆಮಾತಾಗಿತ್ತು. ಆಗ ಅದರಲ್ಲಿ ಈಶ್ವರನ ಪಾತ್ರ ವಹಿಸುತಿದ್ದವರು ದಿ। ಕುರಿಯ ವಿಠಲ ಶಾಸ್ತ್ರಿಗಳು. ಪ್ರಸಂಗ ಬರೆದವರು ಕನ್ಯಾನ ವೆಂಕಟರಮಣಭಟ್ಟರು. ಅವರು ಪ್ರಸಂಗ ಆದಿಯಲ್ಲಿ,

### ವೃತ್ತ

ಶ್ರೀ ಧರ್ಮಸ್ಥಳ ವಾಸ ಮಿತ್ರಘನ ಸಂಕಾಶಾತ್ಮಕಂ ಸುಂದರಂ।
ಖೇದಾರಣ್ಯ ದವಾಗ್ನಿ ರೂಪ ಭವ ಸಂಹಾರಾದ್ರಿ
ಸದ್ರೂಪಣಂ ।
ವೇದಾರಾಧಿತ ಪಾದಪದ್ಮಯುಗಳಂ ನಿರ್ಲೇಪ ನಿಶ್ಚಿಂತಿಪ।
ಶ್ರೀ ಧರ್ಮಪ್ರಿಯ ನಿತ್ಯಮಂಗಳ ನಿರಾಕಾರಂ ಶುಭಾಂಗಂ
ಭಜೇ ॥

ಎಂದು ಮಂಜುನಾಥ ದೇವರನ್ನು ಸ್ತುತಿ ಮಾಡಿದ್ದಿದೆ. ಮೂಲಿಕೆ ಹರಿದಾಸ ಶ್ರೀನಿವಾಸ ಶೇಣವಿ, (೧೯೦೦) ಕಡಂದಲೆ ರಾಮರಾವ್, ರಾಘವನ್ ನಂಬಿಯಾರ್, ಕಡತೋಕ ಮಂಜುನಾಥ ಭಾಗವತ ಇವರೆಲ್ಲ ತಮ್ಮ ಪ್ರಸಂಗ ಕೃತಿಗಳಲ್ಲಿ ಶ್ರೀ ಮಂಜುನಾಥ ಸ್ವಾಮಿಯನ್ನು ಎದೆಯಾರೆ ನೆನೆವಂತೆ ಮಾಡಿದ್ದಿವೆ. ಲಭ್ಯವಿರುವ ಪ್ರಸಂಗಗಳಲ್ಲಿರುವ, ಧರ್ಮಸ್ಥಳದ ಸ್ತುತಿಪದ್ಯಗಳ ಒಂದು ಸಂಪುಟ ಮಾಡುವಷ್ಟು ಪದ್ಯಗಳಿವೆ. ಇಲ್ಲಿ ಪ್ರಾತಿನಿಧಿಕವಾಗಿ, ಕೆಲವನ್ನು ಮಾತ್ರ ಆರಿಸಿ ಪೋಣಿಸಲಾಗಿದೆ.

ಕೆಳದಿ ಗುಂಡಾ ಜೋಯಿಸ್*

# ಕೆಳದಿ ಇತಿಹಾಸದಲ್ಲಿ ಇಂಗ್ಲೀಷ್ ಕಾರ್ಖಾನೆ ದಾಖಲೆಗಳು

ಕ್ರಿ.ಶ. ೧೫೬೫ರ ವಿಜಯನಗರದ ನಂತರ ಕೆಳದಿ ಅರಸರು ಸ್ವತಂತ್ರರಾದರು. ಈ ಕಾಲದಲ್ಲಿ ಪಶ್ಚಿಮ ತೀರದ ಕಡಲ ಪ್ರಾಂತಗಳೆಲ್ಲವೂ ಕಾರವಾರ-ಅಂಕೋಲದಿಂದ ಈಗಿನ ಕೇರಳ ರಾಜ್ಯದ ಬೇಕಲ ಹಾಗೂ ಬಿಲಿಯಾಪಟಂವರೆಗೆ ಈ ಅರಸರ ಆಡಳಿತಕ್ಕೊಳಪಟ್ಟಿತು. ಕೆಳದಿನೃಪ ವಿಜಯ ಕೆಳದಿ ಕಡಲತೀರದ ಇತಿಹಾಸವನ್ನು ಸಂಕ್ಷಿಪ್ತವಾಗಿ ನಿರೂಪಿಸಿದೆ. ಬೃಹತ್ ಸಂಪುಟವೇ ಆಗುವಂತಹ ಕೆಳದಿ ಇತಿಹಾಸದ ಸಾಗರ ಪುರಾತತ್ವ ಅನ್ವಯ ಸಂಗತಿಗಳು ವಿದ್ವಾಂಸರ ಅವಲೋಕನದಲ್ಲಿ ಅಷ್ಟಾಗಿ ಬಂದಿಲ್ಲವೆಂದೇ ಹೇಳಬಹುದು. ವಿಪುಲ ಆಕರ ಸಾಮಗ್ರಿಗಳಿಂದ ಕೂಡಿದ ಸಾಗರ ಪುರಾತತ್ವ ಇತಿಹಾಸವನ್ನು ಗೋವಾದ ದಿ. ಡಾ. ಬಿ.ಎಸ್. ಶಾಸ್ತ್ರಿ ಹಾಗೂ ಡಾ. ವಸಂತ ಮಾಧವರು ಮೊಟ್ಟ ಮೊದಲು ಗಮನಕ್ಕೆ ತಂದು ಪರಿಚಯಿಸಿಕೊಟ್ಟಿದ್ದಾರೆ. ೧೬ನೆಯ ಶತಮಾನವು ಮುಕ್ತಾಯಗೊಳ್ಳುವ ಮುಂಚೆ ಪೋರ್ಚುಗೀಜರಲ್ಲದೆ ಯುರೋಪದ ಇತರ ದೇಶದವರೂ ವ್ಯಾಪಾರವನ್ನು ಮುಖ್ಯ ಗುರಿಯಾಗಿಟ್ಟುಕೊಂಡು ಭಾರತಕ್ಕೆ ಆಗಮಿಸತೊಡಗಿದರು. ಹಾಗೆ ಬಂದವರಲ್ಲಿ ಡಚ್ಚರು ಮೊದಲಿಗರು.[೧] ೧೭ನೆಯ ಶತಮಾನದ ಆರಂಭದಲ್ಲಿ ಆಂಗ್ಲರು ಹಾಗೂ ಫ್ರೆಂಚರು ಬರಲಾರಂಭಿಸಿದರು. ಈ ಐರೋಪ್ಯ ಪ್ರತಿದ್ವಂದಿಗಳೊಂದಿಗೆ ಆದ ಸ್ಪರ್ಧೆಯಲ್ಲಿ ಪೋರ್ಚುಗೀಜರ ಬಲವು ಕುಂದತೊಡಗಿತು. ಡಚ್ಚರು ಅವರನ್ನು ವಿರೋಧಿಸಿ ಅವರ ವ್ಯಾಪಾರ ಕೇಂದ್ರ, ಕೋಟೆ ಮತ್ತು ಭೂಮಿಗಳನ್ನು ಕಿತ್ತುಕೊಂಡರು. ಆದರೆ ಆಂಗ್ಲರೂ, ಫ್ರೆಂಚರೂ ಡಚ್ಚರನ್ನು ಪ್ರಬಲರಾಗಲು ಬಿಡಲಿಲ್ಲ. ಇಂತಹ ಅನೇಕ ರೋಚಕ ಸಂಗತಿಗಳು ಕಡಲತೀರದ ವಿದೇಶೀಯ ಇತಿಹಾಸದಲ್ಲಿ ವಿಪುಲವಾಗಿವೆ. ಪ್ರಕೃತ ಕೆಳದಿ ಅರಸರ ಕಡಲ ತೀರದ ಸಾಗರಾಧ್ಯಯನ ಇತಿಹಾಸದಲ್ಲಿ ಇಂಗ್ಲೀಷ್ ಕಾರ್ಖಾನೆ ದಾಖಲೆಗಳ (English Factory Records) ಕುರಿತು ವಿದ್ವಾಂಸರ ಗಮನ ಸೆಳೆಯಲು ಪ್ರಯತ್ನಿಸಿದ್ದೇನೆ.

**ಇಂಗ್ಲೀಷ್ ಕಾರ್ಖಾನೆ ದಾಖಲೆಗಳು** : ಕೆಳದಿ ವಾಣಿಜ್ಯೋದ್ಯಮ ಚರಿತ್ರೆಯಲ್ಲಿ ಬಟಾವಿಯಾ ಡಾಗ್ ರಿಜಿಷ್ಟರು ಮುಖ್ಯವಾಗಿ ಕೆಳದಿ ಮತ್ತು ಡಚ್ಚರನ್ನು ಕುರಿತಂತೆ ಇಂಗ್ಲೀಷ್



ಕಾರ್ಖಾನೆ ದಾಖಲೆಗಳು ಕೆಳದಿ ಮತ್ತು ಇಂಗ್ಲೀಷರನ್ನು ಕುರಿತು ಸಂಪದ್ಭರಿತ ಆಕರ ಮಾಹಿತಿಗಳನ್ನು ನೀಡಬಲ್ಲದು. ಇದರ ಕೃತಿಕಾರ ಸರ್ ವಿಲಿಯಂ ಫಾಸ್ಟರನು "A calendar of the court minutes, etc., of the East India company (1664-1667) ರಚಿಸಿರುವುದನ್ನು ಈತೆಲ್ ಬ್ರೂಸ್ ಸೈನ್ಸ್ ಬರಿ (Ethel Bruce Sainsbray) ಯು ಸಂಪುಟಗಳ ಮಹತ್ವವನ್ನು-

Court minutes of East India company are a series of publications comprising the documents relating to the transactions etc., of the company from 1635 to 1667. Published in seven volumes under the patronage of his Majesty's Secretary of State for Indias in council. Each Volumes contains a most useful introduction and notes by Sir Willam Foster, C.I.E., Sir. W. William Foster has rendered a distinguished service to all students of history and of political Institutions

* ಕೆಳದಿ, ಶಿವಮೊಗ್ಗ ಜಿಲ್ಲೆ.










by undertaking and completing the editing of "The Letters to the East India company" (1602-17) in six volumes and "The English Factories in India" (1618-1664) in seven volumes. These companion volumes together give us in some 9000 pages the most important documents of the period that terminated in the **British naval** supremacy in the East after the defeat of the dutch. The volume under reference begins in 1664 when the court of committees had to complete the lading and despatch of the season's shipping. We have been an account of the negotiations relating to the question of damages between the English & the Dutch - the war between the two countries. The enormous dividend declared from time to time to the share holders by the company, private trading by the servants of the company in their out behalf, mutual jealousies and conflicts of interests between the servants of the crown and the company's servants, the company's loan to King Charles for the purposes of the war with the Dutch, the great plague, the fire of london, the transfer of Bombay by the Chrown to the company, the peace between the english and the Dutch, the question of the liabilities of the company to pay certain duties on calico as if it were linen to the Chrown are amongst the matters refered to in detail in the documents published in the volume. Miss Sainsbury must be congratulated on the patience and skill bestowed in preparing the calendar of documents, in compiling the full index and in other ways seeing to the completion of the work.

ಈ ರೀತಿ ವಿಮರ್ಶಿಸಿ ಉಲ್ಲೇಖಿಸಿದ್ದಾರೆ. ಕೆಳದಿ ಕಾಲದ ಸಾಗರಾಧ್ಯಯನ, ನೌಕಾ ಹಾಗೂ ವಾಣಿಜ್ಯೋದ್ದಿಮೆ ಇತಿಹಾಸದಲ್ಲಿ ಇವುಗಳು ಪ್ರಮುಖ ಆಕರಗಳಲ್ಲೊಂದಾಗಿದೆ.

**ಕೆಳದಿ ಅರಸರು ಮತ್ತು ಇಂಗ್ಲೀಷರು :** ೧೭ನೆಯ

ಶತಕದಲ್ಲಿ ಇಂಗ್ಲೀಷರು ಭಟ್ಕಳದಲ್ಲಿ ವ್ಯಾಪಾರ ಕೇಂದ್ರವನ್ನು ಸ್ಥಾಪಿಸುವಲ್ಲಿ ಕೆಳದಿ ಹಿರಿಯ ವೆಂಕಟಪ್ಪ ನಾಯಕನ (೧೫೮೨-೧೬೨೯) ಅನುಮತಿಯೊಂದಿಗೆ ಸಂಪರ್ಕ ವುಂಟಾಯಿತು.[೨] ಆದರೆ ಇಂಗ್ಲೀಷರ ಪ್ರಧಾನ ವಾಣಿಜ್ಯ ಆರ್ಥಿಕ ಕೇಂದ್ರವೂ ಕೋಠಿಯೂ ಗುಜರಾತಿನ ಸೂರತ್ತಿನಲ್ಲಿದ್ದವು. ಗುಜರಾತಿನಲ್ಲಿದ್ದಾಗ ಅವರಿಗೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಅಪಾರ ಬೇಡಿಕೆಯಿದ್ದ ಮೆಣಸು ಕೆಳದಿ ರಾಜ್ಯದಲ್ಲಿ ಸಮೃದ್ಧವಾಗಿದೆ ಎಂದು ತಿಳಿಯಿತು. ಈ ಕಾರಣ ಕೆಳದಿರಾಜ್ಯದ ಕರಾವಳಿಗೆ ಆಕರ್ಷಿತರಾದರು. ಇಂಗ್ಲೀಷರ ದಂಡನಾಯಕ ಕ್ಯಾಪ್ಟನ್ ಹೋರ್ (Capt. Hoare) ಡ್ರೇಗನ್ ಎಂಬ ಹಡಗನ್ನು ಭಟ್ಕಳದಲ್ಲಿ ಲಂಗರು ಹಾಕಿ ನಿಲ್ಲಿಸಿದನು. ಈತನೇ ಮೊದಲನೆಯದಾಗಿ ಹಿರಿಯ ವೆಂಕಟಪ್ಪನಾಯಕನನ್ನು ಭೇಟಿಯಾಗಿ ಭಟ್ಕಳದಿಂದ ಮೆಣಸನ್ನು ಕೊಳ್ಳಲು ಅನುಮತಿ ಪಡೆದುಕೊಂಡನು.[೩] ಇದರಿಂದ ಇಂಗ್ಲೀಷರ ವ್ಯಾಪಾರ ಚಟುವಟಿಕೆಗಳಿಗೆ ಪ್ರೋತ್ಸಾಹ ಲಭಿಸಿ ಅವರು ಕೆಳದಿ ಅರಸರೊಂದಿಗೆ ಸಂಬಂಧವನ್ನು ಬಲಪಡಿಸಿಕೊಂಡರು. ಇದು ಪೋರ್ಚುಗೀಸರಿಗೆ ಮುಳುವಾಯಿತು.[೪] ೧೬೨೯-೧೬೪೫ರಂದು ರಾಜ್ಯವಾಳಿದ ವೀರಭದ್ರನಾಯಕನ ಕಾಲದಲ್ಲಿ ಮಲಬಾರ್ ಕಡಲುಗಳ್ಳರಿಂದ ಧಾಳಿಯನ್ನೆದುರಿಸುವ ಸಂಭವವುಂಟಾಯಿತು. ಇದೇ ಸಮಯದಲ್ಲಿ ಥಾಮಸ್ ರಾಬಿನ್ ಪೀಟರ್ ಮಂಡಿ ಮತ್ತು ಕ್ರೈಸ್ತ ಪ್ರತಿನಿಧಿಗಳು ಕೆಳದಿ ರಾಜಧಾನಿ ಇಕ್ಕೇರಿಯಲ್ಲಿ ವೀರಭದ್ರನಾಯಕನನ್ನು ಭೇಟಿ ಮಾಡಿದರು. ಕೆಳದಿ ಅರಸನು ಇಂಗ್ಲೀಷ್ ರಾಯಭಾರಿಗಳಿಗೆ ಆತ್ಮೀಯವಾಗಿ ಸತ್ಕರಿಸಿದ ಸಂಗತಿಯನ್ನು ಈ ಕೆಳಕಂಡಂತೆ ವರ್ಣಿಸುತ್ತಾ "ಕೆಳದಿ ರಾಜ್ಯವು ಸುಂದರವಾದ, ಸುತ್ತಲೂ ಎದ್ದುನಿಂತ ಮಲೆಗಳಿಂದ ಆವೃತಗೊಂಡು ಈ ದೇಶವು ಇಂಗ್ಲೆಂಡನ್ನು ಹೋಲುತ್ತದೆ" ಎಂದು ವರ್ಣಿಸುತ್ತಾ ಉಲ್ಲೇಖಿಸಿದ್ದಾನೆ.[೫] ಮುಂದುವರಿದು ರಾಯಭಾರಿಗೆ ಆತಿಥ್ಯ ನೀಡಿದುದನ್ನು "On 28th, February, 1637, the king invited us for supper, where out table cloth and dishes were of plantaine leaves sowed together. We had at least 20 severall sorts of Achare (achar), to say, pickled fruits as mangoes, cardamum, Green pepper, etts to relish Meates, as we use cloves, capers, cowcumbers etts. In our Dishes wee had milk both sweet and sower and sirruppes of several sorts, Rice was dressed in sundry manners all spread in divers parcells on the plain leaves, as was the achare. The king himselfe sate by us with a rod in his hand, pointing to this or that he would have us eate, being desirous wee should taste of all, our drinke was such as he himselffe dranck, even perfumed water, we sate on the ground. They neighter eate flesh nor fish nor drinck, strong ; besides our touching any of their implements is odions to them and that vessell, etts held unclean"

(Peter Mundy, Travels, III pp 81, ff) NI pp. 195. ಈ ರೀತಿ ಉಲ್ಲೇಖಿಸಿರುವುದು ಮಧ್ಯಕಾಲೀನ ರಾಜಕೀಯ ಸಾಮಾಜಿಕ ಇತಿಹಾಸದಲ್ಲಿ ಗಮನಾರ್ಹ ವಾದುದು.

ಇಂಗ್ಲೀಷರಿಗೆ ವಾರ್ಷಿಕವಾಗಿ ೧೫೦೦ ರಿಂದ ೨೦೦೦ ಖಂಡಿವರೆಗೆ ಮೆಣಸನ್ನು ಸರಬರಾಜು ಮಾಡಲು ಒಪ್ಪಂದ ವಾಯಿತು. ಪ್ರತಿಯಾಗಿ ಇಂಗ್ಲೀಷರು ತನಗೆ ಇಂಗ್ಲೆಂಡಿನಿಂದ ಅಪೂರ್ವ ವಸ್ತುಗಳನ್ನು ಪರ್ಷಿಯ ಮತ್ತು ಅರೇಬಿಯಗಳಿಂದ ಕುದುರೆಗಳನ್ನು ತಂದುಕೊಡಬೇಕೆಂದು ಭರವಸೆ ಪಡೆದನು. ೧೬೩೭ ಮಾರ್ಚ್ ೩ರಂದು ಇಂಗ್ಲೀಷರು ಭಟ್ಕಳದಲ್ಲಿ ಕೋಠಿಯನ್ನು ಸ್ಥಾಪಿಸಲು ಅನುಮತಿ ದೊರೆತಿದ್ದರಿಂದ ಆಂಟನಿ ವೆನ್‌ವರ್ದಿ ಅದರ ಪ್ರಿನ್ಸಿಪಾಲನಾಗಿ ಆಯ್ಕೆಯಾದನು.[೬]

**ಕೆಳದಿ ಶಿವಪ್ಪನಾಯಕನ ಕಾಲ (೧೬೪೫-೧೬೬೦) :** ಸಿಲೋನಿನಲ್ಲಿ ಡಚ್ಚರಿಂದ ಸೋಲುಂಡ ಪೋರ್ಚುಗೀಸರು ಶಿವಪ್ಪನಾಯಕನ ಸಹಾಯವನ್ನು ಯಾಚಿಸಿದರು. ಈ ಕಾಲದಲ್ಲಿ ಗೊನ್ಸಾಲು ಮರ್ತಿನ್ಸನು ರಾಯಭಾರಿಯಾಗಿದ್ದನು. ಇದು ಫಲಕಾರಿಯಾಗಲಿಲ್ಲ. ದಿ. ೨೦-೮-೧೬೫೩ರಂದು ಶಿವಪ್ಪನು ಪೋರ್ಚುಗೀಸರನ್ನು ಹಿಮ್ಮೆಟ್ಟಿಸಿ ಮಂಗಳೂರು ಕೋಟೆಯನ್ನು ವಶಪಡಿಸಿಕೊಂಡನು. ೧೬೫೪ರ ಜನೇವರಿಯಲ್ಲಿ ಹೊನ್ನಾವರ ಕೋಟೆಯೂ ಕೆಳದಿಗೆ ಅಧೀನವಾಯಿತು. ಲಿಯನಾರ್ಡೋ ಪಾಯೆಸ್‌ನು ಹೇಳಿರುವಂತೆ ಕೆಳದಿ ಶಿವಪ್ಪನಾಯಕನ ರಾಜ್ಯವು ಮಿರ್ಜಾನಿನಿಂದ ಕಾಸರಗೋಡಿನ ವರೆಗೆ ವಿಸ್ತರಿಸಿದ್ದು, ಪೋರ್ಚುಗೀಸರು ಕೆಳದಿ ದೊರೆಯ ತಂಟೆಗೇ ಬರದೇ ಹೆದರಿದರು.

ಇಂಗ್ಲೀಷ್ ಕಾರ್ಖಾನೆ ದಾಖಲೆಗಳಲ್ಲಿ ಇಂತಹ ಅನೇಕ ರೋಚಕ ಮಾಹಿತಿಗಳಿವೆ. ಲೇಖನ ವಿಸ್ತಾರ ಭಯದಿಂದ ಈ ಕೆಳಕಂಡಂತೆ ಅಧ್ಯಯನ ಶೀಲರಿಗಾಗಿ ಹಲವು ಮಾದರಿಗಳನ್ನು ನೀಡಲಾಗಿದೆ.

I. Mallappa malige, we are told by the Dutch sources, purchased from the English, when they came in a ship from Surat to Bhatkal, 30 man mercury,15 d or vermillian, 14 d orsgun powder, 20 iron guns, some broad swords, two anchors and a lot of red cloth[7]. He died in about 1664 AD. "of a feavour got at Goa"[8]

II. Under Sivappa Nayaka Devarsaiah was the ambassador. He was a Brahmin. In 1649 A.D. captain John Durson, an English Commander of a ship was, for some reasons, arrested by Arasappa Nayaka, the Governor of Mirjan, a territory which lay outside the kingdom of Keladi. As soon as Sivappanayaka got the news of his arrest, he sent his ambassador Devarsaiah to free him, declaring that hee would stand engaged for the payment of his debt.[9]

III. His embassy to Goa failed because of the death of Bhadrappa Nayaka[10] Mallappa Maliye died of fever in Goa on july 3, 1664[11]

IV. The dutch threatened war with Keladi and warned him that "they must not deliver the Portugall those castles" Narayana Maliye fearlessly said to them that their delivery was endorsed by his master the Rajah and that hee derst not neglect to performe the same[12] This also shows how dutyful and conscientions. Narayana Maliye was. He lived till the days of Virammaji.[13]

ಇದೇ ರೀತಿಯಲ್ಲಿ ಕಾರವಾರ ಕಾರ್ಖಾನೆ ದಾಖಲೆ (Karwar factory Records) ಗಳಲ್ಲಿಯೂ ಕೆಳದಿ ಮತ್ತು ಇಂಗ್ಲೀಷರ ವಾಣಿಜ್ಯೋದ್ದಿಮೆ ಹಾಗೂ ಹಡಗಿನ ಇತಿಹಾಸಗಳು ಉಪಲಬ್ಧವಿದೆ. ಸರಕಾರದ ವತಿಯಿಂದ ನಾನು ಗೋವಾ ಪರ್ತಗಾಳಿ ಮಠದಲ್ಲಿ ಚಾರಿತ್ರಿಕ ದಾಖಲೆ ಅನ್ವೇಷಕನಾಗಿದ್ದಾಗ ಕಾರವಾರದಲ್ಲಿರುವ ಪುರಾತನ ಗ್ರಂಥ ಭಂಡಾರವನ್ನು ಅವಲೋಕಿಸುವ ಅವಕಾಶ ಲಭಿಸಿತ್ತು. ಅಧ್ಯಯನಶೀಲರು ಈ ಗ್ರಂಥ ಭಂಡಾರದಲ್ಲಿ ಇಂತಹ ವಿಪುಲ ಮಾಹಿತಿಗಳನ್ನು ಪಡೆಯಬಹುದು.

ಸೆವೆರೀನ್ ಸಿಲ್ವಾನ ಉಲ್ಲೇಖದಂತೆ (Severin Silva) ಕೆಳದಿ ರಾಜ್ಯದಲ್ಲಿದ್ದ ಪೋರ್ಚುಗೀಸ್ ಮಿಷನರಿಗಳು ತಮ್ಮ ಎಲ್ಲ ರಿಜಿಷ್ಟರು ಮತ್ತು ಪುಸ್ತಕಗಳೊಂದಿಗೆ ಗೋವೆಗೆ ಹಿಂದಿರುಗಿದರು. ಮಂಗಳೂರು ಕೆಳದಿ ರಾಜ್ಯದಲ್ಲಿ ಪ್ರಮುಖ ಬಂದರಾಗಿತ್ತು. ೧೬೮೦ರಲ್ಲಿ ಥಾಮಸ್ ಡಿ ಕ್ಯಾಸ್ಟ್ರೋ ಎಂಬ ಬಿಷಪನು ಒಂದು ಚರ್ಚನ್ನು ಕಟ್ಟಿಸಿದನು. ಇದರ ಹೆಸರು "ಚರ್ಚ್ ಆಫ್ ಅವರ್ ಲೇಡಿ ಮಿರಾಕಲ್ಸ್ (Church of our Lady of Miracals) ಎಂದು ಮಿಲಾಗ್ರೆಸ್ ಚರ್ಚ್ ಎಂದೇ ಅದು ಪ್ರಸಿದ್ಧವಾಯಿತು. ವಿಕರ್ ಅಪೋಸ್ತಲಿಕ್ ಆದ ಬಿಷಪ್ ಥಾಮಸ್ ಡಿ ಕ್ಯಾಸ್ಟ್ರೋನು ಮಿಲಾಗ್ರೆಸ್ ಚರ್ಚಿನಲ್ಲಿಯೇ ವಾಸವಾಗಿದ್ದನು. ಈತನು ಕೆಳದಿ ರಾಣಿ ಚೆನ್ನಮ್ಮಾಜಿಯಿಂದ ಇವನ್ನು ಇನಾಂ ಆಗಿ ಪಡೆದನೆನ್ನುವುದು ಗಮನಾರ್ಹ ವಾದುದು. ಈಗ ಸಿಮೆಟರಿ ಇರುವ ಪ್ರದೇಶದಲ್ಲಿ ಮೊದಲ ಚರ್ಚು ನಿರ್ಮಿಸಲ್ಪಟ್ಟಿತು.[14] ಈಗಿನ ಮುಖ್ಯಾಧಿಕಾರಿ ಪಾದ್ರಿಗಳು ಇಂತಹ ಚಾರಿತ್ರಿಕ ದಾಖಲೆಗಳಿಂದ ಪ್ರಭಾವಿತರಾಗಿ ಕೆಳದಿಗೆ ಭೇಟಿಯಿತ್ತು ಕೆಳದಿ ರಾಣಿಯ ಸ್ಮರಣಾರ್ಥವಾಗಿ ಪ್ರದರ್ಶಿಸಲು (ಕೆಳದಿ ಮ್ಯೂಜಿಯಂನಲ್ಲಿ) ಮಾದರಿ (Model of Church) ಸಲ್ಲಿಸಲು ಮುಂದಾಗಿದ್ದಾರೆ.[15]

### ಇಂಗ್ಲೀಷ್ ಕಾರ್ಖಾನೆ ದಾಖಲೆಗಳ ಮಾದರಿ (ಪಠ್ಯಭಾಗ)

Taylor's next letter was written at Bhatkal on 8 november. It stated that the london and american had reached that port on 31 October, having passed on their way part of the Portuguese armada returning to Goa. The officer in charge told Taylor that as the Kanarese had not fully complied with the recent treaty, he had been wakening for two vessels belonging to Bhatkal that were expected from Muskat, but they had not appeared. On the English ships reaching the port Valji came on board and informed them that he had been prevented by sickness from doing much business. It was then necessary to await the arrival of the Raja's agent "Narne Molla" who was at Basrur, negotiating with the Protuguese 'which being finished by the delivery of the two forts at sayd place and promise of that at Mangalore ; the agent arrived at bhatkal on 7 november Taylor was afraid that the full quatntity of pepper would not be forthcoming and so he had written to the Karwar factors to provide a further amount 'Narne Molla' had told him that-

Three days since arrived at Bassalore two Dutch ships with a great many men in them and that there designe was not known. Some believe they did intend to seazye on the two forts there and that at Mangalore, before, the Portugal were possessed there of (which they might have done, had they arrived two days sooner) ; which is probable, for, discoursing with said Narne Molla, they told him they must not deliver the Portugall those castles (as hee was then adoeing) unless his master intended to war with the hollender ; but the Braminy told him that there delivery was enordred by his master the Rajah and that hee derst not neglect to performe the same, And to the Portugalls the Dutch discoursed as reasonable

as they use to doe, telling them that the Rajah being now in his minority and not Capable to manage his one [ie., own] affayres they ought not receive said places untill hee came to age and yeares of discresion and then who hee did deliver them to might justly possess them....(page 348-49)

(ಪೂನಾ ವಿಶ್ವವಿದ್ಯಾಲಯದ ಡಾ. ಚಿಟ್ನೀಸ್‌ರವರ ಕೃಪೆ)

ಡಾ. ಚಿಟ್ನೀಸ್‌ರವರು ಮುಂದುವರಿದು ಬ್ರಿಟಿಷ್ ಮ್ಯೂಜಿಯಂನಲ್ಲಿರುವ ಈ ಕೆಳಗಿನ ಚಾರಿತ್ರಿಕ ದಾಖಲೆಗಳ ಮಹತ್ವವನ್ನು–

Foster, English Factories in India (1618-1621)

Thomas Kerridge and Thomas Rastell at Surat to the Company Feormary 9 and 15, 1619 from a copy (50 pp) in British Museum, Egerton Ms. 2122, f. 1 and an abstract in I.O. factory records, Miscellaneous, Vol. i p. 6.)

....Overtures received from certayne / Mallabars who inhabitt a cuntery one the sea coast some 20 lean to the sowards of Goa called Ekaree the prince an Indian Raja that hath beene long in lean with the Portugal....

(Note for Vol. i p. 6 - The quotations are in many cases from the abstract, as the copy of the letter is in a very bad condition).

ಹೀಗೆ ಪಳೆಯುಳಿಕೆ ಬಗ್ಗೆ ವಿಶದೀಕರಿಸಿದ್ದಾರೆ.

**ಉಪಸಂಹಾರ**

ಕೆಳದಿ ಇತಿಹಾಸವು ದಕ್ಷಿಣ ಭಾರತದಲ್ಲಿ ಪ್ರಮುಖವಾದುದೆಂಬುದನ್ನು ಅಲ್ಲಗಳೆಯುವಂತಿಲ್ಲ. ಪಶ್ಚಿಮದ ಕಡಲ ತೀರದ ಕಾರವಾರ ಅಂಕೋಲದಿಂದ ಈಗಿನ ಕೇರಳದಲ್ಲಿರುವ ಬಿಲಿಯಾ ಪಟಮ್ ವರೆಗೂ ಇರುವ ಪ್ರದೇಶಗಳು ಹದಿನಾರರಿಂದ ಹದಿನೆಂಟನೆಂಯ ಶತಮಾನದವರೆಗೂ ಕೆಳದಿಯ ಆಡಳಿತಕ್ಕೊಳಪಟ್ಟಿದ್ದು ಈ ಇತಿಹಾಸದ ಮಹತ್ವವನ್ನು ಹೆಚ್ಚಿಸಿವೆ. ಮಾದರಿಗಾಗಿ ಈ ಕೆಳಗಿನ ಅಪ್ರಕಟಿತ ಕೃತಿಗಳು ಸಂಶೋಧನೆಗಾಗಿ ಎದುರು ನೋಡುತ್ತಿವೆ.

1. Karwar Diocesan Archives.
2. Karwar Factory Records.
3. Karwar Factory Outward letter Book.
4. Mangalore Diocesean Archives.
5. Manuscript of Severine Silva.
6. Panish archives.
7. Secretariat Inward letter Book.
8. Secretariat Outward letter Book.
9. Public Department Dairy, Secret and political Department Dairy.
10. Moncoes do Reino livro das.
11. Regimentos e instrucoes Livro de.

ಇತ್ಯಾದಿ.

ಇಂತಹ ಸಾಲಿನಲ್ಲಿ Fawcet and Foster ರವರ ಇಂಗ್ಲೀಷ್ ಕಾರ್ಖಾನೆ ದಾಖಲೆಗಳು ಕೆಳದಿ ಕಡಲ ತೀರದ ಹಾಗೂ ಸಾಗರಶಾಸ್ತ್ರದ ಹಡಗು ನಿರ್ಮಾಣ (Maline Archaeology) ಇತಿಹಾಸಗಳಿಗೆ ಮಹತ್ವಪೂರ್ಣ ಆಕರಗಳನ್ನು ಒದಗಿಸುತ್ತವೆ.ಕೆಳದಿರಾಜ್ಯದ ಹಡಗಿಗೆ "ಈಶ್ವರಿ ಮಹಾಮಾಯೆ" ಎಂಬ ಹೆಸರಿದ್ದಿತು. ಹಲವು ಸಂಪುಟಕ್ಕಾಗುವಷ್ಟು ಕೆಳದಿ–ಇಂಗ್ಲೀಷ್ ಕಾರ್ಖಾನೆ ಚಾರಿತ್ರಿಕ ದಾಖಲೆಗಳು ಕಂಡುಬಂದಿದ್ದು, ಇವುಗಳನ್ನು ಸಶಾಸ್ತ್ರೀಯವಾಗಿ (Scientific) ಕೆಳದಿ ಸಂಶೋಧನಾಲಯದ ಅಧ್ಯಯನ ಕೈಗೊಂಡು ಕ್ಯಾಟಲಾಗ್ ಸಿದ್ಧಪಡಿಸುವುದು ಅತ್ಯಗತ್ಯ. ಇದು ಮುಂದಿನ ಸಂಶೋಧನಾಕಾಂಕ್ಷಿಗಳಿಗೆ ಉಪಯೋಗವಾಗಬಲ್ಲುದು. ಡೆನ್ಮಾರ್ಕ್ ಸರಕಾರ ಟ್ರಾಂಕಿಬಾರ್‌ನೊಂದಿಗೆ ಸೇರಿ ದಕ್ಷಿಣ ಭಾರತದ ವಾಣಿಜ್ಯೋದ್ಯಮ ಇತಿಹಾಸದ ಮ್ಯೂಜಿಯಂ ಸ್ಥಾಪಿಸಲು ಯೋಜಿಸಿತ್ತು.[೧೬] ಈಚೆಗೆ ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶಕ ಡಾ. ಗೋಪಾಲ್ ಹಾಗೂ ಶ್ರೀ ಸಿದ್ಧನಗೌಡರು ಕೆಳದಿ ಕಾಲದ ನೌಕಾ ಚಿಹ್ನೆಯ ಚಿನ್ನದ ನಾಣ್ಯವನ್ನು ಶೋಧಿಸಿದ್ದು ಇದಕ್ಕೆ ಗಮನಾರ್ಹ ಕೊಡುಗೆಯೆನ್ನಬಹುದು. ಪಿಎಚ್.ಡಿ. ಅಭ್ಯರ್ಥಿಗಳಿಗೆ ಕೆಳದಿ ಸಂಶೋಧನಾಲಯವು ಇಂತಹ ಸಂಶೋಧನೆಗಳಿಗೆ ಪ್ರೀತಿಯಿಂದ ಆಹ್ವಾನಿಸುತ್ತಿದೆ.

(ವಿ.ವಿ. ನನ್ನ ಸಂಶೋಧನೆಗೆ ಸಹಾಯವಿತ್ತ ಚೆನ್ನೈನ ಪುರಾತತ್ವ ವಿದ್ವಾಂಸ ಡಾ. ನರಸಿಂಹಯ್ಯ ಹಾಗೂ ಫೋರ್ಟ್ ಮ್ಯೂಜಿಯಂನ ಡಾ. ಶ್ರೀರಾಮನ್‌ರವರಿಗೆ ವಿದ್ವಾಂಸರ ಪರವಾಗಿ ಕೃತಜ್ಞತೆ ಸಲ್ಲಿಸುವೆನು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಕೆಳದಿ ಮತ್ತು ಡಚ್ಚರು ಕುರಿತು ನಾನು ಈಗಾಗಲೇ ಪ್ರಬಂಧ ಸಾದರಪಡಿಸಿದ್ದು ಪ್ರಕಟವಾಗಬೇಕಾಗಿದೆ.
೨. English Factories in India. 1618-21, ಪು. ೬೧-೭೦.
೩. ಅದೇ., ಪು. ೫೬.
೪. ಪೀಟರ್ ಮುಂಡಿ ; *The Travels of Peter Mundy in Europe and Asia III*, ಪು. ೭೨, ೭೩, ೮೫ ಮತ್ತು E.F.I ಪೂರ್ವೋಕ್ತ ೧೬೩೭-೪೧, ಪು. ೬; ಎಫ್.ಸಿ. ಡಾನ್ವರ್ಸ್, Report, ಪು. ೩೩-೩೪.
೫. ಅದೇ.
೬. E.F.I. 1637-41. ಪು. ೬; ಪೀಟರ್ ಮುಂಡಿ, ಪೂರ್ವೋಕ್ತ III, ಭಾ-೧, ಪು. ೭೪, ೯೨. ಇದೇ ಪೀಟರ್ ಮುಂಡಿಯು ಕೆಳದಿ ಅರಸರ ಭೂದಾಖಲೆ ಸಂಗ್ರಹಗಳನ್ನೊಳಗೊಂಡ ಪತ್ರಾಗಾರ (ಕಡತದ ಜಾವಡಿ)ವನ್ನು ಕಣ್ಣಾರೆ ಕಂಡುದನ್ನು ವರ್ಣಿಸಿರುವುದು ಗಮನಾರ್ಹವಾದುದು. ಇದರ ಮಾದರಿಯೊಂದು ಕೆಳದಿ ಸಂಶೋಧನಾಲಯದಲ್ಲಿದೆ.
೭. *Journal of the Bombay Historical Society*, No. 2, p. 262, (Keladi Polity, F.N. p. 84).
೮. Foster, E.F.I. 1661-64, p. 346, (Ibid).
೯. ಅದೇ 1651-54, pp. 74-76.
೧೦. *JBHS*, ಪೂರ್ವೋಕ್ತ, p. 271.
೧೧. ಅದೇ., 1930, Vol. III, No. 2, 285.
೧೨. Foster : *English Factories* in India, pp. 348-49.
೧೩. Fawcelt : E.F.I. p. 328.
೧೪. ಸೆವೆರೀನ್ ಸಿಲ್ವಾ, *History of Christianity in Canara* I, p. 68.
೧೫. ಅನುಬಂಧದಲ್ಲಿರುವ ಪತ್ರ ನೋಡಿರಿ.
೧೬. *Hindu* daily D. 26-10-1978.

### ಆಕರ ಗ್ರಂಥಗಳು

೧. Dr. K.N. Chitnis., *Keladi Polity*, University of Pune, Karnatak University, Dharwar, 1974.
೨. K.D. Swaminathan,.*The Nayakas of Ikkeri*, Ootakamund, P. Varadachari & Co., 8. Linghi Chetty street, Madras 1957.
೩. ಡಾ. ಜಿ.ಕೆ. ಶಾಸ್ತ್ರಿ., ಕೆಳದಿಯ ಅರಸರು ಹಾಗೂ ಪೋರ್ತುಗೀಜರು, ಗೋವಾ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೪. ಡಾ. ಪಿಯುಸ್ ಫಿಡಲಿಸ್ ಪಿಂಟೋ., ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ, ಸಮನ್ವಯ ಪ್ರಕಾಶನ, ಮಂಗಳೂರು, ೧೯೯೯.
೫. Dr. B.S. Shastry., *Studies in indo portuguese history*, IBH, Bangalore 1981.
೬. *The English Factories in India volumes* I to IV ; Sir Charles Fawcet I.C.S. Rtd, Oxford clarendron press, 1952, Madras.
೭. Mangalore : by T.W. Venu, 1945, Wesley press, Mysore.

ಶ್ರೀಮತಿ ಪದ್ಮಾ ವಿಠಲ್*

# ೧೯ನೇ ಶತಮಾನದ ಕನ್ನಡತಿಯರ ವಸ್ತ್ರವೈಭವ
## (ಹರಪನಹಳ್ಳಿ ಭೀಮವ್ವ ಕಂಡಂತೆ)

ಶತಶತಮಾನಗಳಿಂದಲೂ ಕನ್ನಡಿಗರು ಅಲಂಕಾರ ಪ್ರಿಯರು. ಅದರಲ್ಲೂ ಹೆಂಗಳೆಯರು ವಸ್ತ್ರ-ವಡವೆಗಳ ಆರಾಧಕರು, ನಮ್ಮ ಇತಿಹಾಸ, ಸಾಹಿತ್ಯ, ಜನಪದದ ಪುಟಗಳನ್ನು ತಿರುವುತ್ತಾ ಹೋದಂತೆ ಉಡುಪು, ಒನಪು, ವಯ್ಯಾರಗಳ ಬಗೆಬಗೆಯ ಆಕೃತಿ ವಿನ್ಯಾಸಗಳು ಅಂದಂದಿನ ರೀತಿ ರಿವಾಜುಗಳಿಗೆ ತಕ್ಕಂತೆ ತೆರೆದುಕೊಳ್ಳುತ್ತವೆ. ಸೀರೆಯಂತೂ ಭಾರತೀಯ ಮಹಿಳೆಯರ ಪಾರಂಪರಿಕ ಉಡುಗೆ ಎಂಬ ಹೆಚ್ಚುಗಾರಿಕೆಗೆ ಪಾತ್ರವಾಗಿದ್ದು, ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ವಿಧವಿಧದ ರೀತಿಯಲ್ಲಿ ವನಿತೆಯರ ಸೌಂದರ್ಯ ಸೊಬಗನ್ನು ಬಿಂಬಿಸುವುದರ ಜೊತೆಗೆ ಗೌರವಾನ್ವಿತ ಚೆಲುವನ್ನು ತಂದುಕೊಟ್ಟಿದೆ ಎನ್ನಬಹುದು.

ವಿಜಯನಗರೋತ್ತರ ದಿನಗಳಲ್ಲಿ ಕನ್ನಡತಿಯರ ವಸ್ತ್ರ-ವೈಭೋಗದ ಬಗ್ಗೆ ಒಂದಷ್ಟು ಪರಿಚಿಂತನೆಗೆ ಇಲ್ಲೊಂದು ಪ್ರಯತ್ನ. ಲೇಪಾಕ್ಷಿಯ ಪಾಪನಾಥೇಶ್ವರ ದೇವಾಲಯದ ಮಚ್ಚಿಗೆಯ ಒಳಮೈನ ಭಿತ್ತಿ ಚಿತ್ರಗಳಲ್ಲಿ ಅಂದಿನ ಹೆಂಗಳೆಯರ ಉಡುಪುಗಳ ಬಣ್ಣ, ವಿನ್ಯಾಸ, ವೈವಿಧ್ಯತೆಯನ್ನು ಗುರುತಿಸಬಹುದಾದ ಕಲಾ ವೈಭವ, ಇತಿಹಾಸ ಇಂದೂ ನಮ್ಮ ಕಣ್ಣಮುಂದಿದೆ. ವಿಜಯನಗರೋತ್ತರದಲ್ಲಿ ಕರ್ನಾಟಕದ ಒಳಭಾಗ ಪಾಳೆಗಾರರ ಹಿಡಿತಕ್ಕೊಳಪಟ್ಟು ನೂರಾರು ವರ್ಷಗಳ ಇತಿಹಾಸವು ದಾಖಲಾಗಿದೆ. ಇಂದಿನ ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ ಜಿಲ್ಲೆಗಳಂತೂ ಅಂತಹ ಕಿರು ಪಾಳೆಯ ಪಟ್ಟುಗಳ ಆಡಳಿತದಲ್ಲಿದ್ದು ಸದಾ ಹೊಡೆದಾಟ, ಹೋರಾಟಗಳ ಕೇಂದ್ರಬಿಂದುವೇ ಆಗಿತ್ತು. ವಿಜಯನಗರದ ರಾಜಧಾನಿಯಿಂದ ೨೫-೩೦ ಮೈಲಿ ದೂರದ ನಾರಾಯಣ ದೇವರಕೆರೆಯಲ್ಲಿ ೧೮೨೫ರಲ್ಲಿ ಹುಟ್ಟಿ, ತನ್ನ ಜೀವಿತದ ಬಹು ಭಾಗವನ್ನು ಹರಪನಹಳ್ಳಿಯಲ್ಲಿ ಕಳೆದ ಹರಪನಹಳ್ಳಿ ಭೀಮವ್ವ ೧೯ನೇ ಶತಮಾನ ಕಂಡ ಅಪರೂಪದ ಕವಯಿತ್ರಿ ಅಂಕಿತ ಭೀಮಾಶಂಕ್ರಣ್ಣ, ಸಂಪ್ರದಾಯಸ್ಥ, ಕೆಳಮಧ್ಯಮ ವರ್ಗದ ಕುಟುಂಬದಲ್ಲಿ ನಾಲ್ಕು ಗೋಡೆಗಳ ಮಧ್ಯೆ ಪುರಾಣ, ಹರಿಕಥೆ, ಹಾಡು, ಹಬ್ಬದ ಪರಿಸರದಲ್ಲಿ ಬದುಕು ಸೂಕಿದ ನಿರಕ್ಷರಿ, ಚಿಕ್ಕವಯಸ್ಸಿನ ವಿಧವೆ, ತನ್ನ ಮನಸ್ಸಿನ ಭಾವನೆಗಳಿಗೆ ರಾಮಾಯಣ, ಮಹಾಭಾರತ, ಭಾಗವತದ ಕಥಾನಕಗಳ ಮೂಲಕ ಒಂದು ಕಾಲ್ಪನಿಕ ರೂಪವನ್ನು ಕೊಡುವ ಪ್ರಯತ್ನ ಮಾಡಿದಾಕೆ. ಆಕೆಯ ಅಮೂಲ್ಯ ಸಾಹಿತ್ಯ ಭಂಡಾರ ಅವಲೋಕಿಸಿದಾಗ ಅಂದಿನ ಸಮಾಜದ ಬದುಕು ತನ್ನಂತಾನೆ ಬಿಚ್ಚಿಕೊಂಡು ಇತಿಹಾಸಕ್ಕೊಂದು ಆಕರವೂ ಆದೀತು ಎಂದು ನನ್ನ ಅನಿಸಿಕೆ. ಆಕೆ ನಿರಕ್ಷರಿಯಾದ್ದರಿಂದ ಮನೆಯ ಅಕ್ಷರ ಬಲ್ಲ ಯಾರೋ ಒಬ್ಬರು ಹಾಡುಗಳನ್ನ ಲಿಖಿತರೂಪದಲ್ಲಿ ದಾಖಲಿಸಿದ್ದಾರೆ. ಹಾಗೆಯೇ ಇಂದಿಗೂ ಮಧ್ಯಮ ವರ್ಗದ ಸಂಪ್ರದಾಯಸ್ಥ ಹೆಂಗಳೆಯರ ನಾಲಿಗೆಯ ಮೇಲೆ ಮೌಖಿಕ ಪರಂಪರೆಯ ದ್ಯೋತಕವಾಗಿ ಭೀಮವ್ವನ ಹಾಡುಗಳು ಉಳಿದು ಬಂದಿರುವುದು ಆ ಭಾಗದಲ್ಲಿ ಕಾಣಬಹುದು. ೨೦ನೇ ಶತಮಾನದ ಉತ್ತರಾರ್ಧದಲ್ಲಿ ಅವುಗಳ ಸಂಗ್ರಹ, ದಾಖಲಾತಿ ಹಾಗೂ ಪ್ರಕಟಣೆ ಅಲ್ಲಲ್ಲಿ ಆಗಿದೆ.[೧]

ಕರ್ನಾಟಕ ಪ್ರಾಚೀನ ಕಾಲದಿಂದಲೂ ಕಲೆ, ಸಂಸ್ಕೃತಿಗಳಿಗೆ ಖ್ಯಾತಿವೆತ್ತ ನಾಡು. ಇಲ್ಲಿನ ರೇಷ್ಮೆ, ಹತ್ತಿ, ಮಸ್ಲಿನ್ ಬಟ್ಟೆಗಳು ವಿದೇಶೀಯರನ್ನು ಹೇಗೆ ಆಕರ್ಷಿಸಿದ್ದವೆಂದು ವಿದೇಶೀ ಪ್ರವಾಸಿಗರು ವರ್ಣಿಸಿದ್ದಾರೆ. ವಿಜಯನಗರ ಅರಸರ ಆಳ್ವಿಕೆ ಸಂದರ್ಭ ಅನ್ಯ ದೇಶಗಳಿಂದಲೂ ವಸ್ತ್ರಗಳ ಆಮದು ಆದ ದಾಖಲೆ ಇದೆ. ವಸ್ತ್ರ, ಉಡುಪಿನ ಮೋಹ ಅಂದಿಗಿಂದಿಗೂ ಪಾರಂಪರಿಕವಾಗಿ ಮುಂದುವರೆದಿದ್ದನ್ನು ಕಾಣಬಹುದು. ರಾಷ್ಟ್ರಕೂಟರ, ಚಾಲುಕ್ಯರ ಕಾಲದಿಂದಲೂ ಈ ಪರಂಪರೆ ಸಾಗಿ ಬಂದಿದ್ದು, ಸೋಮೇಶ್ವರನ ಮಾನಸೋಲ್ಲಾಸವಂತೂ ಸೀರೆಯ ಇತಿಹಾಸದ ವೈವಿಧ್ಯತೆಗೊಂದು ಸುಂದರ ದಾಖಲೆಯೇ ಸರಿ. ೧೫ನೆ ಶತಮಾನದಲ್ಲಿ ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ದಾಖಲಿಸಿರುವ[೨] **"ಮಿಸುಪು ಕೆಂಪಿನ ಪದ್ಮರಾಗದ ರಸದ ರೇಖೆಯದಡಿಗಳಲಿಚಿತ್ರಿಸಿಯೆ ಸೆರಗಿಗೆ ಕುಮುದ ಕುಸುಮದ ಬಣ್ಣವನೆರಚಿಸಿ, ಜೊತೆಗೆ-ಬೆಳದಿಂಗಳಿನ ಶೋಧಿಸಿದ ರಸದಲಿ ತೊಳೆದರೆನೆ ರಂಜಿಸುವ ವಿಮಲಾಂಬರವ ನಾಯತ ಮಾಡಿದರು"** ಎನ್ನುತ್ತಾನೆ.

ಹಾಗೆಯೇ ಮಾಯೆಯ ಅಲಂಕಾರ ವರ್ಣನೆಯಲ್ಲಿ 'ಪಟ್ಟಾವಳಿಯ ಸೀರೆ'ಯನ್ನು ಪರಿಚಯಿಸುತ್ತಾನೆ. ೧೭ನೇ

*ಡಾ. ಎನ್.ಪಿ. ವಿಠಲ್, 'ಅಶ್ವಿನಿ', ಹಗರಿಬೊಮ್ಮನಹಳ್ಳಿ.

ಶತಮಾನದಲ್ಲಿ ಭಾರತವನ್ನು ಸಂದರ್ಶಿಸಿದ ಒಬ್ಬ ಅನಾಮಧೇಯ ಪ್ರವಾಸಿ ತನ್ನ ಪತ್ರದಲ್ಲಿ ಹೆಂಗಳೆಯರು ಹನ್ನೆರಡು ಮೊಳ ಉದ್ದ, ಎರಡು ಮೊಳ ಅಗಲದ ವಸ್ತ್ರವನ್ನು ಬಲ ಸೆರಗು ಹಾಕಿ ಉಡುತ್ತಿದ್ದುದ್ದನ್ನು ದಾಖಲಿಸಿದ್ದಾನೆ. ಹಾಗೆ ಅದನ್ನು ಅಂದಿನ ಪದ್ಧತಿಯಂತೆ ತಲೆಯ ಮೇಲೆ ಹೊದೆಯಲೂ ಬಳಸುತ್ತಿರುವುದಾಗಿ ಹೇಳುತ್ತಾನೆ. (ಪ್ರವಾಸಿ ಕಂಡ ಇಂಡಿಯಾ ಭಾಗ-೨, ಪುಟ-೧೧೮).

ಇನ್ನು ಕನಕದಾಸರ ಮೋಹನ ತರಂಗಿಣಿ ಇತಿಹಾಸವನ್ನು ಪೌರಾಣಿಕ ಹಿನ್ನೆಲೆಯಲ್ಲಿ ಬಿಂಬಿಸಿರುವ ಶೃಂಗಾರ ಕಾವ್ಯವೇ ಸರಿ. ಬಾಣಾಸುರನ ಪುತ್ರಿ ಉಷೆಯ ವಿವಾಹ ಸಂದರ್ಭ ವರ್ಣಿಸುವ ದುಕೂಲ "ಬೆಳದಿಂಗಳಿಂದಲೇ ರಚಿತವಾದಂತಹ ನವುರಾದ ವಸ್ತ್ರವೋ ಎಂಬಂತಿತ್ತು" ಎಂದು ಅಂದಿನ ವಸ್ತ್ರ ವಿನ್ಯಾಸಕರ ನೈಪುಣ್ಯತೆಯನ್ನು ದಾಖಲಿಸಿದ್ದಾರೆ.

'ಪೊಂಬರೆಹದ' ಎಂದರೆ ಚಿನ್ನದ ಜರಿಯ ಬಳ್ಳಿ ಹೂಗಳಿಂದಲೇ ಮಾಡಿದ ಶುಭ್ರ ದುಕೂಲ ಪರಿವಿಡಿದು ಉಡಿಸಿದರು-ಎಂಬ ವರ್ಣನೆ ಇರುತ್ತದೆ. ಹಾಗೆಯೇ ಪೇಟೆಯಲ್ಲಿ ಬಟ್ಟೆಯಂಗಡಿಗಳ ಸಾಲು ಮಳಿಗೆಗಳು, ಅಲ್ಲಿನ ಬಗೆಬಗೆಯ ದೀಪ್ತಿಯ ಬಟ್ಟೆ, ಚಿತ್ರಾಂಬರ-ನಿಚಯ, ದೇವಾಂಗವಸ್ತ್ರ, ತುಂಬಿದುಡುಗೆಯ ವರ್ಣನೆಯಿದೆ. ಅಂದಿನ ಕನ್ನಡತಿಯರ ವಸ್ತ್ರ ವೈವಿಧ್ಯತೆಯ ಸೊಬಗು ಮುದ ನೀಡುವಂತೆ ದಾಖಲಾಗಿದೆ.[೩]

ಅಲಂಕಾರಿಕ ಹಸ್ತ ಕಲೆಗಳಲ್ಲಿ ಕುಸುರಿ, ಕಸೂತಿ, ಜರಿ ಕೆಲಸಗಳಲ್ಲಿ ನೈಪುಣ್ಯತೆ ಪಡೆದವರು ಭಾರತೀಯರು. ಬಣ್ಣ, ನೂಲು, ಅವ್ಹಾಗನದ ಬಳಕೆ ಅವರಿಗೆ ಪ್ರಾಚೀನದಿಂದಲೂ ಕರಗತ. ಹತ್ತಿ, ರೇಷ್ಮೆಗಳ ಅತಿ ತೆಳುವಿನಿಂದಲೂ ಗಟ್ಟಿಯಾಗಿ ನೂಲು ಹೊಂದಿಕೊಳ್ಳುವಂತೆ ವಸ್ತ್ರ ತಯಾರಿಕೆ ಪ್ರಾಗ್ಯೈತಿಹಾಸ ಕಾಲದಿಂದಲೂ ನಡೆದುಬಂದ ಕಲೆ. ಮೊಹೆಂಜೋದಾರೋ ಸಂಶೋಧನೆ ಹಾಗೂ ಋಗ್ವೇದದ ಸಂದರ್ಭದಲ್ಲೂ ನೇಯ್ಗೆ ಯಂತ್ರ ಕುರಿತ ದಾಖಲೆ ಸಿಗುತ್ತವೆ. ಈಜಿಪ್ಟಿನ ಮಮ್ಮಿಗಳಿಗೆ ಹೊದಿಸಿದ್ದ ಬಟ್ಟೆಗಳೂ ಭಾರತಿಯವೇ ಆಗಿದ್ದವು ಎನ್ನುತ್ತಾರೆ ಪರಿಣಿತರು.[೪] (ವಾಸುದೇವ ಕಾಣೆಮಾರ್)

ಅತ್ಯಂತ ಸರಳ ಜೀವನಕ್ಕೆ ಹೆಸರಾದವರಾಗಿದ್ದರೂ ಹಿಂದೂಗಳು ಉಡುಗೆ-ತೊಡುಗೆ ಅಲಂಕಾರದ ವಿಶೇಷ ಸಂದರ್ಭಗಳಲ್ಲಿ ಉತ್ತಮವಾದವುಗಳನ್ನೇ ಬಯಸುವವರಾಗಿದ್ದು, ರೇಷ್ಮೆ, ಮಸ್ಲಿನ್‌ನಂತಹ ನವುರಾದ ವಸ್ತ್ರಗಳ ಮೇಲೆ ಚಿನ್ನದ ಜರಿ, ಕುಸುರಿ ಕೆಲಸ, ಫಲಪುಷ್ಪಗಳ ಚಿತ್ರಗಳ ಡಿಸೈನ್‌ಗಳನ್ನು ಕಲಾತ್ಮಕವಾಗಿ ನಿರ್ಮಿಸಿ ಧರಿಸುತ್ತಿದ್ದುದಾಗಿಯೂ ದಾಖಲೆಗಳಿವೆ. ಬಣ್ಣಗಳಲ್ಲಿ ನೀಲಿ ಹಾಗೂ ಸಹಜ ಹಳದಿ ಹೆಚ್ಚಾಗಿರುತ್ತಿದ್ದು, ಪೀತಾಂಬರ ಧಾರಣೆಯಲ್ಲಿ ಅಂಚು, ಗೆರೆ, ಪಟ್ಟಿಗಳು, ಚುಕ್ಕಿಗಳು, ಜರಿಯ ವಿನ್ಯಾಸಗಳು ಸೇರ್ಪಡೆಯಾಗುತ್ತಿದ್ದವು. ಸೊಪ್ಪು, ಕಲ್ಲಿನ ಪುಡಿಗಳು ರಂಗುಗಳಾಗಿ ಬಳಕೆಯಾಗುತ್ತಿದ್ದ ದಾಖಲೆಗಳಿವೆ. ಗುಜರಾತಿನ ಪಟೋಲಾ ವಿನ್ಯಾಸ ಅತ್ಯಂತ ಶ್ರೇಷ್ಠತೆ, ಪ್ರಾಚೀನತೆ ಪಡೆದ ವಸ್ತ್ರವಿನ್ಯಾಸವೂ ಆಗಿತ್ತು. ಚಿಕನ್, ಬನಾರಸ್, ಧರ್ಮಾವರಂ, ಮರ್ಶಿದಾಬಾದ್, ಕಾಂಜೀವರಂ, ಚಂದೇರಿ, ಔರಂಗಾಬಾದ್‌ಗಳು ರೇಷ್ಮೆಗೆ ಪ್ರಸಿದ್ಧವಾದ ವಸ್ತ್ರಗಳಾಗಿದ್ದರೆ, ಮಸ್ಲಿನ್ ಬಟ್ಟೆಗೆ, ಹೈದರಾಬಾದ್, ಜೈಪುರ ಇತ್ಯಾದಿ ಹೆಸರುವಾಸಿ. ಇಂತಹ ಪರಂಪರೆಯನ್ನು ಧರಿಸಿ ಮುಂದುವರೆಸಿಕೊಂಡು ಬಂದವರು ಕರ್ನಾಟಕದ ಹೆಂಗಳೆಯರು. (ವಾಸುದೇವ ಕಾಣೆಮಾರ್‌ರ ಕಲಾಪ್ರಾಕಾರಗಳು).

ಆಂಧ್ರದ ಲೇಪಾಕ್ಷಿಯಲ್ಲಿ ಕಾಣುವ ಸೀರೆಗಳ ವೈಭೋಗ ಕಲಾತ್ಮಕತೆ, ವರ್ಣ ವೈವಿಧ್ಯ ವಿಜಯನಗರದ ಸಂದರ್ಭದ ವಸ್ತ್ರ ವಿನ್ಯಾಸದ ಔನ್ನತ್ಯಕ್ಕೆ ಹಿಡಿದ ಕೈಗನ್ನಡಿ.

ಮುಂದಿನ ದಿನಗಳು ಅನೇಕ ವಿಪ್ಲವ ಯುದ್ಧಾ ನಂತರವೂ ಕಲೆ, ಪರಂಪರೆ, ಸಂಸ್ಕೃತಿಗಳು ಜನಜೀವನದಲ್ಲಿ ಉಳಿದು ಬೆಳೆದ ಬಗೆ ದಾಖಲಾಗಿರುವುದನ್ನು ಹರಪನಹಳ್ಳಿ ಭೀಮವ್ವನ ಕೀರ್ತನೆ ಹಾಡುಗಳಲ್ಲಿ ಗುರುತಿಸಬಹುದಾಗಿದೆ. ಇಂತಹದೊಂದು ವಿವೇಚನೆ, ಈ ಪ್ರಬಂಧದ ಉದ್ದಿಶ್ಯ ಅಂದಿನ ಜನಸಾಮಾನ್ಯರ ಬದುಕು. ಭಾಷೆ, ಪ್ರಾದೇಶಿಕತೆ, ಆಚಾರ-ವಿಚಾರ, ವೈವಿಧ್ಯತೆಗಳನ್ನು ಒಳಗೊಂಡ ಈ ಹೆಣ್ಣುಮಗಳ ಸಾಹಿತ್ಯ ಇತಿಹಾಸದ ಪುಟಗಳಿಗೂ ಕೊಡುಗೆಯಾಗಿದೆ ಎಂಬುದು ನನ್ನ ಅನಿಸಿಕೆ.

ಕವಿ, ಸಾಹಿತಿಗಳು, ಕಥೆಗಳ, ಸಾಹಿತ್ಯದ ಜೀವಾಳಕ್ಕೆ ಪೌರಾಣಿಕ ಘಟನೆಗೆ ಬಳಸಿಕೊಂಡರೂ ಆಯಾ ಸಂದರ್ಭದ ಜನಜೀವನ, ಭಾಷೆ, ವೈಚಾರಿಕತೆ, ಪದ್ಧತಿ, ನಂಬಿಕೆ, ಪ್ರಾದೇಶಿಕತೆಯನ್ನು ಅಳವಡಿಸಿಕೊಂಡೇ ಸಾಹಿತ್ಯ ರಚನೆ ಮಾಡುತ್ತಾನೆ ಎಂಬುದು ನಿರ್ವಿವಾದ ಸಂಗತಿ, ಹಾಗೆಯೇ ಪ್ರಸ್ತುತ ಕವಿಯಿತ್ರಿ ತನ್ನ ಹಾಡುಗಳಲ್ಲಿ ಬಳಸುವ ವೈವಿಧ್ಯಮಯ ವಸ್ತ್ರಗಳ ವರ್ಣನೆ, ಪಾಕ ವೈವಿಧ್ಯ, ನೃತ್ಯ ವೈವಿಧ್ಯ, ಭಾಷೆ, ಆಚರಣೆಗಳು ನಿಜಕ್ಕೂ ಅಮೋಘ. ಅಂದಿನ ಸಮಾಜದ ಅನೇಕ ಮಜಲುಗಳು ಬಿಚ್ಚಿಕೊಂಡು ಅಧ್ಯಯನಕಾರರಿಗೆ ಬದುಕಿನ ಅನೇಕ ಸಂಗತಿಗಳ ಅರಿವು ನೀಡುವಂತಿದೆ.

ಅವ್ವ ಬೆಳಗಿನಿಂದ ರಾತ್ರಿ ಮಲಗುವತನಕ ನಮ್ಮ ದಿನನಿತ್ಯದ ಆಗು ಹೋಗುಗಳಿಗೆ ಹೊಂದುವಂತಹ ಭಗವದ್-ಸ್ಮರಣೆಯ ನೂರಾರು ಹಾಡುಗಳನ್ನು ರಚಿಸಿದ್ದು ೩-೪ ದೊಡ್ಡ ಹಾಡುಗಳನ್ನೂ ರಚಿಸಿದ್ದಾಳೆ. ಅಂತಹ ವಿಶಿಷ್ಟ ಹಾಡುಗಳಲ್ಲೊಂದು 'ಜಲಕ್ರೀಡೆ ಹಾಡು'. ಭಾಗವತದಲ್ಲಿ

ಬರುವ ಒಂದು ಚಿಕ್ಕ ಕಥಾಭಾಗ. ಗೋಪಿಯರು ಯಮುನಾ ನದಿಯಲ್ಲಿ ಮಿಂದು ಕಾತ್ಯಾಯಿನಿ ಪೂಜೆಗೆ ಬರುವ ಸಂದರ್ಭ. ನದಿಯಲ್ಲಿ ಮೀಯುವ, ನೀರಾಟದಲ್ಲಿ ತನ್ಮಯರಾಗಿ ಮೈಮರೆತ ಸಮಯ. ಯಶೋಹಾರಿಯ ಕಂದ ಬಾಲಕೃಷ್ಣ ಇವರ ಸೀರೆಗಳನ್ನು ಅಪಹರಣ ಮಾಡುತ್ತಾನೆ. ಉಟ್ಟ ಬಟ್ಟೆಯಲ್ಲಿ ಬಂದ ಈ ವನಿತೆಯರಿಗೆ ನೀರಾಟ ಮುಗಿದ ಮೇಲೆ ತಮ್ಮ ಸ್ಥಿತಿಯ ಅರಿವಾಗುತ್ತದೆ. ನೀರಿನಿಂದ ಹೊರಗೆ ಬರುವುದು ಹೇಗೆ ? ಮನೆ ಸೇರುವುದು ಹೇಗೆ ? ಎಲ್ಲರ ಪಾಡು ಅದೇ. ಒಬ್ಬೊಬ್ಬರಾಗಿ ತಮ್ಮ ತಮ್ಮ ಸೀರೆಗಳ ವರ್ಣನೆ ಮಾಡ್ತಾ ಅವುಗಳೊಡನೆ ತಮ್ಮ ಭಾವನಾತ್ಮಕ ಅನುಬಂಧ, ಕೊಂಡ ಸಂದರ್ಭ, ಮನೆಯವರು ಏನೆಂದಾರೆಂಬ ಭೀತಿ, ಅತ್ತೆ ಮನೆಯ ಬಾಂಧವ್ಯ ಹೀಗೆ ಒಂದೊಂದಾಗಿ ವರ್ಣಿಸುತ್ತ ಅಂದಿನ ಸಮಾಜದಲ್ಲಿ ಮಹಿಳೆಯ ಬದುಕು ಆಚಾರ-ವಿಚಾರಗಳ ನೈಜ ಚಿತ್ರಣವನ್ನೆ ತೆರೆದಿಡುತ್ತಾರೆ.

ಬೆಡಗು, ಬಿನ್ನಾಣ, ರಸಿಕತೆ-ಪಿಸುಣತೆ, ಹಿರಿಯರೊಟ್ಟಿನ ಸಂಬಂಧ, ಭಯ, ನಂಬುಗೆ, ಮುಗ್ಧತೆ, ಹಾಡಿನಲ್ಲಿ ಹಾಸುಹೊಕ್ಕಾಗಿ ಹಾದುಹೋಗಿವೆ. ವಸ್ತ್ರ-ವಿನ್ಯಾಸ, ನೇಯ್ಗೆಯ ವೈವಿಧ್ಯ, ವರ್ಣ-ವೈವಿಧ್ಯ, ಪ್ರಖ್ಯಾತ ವಸ್ತ್ರ ವಿನ್ಯಾಸದ ಸ್ಥಳಗಳ, ಪರಿಚಯ ನೀಡುವ ೨೦ಕ್ಕೂ ಮಿಕ್ಕಿದ ಸೀರೆಗಳ ವರ್ಣನೆ ಅಚ್ಚರಿ ಮೂಡಿಸುತ್ತದೆ. ಇದೊಂದು ಮೌಖಿಕ ಇತಿಹಾಸದ ಸಹಜ ದಾಖಲೆಯಂತೆ ಕಂಡುಬಂದರೆ ಭಾವನೆಗಳು ಬದುಕನ್ನು ಬಿಂಬಿಸುವಂತಿವೆ.

ಸಾರಾವಳಿ ಸೀರೆ, ರಾಗಾವಳೀ ಸೀರೆ, ದ್ವಾರಮನಿ ಸೀರೆ, ಗೋದಿ ಮಗ್ಗಿ ಸೀರೆಗಳು ಪರಂಪರಾಗತ ಸೀರೆಯನ್ನು ವರ್ಣಿಸಿದರೆ, ಗುಬ್ಬಿಕಣ್ಣಿನ ಸೀರೆ, ಕಾಡಿಗ್ಗಣ್ಣಿನ ಸೀರೆ, ತರಾವರಿ ಚೆಲುವನ್ನು ಬಿಂಬಿಸುವ ಪ್ರಯತ್ನ ಮಾಡಿವೆ.

ಬದನೆ ಬಣ್ಣದ ಸೀರೆ, ಸುರುತಿ-ಸುಗುತಿ ಬಣ್ಣ, ಕರಿಯ ಚಂದರ ಕಾಳಿ, ಕರಿಯ ಮಧುರೆಪತ್ತಲ, ಬಣ್ಣಗಳ ವೈವಿಧ್ಯ (ಅಂದು ಹೇಗಿತ್ತೆಂದು) ಹೇಳುತ್ತಿವೆ.

ಸಾಸ್ವೆ ಚುಕ್ಕಿ ಸೀರೆ, ರೇಷ್ಮೆ ಚುಕ್ಕಿಸೀರೆ, ಕುರುಡು ಹೂವಿನ ಸೀರೆ, ಕವಳೆ ಹೂವಿನ ಸೀರೆ, ಜರಿಮಗ್ಗಿ ಕುಪ್ಪಸ, ಹೆಣ್ಣುಮಕ್ಕಳ ಮ್ಯಾಚಿಂಗ್ ಮೋಹ ಕಡಿಮೆ ಇರಲಿಲ್ಲ ಎಂಬುದರ ಜೊತೆಗೆ ಬಳಕೆಯ ಹೂಗಳು, ವಿನ್ಯಾಸ ವಸ್ತ್ರಗಳಲ್ಲಿ ಉಪಯೋಗಿಸುತ್ತಿರುವುದಕ್ಕೆ ಸಾಕ್ಷಿ ಎಂಬಂತಿದೆ.

ಚಂದ್ರಕಾಳಿ ಸೀರೆ, ಮಧುರೆ ಪತ್ತಲ, ಪೈಠಣಿ ಸೀರೆಗಳು ಹೆಚ್ಚುಗಾರಿಕೆಯ ಸೀರೆಗಳಾದರೂ ಜನಸಾಮಾನ್ಯರಿಗೆ ವಿಶೇಷ ಸಂದರ್ಭದಲ್ಲಿ ಬಳಕೆಯ ಸೀರೆಗಳಾಗಿದ್ದವು ಎಂಬುದನ್ನು ಗಮನಿಸಬಹುದು.

ಹಣವಿಲ್ಲದಿದ್ದರೂ ಬಡ್ಡಿ ಸಾಲ ಮಾಡಿ ಕಡ್ಡಾಯದಿಂದ ತಾನು ತಂದಿದ್ದು, ಅದಕ್ಕೆ ಭಾವ ಅಡ್ಡಿ ಮಾಡಿದ್ದು, 'ಕುದ್ರಿಗೇಡಿ ನೆಗೆಣ್ಣಿ ಕುದಿವ್ವೋಳಲ್ಲೇ' ಎಂಬ ನುಡಿಯಂತೂ ಅಂದಿಗಿಂದಿಗೆ ಸೀರೆ ವ್ಯಾಮೋಹ, ನೆಗೆಣ್ಣಿಯರ ಹೊಟ್ಟೆಕಿಚ್ಚಿನ ಬುದ್ಧಿ ಬದಲಾಗಿಲ್ಲ ಎಂಬುದನ್ನು ಸಾಬೀತುಪಡಿಸುತ್ತದೆ.

"ಕಡ್ಡಿ ಪೈಠಣಿ ಸೀರೆ ಕಡ್ಡಾಯದಿಂದ ನಾ, ಬಡ್ಡಿ ಸಾಲವ ಮಾಡಿ ತಂದಿದ್ದೆನೆ, ಅಡ್ಡಿಮಾಡಿದ ಭಾವ ನಾ ಉಟ್ಟು ಬರುವಾಗ, ಕುದ್ರಿಗೇಡಿ ನೆಗೆಣ್ಣಿ ಕುದಿವ್ವೋಳಲ್ಲೇ" "ಊದಿ ಬಣ್ಣದ ಸೀರೆ ಉದ್ರಿ ಮಾಡಿ ತಂದು ನಾನಿಂದು ಗಳಿಗೆ ಮುರಿದುಟ್ಟಿದ್ದೇನೇ ಅಕ್ಕ" ಇಲ್ಲಿನ ಪ್ರಾದೇಶಿಕ ಭಾಷೆ ಹಾಗೇ ಹೆಣ್ಣಿನ ಸ್ವಭಾವಗಳನ್ನು ಪರಿಚಯಿಸುವಂತಿದೆ.

"ಮಾವಿನ್ಗೆರೆ ಸೀರೆ ಮಾರುದ್ದ ಸೆರಗಿತ್ತು, ಮಾವ ತಂದುಕೊಟ್ಟ ನನಗೆ ನಿನ್ನೆ ನೋಡೆ, ಹ್ಯಾವವಿಲ್ಲದೆ ಮನೆಗ್ಹೋದ್ರೆ ನಮ್ಮಾವ, ಕೋಲು ಕೋಲಲಿ ಹೊಡೆದು ಹೊರಗ್ಹಾಕುವ"- "ಜರತಾರಿ ಸೆರಗಿನ ಮತ್ತಾರಿ ಪತ್ತಲ ಅತ್ಯುಟ್ಟ ಬಣ್ಣವ ಕೊಟ್ಟಿದ್ದಳೇ ನನಗೆ, ಬೆತ್ತಲೇ ನಾ ಮನೆಗ್ಹೋದರೆ, ನಮ್ಮತ್ತೆ ನೆತ್ತಿ ನೆತ್ತಿಗೆ ಹೊಡೆದಟ್ಟುವ್ವೋಳೆ", ಮಾರುದ್ದ ಸೆರಗಿನ ವ್ಯಾಮೋಹ, ಮಾವ ಸೀರೆ ತಂದುಕೊಡುವುದು, ಅತ್ತೆ ಸೊಸೆಗೆ ತಾನುಟ್ಟ ಸುಂದರ ವಸ್ತ್ರಗಳನ್ನು ಪ್ರೀತಿಯಿಂದ ನೀಡುವುದು, ಹಾಗೆ ಕಳಕೊಂಡು, ಬೆತ್ತಲೆ ಮನೆಗ್ಹೋದ್ರೆ ಕೋಲಲ್ಲಿ ನೆತ್ತಿನೆತ್ತಿಗೆ ಹೊಡೆಯುವುದು ಸಾಮಾನ್ಯ ಕ್ರಿಯೆಗಳಾಗಿರಬೇಕು.

"ಅತ್ತೆ-ಮಾವರಿಗಂಜಿ ಮತ್ತೆ ನಾದುನಿಗಂಜಿ" ಎಂಬ ಜನಪದರ ಬದುಕಿಗೆ ೧೯ನೇ ಶತಮಾನದ ಸಾಮಾನ್ಯರ ನಡೆನುಡಿ ತಾಳೆಯಾಗುತ್ತದೆ.

"ಪಚ್ಚದಂತ್ಹೊಳೆವ ಹಸುರು ಪತ್ತಲ ನಂದುಹಚ್ಚನ ಗಿಳಿಗಿಡದ ಸೆರಗಿನಲ್ಲಿ ಅದೆ" ಎನ್ನುತ್ತ ನವರತ್ನಗಳಲ್ಲೊಂದಾದ ಪಚ್ಚೆಯ ಬಣ್ಣ ಹೋಲುವ ಸೆರಗಿನಲ್ಲಿ ಹಸಿರು, ಗಿಳಿ-ಗಿಡದ ವಿನ್ಯಾಸ ಉಳ್ಳ ಸೀರೆ ತನ್ನದಾಗಿತ್ತೆಂದು ಅಲುವೊತ್ತು ಕೊಳ್ಳುವಾಕೆ ಒಬ್ಬಳು.

'ಚಂಗಾವಿ ಪತ್ತಲ' ಜನಪದರ ಮೆಚ್ಚಿನ ಸೀರೆ, ಅದನ್ನ ಕಳಕೊಂಡಾಕಿ ಒಂದೇ ಸಮ ಹಲುವಿದ್ದಾಳೆ. ಬಂಗಾರದ ಗೆರೆ ಸೀರೆ, ಅಂಜೂರ ಹಣ್ಣಿನ ಬಣ್ಣದ ಸೀರೆ ಮತ್ತಿಷ್ಟಿರದ್ದು, 'ರಂಗ್ಯದ್ದಿಸಿದ್ದ ಸೀರೆ' ಅಂದೂ ಪ್ರಚಲಿತವಿದ್ದು ಒಳಗೆಲ್ಲ "ಚಿತ್ರಗಳನ್ನ ನೇಯ್ದ ಸೊಬಗು ಯಾರಿಗೆ ಹೇಳುವ್ವೋಣೆ" ಎಂದು ಪ್ರಲಾಪಿಸುತ್ತಾರೆ.

'ಮದುವೆಯಲ್ಲಿ ತಂದದ್ದು ಮಧುರೆ ಸೀರೆ'-ಅಂದಿನ ವಿಶೇಷ ಸಂಪ್ರದಾಯ ಇದ್ದದ್ದು ಕಂಡುಬಂದರೆ ಚದುರಂಗದ ಮನೆ ಸೀರೆ, ಪದುಮದ್ಹೂವಿನ ಸೀರೆ ವಿಶೇಷ ವಸ್ತ್ರಗಳಾಗಿದ್ದಿರ ಬೇಕು.

"ಪದುಮದ್ದುಪಿನ ಸೀರೆ, ಪತಿವಶವಾಗೋದು, ಅದರಲ್ಲಿತ್ತಾ ಮಾಯ-ಮಂತ್ರಗಳು" ಎನ್ನುವ ಪ್ರಮದೆ ಒಬ್ಬಳು 'ವಶೀಕರಣ ಮಂತ್ರ' ಅಂದಿನ ದಿನದಲ್ಲಿ ವ್ಯಾಪಕವಾಗಿ ಚಾಲ್ತಿಯಲ್ಲಿದ್ದದ್ದನ್ನ ನೆನಪಿಸಿಕೊಡುತ್ತಾಳೆ.

"ಪ್ರಸ್ತಕ್ಕೆ ತಂದ ಉಪ್ಪಾಡಿ ಪತ್ತಲ, ಮೈನೆರೆದಾಗ ಅತ್ತಿಗೆ ಅಕ್ಕರದಿಂದ ಕೊಟ್ಟ ಮುತ್ತಿನಬಟ್ಟಿನ ಸೀರೆ", ನೆನೆದವರು ಕೆಲವರಾದರೆ ಕಸ್ತೂರಿ ಬಣ್ಣದ ಕಮಲದ ಪೇಟ ಅಂಚಿನ ಸೀರೆ ನೆನೆವಾಕೆ ಇನ್ನೊಬ್ಬಳು.

"ಹಾಲ್ಚಿಕ್ಕಿ ಸೀರ್ನಂದು ಗುಲಾಬ್ಚಿಕ್ಕಿ ಗೋಪೀದು, ಹಾವುರಾಣಿಗೆರೆ ಸೀರೆ ದಾರವೇ ಅಕ್ಕ ನೋಡೇ ನನ್ನುಗುರು ಚುಕ್ಕೆ ಸೀರೆ ಮಟಾ ಮಾಯಾಗಿ ಹೋಯಿತಲ್ಲೆ"-ಹೀಗೆ ಸುತ್ತಮುತ್ತಲ ಗುಬ್ಬಿ, ಹಾವುರಾಣಿ ಇತ್ಯಾದಿ ಪ್ರಾಣಿಗಳ ಹೋಲುವ ಸೀರೆಗಳನ್ನ ಕಾಣಬಹುದಾಗಿತ್ತು.

"ಕಿಜಡಿ ಬಣ್ಣದ ಸೀರೆಗೆ ಹಸುತಾಪ್ತಿ ಕುಪ್ಪಸ" ತೊಡುವುದು ರೂಢಿಯಾದರೆ, ಮುಸುಗ್ಹೊದ್ದು ಮರಿಯಾದೆಯಿಂದ ಬರುವ ಪದ್ಧತಿ ಚಾಲ್ತಿಯಲ್ಲಿದ್ದದ್ದು ಗಮನೀಯ-'ಹಸಿರು ಸಿಲಾರಿ ಸೀರೆ' ಕಳಕೊಂಡಾಕೆ 'ರಸಕಸಿ ಭಾಳ ನಮ್ಮನೆ ಒಳಗೆ' ಎಂದು ಪರಿತಪಿಸ್ತಾ ಹೆಂಗಳೆಯರ ಬದುಕು, ಒಳಮನೆಯ ರಾದ್ಧಾಂತಕ್ಕೆ ಕನ್ನಡಿ ಹಿಡಿತಾಳೆ.

'ಜೋಡು ಬುಗುಡಿ ಅಂಚುಳ್ಳ ಲಾಡ್ಯಾಪುರ ಸೀರೆ' ಹೆಂಗಳೆಯರ ಮನಸೆಳೆವ ವಿನ್ಯಾಸ ಹೊಂದಿದ್ದು, ಕರಿಯ ಮಿರಾಣಿ ಸೀರೆ, ಜೋಡ್ ಪಕ್ಕಿ ಸೀರೆ, ಕುಂಕುಮ ಗೆರೆ ಸೀರೆ ಒಂದನ್ನೊಂದು ಮೀರಿಸುವ ಸೊಬಗಿನ ವಸ್ತ್ರಗಳಾಗಿದ್ದವು.

ಪ್ರೀತಿಸಿ ತಮ್ಮಪ್ಪ ಕೊಟ್ಟಿದ್ದ 'ಮೋತಿಚೂರಿನ ಸೀರೆ' ತವರಿನ ನಂಟು, ಅಪ್ಪನ ಅಕ್ಕರೆ, ಪ್ರೀತಿಯಲ್ಲಿ ಅದ್ದಿ ತೆಗೆದಿದ್ದರೆ, ಕಳಕೊಂಡ ನೋವಿಗಿಂತ ತಂದೆಗೆ ಏನಂತ ಉತ್ತರಿಸಲಿ ಎಂಬ ಕಕ್ಕುಲಾತಿ ಮತ್ತೊಬ್ಬಳದು.

"ಉದ್ರಿ ತಂದ ಕೋಲಂಬ್ರ ಪೈಠಣಿ, ಸಾಲ ತಂದ ಕೊರ್ನಾಡ ಸೀರೆ', ಬಗ್ಗೆ ಕುದಿವೋಳ ಮುಂದೆ "ಬಾಲಕೃಷ್ಣನ್ನ ಹೋಲುವ ನೀಲಿ ಪತ್ತಲ"ದಾಕೆ ಗೋಳು ದೇವರೇ ಬಲ್ಲ. ಇಲ್ಲಿ ಕೋಲಿಂದ್ರ ಎಂಬುದು ಉತ್ತರ ಕರ್ನಾಟಕದ ಕೋಲು ಹಾರುವ ಪದ್ಧತಿ.

"ಮೆಂತ್ಯ ಸಾಲಿನ ಸೀರೆ, ಚಿಂತಾರು ಪೈಠಣಿ, ಆಕರ್ಷಕ ಬಣ್ಣ ಉಳ್ಳ ಮಗ್ಗಿ ಸೀರೆ" ಬಗ್ಗೆ ಚೆಲುವೆಯರು ಚಿಂತಿಸಿದರೆ "ತನ್ನ ಕಾಂತ ತಂದುಕೊಟ್ಟ ಕಮಲದ್ದೂಪಿನ ಸೀರೆ" ಕಳಕೊಂಡಾಕಿ ಭ್ರಾಂತರಾದೆವಲ್ಲೋ ಎಂದು ತನ್ನ ಮನಸ್ಥಿತಿಗೆ ಪರಿತಪಿಸ್ತಾಳೆ.

"ವರಹಾದ್ದೂಪಿನ ಸೀರೆ ವಯ್ಯಾರದಿಂದುಟ್ಟ, ಸಿರಿಗೆಗ ಕಾಲಿಂದ ಜಿಮ್ಮುತಲಿ ಒಂದೆ ನೆರೆಮನೆಯವರ್ಕಂಡು ಜಿರಿಜಿ ನೋಡುತ, ಇವಳ್ಯಾವಳ್ ಹೊಯ್ಯಾಲಿ ಎಂಬರಲ್ಲೆ"

'ಬಂಗಾರದಾ ವರಹ ಹೋಲುವ ವಿನ್ಯಾಸ, ಉಟ್ಟಾಕೆಗೆ ಸಹಜ ವಯ್ಯಾರ, ಬೀದಿಯಲ್ಲಿ ಸಿರಿಗೆ ಚಿಮ್ತಾ ನಡೆದಾಕೆಯನ್ನ ನೆರೆಕೆರೆಯವರು ಜಿರಿಜಿರಿ ನೋಡುವ, ಹೊಯ್ಯಾಲಿ ಎಂದು ಮೂದಲಿಸುವ ಸಾಮಾಜಿಕ ಮನೋಭಾವಕ್ಕೆ ಅಂದೂ ಕೊರತೆ ಇರಲಿಲ್ಲ.

"ಇರವಂತಿಗೆ ಹೂವಿನ ಸೀರೆ, ಚಾರ್ಕಾನಿ ಪತ್ತಲ ಸೆರಗೆಲ್ಲ ಜರ್ತಾರಿ ಆದ್ರೆ, ಪುಠಾಣ್ ಪೈಠಾಣಿ ಸೀರೆಗೆ ರತ್ನಮಾಣಿಕ್ಯದಂಚು ನೇಯಲಾಗಿದ್ದು, ಮುಗುದೆಯರ ಮನಸೆಳೆದ ಪೈಠಿಣಿ ಸೀರೆಗಳು ಇಂದಿಗೂ ತಮ್ಮದೇ ವಿಶ್ವಾಸವನ್ನು ಉಳಿಸಿಕೊಂಡು ಹೆಂಗಳೆಯರ ಮೆಚ್ಚಿನ ಸೀರೆಯಾಗಿವೆ. ವಿನ್ಯಾಸವಾಗಿತ್ತೆನ್ನಿಸುತ್ತದೆ. ಇವಕ್ಕೆ 'ಕುತ್ತಣಿ ಕುಪ್ಪಸ' ತೊಟ್ಟರೆ ಹೆಣ್ಣಿಗೆ ಸೊಬಗು. ಹೀಗೆ ಅಲಂಕಾರ ಮಾಡಿಕೊಂಡು ಹೊರಬಂದಾಕೆಗೆ ನೋಡುವವರ ದೃಷ್ಟಿ ತಾಗಿ ಮುಖ ಬಾಡಿಹೋಗ್ತಿತ್ತು ಎಂಬಲ್ಲಿ ಸಮಾಜದ ಆಚಾರ ಪದ್ಧತಿ ತೆರೆದುಕೊಳ್ಳುತ್ತದೆ.

ಇನ್ನು "ಪಂಚ ಪೈಠಣಿ ನಂದು, ಪಗಡೆ ಮನೆ ನಿಂದು, ಅಂಚೆಲ್ಲ ಜರತಾರಿ ಸೆರಗು ನೋಡೆ, ಮಿಂಚುತ್ತ ನಾವುಟ್ಟುಕೊಂಡರೆ ನನಗಂಡ, ಮಂಚ ಇಳಿಯದೆ ಇಲ್ಲೆ ಕೂಡೆಂಬೋರೆ"- ಸೀರೆಗಳ ಸೊಬಗು ಗಂಡಂದಿರನ್ನ ಕಟ್ಟಿ ಹಾಕುವ ಮಟ್ಟದ ಚಲುವನ್ನ ಹೆಂಗಳೆಯರಿಗೆ ತರುತ್ತಿತ್ತು ಎಂಬಂಥ ಗುಟ್ಟನ್ನ ಅವ್ವ ಇಲ್ಲಿ ಬಯಲು ಮಾಡಿದ್ದಾಳೆ. "ಹಂಡ್ಯ ಪೈಠಣಿ ಸೀರೆ, ಗೊಂಡ್ಯ ಮುತ್ತಿನ ಸೆರಗು, ಗಂಡನೊಲಿಸಿಕೊಂಬೋ ಸೀರೆ ಅದು ನೋಡೆ, ಕಂಡಕಂಡಲ್ಲೆ ನಾ ತಿರುಗಿ ಬಂದರೂ, ಒಂದು ಮಾತಾಡುತ್ತಿದ್ದಿಲ್ಲವರು"

ಗಂಡನನ್ನ ಒಲಿಸಿಕೊಳ್ಳುವ ವಿದ್ಯೆ, ಸುಂದರ ವಿನ್ಯಾಸ ಸೀರೆಗಳಿಂದ ಸಾಧ್ಯವಿತ್ತು ಎಂಬುದನ್ನು ಸುಂದರಿಯರು ಅಸ್ತ್ರವಾಗಿಸಿಕೊಂಡಿದ್ದರೇ ? ಒಟ್ಟಾರೆ ಹೇಳ್ತಾಳೆ ಕಂಡ ಕಂಡಲ್ಲಿ ತಿರುಗಿ ಬಂದ್ರೂ ಗಂಡ ಒಂದು ಮಾತೂ ಆಡ್ತಿದ್ದಿಲ್ಲ ಎಂದು.

"ಬುಟ್ಟಿದಾರಿ ಸೀರೆ, ಬುಗುಡಿ ಜರತಾರಂಚು" ಇದರ ಮೇಲೆ ಮೇಲಾದ ಒಡವೆ ಗೆಜ್ಜೆ ಕಟ್ಟಾಣಿ ಸರ ನಿರಿಗೆ ಮೇಲೆ ಓಲಾಡಿಸುವ ಸಂಭ್ರಮ ರೂಢಿಯಲ್ಲಿತ್ತು. 'ಭಾರಿ ಬೆಲೆ ಕೊಟ್ಟು ಬನಾರಸ್ ದ ಸೀರೆ' ಕೊಂಡು ಭಾಳಾಪೇಕ್ಷೆಯಿಂದ ಧರಿಸಿ ಕಳಕೊಂಡಾಕೆಗೆ, ಜೊತೆಗಾತಿ 'ಭಾನು ಪ್ರಕಾಶಂತ್ಹೊಳೆವೋ ಚಂದದ ಸೀರೆಯ ಒಡತಿ.

'ಥಳ ಥಳ ಹೊಳೆವೋದು ತಬಕದ್ದೂಪಿನ ಸೀರೆ'

ಮೊಳಕ್ಕೆ ಒಂದು ನೂರ್ವೊನ್ನು ಕೊಟ್ಟಿದ್ದಳಂತೆ, ಅಂತಹ ಭಾರಿ ಬೆಲೆ ಬಾಳುವ ಸೀರೆ ನೇಯುವ ಕಸುಬುದಾರರು, ವ್ಯಾಪಾರ, ಕೊಳ್ಳುವ ಜನ ಇದ್ದ ಸಮಾಜದ ಕಲ್ಪನೆ ನೀಡುತ್ತದೆ.

'ಝುಗಝುಗ ಹೊಳೆವ ಜಗನ್ಮೋಹಿನಿ ಸೀರೆ' ಸೆರಗಿನ ತುಂಬ ನಗುಮೊಗದ ಗೊಂಬೆಗಳ ಸಾಲು ಎಂಬಲ್ಲಿ ಪ್ರಚಲಿತ ಭಾರೀ ಸೆರಗಿನ ವಿವಿಧ ಚಿತ್ರಗಳ ಸಾಲಿನ ಸೀರೆಗಳು ೧೯ನೇ ಶತಮಾನದ ಸುಂದರ ವಿನ್ಯಾಸಗಳೇ ಆಗಿದ್ದಿರಬೇಕೆಂಬುದನ್ನು ಸಾಬೀತುಪಡಿಸುತ್ತದೆ.

"ಆಕಳ್ ಕರಣಿ ಸೀರೆ ನಾ ಉಟ್ಟು ಬರುವಾಗ, ಗೋಪಾಲಕೃಷ್ಣ ತಾ ಕೊಳಲೂದುತ್ತಾ ಬಂದು, ಯಾಕೆ ಗಯ್ಯಾಳಿ ನಮ್ಮಾಕಳ ಕೊಡು ಎಂದು, ತಾ ಕೈಯ ಹಿಡಿದೆನ್ನ ಜಗ್ಗೋನಲ್ಲೆ" ಎಷ್ಟು ಖಚಿತ ತಯಾರಿಯ ವಸ್ತ್ರ ವಿನ್ಯಾಸಕರಿ ರಬೇಕು ಎಂಬುವುದನ್ನು ತೋರಿದರೆ' ಆಕಳ ಕರಣೀ ಸೀರೆಗೂ ಆಕಳಿಗೂ ತದ್ರೂಪಿ ವಸ್ತ್ರ ನೇಯ್ಗೆ' ಇದ್ದಿರಬೇಕೆನ್ನಿಸುತ್ತದೆ.

ಹೀಗೆ ಖಂಬಾವತಿ, ನಿಂಬಾವಳಿ, ಜಾಂಬೂನಾಜರ, ಪೀತಾಂಬರಗಳ ಸಾಲುಸಾಲು ಒಂದೆಡೆಯಾದರೆ ಹೊಂಬಣ್ಣದ ಹಳದಿ ಪೀತಾಂಬರ ಉಟ್ಟ ಅನೇಕರ ವರ್ಣನೆ ಬರುತ್ತದೆ.

ವಸ್ತ್ರ ಗಣಕಿ ಸೀರೆ, ಸುರ್ತಿ ಬಣ್ಣದ, ರತ್ನದ ಪಪ್ಪುಳಿ ಸೀರೆ, ಕೂಸಂಬಿ ಸೀರೆಗಳ ವಿನ್ಯಾಸ, ನೇಯ್ಗೆ, ಧಾತು, ಒಂದೊಂದನ್ನು ಭೀಮವ್ವ ವಿವರವಾಗಿ ವರ್ಣಿಸುತ್ತಾ ಪೌರಾಣಿಕ ಗೋಪಿಕೆಯರಿಗೆ ೧೯ನೇ ಶತಮಾನದ ವಸ್ತ್ರ ವೈವಿಧ್ಯದ ಮೆರುಗನ್ನು ತೊಡಿಸಿ ಇತಿಹಾಸನವನ್ನ ತೆರೆದಿಟ್ಟಂತೆ ಓದುಗರಿಗೆ ಕಂಡುಬರುತ್ತದೆ. ಹೆಂಗಳೆಯರ, ಮನೆಯ ಹಿರಿಯರ, ದಂಪತಿಗಳ ಮನೋ ಭಾವದ ಸುಂದರ ಪರಿಚಯವನ್ನೆ' ನೀಡ್ತಾ ಪ್ರಚಲಿತ ಸಮಾಜದ ರೂಢಿ, ಬಾಂಧವ್ಯ, ಪದ್ಧತಿ, ಆಚಾರಗಳ ವಿವರವನ್ನೆ ಹಾಡುಗಳ ಮೂಲಕ ಕಟ್ಟಿಕೊಟ್ಟಿರುವುದು ಗಮನಿಸಬೇಕಾದ ಅಂಶ.

ಇನ್ನು ಭಾಷೆಯ ಪ್ರಾದೇಶಿಕತೆ ಬಗ್ಗೆ ನೋಡಿದರೆ, ಇಂದೂ ಬಳ್ಳಾರಿ ಜಿಲ್ಲೆಯ, ಹರಪನಹಳ್ಳಿಯ ಅಚ್ಚ, ಗಟ್ಟಿ ಕನ್ನಡ ಹಸಿಹಸಿಯಾಗಿ ಮೂಡಿ ಬಂದಿದ್ದು ಓದುಗರನ್ನು ಹಿಡಿದಿಡುವ ಸಾಮರ್ಥ್ಯ ಹೊಂದಿದೆ.

ಮೌಖಿಕಾಗಿ ಉಳಿದು ಬರಲು ಭೀಮವ್ವನ ಹಾಡಿನಲ್ಲಿರುವ ಗೇಯತೆ, ಪ್ರಾಸ, ಹಾಗೂ ಸರಳ, ಸುಂದರ, ಭಾಷೆ, ಹೃದಯದಕ್ಕೆ ಹತ್ತಿರ ಹಾಗೂ ಸ್ವಂತವೆನ್ನಿಸುವಷ್ಟು ತನ್ನತನ ಒಳಗೊಂಡು ಕೇಳುಗರಿಗೆ ಆನಂದ ನೀಡುವ ಶೈಲಿ-ಗ್ರಾಮ್ಯ-ಆಡು ಭಾಷೆಗೆ ಉದಾಹರಣೆಯಾಗಿ, 'ಭಾಳ ಸಂಭ್ರಮದಿಂದ', ಬಿಟ್ಹೋಗುವ್ಹೋಣಿ, ರಂಗ್ಯದ್ದಿಸಿದ್ದು, ರಸಕಸಿ, ಗಳಿಗಿ ಮುರಿದು, ಕುದ್ರಿಗೇಸಿ ನೆಗೆಣ್ಣಿ, ವ್ಯಾಖ್ಯಾ, ಅಕ್ಕೊಳೇ, ನಿರ್ಭಾಗ್ಯ, ಭಾಳಾಪೇಕ್ಷೆ, ಮುಸುಗ್ಹೊದ್ದು, ನಾದಾರಿಗ್ಹೇಳಲೆ, ಹೆರಳು, ಹೀಗೆ ಅನೇಕ ಪದಗಳನ್ನು 'ಜಲಕ್ರೀಡೆ ಹಾಡಿನಲ್ಲಿ' ಗುರುತಿಸಬಹುದು.

ಸಂಪ್ರದಾಯದ ಕಟ್ಟಳೆಯೊಳಗಡೆ ಜೀವಿಸುತ್ತಾ ಸಮಾಜದ ಘಟನೆಗಳನ್ನು, ಕುಟುಂಬದ ವಸ್ತುಸ್ಥಿತಿಯನ್ನ, ಸಂಪ್ರದಾಯ, ಆಚರಣೆಗಳನ್ನ ಅವಲೋಕಿಸಿ ಹಾಡುಗಳಲ್ಲಿ ಬಳಸಿರುವ ರೀತಿ ಇತಿಹಾಸಕ್ಕೆ ಅವ್ವನ ಕೊಡುಗೆ. ಅಂದಿನ ಅಡುಗೆ, ವೈವಿಧ್ಯಮಯ ಪಕ್ವಾನ್ನಗಳು, ವಸ್ತ್ರಗಳಂತೆ ಒಡವೆಗಳ ವರ್ಣನೆ ನೋಡಿದಾಗ ೧೯ನೇ ಶತಮಾನದ ಕನ್ನಡಿಗರ ಕಲಾವಂತಿಕೆಗೆ ಸಾಕ್ಷಿಯಾಗಿ ಕಂಡುಬರುತ್ತದೆ.

ಇಲ್ಲಿನ ವಸ್ತ್ರಗಳ ವೈವಿಧ್ಯತೆ ಬಗ್ಗೆ ಇನ್ನಷ್ಟು ಅಧ್ಯಯನ ಅಗತ್ಯ ಎನ್ನಿಸುತ್ತದೆ. ೧೪-೧೫ನೇ ಶತಮಾನದ ವೇಳೆಗೆ ಕರ್ನಾಟಕದಲ್ಲಿ ವೈವಿಧ್ಯಮಯ ವಸ್ತ್ರ ತಯಾರಿ ಇದ್ದ ಬಗ್ಗೆ ಅಂಚು-ಸೆರಗು, ಹಾಸು-ಹೊಕ್ಕಿನ ನೇಯ್ಗೆ, ನಾಜೂಕಿನ ಕಸೂತಿ ಕೆಲಸ, ಬೆಳ್ಳಿ-ಚಿನ್ನ ಬಳಸಿದ ಜರತಾರಿ ಕೆಲಸ, ಮಾಡುವ ನೈಪುಣ್ಯ ಜಾರಿಯಲ್ಲಿದ್ದ ಬಗ್ಗೆ ಇತಿಹಾಸ ಇದೆ (ಕಲಾಪ್ರಕಾರ-ವಸನಧಾರಣ, ಪುಟ ೭೨). ಕಲಾತ್ಮಕ ಶೈಲಿಯಲ್ಲಿ ವಸ್ತ್ರ ಧರಿಸುವ ಕಲೆಯನ್ನ ಕನ್ನಡಿಗರು ಹಿಂದಿನಿಂದಲೂ ರೂಢಿ ಮಾಡಿಕೊಂಡಿದ್ದರು ಎಂಬುದು ವಿದಿತವಾದರೂ ವಿಜಯನಗರೋತ್ತರದಲ್ಲಿ ಕರ್ನಾಟಕದ ಹೆಂಗಳೆಯರು ತಮ್ಮ ವಸ್ತ್ರ ವಿನ್ಯಾಸದಲ್ಲಿ ತೋರುವ ವೈವಿಧ್ಯತೆ ಆಕರ್ಷಣೀಯ. ಚಮತ್ಕಾರಿಕ ಡಿಸೈನುಗಳು, ಬಣ್ಣಗಳು, ಝರಿ ಕೆಲಸ, ಮುತ್ತು, ರತ್ನ, ಹರಳುಗಳನ್ನ ಅಂಚು ಸೆರಗುಗಳಲ್ಲಿ ಕೂರೆದ ವಿನ್ಯಾಸ ಬಹು ಜನಪ್ರಿಯವಾಗಿದ್ದವು ಎಂಬುದನ್ನು ಪ್ರತಿಪಾದಿಸುವ ಅಂಶ ಭೀಮವ್ವನ ಹಾಡುಗಳಿಂದ ಕಾಣಬಹುದು. ಹೀಗೆ ೧೯ನೇ ಶತಮಾನದ ಪ್ರಮದೆಯರ ವಸ್ತ್ರ ವಿನ್ಯಾಸದ ಬಗೆಗೆ ಒಂದು ವಿಶೇಷ ಸಂದರ್ಭ ಒದಗಿಸಿಕೊಡುವ ಪ್ರಯತ್ನ ಭೀಮವ್ವನ ಹಾಡುಗಳು ಮಾಡಿವೆ ಎಂಬುದರತ್ತ ಈ ಪ್ರಬಂಧ ಬೆಳಕು ಚೆಲ್ಲುತ್ತದೆ.

## ಆಧಾರಸೂಚಿ


೧. **ಹರಪನಹಳ್ಳಿ ಭೀಮವ್ವನ ಹಾಡುಗಳು,** ೧೯೮೪, ಕನ್ನಡ ಅಧ್ಯಯನ ಸಂಸ್ಥೆ (ಮೈ.ವಿ.ವಿ.)

೨. **ಚಾಮರಸನ ಪ್ರಭುಲಿಂಗಲೀಲೆ,** ಕನ್ನಡ ಸಾಹಿತ್ಯ ಪರಿಷತ್ತು, ಅಧ್ಯಾಯ.

೩. **ಕನಕದಾಸರ ಮೋಹನ ತರಂಗಿಣಿ,** ಕನ್ನಡ ಸಾಹಿತ್ಯ ಪರಿಷತ್ತು.

೪. ವಾಸುದೇವ ಕಾಣಿಮಾರ್., **ಕಲಾ ಪ್ರಕಾರಗಳು,** (೨೦೦೧, ಪುಟ ೭೨)

೫. ಶ್ರೀಮತಿ ಜೋತ್ಸ್ನಾ ಕಾಮತ್., ಅವರ **ಇತಿಹಾಸ ದರ್ಶನ,** ಸಂಪುಟಗಳಲ್ಲಿನ ಲೇಖನಗಳು.

ಡಾ. ಬಿ. ಲೀಲಾ*

# ಕರ್ನಾಟಕದಲ್ಲಿ ೧೯–೨೦ನೇ ಶತಮಾನದ ಅಧಿಕಾರ ವರ್ಗ : ಒಂದು ಸಮೀಕ್ಷೆ

ಲಾರ್ಡ್ ಮೆಕಾಲೆ, 'ಗೌರ್ನರ್ ಜನರಲ್'ನನ್ನು ಗುರುತಿಸುವುದು ಸ್ವಾಭಾವಿಕ. ಆದರೆ ಒಬ್ಬ ಸಮರ್ಥ ಆಡಳಿತಗಾರನನ್ನು ಗುರುತಿಸುವದು ಹೆಚ್ಚಿನದು[1] ಎಂದಿದ್ದಾರೆ. ಪ್ರಜಾಸತ್ತಾತ್ಮಕವಾದ ಸಮಾಜದಲ್ಲಿ ಪ್ರಜೆಗಳ ಒಳಿತಿಗೋಸ್ಕರ ಆಡಳಿತ ನಡೆಸುವವನು ಮಹತ್ವ ಪಡೆಯುವನು. ಇವನ ಅಧಿಕಾರ ವ್ಯಾಪ್ತಿ ಹೆಚ್ಚಾಗಿರುವದರಿಂದ ಇವನ ಮತ್ತು ಸ್ಥಳೀಯರ ಉತ್ತಮ ಸಂಬಂಧದಿಂದ ಹಲವಾರು ಸಮಸ್ಯೆಗಳಿಗೆ ಪರಿಹಾರ ದೊರಕುವುದು.

ಸ್ವಾತಂತ್ರಕ್ಕೆ ಮೊದಲು ಭಾರತಕ್ಕೆ ಐಸಿಎಸ್ ಪಾಸು ಮಾಡಿ ಬಂದ ಅಧಿಕಾರಿಗಳು ಬ್ರಿಟೀಷರ ಪ್ರತೀಕವೆನಿಸಿ ಅಧಿಕಾರ ಚಲಾಯಿಸಿದ್ದರೂ, ಇವರ ಸಮರ್ಥ ಅಧಿಕಾರವನ್ನು ಸಮಾಜ ಮೆಚ್ಚಿದ್ದುಂಟು. ಆದರೆ ರಾಷ್ಟ್ರೀಯ ಅಂದೋಲನ ಮತ್ತು ಜಾಗ್ರತಿ ಬೆಳೆದಂತೆಲ್ಲಾ ಸಂಶಯ ದೃಷ್ಟಿಯಿಂದ ನೋಡಿತು. ಮತ್ತು ಭ್ರಷ್ಟಾಚಾರದ ಅಧಿಕಾರಿಗಳನ್ನು ಬಯಲಿಗೆಳೆಯಿತು. ಇದರ ಹಲವಾರು ಉದಾಹರಣೆಗಳನ್ನು ತಮ್ಮ ಬರವಣಿಗೆಯಲ್ಲಿ ಹಲವಾರು ಅಧಿಕಾರಿಗಳು ದಾಖಲಿಸಿದ್ದಾರೆ.

ಹಲವು ಐಸಿಎಸ್[2] ಅಧಿಕಾರಿಗಳ ಪುಸ್ತಕಗಳು ಸ್ವಾತಂತ್ರದ ಪೂರ್ವದಲ್ಲಿ ಬಂದವು. ಇವು ತಮ್ಮ ತಾತ್ವಿಕ ನೆಲೆಯನ್ನು ಕಳೆದುಕೊಂಡು ಭಾರತಕ್ಕೆ ಸ್ವರಾಜ್ಯ ಹತ್ತಿರವಾದ ಸಮಯದಲ್ಲಿ ಬರೆದದ್ದು. ಸ್ವಾತಂತ್ರ್ಯದ ನಂತರ ಇಲ್ಲಿನ ಐಎಎಸ್/ಎಂಸಿಎಸ್ ಪರೀಕ್ಷೆ ಮಾಡಿ ಉನ್ನತ ಅಧಿಕಾರ ಹೊಂದಿದ ಕರ್ನಾಟಕದಲ್ಲಿದ್ದ ಅಧಿಕಾರಿಗಳು ತಮ್ಮ ನೆನಪುಗಳನ್ನು, ಡೈರಿ, ಪುಸ್ತಕಗಳಲ್ಲಿ ಬರೆದಿರುವರು. ಹೀಗೆ ಅಧಿಕಾರಿಗಳ ಕಾರ್ಯ ವೈಖರಿಯ ನೈಜಚಿತ್ರ ದೊರೆಯಬೇಕಾದರೆ, ಇವುಗಳೆಲ್ಲದರ ತುಲನಾತ್ಮಕ ಅಭ್ಯಾಸ ಅಗತ್ಯ.

**ಕರ್ನಾಟಕದ ಅಧಿಕಾರ ವರ್ಗ :** ಚಾರಿತ್ರಿಕವಾಗಿ ಕರ್ನಾಟಕದ ಅಧಿಕಾರ ವರ್ಗವನ್ನು ಅಭ್ಯಾಸ ಮಾಡುವಾಗ ನಮಗೆ ಕಾಣಿಸುವದು ಹಳೆಯ ಮೈಸೂರು. ಮಾರ್ಕ್ಸ ಕಬ್ಬನ್ ಮೈಸೂರಿನ ನವೀಕರಣದಲ್ಲಿ ಮುಖ್ಯಸ್ಥ. ಬ್ರಿಟೀಷರ ಕೈವಾಡ ಮೈಸೂರು ಸಂಸ್ಥಾನದಲ್ಲಿ ಇದ್ದಿದ್ದೇ. (೧೮೮೧)ರಲ್ಲಿ ಮೈಸೂರು ಮಹಾರಾಜ ಚಾಮರಾಜೇಂದ್ರ ಒಡೆಯರಿಗೆ ಒಪ್ಪಿಸಿದ ಮೇಲೆ ಹಲವಾರು ಸಂದರ್ಭದಲ್ಲಿ ರೆಸಿಡೆಂಟ್ ಮೈಸೂರಿನ ರಾಜಕೀಯದಲ್ಲಿ ಪ್ರವೇಶಿಸಿದ್ದುಂಟು. ರೆಸಿಡೆಂಟನ ಕೈವಾಡ ಹೇಗೆ ಇರಲಿ, ಮೈಸೂರಿನ ದಿವಾನರು ಸ್ವತಃ ತಮ್ಮ ಸ್ವತಂತ್ರ ನಿರ್ಣಯವನ್ನು ತೆಗೆದುಕೊಂಡು ಕಾರ್ಯ ಮುಂದುವರಿಸಿದ್ದುಂಟು. ದಿವಾನರ ನಿರ್ಣಯ ಅನಿವಾರ್ಯ ವಾಗಿದ್ದು ಬ್ರಿಟೀಷರು ಆ ನಿರ್ಣಯವನ್ನು ಒಪ್ಪುವಂತೆ ಮಾಡಿದೆ.

**ಕೆ.ಆರ್. ಶ್ರೀನಿವಾಸ ಐಯಂಗಾರ್ :** ಮೈಸೂರು ಸರ್ಕಾರದ ಎಂಸಿಎಸ್ ಪರೀಕ್ಷೆ ಮಾಡಿ ಮೊದಲ ಸ್ಥಾನ ಪಡೆದು (೧೮೯೨) ಪ್ರೊಬೇಷನರ್ ಕಮೀಷನರ್ ಆಗಿ ಆಮೇಲೆ ಸರ್ಕಾರದ ಉನ್ನತ ಸ್ಥಾನ ಹೊಂದಿದರು. ಅವರ ಮತ್ತು ಆಗ ದಿವಾನರಾಗಿದ್ದ ಎಂ. ವಿಶ್ವೇಶ್ವರಯ್ಯನವರ ಸಂಬಂಧವನ್ನು ಡೈರಿಯಲ್ಲಿ ಚಿತ್ರಿಸಿರುತ್ತಾರೆ. ದಿವಾನ್ ವಿಶ್ವೇಶ್ವರಯ್ಯ ಯುದ್ಧ ಕಾಲದಲ್ಲಿ ಬ್ರಿಟೀಷರ ಧೋರಣೆಯಂತೆ ಹಣವನ್ನು ಯುದ್ಧಕ್ಕೆ ರವಾನಿಸದೆ ಸ್ಥಳೀಯ ಅಭಿವೃದ್ಧಿಯ ಕೆಲಸಕ್ಕೆ ಉಪಯೋಗಿಸಿದರು. ಸ್ವತಂತ್ರ ನಿರ್ಣಯದಿಂದ ದೇಶದ ಹಿತವನ್ನು ಬಯಸಿದ್ದು ಹಲವೆಡೆ ಇದೆ. ೧೯೨೬ರಲ್ಲಿ ಕೆ.ಆರ್. ಶ್ರೀನಿವಾಸ ಐಯಂಗಾರ್ ನಿವೃತ್ತಿ ಹೊಂದಿದಾಗ ಆಡಳಿತ ಸಂಸ್ಥೆಯ ಸದಸ್ಯರಾಗಿದ್ದರು. ಇವರ ಡೈರಿಯಿಂದ ಇವರ ಅಧಿಕಾರ ವರ್ಗದ ನೈಜಚಿತ್ರಣ ದೊರಕುತ್ತದೆ.[3]

ಕೆ.ಆರ್. ಶ್ರೀನಿವಾಸ ಐಯಂಗಾರ್ ಪ್ರಕಾರ ಅಧಿಕಾರ ವರ್ಗದಲ್ಲಿ ಗೌರವದ ಪ್ರಶ್ನೆ ಅತ್ಯಂತ ಮುಖ್ಯ. ಅದೂ ಅಲ್ಲದೆ ಸುತ್ತಮುತ್ತ ಇದ್ದವರನ್ನು ಸರಿಯಾಗಿ ಇಟ್ಟುಕೊಳ್ಳಬೇಕಾಗಿತ್ತು. ಹೇಳಿಕೆ ಮಾತು ಕೇಳುವಂತೆ ಸಂದರ್ಭ ಹಲವಾರು ಬಾರಿ ಎದುರಾಗಿದ್ದು, ಮನೆತನದ ಗೌರವ ಮುಖ್ಯವಾಗಿತ್ತು. ಶೇಖದಾರ, ಅಮಿಲ್‌ದಾರ, ಅಸಿಸ್ಟೆಂಟ್ ಕಮೀಷನರ್ ಅತ್ಯಂತ ಮುಖ್ಯಸ್ಥಾನ ಪಡೆಯುತ್ತಿದ್ದರು. ಇವರೆಲ್ಲ ಬೆಂಗಳೂರಿನ ಕಛೇರಿಗೆ ಉತ್ತರಿಸಬೇಕಾಗಿತ್ತು. ರಾಜ್ಯಾಂಗದ ಮಹತ್ವ ಬದಲಾವಣೆ ದಿವಾನರು ಹೊಂದಿದ್ದರಿಂದ ಮಹಾರಾಜರು. ದಿವಾನರ ಮಾತನ್ನು ಆಲಿಸುತ್ತಿದ್ದರು. ಹಿರಿಯ ವ್ಯಕ್ತಿಗಳು ಊರಿಗೆ ಬಂದಾಗ ಸಾಕಷ್ಟು ಶ್ರಮವಹಿಸಬೇಕಾಗಿತ್ತು.

* ಫ್ಲಾಟ್ ೪೬, ಶ್ಯಾಮಲಾ, ಮಾಟುಂಗ, ಮುಂಬೈ.

ಶ್ರೀನಿವಾಸ ಐಯಂಗಾರ್ ಕೂಡ ಇದಕ್ಕೆ ಹೊರತಾಗಿರಲಿಲ್ಲ. ಯುವರಾಜರ ಮದುವೆ ಸಂದರ್ಭದಲ್ಲಿ ಚಿಕ್ಕಮಗಳೂರಿನಲ್ಲಿ ಒಂದು ಟೌನ್‌ಹಾಲ್ ಕಟ್ಟಿಸಲು ಆ ಊರಿನ ಜಮೀನ್ ದಾರ್‌ನೊಡನೆ ಪೋಟೋ ತೆಗೆಸಿಕೊಂಡು ಇದರಿಂದ ರೂ. ೨೫೦೦ ಕೂಡಿಸಿದ್ದು, ಟೌನ್‌ಹಾಲ್ ಕಟ್ಟಿಸಿದ ಮೇಲೆ ರಾಜವಂಶಸ್ಥರೊಡನೆ ಇವರ ಪ್ರತಿಷ್ಠೆ ಹೆಚ್ಚಿತು.[೪]

ಮೈಸೂರಿನ ಆರ್ಥಿಕ ಸುಧಾರಣೆ, ನೀರಾವರಿ ಕೆಲಸಗಳು, ಭದ್ರಾವತಿ ಸ್ಟೀಲ್ ಇವೆಲ್ಲದರ ರೂವಾರಿ ದಿವಾನ ಎಂ. ವಿಶ್ವೇಶ್ವರಯ್ಯ ಸದಾ ಅಭಿವೃದ್ಧಿಯನ್ನು ಬಯಸುವರು. ವಿಶ್ವೇಶ್ವರಯ್ಯನವರ ಪ್ರಕಾರ ಒಬ್ಬ ಅಧಿಕಾರಿಗೆ 'ಹಿರಿತನ ಮುಖ್ಯವಲ್ಲ', ಅಧಿಕಾರಿ ತೋರಿಸುವ ಕೆಲಸದಲ್ಲಿನ ಆಸಕ್ತಿ, ಬುದ್ಧಿವಂತಿಕೆ ಮುಖ್ಯ. ಇದು ಹಲವೆಡೆ ಕೆ.ಆರ್. ಶ್ರೀನಿವಾಸ ಐಯಂಗಾರ್ ಮತ್ತು ದಿವಾನರಲ್ಲಿ ಅಸಮಾಧಾನ ಉಂಟು ಮಾಡಿತು. ಹಿರಿಯರಿಗೆ ತಮ್ಮ ಕೆಲಸವನ್ನು ಪದೇ ಪದೇ ಜ್ಞಾಪಿಸಕೂಡದು ಇದು ಐಯಂಗಾರರ ಮತ. ಕಾಲನಿಷ್ಠೆ ದಿವಾನರ ಗೀಳು. ಅದೂ ಅಲ್ಲದೆ ಆಗಾಗ ಆಕಸ್ಮಿಕವಾಗಿ ಭೇಟಿ ಕೊಟ್ಟು ಕೆಲಸದ ಮಾಹಿತಿ ಪಡೆಯುವದು ದಿವಾನರ ವಾಡಿಕೆ. 'ಆಧುನಿಕ ಮೈಸೂರು' ವಿಶ್ವೇಶ್ವರಯ್ಯನವರ ಹಂಬಲ. 'ಕತೃತ್ವ ಶಕ್ತಿ ಮತ್ತು ಹೊಸತನ' ಇವುಗಳಲ್ಲಿ ನಂಬಿಕೆಯಿಟ್ಟ ವಿಶ್ವೇಶ್ವರಯ್ಯ ಮತ್ತು ಹಳೆಯ ಪದ್ಧತಿಗೆ ಹೊಂದಿಕೊಂಡ ಶ್ರೀನಿವಾಸ ಐಯಂಗಾರ್‌ಗೆ ಹೊಂದಾಣಿಕೆ ಇರಲಿಲ್ಲ. ಯುದ್ಧ ಕಾಲದಲ್ಲಿ ಬ್ರಿಟಿಷರಿಗೆ ಮೈಸೂರು ಸರ್ಕಾರ ತನ್ನ ಅಭಿವೃದ್ಧಿಗೋಸ್ಕರ ಹೊಸ ರೈಲ್ವೆ ಲೈನ್ ಹಾಕುವದು (ಮೈಸೂರು–ಅರಸಿಕೆರೆ ಲೈನ್) ಬೇಕಿರಲಿಲ್ಲ. Albian Banerjee (ಮುಂದೆ ಮೈಸೂರು ದೇಶದ ದಿವಾನರಾದರು) ಮದ್ರಾಸಿನಲ್ಲಿ ಐಸಿಎಸ್ ಅಧಿಕಾರಿಗಳಾಗಿದ್ದರು. ಅವರನ್ನು ಮೈಸೂರಿಗೆ ಕರೆತಂದು Executive Council member ಮಾಡಲಾಯ್ತು. Albian Banerjee ಕೂಡ ಮೈಸೂರಿನ ಅಭಿವೃದ್ಧಿಯ ಕೆಲಸದಲ್ಲಿ ಆಸಕ್ತಿ ಇರಲಿಲ್ಲ. ಅಷ್ಟು ಹೊತ್ತಿಗೆ ಬ್ರಾಹ್ಮಣ–ಬ್ರಾಹ್ಮಣೇತರ ಘರ್ಷಣೆ ಕೂಡ ನಡೆದಿತ್ತು.

**Executive Council Member (1923)** ಸದಸ್ಯತ್ವವನ್ನು ಕೆ.ಆರ್. ಶ್ರೀನಿವಾಸ ಐಯಂಗಾರ್ ವಹಿಸಿದರೂ ದಿವಾನ ಪದವಿ ದೊರಕಲಿಲ್ಲ. ಇವರ ಕಾಲದಲ್ಲಿ ಯಾವ ಮುಖ್ಯವಾದ ಕೆಲಸವೂ ನಡೆಯಲಿಲ್ಲ. ಆರಂಭವಾದ ಕೆಲಸಗಳೂ ಕೂಡ ಸ್ಥಗಿತಗೊಂಡವು. ಕೆ.ಆರ್. ಶ್ರೀನಿವಾಸ ಐಯಂಗಾರ್ ತಮ್ಮ ಸ್ವತಂತ್ರ ವ್ಯಕ್ತಿತ್ವ ಅಥವಾ ಮನೋಭಾವವನ್ನಾಗಲಿ ಎಂದೂ ಪ್ರದರ್ಶಿಸಲಿಲ್ಲ. ತಮ್ಮ ಹಳೆಯ ನಂಬಿಕೆಗೆ, ಇಂಬು ಕೊಟ್ಟರು. ಮೈಸೂರು ಮಹಾರಾಜರು ಹಳೆಯ ನಂಬಿಕೆಯನ್ನು ಮೆಚ್ಚಿದ್ದರೂ ಕಾಲ ಬದಲಾದಂತೆ ಹೊಂದಿಕೊಂಡು ಹೋಗುವುದನ್ನು ರೂಪಿಸಿಕೊಂಡರು. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಪ್ರಭಾವದಿಂದ ಮಹಾರಾಜರ ಗದ್ದುಗೆಗೂ ಸಂಚಕಾರ ಸಂಭವಿಸಿತ್ತು. ಪರಿಸ್ಥಿತಿ ಹೀಗಿದ್ದಾಗ ಮಹಾರಾಜರಿಂದ ಆಳುವ ಜನತೆಗೆ ಅಧಿಕಾರ ವರ್ಗಾಯಿಸಿ ನಿಯಂತ್ರಿಸುವದು ಶ್ರೀನಿವಾಸ ಐಯಂಗಾರ್‌ಗೆ ಒಗ್ಗದ ಕೆಲಸ. ಮಹಾರಾಜರು (ಕೃಷ್ಣರಾಜ ಒಡೆಯರ್)[೯] ಗತಿಸಿದಾಗ ಯುವರಾಜರು ಕಾಂಗ್ರೆಸ್ಸಿನೊಡನೆ ಸಂಧಾನಕ್ಕಿಳಿದರು. ಮಿರ್ಜಾರವರು ತಮ್ಮ ದಿವಾನ ಪದವಿಗೆ ರಾಜೀನಾಮೆ ಇತ್ತರು.

ಕೆ.ಆರ್. ಶ್ರೀನಿವಾಸ ಐಯಂಗಾರ್ ತಮ್ಮ ವೃತ್ತಿಜೀವನದಲ್ಲಿ ಪೂರ ಸಂಪ್ರದಾಯವಾದಿ ಆಗಿದ್ದಲ್ಲದೆ, ಅವರಿಗೆ ರಾಜಕೀಯ ಕಾರ್ಯಗತಿ ಅರ್ಥವಾಗಿರಲಿಲ್ಲ. ಅವರು ಅಧಿಕಾರದಲ್ಲಿ ಮುಂದುವರಿಯುವ ಅವಕಾಶ ಜೇಷ್ಠತೆಯಿಂದ ಎಂದೂ ಮತ್ತು ತಮ್ಮ ಅಕಳಂಕ ಗುಣ ಸಾಕೆಂದು ನಂಬಿದ್ದರು. ಕೊನೆಯುವರೆಗೂ ತಮ್ಮ ಅಧಿಕಾರಶಾಹಿ ಮಡಿತನದಿಂದ ಹೊರಬರಲಿಲ್ಲ. ಇನ್ನು **ಮಾಸ್ತಿ ವೆಂಕಟೇಶ ಐಯಂಗಾರ್** ಅಧಿಕಾರತ್ವದ ಹಲವು ತುಣುಕುಗಳನ್ನು ಗಮನಿಸೋಣ.

ಮಾಸ್ತಿ ವೆಂಕಟೇಶ ಐಯಂಗಾರ್ ಮೈಸೂರು ಸಿವಿಲ್ ಪರೀಕ್ಷೆಯನ್ನು ಮೊದಲನೇ ಸ್ಥಾನದಲ್ಲಿ ಪಾಸ್ ಮಾಡಿ ಸರ್ಕಾರದ ಅಸಿಸ್ಟೆಂಟ್ ಪ್ರೊಬೇಷನರ್ ಆಗಿ ಸೇರಿದರು. ಮೈಸೂರು ಸಿವಿಲ್ ಸರ್ವೀಸ್ ಪರೀಕ್ಷೆಯನ್ನು ಕಟ್ಟಿದಾಗ ಅವರಿಗೆ ಬಂದ ಪರೀಕ್ಷಕರು ಪ್ರೊ. ಟೇಟ ಮತ್ತು ಹಂಟರ್. ಮಾಸ್ತಿಯವರ ಬುದ್ಧಿವಂತಿಕೆಯನ್ನು ಮೊದಲಿನಿಂದ ಗಮನಿಸುತ್ತಾ ಬಂದಿದ್ದ ಟೇಟರವರಿಗೆ ತಮ್ಮ ಶಿಷ್ಯನ ವಿಚಾರದಲ್ಲಿ ಹೆಮ್ಮೆ. ೧೯ಗಳರಲ್ಲಿ ಮಾಸ್ತಿಯವರು ಎಂ. ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ ಅವರ ಹತ್ತಿರ ಕೆಲಸ ಮಾಡಿದರು.

ಬಿಳಿಯರು ಸಾಧಾರಣವಾಗಿ ತಾವು ಮಾಡಿದ್ದು ಸರಿ ಮತ್ತು ಸ್ಥಳೀಯರು ತಮ್ಮನ್ನು ಒಪ್ಪಿಕೊಳ್ಳಬೇಕು ಎಂಬ ಮನೋಭಾವದವರು. ಇಂತಹ ಎರಡು ವಾದದಲ್ಲಿ Kent ಸಾಹೇಬರ ವಿರುದ್ಧ ಕೇಸಿನ ತೀರ್ಪು ಹೇಗಾಯಿತೆಂದು ತಮ್ಮ ಆತ್ಮಚರಿತ್ರೆಯಲ್ಲಿ (ಭಾವ Vol. 2, 'ಜಗಳಗಂಟ', p. 113-120) ಪ್ಲಾಂಟರ್ ವಿವಾದದಲ್ಲಿ ವಿವರಿಸಿರುವರು. ಮಾಸ್ತಿ ತಮ್ಮ ನೇರ ನುಡಿಗಳಿಂದ ಹಲವೊಮ್ಮೆ ಅಧಿಕಾರಿಗಳ ಕೋಪಕ್ಕೆ ಒಳಗಾಗಿದ್ದುಂಟು. (ಮಾಸ್ತಿ, ಭಾವ Vol. 2, p. 148). ಒಂದು ಸಾರಿ ಮಾಸ್ತಿಯವರನ್ನು ಅವರು ಮಾಡಿದ ಸರ್ಕಾರಿ ಸಂಚಾರ ಭತ್ಯಕ್ಕಾಗಿ ಪ್ರಶ್ನೋತ್ತರ ಸಂದರ್ಭದಲ್ಲಿ ಮೇಲಧಿಕಾರಿ ಬಿಳಿಯ ಸಾಹೇಬನಿಗೆ ಚಮತ್ಕಾರವಾಗಿ ಉತ್ತರ

ಕೊಟ್ಟಿರುವುದನ್ನು ಕಾಣುತ್ತೇವೆ. "Entry in the Bills will bear examination Sir. No Single Journey has been made with an improper motive. ಸಾಹೇಬರ ಮುಖ ಕೆಂಪಗಾಯಿತು. ಮಾಸ್ತಿಯವರು It make a Journey, When the work needs it, the motive is good. If make without need, I am thinking of the allowance that would be bad. You will not find a single journey made in this way" ಎಂದರು. ಸಾಹೇಬರು ಪುಸ್ತಕವನ್ನು ಮುಚ್ಚಿದರು. ಬೇರೆ ಸಂಗತಿಯನ್ನು ತೆಗೆದುಕೊಂಡು ಐದು ನಿಮಿಷದಲ್ಲಿ ಇನ್ಸ್‌ಪೆಕ್ಷನ್ ಮುಗಿಸಿ ಹೊರಟರು."[೫] ಮೈಸೂರಿನ ರಾಜಕೀಯವನ್ನು ಗಮನಿಸಿದಾಗ Person near to the seat of power and privilege was always preferred. ಹೀಗಾಗಿ ಮಾಸ್ತಿಯವರಿಗಿಂತ ಮೊದಲೇ ಚಿಕ್ಕವರಾಗಿದ್ದ ಬಾಳಾಸಾಹೇಬ ಅರಸ್‌ರವರಿಗೆ ಅಸಿಸ್ಟೆಂಟ್ ಕಮೀಷನರ್ ಪದವಿ ಸಿಕ್ಕಿತು. ಮಾಸ್ತಿಯವರ ಉತ್ತಮ ರೀತಿಯ ತೇರ್ಗಡೆ, ಬುದ್ಧಿವಂತಿಕೆ ಎಲ್ಲಾ ಗೌಣವಾಯಿತು. ಆದರೂ ನಿಷ್ಠೆಯಿಂದ ಸರ್ಕಾರದ ಸೇವೆ ಸಲ್ಲಿಸಿದರು.

ಸಮಕಾಲೀನರಾದ **ಎಂ.ಎ. ಶ್ರೀನಿವಾಸನ್** ತಮ್ಮ ಅನುಭವವನ್ನು ತಮ್ಮ ಆತ್ಮಚರಿತ್ರೆಯಲ್ಲಿ[೬] ಸರಕಾರದೊಡನೆ ತಮ್ಮ ಸಂಬಂಧ ಹಾಗೂ ಬಿಳಿಯರ ಕುತಂತ್ರವನ್ನು ಎತ್ತಿ ಹಿಡಿಯುವ ಹಲವಾರು ಪ್ರಸಂಗಗಳನ್ನು ಎತ್ತಿ ಹಿಡಿದಿದ್ದಾರೆ. ಮಹಾರಾಜಾ ಕಾಲೇಜಿನಲ್ಲಿ ತಮ್ಮ ಅಭ್ಯಾಸ ಮುಗಿಸಿದ ಎಂ.ಎ. ಶ್ರೀನಿವಾಸನ್ ಎಂಸಿಎಸ್ ಪರೀಕ್ಷೆಯಲ್ಲಿ ಪ್ರಥಮವಾಗಿ ಪಾಸ್ ಮಾಡಿ ಸರ್ಕಾರಕ್ಕೆ ಸೇರಿದರು. ಮಾಸ್ತಿಯವರಾಗಲೇ ಅಸಿಸ್ಟೆಂಟ್ ಸೆಕ್ರೆಟರಿ ಆಗಿದ್ದರು. ಅಧಿಕಾರ ವಹಿಸಿಕೊಂಡಾಗ ದಿವಾನರಾಗಿದ್ದವರು ವಿಶ್ವೇಶ್ವರಯ್ಯನವರು. ಎಂ.ಎ. ಶ್ರೀನಿವಾಸನ್ ೧೯೧೮ರಲ್ಲಿ ಡೆಪ್ಯುಟಿ ಕಮೀಷನರ್ ಆಗಿ ಚಿಕ್ಕಮಗಳೂರಿನಲ್ಲಿದ್ದರು. ೧೯೧೮–೨೫ರ ಅವಧಿಯಲ್ಲಿ ಹಲವಾರು ಸರಕಾರಿ ಕ್ಷೇತ್ರದಲ್ಲಿ ಅನುಭವ ಪಡೆದರು. ಸರ್ಕಾರದ ವಿದ್ಯುತ್ ಇಲಾಖೆಯು ಹಲವಾರು ಯೋಜನೆಗಳಿಂದ ಬೊಕ್ಕಸಕ್ಕೆ ಹೆಚ್ಚು ವ್ಯಯವಾಗುತ್ತಿದ್ದು ಸರ್ಕಾರ ಒಂದು ಉಪಸಮಿತಿಯನ್ನು ನೇಮಿಸಿ ಅದಕ್ಕೆ ಮುಖ್ಯಸ್ತರನ್ನಾಗಿ ಎಂ.ಎ. ಶ್ರೀನಿವಾಸರವರನ್ನು, ಇಂಜಿನಿಯರ್ ಇಲಾಖೆಗೆ ಆರ್ಥಿಕ ಸಲಹೆಗಾರರನ್ನಾಗಿ ನೇಮಿಸಿತು. ಎಂ.ಎನ್. ಕೃಷ್ಣರಾವ್ ಆಗ ಅರ್ಥಸಚಿವ. ಮುಖ್ಯ ಇಂಜಿನಿಯರ್ Guy Forbes; ಟೀಟ ಆಗಿದ್ದರು. ಲೈನ್ ಇನ್ಸ್‌ಪೆಕ್ಟರ್ ಆಗಿದ್ದ. Westrap ಎಂಬುವನು General Superident of the generating station. ವಿದ್ಯುತ್ ಇಲಾಖೆಯ ಖರ್ಚು ಮತ್ತು ಬೆಳವಣಿಗೆ ಹೆಚ್ಚಾಗಿತ್ತಾದ್ದರಿಂದ, ಇದರ ಖರ್ಚು ವೆಚ್ಚ ಗಮನಿಸುವ ಒಬ್ಬ ಸಮರ್ಥ ಅಧಿಕಾರಿಯ ಅವಶ್ಯಕತೆಯನ್ನು ಸರ್ಕಾರ ಮನಗಂಡಿದ್ದರಿಂದ ಎಂ.ಎ. ಶ್ರೀನಿವಾಸನ್‌ರವರನ್ನು ಎಲೆಕ್ಟ್ರಿಕಲ್ ಇಂಜಿನಿಯರಿಗೆ ಆರ್ಥಿಕ ಸಲಹೆಗಾರರನ್ನಾಗಿ ನೇಮಿಸಿತು. ಸರ್ಕಾರದ ಖರ್ಚು ವಿಪರೀತವಾದ್ದರಿಂದ ಖರ್ಚಿನ ಮೇಲೆ ನಿಗಾ ಇಡುವ ಸಮರ್ಥ ಅಧಿಕಾರಿ ಸರ್ಕಾರಕ್ಕೆ ಬೇಕಾಗಿತ್ತು. ವಿದ್ಯುತ್ ಲೈನ್ ಹಾಕುವುದಕ್ಕೆ ಒಂದು ಮೈಲಿಗೆ ಎಷ್ಟು ಖರ್ಚಾಗುತ್ತದೆ ಎಂಬ ಅಂದಾಜು, ಖರ್ಚಿಗೂ, ವೆಚ್ಚಕ್ಕೂ ತಾಳೆ ಇರಲಿಲ್ಲ. ಇದು ಸರ್ಕಾರ ವಹಿಸಿದ ಜವಾಬ್ದಾರಿ ಮತ್ತು ಎಂ.ಎ. ಶ್ರೀನಿವಾಸನ್‌ರವರ ವೃತ್ತಿ ಜೀವನದಲ್ಲಿ ಶಿವನಸಮುದ್ರದಲ್ಲಿ ನಡೆದ ಮುಖ್ಯ ಘಟನೆ. ಇದಕ್ಕೆ ಸಾಕಷ್ಟು ಸಮಯವನ್ನು ಎಂ.ಎ. ಶ್ರೀನಿವಾಸನ್ ವ್ಯಯ ಮಾಡಿದರು.

ವಿದ್ಯುತ್ತಿನ ಖರ್ಚು (ಬಿಲ್) ಮತ್ತು ಅದಕ್ಕೆ ಸಹಿ ಮಾಡುವವನು ಇಬ್ಬರೂ ಆಂಗ್ಲರೆ. (ಎ) ಒಬ್ಬ ಲೈನ್ ಇನ್ಸ್‌ಪೆಕ್ಟರ್ ಟೀಟ ಮತ್ತು ಇಂಜಿನಿಯರ್ Guy Forbes ಇನ್ನೊಬ್ಬರು ಪ್ರತಿ ಒಂದು ಹಾಳೆಯಲ್ಲಿ ಕೆಲಸಗಾರರ ಹೆಸರು ಮತ್ತು ಸಂಬಳ ತೆಗೆದುಕೊಂಡಿದ್ದಕ್ಕೆ ಹೆಬ್ಬೆರಳು ಗುರುತು ಇರುತ್ತಿತ್ತು. (Left hand impression). ಆದರೆ ಒಬ್ಬನ ಹೆಬ್ಬೆರಳು ಗುರುತು ಹಲವಾರು ಜಾಗಗಳಲ್ಲಿ ಇದ್ದು ಹಲವು ಹೆಸರು ಹೊಂದಿತ್ತು.

ಲೈನ್ ಇನ್ಸ್‌ಪೆಕ್ಟರ್ ಟೀಟರವರ ಕೈಯನ್ನು ಎಂ.ಎ. ಶ್ರೀನಿವಾಸನ್ ನೋಡುವ ಸಂದರ್ಭ ಶ್ರೀನಿವಾಸನ್‌ಗೆ ಒದಗಿದ್ದು ಅವರು ಒಟ್ಟಿಗೆ ಮಾಡಿದ ಕೊಳ್ಳೇಗಾಲ ಪ್ರವಾಸದಲ್ಲಿ ಶ್ರೀನಿವಾಸ್ ಬೆಂಗಳೂರಿಗೆ ವಾಪಸ್ ಆದ ಮೇಲೆ ಇದರ ಬಗ್ಗೆ ಚಿಂತನೆ ಮೂಡಿದ್ದು, ಸಂಬಳ ವಿತರಣೆ ದಿವಸ ಶಿವನಸಮುದ್ರದಲ್ಲಿ ತಾವು ಇರುವುದಾಗಿ ತಿಳಿಸಿದ್ದರು. ಮಾರನೆಯ ದಿನ ಕೆಲಸಗಾರರ ಹಾಜರಿ ಕೂಗುವ ಸಮಯದಲ್ಲಿ ಶ್ರೀನಿವಾಸನ್ ಹಾಜರಿದ್ದರು. ಬಹಳಷ್ಟು ಕೆಲಸದವರು ಬಂದಿರಲಿಲ್ಲ. ಜಾತ್ರೆಗೆ ಹೋಗಿದ್ದಾರೆಂದು ಬಿಳಿ ಸಾಹೇಬ ತಿಳಿಸಿದ. ಟೀಟ ಒಂದು ಕಡೆ ಕುಳಿತುಕೊಂಡ. ಅವನ ಸಹಾಯಕ ಕೂಲಿಗಾರರ ಚೀಟಿಯನ್ನು (slip) ತೆಗೆದುಕೊಂಡು ಸಂಬಳ ವಿತರಣೆ ಮಾಡತೊಡಗಿದ. ಎಲ್ಲರ slip ನಲ್ಲಿ ಕೇವಲ ೧೦–೧೫ ದಿನದ ಹಾಜರಿ ಮಾತ್ರ ತೋರಿಸಿತ್ತು. ಆದರೆ ಅವರು ಬೆರಳು ಒತ್ತಿ ಸಂಬಳ ಪಡೆದದ್ದು ೨೫ ದಿವಸಕ್ಕೆ. ಶ್ರೀನಿವಾಸನ್ ಸಂಬಳ ವಿತರಣೆಯನ್ನು ನೋಡುವದು ಟೀಟಗೆ ಬೇಕಾಗಿರಲಿಲ್ಲ. ಮರುದಿನ ಅಸಮಾಧಾನ, ಅವಮಾನದಿಂದ ಟೀಟ ಮತ್ತು Samuel ಕೂಲಿಗಳಿಗೆ (ಕಾರ್ಮಿಕರಿಗೆ) ಸಂಬಳ ಹಂಚುತ್ತಿದ್ದಾಗ ಹಟಾತ್ ಎಂ.ಎ. ಶ್ರೀನಿವಾಸನ್ ತಾವು ಇಳಿದುಕೊಂಡಿದ್ದ ಬಂಗ್ಲೆಯಿಂದ ವಾಪಸ್ ಬಂದು ಇವರಿಬ್ಬರನ್ನು ಹಿಡಿದರು.

ಹೀಗೆ ಅನಾಮತ್ ಹಿಡಿದಿದ್ದರಿಂದ ಟೀಟ ಮತ್ತು ಸ್ಯಾಮುಯಲ್ trunk ಸಮೇತ ಸಿಕ್ಕಿಬಿದ್ದರು. ಹಲವು ನೋಟುಗಳು ಸ್ಯಾಮುಯಲ್ (ಸಹಾಯಕ) ಪಾಕೆಟಿನಲ್ಲಿ ದ್ದುದು ವಶಪಡಿಸಿಕೊಂಡು ಟೀಟರಿಂದ ನಡೆದಿದ್ದನ್ನೆಲ್ಲಾ ಬರೆಸಿಕೊಂಡರು. ಮತ್ತು trunk ನಲ್ಲಿ ಮಿಕ್ಕ ಹಣವನ್ನು ಹಾಕಿ ವಶಪಡಿಸಿಕೊಂಡರು. ಟ್ರಂಕ್‌ನಲ್ಲಿದ್ದ ೪೬,೦೦೦ ರೂಪಾಯಿ ಮತ್ತು ಕೂಲಿಗಾರರ ಸುರಳಿ ದಾಖಲೆ ವಶಪಡಿಸಿಕೊಂಡ ಎಂ.ಎ. ಶ್ರೀನಿವಾಸರು ದಿವಾನ್ ಮಿರ್ಜಾ ಇಸ್ಮಾಯಿಲ್‌ಗೆ ವರದಿ ಒಪ್ಪಿಸಿ ಟೀಟ ಒಬ್ಬ Currupt ಅಧಿಕಾರಿ ಅಂತ ಸಾಬೀತು ಮಾಡಿದರು. ಟೀಟ ತನ್ನ ಚಾಲಾಕಿತನದಿಂದ ಹಲವು ನಿವೇಶನ ಹೊಂದಿದ್ದ. ಅವನು ಬಿಳಿಯವ ನಾಗಿದ್ದರಿಂದ ಅವನ ತನಿಖೆ ಮೈಸೂರಿನಲ್ಲಿ ನಡೆಯುವಂತಿಲ್ಲ. ಮದ್ರಾಸಿಗೆ ಹೋಗಬೇಕು. ದಿವಾನ್ ಮಿರ್ಜಾ ಮೇಲಿನ ಅಧಿಕಾರಿಗಳಿಗೆ ಸಮಾಚಾರ ತಿಳಿಸಿದರು ಮತ್ತು ಶ್ರೀನಿವಾಸನ್ ರವರನ್ನು ಮೆಚ್ಚಿದರು.

ಆದರೆ ಟೀಟ ತನ್ನ ತಪ್ಪು ಒಪ್ಪಿಗೆ ಬರೆದರೂ ಪಶ್ಚಾತ್ತಾಪ ಇರಲಿಲ್ಲ. ಮತ್ತು ಶ್ರೀನಿವಾಸನ್ ವಿರುದ್ಧ ಕೇಸು ಮಾಡುವೆನೆಂದು ಹೆದರಿಸಿದ. ಆದರೆ ದಾಖಲೆಗಳೆಲ್ಲಾ ಎಂ.ಆರ್. ಶ್ರೀನಿವಾಸನ್ ಹತ್ತಿರ ಇತ್ತು. ಟೀಟ ತನ್ನ ಕೆಲಸವನ್ನು ಕಳೆದುಕೊಂಡು ವಾಪಸ್ಸಾದ. Forbes ಕೂಡ ತನ್ನ ಆಂಗ್ಲ ಅಧಿಕಾರಿಯನ್ನು ಕಾಪಾಡಲು ಲೆಕ್ಕಪತ್ರದಲ್ಲಿ ತಪ್ಪಿದೆ. ಮರ್ಯಾದೆ ಪ್ರಶ್ನೆ ಎಂದು ಇಂಗ್ಲೆಂಡಿನಿಂದ ಸರ್ಕಾರಕ್ಕೆ ಬರೆದ. ಸರ್ಕಾರದ ಅಧಿಕಾರಿ ಶ್ರೀನಿವಾಸನ ಬರವಣಿಗೆ, ಭಾಷೆ ಬಗ್ಗೆ ಪ್ರಶ್ನಿಸಿದರು. ಶ್ರೀನಿವಾಸನ್‌ಗೆ ಅಭಿನಂದನೆ ಬಿಟ್ಟು ಟೀಕೆ ಬಂತು ! ಅವರು ಅದಕ್ಕೆ ಹೆಚ್ಚು ಗಮನ ಕೊಡಲಿಲ್ಲ. ತಮ್ಮ ಕರ್ತವ್ಯವನ್ನು ಮಾಡಿದ ತೃಪ್ತಿಯಾಗಿತ್ತು.

ಅತ್ಯಂತ ಮೇಧಾವಿಯಾದ ಕೆ.ಆರ್. ಶ್ರೀನಿವಾಸನ್ ಮುಂದೆ ಗ್ವಾಲಿಯರ್ ಸ್ಟೇಟ್ ದಿವಾನರಾಗಿದ್ದೂ ಅಲ್ಲದೆ ಭಾರತದ Constitutional Assembly member ಆಗಿ ಭಾರತದಲ್ಲಿ ಲೀನವಾಗಲು ಗ್ವಾಲಿಯರ್ ಮಹಾರಾಜರನ್ನು ತಂಟೆ ತಕರಾರಿಲ್ಲದೆ ಒಪ್ಪಿಸಿದ ಹೆಗ್ಗಳಿಕೆಗೆ ಪಾತ್ರರಾದರು. ಇದೆಲ್ಲಾ ಅವರ ರಾಜತಂತ್ರ ನಿಪುಣತೆಯಿಂದ ಸಾಧ್ಯವಾಯಿತು. ಹೀಗೆ ಸ್ವಾತಂತ್ರ ಪೂರ್ವದಲ್ಲಿ ಇದ್ದ ಮೈಸೂರು ಅಧಿಕಾರಿಗಳು ತಮ್ಮ ಸಮಕಾಲೀನ ಬ್ರಿಟೀಷ್ ಅಧಿಕಾರಿಗಳು ಎಷ್ಟೇ ಬಲಿಷ್ಠರಾದರೂ ವ್ಯಕ್ತಿ ಸ್ವಾತಂತ್ರವನ್ನು ಬಿಟ್ಟುಕೊಡದೆ ಆಡಳಿತದ ಚೌಕಟ್ಟಿನಲ್ಲಿ ನಿಷ್ಠಾವಂತರಾಗಿದ್ದರು.

ಅತ್ಯಂತ ಸಹಜವಾಗಿ ಚಿತ್ರಿಸಿರುವ "ಕೆಲವು ನೆನಪುಗಳಲ್ಲಿ"[೭] ನವರತ್ನ ರಾಮರಾಯರು ತಮ್ಮ ವೃತ್ತಿ ಜೀವನದ ಹಲವು ಮುಖಗಳನ್ನು ಕೊಟ್ಟಿರುತ್ತಾರೆ.

ದಶಕಗಳ ಕಾಲ ಮೈಸೂರಿನಲ್ಲಿ ನೆಲಸಿದ್ದ ರಾಮರಾಯರು, ಮೈಸೂರು ದೇಶದ ಜನರು ಎಂತವರು, ಅವರು ನಡೆಸಿದ ಜೀವನ, ಪ್ರಭು, ಪ್ರಜೆ, ಸರ್ಕಾರ ಸಮಾಜ ಇವುಗಳ ಬಾಂಧವ್ಯದ ಮುಖಗಳು, ಡೆಪ್ಯುಟಿ ಕಮೀಷನ್ನರ ಸಬ್ ಡಿವಿಜನ್ ಆಫೀಸರ್, ಅಮಲ್ದಾರರ ಸ್ಥಾನಮಾನ, ಗ್ರಾಮ ಸಮಾಜದ ರಚನೆ ಜಮಾಬಂದಿ ಎಂದರೇನು, ಮೈಸೂರು–ಮದ್ರಾಸ್, ಸರ್ಕಾರದ ಹಂತದಲ್ಲಿ ಅಧಿಕಾರಿಗಳ ಮನೋಭಾವ ಇವೆಲ್ಲಾ ಚಿತ್ರಿಸಿದೆ.

ಸುಬೇದಾರ ಜನರ ಪ್ರತಿನಿಧಿ. ಸ್ಕೂಲು ವಿದ್ಯೆ, ನಾಗರೀಕತೆಯಲ್ಲಿ ಮುಂದುವರಿಯದಿದ್ದರೂ ದಕ್ಷತೆ, ಧೈರ್ಯ ಮತ್ತು ಕರ್ತವ್ಯನಿಷ್ಠ.

ಯಡತೊರೆಯಲ್ಲಿ ರಾಮರಾಯರು ಚಾರ್ಜ್ ತೆಗೆದುಕೊಳ್ಳುವಾಗ Sparks ಎಂಬ ಆಂಗ್ಲ ಅಧಿಕಾರಿ ಡೆಪ್ಯುಟಿ ಕಮೀಷನರ್ ಆಗಿದ್ದ. ಪರಂಗಿಯವರು ತಾವು ಉತ್ತಮರು ಮತ್ತು ತಮ್ಮ ಕೆಳಗಿನವರ ಮೇಲೆ ದೌಲತ್ತು ತೋರಿಸಿ, ಉದ್ಧಾರ ಮಾಡುವದಕ್ಕೆ ದೇಶ ತೊರೆದು ಬಂದಿರುವ ಮನೋಭಾವ ಹೊಂದಿದ್ದರು. ಯಡತೊರೆ ತಾಲೂಕಿನ ಛಾರ್ಜನ್ನು ತೆಗೆದುಕೊಂಡ ಒಂದೆರಡು ದಿನದಲ್ಲಿ ಡೆಪ್ಯುಟಿ ಕಮೀಷನರ್ ಪ್ರಥಮ ಭೇಟಿ ರಾಮರಾಯರಿಗೆ ಆಯ್ತು. ಡೆಪ್ಯುಟಿ ಕಮೀಷನರ್ (Spark) ಸ್ಪಾರ್ಕ್ ಮಧ್ಯಾಹ್ನ ಬರಬೇಕಿತ್ತು. ಟ್ರಾವಲರ್ ಬಂಗ್ಲೆಯಲ್ಲಿದ್ದ ಡಿ.ಸಿ. ಬೈಸಿಕಲ್ಲಿನಿಂದಿಳಿದು ಜೋರಿನಲ್ಲಿದ್ದ. ಜೋರು ದರ್ಪದ Sparks ಗೆ ರಾಮರಾಯರು May I know of I am Speaking to the D.C. ಅಂತ ಕೇಳಿದರು. ಡಿ.ಸಿ.ಗೆ ಕೋಪ ಬಂದಿತ್ತು, ತನ್ನನ್ನು ತಾಲೂಕಿನ ಗಡಿಯಲ್ಲಿ ಸ್ವಾಗತಿಸಲಿಲ್ಲವೆಂದು. ಆದರೆ ಬೆಳಿಗ್ಗೆ ಡಿ.ಸಿ. ಬರುವನೆಂದು ರಾಮರಾಯರಿಗೆ ಗೊತ್ತಿರಲಿಲ್ಲ. ಇದನ್ನು ನಂಬಲು ಡಿ.ಸಿ. ತಯಾರಿರಲಿಲ್ಲ. That is a damned lie ಅಂತ ಕೂಗಿದ[೮] ಸ್ವಲ್ಪ ಹೊತ್ತಿನಲ್ಲಿ Sparks ಹೊರಬಂದು, ಎಷ್ಟು ಕಾಲದಿಂದ ಅಮಲ್ದಾರ್ ಆಗಿದ್ದರೆಂದು ರಾಮರಾಯ ರನ್ನು ಕೇಳಿದ ಮತ್ತು ಚಿಕ್ಕ ವಯಸ್ಸಿನಲ್ಲಿ ಅಮಲ್ದಾರ ಪದವಿ ಸಿಕ್ಕಿದೆ ಎಂದಿದ್ದಕ್ಕೆ ರಾಮರಾಯರು "ನೀನು ನನಗೆ ಕ್ಷಮಾಪಣೆ ಯಾಚಿಸಬೇಕು ಮತ್ತು ತಪ್ಪು ಮಾಡದವನನ್ನು ಸುಳ್ಳನೆಂದು ರೇಗಿದ್ದಿ"ಯೆಂದು ತಿಳಿಸಿ, ಕ್ಷಮಾಪಣೆ ಕೇಳುವಂತೆ ತಿಳಿಸಿದರು. ಸಾಹೇಬ ಕ್ಷಮಾಪಣೆ ಕೇಳಿದ್ದೂ ಅಲ್ಲದೆ ಹಸ್ತಲಾಘ ಕೊಟ್ಟನು ಮತ್ತು ರಾಮರಾಯರು ಟೀಟ ಸಾಹೇಬರ ಪರಮ ಶಿಷ್ಯ ಎಂದು ತಿಳಿದಮೇಲೆ ರಾಮರಾಯರನ್ನು ಕಂಡು ಮಾರುಹೋಗಿ ಬೇಗ ಅಸಿಸ್ಟೆಂಟ್ ಕಮೀಷನರ್ ಸಿಗಲಿ ಎಂದು ಆಶೀರ್ವದಿಸಿದ್ದೂ ಅಲ್ಲದೆ, ರಾಮರಾಯರೊಡನೆ ಕೂಡಿ ಕೆಲಸ ಮಾಡುವ ದಿನಗಳನ್ನು ಎದುರು ನೋಡುತ್ತಿರು ವುದಾಗಿ ತಿಳಿಸಿದನು."

ಆ ಕಾಲದಲ್ಲಿ ಅಮಲ್ದಾರನನ್ನು ಸ್ಥಳದ ತಾಯಿಯಂತೆ ಗೌರವಿಸುತ್ತಿದ್ದರು. ಪಾಳೆಗಾರನಾದ ಪಟೇಲ್ ದೇವರಸಗೌಡನನ್ನು ಎದುರಿಸಲು ಜನ ಹೆದರುತ್ತಿದ್ದರು. ಆಗ ರಾಮರಾಯರು ಮಾಡಿದ ವಿಚಾರ ಸರಣಿ ಮತ್ತು ನಿರ್ಣಯ ಶ್ಲಾಘನೀಯ. ಅವರು ತಮ್ಮ ಕರ್ತವ್ಯದಲ್ಲಿ ಹಿಂಜರಿಯದೆ, ನ್ಯಾಯಮಾರ್ಗ ಬಿಡದೆ ಅವನ ಹೆಮ್ಮೆಯನ್ನು ತಗ್ಗಿಸಿದರು. ಕೆಲವು ನೆನಪುಗಳಲ್ಲಿ, ಹಳ್ಳಿಯ ಸಾಮಾಜಿಕ ಜೀವನದ ನೈಜ ಚಿತ್ರ ದೊರಕುತ್ತದೆ. ಗ್ರಾಮದಲ್ಲಿ ನಂಬಿಕೆಗೆ ಅರ್ಹರಾದ ಮುಖಂಡರಿರುತ್ತಿದ್ದರು. ಗ್ರಾಮಸ್ಥರ ವ್ಯವಹಾರ ಮುಖಂಡರಿಂದ ತೀರ್ಮಾನವಾಗುತ್ತಿತ್ತು. ಗ್ರಾಮ, ಗ್ರಾಮದಲ್ಲಿರುವ ವ್ಯತ್ಯಾಸವನ್ನು ಅಮಲ್ದಾರ ತೀರ್ಮಾನಿಸುವನು. ಒಟ್ಟಿನಲ್ಲಿ ಅಮಲ್ದಾರರ ಜವಾಬ್ದಾರಿಯಲ್ಲಿ ಖಾಸಗಿ, ವೈಯಕ್ತಿಕ ಸಮಸ್ಯೆ, ಗ್ರಾಮದ ಸಮಸ್ಯೆಗೆ ಪರಿಹಾರ ದೊರಕುತ್ತಿತ್ತು. ಉನ್ನತ ಅಂತಸ್ತುಗಳ ವಾತ್ಸಲ್ಯ, ವಿಡಂಬನೆಗಳನ್ನು ಕೂಡ ಇಲ್ಲಿ ನೋಡಬಹುದು. ಅತಿಥಿಗಳ ಜವಾಬ್ದಾರಿ ಗ್ರಾಮಸ್ತರ ಮೇಲಿತ್ತು. ಆಗಿನ ಕಾಲದಲ್ಲಿ ಆಂಗ್ಲ ಪ್ರಭುಗಳು ತಾವು ಉತ್ತಮರೆಂದು ಅಭಿಪ್ರಾಯ ಹೊಂದಿದ್ದಲ್ಲದೆ ಪ್ರಭು ವರ್ಗದವರಿಗೂ ಈ ಮಿಥ್ಯ ಆವರಣದ ಭ್ರಮೆ ಮುಸುಕಿತ್ತೆಂದು ನವರತ್ನ ರಾಮರಾಯರ ನಂಬಿಕೆ.

ಮತ್ತೊಂದು ಅನುಭವಿಕ ಈ ಪುಸ್ತಕವೆಂದರೆ Cox Edmund Bart ಬರೆದಿರುವ My Thirty years in India[9] ಅಧಿಕಾರಿ ವರ್ಗದ ಹಲವು ಮುಖಗಳ ಪರಿಚಯ ಇದರಲ್ಲಿ ಸಿಗುತ್ತದೆ. ಮುಖ್ಯವಾಗಿ ಇದರಲ್ಲಿ ಧಾರವಾಡ, ಬಿಜಾಪುರದ ಬಗ್ಗೆ ಹೆಚ್ಚಿನ ಮಾಹಿತಿ/ಅನುಭವ ಇದೆ.

Cox Edmund Bart ಇಂಗ್ಲೆಂಡಿನಿಂದ, ಇಂಡಿಯಾದಲ್ಲಿ ಕಾಫಿ ಪ್ಲಾಂಟೇಷನ್ ಕೆಲಸ ಮಾಡಲು ಬಂದರು. ಅವರ ಹಿರಿಯಣ್ಣ ಆಗಲೇ ಇಲ್ಲಿ ಪೋಲಿಸ್ ಕೆಲಸದಲ್ಲಿದ್ದ ತನ್ನ ಜೀವನಕ್ಕೆಂದು ಕಾಕ್ಸ್ ಮೊದಲು ಸೆಂಟ್ ಪಾಲ್ ಸ್ಕೂಲಿನಲ್ಲಿ ಕೆಲಸ ಮಾಡಿದ ಕೊಲ್ಹಾಪುರದ ರಾಜಮನೆತನದವರಿಗೆ ಕಾಕ್ಸ್ ಕೆಲಸ ಬಿಟ್ಟು ಪೊಲೀಸ್ ಪ್ರೊಬೇಷನರ್ ಆಗಿ ಬೆಳಗಾವಿಯಲ್ಲಿ ಮತ್ತು (ಸದರ್ನ್ ಮರಾಠಾ ರೈಲ್ವೆ) ಬಿಜಾಪುರದಲ್ಲಿ ಬಿಡಾರ ಮಾಡಿದರು. ಬಿಜಾಪುರದಲ್ಲಿ ರೈಲ್ವೆ ಲೈನ್ ಹಾಕುವಾಗ ಅಲ್ಲಿಯ ಕೆಲಸಗಾರರ ಮೇಲುಸ್ತುವಾರಿಯನ್ನು ನೋಡುತ್ತಿದ್ದರು. ೧೮೮೫ ಅಹಮದ್‌ನಗರ ಡಿಎಸ್‌ಪಿ ಆದರು. ಅಲ್ಲಿಯವರೆಗೆ ಪೊಲೀಸ್ ಖಾತೆಗೆ Manual ಇರಲಿಲ್ಲ. ೧೮೮೫ರಲ್ಲಿ Police Manual ರಚಿಸಿದರು. ಅನೇಕ ಕಡೆಗಳಲ್ಲಿ ಸಮರ್ಥವಾಗಿ ಕಾರ್ಯವಹಿಸಿದರು. ೧೮೯೬ರಲ್ಲಿ ಧಾರವಾಡದ ಡಿ.ಎಸ್.ಪಿ. ಆಗಿ ಅವರು ಕೈಗೊಂಡ ಪ್ಲೇಗ್ ನಿಯಂತ್ರಣ ಕ್ರಮ ಶ್ಲಾಘನೀಯ ಧಾರವಾಡದ ತುಂಬಾ ದರೋಡೆಕಾರರ ಕೈವಾಡವಿತ್ತು ಮತ್ತು ಧಾರವಾಡ ಜಿಲ್ಲಾ ಮೂರವ ಜನಗ ದೋಚಾಯುತಿದ್ದರು. ಸರ್ಕಾರ ಪ್ಲೇಗು ನಿಯಂತ್ರಣದಲ್ಲಿ ಆಸಕ್ತಿ ವಹಿಸಿ ಪೆನಷನ್ ದಾರರ ಸಹಾಯ ಬಯಸಿತ್ತು. ಹೆಚ್ಚಿನ ಜವಾಬ್ದಾರಿ, ದಕಾಯಿತರನ್ನು, ದರೋಡೆಕಾರರನ್ನು ಹಿಡಿಯುವದು, ನಿಯಂತ್ರಿಸಿ ತಹಬಂದಿಗೆ ತಂದು ಧಾರವಾಡಕ್ಕೆ ಮತ್ತು ಜನಸಾಮಾನ್ಯಕ್ಕೆ ನೆಮ್ಮದಿಯನ್ನು ತಂದ ಹೆಗ್ಗಳಿಕೆಗೆ ಪಾತ್ರರಾದರು. ಇವರ ಪೋಲಿಸ್ ಅನುಭವದ ಚಿತ್ರ ಇಲ್ಲಿ ದೊರಕುತ್ತದೆ.

ಇನ್ನು ಕೊನೆಯದಾಗಿ ಮೈಸೂರಿನಲ್ಲಿ ಹಲವಾರು ವರ್ಷ ಇದ್ದು ತಮ್ಮ ಉತ್ತಮ ಆಡಳಿತದಿಂದ ಜನರ ಮನಗೆದ್ದ ಮತ್ತು ಮೈಸೂರು ಮಹಾರಾಜರ ಸೆಕ್ರಟರಿಯಾಗಿದ್ದ Evan Maconochie[10] ಸಿವಿಲ್ ಸರ್ವಿಸಿನ ಹಲವು ಅನುಭವ ನೀಡಿರುವರು.

Evan Maconochie ರವರ ಚಿಕ್ಕಪ್ಪ ಬಂಗಾಳದ ಸರ್ವಿಸ್‌ನಲ್ಲಿದ್ದರಿಂದ ಇಂಗ್ಲೆಂಡಿನಲ್ಲಿ ಐಸಿಎಸ್ ಪಾಸು ಮಾಡಿದ ಮೆಕನೋಕಿ ಅವರಿಗೆ ಭಾರತಕ್ಕೆ ಬರಲು ಉತ್ಸಾಹವಿತ್ತು. ೧೮೯೦ರಲ್ಲಿ ಅಧಿಕಾರ ವಹಿಸಿಕೊಂಡಿದ್ದು ಸೂರತ್‌ನಲ್ಲಿ ಅಧಿಕಾರದ ಹಲವು ವಿಭಾಗಗಳಲ್ಲಿ ತರಪೇತು ಹೊಂದಿದ ಮಾಕನೋಕಿ ಮೈಸೂರು ಮಹಾರಾಜರ ಪ್ರೈವೇಟ್ ಸೆಕ್ರೆಟರಿಯಾಗಿ ನೇಮಕ ಹೊಂದಿದ್ದು ೧೯೦೨ರಲ್ಲಿ. ದಿವಾನರು, ಮೂರು ಕೌನ್ಸಿಲ್ ಮೆಂಬರ್ ಜೊತೆಗೆ ಕೆಲಸವನ್ನು ಆರಂಭಿಸಿದರು. ನಾಲ್ವಡಿ ಕೃಷ್ಣರಾಜ ಒಡೆಯರ್ ಮಹಾರಾಜರ* ಸಂಪೂರ್ಣ ಸಹಕಾರ ಮೆಕನೋಕಿಗೆ ಇತ್ತು. ಪಿ.ಎಸ್. ಕೃಷ್ಣಮೂರ್ತಿ ಆಗ ದಿವಾನರಾಗಿದ್ದರು. ದಿವಾನರಿಗೆ ಹಲವಾರು ಹತ್ತಿರದ ಸಂಬಂಧೀಕರಿದ್ದರು. ಮೆಕನೋಕಿ ಮೈಸೂರು ಸಿವಿಲ್ ಸರ್ವೀಸನ್ನು ಒಂದು ಮಟ್ಟಕ್ಕೆ ತಂದು ಅದರ ಘನತೆಯನ್ನು ಹೆಚ್ಚಿಸಿ ಅದಕ್ಕೊಂದು ಸಮಿತಿ ರಚಿಸಿ ಆ ಸಮಿತಿಯಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದ ಎರಡು ಪ್ರೊಫೆಸರ್ ಇರುವಂತೆ ಸೂಚಿಸಿದರು. ಹಲವು ಅಧಿಕಾರಗಳು ಸ್ಪರ್ಧಾಯುಕ್ತವಾಗಿದ್ದವು.

**ಹಲವು ಮೀಸಲು ಅಧಿಕಾರಗಳು :** ಮೈಸೂರು ಸಿಟಿಯನ್ನು ಉತ್ತಮಗೊಳಿಸುವ ಹಲವಾರು ಯೋಜನೆ ಮಾಕನೋಕಿಯವರ ಮುಂದಿತ್ತು. ಇದಕ್ಕೆ ಒಬ್ಬ ಡಾಕ್ಟರ್, ಒಬ್ಬ ಪತ್ರಿಕೆಯ ಸಂಪಾದಕ, ಮತ್ತೊಬ್ಬ Public works Dept. ಅಧಿಕಾರಿ ಸಹಾಯಕರಿದ್ದರು.

ಮೈಸೂರಿನಲ್ಲಿ ಮಹಾರಾಜರು ಹಾಕಿದ ಹಲವಾರು ಯೋಜನೆಗಳಿಂದ, ಉತ್ತಮ ರಸ್ತೆ, ಮನೆ ಇವುಗಳನ್ನೆಲ್ಲಾ ಸಾಕಾರಗೊಳಿಸಿದರೂ ಇನ್ನೂ ಬಹಳಷ್ಟು ಉತ್ತಮಗೊಳಿಸುವ ಜಾಗಗಳಿದ್ದವು. ಮೊದಲು ಸಿಟಿಯ Survey ಮಾಡ

ಬೇಕಾಗಿತ್ತು. ಮ್ಯಾಕನೋಕಿ ಶಹರ ಅಭಿವೃದ್ಧಿ ಫಂಡಿನ ವಿಶ್ವಸ್ಥ ಸಮಿತಿ ಮಾಡಿ (Mysore City improvement trust) ಇದಕ್ಕೆ ಬೇಕಾದ ಧನಸಹಾಯವನ್ನು ಪಡೆದು, ಎಲ್ಲಾ ಕೊಳಚೆ ಪ್ರದೇಶವನ್ನೂ ನಿರ್ಮೂಲ ಮಾಡಿ, ಅಲ್ಲಿ ಇದ್ದವರಿಗೆ ವಸತಿ ಏರ್ಪಾಡು ಮಾಡಿ, ರಸ್ತೆಗಳ ವಿಸ್ತಾರ, ಚರಂಡಿ ವ್ಯವಸ್ಥೆ ಸರಿಪಡಿಸಿ ಹೊರ ನಾಲೆಗಳ ವ್ಯವಸ್ಥೆ ಮಾಡಿದರು. ಈ ಪ್ರಯೋಗ ಯಶಸ್ವಿಯಾಗಿ ಹಲವಾರು ವರ್ಷ ನಡೆಯಿತು. ಮಹಾರಾಜರು ಪ್ರಯಾಣ ಮಾಡುವಾಗ ಮೆಕನೋಕಿ ಅವರ ಸಂಗಡ ಇರುತ್ತಿದ್ದರು. ಮಹಾರಾಜರು ಸ್ಥಳೀಯರ ಕಷ್ಟ, ನಷ್ಟಕ್ಕೆ ಸ್ಪಂದಿಸುತ್ತಿದ್ದರು. ಮತ್ತು ಹಲವು ಸಂದರ್ಭದಲ್ಲಿ ಕೂಡಲೇ ಜನರಿಗೆ ಪರಿಹಾರ ಸಿಗುತ್ತಿತ್ತು. ಪ್ರಜಾಪ್ರತಿನಿಧಿ ಸಭೆಗೆ ಯಾವ ಅಧಿಕಾರವಾಣಿ ಇಲ್ಲದಿದ್ದರೂ ಅದು ಜನರ ಮುಖವಾಣಿಯಾಗಿತ್ತು. ಮತ್ತು ಜನರ ನಂಬಿಕೆಗೆ ಪಾತ್ರವಾಗಿತ್ತು. ಅದೂ ಅಲ್ಲದೆ ಕೃಷಿ ಮತ್ತು ಉದ್ಯೋಗ, ವಸ್ತು ಪ್ರದರ್ಶನ ಆರ್ಥಿಕ ಪ್ರಗತಿಯಲ್ಲಿ ಮುನ್ನಡೆಯಲು ಮಹತ್ವ ಪಡೆಯಿತು.

ಮ್ಯಾಕನೋಕಿ ತಮ್ಮ ಏಳು ವರುಷದ (೧೯೦೨–೧೯೦೯) ತಮ್ಮ ಮೈಸೂರು ಅನುಭವದಲ್ಲಿ ಮೈಸೂರಿನ ಜನರ ಮತ್ತು ಸರ್ಕಾರದ ಪ್ರಗತಿ, ಆಗುಹೋಗುಗಳ ಕಡೆ ಗಮನ ಕೊಟ್ಟರು. ಹತ್ತಿರ ದೃಷ್ಟಿಯಿಂದ ಮೈಸೂರನ್ನೂ ಭಾರತ ಸರ್ಕಾರವನ್ನು ಹೊಸ ದೃಷ್ಟಿಕೋನದಿಂದ ನೋಡುವುದನ್ನು ಕಲಿತರು. ಇನ್ನೂ ಹೇಳುವುದಾದರೆ, ಜನರ ಅಭಿರುಚಿ, ದೃಷ್ಟಿಕೋನ, ಅಸಹಾಯಕತೆ, ದೈನಂದಿನ ಜೀವನ ಸಮಸ್ಯೆ, ಇವೆಲ್ಲದರ ಅಭ್ಯಾಸಕ್ಕೆ ಸಮಯ ವಿನಿಯೋಗಿಸಿದ್ದು ಅತ್ಯಂತ ಮಹತ್ವವಾದ್ದು. ಸಾಮಾನ್ಯರ ಸಮಸ್ಯೆ ಅವರೊಡನೆ ಬೆರೆತರೆ ಮಾತ್ರ ಸಾಧ್ಯ. ಇದು ಮ್ಯಾಕನೋಕಿ ಬರವಣಿಗೆಯಿಂದ ಸ್ಪಷ್ಟಪಡುತ್ತದೆ. ಜನರ ಮನಗೆದ್ದ ಮ್ಯಾಕನೋಕಿ ೧೯೧೧–೧೪ ಧಾರವಾಡದಲ್ಲಿ ಕಲೆಕ್ಟರ್ ಆಗಿ ನೇಮಕವಾದರು.

**ಧಾರವಾಡದ ಅನುಭವ (೧೯೧೧-೧೪) :** ಮೆಕನೋಕಿಯವರು ಧಾರವಾಡದಲ್ಲಿ ಕಲೆಕ್ಟರ್ ಆದಾಗ, ಧಾರವಾಡ ಆಗತಾನೆ ಪ್ಲೇಗ್ ಮಾರಿಯಿಂದ ಚೇತರಿಸಿಕೊಳ್ಳುತ್ತಿತ್ತು. ಚಿಕ್ಕಪುಟ್ಟ ಊರುಗಳು ನಾಶವಾಗಿದ್ದು. ನರಗುಂದದಲ್ಲಿ ಮೂವತ್ತು ವರುಷದಿಂದ ಮುನಿಸಿಪಾಲಿಟಿ ಇದ್ದರೂ ಒಂದು ಆಸ್ಪತ್ರೆ ಇರಲಿಲ್ಲ. ಇನಾಕ್ಯುಲೇಷನ್ ಮುಂಜಾಗ್ರತೆ ಕ್ರಮ ತೆಗೆದುಕೊಂಡಿರಲಿಲ್ಲ. ಸಿಟಿಯ ಮುಖ್ಯಸ್ಥ ಮ್ಯಾಕನೋಕಿ ಅವರನ್ನು ನೋಡಲು ಬಂದಾಗ, ಆಸ್ಪತ್ರೆಯ ಅವಶ್ಯಕತೆಯನ್ನು ಒತ್ತಿ ಹೇಳಿ ಸರ್ಕಾರದ ವತಿಯಿಂದ ಸಹಾಯ ದೊರಕಿಸಿಕೊಟ್ಟು ಮ್ಯಾಕನೋಕಿ ಧಾರವಾಡ ಬಿಡುವುದರೊಳಗೆ ಸರ್ಕಾರಿ ಆಸ್ಪತ್ರೆ ಶುರುವಾಯಿತು. ಮತ್ತು ತಾಲೂಕು ಮತ್ತು ಮುಖ್ಯ ಕಛೇರಿಯಲ್ಲಿ ಆಸ್ಪತ್ರೆ ಆರಂಭಿಸಿತು. ಹೊಸದರಲ್ಲಿ ಇನಾಕ್ಯುಲೇಷನ್ ಪ್ರಚಾರ ಶುರು ಮಾಡಿದ ಕೂಡಲೇ ಜನ ತಲೆ ತಪ್ಪಿಸುತ್ತಿದ್ದರು.

ಇನಾಕ್ಯುಲೇಷನ್ ಪ್ರಚಾರ ವಿಸ್ತರಿಸಲು ಒಂದು ಡಿಸ್ಟ್ರಿಕ್ಟ್ ಸ್ಯಾನಿಟರಿ ಅಸೋಸಿಯೇಷನ್ ಶುರು ಮಾಡಿದಾಗ Col. Hadson (ಕರ್ನಲ್ ಹಡಸನ್) ಇಂಬು ಕೊಟ್ಟರು. ಸ್ಥಳೀಯ ಹಲವಾರು ಡಾಕ್ಟರ್ ಸಹಾಯ ಹಸ್ತ ನೀಡಿದರು. ಹಳ್ಳಿಯ ಮುಖ್ಯಸ್ಥರ ಬೆಂಬಲದಿಂದ ಆರು ಸಾವಿರ ಜನ ಸದಸ್ಯರಾದರು. ಸದಸ್ಯ ಶುಲ್ಕ ೫ ೧/೨ ರೂಪಾಯಿ. ಒಂದು ಮ್ಯಾಜಿಕ್ಸ ಲ್ಯಾಂಟ್ರಾನ್, (Magic Lantern) slides, ಮತ್ತು ಒಂದು ಗ್ರಾಮಫೋನ್ ಇವುಗಳಿಂದ ಹಳ್ಳಿ ಹಳ್ಳಿಗಳಲ್ಲಿ ಪ್ರಚಾರ ಕಾರ್ಯ ನಡೆಯಿತು. ೧೯೧೨-೧೩ರ ಹೊತ್ತಿಗೆ, ೬೦,೦೦೦ ಜನ ಇನಾಕ್ಯುಲೇಷನ್ ಮಾಡಿಸಿಕೊಂಡಿದ್ದಲ್ಲದೆ, ಅತ್ಯುತ್ತಮವಾದ ಕೆಲಸ ನಡೆಯಿತು. ಇಲಿ ಬಿದ್ದ ಕ್ಷಣ ಇನಾಕ್ಯುಲೇಷನ್‌ಗೆ ಜನ ಹಾತೊರೆಯುವದು ಸಾಮಾನ್ಯ ವಾಯಿತು. ಸಾನಿಟರಿ ಅಸೋಸಿಯೇಷನ್ ಕ್ವಿನೈನ್, ಕಾಲರಾಗೆ ರೋಗ ನಿವಾರಣ ಮದ್ದು ಸದಾ ಇಟ್ಟದ್ದು ಹಳ್ಳಿಯ ನಿರ್ಮಲೀಕರಣದಲ್ಲಿ ಮೇಲ್ಗೈ ಎನಿಸಿತು. ಪ್ರತಿ ಹಳ್ಳಿಯಲ್ಲಿ ಪೈಪೋಟಿ ನಡೆದು ತಮ್ಮ ಹಳ್ಳಿಗೆ ಡಿಸ್ಟ್ರಿಕ್ಟ್ ಕಲೆಕ್ಟರನ್ನು ಕರೆದು ತಾವು ಮಾಡಿರುವ ಕೆಲಸವನ್ನು ತೋರಿಸುವದು ಹೆಮ್ಮೆ ಎನಿಸಿಕೊಂಡಿತು. ಇದರ ವಿಚಾರವಾಗಿ ಪ್ರತಿ ವಾರ ಚರ್ಚೆಯಾಗಿ ಅಸೋಸಿಯೇಷನ್ ಸಾರ್ವಜನಿಕ ವೇದಿಕೆಯಾಗಿ ಪರಿವರ್ತಿಸಿತು. ಎಲ್ಲಾ ಡಿಸ್ಟ್ರಿಕ್ಟ್ ಅಸೋಸಿಯೇಷನ್, ಕೃಷಿ, ಸಹಕಾರಿ ಸಂಘ ಎಲ್ಲದರ ಸಾರ್ವಜನಿಕ ಚರ್ಚೆ ನಡೆದು, ಒಟ್ಟು ಸಮಾಲೋಚನೆಗೆ ಅವಕಾಶ ಕಲ್ಪಿಸಿತು.

ಮೆಕನೋಕಿ ಅವರ ಅಧಿಕಾರದ ಅವಧಿಯಲ್ಲಿ ಅತ್ಯಂತ ಸಂತೋಷ ಕೊಟ್ಟ ಅಧಿಕಾರ ಧಾರವಾಡ ಕಲೆಕ್ಟರ್ ಹುದ್ದೆ, ಯಾಕೆಂದರೆ ಬರೀ ಬರವಣಿಗೆ, ಪೇಪರ್ ಕೆಲಸವಲ್ಲದೆ ಜನರ ಜೊತೆ ಬೆರೆತು ಅವರ ಕಷ್ಟದಲ್ಲಿ ಭಾಗಿಯಾಗಿ ಉತ್ತಮ ಆಡಳಿತ ನೀಡಿದ್ದು.

**ಪರಿಸಮಾಪ್ತಿ :** ಅಧಿಕಾರ ವರ್ಗ ಅಭ್ಯಾಸ ಮಾಡಿದಾಗ, ಒಬ್ಬೊಬ್ಬರ ಅನುಭವವನ್ನು ನೋಡಿದಾಗ, ಹಲವಾರು ವ್ಯತ್ಯಾಸಗಳು ಕಂಡುಬರುತ್ತವೆ. ಮೇಲೆ ಕಾಣಿಸಿರುವ ಅಧಿಕಾರಿಗಳಲ್ಲಿ, ಮೂವರು ದಿವಾನ ವಿಶ್ವೇಶ್ವರಯ್ಯನವರ ಹತ್ತಿರ ಅಧಿಕಾರದಲ್ಲಿ ಇದ್ದವರು. ಕೆ.ಆರ್. ಶ್ರೀನಿವಾಸ ಐಯಂಗಾರ್ ಹಳೆಯ ಸಂಪ್ರದಾಯಕ್ಕೆ ಸೇರಿದವರು, ವಿಶ್ವೇಶ್ವರಯ್ಯನವರ ನಾಗರೀಕ ಧೋರಣೆಗೆ ಹೊಂದುಕೊಳ್ಳಲಾರದ ಮನಸ್ಥಿತಿಯವರಾಗಿದ್ದರೂ ರಾಜ್ಯದ ನಿಷ್ಠೆಗೆ ಕಡಿಮೆ ಇಲ್ಲದ್ದು ಕಾಣಬರುತ್ತದೆ. ದಿವಾನರೊಡನೆ ಸದಾ ಭಿನ್ನಾಭಿಪ್ರಾಯ. ಹೊಸತಿಗೆ ಹೊಂದಿಕೊಳ್ಳದ ಕೆ.ಆರ್. ಶ್ರೀನಿವಾಸ ಐಯಂಗಾರ್‌ಗೆ ಎಂದೂ ಜವಾಬ್ದಾರಿ ಹುದ್ದೆ ದೊರೆಯಲಿಲ್ಲ. ಕಾಲ ಬದಲಾದಂತೆ ಹೊಸತಿಗೆ ಹೊಂದಿಕೊಂಡು ಹೋಗುವ ಅನಿವಾರ್ಯತೆ ಇತ್ತು. ಆದರೆ ದಾಖಲೆಗಳನ್ನು ನೋಡಿದಾಗ ಇವರ ಅವಧಿಯಲ್ಲಿ ಯಾವ ಜವಾಬ್ದಾರಿ ಕೆಲಸವನ್ನು ಕೈಗೊಂಡಿದ್ದು ಗೋಚರಿಸುವುದಿಲ್ಲ.

ಮಾಸ್ತಿ ವೆಂಕಟೇಶ ಐಯಂಗಾರ್ ಮತ್ತು ವಿಶ್ವೇಶ್ವರಯ್ಯನವರು ಉತ್ತಮ ಸಂಬಂಧವನ್ನು ಹೊಂದಿದ್ದೂ ಅಲ್ಲದೆ,

ಸ್ವತಂತ್ರ ಮನೋಭಾವವುಳ್ಳ ಮಾಸ್ತಿ ಅವರನ್ನು ದಿವಾನರು ಮೆಚ್ಚಿದ್ದುಂಟು. ಮೈಸೂರು ರಾಜಕೀಯದಲ್ಲಿ, ಪ್ರಭಾವಶಾಲಿಗಳಿಗೆ ಮನ್ನಣೆ ಜಾಸ್ತಿ. ಮಾಸ್ತಿಯವರಿಗೆ ಹಲವು ಬಾರಿ ನ್ಯಾಯ ದೊರಕದಿದ್ದರೂ ಅವರು ನಿಷ್ಠೆಯಿಂದ ಸರಕಾರಕ್ಕೆ ಸೇವೆ ಸಲ್ಲಿಸಿದರು.

ಇನ್ನು ಎಂ.ಎ. ಶ್ರೀನಿವಾಸನ್ ತಮ್ಮ ಅನುಭವ ಮಂಟಪದಲ್ಲಿ ತಮ್ಮ ಮತ್ತು ಸರ್ಕಾರದ ಸಂಬಂಧದ ಬಗ್ಗೆ ದೀರ್ಘವಾದ ಚರ್ಚೆ ಮತ್ತು ಬಿಳಿಯರ ಕುತಂತ್ರವನ್ನು ಎತ್ತಿ ಹಿಡಿದು ಸೂಕ್ತ ಶಿಕ್ಷೆಯಾಗುವಂತೆ ಮಾಡಿದ್ದಾರೆ. ಹಲವಾರು ಮುಖ್ಯ ಘಟನೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ತೀರ್ಪನ್ನು ಕೊಡುತ್ತಿದ್ದ ಅತ್ಯಂತ ಮೇಧಾವಿ, ಮುಂದೆ Gwaliar ದಿವಾನರಾಗಿ, ಭಾರತದ Constiluent Assembly member ಆದರು. ಇದೆಲ್ಲಾ ಅವರ ರಾಜತಂತ್ರ ನಿಪುಣತೆಯಿಂದ ಸಾಧ್ಯವಾದದ್ದು.

ನವರತ್ನರಾಮರಾಯರು ವೃತ್ತಿ ಜೀವನದ ಹಲವಾರು ಮುಖಗಳನ್ನು ವಿಶ್ಲೇಷಿಸಿದ್ದಾರೆ. Parks ಸಾಹೇಬರ ಜೋರು, ರಾಮರಾಯರ ಉತ್ತರ, ಮತ್ತು Parks Apology, ರಾಯರನ್ನು ಆಮೇಲೆ ಕಂಡ ರೀತಿ, ರಾಮರಾಯರು ಬಿಳಿಯರೊಡನೆ ವ್ಯವಹಾರ ಮಾಡಿದಾಗ ಕಂಡ ಮುಖಗಳು ಇತ್ಯಾದಿಗಳ ನಮೂದು ಇದೆ.

Cox ಮತ್ತು Maconochie ಬಹಳಷ್ಟು ವರುಷ ಮೈಸೂರು, ಧಾರವಾಡದಲ್ಲಿ ಅಧಿಕಾರದಲ್ಲಿ ಇದ್ದವರು. ಜನರ ಮನಗೆಲ್ಲಲು ಹಲವಾರು ಉತ್ತಮ ಯೋಜನೆಗಳನ್ನು ಸಿದ್ಧಪಡಿಸಿ ಅನುಷ್ಠಾನಕ್ಕೆ ತಂದವರು. *Macanochie* ತಮ್ಮ ಅವಧಿಯಲ್ಲಿ ತಂದ *Civil improvement* ಮತ್ತು ಕಲೆಕ್ಟರ್ ಆಗಿ ಕೈಗೊಂಡ ಇನಾಕ್ಯುಲೇಷನ್ ಪ್ರಚಾರ ಶ್ಲಾಘನೀಯ.

ಒಟ್ಟಿನಲ್ಲಿ ಹಳೆಯ ಮತ್ತು ಹೊಸ ಅಧಿಕಾರ ವರ್ಗವನ್ನು ಅವಲೋಕಿಸುವಾಗ ಕಂಡುಬರುವದು, ಹಳೆಯ ಐಸಿಎಸ್ ಮಾಡಿದ ಅಧಿಕಾರಿಗಳು ಐಸಿಎಸ್‌ನ್ನು ಎಷ್ಟೇ ವೈಭವೀಕರಿಸಿದರೂ, ತಮ್ಮ ಮಟ್ಟಿಗೆ ಸರ್ಕಾರದ ಹಿತಚಿಂತನೆಗೆ ಮನಗೊಟ್ಟರು. (B.G. Rao ರವರು ಹೇಳುವಂತೆ "The traditions, the dicipline of the service and the laws with which he governed and administered his action. But underlying them was the constant awareness that he was an Indian and that he had to strive for the welfare of his country"[11]

ಆಗಿನ ಐಸಿಎಸ್ ಅಧಿಕಾರಿಗಳು ತಮ್ಮ ದೇಶಾಭಿಮಾನ, ಸ್ವಾಭಿಮಾನ ಉಳಿಸಿಕೊಂಡು ಹಲವಾರು ಉನ್ನತ ಪದವಿಯನ್ನಲಂಕರಿಸಿದರು.

ಬ್ರಿಟೀಷರ ಕುಟಿಲತನವನ್ನು ನಾವು ಅಧಿಕಾರವರ್ಗದಲ್ಲಿ ಕಾಣುತ್ತೇವೆ. ಆದರೂ ಅವರು ಬರೆದಿಟ್ಟಿರುವ ಹಲವಾರು ವರದಿಗಳು, ಉದಾಹರಣೆಗೆ ಕ್ಷಾಮ, ಪೊಲೀಸ್, ಆರೋಗ್ಯ, ಸೆನ್ಸಸ್, ಅದರ ವರ್ಗೀಕರಣ, ಉತ್ತಮವಾದುದು. ಇದೆಲ್ಲಾ ಸರ್ಕಾರಿ ಕೆಲಸವಾದರೂ ಭಾರತದ ಜನಜೀವನವನ್ನು ರೂಪಿಸಲು ಬರೆದದ್ದು ಎಂಬುದನ್ನು ಮರೆಯುವಂತಿಲ್ಲ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. K.L. Punjabi (ed)., *The Civil Servant in India*, p. 5. 1965.

೨. I.C.S. ತನ್ನ ಉನ್ನತ ಧೋರಣೆಗಳಿಂದ ಸಮಾಜವನ್ನು ಸೃಷ್ಟಿ ಮಾಡಿದೆ ಎಂದು ದೃಢೀಕರಿಸಿದ ಚರಿತ್ರಕಾರರು L.S.S. o mally, E.A.H. Blunt ಮತ್ತು Rudyard Kipling. Kipling ಮುಂಬೈನಲ್ಲಿ ಹುಟ್ಟಿದವನು. ಬ್ರಿಟಿಷರ ಆಡಳಿತದಲ್ಲಿ ಪ್ರಜೆಗಳು ಸುಖವಾಗಿರುತ್ತಾರೆಂಬ ಮಾಯಾಲೋಕವನ್ನು ತನ್ನ ಬರವಣಿಗೆಯಿಂದ ಪ್ರಕಟಿಸಿದನು.

೩. "K.R. Srinivasa Iyengar., Ph.d thesis". (1871-1962). by N.P.

೪. Ibid.

೫. ಮಾಸ್ತಿ ವೆಂಕಟೇಶ ಐಯಂಗಾರ್., **ಭಾವ ೨,** p. 113, 120, 126, ಬೆಂಗಳೂರು, ಜೀವನ ಕಾರ್ಯಾಲಯ, ೧೯೬೬.

೬ M.A. Sreenivasan., *Of the Raj, Maharajas and Me*. Delhi, Ravidayal, 1991. p. 83-90.

೭. ನವರತ್ನರಾಮರಾವ., **ಕೆಲವು ನೆನಪುಗಳು,** ಮೈಸೂರು, ಗೀತಾ ಬುಕ್ ಹೌಸ್, ೧೯೭೨.

೮. ಅದೇ., ಪು. ೧೩೩.

೯. Cox, Edmund Bart., *My thirty years in India.* London, Mills & Boon. 1909.

೧೦. Evan, Machanochie., *Life in the Indian Civil Service*, London, Chapman & hall, 1926.

*. *QJMS* Special issue., Vol. xxxi, 1940, A private secretarys Estimate, pp. 194-96.

೧೧. B.G. Rao., *My work in the I.C.S.* (in) K.L. Punjabi ed.The civil servant in India Bharatiya vidya Bhavan, 1965 (Bombay).

ಡಾ. ಮಲ್ಲಿಕಾರ್ಜುನ ಬಾಗೋಡಿ*

# ದತ್ತು ಪ್ರಸಂಗದ ದಾಖಲು ಪತ್ರ – ಒಂದು ವಿವೇಚನೆ

ಸೇಡಂ'ನ ಶ್ರೀ ಬಸವರಾಜ ನಿಷ್ಠಿಯವರ ಮನೆಯಲ್ಲಿ ಒಂದು ಶತಮಾನದಷ್ಟು ಹಳೆಯದಾದ **'ದತ್ತು ಪ್ರಸಂಗದ ದಾಖಲು ಪತ್ರ'**ವೊಂದು ಸಂಗ್ರಹಗೊಂಡಿದೆ. ಶ್ರೀ ಬಸವರಾಜ ನಿಷ್ಠಿಯವರದು ಮೂಲತಃ ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲೂಕಿನ ನಿಡಗುಂದಿ ಗ್ರಾಮ. ೧೯೩೦–೪೦ರ ಸುಮಾರಿಗೆ ಕಾಳುಕಡಿ ವ್ಯಾಪಾರದ ಹಿನ್ನೆಲೆಯಲ್ಲಿ ಈ ಮನೆತನದ ಹಿರಿಯರು ಸೇಡಂಗೆ ಬಂದು ನೆಲೆಸಿರುತ್ತಾರೆ. 'ಸೇಡಂ'ನ ಹಳೆಯ ಗಂಜ ರಸ್ತೆ ಹಾಗೂ ಶ್ರೀ ಕೊತ್ತಲ ಬಸವೇಶ್ವರ ದೇವಾಲಯದ ಬಳಿಯಲ್ಲಿಯೇ ನಿಷ್ಠಿ ಮನೆತನದವರು ಉದ್ಯೋಗಕ್ಕೆಂದು ಬಂದು ನೆಲೆಯೂರಿದ ಕಟ್ಟಡವಿದೆ. (ಈಗ್ಗೆ ಸುಮಾರು ಒಂದು ದಶಕದಿಂದೀಚೆಗೆ ಈ ಕಟ್ಟಡವನ್ನು ನವೀಕರಿಸಲಾಗಿದೆ) ಈ ಮನೆಯ ಹಿರಿಯರು ಕಾಳುಕಡಿ ವ್ಯಾಪಾರದೊಂದಿಗೆ ೧೯೫೦ರ ಸುಮಾರಿಗೆ ಸೇಡಂ ಪಟ್ಟಣದ ಮುಖ್ಯ ರಸ್ತೆಯಲ್ಲಿ 'ಬಸವರಾಜ' ಸಿನೇಮಾ ಮಂದಿರವನ್ನು ನಿರ್ಮಿಸುತ್ತಾರೆ. ಈ ಚಿತ್ರಮಂದಿರ ಇಂದಿಗೂ ಕಾರ್ಯನಿರತವಾಗಿದೆ. ನಿಷ್ಠಿ ಮನೆತನದವರು ಮೂಲತಃ ನಿಡಗುಂದಿಯವರಾದರೂ ಇಂದು ಸೇಡಂ ಪಟ್ಟಣದವರೆಂದೇ ಹೆಚ್ಚು ಗುರುತಿಸಲಾಗುತ್ತದೆ. ಇಂದು ಸೇಡಂನ ಹಳೆಯ ತಲೆಮಾರಿನ ಮನೆತನಗಳಲ್ಲಿ ನಿಷ್ಠಿಯವರ ಮನೆತನವನ್ನೂ ಒಂದು ಪ್ರಮುಖ ಮನೆತನವೆಂದು ಗುರುತಿಸಲಾಗುತ್ತಿದೆ. ನಿಷ್ಠಿಯವರದು ಸರಳ, ಸಾತ್ವಿಕ ಮತ್ತು ಶ್ರೀಮಂತ ಮನೆತನ ವಾದರೂ ಈ ಮನೆಗೆ ಗಂಡು ಸಂತಾನದ ಕೊರಗು ಕಾಡುತ್ತಲಿತ್ತು. ಈ ಮನೆಯ ವಾರಸುತನಕ್ಕೆಂದು ಮನೆಯ ಹಿರಿಯರೆಲ್ಲರೂ ದತ್ತು ಪುತ್ರನನ್ನು ಪಡೆಯಲು ನಿಶ್ಚಯಿಸುತ್ತಾರೆ. ಈಗಿನ ಶ್ರೀ ಬಸವರಾಜ ನಿಷ್ಠಿಯವರ ತಂದೆ ಶ್ರೀ ಸಿದ್ರಾಮಪ್ಪ ಎನ್ನುವವರನ್ನೆ ನಿಡಗುಂದಿಯ ನಿಷ್ಠಿ ಮನೆತನಕ್ಕೆ ದತ್ತು ಪುತ್ರನನ್ನಾಗಿ ಪಡೆಯಲಾಗುತ್ತದೆ.

ಶ್ರೀ ಸಿದ್ರಾಮಪ್ಪನವರು ಭಾಲಕಿಯ **ವಾರದ** ಮನೆತನದ ಕುಡಿಯಾಗಿದ್ದಾರೆ. ಸಿದ್ರಾಮಪ್ಪನವರು ಕೇವಲ ನಾಲ್ಕು ವರ್ಷದ ಮಗುವಾಗಿದ್ದಾಗ ದತ್ತು ಪಡೆಯುವ ಪ್ರಸಂಗ ನಡೆಯುತ್ತದೆ. ಸಿದ್ರಾಮಪ್ಪನವರ ಕಾಲಮಾನವನ್ನು ಅವಲೋಕಿಸಿ ಹೇಳುವುದಾದರೆ ಈ ದಾಖಲು ಪತ್ರ ಸುಮಾರು ೧೯೧೦ರ ವೇಳೆಗೆ ಬರೆದಿರಬಹುದಾಗಿದೆ. ಅಂದು ಈ ಬಾಲಕನನ್ನು ದತ್ತು ಪಡೆಯಬೇಕಾದರೆ ಭಾಲಕಿಯ ವಾರದ ಮನೆತನದ ವಾರಸುದಾರರು ದತ್ತು ಪುತ್ರನು ತಾನು ಹೋಗುವ ಮನೆಯಲ್ಲಿ ಹೇಗಿರಬೇಕು ಎಂಬುದರ ಬಗೆಗೆ ಸುಮಾರು ೧೦ ಅಂಶಗಳನ್ನು ಒಳಗೊಂಡಂತೆ ಈ ಪತ್ರವನ್ನು ಬರೆದಿದ್ದಾರೆ. ಈ ಪತ್ರವನ್ನು ಸೇಡಂನ ಶ್ರೀ ಬಸವರಾಜ ನಿಷ್ಠಿಯವರು ಇಂದಿಗೂ ಸಂರಕ್ಷಿಸಿಕೊಂಡು ಬಂದಿದ್ದಾರೆ.

೪೪ ಸೆಂ.ಮೀ. ಉದ್ದ, ೨೮ ಸೆಂ.ಮೀ. ಅಗಲ ಅಳತೆಯ ತೆಳುವಾದ ಕಾಗದ ಹಾಳೆಯ ಒಂದು ಬದಿಯಲ್ಲಿ ಸುಮಾರು ೨೬ ಸಾಲುಗಳಲ್ಲಿ ಈ ಮೇಲೆ ಹೇಳಿದ ಹತ್ತು ಅಂಶಗಳನ್ನು ಬರೆಯಲಾಗಿದೆ. ಈ ಕಾಗದ ಪತ್ರ ಅತ್ಯಂತ ತೆಳುವಾಗಿದ್ದರಿಂದ ಇಂದು ಹೆಚ್ಚಿನ ಪ್ರಮಾಣದಲ್ಲಿ ಜೀರ್ಣಾವಸ್ಥೆಯಲ್ಲಿದೆ. ಅಲ್ಲದೆ ಈ ಪತ್ರವನ್ನು ಮಡಿಸಿ ಇಡಲಾಗಿದ್ದರಿಂದ, ಮಡಿಸಿದ ಭಾಗದಲ್ಲಿನ ಕೆಲ ಅಕ್ಷರಗಳು ತ್ರುಟಿತಗೊಂಡಿವೆ. ಪ್ರಸ್ತುತ ದಾಖಲು ಪತ್ರದಲ್ಲಿ ಗಮನಿಸಬೇಕಾದ ಒಂದು ಮಹತ್ವದ ಅಂಶವೇನೆಂದರೆ ಈ ಪತ್ರದಲ್ಲಿ ಬರೆಯಲಾದ ಅಕ್ಷರಗಳು ದೇವನಾಗರೀ ಲಿಪಿಯಲ್ಲಿದ್ದು, ಉಚ್ಚಾರವು ಕನ್ನಡದಲ್ಲಿದೆ. ಬೀದರ ಜಿಲ್ಲೆಯ ತಾಲೂಕು ಕೇಂದ್ರವಾದ ಭಾಲಕಿ ಮಹಾರಾಷ್ಟ್ರ ರಾಜ್ಯದ ಗಡಿಯಂಚಿಗೆ ಹೊಂದಿಕೊಂಡಿದ್ದು, ಅಲ್ಲಿನ ಬಹುಪಾಲು ಜನರು ಮಾತನಾಡುವ ಭಾಷೆ ಮರಾಠಿಯಾಗಿದೆ. ಅಲ್ಲದೆ ಈ ಪ್ರದೇಶದಲ್ಲಿ ಮರಾಠಿಯ ಪ್ರಭಾವ ಹೆಚ್ಚಾಗಿರುವುದರಿಂದ ಸಹಜವಾಗಿಯೇ ಅವರು ಬರೆಯುವ ಬರವಣಿಗೆಯು ದೇವನಾಗರೀ ಲಿಪಿಯಲ್ಲಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ದಾಖಲು ಪತ್ರದಲ್ಲಿ ಬರೆದಿರುವ ಅಕ್ಷರಗಳು ದೇವನಾಗರೀ ಲಿಪಿಯಲ್ಲಿ ಬರೆದಿರಲಿಕ್ಕೆ ಸಾಧ್ಯವಿದೆ. ಬರವಣಿಗೆಗಾಗಿ ಕಪ್ಪು ವರ್ಣದ ಮಸಿಯನ್ನು ಬಳಸಲಾಗಿದೆ. ಈ ಪತ್ರದ ಕೊನೆಯಲ್ಲಿ P.V.D. ಎಂದು ಇಂಗ್ಲೀಷ್ ಅಕ್ಷರಗಳನ್ನು ಬರೆಯಲಾಗಿದೆ.

* ಅಧ್ಯಾಪಕರು, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

## ದಾಖಲು ಪತ್ರದ ಸಂಕ್ಷಿಪ್ತ ವಿವರ

ಹತ್ತು ಅಂಶಗಳನ್ನು ಒಳಗೊಂಡ ಪ್ರಸ್ತುತ ದಾಖಲು ಪತ್ರದ ಮೊದಲ ಅಂಶದ ಎರಡು ಸಾಲುಗಳಲ್ಲಿ ದತ್ತು ಪಡೆದ ಮಗು ತಾಯಿಯನ್ನು ಪೀಡಿಸದೇ ಅವಳ ಆಜ್ಞಾ ಪ್ರಕಾರ ನಡಿಯಬೇಕು ಎಂದು ಹೇಳಿದೆ. ನಿತ್ಯ ನಿಯಮಿತ ವೇಳೆಯಲ್ಲಿ ಶಾಲೆಗೆ ಹೋಗಿ ಲಕ್ಷಕೊಟ್ಟು ಪಾಠಗಳನ್ನು ಕಲಿಯಬೇಕು. ವೇಳೆಯನ್ನು ವ್ಯರ್ಥ ಮಾಡಕೂಡದೆಂದು ಎರಡನೆಯ ಅಂಶದ ಎರಡು ಸಾಲುಗಳಲ್ಲಿ ವಿವರಿಸಿದೆ. ಮಗು ತಾನು ಕಲಿತ ಪಾಠಗಳನ್ನು ಮನೆಗೆ ಬಂದನಂತರ ಅವ್ವ ಇಲ್ಲದಿದ್ದರೆ, ರುದ್ರಯ್ಯ ಅಣ್ಣನನ್ನು ಮರೆಯದೇ ಓದಿ ತೋರಿಸಬೇಕೆಂದು ಮೂರನೆಯ ಅಂಶದ ಎರಡು ಸಾಲುಗಳಲ್ಲಿ ಹೆಸರಿಸಿದೆ. ಸ್ನಾನ ಮತ್ತು ಊಟ ಮಾಡುವ ವೇಳೆ ಹಠಮಾಡಿ ಅವ್ವನನ್ನು ದುಃಖ ಮತ್ತು ಕಷ್ಟ ಕೊಡುವದು ಸರಿಯಲ್ಲ; ಯಾವತ್ತು ಹಿರಿಯರು ಹೇಳಿದಂತೆ ಕೇಳಿ ಎಲ್ಲರಿಗೂ ಪ್ರಿಯನಾಗಿರಬೇಕು ಎಂದು ನಾಲ್ಕನೆಯ ಅಂಶದ ಮೂರು ಸಾಲುಗಳಲ್ಲಿ ಹೇಳಿದೆ. ಐದನೆಯ ಅಂಶದ ಎರಡು ಸಾಲುಗಳಲ್ಲಿ ತಾನುಡುವ ಬಟ್ಟೆಗಳನ್ನು ಸ್ವಚ್ಛವಾಗಿಟ್ಟುಕೊಂಡು ಹೆಚ್ಚು ದಿನ ಬಾಳಿಕೆ ಬರುವಂತೆ ವರ್ತಿಸಬೇಕು. ಯಾವುದೇ ಕಾರಣಕ್ಕೂ ಇದರಲ್ಲಿ ನಿರ್ಲಕ್ಷ್ಯ ಸಲ್ಲದೆಂದು ಹೇಳಿದೆ. ಆರನೆಯ ಅಂಶದ ಎರಡು ಸಾಲುಗಳಲ್ಲಿ "ಬಾಯಿಲಿಂದೆ ಕೆಟ್ಟ ಮಾತುಗಳನ್ನಾಡದೇ ಯಾವತ್ತು ಒಳ್ಳೆಯ ಮಾತುಗಳನ್ನು ಆಡಬೇಕು ಮತ್ತು ಯಾರನ್ನಾಗಲಿ ಕೆಟ್ಟ ನುಡಿಗಳಿಂದ ನಿಂದಿಸಬಾರದು" ಎಂದು ಹೇಳಿದೆ. ದುಷ್ಟ ಮತ್ತು ನೀಚ ಹುಡುಗರ ಸಹವಾಸ ಮಾಡದೇ ಉತ್ತಮ ಸದ್ಗುಣಿ ಹುಡುಗರ ಸ್ನೇಹ ಮಾಡಬೇಕೆಂದು ಏಳನೆಯ ಅಂಶದ ಒಂದು ಸಾಲಿನಲ್ಲಿ ಹೇಳುವುದರೊಂದಿಗೆ, "ನಿತ್ಯ ೧ ತಾಸಿಗಿಂತಲೂ ಹೆಚ್ಚಿನ ಸಮಯ ಆಟದಲ್ಲಿ ಕಳೆಯದೇ ಅಭ್ಯಾಸದೆಡೆಗೆ ಹೆಚ್ಚಿನ ಗಮನವಿರಲಿ" ಎಂದು ಎಂಟನೆಯ ಅಂಶದ ಒಂದು ಸಾಲಿನಲ್ಲಿ ವಿವರಿಸಿದೆ.

ಹೀಗೆ ದಿನಾಲು ಶಾಲೆಗೆ ಹೋಗಿ ಅಕ್ಷರಗಳನ್ನು ಕಲಿತು ಮೂರು ತಿಂಗಳಲ್ಲಿ ಸ್ವತಃ ತನ್ನ ಅಕ್ಷರದಿಂದ ಬರೆದು ಭಾಲಕಿಗೆ ಪತ್ರ ಹಾಕಬೇಕು ಎಂದು ಒಂಬತ್ತನೆಯ ಅಂಶದ ಎರಡು ಸಾಲುಗಳಲ್ಲಿ ವಿವರಿಸಿದೆ. ಅದೇ ರೀತಿ ಮೂರು ಸಾಲುಗಳನ್ನು ಹೊಂದಿದ ಹತ್ತನೆಯ ಅಂಶದಲ್ಲಿ ನಿತ್ಯ ಬೆಳಿಗ್ಗೆ ಎದ್ದು ಸ್ನಾನ, ಲಿಂಗಾರ್ಚನ, ಮಂತ್ರ-ಜಪವನ್ನು ಮಾಡುವುದರ ವಿನಾ ಊಟ, ಫರಾಳು ಅಲ್ಲದೇ ನೀರನ್ನೂ ಸಹಿತ ಕುಡಿಯುವ ಹಾಗಿಲ್ಲವೆಂದು ತಾಕೀತು ಮಾಡಲಾಗಿದೆ. ಈ ಅಂಶದ ಮೂರನೆ ಸಾಲಿನ ಮಧ್ಯದಲ್ಲಿ ಹಾಳೆಯು ತ್ರುಟಿತಗೊಂಡಿರುವುದರಿಂದ ಕೆಲ ಅಕ್ಷರಗಳು ಅಳಿಸಿಹೋಗಿವೆ. ಇಷ್ಟೆಲ್ಲಾ ಅಂಶಗಳನ್ನು ಹೇಳಿರುವುದಲ್ಲದೇ ಪತ್ರದ ಕೊನೆಯ ಎರಡು ಸಾಲುಗಳಲ್ಲಿ "ಈ ಮೇಲೆ ಬರೆದ ನೇಮಗಳನ್ನು ಸಾರಾಸಾಗಿ ಪಾಲಿಸಿ ಮೇಲಿಂದ ಮೇಲೆ ಭಾಲಕಿಗೆ ಪತ್ರ ಬರೆದು ಕಳಿಸಬೇಕು. ಒಂದು ವೇಳೆ ನೇಮ ಬಿಟ್ಟು ನಡೆದರೆ ಪ್ರತಿ ಒಂದು ಮಾತಿಗೆ ನೂರು ಛಡಿ ಏಟಿನ ಶಿಕ್ಷೆ ಇರುತ್ತದೆ" ಎಂದು ಬರೆಯಲಾಗಿದೆ. ಪ್ರಸ್ತುತ ದಾಖಲು ಪತ್ರದಲ್ಲಿನ ಕನ್ನಡ ಪದಗಳೊಂದಿಗೆ ಮರಾಠಿ ಕೆಲ ಪದಗಳು ಸಮ್ಮಿಳಿತಗೊಂಡಿರುವುದನ್ನು ನಾವು ಗಮನಿಸಬಹುದಾಗಿದೆ.

### ದಾಖಲು ಪತ್ರದ ಪಾಠ

ಓಂ

ಶ್ರೀ ಗುರುವೇ ನಮಃ

ಹುಡುಗರ ಸದವರ್ತನ ನೇಮಗಳು (ಶಿದ್ರಾಮಪ್ಪಾ....ಗಿ)

೧. ಅವ್ವನಾ ಆಜ್ಞಾ ಸರಿಯಾಗಿ ನಡಿಯಬೇಕು. ಆಕಿಯನ್ನು ಯಾವ ರೀತಿ ಇಂದಾಗಲಿ ದುಃಖಲು-ಕುಡಬಾರದು.

೨. ನಿತ್ಯ ನಿಯಮಿತ ವ್ಯಾಳ್ಯಕ್ಕೆ ಸಾಲಿಗೆ ಹೋಗಿ ಲಕ್ಷ ಕೊಟ್ಟು ನಿತ್ಯ ಹೊಸ ಪಾಠಗಳನ್ನು ಕಲಿಬೇಕು. ವ್ಯಾಳ್ಯಾ ವ್ಯರ್ಥವಾಗಿ ಕಳೆಯಬಾರದು.

೩. ಸಾಲೆಯಲ್ಲಿ ಕಲಿತ ಪಾಠಗಳನ್ನು, ನಿತ್ಯ ಮನೆಯಲ್ಲಿ ಬಂದ ಬಳಿಕ ಅವ್ವನನ್ನು ಇಲ್ಲದಿದ್ದರೆ ರುದ್ರಯ್ಯಾ ಅಣ್ಣನನ್ನು ಓದಿ ತೋರಿಸಬೇಕು. ಮರೆಯಬಾರದು.

೪. ಊಟ ಮಾಡುವಾ ವ್ಯಾಳ್ಯಕ್ಕೆ ಮತ್ತು ಸ್ನಾನಾ ಮಾಡುವಾ ವ್ಯಾಳ್ಯಕ್ಕೆ, ಯಾವತ್ತು ನೀನು ವ್ಯರ್ಥವಾಗಿ ಹಟ ಮಾಡಿ ಅವ್ವನನ್ನು ದುಃಖ ಮತ್ತು ಕಷ್ಟ ತ್ರಾಸ ಕುಡತಿರ್ಪಿ ಇದು ವಳ್ಳೆತಲ್ಲ ಯಾವತ್ತು ಹಿರಿಯರು ಹೇಳಿದಂತೆ ಕೇಳಿ ಸುಖ ಕೊಟ್ಟು ಯಲ್ಲರನ್ನು ಪ್ರಿಯನಾಗಿರಬೇಕು.

೫. ಬಟ್ಟೆಗಳನ್ನು ಸ್ವಚ್ಛವಾಗಿ ಇಟ್ಟು ಅದನ್ನು ದುರುಪಯೋಗ ಮಾಡದೆ ಹೆಚ್ಚು ದಿವಸ ಟಿಕಾಸುವಂತೆ ವರ್ತಿಸಬೇಕು. ಇದರಲ್ಲಿ ನಿರ್ಲಕ್ಷ ಆಗಬಾರದು.

೬ ಬಾಯಿಲಿಂದೆ ಯಾವತ್ತು ವಳ್ಳೆ ಭಾಷಣಗಳನ್ನು ಆಡಬೇಕು, ಕೆಟ್ಟ ಭಾಷಣ ಆಡಬಾರದು. ಮತ್ತು ಯಾರನಾಗಲಿ ಕೆಟ್ಟ ನುಡಿಗಳಿಂದೆ ಬಯ್ಯಬಾರದು.

೭ ದುಷ್ಟ ಮತ್ತು ನೀಚ ಹುಡಗರ ಸಹವಾಸ ಮಾಡದೆ ಉತ್ತಮ ಸದ್‌ಗುಣಿ ಹುಡುಗರ ಸ್ನೇಹ ಮಾಡಬೇಕು.

೮. ನಿತ್ಯ ೧ ಒಂದು ತಾಸದಕಿಂತಲು ಜಾಸ್ತ ವ್ಯಾಳ್ಯ ಆಟದಲ್ಲಿ ಹಾಕದೇ ಅಭ್ಯಾಸ ಮಾಡುಬೇಕು.

೯. ಮೂರು ತಿಂಗಳಲ್ಲಿ ಸ್ವತಃ ತನ್ನ ಅಕ್ಷರಲಿಂದೆ ಪತ್ರವನ್ನು ಬರೆದು ಭಾಲಕಿಗೆ ಕಳುಹಿಸಬೇಕು.



೧೦. ನಿತ್ಯ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ, ಲಿಂಗಾರ್ಚನಿ ಮಂತ್ರ ಜಪವನ್ನು ಮಾಡುವದರ ಪಿನ್ಹಾ ಊಟಾ ಫರಾಳು ಆಗರ ನೀರು ಕುಡಿಯೋಣ ಮಾಡಬಾರದು. ಮತ್ತು ಯಾ ವ್ಯಾಳ್ಯಕೆ ಆಗಲಿ ಊಟಾ ಮಾಡುವಾ ವ್ಯಾಳ್ಯಕ್ಕೆ..........ಲಿ......ಇಡಬಾರದು.

ಈ ಮೇಲೆ ಬರೆದ ನೇಮಗಳ ಸರಿಯಾಗಿ ನಡಿದು ಮೇಲಿಂದ ಮೇಲೆ ಭಾಲಕಿಗೆ ಬರಿದು ತಿಳಿಸುಬೇಕು. ನೇಮ ಬಿಟ್ಟು ನಡೆದರೆ ಪ್ರತಿ ವಂದು ಮಾತಿಗೆ ೧೦೦ ನೂರು ಘಟಕೆದ ಶಿಕ್ಷ ಇರುತ್ತದೆ.

೧ P.V.D.

ಡಾ. ಎಂ.ಎಸ್. ಅನಿತ*

# ಸಮಕಾಲೀನರು ಕಂಡಂತೆ ಪಾಶ್ಚಿಮಾತ್ಯ ವೇಷಭೂಷಣಗಳು ಮತ್ತು ಮೈಸೂರು ಸಮಾಜ

ಆಧುನಿಕ ಭಾರತದ ಇತಿಹಾಸವೆಂದರೆ ಪ್ರಧಾನವಾಗಿ ಭಾರತೀಯ ಸಮಾಜವು ಪಾಶ್ಚಿಮಾತ್ಯ ಜಗತ್ತಿನ ಸಂಪರ್ಕದಿಂದ ಅದರಲ್ಲೂ ಪ್ರಮುಖವಾಗಿ ಬ್ರಿಟಿಷ್ ವಸಾಹತು ಆಡಳಿತ ಮತ್ತು ವ್ಯವಸ್ಥೆಯ ನೇರ ಸಂಪರ್ಕದಿಂದ ಪರಿವರ್ತನೆಯ ಹಾದಿಯಲ್ಲಿ ಸಾಗಿತು ಎಂಬುದೇ ಆಗಿದೆ. ಸುಮಾರು ಆರುನೂರಕ್ಕೂ ಹೆಚ್ಚು ಅಸ್ತಿತ್ವದಲ್ಲಿದ್ದ, ಆದರೆ ಬ್ರಿಟಿಷ್ ವಸಾಹತು ಸಾಮ್ರಾಜ್ಯದ ಭಾಗವಾಗಿದ್ದ ದೇಶೀಯ ಸಂಸ್ಥಾನಗಳು ಇಂತಹ ಪಾಶ್ಚಿಮಾತ್ಯ ಪ್ರಭಾವಕ್ಕೆ ಸ್ವಲ್ಪ ತಡವಾಗಿಯೇ ಒಳಗಾದವೆಂಬುದು ಐತಿಹಾಸಿಕ ಸತ್ಯವಾಗಿದೆ. ಆದರೆ ಎಲ್ಲಾ ದೇಶೀಯ ಸಂಸ್ಥಾನಗಳು ಈ ವಿಷಯದಲ್ಲಿ ಸಮಾನತೆಯ ಸ್ಥಾನವನ್ನು ಪಡೆದುಕೊಂಡಿರಲಿಲ್ಲ. ಭಾರತದ ಕೆಲವು ದೇಶೀಯ ಸಂಸ್ಥಾನಗಳು ಮುಖ್ಯವಾಗಿ ೨೦ನೇ ಶತಮಾನದ ಆರಂಭ ಕಾಲದಿಂದ ಭಾರತ ಸ್ವಾತಂತ್ರ್ಯ ಗಳಿಸುವ ಅವಧಿಯವರೆಗೆ ಸಂಪ್ರದಾಯ ಪ್ರಧಾನವಾದ ಸಮಾಜದಿಂದ ಪಾಶ್ಚಿಮಾತ್ಯ ಪ್ರಭಾವಕ್ಕೆ ಒಳಗಾಗಿ ಪರಿವರ್ತನಾಶೀಲತೆಯ ಕಡೆಗೆ ಸಾಗುತ್ತಾ ಬಂದವು. ಅಂತಹ ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವು ಒಂದು. ಆಧುನಿಕತೆಗೆ ಒಲಿಯುತ್ತಾ ಭಾರತೀಯ ಪರಂಪರೆಯ ಬೇರನ್ನು ಬಿಟ್ಟುಕೊಡದ ಮೈಸೂರು ಸಮಾಜದೊಳಗೆ ಪಾಶ್ಚಿಮಾತ್ಯ ವೇಷಭೂಷಣಗಳು ಪ್ರವೇಶಿಸಿದಾಗ ರಾಜರು, ಆಡಳಿತಾಧಿಕಾರಿಗಳು, ವಿದ್ವಾಂಸರು, ಅಧ್ಯಾಪಕರು, ವಿದ್ಯಾರ್ಥಿಗಳಿಂದ ಹಿಡಿದು ಜನಸಾಮಾನ್ಯರ ವರೆಗೂ ಪಾಶ್ಚಿಮಾತ್ಯ ಸಂಸ್ಕೃತಿಯ ಅಳವಡಿಕೆಯ ಬಗ್ಗೆ ಎಂತಹ ಪ್ರತಿಕ್ರಿಯೆಗಳು ಬಂದವು ಎಂಬುದನ್ನು ಕೆಲವು ಸಮಕಾಲೀನ ವಿದ್ವಾಂಸರು ಹಾಗೂ ಪತ್ರಿಕೆಗಳು ತಮ್ಮ ಬರವಣಿಗೆಗಳಲ್ಲಿ ಹೇಗೆ ಅಭಿವ್ಯಕ್ತಗೊಳಿಸಿದ್ದಾರೆ ಎಂಬುದರ ವಿಶ್ಲೇಷಣೆಯ ಸಂಕ್ಷಿಪ್ತ ಪರಿಚಯ ಈ ಪ್ರಬಂಧದಲ್ಲಿದೆ. ಈ ಸಂದರ್ಭದಲ್ಲಿ ಪ್ರಧಾನವಾಗಿ ಸಿ.ಕೆ. ವೆಂಕಟರಾಮಯ್ಯ, ಕೆ. ವಾಸುದೇವಾಚಾರ್ಯರು, ಡಿ.ವಿ. ಗುಂಡಪ್ಪ, ಎಂ.ವಿ. ಸೀತಾರಾಮಯ್ಯ, ಕುವೆಂಪು, ಎ.ಎನ್. ಮೂರ್ತಿರಾಯರು ಇವರ ಕೃತಿಗಳನ್ನು ಹಾಗೂ ವಿಶ್ವಕರ್ನಾಟಕ ದಿನಪತ್ರಿಕೆಯಲ್ಲಿ ದೊರೆತಿರುವ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ. ಇವರ ಬರವಣಿಗೆಗಳಲ್ಲಿ ಪಾಶ್ಚಿಮಾತ್ಯ ವೇಷಭೂಷಣಗಳ ಬಗ್ಗೆ ವ್ಯಕ್ತಗೊಂಡಿರುವ ಪರ ಮತ್ತು ವಿರೋಧಾಭಿಪ್ರಾಯಗಳನ್ನು ಹೆಕ್ಕಿ ತೆಗೆದು ಅವುಗಳಿಗೊಂದು ಚಾರಿತ್ರಿಕ ರೂಪ ಕೊಡುವ ಉದ್ದೇಶವನ್ನು ಈ ಪ್ರಬಂಧ ಒಳಗೊಂಡಿದೆ.

ಮೈಸೂರಿನ ವೇಷಭೂಷಣಗಳ ಪರಿವರ್ತನೆಗೆ ವಸಾಹತು ಆಡಳಿತ ಹಾಗೂ ಪಾಶ್ಚಿಮಾತ್ಯರ ನಡುವಿನ ಸಂಪರ್ಕಗಳು ಕಾರಣವಾದುವು. ಇದರಿಂದ ಜನರು ಸಾರ್ವಜನಿಕವಾಗಿ ಒಂದು ವಸ್ತ್ರ ಧರಿಸಿದರೆ ಖಾಸಗಿಯಾಗಿ ತಮ್ಮದೇ ಆದ ವಸ್ತ್ರಗಳನ್ನು ತೊಡುವ ರೂಢಿ ಅಸ್ತಿತ್ವಕ್ಕೆ ಬಂದಿತು. ಇದಕ್ಕೆ ಉತ್ತಮ ಉದಾಹರಣೆಯಾಗಿ ಅಂದಿನ ಮೈಸೂರು ಸಂಸ್ಥಾನದ ಮಹಾರಾಜರು ಹಾಗೂ ಮೈಸೂರಿನ ಸಾಂಸ್ಕೃತಿಕ ನಾಯಕರು ಆಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ಧರಿಸುತ್ತಿದ್ದ ವೇಷಭೂಷಣಗಳನ್ನು ಕುರಿತಂತೆ ಅವರ ಜೀವನ ಚರಿತ್ರಾಕಾರರಾದ ಸಿ.ಕೆ. ವೆಂಕಟರಾಮಯ್ಯನವರು ಹೀಗೆ ಬರೆದಿದ್ದಾರೆ. ಸ್ವತಃ ನಾಲ್ವಡಿಯವರೇ ಬಾಲ್ಯದಿಂದಲೂ ಅಂಗಿ ಷರಾಯಿ, 'ಫೆಲ್ಟ್' ಟೋಪಿ ಧರಿಸುವುದರಲ್ಲಿ ಆಸಕ್ತರಾಗಿದ್ದರು[1]. ಆನಂತರ ಮೈಸೂರಿನ ವೇಷಭೂಷಣಗಳಿಗೆ ಸಂಕೇತವಾದ ಕೋಟು, ಪ್ಯಾಂಟು ಮುಂತಾದ ಪಾಶ್ಚಿಮಾತ್ಯ ಅಂಶಗಳ ಜೊತೆಗೆ ಮೈಸೂರು ಪೇಟವನ್ನು ಧರಿಸುವ ಮೂಲಕ ವೇಷಭೂಷಣಗಳ ಪರಿವರ್ತನೆಗೆ ಚಾಲನೆ ನೀಡಿ ಎರಡು ಸಂಸ್ಕೃತಿಗಳ ಸಮನ್ವಯಕರಾಗಿ ಪ್ರತಿಬಿಂಬಿಸಿಕೊಂಡರು.

ಯಥಾ ರಾಜ ತಥಾ ಪ್ರಜಾ ಎಂಬ ನಾಣ್ಣುಡಿಯಂತೆ ಮೈಸೂರಿನ ಸರ್ಕಾರಿ ಅಧಿಕಾರಿಗಳಿಗೆ ನಿರ್ದಿಷ್ಟವಾದ ಉಡುಪನ್ನು ನಿಯಮಬದ್ಧಗೊಳಿಸಲಾಗಿತ್ತು[2]. ವಿಶ್ವೇಶ್ವರಯ್ಯ ನವರು ದಿವಾನರಾದ ಮೇಲೆ ಅಧಿಕಾರಿಗಳಲ್ಲಿ, ವಿದ್ಯಾವಂತರಲ್ಲಿ ವೇಷಭೂಷಣಗಳ ಬಗ್ಗೆ ಆಕರ್ಷಣೆ ಹೆಚ್ಚಿತು. ಪ್ರಜಾಪ್ರತಿನಿಧಿ ಸಭೆಯ ತರುಣ ಸದಸ್ಯರಾದ ಹೊಸಕೊಪ್ಪ ಕೃಷ್ಣರಾಯರು ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ವೇಷಭೂಷಣಗಳನ್ನು ಧರಿಸಿ ಪ್ರಜಾಪ್ರತಿನಿಧಿ ಸಭೆಗೆ ಬರುತ್ತಿದ್ದ ಸಂದರ್ಭದಲ್ಲಿ ನೋಡಿದ್ದ ಡಿ.ವಿ. ಗುಂಡಪ್ಪನವರು ತಮ್ಮ ಜ್ಞಾಪಕ ಚಿತ್ರಶಾಲೆ ಎಂಬ ಸರಣಿ ಮಾಲೆಯ ಸಂಪುಟ-

* ಹಿರಿಯ ಶ್ರೇಣಿ ಇತಿಹಾಸ ಉಪನ್ಯಾಸಕರು, ಮಹಾರಾಣಿ ಮಹಿಳಾ ಕಲಾ ಮತ್ತು ವಾಣಿಜ್ಯ ಕಾಲೇಜು, ಮೈಸೂರು.

ರಲ್ಲಿ ಹೀಗೆ ಉಲ್ಲೇಖಿಸಿದ್ದಾರೆ. ಹೊಸಕೊಪ್ಪ ಕೃಷ್ಣರಾಯರು "ಆಗಿನ ಫ್ಯಾಷನ್ ಪ್ರಕಾರ ಉಡುಪು ಧರಿಸಿದ್ದರು. ಅದು ಸೊಗಸಾದ ಉಣ್ಣೆಯ ಸೂಟು, ಮೈಗೊಪ್ಪುವಂತೆ ಹೊಲೆದದ್ದು; ನೆಕ್‌ಟೈ, ಜರಿ ಮಾವಿನಕಾಯಿ ತುಂಬಿದ ಪೊರೆಯಂಥ ಬಿಳಿಯ ಪೇಟ, ಜೇಬಿನಿಂದ ಮೇಲಕ್ಕೆದ್ದು ಕಾಣುವ ರೇಷ್ಮೆಯ ಕರವಸ್ತ್ರ, ವೆಸ್ಟ್‌ಕೋಟಿನ ಜೇಬಿನಲ್ಲಿ ಗಡಿಯಾರ ಅದರಿಂದ ಇನ್ನೊಂದು ಜೇಬಿಗೆ ಸೇರಿದ ಚಿನ್ನದ ಸರಪಳಿ, ಕೈಯಲ್ಲಿ ಉಂಗುರ"[1] ಧರಿಸಿ ಬಂದಿದ್ದರು ಎಂಬುದಾಗಿ ನೈಜವಾಗಿ ಚಿತ್ರಿಸಿದ್ದಾರೆ. ಆದರೆ ಅಂದಿನ ವಿದ್ಯಾ ಇಲಾಖೆಯ ಆಡಳಿತಗಾರರಲ್ಲಿ ಒಬ್ಬರಾಗಿದ್ದ ಸಿ.ಆರ್. ರೆಡ್ಡಿ ಅವರು ಹೇಗೆ ಪೂರ್ಣ ಪ್ರಮಾಣದ ಪಾಶ್ಚಿಮಾತ್ಯೀಕರಣಕ್ಕೆ ಒಳಗಾಗಿದ್ದರೆಂಬುದನ್ನು ಕುರಿತಂತೆ ಕುವೆಂಪುರವರು ತಮ್ಮ ಆತ್ಮಕಥೆ **ನೆನಪಿನ ದೋಣಿಯಲ್ಲಿ** ಹೀಗೆ ಬರೆದಿದ್ದಾರೆ: ಮಲೆನಾಡಿನ ಇಂಗ್ಲಾಂದಿ ಗ್ರಾಮಕ್ಕೆ ಸಿ.ಆರ್. ರೆಡ್ಡಿರವರು ಭೇಟಿ ನೀಡಿದ್ದಾಗ "ಅವರ ವೇಷಭೂಷಣ, ಠೀವಿಗಳು ಹಳ್ಳಿಗರನ್ನು ದಿಗ್‌ಭ್ರಮೆಗೊಳಿಸುವಂತಿದ್ದವು. ಕ್ರಾಪು, ಕನ್ನಡಕ, ಟೈ, ಅತ್ಯಂತ ಬೆಲೆ ಬಾಳುವ ಮಿರುಗು ಬಟ್ಟೆಯ ಕೋಟು, ಷರಾಯಿ, ಬೂಟ್ಸು, ಆಕ್ಸ್‌ಫರ್ಡ್ ಇಂಗ್ಲಿಷ್, ಎಲ್ಲವೂ ಆಕ್ಸ್‌ಫರ್ಡ್"[೪] ಮಯವಾಗಿತ್ತು ಎಂಬುದಾಗಿ ಚಿತ್ರಿಸುತ್ತಾ ಅಂದು ಇಂಗ್ಲಿಷ್ ವಿದ್ಯಾಭ್ಯಾಸ ಪಡೆದು ಅಧಿಕಾರಿಗಳಾಗಿದ್ದವರಲ್ಲಿ ಉಂಟಾಗಿದ್ದ ಬದಲಾವಣೆಯನ್ನು ಗುರುತಿಸುವ ಪ್ರಯತ್ನವನ್ನು ಕುಂವೆಪುರವರು ಮಾಡಿದ್ದಾರೆ. ಮತ್ತೊಂದೆಡೆ 'ಯಂಗ್ ಇಂಡಿಯಾ' ಪತ್ರಿಕೆಯು ಮೈಸೂರಿನ ಅಧಿಕಾರಿಗಳ ವರ್ಣನೆ ಮಾಡುತ್ತಾ "ನಖಕಂಠ ಪರ್ಯಂತವೂ ವಿದೇಶಿ ಉಡುಪನ್ನು ಧರಿಸಿರುವರೆಂಬುದೊಂದು ವಿಷಯ, ನಖಶಿಖವಲ್ಲ, ವಿದೇಶಿ ಉಡುಪೆನ್ನುವುದು ಕಂಠದವರೆಗೂ ಬಂದಿದೆ; ತಲೆಯ ಮೇಲೆ ಹೊದೆಯುವುದು ವಿದೇಶಿ ಮಾಲಾದರೂ ಮೈಸೂರಿನ ರುಮಾಲು. ಅಷ್ಟೇ ನಮಗೆ ಉಳಿದಿರುವುದು"[೫] ಎಂಬುದಾಗಿ ಮೈಸೂರಿನ ವೇಷಭೂಷಣಗಳಲ್ಲಿನ ಪಾಶ್ಚಿಮಾತ್ಯ ಪ್ರಭಾವದ ಬಗ್ಗೆ ಟೀಕೆಯನ್ನು ಮಾಡಿದೆ. ಹಾಗೆಯೇ ಮದರಾಸ್ ಪ್ರಾಂತ್ಯಗಳಲ್ಲಿ ಸಹ ಮೈಸೂರಿನ ದರ್ಬಾರುಗಳಲ್ಲಿ ವಿದ್ವಾಂಸರುಗಳಿಗೆ ಧರಿಸುತ್ತಿದ್ದ ವೇಷಭೂಷಣದ ಬಗ್ಗೆ ಕೂಡ ಕೆಲವು ಟೀಕೆಗಳು ಕೇಳಿಬರುತ್ತಿದ್ದವು. ಅಂತಹವುಗಳಲ್ಲಿ ಕೆ. ವಾಸುದೇವಾಚಾರ್ಯರ ಗುರುಗಳಾಗಿದ್ದ ಪಟ್ಟಣಂ ಸುಬ್ರಹ್ಮಣ್ಯರವರು ಮಾಡಿರುವ ಟೀಕೆಯನ್ನು ಕೆ. ವಾಸುದೇವಾಚಾರ್ಯರು **ನೆನಪುಗಳು** ಎಂಬ ಕೃತಿಯಲ್ಲಿ ಹೀಗೆ ಉಲ್ಲೇಖಿಸುತ್ತಾರೆ: ನನ್ನ ಗುರುಗಳಾದ ಪಟ್ಟಣಂ ಸುಬ್ರಹ್ಮಣ್ಯರವರು "ಮೈಸೂರು ಮೊದಲಿನಿಂದಲೂ ಕಲೆಯ ಬೀಡಾಗಿದೆ" ಎಂದು ಪ್ರಶಂಸಿಸುತ್ತಿದ್ದರು. ಆದರೆ ಒಮ್ಮೆ ಅವರು "ನಿಮ್ಮೂರು ಎಲ್ಲ ದೃಷ್ಟಿಯಿಂದಲೂ ಸರಿ ವಾಸು, ಒಂದು ಮಾತ್ರ ಭಯಂಕರ" ಎಂದರು. ನಾನು ಬೆರಗಾದೆ "ಆ ಕರಿಯ ಅಂಗಿಯೊಳಗೆ ಮೈಯನ್ನು ಬಲವಂತವಾಗಿ ತುರುಕಿ, ಸೊಂಟಕ್ಕೆ ಬಿಗಿದು ಕಟ್ಟಿ, ತಲೆಯ ಮೇಲೆ ಕೊಡದ ಗಾತ್ರ ಪೇಟವನ್ನಿಟ್ಟು ಯಜ್ಞ ಪಶುವಿನಂತೆ ಹಿಡಿದುಕೊಂಡು ಹೋಗಿ ದೊರೆಗಳ ಮುಂದೆ ಕೂಡಿಸಿ 'ಹಾಡು' ಎನ್ನುತ್ತಾರಲ್ಲ; ಅದು ಅತಿ ಭಯಂಕರ ಅನುಭವ ವಾಸು ! ಈಗಲೂ ಮೈ ಬೆವರುತ್ತೆ ಅದನ್ನು ಜ್ಞಾಪಿಸಿಕೊಂಡರೆ" ಎಂದು ನಕ್ಕರು[೬]. ಹೀಗೆ ಮೈಸೂರು ರಾಜಾಸ್ಥಾನದ ಗಂಭೀರತೆ ಮತ್ತು ಭೂಷಣವನ್ನು ಹೆಚ್ಚಿಸಲು ಅಳವಡಿಸಿಕೊಂಡ ಪಾಶ್ಚಿಮಾತ್ಯ ಪ್ರಭಾವದ ವೇಷಭೂಷಣಗಳು ಇಲ್ಲಿನ ಸ್ಥಳೀಯ ಹವಾಗುಣಕ್ಕೆ ಹೊಂದಿಕೊಳ್ಳುವುದಿಲ್ಲ ಎಂಬುದನ್ನು ಮೈಸೂರಿನ ಆಡಳಿತಾಧಿಕಾರಿಗಳು ಅರಿಯದವರಾಗಿದ್ದರು ಎಂಬ ಅಂಶವು ಅವರ ಮಾತಿನಲ್ಲಿ ವ್ಯಕ್ತಗೊಂಡಂತಿದೆ. ಆದರೆ ರಾಷ್ಟ್ರೀಯತೆ ವಿದ್ಯಾವಂತರಲ್ಲಿ ತೀವ್ರಗೊಂಡಾಗ ರಾಜಪ್ರಭುತ್ವವನ್ನು ಆ ಮೂಲಕ ಬ್ರಿಟಿಷರನ್ನು ವಿರೋಧಿಸಲು ವಿದ್ಯಾವಂತರು ಮುಂದಾದಾಗ ಸರ್ಕಾರ ನಿಯಮಗೊಳಿಸಿದ ವೇಷಭೂಷಣಗಳನ್ನು ತಿರಸ್ಕರಿಸುವ ಮೂಲಕ ವಿದ್ಯಾವಂತರು ತಮ್ಮ ವಿರೋಧವನ್ನು ವ್ಯಕ್ತಪಡಿಸಲಾರಂಭಿಸಿದರು. ಕಾರಣ ಮೈಸೂರಿನ ಸರ್ಕಾರಿ ಅಧಿಕಾರಿಗಳಿಗೆ ನಿರ್ದಿಷ್ಟವಾದ ಉಡುಪುಗಳನ್ನು ನಿಯಮಬದ್ಧಗೊಳಿಸಿದಾಗ ಸರ್ಕಾರದ ಇಲಾಖೆಯ ಭಾಗವಾಗಿದ್ದ ವಿಶ್ವವಿದ್ಯಾನಿಲಯದ ಅಧ್ಯಾಪಕರೆಲ್ಲಾ ಸರ್ಕಾರಿ ನೌಕರರಾಗಿದ್ದರಿಂದ ಕೋಟು, ಪಂಚೆ ಅಥವಾ ಷರಾಯಿ ಪೇಟ ಹಾಕಿಕೊಂಡೇ ಕಾಲೇಜಿಗೆ ಹೋಗಬೇಕೆಂಬ ಕಟ್ಟುನಿಟ್ಟಾದ ನಿಯಮವಿತ್ತು[೭]. ಈ ವಿಷಯದಲ್ಲಿ ಪ್ರಸಿದ್ಧ ವಿದ್ವಾಂಸರಾಗಿದ್ದ ಬಿ.ಎಂ. ಶ್ರೀಕಂಠಯ್ಯ, ಎನ್.ಎಸ್. ಸುಬ್ಬರಾಯರು ಬಟ್ಟೆಬರೆಗಳ ವಿಷಯದಲ್ಲಿ ಬಹಳ ಕಟ್ಟುನಿಟ್ಟಾಗಿದ್ದು ಗರಿಮುರಿಯಾದ ಸೂಟು, ರುಮಾಲುಗಳನ್ನು ಧರಿಸಿಕೊಂಡು ಬರುತ್ತಿದ್ದರು. ಕಾಲೇಜಿನ ಅಧ್ಯಾಪಕರು ಪಾಠ ಹೇಳಲು ಹೋಗುವಾಗ ಗೌನು ಹಾಕಿಕೊಂಡೇ ಹೋಗುವುದು ಪದ್ಧತಿ ಮಾತ್ರವಾಗಿರದೆ ನಿಯಮವೂ ಆಗಿತ್ತು[೮]. ಆದರೆ ಪೇಟವನ್ನು ತೊರೆದು, ಕ್ರಾಪಿನಲ್ಲಿಯೇ ಕಾಲೇಜಿಗೆ ಹೋಗುವ ಕ್ರಾಂತಿಕಾರಕ ಧೈರ್ಯವನ್ನು ಆರಂಭಿಸಿದ್ದು ಕುವೆಂಪುರವರು. ಅದು ಇತರ ಅಧ್ಯಾಪಕರಿಗೆ ಮೇಲ್ಪಂಕ್ತಿಯಾಯಿತು. ಹಾಗೆಯೇ ತರಗತಿಗೆ ಪಾಠ ಹೇಳಲು ಹೋಗುವಾಗ ಗೌನನ್ನು ಬಳಸುವುದನ್ನು ಬಿಟ್ಟರು[೯]. ಹೀಗೆ ಅಧ್ಯಾಪಕ ವೃಂದದಲ್ಲಿ ಪಾಶ್ಚಿಮಾತ್ಯ ಸಂಸ್ಕೃತಿಯ ವೇಷಭೂಷಣಗಳ ಬಗ್ಗೆ ವಿಭಿನ್ನ ಪ್ರತಿಕ್ರಿಯೆಗಳು ಮೂಡಲಾರಂಭಿಸಿದಾಗ ವಿದ್ಯಾವಂತ ಯುವಕರಲ್ಲೂ ಕೆಲ

ಬದಲಾವಣೆಗಳು ಕಾಣಿಸಿಕೊಂಡದ್ದು ಸರ್ವೇಸಾಮಾನ್ಯವಾಗಿತ್ತು. ೧೯೧೬-೧೭ರ ಸುಮಾರಿನಲ್ಲಿ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಶೇ. ೮-೧೦ ಜನ ಮಾತ್ರ ಷರಾಯಿ ತೊಟ್ಟು ಉಳಿದವರು ಲುಂಗಿ ಸುತ್ತಿಕೊಂಡು ಅಂಗಿ ಹಾಕಿಕೊಂಡು ಬರುತ್ತಿದ್ದರು. ತಲೆಯ ಮೇಲೊಂದು ಟೋಪಿ, ಕೆಲವರು 'ಕ್ರಿಸ್ಟೀಸ್ ಲಂಡನ್' ಎಂಬ ಕಂಪನಿಯವರು ತಯಾರಿಸುತ್ತಿದ್ದ ಫೆಲ್ಟ್ ಟೋಪಿಯನ್ನೂ, ಬಹುಪಾಲು ಜನ ಹಾಸನದ ಟೋಪಿಯನ್ನು ಧರಿಸುತ್ತಿದ್ದರು[೧೦]. ಇದಕ್ಕೆ ರಾಷ್ಟ್ರೀಯತೆಯ ಪ್ರಭಾವ, ಆರ್ಥಿಕ ಅಸಮರ್ಪಕತೆಗಳು ಕೂಡ ಕಾರಣವಾಗಿರಬಹುದು. ಹೀಗೆ ಮೈಸೂರು ಸಂಸ್ಥಾನದಲ್ಲಿ ಪಾಶ್ಚಿಮಾತ್ಯ ಪ್ರಭಾವದಿಂದಾಗಿ ವೇಷಭೂಷಣಗಳ ಬಗ್ಗೆ ಜನಸಾಮಾನ್ಯರಲ್ಲಿದ್ದ ಅಭಿಪ್ರಾಯವನ್ನು ಕುವೆಂಪುರವರು ನಗರದ "ವೇಷಭೂಷಣ ನಮ್ಮ ಹಳ್ಳಿಗರ ರೀತಿಯಿಂದ ಪ್ರತ್ಯೇಕವಾಗಿದ್ದು, ಪಟ್ಟಣದ ನಾಗರಿಕತೆಯ ಶೋಭೆಯಿಂದ ನಮ್ಮ ಶ್ಲಾಘನೆಗೆ ಒಳಗಾಗಿ ಆಕರ್ಷಣೀಯವಾಗಿತ್ತು"[೧೧] ಎಂಬುದಾಗಿ ವಿವರಿಸುತ್ತಾ ಅಂದಿನ ಜನರ ಮನದಾಳದಲ್ಲಿ ಪಾಶ್ಚಿಮಾತ್ಯ ವೇಷಭೂಷಣಗಳ ಬಗ್ಗೆ ಇದ್ದ ಅಭಿಪ್ರಾಯಗಳನ್ನು ಮನವರಿಕೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ.

ವೇಷಭೂಷಣಗಳು ಬದಲಾದ ಹಾಗೆ ತಲೆಯ ಕೂದಲನ್ನು ಕತ್ತರಿಸಿ ಕ್ರಾಪು ಕಟಿಂಗ್ ಮಾಡಿಸಿಕೊಳ್ಳುವುದು ಆಧುನಿಕ ಕೇಶಾಲಂಕಾರದ ಲಕ್ಷಣವಾಯಿತು. ಕ್ರೈಸ್ತ ಮಿಷನರಿಗಳ ಮಾಸ್ಟರುಗಳು "ಜಿಟ್ಟದ್ದ ಕ್ರಾಪು ! ಅವರು ಎಣ್ಣೆ ಹಾಕಿ ಬಾಚಿ ಬೈತಲೆ ತೆಗೆದರೆಂದರೆ, ಮುಂದಲೆ ಚೌರ ಮಾಡಿಸಿಕೊಂಡು ಹಿಂದಲೆ ಜುಟ್ಟು ಬಿಟ್ಟಿದ್ದ ನಮ್ಮ ತಲೆಗಳು ನಾಚಿ ಮೂಲೆ ಸೇರುವಂತಾಗುತ್ತಿತ್ತು. ಅವರ ಕ್ರಾಪನ್ನೇ ನೋಡಿ ನೋಡಿ ಕರುಬಿ ನಮ್ಮ ತಲೆಗಳನ್ನು ಏತಕ್ಕೆ ಹಾಗೆ ಚೌರ ಮಾಡಿಸಿಕೊಳ್ಳಬಾರದು ಎಂದು ಮತೀಯ ಕ್ರಾಂತಿಭಾವವೋ ಎಂಬಂಥ ಒಂದು ಭಯಂಕರ ಮನೋಭಾವ ಇಣುಕುತ್ತಿತ್ತು"[೧೨] ಎಂದು ಉಲ್ಲೇಖಿಸಿರುವ ಕುವೆಂಪುರವರ ಅಭಿಪ್ರಾಯಗಳು ಅಂದಿನ ಕಾಲದ ವಿದ್ಯಾವಂತರಲ್ಲಿ ಸಾಂಪ್ರದಾಯಿಕ ಜುಟ್ಟು ಬಿಡುವುದರಿಂದ ಮುಕ್ತಗೊಂಡು ಕ್ರಾಪು ಕಟಿಂಗ್ [illegible] ಆಕಾಂಕ್ಷೆಯನ್ನು ಕಾಣಬಹುದು.

ಕ್ರಾಪ್‌ಕಟ್ ಮಾಡಿಸಿಕೊಳ್ಳುವುದು ನವನಾಗರಿಕತೆಯು ಅರ್ಥಾತ್ ಪಾಶ್ಚಿಮಾತ್ಯೀಕರಣದ ಲಕ್ಷಣವೆಂದೇ ಆ ಕಾಲದಲ್ಲಿ ಭಾವಿಸಲಾಗಿತ್ತು ಎಂಬುದು ಎಂ.ವಿ. ಸೀತಾರಾಮಯ್ಯನವರ 'ಜೀವನ ನಾಟಕ' ಎಂಬ ಕೃತಿಯ ಈ ಉಲ್ಲೇಖದಿಂದ ಹೀಗೆ ಸ್ಪಷ್ಟಗೊಳ್ಳುತ್ತದೆ "ನವ ನಾಗರಿಕತೆಯ ನಾಗಾಲೋಟದ ಬೆನ್ನೇರಲು ಸಾಹಸ ಪಟ್ಟಿರುವುದೂ (ಬ್ರಾಹ್ಮಣರ ಅಗ್ರಹಾರದ) ನಮ್ಮ ಬೀದಿಯೇ ; ಜುಟ್ಟು ಜನಿವಾರಗಳ ಹೆಚ್ಚಳದ ಕಾಲದಲ್ಲಿ ಮೊದಲು 'ಕ್ರಾಪ್‌ಕಟ್' ಮಾಡಿಸಿಕೊಂಡವರು ನಮ್ಮ ಬೀದಿಯ ಒಬ್ಬಿಬ್ಬರು ದಿಟ್ಟ ತರುಣರು ; (ಇವರಲ್ಲಿ ನಾನೂ ಒಬ್ಬ)"[೧೩]

ಹೀಗೆ ೧೯ ಮತ್ತು ೨೦ನೇ ಶತಮಾನದ ಭಾರತದಲ್ಲಿ ಬ್ರಿಟಿಷ್ ವಸಾಹತು ಶಾಹಿಯ ಆಳ್ವಿಕೆಯ ಪರಿಣಾಮವಾಗಿ ಮೈಸೂರು ಸಮಾಜದ ವೇಷಭೂಷಣಗಳ ವಿಚಾರದಲ್ಲಿ ರಾಜರಿಂದ ಹಿಡಿದು ಜನಸಾಮಾನ್ಯರವರೆಗೂ ಆಧುನಿಕತೆಯತ್ತ ಒಲಿಯುತ್ತಾ, ಭಾರತೀಯ ಪರಂಪರೆಯ ಬೇರನ್ನು ಬಿಟ್ಟುಕೊಡದ ಕೆಲವರು ಹಾಗೂ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಸಂಘರ್ಷದ ನಡುವೆಯು ಕೆಲವರು ಸಮನ್ವಯತೆಯನ್ನು ಕಾಪಾಡಿಕೊಂಡು ಬರುವ ಮೂಲಕ ನವನಾಗರಿಕತೆಗೆ ತೆರೆದುಕೊಂಡರು. ಅದು 'ನಗರ ಸಂಸ್ಕೃತಿ'ಯ ಶೋಭೆಯು ಚೆನ್ನೆಯಾಗಿ ಬೆಳವಣಿಗೆ ಹೊಂದಲಾರಂಭಿಸಿತು.

## ಆಧಾರಸೂಚಿ


೧. ವೆಂಕಟರಾಮಯ್ಯ ಸಿ.ಕೆ., ೧೯೪೧, ಆಳಿದ **ಮಹಾಸ್ವಾಮಿಯವರು ಶ್ರೀ ಮನ್ಮಹಾರಾಜ ನಾಲ್ವಡಿ ಒಡೆಯರ ಜೀವನ ಚರಿತ್ರೆ,** ಬೆಂಗಳೂರು, ಪು. ೮೩-೮೪.
೨. ಕುವೆಂಪು., ೨೦೦೫, **ನೆನಪಿನ ದೋಣಿಯಲ್ಲಿ** (ಆತ್ಮಕಥೆ), ಉದಯರವಿ ಪ್ರಕಾಶನ, ಮೈಸೂರು, ಪು. ೬೫೦.
೩. ಗುಂಡಪ್ಪ ಡಿ.ವಿ., ೧೯೯೯, **ಜ್ಞಾಪಕ ಚಿತ್ರಶಾಲೆ,** ಸಂ. ೧, ಕಾವ್ಯಾಲಯ ಪ್ರಕಾಶನ, ಮೈಸೂರು, ಪು. ೧೭೩.
೪. ಕುವೆಂಪು, ಪೂರ್ವೋಕ್ತ, ಪು. ೯೦.
೫. **ವಿಶ್ವಕರ್ನಾಟಕ.,** ದಿನಪತ್ರಿಕೆ, ದಿನಾಂಕ ೫-೬-೧೯೨೭, ಕಾಲಂ ೨, ಪು. ೨.
೬. ವಾಸುದೇವಾಚಾರ್ಯ ಕೆ., ೨೦೦೧, **ನೆನಪುಗಳು,** ಕಾವ್ಯಾಲಯ ಪ್ರಕಾಶನ, ಪು. ೯೨-೯೩.
೭. ಕುವೆಂಪು, ಪೂರ್ವೋಕ್ತ, ಪು. ೬೫೦.
೮. ಮೂರ್ತಿರಾವ್ ಎ.ಎನ್., ೨೦೦೧, **ಚಿತ್ರಗಳು ಪತ್ರಗಳು,** ಡಿ.ವಿ.ಕೆ. ಮೂರ್ತಿ, ಮೈಸೂರು, ಪು. ೪೩.
೯. ಅದೇ.,
೧೦. ಅದೇ., ಪು. ೩೭-೩೮.
೧೧. ಕುವೆಂಪು., ಪೂರ್ವೋಕ್ತ, ಪು. ೧೬೮.
೧೨. ಅದೇ., ಪು. ೨೨.
೧೩. ಸೀತಾರಾಮಯ್ಯ ಎಂ.ವಿ., ೧೯೭೧, **ಜೀವನ ನಾಟಕ,** ರಾಘವ ಪ್ರಕಾಶನ, ಬೆಂಗಳೂರು, ಪು. ೨-೪.

ಡಾ. ಬಿ.ವಿ. ಸುಧಾಮಣಿ*

# ಜಟ್ಟಿಕಾಳಗ – ಮೈಸೂರಿನ ಒಡೆಯರ ಪ್ರೋತ್ಸಾಹ

ಪ್ರಾಚೀನ ಕಾಲದಿಂದಲೂ ನಮ್ಮ ದೇಶದ ಗ್ರಾಮೀಣರ ಬದುಕಿನಲ್ಲಿ ಹಾಸುಹೊಕ್ಕಾಗಿದ್ದ ಪುರುಷ ಕ್ರೀಡೆಗಳಲ್ಲಿ 'ಕುಸ್ತಿ' ಪ್ರಮುಖವಾದುದು. ಪ್ರತೀ ಗ್ರಾಮದಲ್ಲೂ ಕುಸ್ತಿಯಾಳುಗಳು ಅಂಗಸಾಧನೆ ಮಾಡುವ ಸಲುವಾಗಿ 'ಗರಡಿ'[೧] ಮನೆಗಳು ಇರುತ್ತಿದ್ದವು. ಗರಡಿ ಅಭ್ಯಾಸ ಮಾಡುವ ಸ್ಥಳಕ್ಕೆ 'ಮಟ್ಟಿ'[೨] ಎಂಬುದಾಗಿಯೂ, ಸ್ಪರ್ಧೆ ಮಾಡುವ ಸ್ಥಳಕ್ಕೆ 'ಅಖಾಡ' ಅಥವಾ 'ಗೋದಾ'[೩] ಎಂಬುದಾಗಿಯೂ ಕರೆಯಲಾಗುತ್ತದೆ. ಹಿಂದೆ ಸೈನಿಕರಿಗೆ ಕಡ್ಡಾಯವಾಗಿ ಗರಡಿ ಶಿಕ್ಷಣ ಕೊಡಿಸಲಾಗುತ್ತಿತ್ತು. ಬಹುಶಃ ಸೈನಿಕರನ್ನು ನೇಮಿಸಿ ಕೊಳ್ಳುವಾಗ ಗರಡಿ ಮನೆಗಳಲ್ಲಿ ಸಾಧನೆ ಮಾಡಿದವರಿಗೆ ಅವರ ಸಾಮರ್ಥ್ಯವನ್ನು ಪರಿಗಣಿಸಿ ಆದ್ಯತೆ ನೀಡುತ್ತಿದ್ದರೆಂದು ತೋರುತ್ತದೆ. 'ಕುಸ್ತಿ'ಯನ್ನು 'ಮಲ್ಲಯುದ್ಧ', 'ಜಟ್ಟಿಕಾಳಗ' ಎಂಬುದಾಗಿಯೂ ಕರೆಯಲಾಗುತ್ತದೆ. ಈ ಕ್ರೀಡೆಗೆ ಒಂದು ನಿರ್ದಿಷ್ಟ ನೆಲೆ ದೊರೆತದ್ದು ವಿಜಯನಗರದ ಅರಸರ ಕಾಲದಲ್ಲಿ. ವಿಜಯನಗರ ಸಾಮ್ರಾಜ್ಯದಲ್ಲಿ ಮಹಾನವಮಿ ಆಚರಣೆ ಒಂಭತ್ತು ದಿನಗಳ ಕಾಲ ಅತ್ಯಂತ ವಿಜೃಂಭಣೆಯಿಂದ ನಡೆಯುತ್ತಿತ್ತು. ಆ ಸಂದರ್ಭದಲ್ಲಿ ನಡೆಸುತ್ತಿದ್ದ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳು ಆಹ್ವಾನಿತರಿಗೆ, ನೆರೆದಿದ್ದ ಜನರಿಗೆ ಮನರಂಜನೆ ನೀಡುತ್ತಿದ್ದವು. ಅಂತಹ ಕಾರ್ಯಕ್ರಮಗಳಲ್ಲಿ 'ಜಟ್ಟಿಕಾಳಗ'ಕ್ಕೆ ವಿಶೇಷ ಆದ್ಯತೆ ಇತ್ತು. ವಿದೇಶಿಯರ ಬರವಣಿಗೆಗಳಲ್ಲಿ ತಿಳಿದುಬರುವಂತೆ ಮಹಾಸಾಮಂತರಿಗೂ ದೊರಕದ ಸವಲತ್ತು ಸಲಿಗೆಯನ್ನು ಇವರಿಗೆ ನೀಡಲಾಗಿತ್ತು.[೪] ಮಹಾನವಮಿಯ ಸಂದರ್ಭದಲ್ಲಿ ನಡೆಯುತ್ತಿದ್ದ ಮಧ್ಯಾಹ್ನದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅರಮನೆಯ ಒಳಕ್ಕೆ ಬಿಡುವಾಗ ಜಟ್ಟಿಗಳಿಗೂ, ವಾರಾಂಗನೆಯರಿಗೂ ಪ್ರಥಮ ಆದ್ಯತೆ ನೀಡಲಾಗಿತ್ತು, ಹಾಗೂ ಅರಸನ ಮುಂದೆ ಕುಳಿತುಕೊಳ್ಳುವ ಅವಕಾಶವೂ ಇವರಿಗಿತ್ತು.[೫]

'ಕುಸ್ತಿ' ಕ್ರೀಡೆಯು ವಿಜಯನಗರದ ಅರಸರ ಆಶ್ರಯ ಪಡೆದಿತ್ತು. ಸ್ವತಃ ಅರಸರೂ ಕೂಡ ಕುಸ್ತಿಪಟುಗಳಾಗಿದ್ದರು. ಕೃಷ್ಣದೇವರಾಯನು ಪ್ರತಿದಿನ ಬೆಳಿಗ್ಗೆ ಮೈಗೆಲ್ಲಾ ಎಣ್ಣೆ ಹಚ್ಚಿಸಿಕೊಂಡು ಕುಸ್ತಿ ಮಾಡುತ್ತಿದ್ದುದಾಗಿ ತಿಳಿದುಬಂದಿದೆ. ಮಹಾನವಮಿ ಸಂದರ್ಭದಲ್ಲಿ ನಡೆಸುತ್ತಿದ್ದ ಜಟ್ಟಿಕಾಳಗ ಸ್ಪರ್ಧೆಯಲ್ಲಿ ೧೦೦೦೦ ಜಟ್ಟಿಗಳು ಭಾಗವಹಿಸುತ್ತಿದ್ದರೆಂದು ವಿದೇಶೀಯರು ದಾಖಲಿಸಿದ್ದಾರೆ. ಜಟ್ಟಿಗಳು ವರ್ಷಪೂರ್ತಿ ಸಾಧನೆ ಮಾಡುತ್ತಿದ್ದರು, ಅವರು ಮತ್ತಾವುದೇ ಕೆಲಸಗಳನ್ನು ಮಾಡುತ್ತಿರಲಿಲ್ಲ. ಅರಸರು ಜಟ್ಟಿಗಳನ್ನು ಸಾಕುತ್ತಿದ್ದುದಾಗಿ ಹೇಳಲಾಗಿದೆ.

ವಿಜಯನಗರ ಸಾಮ್ರಾಜ್ಯದ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸುವುದರ ಜೊತೆಗೆ ಅದನ್ನು ಬೆಳೆಸಿ ಅಭಿವೃದ್ಧಿಗೊಳಿಸಿದ ಕೀರ್ತಿ ಅವರ ಸಾಮಂತರಾಗಿದ್ದ ಮೈಸೂರಿನ ಅರಸರಿಗೆ ಸಲ್ಲುತ್ತದೆ. ಪ್ರಸ್ತುತ ಲೇಖನದಲ್ಲಿ ಜಟ್ಟಿ ಕಾಳಗಕ್ಕೆ ಮೈಸೂರಿನ ಒಡೆಯರು ನೀಡಿದ್ದ ಪ್ರೋತ್ಸಾಹ ಕುರಿತು ಚರ್ಚಿಸಲಾಗುವುದು. ಲೇಖನ ರಚನೆಗೆ ಸಮಕಾಲೀನ ಕವಿ ಗೋವಿಂದ ವೈದ್ಯ ರಚಿಸಿರುವ 'ಕಂಠೀರವ ನರಸರಾಜ ವಿಜಯಂ' ಹಾಗೂ ಕವಿ ನೂರೊಂದ ರಚಿಸಿರುವ 'ಸೌಂದರ ಕಾವ್ಯ' ಕೃತಿಗಳನ್ನು ಹಾಗೂ ದಸರಾ ಕಡತಗಳು ಮತ್ತು ಆನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ.

ಮೈಸೂರಿನ ಆರಂಭದ ಒಡೆಯರಲ್ಲಿ ಒಂದನೇ ರಾಜ ಒಡೆಯರು ಪ್ರಮುಖರು. ಇವರು ಕ್ರಿ.ಶ. ೧೬೧೦ರಲ್ಲಿ ವಿಜಯನಗರದ ಅರಸರ ಪ್ರತಿನಿಧಿ ಶ್ರೀರಂಗರಾಯನಿಂದ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡು ಮೈಸೂರಿನಿಂದ ರಾಜಧಾನಿಯನ್ನು ಶ್ರೀರಂಗಪಟ್ಟಣಕ್ಕೆ ವರ್ಗಾಯಿಸಿದರು. ಆ ವರ್ಷವೇ ವಿಜಯನಗರದ ಅರಸರು ನಡೆಸುತ್ತಿದ್ದ ಮಹಾನವಮಿ ಉತ್ಸವಾಚರಣೆಯನ್ನು ಅದೇ ವೈಭವ ವಿಜೃಂಭಣೆಗಳಿಂದ ನಡೆಸಲು ತೀರ್ಮಾನಿಸಿ, ಎಂತಹ ಸಂದರ್ಭದಲ್ಲೂ ಮಹಾನವಮಿ ಉತ್ಸವವನ್ನು ಮುಂದುವರೆಸಿಕೊಂಡು ಹೋಗಬೇಕೆಂಬ ಕಟ್ಟಳೆಯನ್ನು ಹೊರಡಿಸಿದರು.[೬] ಆ ಪ್ರಕಾರ ೧೬೧೦ರಲ್ಲಿ ಆರಂಭಗೊಂಡ ಮಹಾನವಮಿ ಉತ್ಸವದಲ್ಲಿ ಜಟ್ಟಿಕಾಳಗ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಈ ಸ್ಪರ್ಧೆ ಮಹಾನವಮಿ ಉತ್ಸವದ ವಿಶೇಷ ಕಾರ್ಯಕ್ರಮವಾಗಿದ್ದು ಸಂಸ್ಥಾನದ ಹೊರಗಿನಿಂದಲೂ ಉತ್ತಮ ಕುಸ್ತಿ ಪಟುಗಳನ್ನು ಆಹ್ವಾನಿಸಲಾಗುತ್ತಿತ್ತು. ಈ

*# ೨೯೯, 'ಕಮಲ ಜ್ಯೋತಿ', ೧೨ನೇ ಕ್ರಾಸ್, ವಿಜಯನಗರ, ರೈಲ್ವೆ ಲೇಔಟ್, ಮೈಸೂರು – ೫೭೦ ೦೧೬.

ಸ್ಪರ್ಧೆಯು ಅರಸರ, ಸಾಮಂತರ ಹಾಗೂ ಎಲ್ಲಾ ಆಹ್ವಾನಿತರ ಸಮ್ಮುಖದಲ್ಲಿ ನಡೆಯುತ್ತಿತ್ತು ; ಗೆದ್ದ ಮಲ್ಲರಿಗೆ ಸ್ವತಃ ಅರಸರೇ ಬಹುಮಾನ ನೀಡುತ್ತಿದ್ದರು. ಹಾಗಾಗಿ ಈ ಸ್ಪರ್ಧೆ ಪ್ರತಿಷ್ಠೆಯ ಪ್ರತೀಕವೂ ಆಗಿತ್ತು. ಕ್ರಮೇಣ ಇದು ಮಹಾನವಮಿ ಸಂದರ್ಭದ ಒಂದು ಪ್ರಮುಖ ಆಕರ್ಷಣೆಯಾಗಿ ಮಾರ್ಪಟ್ಟಿತು.

ದಾಖಲೆಗಳ ಪ್ರಕಾರ ರಾಜಒಡೆಯರ ಕಾಲದಲ್ಲಿ ಮಹಾನವಮಿ ಕಳೆದು ವಿಜಯದಶಮಿಯ ದಿವಸ ಆಯುಧಗಳಿಗೆ ಉತ್ತರ ಪೂಜೆ ಮಾಡಿದ ನಂತರ ಓಲಗ (ದರ್ಬಾರು) ಮುಜುರೆ ನಡೆಯುವ ಸಮಯದಲ್ಲಿ ಆಯುಧಗಳ ಎದುರಿಗೆ ರಕ್ತ ಬೀಳುವಂತೆ ಜಟ್ಟಿಕಾಳಗ ನಡೆಸಲಾಗುತ್ತಿತ್ತು.[೭] ಬಹುಶಃ ರಾಜಒಡೆಯರು ವಿಜಯದಶಮಿ ದಿವಸ ಸಾಂಕೇತಿಕವಾಗಿ ದಿಗ್ವಿಜಯಕ್ಕೆ ಹೊರಡುತ್ತಿದ್ದುದರ ಸೂಚ್ಯವಾಗಿ ಆಯುಧಗಳಿಗೆ 'ಬಲಿ' ನೀಡಿ ರಕ್ತ ಸುರಿಸುವ ಸಂಕೇತ ಇದಾಗಿದ್ದಿರಬೇಕು.

ಒಂದನೇ ಕಂಠೀರವ ನರಸರಾಜ ಒಡೆಯರು ಸ್ವತಃ ದಕ್ಷ ಕುಸ್ತಿಪಟು ಎನಿಸಿದ್ದರು. ಇವರು ಪಟ್ಟಾಭಿಷೇಕಕ್ಕೆ ಮುನ್ನ ತೆರಕಣಾಂಬಿಯಲ್ಲಿದ್ದಾಗ ಇವರ ತಂದೆ ಬೆಟ್ಟದ ಚಾಮರಾಜ ಒಡೆಯರ ಬಳಿಗೆ ಬಂದಿದ್ದ ಬ್ರಾಹ್ಮಣನೊಬ್ಬ [ರಾಮೇಶ್ವರ ಯಾತ್ರೆ ಮುಗಿಸಿ ಬಂದಿದ್ದನು] ತಿರುಚಿನಾಪಳ್ಳಿಯ ಜಟ್ಟಿಯ ಬಗ್ಗೆ ತಿಳಿಸಿದ. ಆ ಪ್ರಕಾರ "ತಿರುಚಿನಾಪಳ್ಳಿಯಲ್ಲಿ ಮಹಾಪರಾಕ್ರಮಶಾಲಿ ಜಟ್ಟಿಯೊಬ್ಬ ತನ್ನ ಸಂಗಡ ಕಾಳಗ ಮಾಡುವವರು ಯಾರೂ ಇಲ್ಲವೆಂದು, ತನ್ನ ದಟ್ಟಿ ಚಲ್ಲಣವನ್ನು ಆ ಊರ ಕೋಟೆ ಬಾಗಿಲಿಗೆ ಕಟ್ಟಿ ಸರ್ವರೂ ಅದರ ಅಡಿ ಹೋಗುವಂತೆ ಮಾಡಿ ಅಹಂಕಾರದಿಂದ ಮೆರೆಯುತ್ತಿದ್ದಾನೆ." ಈ ವಿಷಯ ತಿಳಿದ ಕಂಠೀರವ ನರಸರಾಜರು ಆ ಬ್ರಾಹ್ಮಣನ ಜೊತೆ ಮಾರುವೇಷದಿಂದ ತಿರುಚಿನಾಪಳ್ಳಿಗೆ ಹೋಗಿ, ಕೋಟೆ ಬಾಗಿಲಿಗೆ ಕಟ್ಟಿದ್ದ ಜಟ್ಟಿಯ ದಟ್ಟಿ ಚಲ್ಲಣವನ್ನು ತಮ್ಮ ಕಡೆಯ ಆಳಿನ ಕೈಯಲ್ಲಿ ತೆಗೆಯಿಸಿ ಅದೇ ಬಾಗಿಲಲ್ಲಿ ಕೋಟೆಗೆ ಪ್ರವೇಶ ಮಾಡಿದರು. ಜಟ್ಟಿಯ ದಟ್ಟಿ ಚಲ್ಲಣವನ್ನು ತೆಗೆಯಿಸಿ ಆ ದ್ವಾರದಿಂದಲೇ ಪುರಪ್ರವೇಶ ಮಾಡಿದ ವಿಷಯ ತಿಳಿದು ತಿರುಚಿನಾಪಳ್ಳಿಯ ಅರಸು ಮಾರುವೇಷದಲ್ಲಿದ್ದ ಒಡೆಯರಿಗೂ ತಿರುಚಿನಾಪಳ್ಳಿ ಜಟ್ಟಿಗೂ ಕಾಳಗ ಏರ್ಪಡಿಸಿದ. ಸ್ಪರ್ಧೆಯಲ್ಲಿ ಜಟ್ಟಿ ಸೋತು ಪ್ರಾಣ ಕಳೆದುಕೊಂಡ. ಗೆಲುವು ಸಾಧಿಸಿದ ಮಾರುವೇಷದಲ್ಲಿದ್ದ ಒಡೆಯರನ್ನು ಅರಸು ಸನ್ಮಾನ ಮಾಡಲು ಆಹ್ವಾನಿಸಿದಾಗ ಮರುದಿನ ಬರುವುದಾಗಿ ತಿಳಿಸಿ, ಆ ದಿನ ರಾತ್ರಿಯೇ ಕೋಟೆ ಬಾಗಿಲಿಗೆ 'ಮೈಸೂರು ಸಂಸ್ಥಾನದಿಂದ ಯಾರೋ ಬಂದು ಇಂಥ ಪರಾಕ್ರಮವಂ ಮಾಡಿ ತೋರಿಸಿದರು' ಎಂದು ಚೀಟಿ ಬರೆದು ಕೋಟೆ ಬಾಗಿಲಿಗೆ ಕಟ್ಟಿ ತೆರಕಣಾಂಬಿಗೆ ಹಿಂತಿರುಗಿದರು.[೮] ಈ ಘಟನೆಯಿಂ[ದ] ಕಂಠೀರವ ನರಸರಾಜ ಒಡೆಯರು ಸ್ವತಃ ಉತ್ತಮ[ ] ಕುಸ್ತಿಪಟುವಾಗಿದ್ದರೆಂದು ತಿಳಿದುಬರುತ್ತದೆ.

ಕಂಠೀರವ ನರಸರಾಜ ಒಡೆಯರು ಪಟ್ಟಾಭಿಷಿಕ್ತರಾದ[ ] ನಂತರ 'ಕುಸ್ತಿ' ಕಲೆಗೆ ಪ್ರಾಧಾನ್ಯ ನೀಡಿದ್ದರೆಂಬುದು ಅವರ[ ] ಆಸ್ಥಾನ ಕವಿ ಗೋವಿಂದ ವೈದ್ಯ ರಚಿಸಿರುವ "ಕಂಠೀರವ[ ] ನರಸರಾಜ ವಿಜಯಂ" ಕಾವ್ಯದಿಂದ ವ್ಯಕ್ತವಾಗುತ್ತದೆ.[೯] ಗೋವಿಂದ ವೈದ್ಯನ ಈ ಕಾವ್ಯವು ೨೬ ಸಂಧಿಗಳನ್ನು[ ] ಒಳಗೊಂಡಿದೆ. ಕ್ರಿ.ಶ. ೧೬೪೮ರಲ್ಲಿ ಈ ಕಾವ್ಯವನ್ನು[ ] ರಚಿಸಲಾಗಿದೆ. ಕಾವ್ಯದ ೨೧ನೇ ಸಂಧಿಯು ಆ ಅವಧಿಯ[ ] ಮಹಾನವಮಿ ಒಡ್ಡೋಲಗದುತ್ಸವದ ವರ್ಣನೆಯನ್ನು[ ] ಒಳಗೊಂಡಿದೆ. ಇದರಲ್ಲಿ ಎಂಟು ಪದ್ಯಗಳು ಜಟ್ಟಿಕಾಳಗದ[ ] ವಿವರಣೆಯನ್ನು ನೀಡುತ್ತವೆ. ಕಾವ್ಯದಲ್ಲಿ ವಿವರಿಸಿರುವ ಪ್ರಕಾರ[ ] ಈ ವಿಶೇಷ ಓಲಗದಲ್ಲಿ ಒಡೆಯರಿಗೆ ಸಾಮಂತರು ಕಾಣಿಕೆ[ ] ಅರ್ಪಿಸಿದ ನಂತರ ಮಾವುತರು, ಸೈನಿಕರು, ಸವಾರರು, ಸೈನ್ಯಾಧಿಕಾರಿಗಳೂ ತಮ್ಮ ಗೌರವ ಸಮರ್ಪಣೆ ಮಾಡುತ್ತಿದ್ದರು. ಆ ನಂತರ ಮಲ್ಲರ ಹೋರಾಟ-ಸ್ಪರ್ಧೆ ಜರುಗುತ್ತಿತ್ತು. ಜಟ್ಟಿಗಳು ಅಖಾಡಕ್ಕಿಳಿಯುವಾಗ ಗೆಲ್ಲುವ ಭರವಸೆಯಿಂದ, ಗೆಲ್ಲಲೇಬೇಕೆಂಬ ಛಲದಿಂದ ಎದುರಾಳಿಯನ್ನು ಬೀಳಿಸಲು ವಿವಿಧ ಪಟ್ಟುಗಳನ್ನು ಹಾಕಿ ಸಾಹಸ ಮೆರೆದುದನ್ನು ಕವಿ ಗೋವಿಂದ ವೈದ್ಯ ಓದುಗರ ಕಣ್ಣಿಗೆ ಕಟ್ಟುವಂತೆ ವಿವರಿಸಿದ್ದಾನೆ. ಕಾವ್ಯದಲ್ಲಿರುವ ಒಂದೆರಡು ಉದಾಹರಣ ಪದ್ಯಗಳನ್ನು ಇಲ್ಲಿ ನೀಡಬಹುದು.

> **"ಆ ಸಮಯದೆ ಜಟ್ಟಿಗಳು ಜೋಡು ಜೋಡಲಿ**
> **ರೋಷಾವೇಷದೊಳಾಗ**
> **ಘೋಷಿಸಿ ನೆಗೆದು ಭುಜಸ್ಫೋಟನೆಗೈದು**
> **ವಾಸಿ ಪಂಥದೆ ನಿಂದರೊಡನೆ"[೧೦]**
>
> **"ಕರ ಕಮಲದೆ ವಜ್ರಮುಷ್ಟಿ ಮಸ್ತಕದೊಳು...."[೧೧]**
>
> **"ಚರಣಹತಿಗೆ ಬಿರಿಯಲು ಭೂಮಿ ಭೋಯೆಂ**
> **ದುರಗಬಂಧದಲಿ ತಕ್ಕೈಸಿ**
> **ಪರಿ ಪರಿ ಕೌಶಲಗಳ ಮುಷ್ಟಿಗಾಯದ...."[೧೨]**
>
> **"ಬಿಗಿವ ಬಿಡಿಸಿಕೊಳ್ವ ತಗೆವ ತವಕಿಸುವ**
> **ನೆಗೆವ ನಿಗುರಿಯೊಳಸರಿವ**
> **ಲಗಡಿನಂತೆರಗಿ ಲಾಗಿಸುವ ಹೋರಾಟದ...."[೧೩]**

ಈ ಹೋರಾಟದಲ್ಲಿ ಎದುರಾಳಿಯನ್ನು ಬೀಳಿಸುವ[ ] ವಿವಿಧ ಪಟ್ಟುಗಳನ್ನು ಜಟ್ಟಿಗಳು ಹಾಕುತ್ತಿದ್ದರು. ಅವರ ಮುಖ, ಎದೆ, ಕೈಕಾಲುಗಳಿಗೆ ಗಾಯವಾಗಿ ರಕ್ತ ಚಿಮ್ಮುತ್ತಿದ್ದರೂ ಅವರು ಹಿಂಜರಿಯುತ್ತಿರಲಿಲ್ಲ. ಗೆಲುವಿಗಾಗಿ ಕೊನೆಯ[ ] ವರೆವಿಗೂ ಹೆಣಗುತ್ತಿದ್ದರು. ನೂರಾರು ಜೋಡಿಗಳು ಈ[ ]

ಸ್ಪರ್ಧೆಯಲ್ಲಿ ಪಾಲ್ಗೊಳ್ಳುತ್ತಿದ್ದುದಾಗಿ ಕಾವ್ಯದಿಂದ ತಿಳಿದು ಬರುತ್ತದೆ. ಸ್ಪರ್ಧಾಳುಗಳು ಅಖಾಡಕ್ಕೆ ಇಳಿಯುವ ವೇಳೆ ಹಣೆಗೆ ಕಸ್ತೂರಿ ತಿಲಕವನಿಟ್ಟುಕೊಂಡು, ಕೊರಳಿಗೆ ಹೂಮಾಲೆ ಹಾಕಿರುತ್ತಿದ್ದುದಾಗಿ ಕವಿ ತಿಳಿಸಿದ್ದಾರೆ. ಸಮರ್ಥರಾದ ಮಲ್ಲರು ಅಂತಿಮವಾಗಿ ಗೆಲುವು ಸಾಧಿಸುತ್ತಿದ್ದರು. ಗೆದ್ದ ಜೋಡಿಗೆ ಒಡೆಯರೇ ಬಹುಮಾನಗಳನ್ನು ನೀಡುತ್ತಿದ್ದರು. ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ವೆಂಕಟಪತಿ ಎಂಬ ಜಟ್ಟಿ ಪ್ರಖ್ಯಾತನಾಗಿದ್ದನೆಂದು ತೋರುತ್ತದೆ. ಈತ ಮಹಾರಾಜರು ಪಲ್ಲಕ್ಕಿಯಲ್ಲಿ ಕುಳಿತು ಓಲಗಶಾಲೆಗೆ ಬಂದಾಗ ಅವರನ್ನು ವೆಂಕಟಜಟ್ಟಿ ಗೌರವಯುತವಾಗಿ ಕರೆತಂದುದಾಗಿ ಗೋವಿಂದ ವೈದ್ಯ ತಿಳಿಸಿದ್ದಾನೆ.[೧೪] ಈತ ಸಮರ್ಥಶಾಲಿಯೂ, ಖ್ಯಾತನಾಮನೂ ಆಗಿದ್ದು ಬಹುಶಃ ಒಡೆಯರ ಸಮೀಪವರ್ತಿ ಆಗಿದ್ದಿರಬೇಕು.

ಮುಂದೆ ಚಿಕ್ಕದೇವರಾಜ ಒಡೆಯರ ಕಾಲದಲ್ಲೂ ಮಹಾನವಮಿ ದರ್ಬಾರಿನಲ್ಲಿ ಹಲವಾರು ಮಲ್ಲರು ಭಾಗವಹಿಸಿದ್ದುದಾಗಿ ಸಮಕಾಲೀನ ಸಾಹಿತ್ಯಗಳಿಂದ ವ್ಯಕ್ತವಾಗುತ್ತದೆ.[೧೫] ಅದೇ ರೀತಿ ಇಮ್ಮಡಿ ಕೃಷ್ಣರಾಜ ಒಡೆಯರ ಕಾಲಕ್ಕೆ ಸಂಬಂಧಿಸಿದಂತೆ ಮಹಾನವಮಿ ಉತ್ಸವದ ಅಂಗವಾಗಿ ನಡೆದ ಜಟ್ಟಿಕಾಳಗ ಸ್ಪರ್ಧೆಯ ದೀರ್ಘವಾದ ವಿವರಣೆ ಲಭ್ಯವಿದೆ. ಹದಿನೆಂಟನೇ ಶತಮಾನದ ಪೂರ್ವಭಾಗದಲ್ಲಿ ಸಂಸ್ಥಾನದ ರಥವನ್ನು ಮುನ್ನಡೆಸಿದ ಕಳಲೆ ಮನೆತನದ ದಳವಾಯಿ ಸಹೋದರರು ಅನೇಕ ಜಟ್ಟಿಗಳನ್ನು ಸಾಕಿದ್ದುದಾಗಿ ಕವಿ ನೂರೊಂದ ಕ್ರಿ.ಶ. ೧೭೪೦ರಲ್ಲಿ ರಚಿಸಿರುವ 'ಸೌಂದರಕಾವ್ಯ' ಕೃತಿಯಿಂದ ತಿಳಿದುಬರುತ್ತದೆ.[೧೬] ಈ ಕಾವ್ಯವು ೧೩ ಸಂಧಿಗಳನ್ನೊಳಗೊಂಡಿದ್ದು, ೧೨ನೇ ಸಂಧಿಯು ೧೭೪೦ರಲ್ಲಿ ನಡೆದ ಮಹಾನವಮಿ ಒಡ್ಡೋಲಗದ ವರ್ಣನೆ ಮಾಡುತ್ತದೆ. ಈ ಸಂಧಿಯಲ್ಲಿನ ೨೩ ರಿಂದ ೯೧ರ ವರೆಗಿನ ೬೬ ಪದ್ಯಗಳು ಜಟ್ಟಿಗಳ ಕಾಳಗವನ್ನು ವಿವರಿಸಿದೆ.

'ಸೌಂದರ ಕಾವ್ಯ' ವಿವರಿಸಿರುವ ಪ್ರಕಾರ ಜಟ್ಟಿಗಳು ಮಲ್ಲಗಾಸೆ, ಹನುಮಗಾಸೆ, ವೀರಗಾಸೆ ಧರಿಸಿ, ಕೊರಳಿಗೆ ಮಲ್ಲಿಗೆ ಇತ್ಯಾದಿ ಹೂವಿನ ಮಾಲೆ ಹಾಕಿಕೊಂಡು, ಹಣೆಗೆ ಕಸ್ತೂರಿ ತಿಲಕ ಮತ್ತು ಶಿರಕ್ಕೆ ಕೆಮ್ಮಣ್ಣು ಹಚ್ಚಿ ತಮ್ಮ ಸರದಿಗಾಗಿ ಕಾಯತ್ತಾ ಕುಳಿತಿದ್ದರು. ಈ ಸ್ಪರ್ಧೆಯಲ್ಲಿ ಭಾಗವಹಿಸಿದ್ದ ಸಂಸ್ಥಾನದ ಹಾಗೂ ಹೊರಗಿನ ಜಟ್ಟಿಗಳ ಹೆಸರನ್ನೂ/ ಊರನ್ನೂ ತಿಳಿಸಲಾಗಿದೆ. ಶರಭಜಟ್ಟಿ, ಹನುಮಜಟ್ಟಿ, ಚಲದಂಕಮಲ್ಲ, ವಿಕ್ರಮಜಟ್ಟಿ, ಕಾಳಭೈರವ ಜಟ್ಟಿ, ಚಂದವಾರದ ಜಯಕಾಲಭೈರವಜಟ್ಟಿ ಹಾಗೂ ಚಂದವಾರದ, ಬಿದನೂರು, ಮಧುರೆ, ವಿಜಯನಗರ ಇತ್ಯಾದಿ ಕಡೆಗಳಿಂದ ಸ್ಪರ್ಧೆಗೆ ಜಟ್ಟಿಗಳನ್ನು ಕರೆಸಲಾಗಿತ್ತು. ಜಟ್ಟಿಕಾಳಗವನ್ನು ವೀಕ್ಷಿಸಲು ದೊರೆಗಳು, ಮಾಂಡಲೀಕರು, ಅರಸು ಮಂತ್ರಿಗಳು, ದಳಪತಿಗಳು ಎಲ್ಲರೂ ಕುತೂಹಲದಿಂದ ಕಾಯುತ್ತಿದ್ದ ಸಂದರ್ಭದಲ್ಲಿ ಮೈಸೂರಿನ ದೊರೆ ಕಾಳಗಕ್ಕೆ ಅಪ್ಪಣೆ ಮಾಡಿದಾಗ ನೂರಾರು ಜೋಡಿಗಳು ಇಬ್ಬಿಬ್ಬರಂತೆ ಅಖಾಡಕ್ಕೆ ಇಳಿದು ಸ್ಪರ್ಧೆಯಲ್ಲಿ ತೊಡಗಿದರು. ಸ್ಪರ್ಧೆಗೆ ಆಗಮಿಸಿದ್ದ ಪ್ರತಿಯೊಬ್ಬ ಜಟ್ಟಿಯೂ ಗೆಲ್ಲಲೇಬೇಕೆಂಬ ಛಲದಿಂದ ವಿವಿಧ ಪಟ್ಟುಗಳನ್ನು ಹಾಕುತ್ತ ಹಾರಿ, ಕುಪ್ಪಳಿಸಿ, ಹಲ್ಲು ಕಡಿದು, ವಜ್ರಮುಷ್ಟಿಯಿಂದ ಚಚ್ಚುತ, ಪರಸ್ಪರರ ಮೇಲೆರಗಿ ಎದುರಾಳಿಯನ್ನು ನೆಲಕ್ಕೆ ಕೆಡುವಲು ಯತ್ನಿಸುತ್ತಿದ್ದರು. ಕಾವ್ಯ ಈ ಎಲ್ಲ ಪಟ್ಟುಗಳ ಬಗೆಗೆ ವಿವರಿಸುತ್ತಾ ಜಟ್ಟಿಗಳ ಹೋರಾಟವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿದೆ. ಸ್ಪರ್ಧೆಯಲ್ಲಿ ಗೆದ್ದಂತಹ ಮಲ್ಲರಿಗೆ ಸ್ವತಃ ಅರಸನೇ ದುಪ್ಪಟ, ಮುತ್ತಿನ ಕಡುಕು, ಹಾರ ಪದಕ, ಕಂಠಮಾಲೆ, ತುರಾಯಿ ಮುಂತಾದ ಬಹುಮಾನಗಳನ್ನು ನೀಡಿ ಗೌರವಿಸಿದ.

ಇದೇ ಸಂಪ್ರದಾಯ ೨೦ನೇ ಶತಮಾನದಲ್ಲೂ ಹೆಚ್ಚು ಸಡಗರ ಸಂಭ್ರಮಗಳಿಂದ ಮುಂದುವರಿಯಿತು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಈ ಸ್ಪರ್ಧೆ ಮತ್ತೂ ಜನಪ್ರಿಯಗೊಂಡಿತು. ನಾಲ್ವಡಿಯವರ ಸವಾರ್ ತೊಟ್ಟಿಯಲ್ಲಿ ಜಟ್ಟಿಗಳ ಸ್ಪರ್ಧೆಗಾಗಿ ವಿಶೇಷ ಅಖಾಡ ನಿರ್ಮಿಸಿದ್ದರು. ವಿಜಯದಶಮಿ ದಿನ ಆಯುಧಗಳಿಗೆ ಉತ್ತರ ಪೂಜೆ ಮಾಡಿದ ನಂತರ ಜಟ್ಟಿಕಾಳಗ ಸ್ಪರ್ಧೆ ನಡೆಸಲಾಗುತ್ತಿತ್ತು. ನಾಲ್ವಡಿಯವರ ಆಳ್ವಿಕೆಯ ಕಾಲಕ್ಕೆ ಮೈಸೂರುನಗರ ಒಂದರಲ್ಲೇ ಸುಮಾರು ೭೦ ಗರಡಿ ಮನೆಗಳು ರಾಜಾಶ್ರಯದಿಂದ ಬೆಳೆದಿದ್ದವು. ಪಕೀರ್‌ಅಹಮ್ಮದ್‌ಸಾಹೇಬರ ಗರಡಿ, ಮಾಯಣ್ಣನವರ ಗರಡಿ, ಉಸ್ತಾದ್ ಶ್ರೀನಿವಾಸನ ಗರಡಿ, ಹತ್ತು ಜನಗಳ ಗರಡಿ, ಶ್ರೀನಿವಾಸಣ್ಣನ ಬಂಡಿಕೇರಿ ಗರಡಿ, ಶ್ರೀರಂಗನಾಯಕನ ಗರಡಿ ಇತ್ಯಾದಿ ಹೆಸರಾಂತ ಗರಡಿಗಳೆನಿಸಿದ್ದವು.

ನಾಲ್ವಡಿಯವರ ಕಾಲದಲ್ಲಿ ಮೈಸೂರು ಸಂಸ್ಥಾನದ ಜಟ್ಟಿಗಳು ಸಂಸ್ಥಾನದ ಹೊರಗೂ ಹೆಸರು ಮಾಡಿದ್ದುದು ದಾಖಲೆಗಳಿಂದ ತಿಳಿದುಬರುತ್ತದೆ. ೧೯೧೧ರಲ್ಲಿ ಮಹಾರಾಜ ನಾಲ್ವಡಿಯವರೊಂದಿಗೆ ಐದನೇ ಜಾರ್ಜ್‌ನ ಕಿರೀಟಧಾರಣಾ ಮಹೋತ್ಸವದಲ್ಲಿ ಪಾಲ್ಗೊಳ್ಳಲು ಹಲವಾರು ಕುಸ್ತಿ ಪಟುಗಳು ದೆಹಲಿಗೆ ತೆರಳಿದ್ದರು. ಪೈಲ್ವಾನ್ ಪಾಪಯ್ಯ, ದೊಡ್ಡ ತಿಮ್ಮಯ್ಯ, ಕೊಪ್ಪಲು ಬಸವಯ್ಯ, ಚೆನ್ನಯ್ಯ, ಕುರೇಶಿ ಮುಂತಾದವರು ಕುಸ್ತಿ ಪ್ರದರ್ಶನ ನೀಡಿದ್ದರು.[೧೭] ಇವರಲ್ಲಿ ಮೈಸೂರಿನ ಪ್ರಸಿದ್ಧವಾದ ಅಹಮ್ಮದ್ ಸಾಹೇಬ್ ಗರಡಿಮನೆಗೆ ಸೇರಿದ್ದ ಪೈಲ್ವಾನ್ ಪಾಪಯ್ಯನವರು ದೆಹಲಿಯಲ್ಲಿ ನಡೆದ ಕುಸ್ತಿ ಸ್ಪರ್ಧೆಯಲ್ಲಿ ಸಾಹಸ ಮೆರೆದು 'ಕುಸ್ತಿ ಕಂಠೀರವ' ಎಂಬ

ಬಿರುದನ್ನೂ, ಬಂಗಾರದ ಪದಕವನ್ನೂ ಪಡೆದು ಸಂಸ್ಥಾನಕ್ಕೆ ಕೀರ್ತಿ ತಂದುಕೊಟ್ಟರು. ಅದೇ ರೀತಿ ಕೊಪ್ಪಲ್ ಬಸವಯ್ಯ ಮತ್ತು ಚೆನ್ನಪೋರಣ್ಣ ಜಟ್ಟಿಗಳು ಅಂತರರಾಷ್ಟ್ರೀಯ ಕುಸ್ತಿ ಪಟುಗಳಾಗಿದ್ದರೆಂದು ತಿಳಿದುಬರುತ್ತದೆ.

ನಾಲ್ವಡಿಯವರ ಕಾಲಕ್ಕೆ ಮೈಸೂರಿನ ನವರಾತ್ರಿ ಸಂದರ್ಭದ ಜಟ್ಟಿಕಾಳಗ ಸ್ಪರ್ಧೆಯು ಉತ್ತರ ಭಾರತದ ಜಟ್ಟಿಗಳ ಗಮನವನ್ನು ಹಿಂದೆಂದಿಗಿಂತ ಹೆಚ್ಚು ಸೆಳೆದಿತ್ತೆಂದು ತೋರುತ್ತದೆ. ಉತ್ತರಭಾರತದ ಜಗಜಟ್ಟಿ ಗಾಮ ಹಾಗೂ ಅವನ ಅಣ್ಣನ ಮಕ್ಕಳಾದ ಬೋಲಿಗೂಗಾ, ಅಸ್ಲಂಅಕ್ರಂ ಹಾಗೂ ಅಜಾಗೂಗಾ, ಇಮಾಮ್‌ಭಕ್ತಿ, ಹಮೀದ್, ಕಂದ್ರಕ, ಫಝಲ್, ಅಂತೋಣಿ ಮುಂತಾದವರು ಮೈಸೂರಿನ ಜಟ್ಟಿಗಳೊಂದಿಗೆ ಕುಸ್ತಿ ಸ್ಪರ್ಧೆಯಲ್ಲಿ ಭಾಗವಹಿಸಿದ್ದರೆಂದು ತಿಳಿದುಬರುತ್ತದೆ.[೧೮] ಈ ಅವಧಿಯಲ್ಲಿ ಬಳ್ಳಾಪುರ ತುಕಾರಾಂ ಜಟ್ಟಿ, ರಾಮಾನುಜ, ಲಕ್ಷ್ಮಾಜಟ್ಟಿ, ಗೋವಿಂದಜಟ್ಟಿ, ವೆಂಕಟರಮಣ ಜಟ್ಟಿ, ಮೈಸೂರಿನ ಗುಂಡಾಜಟ್ಟಿ, ಕೃಷ್ಣಜಟ್ಟಿ, ಸುಬ್ಬಾಜಟ್ಟಿ, ಪಾಪಯ್ಯ, ಪಟ್ನದ ಕುಪ್ಪಾಜಟ್ಟಿ, ರಾಮಾಜಟ್ಟಿ, ಬೆಂಗಳೂರಿನ ಪುಟ್ಟಾಜಟ್ಟಿ, ಚಂಗಾಜಟ್ಟಿ ಮುಂತಾದವರು.[೧೯] ಇವರೆಲ್ಲ ದಸರ ಜಟ್ಟಿ ಕಾಳಗ ಸ್ಪರ್ಧೆಯಲ್ಲಿ ಪಾಲ್ಗೊಂಡಿದ್ದುದಕ್ಕೆ ದಸರಾ ಕಡತಗಳಲ್ಲಿ ಉಲ್ಲೇಖವಿದೆ. ಸ್ಪರ್ಧಾಳುಗಳನ್ನು ಗುರ್ತಿಸುವ ಸಲುವಾಗಿ ಬೇರೆ ಬಣ್ಣದ ದಟ್ಟ ಚಲ್ಲಣವನ್ನು ನೀಡಲಾಗುತ್ತಿತ್ತು. ನಾಲ್ವಡಿಯವರ ಕಾಲದಲ್ಲಿ ನಡೆದ ಸ್ಪರ್ಧೆಯೊಂದರಲ್ಲಿ ಅಖಾಡಕ್ಕಿಳಿದಿದ್ದ ಜೋಡಿಗಳ ವಿವರಣೆಯನ್ನು ಉದಾಹರಣೆಗಾಗಿ ಇಲ್ಲಿ ನೀಡಲಾಗಿದೆ.[೨೦]

ಮೈಸೂರಿನ ಗೋವಿಂದಜಟ್ಟಿ X ಪಟ್ಣದ ನಾರಾಯಣಜಟ್ಟಿ

ಮೈಸೂರಿನ ರಾಮಾಜಟ್ಟಿ X ಪಟ್ಣದ ವೆಂಕಟರವಣ ಜಟ್ಟಿ

ಧರ್ಮಶಾಲೆ ಗರಡಿ ಟೀಕಾರಾಂ X ಕೊಪ್ಪಲು ರಾಮಾಚಾರಿ ಗರಡಿ ಶಿವಯ್ಯ

ಗಿರಿಯ ಕೊಪ್ಪಲು ಲಿಂಗಯ್ಯನ ಗರಡಿ X ಕಾಡಬಸವನ ಗರಡಿ ಮಹಮ್ಮದ್ ಷರೀಫ್

ಶ್ರೀರಂಗನಾಯಕನ ಗರಡಿ ತಿಮ್ಮಯ್ಯ X ಕೊಪ್ಪಲು ಹುಚ್ಚನ ಗರಡಿ ಗಿರಿಯ

ತಮ್ಮಯ್ಯ ಕುರುಬರಹಳ್ಳಿ ಚಿಕ್ಕಮನ ಗರಡಿ X ಯಲ್ಲಪ್ಪನ ಗರಡಿ ತುಕಾರಾಂ

ಹೀಗೆ ನೂರಾರು ಜೋಡಿಗಳ ಹೆಸರುಗಳು ದಸರಾ ಕಡತದಲ್ಲಿ ಕಾಣಸಿಗುತ್ತವೆ. ಸ್ಪರ್ಧೆಯಲ್ಲಿ ಗೆದ್ದನಂತರ ಮಲ್ಲರಿಗೆ ನೀಡುತ್ತಿದ್ದ ಬಹುಮಾನದ ಮೊತ್ತವನ್ನು ಕೂಡ ಹೆಚ್ಚಿಸಿದುದಕ್ಕೆ ದಾಖಲೆಗಳಿವೆ.[೨೧] ಪ್ರತಿವರ್ಷ ದಸರಾ ಮಹೋತ್ಸವದ ಸಂದರ್ಭದಲ್ಲಿ ನಡೆಯುತ್ತಿದ್ದ ಈ ಸ್ಪರ್ಧೆಗೆ ಅರಮನೆ ನಿಧಿಯಿಂದ ಹಣ ತೆಗೆದಿರಿಸಲಾಗುತ್ತಿತ್ತು. ಸ್ಪರ್ಧೆಗೆ ಬಂದಂತಹ ಜಟ್ಟಿಗಳ ಖರ್ಚು ವೆಚ್ಚಗಳನ್ನು ಖಜಾನೆಯಿಂದ ನೀಡಲಾಗುತ್ತಿತ್ತು.[೨೨]

ಮೈಸೂರಿನ ಕೊನೆಯ ಅರಸರಾದ ಜಯಚಾಮರಾಜ ಒಡೆಯರ್ ಅವರ ಆಳ್ವಿಕೆಯ ಅವಧಿಯಲ್ಲೂ ಕೂಡ ಮಹಾನವಮಿ ಉತ್ಸವಾಚರಣೆಗಳೂ ಆ ಸಂಬಂಧೀ ಸಾಂಸ್ಕೃತಿಕ ಕಾರ್ಯಕ್ರಮಗಳು ಅದೇ ವೈಭವ-ಸಂಭ್ರಮಗಳಿಂದ ಮುಂದುವರಿದುಕೊಂಡು ಬಂದಿತು. ಸ್ವಾತಂತ್ರ್ಯಾ ನಂತರ ಮೈಸೂರಿನ ಸಾಹುಕಾರ್ ಚನ್ನಯ್ಯ ಮತ್ತು ಪೈಲ್ವಾನ್ ಶಿವನಂಜಪ್ಪನವರು ೧೯೫೮ರಲ್ಲಿ ಗರಡಿ ಸಂಘವನ್ನು ಸ್ಥಾಪಿಸಿದರು. ಈ ಸಂಘಕ್ಕೆ ಮೈಸೂರು ಪುರಸಭೆ ದೊಡ್ಡಕೆರೆ ಮೈದಾನದಲ್ಲಿ ಒಂದು ನಿವೇಶನ ನೀಡಿತು. ೧೯೬೭ರಲ್ಲಿ ಅದೇ ನಿವೇಶನದಲ್ಲಿ 'ಕುಸ್ತಿ ಅಖಾಡ' ಸ್ಥಾಪಿಸಿ ಅದನ್ನು ಅಂದಿನ ಮೈಸೂರು ರಾಜ್ಯದ ರಾಜ್ಯಪಾಲರಾಗಿದ್ದ ಶ್ರೀ ಜಯಚಾಮರಾಜ ಒಡೆಯರ್‌ರವರಿಂದ ಉದ್ಘಾಟನೆ ಮಾಡಿಸಲಾಯಿತು. ಇತ್ತೀಚಿನವರೆಗೂ 'ಚನ್ನಯ್ಯ ಕುಸ್ತಿ ಅಖಾಡ'ದಲ್ಲೇ ದಸರಾ ಕುಸ್ತಿಗಳು ರಾಜ್ಯ ಸರ್ಕಾರದ ನೇತೃತ್ವದಲ್ಲಿ ನಡೆಯುತ್ತಿದ್ದವು. ಈಗ ಮೈಸೂರು ದಸರಾ ವಸ್ತುಪ್ರದರ್ಶನ ಮೈದಾನದಲ್ಲಿ ನೂತನ ರೀತಿಯ ಅಖಾಡವನ್ನು ಸುಮಾರು ೧ ಕೋಟಿ ರೂ.ಗಳ ವೆಚ್ಚದಲ್ಲಿ ಕಟ್ಟಿಸಲಾಗಿದೆ. ಇದೇ ಸ್ಥಳದಲ್ಲಿ ಈಗ ಕುಸ್ತಿ ಸ್ಪರ್ಧೆಯು ಅಧಿಕಾರಿಗಳ, ಗಣ್ಯರ ಹಾಗೂ ಜನಸಾಮಾನ್ಯರ ಸಮ್ಮುಖದಲ್ಲಿ ನಡೆಯುತ್ತಿದೆ. ಆಧುನಿಕತೆಯ ಸೋಗು ಗರಡಿ ಮೇಲೂ ಪ್ರಭಾವ ಬೀರಿದ್ದರೂ ಕೂಡ ಸಾಂಪ್ರದಾಯಿಕ ಕುಸ್ತಿಯ ಖ್ಯಾತಿ ನಾಶವಾಗಿಲ್ಲ.

ಒಟ್ಟಾರೆ ಪರಂಪರಾನುಗತವಾಗಿ ಗ್ರಾಮೀಣರ ಬದುಕಿನಲ್ಲಿ ಹಾಸುಹೊಕ್ಕಾಗಿದ್ದ ಕುಸ್ತಿಕಲೆ ಅಂತರರಾಷ್ಟ್ರೀಯ ಮಟ್ಟದ ಕ್ರೀಡೆಯಾಗಿ ಪರಿವರ್ತನೆಗೊಂಡಿದ್ದು ವಿಜಯನಗರದ ಕಾಲದಲ್ಲಿ. ಮೈಸೂರಿನ ಒಡೆಯರುಗಳು ಅವರ ಉತ್ತರಾಧಿಕಾರಿಗಳಾಗಿ ಈ ಕಲೆಯನ್ನು ಪ್ರೋತ್ಸಾಹಿಸಿ ಬೆಳೆಸಿದರು.

ಈ ಕಲೆಗೆ ರಾಜ ಒಡೆಯರಿಂದ ಕೊನೆಯ ಅರಸರಾದ ಜಯಚಾಮರಾಜ ಒಡೆಯರವರೆವಿಗೂ ಪ್ರೋತ್ಸಾಹ, ರಾಜಾಶ್ರಯ ಲಭಿಸಿತ್ತು. ಜಟ್ಟಿಕಾಳಗ/ಕುಸ್ತಿ ಗಳಿಸಿದ್ದ ಜನಪ್ರಿಯತೆಯಿಂದಾಗಿ ಈ ಸ್ಪರ್ಧೆಯನ್ನು ರಾಜರ ಆಳ್ವಿಕೆ ಕೊನೆಗೊಂಡ ನಂತರವೂ ರಾಜ್ಯಸರ್ಕಾರ ಮುಂದುವರಿಸಿಕೊಂಡು ಬರುವಂತಾಯಿತು. ಇಂದಿಗೂ ಕೂಡ ಈ ಸ್ಪರ್ಧೆ ದಸರಾ ಸ್ಪರ್ಧೆಗಳಲ್ಲಿ ಒಂದು ಪ್ರಮುಖ ಆಕರ್ಷಣೆ ಎನಿಸಿದೆ. ಗೆದ್ದವರಿಗೆ

ಬಿರುದುಗಳನ್ನು, ಬಹುಮಾನಗಳನ್ನು ಸರ್ಕಾರವೇ ನೀಡುತ್ತಿದೆ. ಒಡೆಯರ ಕಾಲದ ನಾಡಹಬ್ಬದ ಜಟ್ಟಿಕಾಳಗ ಸ್ಪರ್ಧೆಯ ಪರಂಪರೆ ಕೆಲವು ಬದಲಾವಣೆಗಳೊಂದಿಗೆ ಮುಂದುವರಿಯುತ್ತಿರುವುದು ಪ್ರಶಂಸಾರ್ಹ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕುಸ್ತಿ ಮತ್ತು ಇತರ ಅಂಗ ಸಾಧನೆಗಾಗಿ ಗೊತ್ತಾದ ಸ್ಥಳವಿದ್ದು, ಅಲ್ಲಿರುವ ಮನೆಗೆ ಗರಡಿ ಎನ್ನಲಾಗುತ್ತದೆ. ಹಿಂದಿನ ಕಾಲದಲ್ಲಿ ಪ್ರತಿಯೊಂದು ಗ್ರಾಮದಲ್ಲಿ ಸಾಮಾನ್ಯವಾಗಿ ಊರ ಹೊರಗೆ ಒಂದಾದರೂ ಗರಡಿಮನೆ ಇರುತ್ತಿತ್ತು.

೨. ಗರಡಿಮನೆಯಲ್ಲಿ ಸುಮಾರು ೧೪, ಇರುವ ಒಂದು ಚೌಕ ಮಟ್ಟಿ. ಏಕ ಕಾಲಕ್ಕೆ ೨ ಜೊತೆ ಜಟ್ಟಿಗಳು ಕುಸ್ತಿ ಅಭ್ಯಾಸ ಮಾಡಬಹುದಾದ ಜಾಗ. ಇದನ್ನು ಒಂದು ಅಡಿ ಆಳದವರೆಗೆ ಉತ್ತಮ ದರ್ಜೆಯ ಕೆಮ್ಮಣ್ಣಿನಿಂದ (ಹುಡಿಮಣ್ಣು) ತುಂಬಲಾಗುತ್ತದೆ.

೩. ಕುಸ್ತಿ ಸ್ಪರ್ಧೆಯಲ್ಲಿ ಭಾಗವಹಿಸಿ ಕುಸ್ತಿ ಮಾಡುವ ಸ್ಥಳಕ್ಕೆ ಆಖಾಡ ಅಥವಾ ಗೋದಾ ಎಂಬುದಾಗಿ ಕರೆಯಲಾಗುತ್ತದೆ.

೪. ವಿವೇಕ ರೈ ಬಿ.ಎ., **ಪ್ರವಾಸಿ ಕಂಡ ವಿಜಯನಗರ,** ಹಂಪಿ : ೨೦೦೫, ಪುಟ ೭೮, ೧೭೯, ೨೩೬.

೫. ವಿವೇಕ ರೈ ಬಿ.ಎ., ಅದೇ.

೬. ರಾಮಕೃಷ್ಣರಾವ್ ಬಿ., **ಮೈಸೂರು ಸಂಸ್ಥಾನದ ಪ್ರಭುಗಳು,** ಶ್ರೀ ಮನ್ಮಹಾರಾಜ ವಂಶಾವಳಿ, ಭಾಗ–೧, ಮೈಸೂರು : ೧೯೧೬, ಪು. ೩೩.

೭. ರಾಮಕೃಷ್ಣರಾವ್ ಬಿ., ಅದೇ., ಪು. ೪೦.

೮. ರಾಮಕೃಷ್ಣರಾವ್ ಬಿ., ಅದೇ., ಪು. ೬೬–೬೭.

೯. ಗೋವಿಂದ ವೈದ್ಯ, **ಕಂಠೀರವ ನರಸರಾಜ ವಿಜಯಂ,** ಸಂಪಾದಕರು : ಶಾಮಶಾಸ್ತ್ರಿ ಆರ್., ಮೈಸೂರು, ೧೯೭೧, ೨೧ನೇ ಸಂಧಿ, ಪದ್ಯಗಳು ೪೦, ೮೯–೯೬.

೧೦. ಅದೇ., ಶ್ಲೋಕ ೮೯, ಪುಟ ೪೦೭.

೧೧. ಗೋವಿಂದ ವೈದ್ಯ, ಅದೇ, ಪದ್ಯ ೯೦.

೧೨. ಅದೇ., ೯೧.

೧೩. ಅದೇ., ಪದ್ಯ ೯೩.

೧೪. ಅದೇ., ಪದ್ಯ ೪೦, ಪು. ೩೯೮.

೧೫. Hayavadan Rao C., *History of Mysore*, Vol. I, Bangalore 1943, p. 394.

೧೬. ನೂರೊಂದ, **ಸೌಂದರಕಾವ್ಯ,** ಭಾನುಮತಿ ವೈ.ಸಿ. (ಸಂಪಾದಕರು), ಮೈಸೂರು ೧೯೯೬, ೧೨ನೇ ಸಂಧಿ, ೨೩–೯೧ ರವರೆಗಿನ ಶ್ಲೋಕಗಳು, ಪು. ೧೦೩–೧೦೮.

೧೭. ಕನ್ನಡ ವಿಷಯ ವಿಶ್ವಕೋಶ, (ಪರಿಷ್ಕೃತ) **ಕರ್ನಾಟಕ,** ಪು. ೬೯೧.

೧೮. ಅದೇ., ಪುಟ ೬೯೧.

೧೯. ದಸರ ಕಡತ ೭. ೧೦. ೧೯೦೭.

೨೦. ದಸರ ಕಡತ, ೧೫. ೧೦. ೧೯೩೭.

೨೧. Gopalraja Urs D.O., letter # 65, dated 8th June 1918 regarding the new change, ordered by H.H. to regulate the grant of presents to jetties.

೨೨. D.O. Letter # 1101 dated 26th March 1918.

ಡಾ. ಬಿ. ನಂಜುಂಡಸ್ವಾಮಿ*

# ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್ ಮತ್ತು ಬೆಂಗಳೂರು ಕೃಷ್ಣರಾಜವಿಲಾಸ ಮುದ್ರಾಕ್ಷರ ಶಾಲೆ

ಮೈಸೂರು ರಾಜ್ಯದ ಮಹಾರಾಜರಾಗಿ ಆಡಳಿತ ನಡೆಸಿದ ಶ್ರೀಮನ್ ಮೈಸೂರು ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್ (೧೭೯೪-೧೮೬೮) ಅವರ ಸಾಹಿತ್ಯಕ, ಸಾಂಸ್ಕೃತಿಕ ಕೊಡುಗೆಗಳ ಬಗ್ಗೆ ಸಾಕಷ್ಟು ಅಧ್ಯಯನ ನಡೆದಿದೆ. ಮೈಸೂರು ಜಗನಮೋಹನ ಅರಮನೆಯಲ್ಲಿ ಶಿಲಾಲಿಪಿ ಯಂತ್ರವನ್ನು ಸ್ಥಾಪಿಸಿ ಹತ್ತಾರು ಕೃತಿಗಳನ್ನು ಮುದ್ರಣ ಮಾಡಿಸಿದರು. ಕ್ರೈಸ್ತ ಧರ್ಮದವರು ತಮ್ಮ ಬೈಬಲ್ ಗ್ರಂಥ ಪ್ರಚಾರಕ್ಕೆ ಮುದ್ರಣಯಂತ್ರಗಳನ್ನು ಸ್ಥಾಪಿಸಿ ಧರ್ಮಪ್ರಚಾರಕ್ಕೆ ಉಪಯೋಗಿಸುತ್ತಾ ಇದ್ದುದನ್ನೇ ಗಮನಿಸಿದ ಮುಮ್ಮಡಿ ಕೃಷ್ಣರಾಜ ಒಡೆಯರ್‌ರು, ಕನ್ನಡನಾಡಿನ ಸಾಹಿತ್ಯ ಕೃತಿಗಳನ್ನು ಮುದ್ರಿಸಿದರೆ ಮೂಲಹಸ್ತಪ್ರತಿ ರೂಪದಲ್ಲಿ ಇದ್ದ ಒಂದು ಪ್ರತಿ ಸಾವಿರ ಪ್ರತಿಯಾಗಿ ತನ್ನ ಪಾಲಿನ ಸೇವೆಯನ್ನು ಮಾಡುತ್ತದೆ ಎಂಬುದನ್ನು ಅರಿತು, ತಮಗೆ ಇದ್ದ ನಿರ್ಬಂಧದ ನಡುವೆಯೂ ಪರೋಕ್ಷವಾಗಿ ಬೆಂಗಳೂರಿನ ಕೃಷ್ಣರಾಜವಿಲಾಸ ಮುದ್ರಾಕ್ಷರ ಶಾಲೆಯ ಸ್ಥಾಪನೆಗೆ ಕಾರಣಕರ್ತರಾದರು. ಈ ಮುದ್ರಾಕ್ಷರ ಶಾಲೆಯಲ್ಲಿ 'ಕನ್ನಡ ಜೈಮಿನಿ ಭಾರತವು' ಮುದ್ರಣವಾಗಿದೆ. ಮುಖಪುಟದ ಶಿರೋಭಾಗದಲ್ಲಿ ಇಂಗ್ಲೀಷ್‌ನಲ್ಲಿ


THE
JAIMINI BHARATA,
CELEBRATED
CANARESE POEM.

BANGALORE
PRINTED AT THE KRISHNA RAJAH VILASA PRESS.
1851.

ಶ್ರೀ
ಅವತಾರಿಕೆ

ಎಂದು ಮುದ್ರಿಸಲಾಗಿದೆ.

ಶ್ರೀ ಮನ್ಮಹೀಮಂಡಲ ಮಂಡನಾಯಮಾನಮಾದ ಈ ಕರ್ಣಾಟದೇಶದೋಳ್ ಸಕಲಜನ ವ್ಯವಹಾರಯೋಗ್ಯ ಮಾಗಿಯೂ, ಬಹುವಿಧ ಲಕ್ಷ್ಯ ಲಕ್ಷಣ ಗ್ರಂಥ ಪರಿಷ್ಕೃತ ಮಾಗಿಯೂ ಯಿರುತ ಕನ್ನಡ ಭಾಷೆಯೊಳು ಮಹಾಕವಿ ಗಳಿಂದ ನಾನಾ ವಿಧ ಕಥಾ ವಸ್ತುಗುಣ ವರ್ಣನಾಲಂಕಾರ ರಸಭರಿತಗಳಾದ ಅನೇಕ ಪ್ರಬಂಧಗಳು ರಚಿಸಲ್ಪಟ್ಟು ಸಹೃದಯ ಹೃದಯಾಹ್ಲಾದಕರಗಳಾಗಿವೆ.

ಲೋಕದೊಳಾಯಾ ಭಾಷೆಗಳಲ್ಲಿ ಗ್ರಂಥಗಳು ಪಂಡಿತ ಪರಿಗ್ರಹಾರ್ಹವಾಗುವುದಕ್ಕೆ ವಕ್ತೃ ವಿಷಯ ವಚನ ವೈಲಕ್ಷಣ್ಯ ಗಳು ಮುಖ್ಯ ನಿಮಿತ್ತಗಳಾಗಿರುತ್ತವೆಯಾಗಿ ಪ್ರಕೃತದಲ್ಲಿ ಜೈಮಿನಿ ಭಾರತವೆಂಬುವೀಯುತ್ತಮ ಕನ್ನಡ ಕಾವ್ಯವು, ನಿಸ್ತುತೋದ್ದಂಡ ಪಂಡಿತ ಪ್ರಕಾಂಡಮಂಡಿತಮಾದ ದೇವಪುರ ದೋಳ್ನಿಯತ ವಾಸುಮಂಗೆಯಿದಿರ್ದ ಲಕ್ಷ್ಮೀಪತಿ ನಾಮಕ ಕವಿಸಾರ್ವಭೌಮ ನಿಂ ವಿರಚಿಸಲ್ಪಟ್ಟದರಿಂ ವಿಶ್ರುತ ವಕ್ತೃ ವೈಲಕ್ಷಣ್ಯಾಲಕ್ಷಿತಮಾಗಿದೆ. ಸಂತತ ಹರಿಚರಣ ಸರಸಿಜ ನಿಧ್ಯಾನ ಸಂಪನ್ನ ಪ್ರಾಜ್ಯ ಸಾಮ್ರಾಜ್ಯ ಪೂಜ್ಯರಾದ ಪಾಂಡವರ ಉತ್ತಮ ಗುಣಮಹಿಮಾ ನುವರ್ಣನ ಸಂದರ್ಭದಿಂ ಸಕಲನಿಗಮ ಪ್ರಶಸ್ತ ವಾಸು ದೇವಸ್ತುತಿ ರೂಪಮಾಗಿರುವದರಿಂದ ಪ್ರಕಟಿತ ವಿಷಯ ಗೌರವಾಸ್ಪದವಾಯಿತು ಮತ್ತು ನಿರ್ದುಷ್ಟಾರ್ಥ ಪುಷ್ಟ ಗಂಭೀರ ಮೃದುಳ ಮಧುರಪದಪುಂಜ ರಂಜಿತಮಾಗಿಯೂ, ವಿಶೇಷ ತಾತ್ಪರ್ಯ ನಿಗೂಢಮಗಿಯೂ ಅಪೂರ್ವ ಸದ್ಯುಕ್ತಿಯುಕ್ತಮಾಗಿಯೂ ಶೋಭಿಸುವದರಿಂ ವಚನ ವೈಲಕ್ಷಣ್ಯ[ವ]ಂಪಡೆದು ರಸಿಕಜನ ಹೃದಯಾಪ್ಯಾಯಕಮಾಗಿಯೂ, ಭಾವಜ್ಞ ಸಂಭಾವ್ಯ ಮಾಗಿಯೂ ಸುಕವಿಜನೋಪಲಾಲ್ಯಮಾನ ವಾಗಿಯೂ ಯಿದೆ.

ಮುಖ್ಯವಾಗಿ ಯಿಾ ಕನ್ನಡ ಕಾವ್ಯವು ಆದಿಕಾವ್ಯಾದಿ ಗಳಂತೆ ಉತ್ತಮ ಕಾವ್ಯಲಕ್ಷಣ ಲಕ್ಷಿತಮಾಗಿಯೂ,

* ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್ ಬಿ.ಹೆಚ್. ರಸ್ತೆ, ತುಮಕೂರು.

ನೀತಿಪ್ರಧಾನಮಾಗಿಯೂ, ಸುಲಲಿತಮಾಗಿಯೂ, ಯಿರುವದರಿಂದ ಕರ್ಣಾಟ ಭಾಷಾವ್ಯುತ್ಪತ್ತ್ಯುಗಳಿಗತ್ಯಂತೋಪಯೋಗಿಯಾಗಿದೆ ಮತ್ತು ಪೂರ್ವೋಕ್ತ ಹೇತುಗಳಿಂ ಮಹಾಭಾರತೋಪಾದಿಯಲಿ ಪಠನಯೋಗ್ಯಮಾಗಿಯೂ ಯಿದೆ.

ಇಂತಾ ಉತ್ತಮ ಗ್ರಂಥವು ಅಪ್ರಚುರಮಾಗಿರುವದಂ ಚಿಂತಿಸಿ ಸರ್ವಜನ ಸುಲಭವಾಗುವ ಬಗೆಯಂ ವಿಚಾರಿಸುವಲ್ಲಿ ಇದರ ಪ್ರಾಚೀನಗಳಾದ ಅನೇಕ ಪ್ರತಿಗಳಂ ತರಿಸಿನೋಡಿ ಅವುಗಳೊಗಣ ಲೇಖಕ ಪ್ರಮಾದಜನಿತ ದೋಷಗಳಂ ಪರಿಹರಿಸಿ ಛಂದಶ್ಶಾಸ್ತ್ರಾನುಗುಣವಾಗಿ ಷಟ್ಪದಿಗಳಂ ಪರಿಷ್ಕರಿಸಿ ಮುದ್ರಿಸಬೇಕಾದದೇ ಕರ್ತವ್ಯವಾಗಿ ತೋರಲರಿದರಿಂದ ಹಾಗೆಯೇ ಇದು ಶ್ರೀಕೃಷ್ಣರಾಜ ಸಾರ್ವಭೌಮ ಪ್ರಸಾದ ವ್ಯವಸ್ಥಾಪಿತ ಕೃಷ್ಣರಾಜವಿಲಾಸಾಕ್ಷರ ಮುದ್ರಾಶಾಲೆಯೊಳ್ಮುದ್ರಿಸಿ ಪ್ರಚುರ ಮಾಡಲ್ಪಟ್ಟಿತಾಗಿ ರಸಿಕರಿದಂ ಪರಿಗ್ರಹಿಸಬಹುದು.

ಕ್ರಿ.ಶ. ೧೮೬೧ರಲ್ಲಿ ಬ್ರಿಟಿಷ್ ಕಮೀಷನರುಗಳು ಮೈಸೂರು ರಾಜ್ಯದ ಆಡಳಿತ ನಡೆಸುತ್ತಾ ಇದ್ದರು. ಆಗ ಕಮೀಷನರಾಗಿ ಕರ್ನಲ್ ಮಾರ್ಕ್ ಕಬ್ಬನ್ (೧೮೩೪–೬೧) ಶ್ರೀಮನ್ ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ ಕಾರ್ಯವೈಖರಿಯನ್ನು ಹದ್ದಿನ ಗಣ್ಣಿನಲ್ಲಿ ನೋಡುತ್ತಾ ಇದ್ದರು. ಭಾರತ ದೇಶದಲ್ಲಿ ಧರ್ಮಪ್ರಚಾರ ಧರ್ಮಗಳಿಂದ ಮಾತ್ರ ಸಾಧ್ಯ ಎಂದು ತಿಳಿದಿದ್ದ ಮುಮ್ಮಡಿಯವರು ಮುದ್ರಾಕ್ಷರ ಶಾಲೆಯನ್ನು ಪ್ರಾರಂಭಿಸಿ ಪ್ರಾಚೀನ ಗ್ರಂಥಗಳ ಪ್ರಕಟಣೆಗೆ ಬಹು ದೊಡ್ಡ ಶ್ರೀಕಾರವನ್ನು ಹಾಕಿದರು. ಇಲ್ಲಿ 'ಪ್ರಸಾದ ವ್ಯವಸ್ಥಾಪಿತ' ಅಂದರೆ ಮುದ್ರಣಯಂತ್ರ ಸ್ಥಾಪನೆಗೆ ದ್ರವ್ಯ ಸಹಾಯ. ಈ ಮುದ್ರಾಕ್ಷರ ಶಾಲೆ ಬೆಂಗಳೂರಿನಲ್ಲಿ ಎಲ್ಲಿತ್ತು, ಎಲ್ಲಿಯವರೆಗೆ ಕೆಲಸ ಮಾಡಿತು. ಎಷ್ಟು ಗ್ರಂಥಗಳನ್ನು ಮುದ್ರಣ ಮಾಡಿತು ಎನ್ನುವ ವಿಷಯವನ್ನು ಸಂಶೋಧಿಸಬೇಕಾಗಿದೆ.

'ಜೈಮಿನಿ ಭಾರತ' ಗ್ರಂಥದ ಸಂಪಾದಕ ಅಜ್ಞಾತ, ಆದರೆ ಆತನಿಗೆ ಹಸ್ತಪ್ರತಿ ಸಂಪಾದನೆ ಬಗ್ಗೆ ತಿಳುವಳಿಕೆ ಇತ್ತು "ಪ್ರಾಚೀನಗಳಾದ ಅನೇಕ ಪ್ರತಿಗಳಂ ತರಿಸಿ ನೋಡಿ ಅವುಗಳೊಗಣ ಲೇಖಕ ಪ್ರಮಾದಜನಿತ ದೋಷಗಳಂ ಪರಿಹರಿಸಿ ಛಂದಶ್ಶಾಸ್ತ್ರಾನುಗುಣವಾಗಿ ಷಟ್ಪದಿಗಳಂ ಪರಿಷ್ಕರಿಸಿ" "ಮುದ್ರಿಸಬೇಕಾದದೇ ಕರ್ತವ್ಯವಾಗಿ ತೋರಲರಿಂದ ಎಂಬ ಮಾತು ಹಸ್ತಪ್ರತಿ ಶಾಸ್ತ್ರದ ಪ್ರಕಾರ ಬಹಳ ಬೆಲೆಯುಳ್ಳದು. ಕ್ರಿ.ಶ. ೧೮೬೧ರಲ್ಲಿ ಮುದ್ರಣವಾದ ಈ ಗ್ರಂಥದಲ್ಲಿ ಪುಟಗಳು ii + ೩೮೭ + i ಇದ್ದು ಕೃತಿಯ ಅಂತ್ಯದಲ್ಲಿ "ಚತುಸ್ತ್ರಿಂಶತ್ಸಂಧಿಸಂಪೂರ್ಣಂ ಅಂತು ಸಂಧಿ ೩೪ಕ್ಕೆ ಪದ್ಯಗಳು ೧೯೦೮ಕ್ಕೆ ಮಂಗಳಮಸ್ತು" ಜೈಮಿನಿ ಭಾರತವು ಮುಗಿದುದು, ಎಂದಿದೆ. ಆದಿಯಲ್ಲಿ ಅವತಾರಿಕೆ ನಂತರ ವಿಷಯಾನುಕ್ರಮಣಿಕೆ, ಸಂಧಿ ಹೆಸರು ಮತ್ತು ಪುಟಸಂಖ್ಯೆ ಕೊಟ್ಟಿದ್ದಾರೆ. ಸಂಧಿಗೆ ಸಂಖ್ಯೆಗಳನ್ನು ಕೊಟ್ಟಿಲ್ಲ. ಅಂತ್ಯದಲ್ಲಿ ಒಂದು ಪುಟ ಅಶುದ್ಧ ಶುದ್ಧ ಪತ್ರಿಕೆಯು ಪ್ರಕಟವಾಗಿದ್ದು ಅದರಲ್ಲಿ ಗ್ರಂಥಪೂರ್ತಿ ೨೭ ಅಶುದ್ಧ ಪದಗಳ ಪಟ್ಟಿ ಕೊಟ್ಟಿದ್ದಾರೆ. ಇಂತಹ ಗ್ರಂಥಕ್ಕೆ ಅಂದಿನ ದಿನಮಾನಕ್ಕೆ ಮುದ್ರಣದೋಷಗಳು ಕಡಿಮೆ.

೧೮೯೯ರಲ್ಲಿ ಬೆಂಗಳೂರಿನ ಕೃಷ್ಣರಾಜ ವಿಲಾಸ ಮುದ್ರಾಕ್ಷರ ಶಾಲೆಯಿಂದ 'ನ್ಯಾಯದರ್ಪಣ' ಎಂಬ ಗ್ರಂಥ ಮುದ್ರಣವಾಗಿದೆ. ಈ ಕೃತಿಯ ಕರ್ತೃ, ಮಂಗಳೂರು ಜಿಲ್ಲಾ ಪುತ್ತೂರು ತಾಲೂಕ್ ಮುನಸೀಫರಾಗಿಯೂ 'ವಕೀಲರ ನಡವಳಿಕೆ' 'ವಕೀಲ ಧರ್ಮ' ಎಂಬ ಗ್ರಂಥಗಳನ್ನು ರಚಿಸಿದವರಾಗಿಯೂ ಇರುವ ತುಪಾಕಿ ಸುಬ್ಬಂಣಾಚಾರ್ಯರಿಂದ ರಚಿಸಲ್ಪಟ್ಟಿದ್ದು. ೧೮೯೯ರಲ್ಲಿ ಕೃಷ್ಣರಾಜ ವಿಲಾಸ ಮುದ್ರಾಕ್ಷರ ಶಾಲಾಧಿಕಾರಿಗಳಾಗಿದ್ದವರು ಬ॥ ನಾರಾಯಣಶೆಟ್ಟಿಯವರು. ಹಳೆಯ ಮುದ್ರಿತ ಗ್ರಂಥಗಳನ್ನು ಪರಿಶೀಲಿಸಿ ಕೃಷ್ಣರಾಜ ವಿಲಾಸ ಮುದ್ರಾಕ್ಷರ ಶಾಲಾ ಇತಿಹಾಸವನ್ನು ರಚಿಸಬಹುದು. ಸಾಹಿತ್ಯ ಸಂಸ್ಕೃತಿ ಪ್ರಸಾರಕ್ಕೆ ಮುಮ್ಮಡಿಯವರ ಕಾಣಿಕೆಯಲ್ಲಿ 'ಕೃಷ್ಣರಾಜ ವಿಲಾಸ ಮುದ್ರಾಕ್ಷರ ಶಾಲೆ' ಬಹುದೊಡ್ಡ ಕಾಣಿಕೆಯನ್ನು ಕೊಟ್ಟಿದ್ದು, ಅದನ್ನು ನಾವು ಸೂಕ್ಷ್ಮವಾಗಿ ಅಧ್ಯಯನ ಮಾಡಬೇಕಾಗಿದೆ.

('ನ್ಯಾಯದರ್ಪಣ' ಮುದ್ರಿತ ಕೃತಿಯನ್ನು ನನ್ನ ಗಮನಕ್ಕೆ ತಂದ ಶ್ರೀ ರಮೇಶ ಕಾರಂತ ಅವರಿಗೆ ಧನ್ಯವಾದಗಳು.)

ಡಾ. ನಿರ್ಮಲ್‌ರಾಜ್*

# ಮಹಾತ್ಮಗಾಂಧಿ ಹಾಗೂ ನಾಲ್ವಡಿ ಕೃಷ್ಣರಾಜ ಒಡೆಯರ್

ಮೈಸೂರು ಸಂಸ್ಥಾನ ಹಾಗೂ ಮಹಾತ್ಮಗಾಂಧೀಜಿಯವರ ಸಂಬಂಧಗಳು ಕರ್ನಾಟಕದ ಇತಿಹಾಸದಲ್ಲಿ ಮಾತ್ರವಲ್ಲದೆ ಭಾರತದ ಐತಿಹಾಸಿಕ ಪರಂಪರೆಯಲ್ಲಿ ಒಂದು ವಿಶೇಷ ಅಧ್ಯಯನವಾಗಿದೆ. ಏಕೆಂದರೆ ಮೈಸೂರು ಸಂಸ್ಥಾನ ಹಾಗೂ ಮಹಾತ್ಮಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟ ಬ್ರಿಟಿಷ್ ಪ್ರಭುತ್ವದ ವಸಾಹತು ನೀತಿಯಲ್ಲಿ ಕಂಡುಬರುವ ಎರಡು ಪ್ರಮುಖ ಘಟನೆಗಳಾಗಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕಕ್ಕೆ ವಿಶೇಷವಾಗಿ ಮೈಸೂರು ಸಂಸ್ಥಾನಕ್ಕೆ ಗಾಂಧೀಜಿಯವರ ಆಗಮನ–ಅವರ ವ್ಯಕ್ತಿತ್ವ ಹಾಗೂ ತತ್ವಗಳು ಮೈಸೂರು ಸಂಸ್ಥಾನದ ಇತಿಹಾಸ ಮತ್ತು ಜನಜೀವನದ ಮೇಲೆ ಬೀರಿದ ಪ್ರಭಾವ, ಅದಕ್ಕೆ ಪೂರಕವಾಗಿ ಮೈಸೂರು ಸಂಸ್ಥಾನದ ಆಳುವ ವರ್ಗ ಮತ್ತು ಜನಸಾಮಾನ್ಯರು ಗಾಂಧಿಯವರ ತತ್ವಗಳಿಗೆ ಪೂರಕವಾಗಿ ವ್ಯಕ್ತಪಡಿಸಿದ ಪ್ರತಿಕ್ರಿಯೆಗಳು ಪ್ರಮುಖ ಘಟನೆಗಳಾಗಿ ಚರಿತ್ರೆಯ ಪುಟಗಳಲ್ಲಿ ದಾಖಲಿಸಲ್ಪಟ್ಟಿವೆ.

ಮೈಸೂರು ಸಂಸ್ಥಾನ ಹಾಗೂ ಗಾಂಧೀಜಿಯವರು ಪರಸ್ಪರ ಸಂಧಿಸಿದ ಸಂದರ್ಭವು ಚಾರಿತ್ರಿಕವಾಗಿ ಅತ್ಯಂತ ವಿಶಿಷ್ಟಪೂರ್ಣವಾದುದು. ಏಕೆಂದರೆ ಆ ಕಾಲಕ್ಕಾಗಲೇ ಬ್ರಿಟಿಷರು ಭಾರತದಾದ್ಯಂತ ತಮ್ಮ ವಸಾಹತು ಪ್ರಭುತ್ವವನ್ನು ಸ್ಥಾಪಿಸುವುದರಲ್ಲಿ ಯಶಸ್ವಿಯಾಗಿದ್ದರು. ಬ್ರಿಟಿಷ್ ಆಡಳಿತದ ಪರಿಣಾಮವಾಗಿ ಪ್ರಮುಖವಾಗಿ ಆರ್ಥಿಕ ಕ್ಷೇತ್ರದಲ್ಲಿ ಪ್ರಗತಿಯ ನೆಪದಲ್ಲಿ ಹಲವು ಯೋಜನೆಗಳನ್ನು ಜಾರಿಗೆ ತರಲಾಗಿತ್ತು. ಉದಾಹರಣೆಗೆ ಭಾರೀ ಕೈಗಾರಿಕೆಗಳ ಸ್ಥಾಪನೆ, ಗಣಿಗಾರಿಕೆ, ಸಾರಿಗೆ, ಸಂಪರ್ಕ, ವಿದ್ಯುತ್ ಉತ್ಪಾದನೆ, ರಸ್ತೆ ಸೇತುವೆ ರೈಲ್ವೆ ಬಂದರುಗಳ ಅಭಿವೃದ್ಧಿ ಮುಂತಾದುವುಗಳನ್ನು ಕೈಗೊಳ್ಳಲಾಯಿತು. ಇಂತಹ ಅಭಿವೃದ್ಧಿ ಕಾರ್ಯಗಳು ಹಲವು ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳಿಗೆ ಕಾರಣವಾದವು.

ಇಂತಹ ಕ್ಲಿಷ್ಟ ಸಂದರ್ಭದಲ್ಲಿಯೇ ಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿ ದೇಶದಾದ್ಯಂತ ಸಂಚರಿಸಿ ಭಾರತೀಯರಲ್ಲಿ ಬ್ರಿಟಿಷ್ ಆಡಳಿತದ ವಿರುದ್ಧ ಜಾಗೃತಿಯನ್ನು ಉಂಟು ಮಾಡುತ್ತಿದ್ದರು. ಅದರಂತೆ ಕರ್ನಾಟಕಕ್ಕೂ ಆಗಮಿಸಿದ ಗಾಂಧೀಯವರು ಕನ್ನಡಿಗರಲ್ಲಿ ಬ್ರಿಟಿಷ್ ಪ್ರಭುತ್ವದ ವಿರುದ್ಧ ಪ್ರಮುಖವಾಗಿ ಅವರ ದುರಾಡಳಿತದಿಂದಾಗಿ ಜನಸಾಮಾನ್ಯರು ಹೇಗೆ ಅಪಾರ ಕಷ್ಟ ನಷ್ಟಗಳನ್ನನುಭವಿಸಿ ದುಃಸ್ಥಿತಿಗಿಳಿದಿದ್ದಾರೆಂಬುದರ ಅರಿವನ್ನು ಉಂಟು ಮಾಡುವುದರಲ್ಲಿ ಯಶಸ್ವಿಯಾದರು. ಉದಾಹರಣೆಗೆ ಗಾಂಧೀಜಿಯವರ ಅನುಪಮ ಆರ್ಥಿಕ ಕಲ್ಪನೆಗಳಾದ "ರಾಮರಾಜ್ಯ – ಗ್ರಾಮರಾಜ್ಯ" "ಖಾದಿ ಉತ್ಪಾದನೆ ಮತ್ತು ಬಳಕೆ", "ಗುಡಿಕೈಗಾರಿಕೆಗಳು ಹಾಗೂ ಕುಶಲಕಲೆಗಳು", ಸಮಪಾಲು – ಸಹಬಾಳ್ವೆ, "ಸ್ವದೇಶಿ ಪುರಸ್ಕಾರ – ವಿದೇಶಿ ಬಹಿಷ್ಕಾರ", ಸರ್ವೋದಯ, ಆರ್ಥಿಕ ಸ್ವಾವಲಂಬನೆ, ನಿರುದ್ಯೋಗ ಸಮಸ್ಯೆಯ ಪರಿಹಾರ, ಮದ್ಯಪಾನ ನಿರೋಧ, ಅಸ್ಪೃಶ್ಯತಾ ನಿವಾರಣೆ, ಹರಿಜನೋದ್ಧಾರ, ಸ್ತ್ರೀಸಮಾನತೆ ಹಾಗೂ ಪ್ರಗತಿ, ಹಳ್ಳಿಗಳ ಆರ್ಥಿಕ ಪ್ರಗತಿ ಮೊದಲಾದ ಆರ್ಥಿಕ ತತ್ವಗಳನ್ನು ಪ್ರಸಾರಗೊಳಿಸಿದರು. ಅವುಗಳು ವರ್ತಮಾನ ಕಾಲದ LPG (Liberalisation, Privatisation, Globalisation) ಜಾಗತೀಕರಣ, ಖಾಸಗೀಕರಣ, ಉದಾರೀಕರಣ ಈ ಮೂರು ಆರ್ಥಿಕ ನೀತಿಗಳ ಹಿನ್ನೆಲೆಯಲ್ಲಿ ಪ್ರಸ್ತುತ ಭಾರತದ ಆರ್ಥಿಕ ಸಮಸ್ಯೆಗಳನ್ನು ವಿಶೇಷವಾಗಿ ಗ್ರಾಮೀಣ ಪ್ರದೇಶಗಳ ಹಾಗೂ ಯುವಜನತೆಯು ಎದುರಿಸುತ್ತಿರುವ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದರಲ್ಲಿ ಸಹಕಾರಿಯಾಗಿವೆ.

ಗಾಂಧೀಜಿಯವರು ಮೈಸೂರು ಸಂಸ್ಥಾನದ ಬದನವಾಳು, ತಗಡೂರು, ಮೈಸೂರು, ಮಂಡ್ಯ, ಬೆಂಗಳೂರು, ತುಮಕೂರು, ಹಾಸನ, ಕಡೂರು ಮುಂತಾದ ಪ್ರದೇಶಗಳಿಗೆ ಭೇಟಿ ನೀಡಿದಾಗಲೆಲ್ಲಾ ತಮ್ಮ ಅಭಿಪ್ರಾಯಗಳನ್ನು ಜನಸಮುದಾಯದೊಡನೆ ಹಂಚಿಕೊಂಡರು. ತನ್ಮೂಲಕ ಪ್ರತಿಯೊಬ್ಬ ಭಾರತೀಯ ಪ್ರಜೆಯೂ ಆತ್ಮಗೌರವದಿಂದ ಬದುಕಬೇಕೆಂಬುದಾಗಿ ಬಯಸಿದ್ದರು. ಅವರ ಈ ಆಶಯಗಳಿಗೆ ಪೂರಕವಾಗಿ ಮೈಸೂರು ಸಂಸ್ಥಾನದಲ್ಲಿ ಪ್ರಧಾನವಾಗಿ ಗೃಹಕೈಗಾರಿಕೆಗಳು ಮತ್ತು ಗ್ರಾಮೀಣ ಕಸುಬುಗಳ

* ಇತಿಹಾಸ ಪ್ರಾಧ್ಯಾಪಕರು, ಮಹಾರಾಜ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು – ೫೭೦ ೦೦೫.

ಪುನಶ್ಚೇತನ ಹಾಗೂ ಅಭಿವೃದ್ಧಿ ಹೊಂದಿ ಸಂಸ್ಥಾನದಲ್ಲಿ ಆರ್ಥಿಕ ಮತ್ತು ಸಾಮಾಜಿಕ ಇತಿಹಾಸದಲ್ಲಿ ಬದಲಾವಣೆ ಸಾಧಿಸಲಾಯಿತು.

ಮೈಸೂರು ಸಂಸ್ಥಾನದ ಅಂದಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್, ಜಯಚಾಮರಾಜೇಂದ್ರ ಒಡೆಯರ್ ಮತ್ತು ಶ್ರೇಷ್ಠ ದಿವಾನರುಗಳಾದ ಸರ್. ಎಂ. ವಿಶ್ವೇಶ್ವರಯ್ಯ, ಸರ್. ಮಿರ್ಜಾ ಇಸ್ಮಾಯಿಲ್ ಮೊದಲಾದವರ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ಬೃಹತ್ ಕೈಗಾರಿಕೆಗಳು ಸ್ಥಾಪನೆಗೊಂಡು ಉತ್ಪಾದನಾ ವಲಯದಲ್ಲಿ ತೀವ್ರ ಪರಿಣಾಮವನ್ನುಂಟುಮಾಡಿದವು. ಇದರಿಂದ ದೇಶೀಯ ಕೈಗಾರಿಕೆಗಳು ಹಾಗೂ ಕುಶಲ ಕಲೆಗಳು ನಾಶವಾದವು. ಮಾಲೀಕರು ಅಪಾರ ನಷ್ಟವನ್ನನುಭವಿಸಿದರೆ ಕರಕುಶಲಗಾರರ ಕೈಚಳಕ ಕಾಣದಾಯಿತು. ನಿರುದ್ಯೋಗ ತೀವ್ರವಾಗಿ ಅಧಿಕಗೊಂಡಿತು. ಪಟ್ಟಣಗಳತ್ತ ಹಳ್ಳಿಗರ ವಲಸೆ ತೀವ್ರಗೊಂಡಿತು. ಗ್ರಾಮಗಳ ಸ್ವಾವಲಂಬನೆ ತಪ್ಪಿಹೋಗಿ ಪರಾವಲಂಬನೆ ಅಧಿಕವಾಯಿತು. ನಗರಗಳಲ್ಲಿ ಕೊಳಚೆಗೇರಿಗಳ ಸಂಖ್ಯೆ ಹೆಚ್ಚಾಯಿತು. ಇಂತಹ ವಿನಾಶಕಾರಿ ಸಂದರ್ಭದಲ್ಲಿ ಮೈಸೂರು ಸಂಸ್ಥಾನಕ್ಕೆ ಗಾಂಧಿಯವರ ಆಗಮನ ಪ್ರಮುಖವಾಗಿ ಅವರ ಗ್ರಾಮೀಣ ನೀತಿಯ ಮಹತ್ವ, ಗೃಹಕೈಗಾರಿಕೆಗಳ ಸುಧಾರಣೆ, ಖಾದಿಪ್ರಚಾರ ಮುಂತಾದ ತತ್ವಗಳು ಮೈಸೂರು ಸಂಸ್ಥಾನದಲ್ಲಿ ತೀವ್ರ ಸಂಕಟಕ್ಕೀಡಾಗಿದ್ದ ದೇಶೀಯ ಕೈಗಾರಿಕೆಗಳು ಹಾಗೂ ಸ್ಥಳೀಯ ಕುಶಲಕಲೆಗಳ ಪುನರ್ ಜೀವನಕ್ಕೆ ವರದಾನವಾಯಿತೆಂಬುದು ಗಮನಾರ್ಹ. ಇದಕ್ಕೆ ನಿದರ್ಶನವಾಗಿ ಬದನವಾಳು, ತಗಡೂರು, ಮೈಸೂರು, ಬೆಂಗಳೂರು, ಹಾಸನ, ಕಡೂರು, ಮಂಡ್ಯ, ತುಮಕೂರು, ಚಿತ್ರದುರ್ಗ ಮೊದಲಾದ ಕಡೆ ಆರಂಭವಾದ ಖಾದಿ ಕೇಂದ್ರಗಳು, ಉಣ್ಣೆ ಗಿರಣಿಗಳು ಹಾಗೂ ಹಲವು ಬಗೆಯ ಸ್ಥಳೀಯ ಕೈಗಾರಿಕೆಗಳು ಅಭೂತಪೂರ್ವ ಮುನ್ನಡೆ ಸಾಧಿಸಿದವು.

ಮೈಸೂರು ಸಂಸ್ಥಾನವು ಬ್ರಿಟಿಷ್ ಸಾಮ್ರಾಜ್ಯದ ಪ್ರಮುಖ ಆಶ್ರಿತ ಸಂಸ್ಥಾನವಾಗಿದ್ದು, ತನ್ನ ಪರಿಮಿತ ದ್ವಿಮುಖ ಅಧಿಕಾರ ಹಾಗೂ ಆರ್ಥಿಕ ಸಂಪನ್ಮೂಲಗಳ ಇತಿಮಿತಿಗಳಲ್ಲಿ ಮೈಸೂರು ಒಡೆಯರ ವಿಶೇಷವಾಗಿ ಶ್ರೇಷ್ಠ ದಿವಾನರುಗಳ ಮಾರ್ಗದರ್ಶನದಲ್ಲಿ ಇಡೀ ಬ್ರಿಟಿಷ್ ಸಾಮ್ರಾಜ್ಯದಲ್ಲಿಯೇ ಸರ್ವತೋಮುಖ ಅಭಿವೃದ್ಧಿ ಹೊಂದಿ, 'ಮಾದರಿ ರಾಜ್ಯ' ಎಂಬ ಕೀರ್ತಿಗೆ ಪಾತ್ರವಾದುದು ಭಾರತ ಮಾತ್ರವಲ್ಲ ಪ್ರಪಂಚದ ವಸಾಹತು ನೀತಿಯ ಇತಿಹಾಸದಲ್ಲಿಯೇ ಅತ್ಯಂತ ವೈಶಿಷ್ಟ್ಯಪೂರ್ಣ ಅಧ್ಯಾಯವಾಗಿದೆಯೆಂದರೆ ಉತ್ಪ್ರೇಕ್ಷೆಯಾಗಲಾರದು. ಬ್ರಿಟಿಷರ ವಸಾಹತು ನೀತಿಯ ಶೋಷಣೆಗೊಳಪಟ್ಟು ಮೈಸೂರು ಸಂಸ್ಥಾನದ ಆರ್ಥಿಕ ಪರಿಸರ ವಿಶೇಷವಾಗಿ ಗ್ರಾಮಗಳು, ಗ್ರಾಮೀಣ ಕಸುಬುಗಳು, ಕುಶಲಕೌಶಲ್ಯಗಳು, ಗೃಹಕೈಗಾರಿಕೆಗಳು ಮೊದಲಾದವುಗಳು ವಿನಾಶದ ಅಂಚಿಗೆ ತಲುಪಿದ್ದಂತಹ ಸಂದರ್ಭದಲ್ಲಿ ಗಾಂಧೀಯವರು ಮೈಸೂರು ಸಂಸ್ಥಾನಕ್ಕೆ ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯಲ್ಲಿ ಆಗಮಿಸಿದ್ದು ಒಂದು ವರದಾನವೆಂದೇ ಅಭಿಪ್ರಾಯಪಡಬಹುದು. ಗಾಂಧೀಜಿಯವರ ಒತ್ತಾಸೆ ಹಾಗೂ ಪ್ರೋತ್ಸಾಹಗಳಿಂದ ಪ್ರಭಾವಿತರಾದ ಮೈಸೂರು ಸಂಸ್ಥಾನದ ಅಂದಿನ ಆಳುವ ವರ್ಗದವರು ಗಾಂಧೀಯವರ ಕರೆಗೆ ಓಗೊಟ್ಟು ಗ್ರಾಮಗಳ ವಿಶೇಷವಾಗಿ ಗೃಹಕೈಗಾರಿಕೆಗಳು ಮತ್ತು ಕುಶಲಕೌಶಲ್ಯಗಳ ಪುನಶ್ಚೇತನ ಹಾಗೂ ಪುನರ್‌ನಿರ್ಮಾಣ ಕಾರ್ಯಗಳಿಗೆ ರಾಜ್ಯ ವ್ಯವಸ್ಥೆ ಹಾಗೂ ರಾಜ್ಯಸಂಪನ್ಮೂಲಗಳನ್ನು ಬಳಸಿಕೊಂಡು ಸಂಪೂರ್ಣ ಒತ್ತಾಸೆ, ಸಹಕಾರ, ಪ್ರೋತ್ಸಾಹ ಮೊದಲಾದವುಗಳನ್ನು ಕಲ್ಪಿಸಿದುದರ ಪರಿಣಾಮವಾಗಿ ಗ್ರಾಮೀಣ ಜನರ ಆರ್ಥಿಕ ಮತ್ತು ಸಾಮಾಜಿಕ ಬದುಕು ಅದ್ಭುತವಾದ ಪ್ರಗತಿಯನ್ನು ಕಾಣಲು ಸಾಧ್ಯವಾಯಿತು. ಗಾಂಧೀಜಿಯವರ ಪ್ರಭಾವದಿಂದಾಗಿ ಅಸ್ಪೃಶ್ಯತಾ ನಿವಾರಣೆ, ಹರಿಜನೋದ್ಧಾರಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಅದಕ್ಕಾಗಿ ಸಂಸ್ಥಾನದಾದ್ಯಂತ ನೂರಾರು ಹರಿಜನ ಅಭಿವೃದ್ಧಿ ಸಂಘಗಳು ಸ್ಥಾಪನೆಗೊಂಡವು. ಪ್ರಧಾನವಾಗಿ ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣ ಚಳುವಳಿಗಳು ತೀವ್ರಗೊಂಡವು.

೧೯೧೫ರ ಹೊತ್ತಿಗೆ ಮೊದಲ ಬಾರಿಗೆ ಗಾಂಧೀ ಪ್ರಾಂತ್ಯವೆಂದೇ ಬಣ್ಣಿಸಲಾಗಿದ್ದ ಕರ್ನಾಟಕಕ್ಕೆ ಭೇಟಿ ನೀಡಿದ್ದ ಗಾಂಧೀಜಿಯವರು ಅನೇಕ ಸಂದರ್ಭಗಳಲ್ಲಿ ಕರ್ನಾಟಕದ ವಿವಿಧ ಭಾಗಗಳನ್ನು ಸಂದರ್ಶಿಸಿದ್ದರು. ೧೯೨೭ರಲ್ಲಿ ಮಹಾತ್ಮಾ ಗಾಂಧೀಜಿ ನಂದಿಬೆಟ್ಟಕ್ಕೆ ಬಂದಿದ್ದಾಗ ಅಂದಿನ ಮೈಸೂರರಸರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಸಿಲ್ವರ್ ಜ್ಯೂಬಿಲಿ (ಕಿರೀಟೋತ್ಸವದ ರಜತ ಮಹೋತ್ಸವ) ಕಾರ್ಯಕ್ರಮ ಏರ್ಪಾಡಾಗಿತ್ತು. ಆಗ ಮಹಾರಾಜರ ಆಹ್ವಾನದ ಮೇರೆಗೆ ಗಾಂಧೀಜಿಯವರು ಅರಮನೆಗೆ ಭೇಟಿಯಿತ್ತಾಗ ಅಲ್ಲಿ ರಾಜನ ಪರಿವಾರದವರು ರಾಟೆಯಲ್ಲಿ ನೂಲು ನೇಯುತ್ತಿದ್ದುದನ್ನು ಕಂಡರು. ಇದರಿಂದ ಸಂತೃಪ್ತರಾಗಿ ಹಿಂದೆ ಪುರಾಣದಲ್ಲಿ ಜನಕ ಮಹಾರಾಜನು ಇದೇ ರೀತಿಯ ಆಡಳಿತ ನಡೆಸಿದ್ದನೆಂಬುದನ್ನು ಸ್ಮರಿಸಿಕೊಂಡು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಗೆ 'ರಾಜರ್ಷಿ' ಎಂಬ ಬಿರುದು ನೀಡಿ ಗೌರವಿಸಿದರು. ಆದರೆ ಆ ಸಂದರ್ಭದಲ್ಲಿ ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳವಳಿಯ ಬಿರುಸಿರಲಿಲ್ಲ. ಮೈಸೂರು ಸಂಸ್ಥಾನವೂ ಸೇರಿದಂತೆ ರಾಷ್ಟ್ರದಲ್ಲಿ ಆಗ ಒಟ್ಟು

೫೬೩ ದೇಶೀಯ ಸಂಸ್ಥಾನಗಳಿದ್ದವು. ಇವೆಲ್ಲ ಆಂತರ್ಯವಾಗಿ ಬ್ರಿಟಿಷರ ಕೈಯಲ್ಲೇ ಇದ್ದುದರಿಂದ ದೇಶೀಯ ಸಂಸ್ಥಾನಗಳಲ್ಲಿ ಸ್ವಾತಂತ್ರ್ಯ ಹೋರಾಟದ ಕಾವು ಅಷ್ಟೊಂದು ತೀವ್ರವಾಗಿರಲಿಲ್ಲ. ಇಂತಹ ಸನ್ನಿವೇಶದಲ್ಲಿ ಕರ್ನಾಟಕಕ್ಕೆ ವಿಶೇಷವಾಗಿ ಮೈಸೂರು ಸಂಸ್ಥಾನಕ್ಕೆ ಹಲವು ಸಂದರ್ಭಗಳಲ್ಲಿ ಭೇಟಿ ನೀಡಿದ ಗಾಂಧೀಜಿಯವರ ಪ್ರೇರಣೆ, ಮಾರ್ಗದರ್ಶನ ಹಾಗೂ ನಾಯಕತ್ವದಲ್ಲಿ ರಾಷ್ಟ್ರೀಯ ಚಳುವಳಿಯು ಹೊಸ ರೂಪವನ್ನು ಪಡೆದುಕೊಂಡಿತು.

ಕರ್ನಾಟಕದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರಾದ ಗಂಗಾಧರರಾವ್ ದೇಶಪಾಂಡೆ, ಆಲೂರು ವೆಂಕಟರಾಯ, ಶ್ರೀನಿವಾಸರಾವ್ ಕೌಜಲಗಿ, ಕಡಪಾ ರಾಘವೇಂದ್ರರಾಯ, ಕಾರ್ನಾಡ್ ಸದಾಶಿವರಾವ್, ನಾ.ಸು. ಹರ್ಡೀಕರ್, ಆರ್.ಆರ್. ದಿವಾಕರ್, ಹರ್ಡೀಕರ್ ಮಂಜಪ್ಪ, ಕೆ.ಸಿ. ರೆಡ್ಡಿ, ಎಸ್. ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ, ಟಿ. ಸಿದ್ದಲಿಂಗಯ್ಯ, ಸಾಹುಕಾರ್ ಚೆನ್ನಯ್ಯ, ಕೆ.ಟಿ. ಭಾಷ್ಯಂ, ಎಚ್.ಸಿ. ದಾಸಪ್ಪ, ಹೆಚ್.ಕೆ. ವೀರಣ್ಣಗೌಡ, ಚನ್ನಿಗರಾಮಯ್ಯ, ತಗಡೂರು ರಾಮಚಂದ್ರರಾಯ, ವೆಂಕಟಕೃಷ್ಣಯ್ಯ, ಎಂ.ಎಸ್. ಜೋಯಿಸ್, ಎಚ್.ಎಸ್. ದೊರೆಸ್ವಾಮಿ, ಸೀತಾರಾಮ ಅಯ್ಯಂಗಾರ್, ಪ್ರಾಣೇಶ್ವರರಾವ್, ಕೆ. ಶ್ರೀನಿವಾಸನ್, ಸುರೇಂದ್ರ ಕೌಲಗಿ ಮುಂತಾದವರ ಹಾಗೂ ಕಮಲಾದೇವಿ ಚಟ್ಟೋಪಾಧ್ಯಾಯ, ಮಹಾದೇವಿ ನಾರಾಯಣ ಹೆಗ್ಡೆ, ಮಹಾದೇವಿ ಸಣ್ಣಪ್ಪ ಹೆಗ್ಡೆ, ಮೂಕಾಂಬಾ, ಗೌರಿ ಗಣಪತಿ ಹೆಗ್ಡೆ, ಮಹಾದೇವಿ ಲಕ್ಷ್ಮಿನಾರಾಯಣ ಭಟ್ಟ, ಗಂಗಮ್ಮ ರಾಮಭಟ್ಟ, ರಮಾಬಾಯಿ ಪ್ರಭು, ದೇವಯಾನಿ ಲಕ್ಷ್ಮಿ ಹರಿಪ್ಪೆ, ಪಂಡರಿಬಾಯಿ ಕೋಡಿಗದ್ದೆ, ಸೇತುಬಾಯಿ ಮಡಗಾಂವಕರ್, ಶಾಂತಬಾಯಿ ಕರಮಕರ, ಕೃಷ್ಣಬಾಯಿ ಪಂಜೇಕರ, ಶಕುಂತಲಾ, ದಾಬಡೆ, ಸುಗುಣಾಕಾರ್ನಾಡ್ ದೇಸಾಯಿ, [illegible] ಕಾರ್ನಾಡ್, ಲೀಲಾವತಿ ವೆಂಕಟೇಶ್, ಗಂಗು ಜೆಳವಡಿ, ಸರೋಜ, ಲೀಲಾ ಜವಳಿ, ಇಂದಿರಾ ಜೆಳವಾಡಿ, ಸುಶೀಲಾಬಾಯಿ ಕುಲಕರ್ಣಿ, ದುಂಡಸಿಯ ಸಿದ್ಧಮ್ಮ, ಉಮಾಬಾ[illegible], ಈಸೂರಿನ ಪಾರ್ವತಮ್ಮ, ಸಿದ್ಧಮ್ಮ, ಯಶೋಧರಮ್ಮ ದಾಸ[illegible] ಸುಬ್ಬಮ್ಮ ಜೋಯಿಸ, ವೆಂಕಟಮ್ಮ, ಟಿ. ಸುನಂದಮ್ಮ, ವಿಶಾಲಕ್ಷ್ಮಮ್ಮ ಸಂಜಪ್ಪಯ್ಯ, ಪಾರ್ವತಮ್ಮ ಸಿದ್ಧಲಿಂಗಯ್ಯ, ಇಂದಿರಾ ಕೃಷ್ಣಮೂರ್ತಿ, ಬಳ್ಳಾರಿ ಸಿದ್ಧಮ್ಮ ಮೊದಲಾದ ಕರ್ನಾಟಕದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರ್ತಿಯರು ಗಾಂಧೀಯವರಿಂದ ಪ್ರಭಾವಿತಗೊಂಡು ಸ್ವಾತಂತ್ರ್ಯ ಹೋರಾಟದ ಜೊತೆಜೊತೆಗೆ ಸಂಸ್ಥಾನದ ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರಗಳ ಬದಲಾವಣೆಗೆ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು.

ಅಂತಿಮವಾಗಿ ಗಾಂಧಿ ಮತ್ತು ಮೈಸೂರು ಸಂಸ್ಥಾನಗಳ ಸಂಬಂಧ, ಬ್ರಿಟಿಷ್ ಸಾಮ್ರಾಜ್ಯ ಹಾಗೂ ಆಶ್ರಿತ ಸಂಸ್ಥಾನವಾಗಿದ್ದ ಮೈಸೂರು ಪ್ರಾಂತ್ಯದ ನಡುವಣ ಸಂಘರ್ಷ ಇವುಗಳ ಜೊತೆಗೆ ಜನಸಾಮಾನ್ಯರ ಆರ್ಥಿಕ ಮತ್ತು ಸಾಮಾಜಿಕ ಬದುಕು ಹೇಗೆ ಗ್ರಾಮೀಣ ಕೈಗಾರಿಕೆಗಳು ಹಾಗೂ ಕುಶಲ ಕಲೆಗಳ ಪುನಶ್ಚೇತನದೊಂದಿಗೆ ಪರಸ್ಪರ ಸಹಕಾರ ಸಮನ್ವಯತೆಗಳನ್ನು ಹೊಂದಿದ್ದವೆಂಬುದನ್ನು ಭಾರತದ ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬಹುದು.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಜಿ.ಆರ್. ಪ್ರಾಣೇಶ್ವರರಾವ್., ೧೯೯೯. ಭಾರತದ ಸ್ವಾತಂತ್ರ ಮೇರು ವ್ಯಕ್ತಿಗಳು, ಮೈಸೂರು.
೨. ಬಸವರಾಜ ಕಮ್ಮಾರ್., ೧೯೯೮. ಗ್ರಾಮೀಣ ಆರ್ಥಿಕ ಅಭಿವೃದ್ಧಿ ಹಾಗೂ ಯೋಜನೆಗಳು, ಗುಲ್ಬರ್ಗಾ.
೩. ಒಡೆಯರ್ ಡಿ. ಹೆಗ್ಗಡೆ., ೧೯೯೫. ಆರ್ಥಿಕ ಚಿಂತನೆಯ ಹೊಂಬೆಳಕು, ಬೆಂಗಳೂರು.
೪. ಸಿದ್ದವ್ವನಹಳ್ಳಿ ಕೃಷ್ಣಶರ್ಮ., ೧೯೬೯. ಗಾಂಧೀ ಮತ್ತು ಕರ್ನಾಟಕ, ಬೆಂಗಳೂರು.
೫. ಎ.ಆರ್. ಕಟ್ಟಿ., ೧೯೯೧. ಪಾಶ್ಚಿಮಾತ್ಯ ಮತ್ತು ಭಾರತೀಯ ಸಾಮಾಜಿಕ ಚಿಂತನೆ, ಗದಗ.

ಡಾ. ಎಂ. ಕುಮಾರಸ್ವಾಮಿ*

# ಮೈಸೂರು ಸಂಸ್ಥಾನದಲ್ಲಿ ಮೊದಲ ಪತ್ರಿಕಾ ನಿರ್ಬಂಧ ದೇಶಾಭಿಮಾನಿ ಮುಟ್ಟುಗೋಲು ಪ್ರಕರಣ

ಪತ್ರಿಕೆಗಳು ಸಾರ್ವಜನಿಕ ಜೀವನದ ಬೆಳವಣಿಗೆಯಲ್ಲಿ ಮಹತ್ವವಾದ ಪಾತ್ರವನ್ನು ವಹಿಸಿವೆ. ಸಾಮಾಜಿಕವಾಗಿ ಪತ್ರಿಕೆಗಳು ತರಬಹುದಾದ ಬದಲಾವಣೆ ಎಲ್ಲರಿಗೂ ಗೊತ್ತಿರುವ ವಿಚಾರವೇ ಆಗಿದೆ. ಇಂದು ಆಧುನಿಕ ಕಾಲಾವಧಿಯಲ್ಲಿ ಪತ್ರಿಕೆಗಳು ಒಂದು ಲಾಭದಾಯಕ ಉದ್ಯಮವಾಗಿ ಬೆಳೆದಿದೆ. ಆದರೆ ಸ್ವಾತಂತ್ರ್ಯ ಪೂರ್ವದಲ್ಲಿ ಪತ್ರಿಕೆಗಳ ಹುಟ್ಟು ಮತ್ತು ಅದರ ಪಾತ್ರ ಕೇವಲ ಸುದ್ದಿ ಪ್ರಸಾರಕ್ಕೆ ಮಾತ್ರ ಸೀಮಿತಗೊಳ್ಳದೇ ಅಂದಿನ ಸಮಕಾಲೀನ ಬ್ರಿಟೀಷ್ ಆಡಳಿತಶಾಹಿ ವಿರೋಧಿ ಮತ್ತು ರಾಷ್ಟ್ರೀಯವಾದಿಗಳ ಧ್ವನಿಯಾಗಿ ಕಾರ್ಯನಿರ್ವಹಿಸುವುದರ ಮೂಲಕ ಹೆಚ್ಚಿನ ಭಾರತೀಯರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವಂತೆ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿವೆ. ಆದ್ದರಿಂದಾಗಿಯೇ ಆಧುನಿಕ ಪ್ರಪಂಚದಲ್ಲಿ ಪತ್ರಿಕೋದ್ಯಮಕ್ಕೆ ನಾಲ್ಕನೇ ಅಂಗ ಸ್ಥಾನವನ್ನು ನೀಡಿ ಗೌರವಿಸಲಾಗಿದೆ.[೧] ಆರಂಭದಲ್ಲಿ ಪ್ರಪಂಚದ ಕನ್ನಡಿಯಾಗಿ ಪತ್ರಿಕೆಗಳು ಬೃಹದಾಕಾರವಾಗಿ ಬೆಳೆದಿವೆ. ಪತ್ರಿಕೆಗಳು ಕ್ರಿಯಾತ್ಮಕವಾದ ಸ್ವಾವಲಂಬಿ, ಸ್ವಾಭಿಮಾನಿ, ಸ್ವಾತಂತ್ರ್ಯ, ಘನತೆ ಗೌರವಗಳ ಪ್ರತೀಕವಾಗಿ ಸೇವೆಯನ್ನು ಮಾಡುತ್ತಾ ಬಂದಿವೆ. ಆರಂಭದಲ್ಲಿ ಪ್ರಪಂಚದ ಕನ್ನಡಿಯಾಗಿದ್ದ ಪತ್ರಿಕೆಗಳು ಇಂದು ಬೃಹದಾಕಾರವಾಗಿ ಬೆಳೆದಿವೆ.

ಭಾರತದಲ್ಲಿ ಆರಂಭದ ದಿನದಲ್ಲಿ ಪತ್ರಿಕೆಗಳು ಧರ್ಮ ಪ್ರಸಾರ, ದೇಶಾಭಿಮಾನಿ ಸೇವಾ ಮನೋಭಾವನೆಯ ಪ್ರೇರಕವಾಗಿ ಆರಂಭಗೊಂಡು ಇಂದು ವಿಶ್ವಕೋಶ ಸ್ವರೂಪವನ್ನು ಪಡೆದಿದೆ. ಭಾರತದಲ್ಲಿ ಪತ್ರಿಕೆಗಳ ಯುಗ ಆರಂಭಗೊಂಡಿದ್ದು ಬ್ರಿಟೀಷರ ಆಗಮನಾನಂತರವೇ. ಜೇಮ್ಸ್ ಅಗಸ್ಟಸ್ ಹಿಕಿ ೨೦-೦೧-೧೭೮೦ರಲ್ಲಿ ಬೆಂಗಾಲ್ ಗೆಜೆಟ್ ಅಥವಾ ಕಲ್ಕತ್ತಾ ಜನರಲ್ ಅಡ್ವಟೈಜರ್‌ನ ಮೂಲಕ ಅನಂತರದಲ್ಲಿ ರಾಜಾರಾಮ್ ಮೋಹನ್‌ರಾಯ್ ಸಂವಾದ ಕೌಮುದಿ, ಮೀರತ್-ಉಲ್-ಅಕ್ಬಾರ್, ಬ್ರಾಹ್ಮನಿಕಲ್ ಮ್ಯಾಗಜೀನ್ ಮತ್ತು ಇತರೆ ಪತ್ರಿಕೆಗಳನ್ನು ಆರಂಭಿಸುವುದರ ಮೂಲಕ ಭವಿಷ್ಯದ ಪತ್ರಿಕೋದ್ಯಮಕ್ಕೆ ನಾಂದಿ ಹಾಡಿದರು. ೧೯ನೇ ಶತಮಾನದ ಅಂತ್ಯ ಮತ್ತು ೨೦ನೇ ಶತಮಾನದ ಆರಂಭದಲ್ಲಿ ಭಾರತೀಯ ನಾಯಕರುಗಳಾದ ತಿಲಕ್, ಮಹಾತ್ಮಗಾಂಧೀಜಿಯಂತಹವರು ಕೂಡ ಪತ್ರಿಕೆಗಳಾದ ಕೇಸರಿ, ಮರಾಟಿ, ಯಂಗ್ ಇಂಡಿಯನ್, ನವಜೀವನ ಮತ್ತು ಹರಿಜನ್‌ದಂತಹ ಪತ್ರಿಕೆಗಳನ್ನು ಆರಂಭಿಸಿ ಸಾರ್ವಜನಿಕರಲ್ಲಿ ರಾಷ್ಟ್ರೀಯ ಜಾಗೃತಿ ಮೂಡಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ರಾಷ್ಟ್ರೀಯವಾದಿಗಳ ಈ ಪತ್ರಿಕಾ ಕಾರ್ಯಚಟುವಟಿಕೆಗಳನ್ನು ತಡೆಯುವ ಉದ್ದೇಶದಿಂದ ೧೯ನೇ ಶತಮಾನದಲ್ಲಿ ಬ್ರಿಟೀಷ್ ಸರ್ಕಾರ ಅನೇಕ ಪತ್ರಿಕಾ ನಿರ್ಬಂಧ ಕಾಯಿದೆಗಳನ್ನು ಜಾರಿಗೆ ತಂದಿತು. ಅದರಲ್ಲಿಯೂ ಪ್ರಮುಖವಾಗಿ ೧೮೭೮ರಲ್ಲಿ ವೈಸರಾಯ್ ಲಾರ್ಡ್ ಲಿಟ್ಟನ್ ಜಾರಿಗೆ ತಂದ ದೇಶೀಯ ಭಾಷಾ ಪತ್ರಿಕಾ ಕಾಯಿದೆ ಭಾರತೀಯ ಪತ್ರಿಕೋದ್ಯಮದ ಮೇಲೆ ಬಹು ಪ್ರಹಾರವಾಗಿತ್ತು.[೨] ಇಂತಹ ನಿರ್ಬಂಧ ಕಾಯಿದೆಗಳ ನಡುವೆಯೂ ಪತ್ರಿಕೆಗಳು ಅಂದಿನ ರಾಷ್ಟ್ರೀಯ ಹೋರಾಟದಲ್ಲಿ ಗಣನೀಯವಾದ ಪಾತ್ರವನ್ನು ವಹಿಸಿವೆ.

**ಕರ್ನಾಟಕ**

ಮೈಸೂರು ಸಂಸ್ಥಾನದಲ್ಲಿ ಪತ್ರಿಕೆಗಳ ಹುಟ್ಟು ಇತರೆ ಪ್ರದೇಶಗಳಿಗೆ ಹೋಲಿಸಿದರೆ ನಿಧಾನಗತಿಯಿಂದ ಆರಂಭಗೊಂಡರೂ ಇಲ್ಲಿನ ಪರಿಸ್ಥಿತಿ ವಿಭಿನ್ನವಾಗಿದ್ದಿತು. ೧೮೫೯ರಲ್ಲಿ ಆರಂಭಗೊಂಡಿತೆಂದು ಹೇಳಲ್ಪಡುವ ಮಿಸ್ಟರ್ ಜೇಮ್ಸ್‌ರವರ ಬೆಂಗಳೂರು ಹೆರಾಲ್ಡ್ ಇಂಗ್ಲೀಷ್ ಪತ್ರಿಕೆ ಈ ಪ್ರದೇಶದ ಮೊದಲ ಪತ್ರಿಕೆಯಾದರೂ ಈ ಭಾಗದ ಕನ್ನಡದ ಮೊದಲ ಪತ್ರಿಕೆ ಎಂಬ ಹೆಗ್ಗಳಿಕೆ ಭಾಷ್ಯಂ ತಿರುಮಲಾಚಾರ್ಯ ರಿಂದ ೧೮೫೯ರಲ್ಲಿ ಆರಂಭಗೊಂಡ ಮೈಸೂರು **'ವೃತ್ತಾಂತ ಬೋಧಿನಿ'**ಯೇ ಆಗಿದೆ.[೩] ರಾಷ್ಟ್ರದ ಇತರೆ ಭಾಗಗಳಿಗೆ ಹೋಲಿಸಿದರೆ ಸಂಸ್ಥಾನದಲ್ಲಿ ಪತ್ರಿಕೆಗಳ ಹುಟ್ಟಿಗೆ ಪ್ರೋತ್ಸಾಹದಾಯಕ ವಾತಾವರಣವಿದ್ದಿತು. ತಿರುಮಲಾಚಾರ್ಯರು **ವೃತ್ತಾಂತ ಬೋಧಿನಿ**ಯನ್ನು ಆರಂಭಿಸಲು ಆರ್ಥಿಕ ಮುಗ್ಗಟ್ಟಿನಿಂದ ಸಹಾಯವನ್ನು ಬಯಸಿದಾಗ ಮಹಾರಾಜರಾದ ಮುಮ್ಮಡಿ ಕೃಷ್ಣರಾಜ ಒಡೆಯರು ೩೦೦೦ ರೂಪಾಯಿಗಳ ದೇಣಿಗೆಯನ್ನು ನೀಡುವುದರ ಮೂಲಕ ಪತ್ರಿಕೆಗಳ

*ಮುಖ್ಯಸ್ಥರು, ಇತಿಹಾಸ ಮತ್ತು ಪ್ರಾಕ್ತಾನಶಾಸ್ತ್ರ, ತುಮಕೂರು ವಿಶ್ವವಿದ್ಯಾಲಯ, ತುಮಕೂರು.

ಹುಟ್ಟಿಗೆ ಕಾರಣರಾದರು.[೪] ಈ ಸಹಾಯದ ನಡುವೆಯೂ ವೃತ್ತಾಂತ ಬೋಧಿನಿ ಪತ್ರಿಕೆ ಆಡಳಿತ ವಿಚಾರದ ಸುದ್ದಿಗೆ ಸಂಬಂಧಿಸಿದಂತೆ ಯಾವುದೇ ವಿನಾಯಿತಿಯನ್ನು ಮಾತ್ರ ತೋರದೆ ತನ್ನ ಪತ್ರಿಕಾ ಮೌಲ್ಯಗಳನ್ನು ಕಾಯ್ದುಕೊಂಡಿತ್ತು. ಇಂತಹ ಪ್ರೋತ್ಸಾಹದಾಯಕ ವಾತಾವರಣ ಸಂಸ್ಥಾನದ ಸಮಕಾಲೀನ ರಾಷ್ಟ್ರೀಯ ಹೋರಾಟಗಳ ನಡುವೆ ಅನೇಕ ಪತ್ರಿಕೆಗಳು ಸ್ಥಾಪನೆಗೊಂಡವು. ತಿರುಮಲಾಚಾರ್ಯ ಮತ್ತು ಅವರ ಮಗ ಭಾಷ್ಯಂ ಭಾಷ್ಯಾಚಾರ್ಯರು ತಮ್ಮ ಮತ್ತೊಂದು ಪತ್ರಿಕೆಯಾದ **ಕರ್ನಾಟಕ ಪ್ರಕಾಶಿಕೆ**ಯನ್ನು ೧೮೬೫ರಲ್ಲಿ ಆರಂಭಿಸಿದರು. ಆನಂತರದಲ್ಲಿ ಬಿ. ರೈಸ್‌ರವರ ಅರುಣೋದಯ ೧೮೬೨, ೧೮೬೩ರ ಉರ್ದುಪತ್ರಿಕೆ ಖಾಸಿಂ-ಉಲ್-ಅಕ್ಬಾರ್, ವೆಂಕಟಕೃಷ್ಣಯ್ಯರವರಿಂದ ೧೮೮೫ರ ಪತ್ರಿಕೋದ್ಯಮ ಸಾಧ್ವಿ, ಬಾಸೆಲ್ ಮಿಷನ್ ವತಿಯಿಂದ ವೃತ್ತಾಂತ ಚಿಂತಾಮಣಿ ಮತ್ತು ೧೮೯೨ ರಲ್ಲಿ ಶ್ರೀ ಕೆ. ಶ್ರೀನಿವಾಸ ಅಯ್ಯಂಗಾರ್‌ರಿಂದ 'ದೇಶಾಭಿಮಾನಿ' ಪತ್ರಿಕೆ ಆರಂಭಿಸಲ್ಪಟ್ಟಿತು.[೫] ದೇಶಾಭಿಮಾನಿ ಪತ್ರಿಕೆ ಸಂಸ್ಥಾನದಲ್ಲಿ ತನ್ನ ನೇರ ನುಡಿ, ಆಡಳಿತದ ವಿಮರ್ಶೆ ಮತ್ತು ಕಟು ಟೀಕೆ ಟಿಪ್ಪಣಿಗಳಿಗೆ ಜನ ಜನಿತವಾಗಿದ್ದಿತು. ಒಂದೆಡೆ ಪತ್ರಿಕೆಗಳಿಗೆ ಪ್ರೋತ್ಸಾಹದಾಯಕ ಮುಕ್ತ ವಾತಾವರಣವಿದ್ದಾಗ್ಯೂ ದೇಶಾಭಿಮಾನಿ ಪತ್ರಿಕೆ ಕೈಗೊಂಡ ಸರ್ಕಾರಿ ಟೀಕಾತ್ಮಕ ಸುದ್ದಿಗಳು ಮತ್ತು ವಿಮರ್ಶೆಗಳು ದೇಶಾಭಿಮಾನಿ ಪತ್ರಿಕೆಯನ್ನು ನಿರ್ಬಂಧಕ್ಕೆ ಒಳಗೊಳ್ಳುವಂತೆ ಮಾಡಿತು. ಆ ಮೂಲಕ ಮೈಸೂರು ಸಂಸ್ಥಾನದಲ್ಲಿ ಮೊಟ್ಟ ಮೊದಲ ಬಾರಿಗೆ ಪತ್ರಿಕೆಯೊಂದರ ಮೇಲೆ ನಿರ್ಬಂಧವೊಂದನ್ನು ವಿಧಿಸಿದ್ದರ ಪ್ರಕರಣವೊಂದು ಇತಿಹಾಸ ಪುಟಗಳಲ್ಲಿ ಸೇರ್ಪಡೆಯಾಯಿತು.

ಬಿ.ಸಿ. ಶ್ರೀನಿವಾಸ ಅಯ್ಯಂಗಾರ್‌ರವರು ೧೮೯೨ರಲ್ಲಿ ಆರಂಭಿಸಿದ ದೇಶಾಭಿಮಾನಿ ಪತ್ರಿಕೆ ಮೈಸೂರು ಸಂಸ್ಥಾನದಲ್ಲಿ ತನ್ನ ನೇರ ನುಡಿಗೆ ಜನಪ್ರಿಯತೆಯನ್ನು ಪಡೆದಿತ್ತು. ದೇಶಾಭಿಮಾನಿ ಪತ್ರಿಕೆ ಆರಂಭಗೊಂಡ ಸಂದರ್ಭದಲ್ಲಿ ಸಂಸ್ಥಾನದಲ್ಲಿ 'ಮೈಸೂರು ಫಾರ್ ಮೈಸೂರಿಯನ್ಸ್' ಚಳುವಳಿ ನಡೆಯುತ್ತಿದ್ದು ಸ್ವಾಭಾವಿಕವಾಗಿ ಆಗಿನ ದಿವಾನರಾಗಿದ್ದ ಶೇಷಾದ್ರಿ ಅಯ್ಯರ್‌ರವರ ಆಡಳಿತದ ಬಗ್ಗೆ ಅತ್ಯಂತ ಕಟು ವಿಮರ್ಶೆಗಳ ಮೂಲಕ ಜನರ ಮುಂದೆ ಪತ್ರಿಕೆಗಳು ಇಡಲಾರಂಭಿಸಿದವು. ಅದರಲ್ಲಿಯೂ ದೇಶಾಭಿಮಾನಿ ಪತ್ರಿಕೆ ತೀವ್ರವಾದ ಲೇಖನಗಳನ್ನು ಸುದ್ದಿಗಳನ್ನು ಪ್ರಕಟಿಸಿತ್ತು. ದೇಶಾಭಿಮಾನಿ ಪತ್ರಿಕೆಯ ಬಗ್ಗೆ ಸರ್ಕಾರ ಸ್ವಲ್ಪ ಮಟ್ಟಿನ ಕಟು ನಿಲುವನ್ನು ತಾಳುವಂತಾಯಿತು. ಇದು ಪತ್ರಿಕೆ ಮತ್ತು ಸರ್ಕಾರದ ನಡುವೆ ಇದ್ದ ಮುಕ್ತ ವಾತಾವರಣವನ್ನು ಕಠಿಣಗೊಳ್ಳುವಂತೆ ಮಾಡಿತ್ತು. ದೇಶಾಭಿಮಾನಿ ಪತ್ರಿಕೆಯಲ್ಲಿ

ದಿವಾನ್ ಶೇಷಾದ್ರಿ ಅಯ್ಯರ್‌ರವರ ಆಡಳಿತ ಮತ್ತ
ಮಹಾರಾಜರ ಖಾಸಗಿ ವಿಚಾರಗಳನ್ನು ಕುರಿತಾದ ಕೆಲವು
ಲೇಖನಗಳು ಸುದ್ದಿ ರೂಪದಲ್ಲಿ ದಿ: ೫-೨-೧೮೯೪ ರಿಂ
೧೦-೨-೧೮೯೪ ರ ನಡುವೆ ಪ್ರಕಟಗೊಂಡವು.[೬] ಈ ಸು
ಕುರಿತು ಸರ್ಕಾರ ತನ್ನ ಪ್ರತಿರೋಧ ವ್ಯಕ್ತಪಡಿಸಿ ಇಂತ
ಲೇಖನಗಳನ್ನು ಭವಿಷ್ಯದಲ್ಲಿ ಪತ್ರಿಕೆಗಳಲ್ಲಿ ಪ್ರಕಟಿಸಬಾರದೆಂದ
ಶ್ರೀನಿವಾಸ್ ಅಯ್ಯಂಗಾರ್‌ರವರಿಗೆ ಅಣತಿ ಮಾಡಿತ್ತು. ಈ
ಆದೇಶದ ನಡುವೆಯು ದೇಶಾಭಿಮಾನಿ ಪತ್ರಿಕೆ ತನ್ನ ಟೀ
ಮತ್ತು ವಿಮರ್ಶೆಗಳನ್ನು ಕಟುವಾಗಿಯೇ ಮುಂದುವರೆಸಿತು
ಇದನ್ನು ವಿರೋಧಿಸಿ ಅಂದಿನ ಸರ್ಕಾರದ ಕಾರ್ಯದರ್ಶಿ
ಗಳಾಗಿದ್ದ ಎ. ಶ್ರೀನಿವಾಸಾಚಾರಿಯವರು ದೇಶಾಭಿಮಾನಿ
ಪತ್ರಿಕೆಯ ಸಂಪಾದಕರಾದ ಶ್ರೀನಿವಾಸ್ ಅಯ್ಯಂಗಾರ್‌ರವರಿ
ಪತ್ರವನ್ನು ಬರೆದು ಇಂತಹ ಅರ್ಥರಹಿತ ಸರ್ಕಾರಿ ವಿರೋ
ಲೇಖನಗಳನ್ನು ಪತ್ರಿಕೆಯಲ್ಲಿ ಪ್ರಕಟಿಸದಂತೆ ತಿಳಿಸಿದರು. ೧೪-
೩-೧೮೯೪ ರಿಂದ ೧೬-೩-೧೮೯೪ರ ನಡುವೆ ಎ
ಶ್ರೀನಿವಾಸಚಾರಿ ಮತ್ತು ಶ್ರೀನಿವಾಸ ಅಯ್ಯಂಗಾರ್ ನಡು
ಈ ಪತ್ರ ವ್ಯವಹಾರಗಳು ನಡೆದು ಶ್ರೀನಿವಾಸ್ ಅಯ್ಯಂಗಾರ
ರವರಿಂದ ಯಾವುದೇ ರೀತಿಯ ಸಕಾರಾತ್ಮಕ ಉತ್ತರಗಳ
ದೊರೆಯದೇ ಹೋದದ್ದು ಮತ್ತು ಶ್ರೀನಿವಾಸ್ ಅಯ್ಯಂಗಾರ
ರವರು ದಿವಾನರನ್ನು ಮುಖತಃ ಭೇಟಿ ಮಾಡಿ ಚರ್ಚಿಸಲ
ನಿರಾಕರಿಸಿದ್ದು ಸ್ವಾಭಾವಿಕವಾಗಿ ಪ್ರಕರಣವನ್ನು ಮತ್ತಷ
ಗಂಭೀರವಾಗಿಸಿತು.[೭] ಈ ನಡುವೆ ಕಾರ್ಯದರ್ಶಿ
ಶ್ರೀನಿವಾಸಾಚಾರಿಯವರ ಪತ್ರಗಳಿಗೆ ಶ್ರೀನಿವಾಸ್ ಅಯ್ಯಂಗಾರ
ರವರು ಬರೆದ ಪತ್ರಗಳಲ್ಲಿ ತಾವು ತಮ್ಮ ಪತ್ರಿಕೆಯಲ್ಲಿ ಪ್ರಸಾ
ಮಾಡುವ ಸುದ್ದಿಯಲ್ಲಿ ಯಾವುದೇ ರೀತಿಯ
ಬದಲಾವಣೆಗಳನ್ನು ಮಾಡಿಕೊಳ್ಳಲು ಸಿದ್ಧರಿಲ್ಲವೆಂದು ಹಾಗು
ದಿವಾನರನ್ನು ಭೇಟಿ ಮಾಡುವ ಅವಶ್ಯಕತೆ ತಮಗಿಲ್ಲವೆಂದು
ಬರೆದ ಪತ್ರಗಳು ಸ್ವಾಭಾವಿಕವಾಗಿ ಸರ್ಕಾರದ ಕ್ರೋಧಕ
ಕಾರಣವಾಯಿತು. ಇದರಿಂದ ಸರ್ಕಾರ ಅನಿವಾರ್ಯವಾಗಿ
ದೇಶಾಭಿಮಾನಿ ಪತ್ರಿಕೆ ಆಡಳಿತ ವಿರೋಧಿ ಕಾರ್ಯ
ಚಟುವಟಿಕೆಯಲ್ಲಿ ತೊಡಗಿದೆ ಎಂಬ ಆಧಾರದ ಮೇಲ
ಕ್ರಮ ಜರುಗಿಸಲು ಮುಂದಾಯಿತು. ಹಾಗೂ ಮೈಸೂರಿನ
ಡೆಪ್ಯುಟಿ ಕಮೀಷನರ್ ಆಗಿದ್ದ ಎ. ರಂಗಸ್ವಾಮಿ ಅಯ್ಯಂಗಾರ
ರವರಿಗೆ ಸರ್ಕಾರ ಆದೇಶವನ್ನು ಹೊರಡಿಸಿ ದೇಶಾಭಿಮಾನಿ
ಪತ್ರಿಕೆಯ ಮೇಲೆ ಕ್ರಮ ಜರುಗಿಸುವಂತೆ ತಿಳಿಸಿತ್ತು. ಪತ್ರಿಕೆಯ
ಮೇಲೆ ಒಂದು ವರ್ಷದ ನಿರ್ಬಂಧವನ್ನು ಹೇರುವುದ
ಮೂಲಕ ಪತ್ರಿಕೆಯ ಕಾರ್ಯಾಲಯಕ್ಕೆ ಬೀಗಮುದ್ರ
ಹಾಕುವುದರ ಮೂಲಕ ಅಲ್ಲಿನ ಯಂತ್ರೋಪಕರಣಗಳನ್ನು
ಮುಟ್ಟುಗೋಲು ಹಾಕಿಕೊಂಡಿತು.[೮]

ದೇಶಾಭಿಮಾನಿ ಪತ್ರಿಕೆಯ ಮೇಲೆ ಹೇರಲ್ಪಟ್ಟ ಒಂದು ವರ್ಷದ ಈ ನಿರ್ಬಂಧ ಮೈಸೂರು ಸಂಸ್ಥಾನದಲ್ಲಿದ್ದ ಪತ್ರಿಕಾ ಸ್ವಾತಂತ್ರ್ಯವನ್ನು ಪ್ರಶ್ನಿಸುವಂತಿತ್ತು. ಈ ನಿರ್ಬಂಧ ಸಂಸ್ಥಾನದ ಸಮಕಾಲೀನ ಪತ್ರಿಕೆಗಳಿಂದ ಮಾತ್ರವಲ್ಲದೆ ಮೈಸೂರು ರಾಜ್ಯದ ಹೊರ ಭಾಗಗಳ ಬುದ್ಧಿ ಜೀವಿಗಳು ಹಾಗೂ ಪತ್ರಿಕೆಗಳಿಂದಲೂ ಟೀಕೆಗೆ ಒಳಗಾಯಿತು. ಪ್ರಮುಖ ವಿದ್ವಾಂಸರು ಮತ್ತು ಪತ್ರಿಕೆಯ ಸಂಪಾದಕರಾದ ಡಿ.ವಿ. ಗುಂಡಪ್ಪನವರು ದೇಶಾಭಿಮಾನಿ ಪತ್ರಿಕೆಯ ಮೇಲೆ ಸರ್ಕಾರ ಕೈಗೊಂಡಕ್ರಮ ಹಾಗೂ ಪತ್ರಿಕಾ ಸ್ವಾತಂತ್ರ್ಯದ ಉಲ್ಲಂಘನೆ ಎಂದು ಕಟುವಾಗಿ ಖಂಡಿಸಿದರು.[೯] ಮೈಸೂರು 'ವೃತ್ತಾಂತ ಬೋಧಿನಿ'ಯ ಸಂಪಾದಕರು ಸರ್ಕಾರ ತಮ್ಮ ಈ ಕ್ರಮವನ್ನು ಪುನರ್ ಪರಿಶೀಲಿಸುವಂತೆ ಸುದ್ದಿ ಪ್ರಕಟಿಸಿತು. ಕರ್ನಾಟಕ ಪ್ರಕಾಶಿಕೆ ಮತ್ತು ವೃತ್ತಾಂತ ಪತ್ರಿಕೆ ಸರ್ಕಾರದ ಈ ಕ್ರಮವನ್ನು ಕಟುವಾಗಿ ಖಂಡಿಸಿದವು.[೧೦] ಆನಂತರದಲ್ಲಿ ಈ ಪ್ರಕರಣ ರಾಷ್ಟ್ರಮಟ್ಟದ ಅನೇಕ ಪತ್ರಿಕೆಗಳಲ್ಲಿ ಪ್ರತಿಧ್ವನಿಸಿ ಟೀಕೆಗೆ ಒಳಗಾಯಿತು. ಈ ಘಟನೆಯ ನಂತರ ಶ್ರೀನಿವಾಸ್ ಅಯ್ಯಂಗಾರ್ ತಮ್ಮ ಪತ್ರಿಕೆಯ ಮೇಲೆ ಸರ್ಕಾರ ಕೈಗೊಂಡ ಈ ಕ್ರಮದ ವಿರುದ್ಧ ೧೨ ವರ್ಷಗಳ ಕಾಲ ನ್ಯಾಯಾಲಯದಲ್ಲಿ ಹೋರಾಟವನ್ನು ನಡೆಸಿದರು.[೧೧] ಈ ಮೇಲಿನ ಪ್ರಕರಣ ದೇಶಾಭಿಮಾನಿ ಪತ್ರಿಕೆಯ ಮೇಲೆ ಸಂಸ್ಥಾನದಲ್ಲಿ ಸರ್ಕಾರವು ಕೈಗೊಂಡ ಮೊಟ್ಟ ಮೊದಲ ಪತ್ರಿಕಾ ನಿರ್ಬಂಧವಾಗಿದ್ದು ಈ ಪ್ರಕರಣ ಭವಿಷ್ಯದ ಪತ್ರಿಕಾ ರಂಗದಲ್ಲಿ ಎರಡು ಮಹತ್ವವಾದ ಬೆಳವಣಿಗೆಗಳಿಗೆ ಕಾರಣವಾಯಿತು. ಒಂದು ಈ ನಿರ್ಬಂಧದ ವಿರುದ್ಧವಾಗಿ ಸಂಸ್ಥಾನದ ಎಲ್ಲಾ ಪತ್ರಿಕೆಗಳು ತಮ್ಮ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳನ್ನು ಮರೆತು ಒಗ್ಗಟ್ಟಿನಿಂದ ಸರ್ಕಾರದ ಈ ನಿಲುವಿನ ವಿರುದ್ಧ ಹೋರಾಡುವಂತೆ ಮಾಡಿತು. ಎರಡನೆಯದಾಗಿ ಸಂಸ್ಥಾನದಲ್ಲಿ ಈವರೆಗೆ ಪತ್ರಿಕೆಗಳಿಗೆ ನೀಡಲ್ಪಟ್ಟಿದ್ದ ಮುಕ್ತ ವಾತಾವರಣದ ಮೇಲೆ ಈ ಪ್ರಕರಣ ಗಂಭೀರ ಪರಿಣಾಮ ಬೀರುವುದರ ಮೂಲಕ ಭವಿಷ್ಯದಲ್ಲಿ ೧೯೦೮ರ ಪತ್ರಿಕಾ ನಿರ್ಬಂಧ ಕಾಯಿದೆಯಾದ ಮೈಸೂರು ನ್ಯೂಸ್ ಪೇಪರ್ ರೆಗ್ಯುಲೇಷನ್ – III ಆಫ್ ೧೯೦೮ ಕಾಯಿದೆ ಜಾರಿಗೆ ಬರಲು ಕಾರಣವಾಯಿತು.[೧೨]

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Hemendra Prasad Goash., *The Newspaper in India*, P. 86.
೨. ನಾಡಿಗ ಕೃಷ್ಣಮೂರ್ತಿ., **ಭಾರತೀಯ ಪತ್ರಿಕೋದ್ಯಮ**, ಪು. ೨೧.
೩. **ಮೈಸೂರು ವೃತ್ತಾಂತ ಬೋಧಿನಿ**, ೭–೬–೧೮೮೨.
೪. **ಅದೇ.**, ೧೨–೧೦–೧೮೮೨.
೫. **ದೇಶಾಭಿಮಾನಿ**, ತಿ.ತಾ. ಶರ್ಮ (ಸಂ.) ಮೈಸೂರು ಸಂಸ್ಥಾನದ ವೃತ್ತ ಪತ್ರಿಕಾ ಇತಿಹಾಸ, ಪು. ೧೦.
೬ ಅದೇ ಪು. ೧೨.
೭. ಅದೇ ಪು. ೧೨.
೮. ಅದೇ ಪು. ೧೩–೧೭
೯. ಅದೇ ಪು. ೧೮.
೧೦. **ಕರ್ನಾಟಕ ಪ್ರಕಾಶಿಕ** ೨೬–೩–೧೮೯೪ ಮತ್ತು **ವೃತ್ತಾಂತ ಪತ್ರಿಕೆ** ೫–೪–೧೮೯೪.
೧೧. G. Halappa., *History of Freedom Movement*. Vol. II Page 349.
೧೨. R. Ramakrishnan., *Quarterly Journal of the Mythic Society*, Vol. LXXIV No. 4 Oct-Dec 1983 P. 364.
೧೩. ಕಾರ್ಯದರ್ಶಿ ಎ. ಶ್ರೀನಿವಾಸಚಾರಿ ಮತ್ತು ದೇಶಾಭಿಮಾನಿ ಸಂಪಾದಕ ಶ್ರೀನಿವಾಸ ಅಯ್ಯಂಗಾರ್ ನಡುವಿನ ಪತ್ರ ವ್ಯವಹಾರದ ಪ್ರತಿಗಳು, ತಿ.ತಾ. ಶರ್ಮ ಪ್ರತಿಷ್ಠಾನ ಸಂಗ್ರಹ.

ಟಿ.ಎಚ್.ಎಂ. ಬಸವರಾಜ*

# ಕರ್ನಾಟಕ ಏಕೀಕರಣಕ್ಕೆ ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘ

ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘವು ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಮಹತ್ವದ ಪಾತ್ರವಹಿಸಿದೆ. ಸುಮಾರು ೧೦೦ ವರ್ಷಗಳ ಇತಿಹಾಸವಿರುವ ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘಧ ಕೊಡುಗೆ ಕರ್ನಾಟಕ ಏಕೀಕರಣಕ್ಕೆ ಮಹತ್ವದ್ದಾಗಿದೆ. ಸಂಘವು ದಶಕಗಳು ಮೀರಿ ಸಾರ್ಥಕ ಸೇವೆ ಮಾಡಿ ಈಗಾಗಲೇ ಅಮೃತ ಮಹೋತ್ಸವ ಆಚರಿಸಿದೆ. ಸಮಾಜದ ಕಲ್ಯಾಣಕ್ಕಾಗಿ ಇನ್ನೂ ಹೆಚ್ಚಿನ ಸೇವೆಯನ್ನು ಸಲ್ಲಿಸಲು ಕಟಿಬದ್ಧವಾಗಿದೆ. ಒಂದಲ್ಲಾ ಎರಡಲ್ಲಾ ಅನೇಕ ಕಾಲೇಜುಗಳನ್ನು ಮತ್ತು ಪ್ರಾಥಮಿಕ ಶಾಲೆಗಳಿಂದ ಹಿಡಿದು ವೃತ್ತಿಪರ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿ ಸಾಂಸ್ಕೃತಿಕ ಮತ್ತು ಸಾಹಿತ್ಯ ಗ್ರಂಥ ಭಂಡಾರವನ್ನು ಸ್ಥಾಪಿಸಿ, ಪ್ರತಿಭಾವಂತ ಸಂಪನ್ನ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣ ತರಬೇತಿ ಕೊಡುವ ಯೋಜನೆಯನ್ನು ಹಾಕಿಕೊಂಡಿದೆ ಬಡವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ ನಿಲಯಗಳನ್ನು ನಡೆಸುತ್ತಾ ಬಸವ ಭವನ ಎಂಬ ಕಲ್ಯಾಣಸೌಧವನ್ನು ನಿರ್ಮಿಸಿ ಹತ್ತು ಹಲವಾರು ಯೋಜನೆಗಳನ್ನು ರೂಪಿಸಿಕೊಂಡು ಮುನ್ನಡೆದಿದೆ. ಬಳ್ಳಾರಿಯಲ್ಲಿ ದಿನಾಂಕ : ೨೭-೧೨-೧೯೦೯ ರಿಂದ ೩೦-೧೨-೧೯೦೯ರ ವರೆಗೆ ನಡೆದ ೫ನೇ ಅಖಿಲ ಭಾರತ ವೀರಶೈವ ಮಹಾಸಭೆಯಲ್ಲಿ ಸಂಘವನ್ನು ಸ್ಥಾಪಿಸಲು ನಿರ್ಧರಿಸಲಾಯಿತು. ಪೂಜ್ಯ ಹಾನಗಲ್ ಕುಮಾರ ಸ್ವಾಮಿಗಳು ಹಾಗೂ ಜಗದ್ಗುರು ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು, ಉಜ್ಜಯಿನಿ. ಇವರ ನೇತೃತ್ವದಲ್ಲಿ ದಿನಾಂಕ: ೭-೩-೧೯೧೮ರಲ್ಲಿ ಮೊದಲಿಗೆ ಮದ್ರಾಸ್ ವೀರಶೈವ ವಿದ್ಯಾವರ್ಧಕ ಸಂಘ ಎಂದು ಸ್ಥಾಪಿತವಾಯಿತು. ಆಗ ಅದರ ಅಧ್ಯಕ್ಷರಾಗಿ ಶ್ರೀ ಕೌತಾಳ ಗುರುಶಾಂತಪ್ಪ ಮತ್ತು ಉಪಾಧ್ಯಕ್ಷರಾಗಿ ಶ್ರೀ ತೊಗರಿ ವೀರಮಲ್ಲಪ್ಪನವರು ಆಯ್ಕೆಯಾದರು. ತದನಂತರ ೧೯೩೩ರಲ್ಲಿ ಸಂಘದ ಹೆಸರು ವೀರಶೈವ ವಿದ್ಯಾವರ್ಧಕ ಸಂಘ ಎಂದು ಮರುನಾಮಕರಣ ವಾಯಿತು. ಈಗಾಗಲೇ ಕರ್ನಾಟಕ ಏಕೀಕರಣ ಹೋರಾಟಗಾರರಿಗೆ ಘನಸರ್ಕಾರದವರು ಏಕೀಕರಣ ಪ್ರಶಸ್ತಿ ಕೊಟ್ಟು ಗೌರವಿಸಿದ್ದಾರೆ ಅದರಂತೆಯೇ ಸಂಘ ಸಂಸ್ಥೆಗಳಿಗೂ ಏಕೀಕರಣ ಪ್ರಶಸ್ತಿ ಕೊಟ್ಟಿರುವ ಉದಾಹರಣೆಗಳು ನಮ್ಮ ಮುಂದಿವೆ. ಉದಾಹರಣೆಗೆ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಕೊಡುಗೆಯನ್ನು ಮನ್ನಿಸಿ ಘನ ಸರ್ಕಾರದವರು ಏಕೀಕರಣ ಪ್ರಶಸ್ತಿ ಕೊಟ್ಟಿರುತ್ತಾರೆ. ಅದರಂತೆಯೇ ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘವು ಸಹಿತ ಕರ್ನಾಟಕ ಏಕೀಕರಣ ಮಹತ್ವದ ಕೊಡುಗೆಯನ್ನು ಕೊಟ್ಟಿದೆ.

೧೯೨೦ರ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಕನ್ನಡ ಮಾತನಾಡುವವರ ಸಂಖ್ಯೆಯು ಹೆಚ್ಚಿದ್ದರೂ ಸಹ ಕನ್ನಡ ಶಾಲೆಗಳು ಇರಲಿಲ್ಲ. ತೆಲುಗು ಮಾಧ್ಯಮದ ಶಾಲೆಗಳು ಇದ್ದವು. ಇದನ್ನರಿತು ಸಂಘವು ದಿನಾಂಕ : ೮-೪-೧೯೨೪ ರಂದು ಮೊಟ್ಟ ಮೊದಲಿಗೆ ಹೀರದ ಸೂಗಮ್ಮ ಕನ್ನಡ ಪ್ರಾಥಮಿಕ ಶಾಲೆಯನ್ನು ಆರಂಭಿಸಿ ಇಡೀ ರಾಜ್ಯಕ್ಕೆ ಮಾದರಿಯಾಯಿತು. ಅಲ್ಲದೆ ಕರ್ನಾಟಕ ಏಕೀಕರಣ ಚಳುವಳಿಯ ಕೆಲಸಗಳನ್ನು ಮತ್ತು ಸಭೆಗಳನ್ನು ಮಾಡಲು ಚಳುವಳಿಗಾರರಿಗೆ ನಾಂದಿಯಾಯಿತು. ಈ ಶಾಲೆಯಲ್ಲಿ ಆಗ ಮದ್ರಾಸ್ ಪ್ರಾಂತ್ಯದಲ್ಲಿ ಕನ್ನಡಿಗರು ಗುಟ್ಟಾಗಿ ಸಭೆಗಳನ್ನು ನಡೆಸಿ ಏಕೀಕರಣಕ್ಕಾಗಿ ಶ್ರಮಿಸುತ್ತಿದ್ದರು. ೧೯೩೫ರಲ್ಲಿ ಕರ್ನಾಟಕ ಕನ್ನಡ ಸಂಘವನ್ನು ಸ್ಥಾಪಿಸಿದ್ದ ರಾವ್ ಬಹದ್ದೂರ್ ವೈ. ಮಹಬಲೇಶ್ವರಪ್ಪನವರು ಹಾಗೂ ಮದ್ರಾಸ್ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಶ್ರೀ ಲಕ್ಷ್ಮಣಸ್ವಾಮಿ ಮೊದಲಿಯಾರ್ ಇವರ ಸಹಕಾರದಿಂದ ವೀರಶೈವ ಕಾಲೇಜು ಸ್ಥಾಪನೆಯಾಯಿತು. ಕನ್ನಡಿಗರಿಗಾಗಿ ಒಂದು ಪ್ರೌಢಶಾಲೆಯನ್ನು ಆರಂಭಿಸಿದರು. ಈಗ ಅದು ಶೇಟ್ರು ಗುರುಶಾಂತಪ್ಪ ಪ್ರೌಢಶಾಲೆಯಾಗಿ ಕನ್ನಡಿಗರಿಗೆ ಸೇವೆ ಮಾಡುತ್ತಾ ಕನ್ನಡ ಕಾರ್ಯಕ್ರಮಗಳನ್ನು ಮಾಡಲು ನಾಂದಿಯಾಗಿದೆ. ೧೮೭೮ ರಿಂದ ೧೯೨೮ರ ವರೆಗೆ ಕಡಪ ರಾಘವೇಂದ್ರರಾವ್ ಅವರು ಬಳ್ಳಾರಿ ಜಿಲ್ಲೆಯನ್ನು ಕರ್ನಾಟಕಕ್ಕೆ ಸೇರಿಸುವ ಚಳುವಳಿಗೆ ನಾಂದಿಯಾಡಿದರು. ತದನಂತರ ಏಕೀಕರಣ ಹೋರಾಟದಲ್ಲಿ ಮೊದಲಿಗರಾಗಿದ್ದ ಸರ್ವದರ್ಶನ ತೀರ್ಥ ವೈ. ನಾಗೇಶ ಶಾಸ್ತ್ರಿಗಳು ಟಿ.ಹೆಚ್.ಎಂ. ಸದಾಶಿವಯ್ಯನವರು, ಅಳವಂಡಿ ಶಿವಮೂರ್ತಿ ಸ್ವಾಮಿಗಳು, ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು, ಹರಗಿನ ದೋಣಿ ದೊಡ್ಡನಗೌಡರು, ಅಲ್ಲಂ ಸುಮಂಗಳಮ್ಮನವರು, ರೆವರೆಂಡ್ ಉತ್ತಂಗಿ ಚೆನ್ನಪ್ಪನವರು, ಉರುವಕೊಂಡ ಜಗದ್ಗುರುಗಳು, ಜೋಳದ ರಾಶಿ ದೊಡ್ಡನಗೌಡರು, ಕೋ. ಚೆನ್ನಬಸಪ್ಪನವರು, ಜಂತಕಲ್ ಗಾದಿಲಿಂಗಪ್ಪನವರು ಆರ್. ನಾಗನಗೌಡರು, ಬೀಜಿಯವರು, ಎಂ. ಸತ್ಯವಂತರಾವ್, ರಂಜಾನ್ ಸಾಬ್, ಇವರೆಲ್ಲಾ ಕರ್ನಾಟಕ

* ೩೬/೨೫, ವಿದ್ಯಾಗಿರಿ ಬಡಾವಣೆ, ಬಳ್ಳಾರಿ – ೫೮೩ ೧೦೩.

ಏಕೀಕರಣಕ್ಕೆ ಹೋರಾಡಿದ ಮಹನೀಯರು ಮತ್ತು ಇವರು ತಮ್ಮ ಹೋರಾಟದ ಸಭೆಗಳಿಗೆ ಆಶ್ರಯಿಸಿದ್ದು ವೀರಶೈವ ವಿದ್ಯಾವರ್ಧಕ ಸಂಘದ ಕಛೇರಿಯನ್ನು ಹಾಗೂ ಶಾಲಾ ಕಾಲೇಜುಗಳನ್ನು ಮತ್ತು ವಸತಿ ನಿಲಯಗಳನ್ನು. ಈ ರೀತಿಯಾಗಿ ಸಂಘವು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕರ್ನಾಟಕ ಏಕೀಕರಣಕ್ಕೆ ಕೊಡುಗೆಯಾಗಿದೆ. ಅಷ್ಟೇ ಅಲ್ಲದೇ ಈ ಮಹನೀಯರಲ್ಲಿ ಹಲವರು ಸಂಘದ ಆಜೀವ ಸದಸ್ಯರುಗಳಾಗಿ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿರುವುದು ಇಲ್ಲಿ ಗಮನಾರ್ಹ. ಶ್ರೀಮಾನ್ ಮುದವೀಡು ಕೃಷ್ಣರಾಯರು ಬಂದಾಗ ಇಲ್ಲಿಯ ವೀರಶೈವ ಶಾಲೆಯಲ್ಲಿ ಅವರು ಮಾಡಿದ ಭಾಷಣದ ಒಂದು ತುಣುಕೆಂದರೆ ಈ ಸ್ಥಳದ ಕನ್ನಡಿಗರಿಗೆ ಕೊಟ್ಟ ಎಚ್ಚರಿಕೆ. ಅವರು ಮಾಡಿದ ಭಾಷಣದ ಒಂದು ತುಣುಕನ್ನು ಉದಾಹರಿಸುತ್ತೇನೆ. "ಬಳ್ಳಾರಿಯು ಕರ್ನಾಟಕದ ಗಡಿ ನಾಡಲ್ಲ. ನಡುನಾಡು, ಅಚ್ಚ ಕನ್ನಡನಾಡು; ಬಳ್ಳಾರಿ ಜಿಲ್ಲೆಯ ತರುಣರೇ ಕನ್ನಡ ಸಂಸ್ಕೃತಿಯನ್ನು ಕಾಪಾಡಲು ನಡುಗಟ್ಟಿ ನಿಲ್ಲಿರಿ" ಎಂಬ ಈ ಸಿಂಹಘರ್ಜನೆಯನ್ನು ವೀ.ವಿ. ಸಂಘದ ಸಂಸ್ಥೆಯಲ್ಲಿ ಮಾಡಿದಾಗ ಇಡೀ ಜಿಲ್ಲೆಯೇ ನಡುಗಿತು. ೧೫-೧-೧೯೩೫ರಲ್ಲಿ ಸರ್ವದರ್ಶನ ತೀರ್ಥ ವೈ. ನಾಗೇಶ ಶಾಸ್ತ್ರಿಗಳ ಸಾರಥ್ಯದಲ್ಲಿ ಕರ್ನಾಟಕ ಸಂಘ ಸ್ಥಾಪನೆಯಾಯಿತು. ಆಗ ಈ ಸಂಘದ ಅಧ್ಯಕ್ಷರಾಗಿ ಕನ್ನಡಿಗ ವೈ. ಮಹಾಬಲೇಶ್ವರಪ್ಪನವರು ಅಧ್ಯಕ್ಷರಾಗಿ ಟಿ.ಹೆಚ್.ಎಂ. ಶಿವಂಸ್ವಾಮಿಯವರು ಕಾರ್ಯದರ್ಶಿಯಾಗಿ ಆಯ್ಕೆಯಾದರು. ಅದೇ ಸಮಯದಲ್ಲಿ ಅವರು ವೀರಶೈವ ವಿದ್ಯಾವರ್ಧಕ ಸಂಘದ ಅಧ್ಯಕ್ಷರೂ ಆಗಿದ್ದರು. ಈ ದಿಶೆಯಿಂದಲೇ ಕರ್ನಾಟಕ ಏಕೀಕರಣದ ಮಹತ್ವದ ಸಭೆಗಳು ಸಂಘದ ಶಾಲಾ ಕಾಲೇಜುಗಳಲ್ಲಿ ನಡೆಯುತ್ತಿದ್ದವು.

ಕನ್ನಡವನ್ನು ಕಲಿಸುವುದನ್ನೇ ಕೈಬಿಟ್ಟಿದ್ದ ಊರುಗಳಲ್ಲಿ ಮತ್ತು ಶಾಲೆಗಳಲ್ಲಿ ಕನ್ನಡ ತರಗತಿಗಳ ಪ್ರತಿಷ್ಠಾಪನೆ ಕನ್ನಡ ವಿದ್ವಾನ್ ಆದವರನ್ನು ಕನ್ನಡ ಪಂಡಿತರನ್ನಾಗಿ ಅಧಿಕ ಸಂಖ್ಯೆಯಲ್ಲಿ ನೇಮಿಸಿದ ಎದೆಗಾರಿಕೆ ಅವರದು. ಏಕೆಂದರೆ ಆಗ ಸಂಘವು ಮದ್ರಾಸ್ ಪ್ರಾಂತ್ಯಕ್ಕೆ ಒಳಪಟ್ಟಿತ್ತು. ವೀರಶೈವ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿದ್ದಾಗ ಅವರಂತಹ ಧೀರರು ಮತ್ತು ಧೀಮಂತರು ಕಂಕಣಬದ್ಧರಾಗಿ ಕನ್ನಡದ ಏಳಿಗೆಯ ಕರ್ತೃ ಕಾರ್ಯಕ್ಕೆ ಎದೆಕೊಟ್ಟು ನಿಲ್ಲದಿದ್ದರೆ ಮದ್ರಾಸ್ ಪ್ರಾಂತ್ಯದಲ್ಲಿ ಕನ್ನಡ ಉಳಿಯುತ್ತಿತ್ತೋ ಇಲ್ಲವೋ ಹೇಳುವುದು ಕಷ್ಟ. ಬಳ್ಳಾರಿ ತಾಲೂಕು ಎಮ್ಮಿಗನೂರಿನಲ್ಲಿ ಪ್ರಪ್ರಥಮವಾಗಿ ೧೯೩೩ರಲ್ಲಿ ಕನ್ನಡ ಪ್ರೌಢಶಾಲೆಯನ್ನು ಪ್ರಾರಂಭಿಸಿ ಅಲ್ಲಿ ಕರ್ನಾಟಕ ಏಕೀಕರಣ ಹೋರಾಟಗಾರರಿಗೆ ಆಶ್ರಯಕೊಟ್ಟರು. ಇದನ್ನು ಮನಗಂಡ ಆಗ ಜಿಲ್ಲಾ ಬೋರ್ಡ್ ಮೆಂಬರಾಗಿದ್ದ ಶ್ರೀ ಮಾಚಾನಿ ಸೋಮಪ್ಪನವರು ಅವರ ಬೆನ್ನು ತಟ್ಟಿದರು. ಈ ನಿಟ್ಟಿನಲ್ಲಿ ಮದ್ರಾಸ್ ಸರ್ಕಾರದ ಆಡಳಿತ ಇದ್ದುದರಿಂದ ಕರ್ನಾಟಕ ಏಕೀಕರಣಕ್ಕೆ ವಿರೋಧ ವ್ಯಕ್ತವಾಗುವುದನ್ನು ತೀವ್ರವಾಗಿ ಖಂಡಿಸಿ ಕರ್ನಾಟಕ ಏಕೀಕರಣ ಚಳುವಳಿಗೆ ಸಂಘವು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ನೆರವು ನೀಡುತ್ತಾ ಬಂದಿತು. ವೀರಶೈವ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಬಳ್ಳಾರಿ ಜಿಲ್ಲಾ ಕನ್ನಡ ಕಲಾಪರಿಷತ್ತನ್ನು ಆಗಿನ ಕಾಲದಲ್ಲಿ ಕಟ್ಟಿದ್ದ ಜೋಳದ ರಾಶಿ ದೊಡ್ಡನಗೌಡರೊಂದಿಗೆ ಸಹಕರಿಸಿ ರಾಮೇಶ್ ಕಲಾಮಂದಿರದ ಪ್ರಾರಂಭೋತ್ಸವಕ್ಕೆ ಅಧ್ಯಕ್ಷತೆ ವಹಿಸಿದ್ದರು. ನ ಭೂತೋ ನ ಭವಿಷ್ಯತೀ ಎನ್ನುವಂತೆ ಕನ್ನಡ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದರು. ಇದು ವೀರಶೈವ ವಿದ್ಯಾವರ್ಧಕ ಸಂಘ ಕರ್ನಾಟಕ ಏಕೀಕರಣಕ್ಕೆ ನೀಡಿದ ಮಹತ್ವದ ಕೊಡುಗೆ ಎಂದರೆ ತಪ್ಪಾಗಲಿಕ್ಕಿಲ್ಲ. ವೀರಶೈವ ವಿದ್ಯಾವರ್ಧಕ ಸಂಘವು ಕನಸು ಮನಸುಗಳಲ್ಲಿಯೂ ಕನ್ನಡದ ಹಿತಚಿಂತಕನಾಗಿ ಏಕೀಕರಣದ ಹೋರಾಟಗಾರರಿಗೆ ತಮ್ಮ ಸಂಸ್ಥೆಗಳನ್ನು ಆಶ್ರಯವಾಗಿ ನೀಡಿತು ಎಂಬುದರಲ್ಲಿ ಎರಡು ಮಾತಿಲ್ಲ. ಇವರ ಸಂಘದ ಅಧ್ಯಕ್ಷರ ವ್ಯಕ್ತಿತ್ವವನ್ನು ಮನಗಂಡ ಅಂದಿನ ಆಂಗ್ಲರ ಸಾರ್ವಭೌಮ ಸರ್ಕಾರ ಮೂರು ಸಲ ಅಧ್ಯಕ್ಷರನ್ನು ಗೌರವಿಸಿ ಸಂಘವನ್ನು ಪ್ರಶಂಸಿಸಿದರು. ಅಧ್ಯಕ್ಷರಿಗೆ ೧೯೩೫ರಲ್ಲಿ ಜಾರ್ಜ್ ಸಾರ್ವಭೌಮರ ಸ್ಮಾರಕ ಪದಕವನ್ನಿಟ್ಟು ೧೯೩೭ರಲ್ಲಿ ಎಡ್‌ವರ್ಡ್ ಸಾರ್ವಭೌಮರ ಪಟ್ಟಾಭಿಷೇಕದ ಸ್ಮಾರಕದ ಪದಕವನ್ನಿಟ್ಟು ೧೯೪೨ರಲ್ಲಿ ರಾವ್ ಬಹದ್ದೂರ್ ಎಂಬ ಪ್ರಶಸ್ತಿಯನ್ನಿಟ್ಟು ಗೌರವಿಸಿದರು. ೧೫-೭-೧೯೪೨ರಂದು ಮದ್ರಾಸ್ ಗೌವರ್ನರ್ ಆಗಿದ್ದ ಸರ್ ಆರ್ಥರ್ ಹೋಪರ್ ಬಳ್ಳಾರಿಗೆ ದಯಮಾಡಿಸಿ ಸಂಘದ ಅಧ್ಯಕ್ಷರಿಗೆ ರಾವ್ ಬಹದ್ದೂರ್ ಎಂಬ ಖಿಲ್ಲತ್ತನ್ನು ಸ್ವಹಸ್ತದಿಂದ ನೀಡಿ ವೀರಶೈವ ವಿದ್ಯಾವರ್ಧಕ ಸಂಘವನ್ನು ಪ್ರಶಂಸಿಸಿದರು. ವೀರಶೈವ ವಿದ್ಯಾವರ್ಧಕ ಸಂಘದ ಮತ್ತು ಅಧ್ಯಕ್ಷರ ಯೋಗ್ಯತೆಯನ್ನು ಪರದೇಶದ ಪರಕೀಯರು ಗುರ್ತಿಸಿ ಗೌರವಿಸಿದರೆ ಸ್ವತಂತ್ರ ಭಾರತದ ಸ್ವದೇಶದ ಸ್ವಕೀಯರು ಗುರ್ತಿಸಲಿಲ್ಲವೆಂಬುದು ವಿಷಾದದ ಮಾತು. ಈ ಸಭೆಯಲ್ಲಿ ನಿಜಾಮರ ಆಡಳಿತದಿಂದ ಕನ್ನಡಿಗರಿಗೆ ಆಗುವ ಅನ್ಯಾಯವನ್ನು ಸರಿಪಡಿಸಲು ಮುಂಜಾಗ್ರತೆ ಕ್ರಮವನ್ನು ತೆಗೆದುಕೊಳ್ಳಲು ಸೂಚಿಸಲಾಯಿತು. ಹೀಗೆ ಕರ್ನಾಟಕ ಏಕೀಕರಣ ಹೋರಾಟದ ರೂಪುರೇಷೆಗಳನ್ನು ಮತ್ತು ಸಭೆಗಳನ್ನು ನಡೆಸಿದ್ದು ಆಗಿನ ಕಾಲದಲ್ಲಿ ವೀರಶೈವ ವಿದ್ಯಾವರ್ಧಕ ಸಂಘದ ಸಂಸ್ಥೆಗಳಲ್ಲಿ. ಕಾರಣ ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘವು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕರ್ನಾಟಕ ಏಕೀಕರಣಕ್ಕೆ ಮಹತ್ವದ ಕೊಡುಗೆಯನ್ನು ಕೊಟ್ಟಿರುವುದೇ ಆಗಿತ್ತು.

ಕರ್ನಾಟಕ ಸರ್ಕಾರವು ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಏಕೀಕರಣ ಪ್ರಶಸ್ತಿ ನೀಡಿರುವಂತೆ ಮುಂದಾದರೂ ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘಕ್ಕೆ ಏಕೀಕರಣ ಪ್ರಶಸ್ತಿ ನೀಡಿ ಗೌರವಿಸಬೇಕೆಂದು ವಿನಂತಿಸುತ್ತೇನೆ.

## ಆಧಾರಸೂಚಿ


೧. ಡಾ. ಹೆಚ್.ಎಸ್. ಗೋಪಾಲ್‌ರಾವ್., **ಕರ್ನಾಟಕ ಏಕೀಕರಣ ಇತಿಹಾಸ.**

೨. ಡಾ. ಸೂರ್ಯನಾಥ್ ಕಾಮತ್., **ಕರ್ನಾಟಕ ಏಕೀಕರಣ ಸಿದ್ಧಿ ಮತ್ತು ಸಾಧನೆ.**

೩. ಕೋ. ಚೆನ್ನಬಸಪ್ಪ., **ಕರ್ನಾಟಕ ಏಕೀಕರಣ.**

೪. ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘದ ಕಾಗದ ಪತ್ರಗಳು.

೫. ಆಗಿನ ಕಾಲದ **ನವಸಂದೇಶ** ಪತ್ರಿಕೆಗಳು ಮತ್ತು ಇನ್ನಿತರ ದಿನಪತ್ರಿಕೆಗಳು.

ಜಯದೇವಪ್ಪ ಜೈನಕೇರಿ*

# ಕರ್ನಾಟಕ ಏಕೀಕರಣದಲ್ಲಿ ಕರ್ನಾಟಕ ಸಂಘಗಳ ಪಾತ್ರ

ಎರಡು ಸಾವಿರ ವರ್ಷಗಳ ದೀರ್ಘ ಇತಿಹಾಸ ಹೊಂದಿರುವ ಕನ್ನಡ ಭಾಷೆ, ಕರ್ನಾಟಕ ರಾಜ್ಯ, ಸಾಂಸ್ಕೃತಿಕವಾಗಿ ಅಖಂಡವಾದದ್ದು ಆದರೆ ರಾಜಕೀಯವಾಗಿ ಅನೇಕ ಪರಿಸಿತಗಳನ್ನು ಕಂಡಿದೆ. ಭಾರತದ ಇತಿಹಾಸ ದೊಂದಿಗೆ ಅನೇಕ ರಾಜರ, ಆಳ್ವಿಕೆಗೆ ಒಳಪಟ್ಟರೂ ಸಂಸ್ಕೃತಿ ಮತ್ತು ಭಾಷೆ ಮೂಲಕ ತನ್ನ ಅಸ್ಮಿತೆಯನ್ನು ಇಂದಿಗೂ ಕಾಪಾಡಿಕೊಂಡು ಬಂದಿದೆ. ಉತ್ತರದಲ್ಲಿ ಬಹುಮನಿ ಸುಲ್ತಾನರು, ದಕ್ಷಿಣದಲ್ಲಿ ವಿಜಯನಗರ ರಾಜ್ಯ ಸ್ಥಾಪನೆ ಗೊಂಡಾಗ ಸ್ವಲ್ಪಮಟ್ಟಿಗೆ ವಿಭಿನ್ನತೆ ಕಾಣಿಸಿದರೂ ವಿಜಯನಗರ ಪತನಾನಂತರ ಕನ್ನಡ ನಾಡು ಅನೇಕ ಪಾಳೆಪಟ್ಟುಗಳಾಯಿತು. ಟಿಪ್ಪುವಿನ ಕಾಲದಲ್ಲಿ ಈ ತುಂಡರಸರ ಪ್ರಾಬಲ್ಯ ಕಡಿಮೆಯಾಗಿದ್ದು ಕಂಡುಬರುತ್ತದೆ. ನಂತರ ಬಂದ ಬ್ರಿಟಿಷರು ತಮ್ಮ ಆಡಳಿತದ ಅನುಕೂಲಕ್ಕಾಗಿ, ಕನ್ನಡನಾಡನ್ನು ೨೨ ಭಾಗಗಳನ್ನಾಗಿಸಿದರು. ರಾಜಕೀಯವಾಗಿ ಈ ಎಲ್ಲ ದೌರ್ಜನ್ಯಗಳನ್ನು, ಎದುರಿಸಿಯೂ ಕನ್ನಡ ಭಾಷೆ ತನ್ನತನವನ್ನು ಉಳಿಸಿಕೊಂಡು ಬಂದಿತು.

ಭಾರತದ ಸಂದರ್ಭದಲ್ಲಿ ಭಾಷಾವಾರು ಪ್ರಾಂತ್ಯರಚನಾ ಚಳುವಳಿ ೧೮೫೦ ರಿಂದಲೇ ಕಂಡುಬರುತ್ತದೆ, ೧೮೭೪ರಿಂದ ಬಂಗಾಳ, ಅಸ್ಸಾಂ, ೧೮೭೬ರಿಂದ ಒರಿಸ್ಸಾದಲ್ಲಿ, ಭಾಷಾಚಳುವಳಿಗಳು ಆರಂಭವಾದವು. ಕರ್ನಾಟಕದಲ್ಲಿ ೧೮೫೬ರಲ್ಲಿಯೇ ಕರ್ನಾಟಕದ ಏಕೀಕರಣ ಚಳುವಳಿಗೆ ಚಾಲನೆ ನೀಡಿದವರು ಡೆಪ್ಯೂಟಿ ಚನ್ನಬಸಪ್ಪನವರು. ಧಾರವಾಡವನ್ನು ಕೇಂದ್ರವನ್ನಾಗಿ, ಉತ್ತರ ಕನ್ನಡ, ಬೆಳಗಾವಿ, ಬಿಜಾಪುರ ಜಿಲ್ಲೆಗಳಲ್ಲಿ ಏಕೀಕರಣ ಚಳುವಳಿ ಪ್ರಾರಂಭ ವಾಯಿತು. ೧೮೯೦ರಲ್ಲಿ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆಯೊಂದಿಗೆ ಏಕೀಕರಣ ಚಳುವಳಿಗೆ ಸಂಘಟನಾತ್ಮಕ ಬೆಂಬಲ ದೊರಕಿತು. ಬೆನಗಲ್ ರಾಮರಾಯರು ಆಲೂರು ವೆಂಕಟರಾಯರು ಕರ್ನಾಟಕ ಏಕೀಕರಣ ಕುರಿತು ಉಪನ್ಯಾಸಗಳು ಲೇಖನಗಳ ಮೂಲಕ ಜನಜಾಗೃತಿ ಮೂಡಿಸುವ ಪ್ರಯತ್ನ ನಡೆಸಿದರು. ೧೮೯೮ರಲ್ಲಿ ಲೋಕಮಾನ್ಯ ಬಾಲಗಂಗಾಧರ ತಿಲಕರು ರಾಯಲ್ ಕಮಿಷನ್ ಮುಂದೆ ಭಾಷಾವಾರು ಪ್ರಾಂತ್ಯ ರಚನೆಯ ಅಗತ್ಯತೆಯನ್ನು ಮಂಡಿಸಿದರು.

೧೯೧೫ರಲ್ಲಿ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ರಚನೆಯೊಂದಿಗೆ ದಕ್ಷಿಣ ಕರ್ನಾಟಕದಲ್ಲಿಯೂ ಏಕೀಕರಣ ಚಳುವಳಿಗೆ ಚಾಲನೆ ದೊರಕಿತು. ಕನ್ನಡ ಮಾತಾಡುವ ಎಲ್ಲಾ ಪ್ರಾಂತ್ಯಗಳ ಸದಸ್ಯರನ್ನು ಹೊಂದುವ ಮೂಲಕ ಅಖಂಡ ಕರ್ನಾಟಕದ ಕಲ್ಪನೆಗೆ ದಾರಿಯಾಯಿತು ಕರ್ನಾಟಕ ಚಳುವಳಿಗೆ ಸಾಂಸ್ಕೃತಿಕ ಸ್ವರೂಪ ಬಂದಿತು ಕನ್ನಡ ಸಾಹಿತ್ಯ ಪರಿಷತ್ತಿನ ಮೊಟ್ಟ ಮೊದಲ ಸಮ್ಮೇಳನ ದಲ್ಲಿಯೇ ಕರ್ನಾಟಕ ಪ್ರಾಂತ್ಯ ರಚನೆಗೆ ಬಲವಾದ ಒತ್ತಾಯ ಕಂಡುಬಂದಿತು. ಎಲ್ಲರ ಗುರಿ ಏಕೀಕರಣದತ್ತ ಹರಿಯು ವಂತಾಯಿತು. ೧೯೧೭ರಲ್ಲಿ ಈ ಉದ್ದೇಶ ಸಾಧನೆಗೆ ಕರ್ನಾಟಕ ಸಭೆ ಸ್ಥಾಪನೆಯಾಯಿತು. ಕರ್ನಾಟಕ ಪ್ರಾಂತ್ಯ ರಚನೆಗೆ ಅಂದಿನ ಬ್ರಿಟಿಷ್ ಕಾರ್ಯದರ್ಶಿ ಮಾಂಟೆಗ್ಯೂ ಅವರಿಗೆ ಮನವಿ ಪತ್ರ ಸಲ್ಲಿಸಲಾಯಿತು.

**ಕರ್ನಾಟಕ ವಿದ್ಯಾವರ್ಧಕ ಸಂಘ (೧೮೯೦) :** ಕಳೆದ ೧೧೯ ವರ್ಷಗಳಿಂದ ಕನ್ನಡ–ಕನ್ನಡಿಗ–ಕರ್ನಾಟಕದ ನಾಡಿನ ಸರ್ವತೋಮುಖ ಉನ್ನತಿಗಾಗಿ ಶ್ರಮಿಸುತ್ತಾ ಬಂದಿರುವ ಇಂದಿಗೂ ಕ್ರಿಯಾಶೀಲವಾಗಿರುವ ಏಕೈಕ ಸಂಸ್ಥೆ : ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ. ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರಂತರವಾಗಿ ನಡೆಸುತ್ತಾ ಬಂದಿದೆ. ಕವಿ–ಸಾಹಿತಿ, ಕಲಾವಿದರನ್ನು ಬೆಳೆಸುತ್ತಾ ಬಂದಿದೆ. ನಾಡಿನಾದ್ಯಂತ, ಹೊರನಾಡುಗಳಲ್ಲಿಯೂ ಕನ್ನಡ ಡಿಂಡಿಮ ವನ್ನು ವಿಸ್ತಾರಗೊಳಿಸಿರುವ ಸಂಘ, ಗ್ರಂಥ ಪ್ರಕಟನೆಯಲ್ಲಿಯೂ ತೊಡಗಿದೆ. ಸುಮಾರು ೧೦೦ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದೆ. ಧಾರವಾಡದ ಕೇಂದ್ರ ಸ್ಥಳದಲ್ಲಿರುವ ಸಂಘದ ಸಭಾಭವನಗಳು, ಕಛೇರಿ, ಗ್ರಂಥಾಲಯ ಎಲ್ಲರ ಗಮನ ಸೆಳೆದಿವೆ. ಅದು ರಾಜ್ಯ ಸರ್ಕಾರದ ಅನುದಾನ ಹೊಂದಿರುವ, ತನ್ನದೆ ಆದ ಸ್ವಂತ ಭವನ, ವಾಣಿಜ್ಯ ಸಂಕೀರ್ಣ ಹೊಂದಿರುವ ಸಂಸ್ಥೆಯಾಗಿದೆ. ಕರ್ನಾಟಕ ವಿದ್ಯಾವರ್ಧಕ ಸಂಘವು ರಾಜ್ಯದ ಮಾತ್ರವಲ್ಲದೆ ರಾಷ್ಟ್ರದಲ್ಲೇ ಘನತೆವೆತ್ತ ಸಂಸ್ಥೆಯಾಗಿದೆ. ಅತ್ಯಂತ

*# ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ – ೫೭೭ ೨೦೧.

ಂರಿದಾದ ಸಾಹಿತ್ಯಕ ಸಂಸ್ಥೆ, ಸ್ವಾತಂತ್ರ್ಯ ಚಳುವಳಿ, ಕರ್ನಾಟಕ ಏಕೀಕರಣ ಚಳುವಳಿ, ಗೋಕಾಕ್ ಚಳುವಳಿ, ಸಂದರ್ಭಗಳಲ್ಲಿ ನಿರ್ಣಾಯಕ ಪಾತ್ರವಹಿಸಿದೆ. ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ ಸ್ಥಾಪನೆಯಾಗಲು, ಧಾರವಾಡ ಆಕಾಶವಾಣಿ ನಿಲಯ, ಕರ್ನಾಟಕ ವಿಶ್ವವಿದ್ಯಾನಿಲಯ ಸ್ಥಾಪನೆಗೊಳ್ಳಲು ವೇದಿಕೆಯಾಗಿ ದುಡಿದಿದೆ. ನಾಡಿನ ಹೊರನಾಡಿನ ಸಂಘ ಸಂಸ್ಥೆಗಳಿಗೆ ಮಾದರಿಯೆನಿಸಿದೆ, ಸ್ಫೂರ್ತಿ ನೀಡಿದೆ. ನಾಡಿನ ಹೊರನಾಡಿನ ಕನ್ನಡ ಸಂಸ್ಥೆಗಳಿರುವಲ್ಲಿಗೇ ಹೋಗಿ ಸಂಯುಕ್ತ ಆಶ್ರಯದಲ್ಲಿ ಕಾರ್ಯಕ್ರಮಗಳನ್ನು ಆಯೋಜಿಸುತ್ತಾ ಕನ್ನಡ ಕಟ್ಟುವ ಕೆಲಸದಲ್ಲಿ ಮುಂಚೂಣಿಯಲ್ಲಿದೆ. ಅದಕ್ಕೆ ೨೦೦೬ರಲ್ಲಿ ಕರ್ನಾಟಕ ಏಕೀಕರಣ ಪ್ರಶಸ್ತಿ ಮತ್ತು ಬಂಗಾರದ ಪದಕ ದೊರಕಿದೆ.

ಶ್ರೀ ರಾ.ಲ. ದೇಶಪಾಂಡೆ ಅಧ್ಯಕ್ಷರಾಗಿ ಆರಂಭವಾದ ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರಸ್ತುತ ಅಧ್ಯಕ್ಷರಾಗಿ ನಾಲ್ಕು ದಶಕಗಳಿಂದ ನಾಡೋಜ ಪಾಟೀಲ ಪುಟ್ಟಪ್ಪನವರು, ಉಪಾಧ್ಯಕ್ಷರಾಗಿ ಶ್ರೀ ಎಂ.ಎಂ. ಹೂಲಿ ವಕೀಲರು ಹುಬ್ಬಳ್ಳಿ, ಗೌರವ ಕಾರ್ಯದರ್ಶಿಯಾಗಿ ಪ್ರೊ. ಬಿ.ವಿ. ಗುಂಜೆಟ್ಟಿ ಅವರು ಸಂಘವನ್ನು ಮುನ್ನಡೆಸುತ್ತಿದ್ದಾರೆ.

೧೯೧೮ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಮೊದಲ ಕರ್ನಾಟಕ ಸಂಘದ ಸ್ಥಾಪನೆಯಾಯಿತು. ನಂತರ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಕರ್ನಾಟಕ ಸಂಘ ಸ್ಥಾಪನೆಯಾಯಿತು. ಇದರಿಂದಾಗಿ ನಾಡು ನುಡಿಗಳ ಸೇವೆಗೆ ಚಾಲನೆ ದೊರೆಯಿತು. ನಂತರದಲ್ಲಿ ಒಂದು ಚಳುವಳಿಯೋಪಾದಿಯಲ್ಲಿ ಹಳೆ ಮೈಸೂರಿನ ಎಲ್ಲ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಕರ್ನಾಟಕ ಸಂಘಗಳು ಸ್ಥಾಪನೆಯಾದವು. ಕನ್ನಡ ಸಾಹಿತ್ಯ ಪರಿಷತ್ತು ಅಂದಿನ ನಾಲ್ವಡಿ ಕೃಷ್ಣರಾಜ ಒಡೆಯರಿಂದ ಸ್ಥಾಪನೆಯಾಗಿ ರಾಜ ಪೋಷಿತ ವಾಗಿದ್ದರಿಂದಾಗಿ, ಜನ ಸಾಮಾನ್ಯರು ಮತ್ತು ವಿದ್ಯಾರ್ಥಿಗಳು, ಸಾರ್ವಜನಿಕರ ದೇಣಿಗೆಯಿಂದ ಮತ್ತು ತಮ್ಮದೇ ಆದ ಸಂಪನ್ಮೂಲಗಳಿಂದ ಕನ್ನಡ ಭಾಷಾ ಚಳುವಳಿ ಮತ್ತು ಕರ್ನಾಟಕ ಏಕೀಕರಣ ಚಳುವಳಿಗಳಲ್ಲಿ ಸಕ್ರಿಯವಾಗಿ ತೊಡಗಿಕೊಳ್ಳಲು ಕರ್ನಾಟಕ ಸಂಘಗಳು ವೇದಿಕೆಗಳಾದವು. ಅಂದಿನ ಖ್ಯಾತ ಸಾಹಿತಿಗಳ, ಭಾಷಾ ವಿದ್ವಾಂಸರ ಬೆಂಬಲವೂ ಕರ್ನಾಟಕ ಸಂಘಗಳಿಗೆ ದೊರಕಿತು.

ಭಾರತದ ಸ್ವಾತಂತ್ರ್ಯ ಚಳುವಳಿಯ ಜೊತೆಗೆ ಕರ್ನಾಟಕ ಏಕೀಕರಣ ಚಳುವಳಿಯೂ ೧೯೨೦ರಲ್ಲಿ ನಾಗಪುರ ಕಾಂಗ್ರೆಸ್ ಅಧಿವೇಶನದ ಮುಖ್ಯ ವಿಷಯಗಳಾದವು. ಕಡಪ ರಾಘವೇಂದ್ರ ರಾಯರ ನೇತೃತ್ವದಲ್ಲಿ ಕನ್ನಡನಾಡಿನ ಎಲ್ಲ ಪ್ರಾಂತ್ಯಗಳಿಂದ ೮೦ ಪ್ರತಿನಿಧಿಗಳು ಭಾಗವಹಿಸಿದ್ದು ವಿಶೇಷ. ೧೯೨೪ರಲ್ಲಿ ಮಹಾತ್ಮಾಗಾಂಧಿಯವರ ಅಧ್ಯಕ್ಷತೆಯಲ್ಲಿ ನಡೆದ ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಚರ್ಚಿತವಾಗಿ ಕರ್ನಾಟಕ ಏಕೀಕರಣ ಸಭಾ ಅಸ್ತಿತ್ವಕ್ಕೆ ಬಂದಿತು. ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿ ಸಹ ಏಕೀಕರಣ ಚಳುವಳಿ ನೇತೃತ್ವ ವಹಿಸಿತು. ನಂತರದಲ್ಲಿ ಚಳುವಳಿ ತೀವ್ರರೂಪ ಪಡೆಯಿತು. ೧೯೩೬ರಿಂದ ೪೦ ರವರೆಗೆ ಅಖಿಲ ಕರ್ನಾಟಕ ಏಕೀಕರಣ ಸಮ್ಮೇಳನಗಳನ್ನು ಬೆಳಗಾವಿ, ಧಾರವಾಡ ಮತ್ತು ಸೊಲ್ಲಾಪುರಗಳಲ್ಲಿ ನಡೆಸಿ ಜನಜಾಗೃತಿ ಮೂಡಿಸುವ ಪ್ರಯತ್ನ ನಡೆಯಿತು. ೧೯೩೬ರಲ್ಲಿ ಸಿಂಧ್ ಮತ್ತು ಒರಿಸ್ಸಾ ಪ್ರಾಂತ್ಯ ರಚನೆಯೊಂದಿಗೆ, ದಕ್ಷಿಣದಲ್ಲಿ ಆಂಧ್ರ, ಕೇರಳ, ಕರ್ನಾಟಕಗಳಲ್ಲಿ ಭಾಷಾವಾರು ಪ್ರಾಂತ್ಯ ಚಳುವಳಿಗೆ ಹೆಚ್ಚಿನ ಬೆಂಬಲ ದೊರಕಿತು. ಮುಂಬಯಿ ಮತ್ತು ಮದ್ರಾಸ್ ಶಾಸನ ಸಭೆಗಳಲ್ಲಿ ಕಾಂಗ್ರೆಸ್ ಬಹುಮತ ಪಡೆಯಿತು. ಈ ಎರಡೂ ಕಡೆ ಭಾಷಾವಾರು ಪ್ರಾಂತ್ಯ ರಚನೆಗೆ ಗೊತ್ತುವಳಿಯನ್ನು ಕಾಂಗ್ರೆಸ್ ಅಂಗೀಕರಿಸಿತು.

ಕಾಂಗ್ರೆಸ್‌ನ ಈ ಕರೆಗೆ ವಿವಿಧ ಭಾಗಗಳಲ್ಲಿ ಹಂಚಿಹೋಗಿದ್ದ ಕನ್ನಡಿಗರು ತೀವ್ರವಾಗಿ ಸ್ಪಂದಿಸಿದರು. ರಾಜಕೀಯವಾಗಿ ಮಾತ್ರವಲ್ಲದೆ ಧಾರ್ಮಿಕ ಮುಖಂಡರು ಸಾಹಿತಿಗಳು, ಕಲಾವಿದರು ಕರ್ನಾಟಕ ಏಕೀಕರಣದ ಕನಸು ಕಂಡರು. ಸಾಮಾನ್ಯರು, ಕೃಷಿಕರು ಕಾರ್ಮಿಕರು ತಮ್ಮದೇ ರೀತಿಯಲ್ಲಿ ಪ್ರತಿಕ್ರಿಯಿಸಿದರು. ಕವಿಗಳು ಕವನಗಳ ಮೂಲಕ ಜನತೆಯಲ್ಲಿ ಸ್ಫೂರ್ತಿ ತುಂಬಿದರು. ಡಾ. ಡಿ.ಎಸ್. ಕರ್ಕಿ ಅವರ "ಹಚ್ಚೇವು ಕನ್ನಡದ ದೀಪ ಸಿರಿನುಡಿಯ ದೀಪ" ಜನಪ್ರಿಯವಾಯಿತು. ಹುಯಿಲುಗೋಳ ನಾರಾಯಣರಾಯರ "ಉದಯವಾಗಲಿ ನಮ್ಮ ಚಲುವ ಕನ್ನಡ ನಾಡು", ಗೀತೆಯಂತೂ ಪ್ರತಿಯೊಬ್ಬ ಕನ್ನಡಿಗರ ಮಂತ್ರವಾಯಿತು. ರಾಷ್ಟ್ರಕವಿ ಕುವೆಂಪು ಅವರ "ಬಾರಿಸು ಕನ್ನಡ ಡಿಂಡಿಮವ" ಕವನ ಕನ್ನಡ ಭಾಷಿಕರ ಸ್ಫೂರ್ತಿಯ ಚಿಲುಮೆಯಾಯಿತು. ನೂರಾರು ಕವಿಗಳು, ಸಾಹಿತಿಗಳು ಕನ್ನಡ ಏಕೀಕರಣದ ಕನಸನ್ನು ನನಸಾಗಿಸುವ ಕವನಗಳನ್ನು ರಚಿಸಿ ವೇದಿಕೆಗಳಲ್ಲಿ ವಾಚಿಸಿದರು. ಈ ಎಲ್ಲ ಕಾರ್ಯಗಳಿಗೆ ವೇದಿಕೆಯಾಗಿದ್ದು ೧೮೯೦ರಲ್ಲಿ ಆರಂಭವಾದ ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ. ೧೯೧೪–೧೫ರಲ್ಲಿ ಆರಂಭವಾದ ಕನ್ನಡ ಸಾಹಿತ್ಯ ಪರಿಷತ್ತು. ೧೯೧೬ರಲ್ಲಿ ಕನಸಿನ "ಕರ್ನಾಟಕ" ಹೆಸರನ್ನು ಹೊತ್ತು ಕನ್ನಡ ನಾಡಿನ ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ, ತಾಲ್ಲೂಕು ಕೇಂದ್ರಗಳಲ್ಲಿ, ಗ್ರಾಮ ಮಟ್ಟದಲ್ಲಿ ಆರಂಭವಾದ ಕರ್ನಾಟಕ ಸಂಘಗಳು, ೧೯೧೮ರಲ್ಲಿ ಪ್ರಾರಂಭವಾದ ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘವೇ ದಾಖಲೆಗಳ ಪ್ರಕಾರ ಮೊದಲನೆಯದು ಎಂದು ಗುರುತಿಸಲಾಗಿದೆ.

...ದರಿಂದ ಸ್ಫೂರ್ತಿಗೊಂಡ ಅನೇಕ ಕರ್ನಾಟಕ ಸಂಘಗಳು ನಾಡಿನಾದ್ಯಂತ ಜನತೆಯನ್ನು ಏಕೀಕರಣಕ್ಕೆ ಮಾನಸಿಕವಾಗಿ ಸಿದ್ಧಗೊಳಿಸುವುದರಲ್ಲಿ ಮಹತ್ವದ ಪಾತ್ರವಹಿಸಿದವು. ಸ್ವಾತಂತ್ರ್ಯಾಂದೋಲನದ ಜೊತೆ ಜೊತೆಗೆ ಕರ್ನಾಟಕ ಏಕೀಕರಣಕ್ಕೂ ರಾಜಕೀಯವಾಗಿ ಪ್ರಾಮುಖ್ಯತೆ ದೊರೆಯಿತು.

**ಕನ್ನಡ ಸಾಹಿತ್ಯ ಪರಿಷತ್ತು :** ಮೈಸೂರು ಮಹಾರಾಜರ ದೂರದೃಷ್ಟಿಯ ಫಲವಾಗಿ ಸ್ಥಾಪಿತವಾದ ಕರ್ನಾಟಕ ಸಾಹಿತ್ಯ ಪರಿಷತ್ತು ದಿನಾಂಕ : ೦೩-೦೫-೧೯೧೫ ರಂದು ಬೆಂಗಳೂರಲ್ಲಿ ಆರಂಭವಾಯಿತು. ಕಂಠೀರವ ನರಸಿಂಹರಾಜ ಒಡೆಯರ್ ಅದರ ಸ್ಥಾಪಕ ಅಧ್ಯಕ್ಷರಾಗಿದ್ದರು. ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ರಾಜಮಂತ್ರ ಪ್ರವೀಣ ಶ್ರೀ ಹೆಚ್.ವಿ. ನಂಜುಂಡಯ್ಯನವರನ್ನು ಆರಿಸಲಾಯಿತು. ಆರಂಭದಲ್ಲಿ ರಾಜರು ಮಂತ್ರಿಗಳು ಅಧಿಕಾರಿಗಳು ಸಮಾಜದ ಮೇಲ್ವರ್ಗದವರು ಮಾತ್ರ ಪದಾಧಿಕಾರಿಗಳೂ, ಸದಸ್ಯರು ಆಗಿದ್ದರಿಂದ ಜನಸಾಮಾನ್ಯರು ದೂರವೇ ಉಳಿದಿದ್ದರು. ಕಾಲಧರ್ಮಕ್ಕನುಗುಣವಾಗಿ ಪ್ರಸಿದ್ಧ ವಿದ್ವಾಂಸರು, ಸಾಹಿತಿಗಳು, ಸಂಶೋಧಕರು ಸದಸ್ಯರಾದರು. ಮೈಸೂರು ರಾಜ್ಯದ ಆರ್ಥಿಕ ಸಾಂಸ್ಕೃತಿಕ ಅಭಿವೃದ್ಧಿಗಾಗಿ ಸ್ಥಾಪಿತವಾದ ಸಂಸ್ಥೆ ಕ್ರಮೇಣ ಕನ್ನಡ ಭಾಷೆ ಮತ್ತು ಕನ್ನಡ ಸಾಹಿತ್ಯದ ಸರ್ವತೋಮುಖ ಬೆಳವಣಿಗೆ, ಕನ್ನಡದ ಸ್ಥಾನಮಾನ ಹಾಗೂ ಕನ್ನಡ ಏಕೀಕರಣಕ್ಕಾಗಿ ಜನಜಾಗೃತಿ ಮೂಡಿಸಿ, ಮಹತ್ಕಾರ್ಯಗಳನ್ನು ಸಾಧಿಸುವ ಉದ್ದೇಶ ಹೊಂದಿತ್ತು. ಹಳೆ ಮೈಸೂರು ಪ್ರಾಂತ್ಯದಲ್ಲಿ ಕನ್ನಡ ವಾತಾವರಣ ನಿರ್ಮಿಸುವ ಸಲುವಾಗಿ ಕನ್ನಡ ಶಾಲೆಗಳನ್ನು ಪ್ರಾರಂಭಿಸಲು ಆಳುವ ಸರ್ಕಾರದ ಮೇಲೆ ಒತ್ತಡ ತಂದರು. ಶಾಲೆಗಳ ಸ್ಥಾಪನೆಯೊಂದಿಗೆ ಕನ್ನಡ ಭಾಷೆಯ ಹುಟ್ಟು ಪ್ರಾಚೀನತೆ ಕುರಿತು ಜಿಜ್ಞಾಸೆ, ಚರ್ಚೆಗಳು ಆರಂಭವಾದವು. ವಿಚಾರ ಸಂಕಿರಣಗಳು ನಡೆದವು. ಪ್ರಾಚೀನ ಗ್ರಂಥಗಳ ಪರಿಷ್ಕರಣ, ಅನುವಾದ, ಟೀಕುಗಳು, ಪ್ರಕಟವಾದವು. ನಾಡುನುಡಿಯ ಕುರಿತು ಜನ ಸಾಮಾನ್ಯರೂ ಅಭಿಮಾನ ತಾಳುವಂತಹ ಪರಿಸ್ಥಿತಿ ನಿರ್ಮಾಣವಾಯ್ತು. ಕನ್ನಡ ಮಾತನಾಡುವ ಅರ್ಧಕ್ಕಿಂತ ಹೆಚ್ಚು ಕನ್ನಡಿಗರು ಮೈಸೂರು ಸಂಸ್ಥಾನದಿಂದ ಹೊರಗಿದ್ದಾರೆಂಬ ತಿಳುವಳಿಕೆ ಮೂಡಿ ಬಂದಿತು. ವಿದ್ವಾಂಸರ ನೆಲೆಯಲ್ಲಿ, ಸಾಹಿತಿಗಳ ಮನದಲ್ಲಿಯೂ ಏಕೀಕರಣದತ್ತ ಒಲವು ಆರಂಭವಾಯಿತು. ಅನ್ಯಭಾಷೆಗಳಲ್ಲಿ ಉಂಟಾಗಿರುವ ಎಚ್ಚರವನ್ನು ಅರಿಯುವಂತಾಯಿತು. ಸಂಸ್ಕೃತದ ಹಲವಾರು ಗ್ರಂಥಗಳನ್ನು ಕನ್ನಡಕ್ಕೆ ತರುವ ಪ್ರಯತ್ನಕ್ಕೆ ರಾಜಕೀಯವಾಗಿ, ಆರ್ಥಿಕವಾಗಿ ಬೆಂಬಲ ದೊರೆಯಿತು. ಇಂಗ್ಲೀಷ್ ಭಾಷೆಯಲ್ಲಿರುವ ಅಪಾರ ಸಾಹಿತ್ಯ ರಾಶಿ ಕನ್ನಡಕ್ಕೆ ಭಾಷಾಂತರಗೊಂಡಿತು. ಶೇಕ್ಸ್‌ಪಿಯರ್‌ನ ನಾಟಕಗಳನ್ನು, ಆಂಗ್ಲ ಪ್ರಸಿದ್ಧ ಕವಿಗಳ ಗೀತೆಗಳನ್ನು ಕನ್ನಡಕ್ಕೆ ತಂದ ಕೀರ್ತಿ ೧೯೨೦-೩೦ರ ದಶಕದ ನಮ್ಮ ಕವಿಗಳಿಗೆ ಸಲ್ಲುತ್ತದೆ. ಈ ಎಲ್ಲ ಘಟನಾವಳಿಗಳ ಹಿಂದೆ ಕನ್ನಡ ಭಾಷಿಕರನ್ನು ಒಂದೆಡೆ ತರುವ, ರಾಜಕೀಯವಾಗಿ ಕರ್ನಾಟಕ ಏಕೀಕರಣ ಸಾಧಿಸುವ ಉದ್ದೇಶವಿದ್ದುದು ಸ್ಪಷ್ಟ. ಆರಂಭದ ಕಾಲದಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತು ಜನಸಾಮಾನ್ಯರ ಬಳಿಗೆ ಬಾರದೆ ರಾಜರ ಅಧಿಕಾರಿಗಳ, ವಿದ್ವಾಂಸರ ಸೊತ್ತಾಗಿದ್ದರಿಂದಾಗಿ ಜನ ಸಾಮಾನ್ಯರಿಂದ ಅಲ್ಲಲ್ಲಿ ಸ್ಥಳೀಯವಾಗಿ "ಕನ್ನಡ ಸಂಘಗಳು" "ಕರ್ನಾಟಕ ಸಂಘಗಳು" ತಮ್ಮದೇ ಆದ ಮಿತಿಯಲ್ಲಿ ಸ್ಥಳೀಯರ ನೆರವಿನಿಂದ ಕನ್ನಡ ಭಾಷೆ ಮತ್ತು ಕರ್ನಾಟಕ ಏಕೀಕರಣಕ್ಕಾಗಿ ಕರ್ನಾಟಕ ಸಂಘಗಳನ್ನು ಸ್ಥಾಪಿಸಿ ತನ್ಮೂಲಕ ಜನ ಸಾಮಾನ್ಯರಲ್ಲಿ ಕನ್ನಡ ಪ್ರೀತಿಯನ್ನು ಉದ್ದೀಪನಗೊಳಿಸುವ ಪ್ರಾಮಾಣಿಕ ಪ್ರಯತ್ನದಲ್ಲಿ ತೊಡಗಿದ್ದ ಉಲ್ಲೇಖಗಳು ಕಂಡುಬರುತ್ತವೆ. ಸುವರ್ಣ ಕರ್ನಾಟಕ ಏಕೀಕರಣ ಪ್ರಶಸ್ತಿ ದೊರಕಿದೆ.

**ಬಳ್ಳಾರಿ ವಿದ್ಯಾವರ್ಧಕ ಸಂಘ :** ೧೯೦೯ರಲ್ಲಿ ನಡೆದ ೫ನೇ ಅಖಿಲ ಭಾರತ ವೀರಶೈವ ಸಮ್ಮೇಳನದಲ್ಲಿ ತೀರ್ಮಾನವಾದಂತೆ ಪೂಜ್ಯ ಹಾನಗಲ್ ಕುಮಾರಸ್ವಾಮಿಗಳ ಮಾರ್ಗದರ್ಶನದಲ್ಲಿ ಬಳ್ಳಾರಿಯಲ್ಲಿ "ಮದರಾಸು ವೀರಶೈವ ವಿದ್ಯಾವರ್ಧಕ ಸಂಘ" ೭-೩-೧೯೧೮ರಲ್ಲಿ ಸ್ಥಾಪಿತವಾಯಿತು. ಅಧ್ಯಕ್ಷರಾಗಿ ಶ್ರೀ ಕೌತಳಿ ವೀರಭದ್ರಪ್ಪ ಆಯ್ಕೆ ಆದರು. ೧೯೩೩ರಲ್ಲಿ ಸಂಘದ ಹೆಸರನ್ನು "ವೀರಶೈವ ವಿದ್ಯಾವರ್ಧಕ ಸಂಘ"ವೆಂದು ಮರು ನಾಮಕರಣ ಮಾಡಲಾಯಿತು. ೧೯೨೪ರಲ್ಲಿ ಸಂಘವು ಮೊದಲ ಪ್ರಾಥಮಿಕ ಶಾಲೆ ಪ್ರಾರಂಭಿಸಿತು. ಕರ್ನಾಟಕ ಏಕೀಕರಣ ಚಳುವಳಿಗೆ ಚಾಲನೆ ನೀಡಿ ಸಭೆಗಳನ್ನು ನಡೆಸಿತು. ೧೯೩೫ರಲ್ಲಿ ವೀರಶೈವ ಕಾಲೇಜು ಆರಂಭವಾಯಿತು. ಪ್ರೌಢಶಾಲೆಯನ್ನೂ ಆರಂಭಿಸಲಾಯಿತು. ೧೯೨೮ರಲ್ಲಿ ಕಡಪ ರಾಘವೇಂದ್ರರಾವ್ ಬಳ್ಳಾರಿ ಜಿಲ್ಲೆಯನ್ನು ಕರ್ನಾಟಕಕ್ಕೆ ಸೇರಿಸುವ ಚಳುವಳಿಗೆ ನಾಂದಿ ಹಾಡಿದರು. ಅನಂತರ ಏಕೀಕರಣ ಚಳುವಳಿ ಬಳ್ಳಾರಿ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ತೀವ್ರಗೊಂಡಿತು. ವೈ. ನಾಗೇಶಶಾಸ್ತ್ರಿ, ಅಳವಂಡಿ ಶಿವಮೂರ್ತಿ, ಚಂದ್ರಶೇಖರ ಶಾಸ್ತ್ರಿ, ಅಲ್ಲಂ ಸುಮಂಗಲಮ್ಮ, ಉತ್ತಂಗಿ ಚೆನ್ನಪ್ಪ, ಕೋ.ಚೆ. ಜಂತಕಲ್ ಗಾದಿಲಿಂಗಪ್ಪ ಮುಂತಾದವರು ಏಕೀಕರಣ ಚಳವಳಿಯ ಮುಂಚೂಣಿ ನಾಯಕರು, "ಬಳ್ಳಾರಿ, ಕರ್ನಾಟಕದ ಗಡಿನಾಡಲ್ಲ, ನಡುನಾಡು, ಅಚ್ಚ ಕನ್ನಡನಾಡು, ಬಳ್ಳಾರಿ ಜಿಲ್ಲೆಯ ತರುಣರೇ ಕನ್ನಡ ಸಂಸ್ಕೃತಿಯನ್ನು ಕಾಪಾಡಲು ನಡುಕಟ್ಟಿ ನಿಲ್ಲಿರಿ" ಎಂಬ ಸಿಂಹಗರ್ಜನೆಯನ್ನು ಮೊಳಗಿಸಿದರು

ಕೃಷ್ಣರಾಯರು ಮೊಳಗಿಸಿದ್ದು, ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘದಲ್ಲೇ ಎನ್ನುವುದು ವಿಶೇಷ. ೧೪-೧-೧೯೩೫ರಲ್ಲಿ ವೈ. ನಾಗೇಶ ಶಾಸ್ತ್ರಿಗಳ ನೇತೃತ್ವದಲ್ಲಿ ಬಳ್ಳಾರಿಯಲ್ಲಿ "ಕರ್ನಾಟಕ ಸಂಘ" ಪ್ರಾರಂಭವಾಯಿತು. ಅಧ್ಯಕ್ಷರಾಗಿ ವೈ. ಮಹಾ ಬಲೇಶ್ವರಪ್ಪ, ಕಾರ್ಯದರ್ಶಿಯಾಗಿ ಸದಾಶಿವಯ್ಯನವರು ಆಯ್ಕೆ ಆದರು. ಏಕೀಕರಣ ಚಳುವಳಿಗೆ ಆಶ್ರಯ ನೀಡಿದರು. ವೀರಶೈವ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಬಳ್ಳಾರಿ ಜಿಲ್ಲಾ ಕನ್ನಡ ಕಲಾ ಪರಿಷತ್ ಸ್ಥಾಪನೆಯೊಂದಿಗೆ ಚಳುವಳಿ ತೀವ್ರಗೊಂಡಿತು. ಬಳ್ಳಾರಿ ಜಿಲ್ಲಾದ್ಯಾಂತ ವಿ.ವಿ. ಸಂಘದ ಶಾಲೆಗಳಲ್ಲಿ ಕನ್ನಡದ ಕಾರ್ಯಕ್ರಮಗಳನ್ನು ನಡೆಸಿ ಜನಜಾಗೃತಿ ಮೂಡಿಸಿದರು. ಏಕೀಕರಣ ಚಳುವಳಿಯ ಫಲವಾಗಿ ೧೯೫೩ರಲ್ಲಿಯೇ ಕರ್ನಾಟಕಕ್ಕೆ ಸೇರ್ಪಡೆಗೊಂಡ ಮೊದಲ ಜಿಲ್ಲೆ ಬಳ್ಳಾರಿ ಎಂಬ ಕೀರ್ತಿಗೆ ಪಾತ್ರವಾಯಿತು. ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ವೀರಶೈವ ವಿದ್ಯಾವರ್ಧಕ ಸಂಘದ ಪಾತ್ರ ಮಹತ್ವದ್ದು ಎನ್ನಬಹುದು.

**ರಾಯಚೂರು ಕರ್ನಾಟಕ ಸಂಘ :** ೮೧ ವರ್ಷಗಳ ಸುದೀರ್ಘ ಇತಿಹಾಸ ಹೊಂದಿರುವ ರಾಯಚೂರಿನ ಕರ್ನಾಟಕ ಸಂಘ ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳ, ಕೇಂದ್ರವಾಗಿ ಜನಜೀವನದ ಅವಿಭಾಜ್ಯ ಅಂಗವಾಗಿ ನಾಡು-ನುಡಿಯ ಸೇವೆಯಲ್ಲಿ ತೊಡಗಿದೆ. ರಾಷ್ಟ್ರೀಯ ಜಾಗೃತಿ ಮೂಡಿಸುತ್ತಾ ಸ್ವಾತಂತ್ರ್ಯ ಚಳುವಳಿ ಮತ್ತು ಕರ್ನಾಟಕ ಏಕೀಕರಣ ಚಳುವಳಿಗಳಲ್ಲಿ ಮಹತ್ತರವಾದ ಸೇವೆ ಸಲ್ಲಿಸಿದೆ. ೧೯೨೮ರ ರಾಮನವಮಿಯಂದು ಶ್ರೀ ವೀರಣ್ಣ ಮಾಸ್ತರು, ಜಗನ್ನಾಥರಾವ್ ಫಡ್ನಾವೀಸ್, ಡಿ. ಮಾಣಿಕರಾವ್, ರಾ.ಗು. ಜೋಶಿ ಮುಂತಾದ ತರುಣರು ಸೇರಿ ಕರ್ನಾಟಕ ತರುಣ ಸಂಘವನ್ನು ಸ್ಥಾಪಿಸಿದರು. ಮಾಧ್ವರಾವ್ ಮೊದಲ ಅಧ್ಯಕ್ಷರಾಗಿ, ವೀರಣ್ಣ ಮಾಸ್ತರ ಕಾರ್ಯದರ್ಶಿಗಳಾಗಿ ಆಯ್ಕೆ ಆದರು. ಮುಂದೆ ತರುಣ ಸಂಘವನ್ನು ಕರ್ನಾಟಕ ಸಂಘ (ರಿ) ಎಂದು ಹೆಸರಿಸಲಾಯಿತು. ಸಾಹಿತ್ಯ, ಕವಿಗೋಷ್ಠಿ ನಾಟಕಗಳನ್ನು ಏರ್ಪಡಿಸಿ, ಉರ್ದುಮಯವಾಗಿದ್ದ ರಾಯಚೂರಿನಲ್ಲಿ ಕನ್ನಡದ ಕಂಪನ್ನು ಹರಡುವ ಕಾರ್ಯದಲ್ಲಿ ತೊಡಗಿತು. ಆರಂಭದಲ್ಲಿ ಬಾಡಿಗೆ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಸಂಘ ೧೯೩೪ರಲ್ಲಿ ಪಂಜೆಮಂಗೇಶರಾಯರ ಅಧ್ಯಕ್ಷತೆಯಲ್ಲಿ ನಡೆದ ೨೦ನೇ ಕನ್ನಡ ಸಾಹಿತ್ಯ ಸಮ್ಮೇಳನವನ್ನು ರಾಯಚೂರಿನಲ್ಲಿ ಯಶಸ್ವಿಯಾಗಿ ನಡೆಸಿದ ಕೀರ್ತಿ ಕರ್ನಾಟಕದ ಸಂಘಕ್ಕೆ ಸಲ್ಲುತ್ತದೆ. ೧೯೫೫ರಲ್ಲಿ ಶ್ರೀ ಆದ್ಯರಂಗಾಚಾರ್ಯರ ಅಧ್ಯಕ್ಷತೆಯಲ್ಲಿ ನಡೆದ ೩೮ನೇ ಕನ್ನಡ ಸಾಹಿತ್ಯ ಸಮ್ಮೇಳನ ಸಂಘದ ಹಿಂದಿನ ವಿಶಾಲವಾದ ಬಯಲಿನಲ್ಲಿದ್ದ ಗುಬ್ಬಿ ವೀರಣ್ಣನವರ ನಾಟಕ ಮಂದಿರದಲ್ಲಿಯೇ ನಡೆಸಿತು. ಹೈದ್ರಾಬಾದ್ ಸಂಸ್ಥಾನದ ಮಂತ್ರಿಗಳಾಗಿದ್ದ ಸರ್‌ಮಿರ್ಜಾ ಇಸ್ಮಾಯಿಲ್ ಅವರು ೧೯೪೬ರಲ್ಲಿ ಸಂಘದ ಕಟ್ಟಡದ ಶಂಕುಸ್ಥಾಪನೆ ನೆರವೇರಿಸಿದರು. ೧೯೫೩ರ ಹೊತ್ತಿಗೆ ರಾಯಚೂರು ಕರ್ನಾಟಕ ಸಂಘದ ಭವನ ಸಿದ್ಧವಾಯಿತು. ಮುದುವೀಡು ಕೃಷ್ಣರಾಯರು, ಗರೂಡ ಸದಾಶಿವರಾಯರು, ಆಲೂರು ವೆಂಕಟರಾಯರು, ಬಿ.ಎಂ.ಶ್ರೀ., ಡಿ.ವಿ. ಗುಂಡಪ್ಪನವರು, ದ.ರಾ. ಬೇಂದ್ರೆ, ಜಿ.ಪಿ. ರಾಜರತ್ನಂ ಮುಂತಾದ ಖ್ಯಾತಸಾಹಿತಿಗಳ, ವಿದ್ವಾಂಸರ ಉಪನ್ಯಾಸಗಳನ್ನು ಏರ್ಪಡಿಸಿ, ಕನ್ನಡದ ಕಹಳೆಯನ್ನು ಮೊಳಗಿಸಿದ್ದಾರೆ. ತಮ್ಮ ಸರಳ-ಸಜ್ಜನಿಕೆಗೆಯಿಂದ ಪ್ರತಿಭೆಯಿಂದ ಜನಮನ ಗೆದ್ದ ಬಿ.ಎಂ. ಶ್ರೀಕಂಠಯ್ಯನವರು ಕನ್ನಡನಾಡಿನಾದ್ಯಂತ, ಹೊರನಾಡುಗಳಲ್ಲಿಯೂ ಸಂಚರಿಸಿ ಕರ್ನಾಟಕ ಏಕೀಕರಣದ ರೂವಾರಿ ಎನಿಸಿದ್ದಾರೆ. ಅಲ್ಲಲ್ಲಿ ಕರ್ನಾಟಕ ಸಂಘಗಳನ್ನು ಸ್ಥಾಪಿಸಿ ಹಿಂದೆ ಇದ್ದ ಕನ್ನಡ ಸಂಸ್ಥೆಗಳಿಗೆ ಪುನರ್‌ಚೇತನ ನೀಡಿ, ಕನ್ನಡ ಸಾಹಿತ್ಯ ಪರಿಷತ್‌ನ ಅಂಗಸಂಸ್ಥೆಗಳನ್ನಾಗಿ ಮಾಡಿಕೊಂಡು ಕನ್ನಡ ಪ್ರಜ್ಞೆಯನ್ನು ಮೂಡಿಸಿದರು. ತನ್ಮೂಲಕ ಕರ್ನಾಟಕ ಏಕೀಕರಣಕ್ಕೆ ಜನಮಾನಸವನ್ನು ಅಣಿಗೊಳಿಸಿದರು. ರಾಯಚೂರು ನಗರದ, ಜಿಲ್ಲೆಯ ಹೆಮ್ಮೆಯ ಸಾಂಸ್ಕೃತಿಕ ಕೇಂದ್ರವಾಗಿದೆ.

ರಾಯಚೂರು ಕರ್ನಾಟಕ ಸಂಘ ಏಕೀಕರಣ ಚಳುವಳಿ ಜೊತೆಗೆ ಹೈದರಾಬಾದ್ ವಿಮುಕ್ತಿ ಚಳುವಳಿಕಾರರಿಗೂ ಆಶ್ರಯ ನೀಡಿದೆ. ಸಾಹಿತ್ಯದ ಜೊತೆಗೆ ಸಂಗೀತ, ನೃತ್ಯ, ನಾಟಕಗಳಿಗೂ ಪ್ರೋತ್ಸಾಹಿಸಿದೆ. ನಾಟಕ ಪ್ರದರ್ಶನಕ್ಕಾಗಿ ಬಯಲುರಂಗ ಮಂದಿರವನ್ನು ನಿರ್ಮಿಸಿದೆ. ಸುಮಾರು ಹತ್ತು ಸಾವಿರ ಪುಸ್ತಕಗಳ ಗ್ರಂಥ ಭಂಡಾರವನ್ನು ಹೊಂದಿದೆ. ೧೯೬೨ರಲ್ಲಿ ಸಂಘದ ಬೆಳ್ಳಿ ಹಬ್ಬವನ್ನು ಆಚರಿಸಿ ಸ್ಮರಣ ಸಂಚಿಕೆ ಪ್ರಕಟಿಸಿ, ರಾಯಚೂರು ನಗರದ, ಜಿಲ್ಲೆಯ ಹೆಮ್ಮೆಯ ಸಾಂಸ್ಕೃತಿಕ ಕೇಂದ್ರವಾಯಿತು. ೧೯೫೭ರಲ್ಲಿ ಕೇಂದ್ರ ಗೃಹಸಚಿವ ಶ್ರೀ ಬಳಗವಂತರಾವ್ ದಾತಾರ ಕರ್ನಾಟಕ ಸಂಘದ ಕಟ್ಟಡವನ್ನು ಉದ್ಘಾಟಿಸಿದರು. ಪ್ರಸ್ತುತ ರಾಯಚೂರು ಕರ್ನಾಟಕ ಸಂಘದ ಅಧ್ಯಕ್ಷರಾಗಿ ಶ್ರೀ ನರಸಣ್ಣ ಕೆ. ಕುಲಕರ್ಣಿ, ಶ್ರೀಗಟ್ಟು ಶ್ರೀನಿವಾಸ್ ಗೌರವ ಕಾರ್ಯದರ್ಶಿಯಾಗಿ ಸಂಘವನ್ನು ಯಶಸ್ಸಿನ ಹಾದಿಯಲ್ಲಿ ಮುನ್ನಡೆಸಿದ್ದಾರೆ.

**ಶಿವಮೊಗ್ಗ ಕರ್ನಾಟಕ ಸಂಘ :** ೧೯೩೦ರ ನವರಾತ್ರಿ ಸಮಯದಲ್ಲಿ ಮೈಸೂರಿನಲ್ಲಿ ನಡೆದ ೧೬ನೇ ಕರ್ನಾಟಕ ಸಾಹಿತ್ಯ ಪರಿಷತ್. (ಕನ್ನಡ ಸಾಹಿತ್ಯ ಪರಿಷತ್‌ನ ಮೊದಲ ಹೆಸರು)ನ ಸಮ್ಮೇಳನದಲ್ಲಿ ಭಾಗವಹಿಸಿ ಕನ್ನಡ ಜನಮನ ಗೆದ್ದ ಧಾರವಾಡದ ಪ್ರಸಿದ್ಧ ಕವಿ ಡಾ. ದ.ರಾ. ಬೇಂದ್ರೆ

ಅವರನ್ನು ಡಾ. ಮಾಸ್ತಿಯವರು ಶಿವಮೊಗ್ಗಕ್ಕೆ ಕರೆತಂದು ಬೇಂದ್ರೆಯವರ ಕಾವ್ಯವಾಚನ ಏರ್ಪಡಿಸಿದರು. ಆಗ ಈ ಈರ್ವರು ಮಹನೀಯರೂ ಶಿವಮೊಗ್ಗೆಯಲ್ಲಿ "ಕರ್ನಾಟಕ ಸಂಘದ" ಅವಶ್ಯಕತೆಯನ್ನು ಕನ್ನಡದ ಅಭಿಮಾನಗಳಲ್ಲಿ ಮೂಡಿಸಿದರು. ಶ್ರೀ ದೇಶಪಾಂಡೆ ಗುರುರಾವ್, ಸೀತಾರಾಮ್. ಎ. ಕೊಡಲಿ ಚಿದಂಬರಂ, ಭೂಪಾಳಂ ಪುಟ್ಟನಂಜಪ್ಪ ಮುಂತಾದವರು ಪ್ರೇರಿತರಾಗಿ ೮.೧೧.೧೯೩೦ರಂದು, ಅಂದಿನ ಯುವಕವಿ ಶ್ರೀ ಕೆ.ವಿ. ಪುಟ್ಟಪ್ಪನವರಿಂದ ಸರ್ಕಾರಿ ಪ್ರೌಢಶಾಲೆಯಲ್ಲಿ ಉದ್ಘಾಟನಾ ಸಮಾರಂಭ ನೆರವೇರಿತು. ಶ್ರೀ ಪುಟ್ಟಪ್ಪನವರು ಭಾಷಣದಲ್ಲಿ ಸಾಹಿತ್ಯ ಸಂಸ್ಕೃತಿ, ಕಲೆ, ನಾಟಕ, ಸಂಗೀತಗಳಿಗೆ ಪ್ರೋತ್ಸಾಹ ನೀಡಲು ಸೂಚಿಸಿದರು. ಕಾರ್ಯಕ್ರಮಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲು ಶ್ರೀ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು ಅಧ್ಯಕ್ಷರಾಗಿ, ಶ್ರೀ ಡಿ. ಗುರುರಾವ್ ಪ್ರಥಮ ಕಾರ್ಯದರ್ಶಿಯಾಗಿ ಕಾರ್ಯಕಾರಿ ಸಮಿತಿ ರೂಪಿತವಾಯಿತು. ಕನ್ನಡ ನಾಡಿನ ಶ್ರೇಷ್ಠ ವಿದ್ವಾಂಸರನ್ನು ಶಿವಮೊಗ್ಗಕ್ಕೆ ಬರಮಾಡಿಕೊಂಡು ಉಪನ್ಯಾಸಗಳನ್ನು ಕವಿತಾವಾಚನ, ಕಾವ್ಯವಾಚನ, ಗಮಕವಾಚನ, ಸಂಗೀತಗೋಷ್ಠಿ, ನಾಟಕ ಮುಂತಾದವುಗಳನ್ನು ಏರ್ಪಡಿಸುವುದು, ಗ್ರಂಥ ಪ್ರಕಟನೆ, ಗ್ರಂಥ ಭಂಡಾರ ಸ್ಥಾಪನೆ, ಕರ್ನಾಟಕ ಏಕೀಕರಣ ಕುರಿತು ವಿಚಾರ ವಿನಿಮಯ ಮಾಡಲಾಯಿತು. ಕನ್ನಡ, ಜೈನ ಸಾಹಿತ್ಯ, ವಚನ ಸಾಹಿತ್ಯ ಕುರಿತು ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲಾಯಿತು. ಆರಂಭದಲ್ಲಿ ಕೆಲಕಾಲ ಜಿಲ್ಲಾಧಿಕಾರಿಗಳು ಗೌರವ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ನಗರಸಭೆಯ ಒಂದು ಕೊಠಡಿಯಲ್ಲಿ ಸಂಘದ ಕಚೇರಿ ನಡೆಯುತ್ತಿತ್ತು. ಅಲ್ಲಿ ಸ್ಥಳ ಸಾಲದ್ದರಿಂದ ೧೯೩೬ರಲ್ಲಿ ನಗರ ಸಭೆಯಿಂದ ಈಗಿರುವ ಸ್ಥಳವನ್ನು ಕರ್ನಾಟಕ ಸಂಘಕ್ಕಾಗಿ ಪಡೆಯಲಾಯಿತು. ಅಡಿಕೆ ಮಂಡಿ ವರ್ತಕರೂ, ಸಾಹಿತ್ಯಾಭಿಮಾನಿಗಳೂ ಆಗಿದ್ದ ಶ್ರೀ ಹಸೂಡಿ ವೆಂಕಟಶಾಸ್ತ್ರಿಗಳ ಉದಾರ ಕೊಡುಗೆಯಿಂದ ಈಗಿರುವ ಸಭಾಭವನವನ್ನು ನಿರ್ಮಿಸಲಾಯಿತು. ಕನ್ನಡದ ಕಣ್ವ ಬಿ.ಎಂ. ಶ್ರೀ ಅವರು ೧೯೪೨ರಲ್ಲಿ ಭವನದ ಶಂಕುಸ್ಥಾಪನೆ ನೆರವೇರಿಸಿದರು. ೧೧.೨.೧೯೪೩ರಂದು ಅಂದಿನ ಮೈಸೂರು ಅರಸು ಶ್ರೀ ಜಯ ಚಾಮರಾಜೇಂದ್ರ ಒಡೆಯರು ಭವನದ ಆರಂಭೋತ್ಸವ ನೆರವೇರಿಸಿದರು. ಕನ್ನಡ ಸಾರಸ್ವತ ಲೋಕಕ್ಕೆ, ಸಾಂಸ್ಕೃತಿಕ ಹಿರಿಮೆಗೆ, ಕರ್ನಾಟಕ ಸಂಘದ ಕೊಡುಗೆ ಅಪಾರವಾದದ್ದು. ೧೯೪೩ರಲ್ಲಿ ಶಿವಮೊಗ್ಗದಲ್ಲಿ ಡಾ. ದ.ರಾ. ಬೇಂದ್ರ ಅವರ ಅಧ್ಯಕ್ಷತೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಪೂರ್ಣ ಜವಾಬ್ದಾರಿಯನ್ನು ಕರ್ನಾಟಕ ಸಂಘವೇ ಹೊತ್ತು ಯಶಸ್ವಿಯಾಗಿ ನಡೆಸಿಕೊಟ್ಟಿದೆ. ೧೯೭೬ರಲ್ಲಿ ಶ್ರೀ ಎಸ್.ವಿ. ರಂಗಣ್ಣನವರ ಅಧ್ಯಕ್ಷತೆಯಲ್ಲಿ ನಡೆದ ೪೯ನೇ ಕನ್ನಡ ಸಾಹಿತ್ಯ ಸಮ್ಮೇಳನವೂ ಶಿವಮೊಗ್ಗ ಕರ್ನಾಟಕ ಸಂಘದ ಹಿಂದಿನ ಮೈದಾನದಲ್ಲಿ ನಡೆಸಿಕೊಟ್ಟ ಹೆಗ್ಗಳಿಕೆ ಸಂಘದ್ದು. ಸಂಘದ ರಜತ ಮಹೋತ್ಸವ, ಸುವರ್ಣ ಮಹೋತ್ಸವ ವಜ್ರ ಮಹೋತ್ಸವಗಳನ್ನು ಆಚರಿಸಲಾಗಿದೆ. ಹಸೂಡಿ ವೆಂಕಟಶಾಸ್ತ್ರಿಗಳ ಹೆಸರನ್ನು ಹೊತ್ತ ಸಭಾಭವನದ ೬೦ ವರ್ಷದ ನೆನಪಿನ ಸಂಪುಟ ಪ್ರಕಟವಾಗಿದೆ. ಕರ್ನಾಟಕ ಸಂಘವು ಕರ್ನಾಟಕದ ಹೆಸರಾಂತ ಸಾಹಿತಿಗಳ ಸುಮಾರು ೨೬ ಮೌಲಿಕ ಗ್ರಂಥಗಳನ್ನು ಪ್ರಕಟಿಸಿದೆ. ಕರ್ನಾಟಕ ಸಂಘ ಶಿವಮೊಗ್ಗ ಕರ್ನಾಟಕ ಏಕೀಕರಣಕ್ಕೆ ಶ್ರಮಿಸಿರುವುದನ್ನು ಗುರುತಿಸಿ ೨೦೦೬ನೇ ಸಾಲಿನಲ್ಲಿ ಕರ್ನಾಟಕ ಏಕೀಕರಣವಾಗಿ ೫೦ ವರ್ಷ ತುಂಬಿದ ಸಂದರ್ಭದಲ್ಲಿ "ಕರ್ನಾಟಕ ಏಕೀಕರಣ ಪ್ರಶಸ್ತಿ" ಮತ್ತು ಬಂಗಾರದ ಪದಕ ನೀಡಿ ಗೌರವಿಸಿದೆ ೨೦೦೬ನೇ ಸಾಲಿನ ಡಾ. ದ.ರಾ. ಬೇಂದ್ರೆ ಪ್ರಶಸ್ತಿ ದೊರಕಿದೆ.

ಕರ್ನಾಟಕ ಸಂಘದ ಆರಂಭದ ವರ್ಷಗಳಲ್ಲಿ ಜಿಲ್ಲೆಯಾದ್ಯಂತ ಸಂಚರಿಸಿ, ಉಪನ್ಯಾಸಗಳನ್ನು ಏರ್ಪಡಿಸಿ ಏಕೀಕರಣಕ್ಕೆ ಜನರನ್ನು ಸಜ್ಜುಗೊಳಿಸಿತು. ಸ್ಫೂರ್ತಿಗೊಂಡ ಕನ್ನಡಾಭಿಮಾನಿಗಳು, ಸಾಗರ, ಶಿರಾಳಕೊಪ್ಪ, ಶಿಕಾರಿಪುರ. ಆನವಟ್ಟಿ, ಸೊರಬ, ಹೊನ್ನಾಳಿ, ಕುಂಸಿ, ತೀರ್ಥಹಳ್ಳಿ ಮುಂತಾದ ಸ್ಥಳಗಳಲ್ಲಿ ಕರ್ನಾಟಕ ಸಂಘಗಳನ್ನು ಸ್ಥಾಪಿಸಿದ ಉಲ್ಲೇಖಗಳು ಕಂಡುಬರುತ್ತವೆ. ೧೯೫೬ರಲ್ಲಿ ಕರ್ನಾಟಕ ಏಕೀಕರಣವಾದ ನಂತರ ಶಿವಮೊಗ್ಗ ಕರ್ನಾಟಕ ಸಂಘದ ಬಹುಮುಖಿ ಸೇವೆಯಲ್ಲಿ ತೊಡಗಿದೆ, ಆರ್ಥಿಕವಾಗಿ ಸ್ವಾಯತ್ತ ಸಂಸ್ಥೆಯಾಗಿದೆ. ಪ್ರಸ್ತುತ ಶ್ರೀಮತಿ ವಿಜಯ ಶ್ರೀಧರ್ ಅವರು ಅಧ್ಯಕ್ಷರಾಗಿ, ಶ್ರೀ ಹೆಚ್.ಡಿ. ಉದಯಶಂಕರ ಶಾಸ್ತ್ರಿ ಅವರು ಗೌರವ ಕಾರ್ಯದರ್ಶಿಯಾಗಿ ಶಿವಮೊಗ್ಗ ಕರ್ನಾಟಕ ಸಂಘವನ್ನು ಮುನ್ನಡೆಸಿದ್ದಾರೆ. ವಜ್ರಪಥ, ಕರ್ನಾಟಕ ಭವನ-೬೦ ಮತ್ತು ಅಮೃತವರ್ಷ-೭೫, ಸ್ಮರಣ ಸಂಚಿಕೆಗಳನ್ನು ಪ್ರಕಟಿಸಿದೆ.

**ಮಂಡ್ಯ ಕರ್ನಾಟಕ ಸಂಘ :** ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದ ವರ್ಷವೇ ಪ್ರಾರಂಭವಾದ ಮಂಡ್ಯ ಕರ್ನಾಟಕ ಸಂಘಕ್ಕೀಗ ೬೦ ವರ್ಷ, ವಜ್ರಮಹೋತ್ಸವವನ್ನು ಆಚರಿಸಿಕೊಳ್ಳುತ್ತಿರುವ ಸಂಘ, ಸಂಕ್ಷಿಪ್ತ ಮೌಖಿಕ ಇತಿಹಾಸವನ್ನು ಮಾತ್ರ ಉಳಿಸಿಕೊಂಡಿದೆ. ಸ್ವಂತ ಕಟ್ಟಡ ಹೊಂದಿರುವ ಕರ್ನಾಟಕದ ಕೆಲವೇ ಸಂಘಗಳಲ್ಲಿ ಮಂಡ್ಯ ಕರ್ನಾಟಕ ಸಂಘವೂ ಒಂದು. ಸ್ವಾತಂತ್ರ್ಯ ಪೂರ್ವದಲ್ಲಿಯೇ ಸ್ವಾತಂತ್ರ್ಯಕ್ಕಾಗಿ ಮತ್ತು ಏಕೀಕರಣಕ್ಕಾಗಿ ಹೋರಾಡಿದ ಇಂಡುವಾಳು ಹೆಚ್. ಹೊನ್ನಯ್ಯ, ಎಂ. ಮಹಾಬಲರಾವ್, ಶಿಂಗ್ರಾಚಾರ್ ಮುಂತಾದವರ ದೂರದೃಷ್ಟಿಯ ಫಲವಾಗಿ ಜನ್ಮತಳೆದ ಸಂಸ್ಥೆ "ಮಂಡ್ಯ ಕರ್ನಾಟಕ ಸಂಘ" ಜಿಲ್ಲೆಯ, ಸಾಹಿತ್ಯ ಸಂಸ್ಕೃತಿ, ಕಲೆ ಸಂಗೀತ, ನಾಟಕ,

ಾಷೆಗಳ ಅಭಿವೃದ್ಧಿಗಾಗಿ ಹೋರಾಟ ನಡೆಸಿದ ಪ್ರಾತಿನಿಧಿಕ ಂಸ್ಥೆಯಾಗಿದೆ. ಆ ಕಾಲದ ರಾಜಕೀಯ ಧುರೀಣರಾದ ದಿ. ಂ.ಬಿ. ಬೋರೇಗೌಡ, ಕೆ.ವಿ. ಶಂಕರೇಗೌಡ, ಕೆ. ಶಿಂಗಾರಿಗೌಡ .ಪಿ. ನಾಗರಾಜಮೂರ್ತಿ ಪಿ.ಎನ್. ಜವರಪ್ಪ ಗೌಡ ಮುಂತಾದವರು ಕರ್ನಾಟಕ ಸಂಘದ ಪದಾಧಿಕಾರಿ ಗಳಾಗಿ ಂಘವನ್ನು ಮುನ್ನಡೆಸಿದ್ದಾರೆ.

ಭಾರತದ ಸ್ವಾತಂತ್ರ್ಯದೊಂದಿಗೆ, ಮೈಸೂರು ಚಲೋ ಚಳುವಳಿ ಮತ್ತು ನಂತರದ ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಸಂಘದ ಸದಸ್ಯರು ಪ್ರತ್ಯಕ್ಷವಾಗಿ ಪಾಲ್ಗೊಂಡು ಅನೇಕರು ಜೈಲು ಸೇರಿದರು. ಕರ್ನಾಟಕ ಸಂಘದ ವೇದಿಕೆ ಮೂಲಕ ಸ್ಫೂರ್ತಿ ಪಡೆದು ಏಕೀಕರಣಕ್ಕೆ ಬೆಂಬಲ ನೀಡಿದ್ದಾರೆ. ೧೯೫೪ರಲ್ಲಿ ಕುವೆಂಪುರವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಾಗ ಅವರನ್ನು ಮಂಡ್ಯಕ್ಕೆ ಆಹ್ವಾನಿಸಿ ಗೌರವಿಸಲಾಯಿತು. "ಬಾರಿಸು ಕನ್ನಡ ಡಿಂಡಿಮವ ಓ ಕರ್ನಾಟಕ ಹೃದಯ ಶಿವ" ಗೀತೆಯನ್ನು ವಾಚಿಸುವ ಮೂಲಕ ಹಳೆ ಮೈಸೂರಿನಲ್ಲಿ ಕರ್ನಾಟಕ ಏಕೀಕರಣದತ್ತ ಜನಾಭಿಪ್ರಾಯ ವನ್ನು ರೂಪಿಸಿದರು. ಡಾ. ಮಾಸ್ತಿ, ಜಿ.ಪಿ. ರಾಜರತ್ನಂ, ಎಸ್.ವಿ. ಪರಮೇಶ್ವರ ಭಟ್ಟರು, ಡಾ. ಡಿ.ವಿ. ಗುಂಡಪ್ಪನವರು, ಡಾ. ಶಿವರಾಮ ಕಾರಂತರು, ಡಾ. ಹಾ.ಮಾ. ನಾಯಕ, ಡಾ. ದೇಜಗೌ ಮುಂತಾದ ಖ್ಯಾತ ಸಾಹಿತಿಗಳು ಮಂಡ್ಯ ಕರ್ನಾಟಕ ಸಂಘದ ವೇದಿಕೆ ಮೂಲಕ ಕನ್ನಡ ಭಾಷೆಯ ಗೌರವವನ್ನು ಎತ್ತಿಹಿಡಿದು ಕರ್ನಾಟಕ ಏಕೀಕರಣಕ್ಕೆ ಹೋರಾಡಿದ್ದಾರೆ. ಖ್ಯಾತ ವಿದ್ವಾಂಸರಾದ ಡಾ. ಜಿ. ವೆಂಕಟಸುಬ್ಬಯ್ಯನವರು ಮಂಡ್ಯ ಕರ್ನಾಟಕ ಸಂಘದ ಕಾರ್ಯದರ್ಶಿಗಳಾಗಿ ಕೆಲಕಾಲ ಸೇವೆ ಸಲ್ಲಿಸಿದ್ದಾರೆ. ಪ್ರಸ್ತುತ ಅಧ್ಯಕ್ಷರಾಗಿ ಪ್ರೊ. ಬಿ. ಜಯಪ್ರಕಾಶಗೌಡ ಕಾರ್ಯದರ್ಶಿಯಾಗಿ ಶ್ರೀ ಮಲ್ಲರಾಧ್ಯಪ್ರಸನ್ನ ಕರ್ನಾಟಕ ಸಂಘವನ್ನು ಸಕ್ರಿಯವಾಗಿ ಮುನ್ನಡೆಸಿದ್ದಾರೆ. ಹಲವಾರು ದತ್ತಿ ನಿಧಿ ಸ್ಥಾಪಿಸಿದೆ. "ಅಭಿವ್ಯಕ್ತಿ" ಸಾಹಿತ್ಯ ಮಾಸಿಕ ಪ್ರಕಟಿಸುತ್ತಿದೆ.

**ಕರ್ನಾಟಕ ಸಂಘ ಅಂಕೋಲ** : ೧೯೫೦ರ ದಶಕದ ಆರಂಭದಲ್ಲಿ ಮುಂಬೈ ಪ್ರಾಂತ್ಯಕ್ಕೆ ಸೇರಿದ್ದ ಅಂಕೋಲೆಯಲ್ಲಿ ಕರ್ನಾಟಕ ಏಕೀಕರಣದ ಚಳುವಳಿಗೆ ಚಾಲನೆ ನೀಡಿದವರು ಹಿರಿಯ ಕವಿ ದಿನಕರ ದೇಸಾಯಿ ಅವರು. ಮುಂಬೈ ಸರಕಾರದಲ್ಲಿ ಉಪಸಚಿವರಾಗಿದ್ದ ಅಂಕೋಲೆಯ ಕವಿ ಸ.ಪ. ಗಾಂವಕಾರ ಅವರು ಸ್ಥಾಪಕ ಅಧ್ಯಕ್ಷರಾಗಿ ಸಂಘ ಸ್ಥಾಪಿತವಾಯಿತು. ಹರಿದು ಹಂಚಿ ಹೋಗಿದ್ದ ಕನ್ನಡ ಪ್ರದೇಶಗಳನ್ನು ಒಟ್ಟಾಗಿಸಿ ಒಂದು ಆಡಳಿತದಡಿ ತರಬೇಕೆಂಬ ಹಿರಿಯರ ಕನಸನ್ನು ಸಾಕಾರಗೊಳಿಸಲು, ಕನ್ನಡ ಸಾಹಿತ್ಯ, ಕಲೆ, ಸಂಸ್ಕೃತಿಗಳನ್ನು ಅಭಿವ್ಯಕ್ತಿಸಲು ಒಂದು ವೇದಿಕೆಯನ್ನು ಹುಟ್ಟು ಹಾಕಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಅವರು ಅಂಕೋಲೆಗೆ ಬಂದಾಗ ಕರ್ನಾಟಕ ಸಂಘ ಸ್ಥಾಪನೆಗೆ ಎಲ್ಲ ರೀತಿಯ ಸಹಕಾರ ನೀಡುವ ಭರವಸೆ ನೀಡಿದರು. ೧೯೫೨ರಲ್ಲಿ ಖ್ಯಾತ ಸಾಹಿತಿಗಳಾದ ಶ್ರೀ ತೀ.ನಂ. ಶ್ರೀಕಂಠಯ್ಯನವರಿಂದ ಸಂಘದ ಉದ್ಘಾಟನೆ ನಡೆಯಿತು. ಕನ್ನಡ ನಾಡಹಬ್ಬ, ವಸಂತ ಸಾಹಿತ್ಯೋತ್ಸವಗಳನ್ನು ನಡೆಸಿ, ಕನ್ನಡ ಸಾಹಿತ್ಯ ಕಲೆ, ಸಂಸ್ಕೃತಿಗಳ ಕುರಿತು ಪ್ರೀತಿ ಹೆಚ್ಚುವಂತೆ ಮಾಡಿದರು. ಶ್ರೀ ಯು. ರಾಜಗೋಪಾಲಚಾರ್ ಅವರು, ಗೌರವ ಕಾರ್ಯದರ್ಶಿಗಳಾಗಿ ಸಂಘವನ್ನು ಮುನ್ನಡೆಸಿದರು. ೧೯೫೨ರಿಂದಲೂ ಉತ್ತರ ಕನ್ನಡ ಜಿಲ್ಲೆಯ ಸಾಹಿತ್ಯಕ್ಕೆ, ಜೀವ ತುಂಬುವ ಕಾರ್ಯದಲ್ಲಿ ತೊಡಗಿದೆ.

ಕನ್ನಡ ನಾಡಿನ ಕವಿ, ಸಾಹಿತಿ ಕಲಾವಿದರನ್ನು ಅಂಕೋಲೆಗೆ ಆಹ್ವಾನಿಸಿ, ಉಪನ್ಯಾಸಗಳನ್ನು, ನಾಟಕ, ಕವಿಗೋಷ್ಠಿ ಏರ್ಪಡಿಸಿ ಕರ್ನಾಟಕ ಏಕೀಕರಣಕ್ಕೆ ಒತ್ತು ನೀಡಿದರು. ೧೯೫೬ರಲ್ಲಿ ಏಕೀಕರಣವಾದ ನಂತರವೂ ಕ್ರಿಯಾಶೀಲವಾಗಿ ಕನ್ನಡ ಕೈಂಕರ್ಯದಲ್ಲಿ ಅಂಕೋಲೆ ಕರ್ನಾಟಕ ಸಂಘ ತೊಡಗಿದೆ. ೧೯೭೮ರಲ್ಲಿ ಬೆಳ್ಳಿಹಬ್ಬ ಆಚರಿಸಿತು. ೨೦೦೩ರಲ್ಲಿ ಸಂಘದ ಚಿನ್ನದ ಹಬ್ಬ ನೆರವೇರಿತು. ಈ ಸಂದರ್ಭದಲ್ಲಿ "ಚಿನ್ನದ ತೇರು" ಸ್ಮರಣ ಸಂಚಿಕೆ ಪ್ರಕಟಿಸಿದೆ. ಗೋಕಾಕ್ ವರದಿ ಜಾರಿಗೆ ಬರಲಿ ಚಳುವಳಿಯನ್ನು ೧೯೮೨ರಲ್ಲಿ ನಡೆಸಿತು. ಪುಸ್ತಕ ಮೇಳಗಳನ್ನು ಸಂಘಟಿಸಿ ಜನಸಾಮಾನ್ಯರಲ್ಲಿ ಪುಸ್ತಕ ಪ್ರೀತಿಯನ್ನು ಹುಟ್ಟುಹಾಕಿದೆ. ಕನ್ನಡ ರಂಗಭೂಮಿಗೂ ಅನುಪಮ ಸೇವೆ ಸಂದಿದೆ. ಪ್ರಸ್ತುತ ಅಂಕೋಲೆ ಕರ್ನಾಟಕ ಸಂಘದ ಅಧ್ಯಕ್ಷರಾಗಿ ಶ್ರೀ ವಿಷ್ಣುನಾಯಕ ಗೌರವ ಕಾರ್ಯದರ್ಶಿಯಾಗಿ ಬಾಲಚಂದ್ರ ನಾಯಕ, ಮಾಜಿ ಅಧ್ಯಕ್ಷರಾಗಿ ಮಹೋತ್ಸವ ಸಮಿತಿ ಸದಸ್ಯರಾಗಿ ಶ್ರೀ ಮೋಹನ ಹಬ್ಬು ಕನ್ನಡ ತಾಯಿಯ ಸೇವೆಯಲ್ಲಿ ಅಂಕೋಲ ಕರ್ನಾಟಕ ಸಂಘವನ್ನು ಮುನ್ನಡೆಸಿದ್ದಾರೆ.

**ಮುಂಬೈ ಕರ್ನಾಟಕ ಸಂಘ** : ಬದುಕನ್ನು ಅರಸಿ ಮುಂಬಯಿಗೆ ಹೋದ ಬಹುಪಾಲು ಕನ್ನಡಿಗರು ಕನ್ನಡ ಭಾಷೆ, ಸಂಸ್ಕೃತಿಯನ್ನೂ ತಮ್ಮೊಂದಿಗೆ ಕೊಂಡೊಯ್ದಿದ್ದಾರೆ. ದೂರದ ದೆಹಲಿ, ಕಲ್ಕತ್ತಾ, ಪಕ್ಕದ ಚೆನ್ನೈ, ಮುಂಬಯಿಗಳಲ್ಲಿ ಕರ್ನಾಟಕ ಸಂಘಗಳನ್ನು ಸ್ಥಾಪಿಸಿ, ಕನ್ನಡ ಸಂಸ್ಕೃತಿಯ ರಾಯಭಾರಿಗಳಾಗಿದ್ದಾರೆ. ಮುಂಬಯಿ ಮಹಾನಗರ ಒಂದರಲ್ಲಿಯೇ ನೂರಕ್ಕೂ ಹೆಚ್ಚು ಕನ್ನಡ ಸಂಘಗಳಿವೆ, ಹಲವು ಕರ್ನಾಟಕ ಸಂಘಗಳೂ ಇವೆ. ಅವಕಾಶವಾದಲೆಲ್ಲ ಕನ್ನಡ ರಾತ್ರಿ ಶಾಲೆಗಳನ್ನು ಆರಂಭಿಸಿ ಕನ್ನಡ ಕಟ್ಟಿದ್ದಾರೆ. ಆರಂಭದಲ್ಲಿಯೇ ಮುಂಬಯಿಗರ ನಾಲಿಗೆ ರುಚಿಯನ್ನು ಗೆದ್ದ ಕನ್ನಡಿಗರು, ಹೋಟೇಲ್ ಆರಂಭಿಸಿದರು. ಕೆಲಸಕ್ಕೆ ತಮ್ಮ ನಂಬಿಗೆಯ ಯುವಕರನ್ನು ಕರ್ನಾಟಕದಿಂದಲೇ ಬರಮಾಡಿಕೊಂಡರು. ಇಂದು ಸುಮಾರು ೧೦ ಲಕ್ಷಕ್ಕಿಂತಲೂ ಹೆಚ್ಚು ಕನ್ನಡಿಗರು ಮುಂಬಯಿಯಲ್ಲಿದಾರೆಂದು ತಿಳಿದುಬರುತ್ತದೆ. ವಾಣಿಜ್ಯ ಉದ್ಯಮಗಳಲ್ಲಿಯೂ ಕನ್ನಡಿಗರು ೩ನೇ ಸ್ಥಾನದಲ್ಲಿದ್ದಾರೆ. ಹೋಟೇಲ್ ಉದ್ಯಮ, ಟ್ಯಾಕ್ಸಿ ಉದ್ಯಮ ಗಳಲ್ಲಿ ಕನ್ನಡಿಗರದೇ ಸಿಂಹಪಾಲು. ೬೦೦೦ಕ್ಕೂ ಹೆಚ್ಚು ಹೋಟೆಲ್‌ಗಳ ಒಡೆಯರು ಕನ್ನಡಿಗರು. ತಮ್ಮ ಜೀವಂತಿಕೆಗೆ ಸಾಕ್ಷಿಯಾಗಿ ಕನ್ನಡ ಸಂಘಗಳನ್ನು ಕಟ್ಟಿಕೊಂಡಿದ್ದಾರೆ.

ಇವುಗಳಲ್ಲಿ ಈ ವರ್ಷ ಅಮೃತಮಹೋತ್ಸವ ಆಚರಿಸಿದ ಕರ್ನಾಟಕ ಸಂಘವೆಂದರೆ ಮಾತುಂಗದಲ್ಲಿರುವ ಸರ್. ಎಂ.ವಿ.

ಸ್ಮಾರಕ ರಂಗಮಂದಿರ, ಸ್ವಂತ ಕಟ್ಟಡ, ಅಪೂರ್ವ ಗ್ರಂಥಾಲಯ, ೮೦೦ ಆಸನಗಳ ವಾತಾನುಕೂಲಿ ಸಭಾಭವನ ಹೊಂದಿದೆ. ಅಲ್ಲದೆ ಮೈಸೂರು ಅಸೋಸಿಯೇಷನ್, ಬಿಲ್ಲವರ ಸಂಘ, ಮೊಗವೀರ ಸಂಘ ಮುಂತಾದ ನೂರಾರು ಕನ್ನಡ ಸಂಘಗಳು ಶೈಕ್ಷಣಿಕವಾಗಿ ಸೇವೆ ಸಲ್ಲಿಸುತ್ತಾ ಕನ್ನಡ ಭಾಷೆಯನ್ನು ಹೊರನಾಡಿನಲ್ಲಿಯೂ ಜೀವಂತವಾಗಿರಿಸಿವೆ. ಮುಂದಿನ ಪೀಳಿಗೆಗೆ ಕನ್ನಡ ಭಾಷೆ, ಸಂಸ್ಕೃತಿಯನ್ನು ದಾಡಿಸುತ್ತಿವೆ. ೧೯೩೩ರಲ್ಲಿ ಗಿರ್‌ಗಾಂವ್‌ನ ಸಂಜಂಸ್ ಸಮರದ ಚಿಕ್ಕಕೋಣೆಯಲ್ಲಿ ಪ್ರಾರಂಭವಾದ ಕರ್ನಾಟಕ ಸಂಘವು ಈಗಿರುವ ಮಾತುಂಗಾ ಸರ್. ಎಂ.ವಿ. ಸ್ಮಾರಕ ಭವನಕ್ಕೆ ನಡೆದು ಬಂದ ದಾರಿ ರೋಚಕವಾದದ್ದು. ಮುಂಬಯಿಯಲ್ಲಿ ನಡೆದ ನಾಲ್ಕು ಸಾಹಿತ್ಯ ಸಮ್ಮೇಳನಗಳನ್ನೂ ಯಶಸ್ವಿಯಾಗಿ ನಡೆಸಿದ ಕೀರ್ತಿ ಸಂಘಕ್ಕೆ ಸಲ್ಲುತ್ತದೆ. ಸ್ವಾತಂತ್ರ್ಯ ಪೂರ್ವದಿಂದಲೂ ಕನ್ನಡ ಅಸ್ಮಿತೆಯನ್ನು ಗಟ್ಟಿಗೊಳಿಸುತ್ತಾ ಕಾಲಕಾಲಕ್ಕೆ ಮುಂಬಯಿ ಕನ್ನಡಿಗರ ಜೊತೆ ಸ್ಪಂದಿಸುತ್ತಾ ವೈವಿಧ್ಯಮಯ ಕನ್ನಡ ಕಾರ್ಯಕ್ರಮಗಳನ್ನು ನೀಡುತ್ತಾ ಬಂದಿದೆ. ಕರ್ನಾಟಕ ಏಕೀಕರಣ ಚಳುವಳಿಗೆ, ಮುಂಬೈ ರಾಜ್ಯದಲ್ಲಿ ಸೇರಿ ಹೋಗಿದ್ದ ಕನ್ನಡ ಪ್ರದೇಶಗಳನ್ನು ಕರ್ನಾಟಕದಲ್ಲಿ ವಿಲೀನಗೊಳಿಸುವ ಪ್ರಕ್ರಿಯೆಯಲ್ಲಿ ಗಮನಾರ್ಹ ಸೇವೆ ಸಲ್ಲಿಸಿದೆ. ಏಕೀಕರಣದ ನಂತರವೂ ಕನ್ನಡನಾಡು ನುಡಿಯನ್ನು ಹೊರ ನಾಡಿನಲ್ಲಿ ಅದರಲ್ಲಿಯೂ ಭಾರತದ ಆರ್ಥಿಕ ರಾಜಧಾನಿ ಮುಂಬಯಿಯಲ್ಲಿ ಜೀವಂತವಾಗಿರಿಸಿದ ಸಂಸ್ಥೆಗಳಲ್ಲಿ ಅಗ್ರಸ್ಥಾನದಲ್ಲಿದೆ ಮುಂಬಯಿ ಕರ್ನಾಟಕ ಸಂಘ. ಪ್ರಸ್ತುತ ಶ್ರೀ ಎಂ.ಎಂ. ಕೋರಿ ಅವರು ಅಧ್ಯಕ್ಷರಾಗಿ, ಶ್ರೀ ಓಂದಾಸ್ ಕಣ್ಣಂಗಾರ್ ಗೌರವ ಕಾರ್ಯದರ್ಶಿಯಾಗಿ ಮುಂಬಯಿ ಕನ್ನಡಿಗರ ಹೆಮ್ಮೆಯ ಪ್ರತೀಕವನ್ನಾಗಿಸಿ ಮುಂಬಯಿ ಕರ್ನಾಟಕ ಸಂಘವನ್ನು ಮುನ್ನಡೆಸಿದ್ದಾರೆ. ಭಾರತದ ಸ್ವಾತಂತ್ರ್ಯ ಚಳುವಳಿಗೆ ಕರ್ನಾಟಕ ಏಕೀಕರಣ ಚಳುವಳಿಗೆ ಮುಂಬೈ ಕನ್ನಡ ಸಂಘಗಳು ಮತ್ತು ಕರ್ನಾಟಕ ಸಂಘಗಳ ಕೊಡುಗೆ ಅಪಾರವಾದದ್ದು. ೨೦೦೬ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ದೊರಕಿದೆ. ಸ್ನೇಹ-ಸಂಬಂಧ ಮಾಸಿಕ ಪ್ರಕಟಿಸುತ್ತಿದೆ.

**ಹೊರನಾಡಿನಲ್ಲಿರುವ ಕರ್ನಾಟಕ ಸಂಘಗಳು :** ಮುಂ[illegible] ಚೆನ್ನೈ, ಮಧುರೈ, ಹೈದ್ರಾಬಾದ್, ಸೇಲಂ, ದೆಹಲಿ, ವಾರ[illegible] ಪಣಜಿ, ಭೋಪಾಲ್, ಬರೋಡಾ, ಲಖನೌ, ಪು[illegible] ಕಾಸರಗೋಡು, ಚೆಂಬೂರು, ಪನವೇಲ, ಗೋರೆಗಾಂವ[illegible] ನಾರ್‌ಫರ್, ಕಲ್ಯಾಣ್, ಭಾಂಡುಪ್ ಮುಂತಾದ ಕ[illegible] ಕರ್ನಾಟಕ ಸಂಘಗಳು ಕರ್ನಾಟಕ ಏಕೀಕರಣ ಚಳುವ[illegible] ಪೂರ್ವದಲ್ಲಿ ಸ್ಥಾಪಿತವಾಗಿ ಇಂದಿಗೂ ಕಾರ್ಯಶೀಲವಾಗಿ[illegible]

**ಕನ್ನಡ ನಾಡಿನಲ್ಲಿ ಸ್ಥಾಪಿತವಾದ ಕರ್ನಾಟಕ ಸಂಘಗಳು** ಮೈಸೂರು, ತಿಪಟೂರು, ರಾಯಚೂರು, ಮಂಡ್ಯ, ಪುತ್ತೂರು, ರಾಣೆಬೆನ್ನೂರು, ಅರಸೀಕೆರೆ, ಜೀರೂರು, ಅಂಕೋಲೆ ದಾಂಡೇಲಿ ಶಿವಮೊಗ್ಗ ಮುಂತಾದ ಸ್ಥಳಗಳಲ್ಲಿ ಕರ್ನಾಟಕ ಸಂಘಗಳ ಸ್ಥಾಪಿತವಾಗಿವೆ. ಕನ್ನಡ ನಾಡಿನಾದ್ಯಂತ ಮತ್ತು ಹೊರನಾಡುಗ[illegible] ನೂರಾರು ಜಿಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಕರ್ನಾಟಕ ಸಂಘಗಳ ಏಕೀಕರಣ ಪೂರ್ವದಲ್ಲೇ ಸ್ಥಾಪಿಸಲ್ಪಟ್ಟು ಕರ್ನಾಟಕ ಏಕೀಕರಣ ಚಳುವಳಿಗೆ ಪೂರಕವಾಗಿ ಸ್ಪಂದಿಸಿವೆ. ಎಲ್ಲ ಕರ್ನಾಟ[illegible] ಸಂಘಗಳನ್ನು ಪರಿಚಯಿಸಬೇಕೆಂಬ ಮಹದಾಸೆಯಿಂದ ವಿಳಾ[illegible] ತಿಳಿದ ಕೆಲವು ಸಂಘಗಳಿಗೆ ಪತ್ರ ಬರೆದು ವಿನಂತಿಸಿದೆ ಮಾಹಿತಿಗಳು ಲಭ್ಯವಾದ ಕೆಲವು ಕರ್ನಾಟಕದ ಸಂಘಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಿದ್ದೇನೆ. ಏಕೀಕರಣ ಪೂರ್ವದಲ್ಲಿ ಸ್ಥಾಪಿತವಾಗಿ, ಇಂದಿಗೂ ಕ್ರಿಯಾ ಶೀಲವಾಗಿರುವ ಕರ್ನಾಟ[illegible] ಸಂಘಗಳ ಕುರಿತು ತಮಗೆ ತಿಳಿದ ಪರಿಚಯಾತ್ಮಕ ವರದಿಯನ್ನು ಓದುಗರು ನೀಡಿದರೆ ಮುಂದಿನ ಲೇಖನದಲ್ಲಿ ಸೇರಿಸುವ ಪ್ರಯತ್ನ ಮಾಡುತ್ತೇನೆ ಪ್ರಸ್ತುತ ನನ್ನ ಮನವಿಗೆ ಸ್ಪಂದಿಸಿ ತಕ್ಷಣ ಉತ್ತರಿಸಿದ ರಾಯಚೂರಿನ ಗೌರವ ಕಾರ್ಯದರ್ಶಿ ಶ್ರೀಗಟ್ಟು ಶ್ರೀನಿವಾಸ್, ಮಂಡ್ಯದ ಪ್ರೊ. ಜಯಪ್ರಕಾಶ್ ಗೌಡ ಮತ್ತು ಅಂಕೋಲಾ ಕರ್ನಾಟಕ ಸಂಘದ ಶ್ರೀ ಮೋಹನ ಹಬ್ಬು, ಧಾರವಾಡ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷರಾದ ಶ್ರೀ ಎಂ.ಎಂ. ಹೂಲಿ ಅವರಗೆ ಕೃತಜ್ಞತೆಗಳು.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ನಿಜಲಿಂಗಪ್ಪ ಎಸ್., **ಕರ್ನಾಟಕದ ಪರಂಪರೆ**, ಸಂಪುಟ ೨, ೧೯೯೨, ಪ್ರ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
೨. ಜಯದೇವಪ್ಪ ಜೈನಕೇರಿ., ೨೦೦೫, (ಸಂ) **ಅಮೃತ ವರ್ಷ**, ೭೫, ಪ್ರ. ಕರ್ನಾಟಕ ಸಂಘ (ರಿ)., ಶಿವಮೊಗ್ಗ, ವರದಿ ೧೯೩೦ ರಿಂದ ೩೬ ಪುಟ ೨೯೮-೩೭೯.
೩. ಪ್ರೊ. ಬಿ.ವಿ. ಗುಂಜೆಟ್ಟಿ., (ಸಂ) **ಸ್ನೇಹ ಸೌರಭ** ೨೦೦೪, ಪ್ರ. ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ.
೪. ವಿ.ಜೆ. ನಾಯಕ., (ಸಂ) **ಚಿನ್ನದ ಗೆರೆ**, ೨೦೦೪, ಪ್ರ. ಕರ್ನಾಟಕ ಸಂಘ, ಅಂಕೋಲಾ.
೫. ಗಟ್ಟು ಶ್ರೀನಿವಾಸ್, ಗೌರವ ಕಾರ್ಯದರ್ಶಿ, ರಾಯಚೂರು ಕರ್ನಾಟಕ ಸಂಘ.
೬ ಪ್ರೊ. ಜಯಪ್ರಕಾಶಗೌಡ., (ಸಂ.) **ಅಭಿವ್ಯಕ್ತಿ**, ಸಂ. ೧, ೨೦೦೮, ಕರ್ನಾಟಕ ಸಂಘ, ಮಂಡ್ಯ.
೭. ಟಿ.ಹೆಚ್.ಎಂ. ಬಸವರಾಜ ಅವರ ಲೇಖನ, (ಸಂ.) ಡಾ. ವಿದ್ಯಾಶಂಕರ **ಸ್ವಪ್ನಲೋಕ**, ಮಾಸಿಕ, ಫೆಬ್ರವರಿ ೨೦೦೯.
೮. ಸೀತಾರಾಮಯ್ಯ ಎಂ.ವಿ., (ಸಂ.) **ಕೌಸ್ತುಭ**, ೧೯೯೭, ಪ್ರ. ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.
೯. ಶ್ರೀನಿವಾಸ ಜೋಕಟ್ಟೆ, (ಸಂ.) **ಸ್ನೇಹ ಸಂಬಂಧ**, ಡಿಸೆಂಬರ್ ೨೦೦೮, ಕರ್ನಾಟಕ ಸಂಘ ಮುಂಬೈ.

ಡಾ. ಶ್ರೀನಿವಾಸ ಹಾವನೂರ *

# ಕರ್ನಾಟಕದ ಸರ್ವಾಂಗೀಣ ಇತಿಹಾಸಕ್ಕೆ ಕಂಪ್ಯೂಟರ್ ಅಳವಡಿಕೆ (ಒಂದು ಯೋಜನೆ)

ಕಂಪ್ಯೂಟರಿನಲ್ಲಿ ಮಾಹಿತಿಯನ್ನು ಹಿಡಿದಿಡುವುದು ಮತ್ತು ವೆಬ್‌ಸೈಟ್ ನಿರ್ಮಿಸುವುದು–ಇವು ಸಾಮಾನ್ಯವಾಗಿ ತಿಳಿದ ವಿಚಾರ. ೧೦ ವರ್ಷದ ಶಾಲಾ ವಿದ್ಯಾರ್ಥಿಯೂ ಈಗ ಕಂಪ್ಯೂಟರಿನಲ್ಲಿ ತನ್ನ ಅಭ್ಯಾಸದ ಮಾಹಿತಿಯನ್ನು ಹಿಡಿದು ಇಡ್ತಾನೆ. ಇನ್ನು ವೆಬ್‌ಸೈಟ್‌ಗಳು – ಕನ್ನಡಕ್ಕೆ ಸಂಬಂಧಿಸಿದಂತೆ ನೂರಾರು ನಿರ್ಮಿತವಾಗಿವೆ.

ಹೀಗಿರುವಾಗ ಇತಿಹಾಸದ ಅಭ್ಯಾಸಿಗಳಾದ ನಾವು ಕರ್ನಾಟಕ ಇತಿಹಾಸದ ಸಮಸ್ತ ಮಾಹಿತಿಯನ್ನು (Data) ಕಂಪ್ಯೂಟರಿನಲ್ಲಿ ವ್ಯವಸ್ಥಿತವಾಗಿ ಹಿಡಿದು ಇಡೋದು ಎಲ್ಲ ಕನ್ನಡಿಗರಿಗೂ, ಕರ್ನಾಟಕದ ಹೊರಗಿನವರಿಗೂ ಪ್ರಯೋಜನಕಾರಿ. ಅದರಲ್ಲಿಯೂ ಇತಿಹಾಸದ ಮಾಹಿತಿ, ಅಪಾರವಾಗಿರುವುದರಿಂದ ಕಂಪ್ಯೂಟರ್ ಶೇಖರಣೆ ಅತ್ಯವಶ್ಯ. ಇಂಥ ಒಂದು ಯೋಜನೆಯನ್ನು ರೂಪಿಸಲಾಗಿದೆ. ಅದನ್ನು ದೃಶ್ಯೋದಾಹರಣೆಯಾಗಿ ಪಾರದರ್ಶಕಗಳ ಮೂಲಕ ನಿರೂಪಿಸುತ್ತಿದ್ದೇನೆ.

'ಸರ್ವಾಂಗೀಣ' ಶಬ್ದವನ್ನು ಎರಡು ಅರ್ಥದಲ್ಲಿ ಬಳಸಲಾಗಿದೆ. ಒಂದು – ಇದು ಇಡೀ ಕರ್ನಾಟಕಕ್ಕೆ ಸಂಬಂಧಿಸಿದ್ದು. ಎರಡನೆಯದು, ಕರ್ನಾಟಕದ ಇತಿಹಾಸದ ಅಭ್ಯಾಸಕ್ಕೆ ಬೇಕಾದ ಎಲ್ಲ ಆಯಾಮಗಳನ್ನು ಇದು ಒಳಗೊಂಡಿರುತ್ತದೆ.

### ಜೊತೆಗಿನ ಪಾರದರ್ಶಕಗಳ ವಿವರ

**ಪಾರದರ್ಶಕ ೧.**

ಇದರಲ್ಲಿ ಕರ್ನಾಟಕ ಇತಿಹಾಸದ ಆಕರಗಳಾವುವು ಎಂಬುದನ್ನು ಹೇಳಿದೆ. ಈ ಆಕರಗಳು ಮೂರು ಬಗೆಯವು.

ಅ) ಬರಹದ ರೂಪದವು

ಆ) ವಸ್ತು ರೂಪದವು, ಮತ್ತು

ಇ) ನಾಮ ವಿಜ್ಞಾನದವು

**ಪಾರದರ್ಶಕ ೨ – ೩**

ಇದರಲ್ಲಿ ಈ ಮೂರು ಆಕರಗಳಲ್ಲಿಯ ಮಾಹಿತಿಯನ್ನು ಗಣಕ ಯಂತ್ರದಲ್ಲಿ ಯಾವ ಯಾವ ಕಲಮುಗಳ ಕೆಳಗೆ ಹಿಡಿದಿಡಬೇಕೆಂಬುದನ್ನು ಕೊಟ್ಟಿದೆ. ಹೀಗೆ ಮಾಹಿತಿ ತುಂಬುವಾಗ ಏಕರೂಪತೆಯನ್ನು ನಿರ್ದಿಷ್ಟವಾಗಿ ಇಟ್ಟುಕೊಳ್ಳ ಬೇಕಾಗುವುದು. ಆದರೆ ನಾಮವಿಜ್ಞಾನಕ್ಕೆ ಸಂಬಂಧಿಸಿದ ಕಲಮುಗಳು ವಿಶಿಷ್ಟವಾಗಿರುವುದನ್ನು ಗಮನಿಸಬೇಕು.

**ಪಾರದರ್ಶಕ ೪–೧೬.**

ಇನ್ನು ಮುಂದೆ, ಮೇಲೆ ಹೇಳಿದ ಆಕರಗಳ ಒಂದೋ ಎರಡೋ ಮಾದರಿ ನಮೂದುಗಳನ್ನು ಕೊಡಮಾಡಿದೆ. ಒಟ್ಟಿಗೆ ೧೨ ನಮೂದುಗಳಿವೆ. ಈ ನಮೂದುಗಳಲ್ಲಿ ಬೀಜ ಶಬ್ದಗಳು (key words) ಮಹತ್ವದವು.

ಈ ಬೀಜಶಬ್ದಗಳನ್ನು ಕೊಡುವಾಗ ಎರಡು ನಮೂನೆಯ ಆವರಣಗಳಿವೆ. ಕಂಸಾವರಣ ( ) ಮತ್ತು ಕೋನಾವರಣ < >.

ಉದಾಹರಣೆಗೆ, ಪದ್ಮಮ್ಮ (ಏಕಾಂಕದ ರಾಮಯ್ಯನ ತಾಯಿ). ಇಲ್ಲಿ ಪದ್ಮಮ್ಮ ಯಾರು ಎನ್ನುವುದರ ವಿವರಣೆಯಾಗಿ ಮಾತ್ರ ಈ ಕಂಸಾವರಣದಲ್ಲಿ ಬಂದಿದೆ. ಕೋನಾಕಾರದ ಆವರಣದಲ್ಲಿಯ ಶಬ್ದಗಳನ್ನು ಕಂಪ್ಯೂಟರ್ ಪ್ರತ್ಯೇಕವಾಗಿ ಎತ್ತಿ ತೋರಿಸುತ್ತದೆ.

ಉದಾ : ಬಸವೇಶ್ವರ <ಶಿ. ಶ.>

ಗಣಕ ಯಂತ್ರವು ಬಸವೇಶ್ವರ ಎನ್ನುವ ಪದ ಎಲ್ಲೆಲ್ಲಿ ಬರುತ್ತದೆಯೋ ಅವೆಲ್ಲವನ್ನೂ ಒಂದೇ ಕಡೆಗೆ ಪಟ್ಟಿ ಮಾಡುತ್ತದೆ.

ಅಲ್ಲದೆ <ಶಿ. ಶ.> ಅಂದರೆ ಶಿವಶರಣರು ಅದರ ಕೆಳಗೆ ಅದೆಷ್ಟು ಜನ ಶಿವಶರಣರು ಇದ್ದಾರೆಯೋ ಅವರೆಲ್ಲರ ಪಟ್ಟಿಯನ್ನು ಪ್ರತ್ಯೇಕವಾಗಿ ಒದಗಿಸುತ್ತದೆ.

೧೭. ಕೊನೆಯದಾದ ೧೭ನೆಯ ಪಾರದರ್ಶಕದಲ್ಲಿ ಎಲ್ಲ ಬೀಜಶಬ್ದಗಳ ಅಕಾರಾದಿ ಪಟ್ಟಿ ಬಂದಿದೆ. ಅವು ಯಾವ ನಮೂದಿನಲ್ಲಿ ಬಂದಿವೆ ಎಂಬುದೂ ಥಟ್ಟನೆ ಸಿಗುತ್ತದೆ. ಉದಾ.ಗೆ 'ಗೋವಾ–ಇಕ್ಕೇರಿ ಸಂಬಂಧ, TR-1' ಎಂದರೆ ಪ್ರವಾಸ ವರ್ಣನೆ ವಿಭಾಗದ ೧ನೆಯ ನಮೂದಿನಲ್ಲಿ ಇದೆ ಎಂದು ಅರ್ಥ.

* ಇ–ಮೇಲ್ : skhavanur@gmail.com ದೂರವಾಣಿ : ೦೮೦–೨೬೬೨೦೭೮೯.

ನಾವು ಮಾದರಿಗೆಂದು ಇಟ್ಟುಕೊಂಡಿದ್ದ ೧೨ ನಮೂದುಗಳಲ್ಲಿ ಗೊಮ್ಮಟೇಶ್ವರ (ಬಾಹುಬಲಿ) ಆರು ನಮೂದುಗಳಲ್ಲಿ ಕಾಣಿಸಿಕೊಂಡಿದ್ದಾನೆ. ಗೊಮ್ಮಟೇಶ್ವರನ ಬಗ್ಗೆ ಇನ್ನಷ್ಟು ನಮೂದುಗಳು ದಾಖಲಾದರೆ ಹೆಚ್ಚೆಚ್ಚು ಮಾಹಿತಿ ದೊರೆತಂತಾಗುವುದು. ಆಗ ಈ ವಿಷಯದ ಮೇಲಿನ ಅಭ್ಯಾಸ ಅತ್ಯಂತ ಸುಖಕರವಾಗುವುದು.

**ಆಕರ ಪ್ರಕಾರಗಳು**

**(ಅ) ಬರಹದ ರೂಪದವು**

* ಶಾಸನಗಳು (Inscriptions) (IN)
* ಸಾಹಿತ್ಯ ಕೃತಿಗಳು (Literary Works) (LW)
* ಜಾನಪದ ವಾಙ್ಮಯ (Folklore) (FL)
* ಕೈಫಿಯತ್_ಬಖೈರುಗಳು (Kaifiyats) (KF)
* ಪ್ರವಾಸಿ ಕಥನ (ವಿದೇಶೀ) (Travelogues) (TR)
* ಸರಕಾರೀ, ಖಾಸಗಿ ಕಾಗದಪತ್ರಗಳು,
*ದಾಖಲೆಗಳು (Public and Private Documents) (PR)

**(ಆ) ವಸ್ತುರೂಪದವು**

* ವಾಸ್ತು ಮತ್ತು ಅವಶೇಷಗಳು
* (Architecture & Artifacts) (AA)

(ಮಂದಿರ, ಮೂರ್ತಿ, ನಾಣ್ಯ, ಪ್ರಾಣಿಗಳ ಕುರುಹುಗಳು, ಇತರ ಅವಶೇಷಗಳು)

**(ಇ) ನಾಮವಿಜ್ಞಾನ (TOPONOMY)**

(ಊರುಗಳು, ಮನೆತನದ ಹೆಸರುಗಳು ಮತ್ತು ವೃತ್ತಿಗಳ ಹೆಸರುಗಳು)

(ಅ) ಲಿಪಿ–ಮೂಲದ ಆಕರಗಳ ಮಾಹಿತಿಯ ಫಾರ್ಮು (Data)

= ಶೀರ್ಷಿಕೆ :
= ಕರ್ತೃ / ಲೇಖಕ :
= ಸ್ಥಳ :
= ಕಾಲ :
= ಭಾಷೆ/ಲಿಪಿ :
= ಲಭ್ಯತೆ :
= ವಿಷಯಸಾರ :
= ಬೀಜಶಬ್ದಗಳು (Key words)
= ಹೆಚ್ಚಿನ ಮಾಹಿತಿ :
= ಆಧಾರ ವಾಙ್ಮಯ (Bibliographic Source) :

**(ಆ) ವಸ್ತು ಮೂಲದ ಆಕರಗಳ ಮಾಹಿತಿಯ ಫಾರ್ಮು (Data)**

= ಸ್ವರೂಪ :
= ಕಾಲ :
= ಮೂಲ ಸ್ಥಳ :
= ಸದ್ಯದ ಲಭ್ಯತೆ :
= ಕಾರಣಕರ್ತರು :
= ಶೋಧಕ/ಪ್ರಸಾರಕರು :
= ವಿಷಯ ಸಾರ :
= ಬೀಜಶಬ್ದಗಳು (Key words)
= ಹೆಚ್ಚಿನ ಮಾಹಿತಿ :
= ಆಧಾರ ವಾಙ್ಮಯ (Bibliographic Source) :

**(ಇ) ನಾಮವಿಜ್ಞಾನಕ್ಕೆ ಸಂಬಂಧಿಸಿದ ಮಾಹಿತಿಯ ಫಾರ್ಮು (Data) :**

= ಸ್ಥಳ / ಅಂಕಿತನಾಮ (Place / Name) :
= ಪೂರ್ವದ ಹೆಸರುಗಳು (Variations) :
= ಪೂರ್ವ ಪದ (First word) :
= ಮಧ್ಯ ಪದ (Middle word) :
= ಉತ್ತರ ಪದ (Last word) :
= ಪೂರ್ವ ಪದದ ಅರ್ಥ (Meaning of first word) :
= ಮಧ್ಯ ಪದದ ಅರ್ಥ (Meaning of Middle word)
= ವಿಶೇಷ ಮಾಹಿತಿ (Addl. Information) :
= ಜಿಲ್ಲೆ / ಪಿನ್‌ಕೋಡ್ (District / Pincode) :
= ಆಧಾರ ವಾಙ್ಮಯ (Bibliographic Source) :

**ಶಾಸನಗಳು**

**(IN - 00001)**

**ಶೀರ್ಷಿಕೆ : ಶ್ರವಣಬೆಳಗೊಳದ ಶಾಸನ**

ಸ್ಥಳ : ಶ್ರವಣಬೆಳಗೊಳ
ಕಾಲ : ಕ್ರಿ.ಶ. ೧೧೫೯
ಸ್ವರೂಪ : ಶಿಲಾಶಾಸನ

ರ್ತೃ : ಹುಳ್ಳಮಯ್ಯ (ದಂಡನಾಯಕ)

ಾಷೆ : ಕನ್ನಡ

ಭ್ಯತೆ : ಶ್ರವಣಬೆಳಗೊಳ

ಷಯಸಾರ : ಗೊಮ್ಮಟೇಶ್ವರನಿಗೆ ಹುಳ್ಳಮಯ್ಯ ಂಡನಾಯಕನ ದತ್ತಿ

ೀಜ ಶಬ್ದಗಳು : ಹುಳ್ಳಮಯ್ಯ <ದಂಡನಾಯಕ> ೊಮ್ಮಟೇಶ್ವರ (ಜೈ. ದೈ)

ೆಚ್ಚಿನ ಮಾಹಿತಿ : ಕೂಟ ಶಾಸನ ?

ಧಾರ ವಾಙ್ಮಯ : ಶ್ರವಣಬೆಳ್ಗೊಳದ ಶಾಸನಗಳು. ಸಂ. ಿ.ಎಲ್. ರೈಸ್

(ಶಾ.ಸಂ. ೭೬) ಬೆಂಗಳೂರು, ೧೮೮೭

**ಸಾಹಿತ್ಯ ಕೃತಿ**
**(LW-00001)**

ೀರ್ಷಿಕೆ : **ಅಬ್ಬಲೂರು ಚರಿತೆ**

ೇಖಕ : ಶಾಂತನಿರಂಜನ

ಥಳ : – – –

ಾಲ : ೧೭ನೆಯ ಶತಮಾನ

ಾಷೆ / ಲಿಪಿ : ಕನ್ನಡ

ಭ್ಯತೆ : ಶ್ರವಣಬೆಳಗೊಳ

ಿಷಯಸಾರ : ಏಕಾಂತದ ರಾಮಯ್ಯ (ಶಿ.ಶ.)ನ ಚರಿತ್ರ ಾವ್ಯ

ೀಜಶಬ್ದಗಳು : ಏಕಾಂತದ ರಾಮಯ್ಯ <ಶಿ.ಶ.>
ಬ್ಬಲೂರು <ಸ್ಥಳ> ಮುನಿಗುಂದ <ಸ್ಥಳ>
ುಲಿಗೆರೆ <ಸ್ಥಳ> ಪಾಯಣ್ಣ <ಜೈನ> ಪದ್ಮಣ್ಣ <ಜೈನ>
ೂವಣ್ಣ <ಜೈನ> ಅಮೃತೇಶ್ವರ (ಅಣ್ಣಿಗೇರಿಯಲ್ಲಿ)
<ಶಿ.ದೇ> ಸಂಗಮನಾಥ (ಕಪ್ಪಡಿಯಲ್ಲಿ) <ವೀ.ದೈ>
ಚಿಕ್ಕೇಶ (ವೀ.ಶೈ) ಬಸವೇಶ್ವರ <ಶಿ.ಶ> ಜೈನ – ವೀರಶೈವ ಿಕ್ಕಾಟ,
ಅಜಗಣ್ಣ (ವೀ) ಅಂತರವಳ್ಳಿ <ಸ್ಥಳ>
ಬಿಜ್ಜಳ <ಕಳಚುರಿ ರಾಜ>
ಪದ್ಮಮ್ಮ (ಏಕಾಂತದ ರಾಮಯ್ಯನ ತಾಯಿ)

ಹೆಚ್ಚಿನ ಮಾಹಿತಿ : – – –

ಆಧಾರ ವಾಙ್ಮಯ : ಅಬ್ಬಲೂರು ಚರಿತೆ ಸಂ. ಎನ್ ಬಸವಾರಾಧ್ಯ, ಮೈಸೂರು

**ಸಾಹಿತ್ಯ ಕೃತಿ**
**(LW - 00002)**

ಶೀರ್ಷಿಕೆ : **ಗೊಮ್ಮಟ ಜಿನೇಂದ್ರ ಗುಣಸ್ತವ**

ಕವಿ : ಬೊಪ್ಪಣ

ಸ್ಥಳ : – – –

ಕಾಲ : ಕ್ರಿ.ಶ. ೧೧೮೦

ಭಾಷೆ / ಲಿಪಿ : ಕನ್ನಡ

ವಿಷಯಸಾರ : ಗೊಮ್ಮಟೇಶ್ವರನ ಸ್ತುತಿಪರ ಚಿಕ್ಕ ಕಾವ್ಯ.

ಬೀಜ ಶಬ್ದಗಳು : ಗೊಮ್ಮಟೇಶ್ವರ <ಜೈ.ದೈ>, ಶ್ರವಣಬೆಳಗೊಳ <ಸ್ಥಳ> ನಯಕೀರ್ತಿ (ಜೈನ)

ಹೆಚ್ಚಿನ ಮಾಹಿತಿ : ಇದು ಶಾಸನವೂ ಹೌದು, ಸಾಹಿತ್ಯ ಕೃತಿಯೂ ಹೌದು.

ಆಧಾರ ವಾಙ್ಮಯ : ಶ್ರವಣಬೆಳಗೊಳದ ಶಾಸನಗಳು. ಸಂ. ಬಿ.ಎಲ್. ರೈಸ್

(ಶಾ.ಸಂ. ೮೫). ಬೆಂಗಳೂರು, ೧೮೮೭

**ಜಾನಪದ**
**(FL - 00001)**

ಕೃತಿ : **ಕಿತ್ತೂರ ಚೆನ್ನವ್ವನ ಸೊಸಿಪದ**

ಕವಿ : ಹೆಬ್ಬಳ್ಳಿ ಬಸವ

ಭಾಷೆ / ಲಿಪಿ : ಕನ್ನಡ

ಕಾಲ : ೧೯ನೆಯ ಶತಮಾನ

ಲಭ್ಯತೆ : ಬ್ರಿಟಿಶ್ ಲೈಬ್ರರಿ, ಲಂಡನ್

ವಿಷಯಸಾರ : ಕಿತ್ತೂರ ಚೆನ್ನವ್ವನ ಕಿರಿಯ ಸೊಸೆ ಈರವ್ವನನ್ನು ಬ್ರಿಟಿಶ್ ಅಧಿಕಾರಿಗಳು ಬೈಲಹೊಂಗಲ ಬಿಡಿಸಿ ಧಾರವಾಡಕ್ಕೆ ಕರೆತಂದದ್ದು.

ಬೀಜಶಬ್ದಗಳು : ಮಲ್ಲಸರ್ಜ (ಕಿತ್ತೂರ ದೇಸಗತಿಯ ದೊರೆ) ಈರಮ್ಮ (ಕಿತ್ತೂರ ಚೆನ್ನಮ್ಮನ ಸೊಸೆ)

ಚೆನ್ನಮ್ಮ (ಕಿತ್ತೂರ ದೇಸಾಯಿಣಿ), ಥ್ಯಾಕರೆ (ಕಲೆಕ್ಟರ್, ಧಾರವಾಡ) <ಬ್ರಿ. ಅಧಿಕಾರಿ>

ಕಲ್ಲೂರ ಬಸಪ್ಪ (ಕಿತ್ತೂರಿನ ಅಧಿಕಾರಿ) ಕನ್ನೂರ ಮಲ್ಲಪ್ಪ (ಕಿತ್ತೂರಿನ ಅಧಿಕಾರಿ)

ಅವರಾದಿ ಈರಪ್ಪ (ಕಿತ್ತೂರಿನ ಅಧಿಕಾರಿ)

ಆಧಾರ ವಾಙ್ಮಯ : Collection of Fleet's entire folksongs.

(Available in the British Library, London)

## ಕೈಫಿಯತ್ತು
## (KF - 00001)

ಶೀರ್ಷಿಕೆ : **ಕಾರ್ಕಳ ಅರಸರ ಕೈಫಿಯತ್ತು**

ಕಾಲ : ೧೮ನೆಯ ಶತಮಾನ

ಭಾಷೆ / ಲಿಪಿ : ಕನ್ನಡ

ವಿಷಯಸಾರ : ಕಾರ್ಕಳದ ಅರಸರ ಇತಿಹಾಸ

ಬೀಜಶಬ್ದಗಳು : ಕಾರ್ಕಳ <ಸ್ಥಳ> ಭೈರರಸ (ಕಾರ್ಕಳ ದೊರೆ)

ಭೈರರಸ II (ಕಾರ್ಕಳ ದೊರೆ)

ಗೊಮ್ಮಟೇಶ್ವರ (ಕಾರ್ಕಳ) <ಜೈದ್ಯೆ> ಚೌಟ <ರಾಜಮನೆತನ>

ಚಿಕ್ಕಣಾಚಾರಿ <ಕಲಾ>

ಹೆಚ್ಚಿನ ಮಾಹಿತಿ : ------

ಆಧಾರವಾಙ್ಮಯ : ದಕ್ಷಿಣ ಕನ್ನಡ ಜಿಲ್ಲೆಯ ಕೈಫಿಯತ್ತುಗಳು. ಸಂ. ಕೆ. ಕುಶಾಲಪ್ಪಗೌಡ ಮತ್ತು

ಕೆ. ಚಿನ್ನಪ್ಪಗೌಡ, ಉಜಿರೆ, ೧೯೮೩.

## ಪ್ರವಾಸ ಕಥನ
## (TR - 00001)

ಶೀರ್ಷಿಕೆ : **ದಲಾವಿಲೆ ನ ಪ್ರವಾಸ**

ಕಾಲ : ಕ್ರಿ.ಶ. ೧೬೨೩

ಕರ್ತೃ : ಪಿಎತ್ರೋ ದ-ಲಾವಿಲೆ (ಉಚ್ಚಾರ?)

ಲಭ್ಯತೆ : ರೋಮ್

ಭಾಷೆ / ಲಿಪಿ : ಇಟಾಲಿಯನ್ / ಕನ್ನಡ ಅನುವಾದ

ವಿಷಯಸಾರ : ಕೆನರಾ ಜಿಲ್ಲೆಯಲ್ಲಿ ದಲಾವಿಲೆ ನ ಸಂಚಾರ

ಬೀಜಶಬ್ದಗಳು : ಹೊನ್ನಾವರ (ಸ್ಥಳ) ಇಕ್ಕೇರಿ (ಸ್ಥಳ) ಬಸರೂರು (ಸ್ಥಳ) ಮಂಗಳೂರು (ಸ್ಥಳ) ಉಲ್ಲಾಳ (ಸ್ಥಳ) ಮನೇಲಿ (ಸ್ಥಳ) ಬಿಸನಾಗ (=ವಿಜಯನಗರ) (ಸ್ಥಳ) ವೆಂಕಟಪ್ಪನಾಯಕ (ಇಕ್ಕೇರಿಯ ಅರಸು)
ವಿಠ್ಠಲ ಶೆಣೈ (ಅಧಿಕಾರಿ) ಗೋವಾ-ಇಕ್ಕೇರಿ ಸಂಬಂಧ

ಆಧಾರವಾಙ್ಮಯ : ಪ್ರವಾಸಿ ಕಂಡ ಇಂಡಿಯ, ಸಂ. ೪, ಸಂ. ಎಚ್. ಎಲ್. ನಾಗೇಗೌಡ, ಮೈಸೂರು, ೧೯೭೨.

## ದಾಖಲೆಗಳು
## (PR - 00001)

ಶೀರ್ಷಿಕೆ : ಕಿತ್ತೂರಿನ ಬಗ್ಗೆ ಧಾರವಾಡ ಕಲೆಕ್ಟರ್ ಥ್ಯಾಕರೆ ಪತ್ರ

ಕರ್ತೃ : ಶಿವಲಿಂಗರುದ್ರ ಸರ್ಜ (ಕಿತ್ತೂರ ದೇಸಾಯಿ)

ಸ್ಥಳ : ಕಿತ್ತೂರು

ಕಾಲ : ಕ್ರಿ.ಶ. ೧೮೨೪, ಸೆಪ್ಟೆಂಬರ್ ೧೨

ಭಾಷೆ : ಕನ್ನಡ (ಇಂಗ್ಲಿಷಿಗೆ ಅನುವಾದಿತ)

ಲಭ್ಯತೆ : ಬ್ರಿಟಿಶ್ ಲೈಬ್ರರಿ, ಲಂಡನ್

ವಿಷಯಸಾರ : 'ಮಲ್ಲಸರ್ಜ I ಈತನು ಕಿತ್ತೂರಿನ ದೊರೆ. ಎಂದು ಸಮ್ಮತಿಸಲು ಕಲೆಕ್ಟರ್ ಥ್ಯಾಕರೆಗೆ ಬರೆದ ಪತ್ರ.

ಬೀಜಶಬ್ದಗಳು : ಕಿತ್ತೂರ ದೇಸಗತಿ; ಶಿವಲಿಂಗರುದ್ರ ಸರ್ಜ (ಕಿತ್ತೂರ ದೇಸಾಯಿ);

ಮಲ್ಲಸರ್ಜ I (ಕಿತ್ತೂರ ದೇಸಾಯಿ);

ಮಲ್ಲಸರ್ಜ II (ಕಿತ್ತೂರ ದೇಸಾಯಿ);

ವೆಲ್ಲಸ್ಲಿ (ಸೇನಾನಿ) <ಬ್ರಿ. ಅಧಿ>

ಆಧಾರವಾಙ್ಮಯ : History or Freedom Movemen in Karnataka Vol. 1. Ed. bY M.V. Krishnara

& G.S. Halappa, Bangalore, 1962.

## ದಾಖಲೆಗಳು
## (PR - 00002)

ಶೀರ್ಷಿಕೆ : **ಚಾಪ್ಲಿನ್‌ಗೆ ಬರೆದ ಪತ್ರ**

ಲೇಖಕ : ಮನ್ರೋ, ಐಸಿ

ಕಾಲ : ೧೮೨೪, ನವೆಂಬರ್ ೭

ಸ್ಥಳ : ಧಾರವಾಡ

ಭಾಷೆ : ಇಂಗ್ಲಿಶ್

ಲಭ್ಯತೆ : ಇಂಡಿಯಾ ಆಫೀಸ್ ಲೈಬ್ರರಿ, ಲಂಡನ್

ವಿಷಯಸಾರ : ಕಿತ್ತೂರ ಮೇಲಿನ ದಾಳಿಯಲ್ಲಿ ಬೇ ಸಂಸ್ಥಾನಿಕರು ಸಹಾಯಕ್ಕೆ ಸಿದ್ಧ.

ಬೀಜಶಬ್ದಗಳು : ಚೆನ್ನಮ್ಮ <ಕಿತ್ತೂರ ರಾಣಿ>; ಈರವ <ಕಿತ್ತೂರಿನ ಕಿರಿಯ ರಾಣಿ>;

ನಿಪ್ಪಾಣಿಕರ (ಮರಾಠಾ ಸೇನಾನಿ); ಚಿಂಚಲಿ <ಸ್ಥಳ>;

ಕೊಲ್ಹಾಪುರ <ಸ್ಥಳ>; ಆರ್. ಈಡೆನ್ <ಬ್ರಿ. ಅಧಿ>; ಚಾಪ್ಲಿನ್ <ಬ್ರಿ. ಅಧಿ.>;

ಆಧಾರವಾಙ್ಮಯ : History or Freedom Movement in Karnataka Vol. 1. Ed. bY M.V. Krishnarao & G.S. Halappa, Bangalore, 1962.

**ವಾಸ್ತು / ಅವಶೇಷಗಳು (ಪ್ರಾಚೀನ)**

**(AA - 00001)**

ಸ್ವರೂಪ : ಒಂದು ವಿಶಿಷ್ಟವಾದ ಪ್ರಾಚೀನ ಅವಶೇಷ

ಕಾಲ : ಕ್ರಿ. ಪೂ. ೧ನೆಯ ಶತಮಾನ

ಮೂಲಸ್ಥಳ : ಮಾಧವಪುರ (ವಡಗಾಂವ ತಾ., ಮಹಾರಾಷ್ಟ್ರ)

ಲಭ್ಯತೆ : ಕನ್ನಡ ಸಂಶೋಧನ ಸಂಸ್ಥೆ (ಕರ್ನಾಟಕ ವಿ. ವಿ.) ಧಾರವಾಡ

ಶೋಧಕ / ಪ್ರಸಾರಕರು : ಪಂಚಮುಖಿ ಆರ್. ಎಸ್.

ಹೆಚ್ಚಿನ ಮಾಹಿತಿ : ------------

ಆಧಾರವಾಙ್ಮಯ : Progress of Kannada Res. Bombay Province : 1941 - 1946, K.R.I. Dharawad, 1948.

**ವಾಸ್ತು / ಅವಶೇಷಗಳು (ಪ್ರಾಚೀನ)**

**(AA - 00002)**

ಸ್ವರೂಪ : **ಶಿಲಾಮೂರ್ತಿ (ಗೊಮ್ಮಟೇಶ್ವರ)**

ಕಾಲ : ಕ್ರಿ.ಶ. ೯೮೩

ಮೂಲಸ್ಥಳ : ಶ್ರವಣಬೆಳಗೊಳ

ಲಭ್ಯತೆ : ಶ್ರವಣಬೆಳಗೊಳ

ಕಾರಣಕರ್ತರು : ಚಾವುಂಡರಾಯ (ಗಂಗರ ಮಂತ್ರಿ)

ವಿಷಯಸಾರ : ಗೊಮ್ಮಟೇಶ್ವರನ ಶಿಲಾಮೂರ್ತಿ

ಹೆಚ್ಚಿನ ಮಾಹಿತಿ : ದೇಶದಲ್ಲಿ ಅತಿ ಎತ್ತರದ ಏಕಶಿಲಾ ಮೂರ್ತಿ.

೧೨ ವರ್ಷಕ್ಕೊಮ್ಮೆ <ಮಹಾಮಸ್ತಕಾಭಿಷೇಕ>

ಶೋಧಕ / ಪ್ರಸಾರಕರು : ಬಿ. ಎಲ್. ರೈಸ್ / ಆರ್. ನರಸಿಂಹಾಚಾರ್

ಆಧಾರವಾಙ್ಮಯ : (೧) ಎಫಿಗ್ರಾಫಿಯಾ ಕರ್ನಾಟಿಕಾ ಸಂ.೨, ಸುಧಾರಿತ ಆವೃತ್ತಿ, ಸಂಪಾದಕರು. ಬಿ.ಆರ್. ಗೋಪಾಲ, ಮೈಸೂರು, ೧೯೭೩.

(೨) ಶ್ರವಣಬೆಳ್ಗೊಳ, ಸಂ. ಜಿ.ಎಸ್. ಶಿವರುದ್ರಪ್ಪ, ಬೆಂಗಳೂರು, ೧೯೮೩ . . . ಇ.

**ವಾಸ್ತು / ಅವಶೇಷಗಳು (ಪ್ರಾಚೀನ)**

**(AA - 00003)**

ಸ್ವರೂಪ : ನಾಣ್ಯ

ಕಾಲ : ಕ್ರಿ.ಶ. ೧ನೆಯ ಶತಮಾನ

ಮೂಲಸ್ಥಳ : ಚಿತ್ರದುರ್ಗ

ಲಭ್ಯತೆ : ?

ವಿಷಯಸಾರ : ರೋಮದ ಅಗಸ್ಟಸ್ ಸಮ್ರಾಟನ ನಾಣ್ಯ

ಕಾರಣಕರ್ತ : ರೋಮದ ಅಗಸ್ಟಸ್ ಸಾಮ್ರಾಟ

ಶೋಧಕರು : ಆರ್. ನರಸಿಂಹಾಚಾರ್

ಬೀಜಶಬ್ದಗಳು : ರೋಮ್-ಭಾರತ ಸಂಪರ್ಕ; ಅಗಸ್ಟಸ್ (ರೋಮ್ ಸಾಮ್ರಾಟ)

ಹೆಚ್ಚಿನ ಮಾಹಿತಿ : ---------

ಆಧಾರವಾಙ್ಮಯ : Archaeological Survey of Mysore, Annual Report, 1909.

**ವಾಸ್ತು / ಅವಶೇಷಗಳು (ಪ್ರಾಚೀನ)**

**(೦೦ – ೦೦೦೦೪)**

ಸ್ವರೂಪ : ಶಿಲಾಮೂರ್ತಿ

ಕಾಲ : ಕ್ರಿ.ಶ. ೧೪೩೨

ಮೂಲಸ್ಥಳ : ಕಾರ್ಕಳ

ವಿಷಯಸಾರ : ಗೊಮ್ಮಟೇಶ್ವರನ <ಜೈದೈ.> ಶಿಲಾಮೂರ್ತಿ

ಕಾರಣಕರ್ತರು : ಸಾಂತರ ವೀರಪಾಂಡ್ಯ (ದೊರೆ)

ಹೆಚ್ಚಿನ ಮಾಹಿತಿ : --------

ಆಧಾರವಾಙ್ಮಯ : (i) Studies in Tuluva History & Culture, By P> Gururaja Bhat, Udupi, 1975.

(ii) ಗೊಮ್ಮಟ, ಲೇ. ಸೂರ್ಯನಾಥ ಕಾಮತ, ೧೯೮೧

**ನಾಮವಿಜ್ಞಾನ**

**(ON- 00001)**

ಸ್ಥಳ : ಧಾರವಾಡ

ಪೂರ್ವದ ಹೆಸರುಗಳು : ಧಾರ್ವಾರ್ (ವಿದೇಶೀ ಉಚ್ಚಾರ, ೧೮-೨೦ ಶತ.ಗಳಲ್ಲಿ)

ತಂತುಪುರ (ಸಂಸ್ಕೃತೀಕರಣ)
ಧಾರಾನಗರ (ಸಂಸ್ಕೃತೀಕರಣ)

ಪೂರ್ವಪದ : ಧಾರ
ಮಧ್ಯಪದ : -------
ಉತ್ತರಪದ : ವಾಡ
ಪೂರ್ವಪದದ ಅರ್ಥ : ದಾರ / ಹರಿಯುವಿಕೆ
ಜಿಲ್ಲೆ : ಧಾರವಾಡ
ಪಿನ್ ಕೋಡ್ : ೫೮೦೦೦೧
ವಿಶೇಷ ಮಾಹಿತಿ : ಕರ್ನಾಟಕದ ಒಂದು ಸಾಂಸ್ಕೃತಿಕ ನೆಲೆ; ಜಿಲ್ಲಾ ಸ್ಥಳ
ಆಧಾರವಾಙ್ಮಯ : -----------

**ಬೀಜಶಬ್ದಗಳ ಅಕಾರಾದಿ**



**ಸಮಾರೋಪ**

ಇಲ್ಲಿ ವಿವರಿಸಲಾದ ಯೋಜನೆ ಸರ್ವಾಂಗೀಣ ಇತಿಹಾಸದ್ದೆಂದು ಹೆಸರಿಸಿದರೂ, ಇತಿಹಾಸದ ಯಾವುದೊಂದು ಕಾಲಮಾನ. ಪ್ರದೇಶ, ರಾಜಮನೆತನ, ಸಾಮಾಜಿಕ ವಿಷಯ–ಇಂಥ ಬಿಡಿಯಾದ ವಿಷಯ ಒಂದೊಂದಕ್ಕೂ ಅನುಸರಿಸಬಹುದು.
ಈ ಮಾಹಿತಿ ತಂತ್ರಜ್ಞಾನವನ್ನು ಕನ್ನಡ, ಇಂಗ್ಲಿಶ್ – ಎರಡೂ ಭಾಷೆಗಳಲ್ಲಿ ಏಕಕಾಲಕ್ಕೆ ರೂಪಿಸಬಯಸಿದೆ.

ಸಿ.ಬಿ. ಪಾಟೀಲ *

# ಭಾರತೀಯ ಸಾಂಸ್ಕೃತಿಕ ಸಂಪತ್ತು ಹಾಗೂ ಕಾನೂನು ವ್ಯವಸ್ಥೆ

ಭಾರತದ ಭವ್ಯ ಸಾಂಸ್ಕೃತಿಕ ಸಂಪತ್ತು ತನ್ನದೇ ಆದ ಮೌಲ್ಯಗಳಿಂದ ವಿಶ್ವದಲ್ಲಿ ವಿಶಿಷ್ಟ ಸ್ಥಾನವನ್ನು ಹೊಂದಿದೆ. ಇದು ಸ್ಮಾರಕ, ಪುರಾತತ್ವ ನೆಲೆ ಹಾಗೂ ಅವಶೇಷ, ಶಾಸನ, ಹಸ್ತಪ್ರತಿ, ನಾಣ್ಯ, ಮೂರ್ತಿ, ವರ್ಣಚಿತ್ರಗಳು, ಕಲೆ, ಧರ್ಮ, ಸಾಹಿತ್ಯ, ಗುಡಿಕೈಗಾರಿಕೆ, ಇತಿಹಾಸ ಬಿಂಬಿಸುವ ವಿವಿಧ ಕಲಾತ್ಮಕ ವಸ್ತುಗಳನ್ನೊಳಗೊಂಡಿದೆ. ಆದರೆ, ಈ ಭವ್ಯ ಪರಂಪರೆ ವಿಧ್ವಂಸಕ ಕೃತ್ಯ, ಕಳ್ಳತನ, ನಿಧಿಗಾಗಿ ಸ್ಮಾರಕ ಹಾಗೂ ಪುರಾತತ್ವ ನೆಲೆಗಳ ಅಗೆತ, ನಿಷಿದ್ಧ ವ್ಯಾಪಾರ ಮುಂತಾದ ಅಪಾಯಕಾರಿ ಆತಂಕಗಳನ್ನು ಎದುರಿಸುತ್ತಿದೆ. ಪರಿಸರ ಮಾಲಿನ್ಯ, ನಗರೀಕರಣ ಹಾಗೂ ಇತಿಹಾಸ ಪ್ರಜ್ಞೆಯಿಲ್ಲದ ಉದಾಸೀನತೆಗಳು ಸಹ ಸಾಂಸ್ಕೃತಿಕ ಸಂಪತ್ತಿನ ಇತ್ತೀಚಿನ ಆಪತ್ತುಗಳಾಗಿವೆ. ಭಾರತೀಯ ಸಾಂಸ್ಕೃತಿಕ ಸಂಪತ್ತನ್ನು ಈ ಅನೇಕ ಅಪಾಯಗಳಿಂದ ಸುರಕ್ಷಿತವಾಗಿ ಸಂರಕ್ಷಿಸಲು ಕೇಂದ್ರ ಸರಕಾರವು ಕೆಲವು ವಿಶೇಷ ಕಾನೂನುಗಳನ್ನು ಜಾರಿಗೊಳಿಸಿದೆ. ಸೂಕ್ತ ನಿರ್ವಹಣೆ ಹಾಗೂ ಸಂರಕ್ಷಣೆಯ ಉದ್ದೇಶದಿಂದ ಇವುಗಳನ್ನು ಆಗಿಂದಾಗ್ಗೆ ಪರಿಷ್ಕರಿಸಲಾಗುತ್ತದೆ.

ಭಾರತದಲ್ಲಿ ಪ್ರಸ್ತುತ (೧) ಏನ್ಸಿಯಂಟ್ ಮಾನ್ಯುಮೆಂಟ್ಸ್ ಆಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಆಂಡ್ ರಿಮೆನ್ಸ್ ಆಕ್ಟ್, ೧೯೫೮ ಹಾಗೂ ಏನ್ಸಿಯಂಟ್ ಮಾನ್ಯುಮೆಂಟ್ಸ್ ಆಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಆಂಡ್ ರಿಮೆನ್ಸ್ ರೂಲ್ಸ್ ೧೯೫೯ (೨) ಇಂಡಿಯನ್ ಟ್ರಜರ್ ಟ್ರೋವ್ ಆಕ್ಟ್, ೧೮೭೮ ಹಾಗೂ (೩) ಆಂಟಿಕ್ವಿಟಿಸ್ ಆಂಡ್ ಆರ್ಟ್ ಟ್ರಜರ್ಸ್ ಆಕ್ಟ್, ೧೯೭೨ ಹಾಗೂ ಆಂಟಿಕ್ವಿಟಿಸ್ ಆಂಡ್ ಆರ್ಟ್ ಟ್ರಜರ್ಸ್ ರೂಲ್ಸ್, ೧೯೭೩ಗಳೆಂಬ ರಾಷ್ಟ್ರೀಯ ಅಧಿನಿಯಮ ಹಾಗೂ ನಿಯಮಗಳಿವೆ.

ಇವುಗಳಲ್ಲದೆ, ಪ್ರತಿ ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶಗಳು ಈ ರೀತಿಯ ನ್ಯಾಯಶಾಸನಗಳನ್ನು ಜಾರಿಗೆ ತಂದಿವೆ. ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತ (೧) ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳ ಮತ್ತು ಅವಶೇಷಗಳ ಅಧಿನಿಯಮ, ೧೯೬೧ ಹಾಗೂ ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳ ಮತ್ತು ಅವಶೇಷಗಳ ನಿಯಮಗಳು, ೧೯೬೫ ಹಾಗೂ (೨) ಕರ್ನಾಟಕ ನಿಕ್ಷೇಪ ನಿಧಿ ಅಧಿನಿಯಮ, ೧೯೬೨ ಮತ್ತು ಕರ್ನಾಟಕ ನಿಕ್ಷೇಪ ನಿಧಿ ನಿಯಮ, ೧೯೬೩ಗಳು ಜಾರಿಯಲ್ಲಿವೆ.

ಈ ರಾಷ್ಟ್ರೀಯ ಅಧಿನಿಯಮ ಹಾಗೂ ನಿಯಮಗಳ ಕೆಲವೊಂದು ಪ್ರಮುಖ ನಿಯಾಮಾವಳಿಗಳನ್ನು ಇಲ್ಲಿ ವಿವರಿಸಲಾಗಿದೆ. ಇದಲ್ಲದೇ, ವಿದ್ವಾಂಸರಿಗೆ ಹಾಗೂ ಸಾಂಸ್ಕೃತಿಕ ಸಂಪತ್ತಿನ ಅಭಿರುಚಿ ಮತ್ತು ಕ್ರಿಯಾಶೀಲತೆ ಜನಸಾಮಾನ್ಯರಿಗೆ ಅವಶ್ಯಕವಿರುವ ಅತೀ ಮುಖ್ಯವಾದ ಕೆಲವೊಂದು ಅಧಿಸೂಚನೆಗಳನ್ನು ಸಹ ಹೇಳಿದೆ.

## ಏನ್ಸಿಯಂಟ್ ಮಾನ್ಯುಮೆಂಟ್ಸ್ ಅಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಅಂಡ್ ರಿಮೆನ್ಸ್ ಆಕ್ಟ್ ೧೯೫೮:

ರಾಷ್ಟ್ರೀಯ ಮಹತ್ವದ ಪ್ರಾಚೀನ ಹಾಗೂ ಐತಿಹಾಸಿಕ ಸ್ಮಾರಕ ಮತ್ತು ಪುರಾತತ್ವ ನೆಲೆ ಹಾಗೂ ಅವಶೇಷಗಳ ಸಂರಕ್ಷಣೆ ಮತ್ತು ಪುರಾತತ್ವಿಕ ಉತ್ಖನನದ ನಿಯಂತ್ರಣ ಹಾಗೂ ಮೂರ್ತಿಗಳು ಮತ್ತು ಅಂತಹ ಇನ್ನಿತರೆ ವಸ್ತುಗಳ ಸಂರಕ್ಷಣೆಗಾಗಿ ಏನ್ಸಿಯಂಟ್ ಮಾನ್ಯುಮೆಂಟ್ಸ್ ಆಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಆಂಡ್ ರಿಮೆನ್ಸ್ ಆಕ್ಟ್, ೧೯೫೮ ಎಂಬ ಅಧಿನಿಯಮವನ್ನು ೨೮.೦೮ ೧೯೫೮ರಲ್ಲಿ ವಿಧಿಸಿದೆ. ಈ ಅಧಿನಿಯುಮಕ್ಕೆ ಪೂರಕವಾಗಿ ಏನ್ಸಿಯಂಟ್ ಮಾನ್ಯುಮೆಂಟ್ಸ್ ಅಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಅಂಡ್ ರಿಮೆನ್ಸ್ ರೂಲ್ಸ್, ೧೯೫೯ಗಳನ್ನು ರೂಪಿಸಿದೆ. ಈ ಅಧಿನಿಯಮ ಹಾಗೂ ನಿಯಮಗಳೆರಡು ೧೫. ೧೦. ೧೯೫೯ರಿಂದ ಜಾರಿಗೆ ಬಂದಿವೆ.

ಈ ಅಧಿನಿಯಮದ ೨ನೇಯ ಕಲಂನಲ್ಲಿ ಪ್ರಾಚೀನ ಸ್ಮಾರಕ, ಪುರಾವಶೇಷ ಹಾಗೂ ಪುರಾತತ್ವ ನೆಲೆ ಮತ್ತು ಅವಶೇಷ ಹಾಗೂ ಅವುಗಳಿಗೆ ಸಂಬಂಧಿಸಿದ ವಿವಿಧ ವಿಷಯಗಳ ಪರಿಕಲ್ಪನೆಯನ್ನು ನೀಡಲಾಗಿದೆ. ೩ನೇಯ ಕಲಂನ ಮೇರೆಗೆ ಏನ್ಸಿಯಂಟ್ ಅಂಡ್ ಹಿಸ್ಟಾರಿಕಲ್ ಮಾನ್ಯುಮೆಂಟ್ಸ್

* ನಿವೃತ್ತ ಉಪ ಅಧೀಕ್ಷಕ ಪುರಾತತ್ವವಿದ, ಭಾರತೀಯ ಪುರಾತತ್ವ ಸರ್ವೇಕ್ಷಣ, ಬೆಂಗಳೂರು – ೫೬೦ ೦೩೪

ಅಂಡ್ ಆರ್ಕಿಯಾಲಾಜಿಕಲ್ ಸೈಟ್ಸ ಅಂಡ್ ರಿಮೆನ್ಸ್ (ಡಿಕ್ಲೇರೆಷನ್ ಆಫ್ ನ್ಯಾಷನಲ್ ಇಂಪಾರ್ಟನ್ಸ್ ) ಆಕ್ಟ್, ೧೯೫೧ ಅಥವಾ ಸ್ಟೇಟ್ ರಿಆರ್ಗನೈಜೆಷನ್ ಆಕ್ಟ್, ೧೯೫೬ರ ೧೨೬ನೆಯ ಕಲಂನ ಮೂಲಕ ರಾಷ್ಟ್ರೀಯ ಮಹತ್ವವುಳ್ಳವು ಗಳೆಂದು ಘೋಷಿಸಲಾಗಿರುವ ಎಲ್ಲಾ ಪ್ರಾಚೀನ ಹಾಗೂ ಐತಿಹಾಸಿಕ ಸ್ಮಾರಕಗಳು ಮತ್ತು ಎಲ್ಲಾ ಪುರಾತತ್ವ ನೆಲೆಗಳು ಹಾಗೂ ಅವಶೇಷಗಳನ್ನು ಈ ಅಧಿನಿಯಮದ ಉದ್ದೇಶ ಗಳಿಗಾಗಿ ರಾಷ್ಟ್ರೀಯ ಮಹತ್ವದ ಪ್ರಾಚೀನ ಹಾಗೂ ಐತಿಹಾಸಿಕ ಸ್ಮಾರಕಗಳು ಅಥವಾ ಪುರಾತತ್ವ ನೆಲೆ ಹಾಗೂ ಅವಶೇಷ ಗಳೆಂದು ಘೋಷಿಸಲಾಗಿದೆ.

೪ನೆಯ ಕಲಂನಲ್ಲಿ ಯಾವುದೇ ಪ್ರಾಚೀನ ಸ್ಮಾರಕ ಹಾಗೂ ಪುರಾತತ್ವ ನೆಲೆಗಳನ್ನು ರಾಷ್ಟ್ರೀಯ ಮಹತ್ವವುಳ್ಳವು ಗಳೆಂದು ಕೇಂದ್ರ ಸರಕಾರವು ಘೋಷಿಸುವ ಅಧಿಕಾರ ಹಾಗೂ ಅದರ ವಿಧಾನಗಳನ್ನು ಹೇಳಿದೆ. ಈ ೪ ಕಲಂನ ೧ನೆಯ ಉಪ-ಕಲಂನಂತೆ ಕೇಂದ್ರ ಸರಕಾರವು ೩ನೆಯ ಕಲಂನ ಮೇರೆಗೆ ಒಳಪಡದ ಯಾವುದೇ ಪ್ರಾಚೀನ ಸ್ಮಾರಕ ಹಾಗೂ ಪುರಾತತ್ವ ನೆಲೆ ಮತ್ತು ಅವಶೇಷಗಳು ರಾಷ್ಟ್ರೀಯ ಮಹತ್ವವುಳ್ಳವೆಂದು ಅಭಿಪ್ರಾಯಪಡುವಲ್ಲಿ ಅದು, ಸರಕಾರಿ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಅಂಥ ಪ್ರಾಚೀನ ಸ್ಮಾರಕ ಹಾಗೂ ಪುರಾತತ್ವ ನೆಲೆ ಮತ್ತು ಅವಶೇಷಗಳು ರಾಷ್ಟ್ರೀಯ ಮಹತ್ವವುಳ್ಳವೆಂದು ಘೋಷಿಸುವ ಅದರ ಉದ್ದೇಶದ ಬಗ್ಗೆ ಎರಡು ತಿಂಗಳುಗಳ ಸೂಚನೆಯನ್ನು ನೀಡಬೇಕು ಹಾಗೂ ಈ ಉದ್ದೇಶದ ಅಧಿಸೂಚನೆಯ ಪ್ರತಿಯನ್ನು ಸ್ಮಾರಕ ಅಥವಾ ನೆಲೆ ಹಾಗೂ ಅವಶೇಷಗಳ ಹತ್ತಿರ ಎದ್ದು ಕಾಣುವ ಸ್ಥಳದಲ್ಲಿ ಅಂಟಿಸಬೇಕು.

ಇದೇ ಕಲಂನ ೨ನೆಯ ಉಪ-ಕಲಂನಂತೆ ಯಾವುದೇ ಅಂತಹ ಪ್ರಾಚೀನ ಸ್ಮಾರಕ ಹಾಗೂ ಪುರಾತತ್ವ ನೆಲೆ ಮತ್ತು ಅವಶೇಷಗಳಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ವ್ಯಕ್ತಿಯು, ಆ ಅಧಿಸೂಚನೆಯನ್ನು ಹೊರಡಿಸಿದ ಎರಡು ತಿಂಗಳೊಳಗಾಗಿ ಆ ಪ್ರಾಚೀನ ಸ್ಮಾರಕ ಹಾಗೂ ಪುರಾತತ್ವ ನೆಲೆ ಮತ್ತು ಅವಶೇಷಗಳು ರಾಷ್ಟ್ರೀಯ ಮಹತ್ವವುಳ್ಳವೆಂದು ಮಾಡಿರುವ ಘೋಷಣೆ ಬಗ್ಗೆ ಆಕ್ಷೇಪಿಸಬಹುದು. ಈ ಎರಡು ತಿಂಗಳ ಅವಧಿ ಮುಕ್ತಾಯವಾದ ಮೇಲೆ, ಕೇಂದ್ರ ಸರಕಾರವು ಸ್ವೀಕರಿಸಿದ ಆಕ್ಷೇಪಣೆಗಳು ಯಾವುದಾದರು ಇದ್ದಲ್ಲಿ, ಅವನ್ನು ಪರ್ಯಾಲೋಚಿಸಿದ ತರುವಾಯ, ಸಂದರ್ಭಾನುಸಾರ ಪ್ರಾಚೀನ ಸ್ಮಾರಕ ಹಾಗೂ ಪುರಾತತ್ವ ನೆಲೆ ಮತ್ತು ಅವಶೇಷಗಳು ರಾಷ್ಟ್ರೀಯ ಮಹತ್ವವುಳ್ಳವೆಂದು ಸರಕಾರಿ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಘೋಷಿಸಬಹುದೆಂದು ಇದೇ ಕಲಂನ ೩ನೆಯ ಉಪ-ಕಲಂನಲ್ಲಿ ತಿಳಿಸಿದೆ.

ಕಲಂ ೫-೧೫ರಲ್ಲಿ ರಕ್ಷಿತ ಸ್ಮಾರಕಗಳಲ್ಲಿ ಕೆಲವೊಂದು ಹಕ್ಕುಗಳ ಅರ್ಜನೆ, ಒಪ್ಪಂದದ ಮೂಲಕ ಸ್ಮಾರಕಗಳ ಪರಿರಕ್ಷಣೆ, ಸಂರಕ್ಷಿತ ಸ್ಮಾರಕದ ದುರಸ್ತಿಗೆ ದತ್ತಿ ವಿನಿಯೋಗ ಹಾಗೂ ಸ್ವಇಚ್ಛೆ ವಂತಿಗೆ ಸ್ವೀಕಾರ, ಸಂರಕ್ಷಿತ ಸ್ಮಾರಕಗಳು ಅಪಾಯದ ಅಂಚಿನಲ್ಲಿದ್ದಾಗ ಅವುಗಳ ಅರ್ಜನೆ ಮತ್ತು ಪೂಜಾ ಸ್ಥಳಗಳ ದುರುಪಯೋಗ ಅಥವಾ ಅಪವಿತ್ರ ಗೊಳಿಸುವದರಿಂದ ಸಂರಕ್ಷಿಸುವ ವಿಧಾನಗಳನ್ನು ಹೇಳಿದೆ. ಭಾರತೀಯ ಪುರಾತತ್ವ ಸರ್ವೇಕ್ಷಣದ ಮಹಾ ನಿರ್ದೇಶಕರು (೧) ಕೇಂದ್ರ ಸರಕಾರದ ಅನುಮತಿಯಿಂದ ಯಾವುದೇ ಸಂರಕ್ಷಿತ ಸ್ಮಾರಕವನ್ನು ಖರೀದಿಸುವ ಅಥವಾ ಗೇಣಿಗೆ ಪಡೆಯುವ ಅಥವಾ ಕಾಣಿಕೆಯಾಗಿ ಅಥವಾ ಉಯಿಲಿನ ದಾನವಾಗಿ ಸ್ವೀಕರಿಸುವ (೨) ಒಡೆಯನಿಲ್ಲದ ಸಂರಕ್ಷಿತ ಸ್ಮಾರಕಕ್ಕೆ ಪೋಷಕರಾಗುವ (೩) ಯಾವುದೇ ಸಂರಕ್ಷಿತ ಸ್ಮಾರಕದ ಒಡೆಯನು ಅಪೇಕ್ಷಿಸಿದಲ್ಲಿ ಮಹಾ ನಿರ್ದೇಶಕರನ್ನು ಪೋಷಕರನ್ನಾಗಿಸುವ ಮತ್ತು (೪)ಅಂತಹ ಸಂರಕ್ಷಿತ ಸ್ಮಾರಕಗಳಲ್ಲಿ ಸಾಂಪ್ರದಾಯಿಕ ಪೂಜಾ ಪಾಠಗಳಿಗೆ ಯಾವುದೇ ತರಹದ ಅಡ್ಡಿ ಆತಂಕಗಳನ್ನೊಡ್ಡದ ಪ್ರಾವಧಾನಗಳನ್ನು ೫ನೆಯ ಕಲಂನಲ್ಲಿ ಮಾಡಿದೆ.

೬ನೆಯ ಕಲಂನ ೧ನೆಯ ಉಪ-ಕಲಂನಂತೆ ಸಂರಕ್ಷಿತ ಸ್ಮಾರಕದ ಒಡೆಯನು ಸ್ಮಾರಕವನ್ನು ಸುಸ್ಥಿತಿಯಲ್ಲಿಟ್ಟುಕೊಂಡು ಬರಲು ಕೇಂದ್ರ ಸರಕಾರದೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳಬಹುದು. ೨ನೆಯ ಉಪ-ಕಲಂನಲ್ಲಿ ಈ ರೀತಿಯ ಒಪ್ಪಂದದ ವಿವಿಧ ಷರತ್ತುಗಳನ್ನು ವಿವರಿಸಲಾಗಿದೆ. ೩ನೆಯ ಉಪ-ಕಲಂನಂತೆ ಕೇಂದ್ರ ಸರಕಾರ ಅಥವಾ ಒಡೆಯನು ಈ ಒಪ್ಪಂದವನ್ನು ಬರೆದುಕೊಟ್ಟ ದಿನಾಂಕದಿಂದ ಮೂರು ವರ್ಷಗಳ ನಂತರ, ಯಾವುದೇ ಸಮಯದಲ್ಲಿ ಆ ಇತರ ಪಕ್ಷಕಾರನಿಗೆ ಆರು ತಿಂಗಳುಗಳ ಸೂಚನೆಯನ್ನು ಕೊಟ್ಟ ಮೇಲೆ ಒಪ್ಪಂದವನ್ನು ಕೊನೆಗೊಳಿಸಬಹುದು. ಆದರೆ, ಒಡೆಯನು ಆ ಒಪ್ಪಂದವನ್ನು ಕೊನೆಗಳಿಸಿದಲ್ಲಿ, ಅವನು ಒಪ್ಪಂದ ಕೊನೆಗಳಿಸಿದ ತಕ್ಷಣ ನಿಕಟಪೂರ್ವದ ಐದು ವರ್ಷ ಅಥವಾ ಒಪ್ಪಂದ ಇನ್ನೂ ಕಡಿಮೆ ಅವಧಿಯದಾಗಿದ್ದರೆ, ಒಪ್ಪಂದದ ಅವಧಿಯಲ್ಲಿ ಆ ಸ್ಮಾರಕವನ್ನು ಸುಸ್ಥಿತಿಯಲ್ಲಿಡಲು ವಹಿಸಿದ ವೆಚ್ಚಗಳು ಯಾವುದಾದರೂ ಇದ್ದರೆ ಅವುಗಳನ್ನು ಕೇಂದ್ರ ಸರಕಾರಕ್ಕೆ ಸಂದಾಯ ಮಾಡಬೇಕು.

೧೩ನೆಯ ಕಲಂನ ಮೇರೆಗೆ ಯಾವುದಾದರೂ ಸಂರಕ್ಷಿತ ಸ್ಮಾರಕ ನಾಶವಾಗುವ, ಹಾನಿಗೊಳಗಾಗುವ, ದುರುಪಯೋಗವಾಗುವ ಅಥವಾ ಕ್ಷೀಣವಾಗುವ ಅಪಾಯಗಳ ಅಂಚಿನಲ್ಲಿದೆ ಎಂದು ಕೇಂದ್ರ ಸರಕಾರ ಶಂಕಿಸಿದರೆ, ಅದು ಅಂತಹ ಸ್ಮಾರಕವನ್ನು ಸಾರ್ವಜನಿಕ

ಹಿತದೃಷ್ಟಿಯಿಂದ ರಕ್ಷಿಸಲು ಅದನ್ನು ಭೂ ಅರ್ಜನಾ ಅಧಿನಿಯಮ(ಲ್ಯಾಂಡ್ ಅಕ್ವಿಜಿಷನ್ ಅಕ್ಟ್) ೧೮೯೪ರ ಪ್ರಾವಧಾನಗಳ ಮೇರೆಗೆ ಸ್ವಾಧೀನಪಡಿಸಿಕೊಳ್ಳುವ ಅಧಿಕಾರವನ್ನು ನೀಡಿದೆ.

೧೬ನೆಯ ಕಲಂನ ೧ನೆಯ ಉಪ-ಕಲಂನ ಮೇರೆಗೆ ಕೇಂದ್ರ ಸರಕಾರವು ಸುಸ್ಥಿತಿಯಲ್ಲಿಟ್ಟುಕೊಂಡ ಯಾವುದೇ ಸಂರಕ್ಷಿತ ಸ್ಮಾರಕವು ಪೂಜಾ ಸ್ಥಳ ಅಥವಾ ದೇವಸ್ಥಾನ ವಾಗಿದ್ದಲ್ಲಿ ಅದರ ಮೂಲ ಸ್ವರೂಪಕ್ಕೆ ಧಕ್ಕೆಯಾಗುವ ಯಾವುದೇ ಉದ್ದೇಶಕ್ಕಾಗಿ ಉಪಯೋಗಿಸುವುದನ್ನು ನಿರ್ಬಂಧಿಸಿದೆ. ಇದೇ ಕಲಂನ ೨ನೆಯ ಉಪ-ಕಲಂನಲ್ಲಿ, ೧೩ನೆಯ ಕಲಂನ ಮೇರೆಗೆ ಸ್ವಾಧೀನ ಪಡಿಸಿಕೊಂಡ ಸ್ಮಾರಕ ಅಥವಾ ೫ನೆಯ ಕಲಂನಂತೆ ಸ್ವೀಕರಿಸಿದ ಸ್ಮಾರಕ ಅಥವಾ ಅದರ ಯಾವುದೇ ಭಾಗದಲ್ಲಿ ಪೂಜಾಪಾಠಗಳು ಅಥವಾ ನೈಮಿತ್ಯಗಳು ನೆಡೆಯುತ್ತಿದ್ದಲ್ಲಿ ಅಂಥ ಸ್ಮಾರಕವನ್ನು ಮಲಿನ ಹಾಗೂ ಅಪವಿತ್ರಗೊಳಿಸುವುದರಿಂದ ರಕ್ಷಿಸಲು ಸೂಕ್ತ ಏರ್ಪಾಡುಗಳನ್ನು ಜಿಲ್ಲಾಧಿಕಾರಿ ಮಾಡಬೇಕೆಂದು ಹೇಳಿದೆ.

೧೯ನೆಯ ಕಲಂ ಸಂರಕ್ಷಿಸಿದ ಸ್ಮಾರಕಗಳ ಪರಿಸರದಲ್ಲಿ ನಡೆಯಬಹುದಾದ ಕೆಲವೊಂದು ಅಕ್ರಮ ಚಟುವಟಿಕೆಗಳನ್ನು ನಿರ್ಬಂಧಿಸಿದೆ. ಈ ಕಲಂನ ೧ನೆಯ ಉಪ-ಕಲಂನಂತೆ ಸಂರಕ್ಷಿತ ಪ್ರದೇಶದ ಒಡೆಯ ಅಥವಾ ಅನುಭೋಗದಾರನೂ ಸೇರಿದಂತೆ ಯಾವನೇ ವ್ಯಕ್ತಿಯು ಕೇಂದ್ರ ಸರಕಾರದ ಅನುಮತಿ ಇಲ್ಲದೆ ಸಂರಕ್ಷಿತ ಪ್ರದೇಶದಲ್ಲಿ ಯಾವುದೇ ಕಟ್ಟಡ ನಿರ್ಮಿಸುವಂತಿಲ್ಲ ಅಥವಾ ಗಣಿಗಾರಿಕೆ, ಕಲ್ಲುಗಣಿಗಾರಿಕೆ, ಉತ್ಖನನ, .ಮದ್ದುಗಾರಿಕೆ ಅಥವಾ ಅದೇ ಸ್ವರೂಪದ ಯಾವುದೇ ರೀತಿಯ ಕಾರ್ಯಗಳನ್ನು ಮಾಡುವಂತಿಲ್ಲ. ಇದೇ ಕಲಂನ ೨ನೆಯ ಉಪ-ಕಲಂನಂತೆ, ೧ನೆಯ ಉಪ-ಕಲಂನ್ನು ಉಲ್ಲಂಘಿಸಿ ಸಂರಕ್ಷಿತ ಪ್ರದೇಶದಲ್ಲಿ ಕಟ್ಟಿದ ಯಾವುದೇ ಕಟ್ಟಡವನ್ನು ನಿರ್ದಿಷ್ಟ ಅವಧಿಯಲ್ಲಿ ತೆರವು ಗೊಳಿಸಲು ಕೇಂದ್ರ ಸರಕಾರ ಆದೇಶಿಸಬಹುದು ಹಾಗೂ ಆ ವ್ಯಕ್ತಿಯು ಈ ಆದೇಶವನ್ನು ಪಾಲಿಸಲು ನಿರಾಕರಿಸಿದರೆ ಜಿಲ್ಲಾಧಿಕಾರಿಯು ಕಟ್ಟಡವನ್ನು ತೆಗೆದುಹಾಕುವಂತೆ ಮಾಡಬೇಕೆಂದು ಹಾಗೂ ಆ ವ್ಯಕ್ತಿ ಅಂಥ ವೆಚ್ಚವನ್ನು ಸಂದಾಯಮಾಡಬೇಕೆಂದು ತಿಳಿಸಿದೆ.

ಕಲಂ ೨೧-೨೪ಗಳು ಉತ್ಖನನ ಮತ್ತು ಅದರ ನಿಯಂತ್ರಣ ಹಾಗೂ ಉತ್ಖನನದಲ್ಲಿ ದೊರೆತ ಪುರಾವಶೇಷಗಳ ಸಂರಕ್ಷಣೆಯ ವಿವರಗಳನ್ನಿಡುತ್ತವೆ. ೨೧ನೆಯ ಕಲಂನಂತೆ ಪುರಾತತ್ವ ಅಧಿಕಾರಿ ಅಥವಾ ಅವರ ಅಧಿಕೃತ ಪ್ರತಿನಿಧಿ ಅಥವಾ ಅಧಿಕೃತ ಲೈಸನ್ಸನ್ನು ಹೊಂದಿದ ಯಾವನೇ ವ್ಯಕ್ತಿ ಜಿಲ್ಲಾಧಿಕಾರಿ ಹಾಗೂ ಒಡೆಯನಿಗೆ ಸೂಚನೆಯನ್ನು ಕೊಟ್ಟು ಯಾವುದೇ ಸಂರಕ್ಷಿತ ಪ್ರದೇಶವನ್ನು ಪ್ರವೇಶಿಸಿ ಅದರಲ್ಲಿ ಉತ್ಖನನ ಮಾಡಬಹುದು. ೨೨ನೆಯ ಕಲಂನಡಿ ಸಂರಕ್ಷಿತ ಪ್ರದೇಶವಲ್ಲದ ಯಾವುದೇ ಪ್ರದೇಶವು ಐತಿಹಾಸಿಕ ಅಥವಾ ಪುರಾತತ್ವಿಕ ಮಹತ್ವವುಳ್ಳ ಭಗ್ನಾವಶೇಷ ಹಾಗೂ ಪ್ರಾಚ್ಯಾವಶೇಷಗಳು ಒಳಗೊಂಡಿದೆಯೆಂದು ಪುರಾತತ್ವ ಅಧಿಕಾರಿ ಭಾವಿಸಿದಾಗ, ಅವನು ಅಥವಾ ಅವನ ಅಧಿಕೃತ ಅಧಿಕಾರಿ, ಜಿಲ್ಲಾಧಿಕಾರಿ ಹಾಗೂ ಒಡೆಯನಿಗೆ ಸೂಚನೆಯನ್ನು ಕೊಟ್ಟು ನಂತರ ಅಂತಹ ಪ್ರದೇಶದಲ್ಲಿ ಉತ್ಖನನ ಮಾಡಬಹುದು.

೨೩ನೆಯ ಕಲಂನ ೧ನೆಯ ಉಪ-ಕಲಂ(ಎ)ನಂತೆ ಪುರಾತತ್ವ ಅಧಿಕಾರಿ ಅಥವಾ ಉತ್ಖನನದ ಲೈಸನ್ಸನ್ನು ಪಡೆದವರು, ೨೧ ಅಥವಾ ೨೨ನೆಯ ಕಲಂಗಳ ಮೇರೆಗೆ ಯಾವುದೇ ಉತ್ಖನನ ಮಾಡಿದಾಗ ಅಲ್ಲಿ ದೊರೆತ ಯಾವುದೇ ಪುರಾವಶೇಷಗಳನ್ನು ಆದಷ್ಟು ಬೇಗ ಪರೀಕ್ಷಿಸಿ, ಅವುಗಳ ಕ್ರಮವಿಹಿತವಾದ ವರದಿಯನ್ನು ಕೇಂದ್ರ ಸರಕಾರಕ್ಕೆ ಕಳುಹಿಸಬೇಕು. ಇದೇ ಕಲಂನ (೧)ನೆಯ ಉಪ-ಕಲಂ (ಬಿ)ನಂತೆ ಉತ್ಖನನ ಮುಕ್ತಾಯವಾದ ಕೂಡಲೆ, ಅಲ್ಲಿ ದೊರೆತ ಪುರಾವಶೇಷಗಳ ಸ್ವರೂಪಗಳ ಬಗ್ಗೆ ಭೂಮಿಯ ಒಡೆಯನಿಗೆ ತಿಳಿಸಬೇಕು. ೨ನೆಯ ಉಪ-ಕಲಂನಂತೆ ಪುರಾವಶೇಷಗಳ ಖರೀದಿಯ ಅನುಮತಿ ಸಿಗುವವರೆಗೆ, ಅವುಗಳನ್ನು ಪುರಾತತ್ವ ಅಧಿಕಾರಿ ಅಥವಾ ಉತ್ಖನನದ ಲೈಸನ್ಸನ್ನು ಪಡೆದವರು ಅವುಗಳನ್ನು ಸುರಕ್ಷಿತವಾಗಿಡಬೇಕು. ३ನೆಯ ಉಪ-ಕಲಂನಂತೆ ಕೇಂದ್ರ ಸರಕಾರವು ೧ನೆಯ ಉಪ-ಕಲಂನಡಿ ಪುರಾವಶೇಷಗಳ ವರದಿ ಸ್ವೀಕರಿಸಿದಮೇಲೆ, ಅವುಗಳನ್ನು ಮಾರುಕಟ್ಟೆಯ ಬೆಲೆಯಲ್ಲಿ ಕಡ್ಡಾಯವಾಗಿ ಸ್ವಾಧೀನಪಡಿಸಿ ಕೊಳ್ಳಲು ಆದೇಶಿಸಬಹುದು ಹಾಗೂ ೪ನೆಯ ಉಪ-ಕಲಂನಂತೆ ಪುರಾವಶೇಷಗಳನ್ನು ३ನೆಯ ಉಪ-ಕಲಂನಡಿ ಕಡ್ಡಾಯವಾಗಿ ಸ್ವಾಧೀನದ ಆದೇಶ ನೀಡಿದ ದಿನಾಂಕದಿಂದ ಅಂತಹ ಪುರಾವಶೇಷಗಳು ಕೇಂದ್ರ ಸರಕಾರದ ಸ್ವಾಮ್ಯಕ್ಕೆ ಒಳಪಡುತ್ತವೆ.

೨೪ನೆಯ ಕಲಂನ ಮೇರೆಗೆ ಯಾವುದೇ ರಾಜ್ಯ ಸರಕಾರ ಅಥವಾ ಅದು ಅಧಿಕೃತಗೊಳಿಸಿದ ಯಾವನೇ ವ್ಯಕ್ತಿ ಕೇಂದ್ರ ಸರಕಾರದ ನಿಯಮ ಅಥವಾ ನಿರ್ದೇಶನಗಳ ಹೊರತಾಗಿ ಸಂರಕ್ಷಿತ ಪ್ರದೇಶವಾಗಿರದ ಯಾವುದೇ ಪ್ರದೇಶ ದಲ್ಲಿ ಉತ್ಖನನ ಅಥವಾ ಅಂತಹ ಇತರೆ ಕಾರ್ಯಗಳನ್ನು ಮಾಡುವಂತಿಲ್ಲವೆಂದು ಹೇಳಿದೆ.

ಕಲಂ ೨೫-೨೬ಗಳು ಪುರಾವಷೇಶಗಳ ಸ್ಥಳಾಂತರಿ ಕರಣದ ಮೇಲೆ ನಿರ್ಬಂಧ ಹಾಗೂ ಅವುಗಳನ್ನು ಖರೀದಿಸುವ ವಿವರಗಳನ್ನು ಹೇಳುತ್ತವೆ. ೨೫ನೆಯ ಕಲಂನ

೧ನೆಯ ಉಪ-ಕಲಂನಂತೆ ಕೇಂದ್ರ ಸರಕಾರವು ಯಾವುದೇ ಪುರಾವಶೇಷಗಳನ್ನು ಅವುಗಳಿದ್ದ ಸ್ಥಳದಿಂದ ಬೇರೊಂದು ಪ್ರದೇಶಕ್ಕೆ ಕೇಂದ್ರ ಸರಕಾರದ ಅನುಮತಿ ಇಲ್ಲದೆ ಸ್ಥಳಾಂತರಿಸ ಕೂಡದೆಂದು ಪರ್ಯಾಲೋಚಿಸಿದರೆ, ಕೇಂದ್ರ ಸರಕಾರವು ಸರಕಾರಿ ರಾಜಪತ್ರದ ಅಧಿಸೂಚನೆಯ ಮೂಲಕ ಅಂಥ ಯಾವುದೇ ಪುರಾವಶೇಷವನ್ನು ಮಹಾ ನಿರ್ದೇಶಕರ ಅನುಮತಿಯ ಹೊರತಾಗಿ ಸ್ಥಳಾಂತರಿಸಕೂಡದೆಂದು ನಿರ್ದೇಶಿಸಬಹುದು. ಇದೇ ಕಲಂನ ೨ನೆಯ ಉಪ-ಕಲಂನಲ್ಲಿ ಅನುಮತಿಗಾಗಿ ನಿಗದಿತ ಅರ್ಜಿಯನ್ನು ಸಲ್ಲಿಸಬೇಕೆಂದು ಹೇಳಿದೆ.

೨೫ನೆಯ ಕಲಂನ ೧ನೆಯ ಉಪ-ಕಲಂನಲ್ಲಿ ಸೂಚಿಸಿದ ಯಾವುದೇ ಪುರಾವಶೇಷಗಳು ಧಕ್ಕೆಯಾಗುವ, ತೆಗೆದುಹಾಕುವ, ಹಾನಿಗೊಳಗಾಗುವ, ದುರುಪಯೋಗ ವಾಗುವ, ಅಥವಾ ಕ್ಷೀಣವಾಗುವ ಅಪಾಯಗಳಲ್ಲಿವೆಂದು ಕೇಂದ್ರ ಸರಕಾರ ಶಂಕಿಸಿದರೆ ಅಥವಾ ಅವುಗಳ ಐತಿಹಾಸಿಕ ಅಥವಾ ಪುರಾತತ್ವಿಕ ಮಹತ್ವಗಳ ಕಾರಣಗಳಿಂದ ಅವುಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಸಂರಕ್ಷಣೆಯ ಅಗತ್ಯವಿದೆ ಎಂದು ಕೇಂದ್ರ ಸರಕಾರ ಭಾವಿಸಿದಾಗ, ಅವುಗಳನ್ನು ಮಾರುಕಟ್ಟೆಯ ಬೆಲೆಯಲ್ಲಿ ಕಡ್ಡಾಯವಾಗಿ ಖರೀದಿಸುವ ಅಧಿಕಾರವನ್ನು ಕೇಂದ್ರ ಸರಕಾರಕ್ಕೆ ೨೬ನೆಯ ಕಲಂನ ೧ನೆಯ ಉಪ-ಕಲಂನಡಿ ನೀಡಲಾಗಿದೆ. ಇದೇ ಕಲಂನ ೩ನೆಯ ಉಪ-ಕಲಂನತೆ ಪೂಜಾ-ಪಾಠಕ್ಕೊಳಪಟ್ಟಿರುವ ಮೂರ್ತಿಗಳು ಕಡ್ಡಾಯವಾಗಿ ಖರೀದಿಸುವ ಅಧಿಕಾರದ ವ್ಯಾಪ್ತಿಗೊಳ ಪಡುವದಿಲ್ಲ.

ಕಲಂ ೨೭-೨೮ಗಳು ಸಂರಕ್ಷಿತ ಸ್ಮಾರಕಗಳ ಪರಿರಕ್ಷಣೆ ಅಥವಾ ಉತ್ಖನನ ಮಾಡುವಾಗ ಯಾವುದೇ ವ್ಯಕ್ತಿಗಾದ ನಷ್ಟ ಅಥವಾ ಪರಿಹಾರ ಕೊಡುವ ರೀತಿಗಳನ್ನು ವಿವರಿಸುತ್ತವೆ. ೨೭ನೆಯ ಕಲಂನಂತೆ ಯಾವುದೇ ಪ್ರದೇಶದಲ್ಲಿ ಉತ್ಖನನ ಅಥವಾ ಯಾವುದೇ ರೀತಿಯ ಕಾರ್ಯಕಲಾಪಗಳನ್ನು ಈ ಅಧಿನಿಯಮದ ಪರಿವಿಧಿಯಲ್ಲಿ ಮಾಡಿದಾಗ ಭೂಮಿಯ ಒಡೆಯನಿಗೆ ಅಥವಾ ಅಧಿಭೋಗದಾರನಿಗೆ ಯಾವುದೇ ನಷ್ಟ ಅಥವಾ ಹಾನಿ ಅಥವಾ ಲಾಭಗಳ ಯಾವುದೇ ಇಳಿತಾಯವಾದಾಗ ಕೇಂದ್ರ ಸರಕಾರವು ಆ ಒಡೆಯನಿಗೆ ಅಥವಾ ಅಧಿಭೋಗದಾರನಿಗೆ ಅಂಥ ನಷ್ಟ ಅಥವಾ ಹಾನಿ ಅಥವಾ ಲಾಭಗಳ ಇಳಿತಾಯಕ್ಕಾದ ನಷ್ಟ ಪರಿಹಾರವನ್ನು ನೀಡಬೇಕು.

೨೮ನೆಯ ಕಲಂನ ೧ನೆಯ ಉಪ-ಕಲಂನಲ್ಲಿ ಕೇಂದ್ರ ಸರಕಾರ ಯಾವುದೇ ಸ್ವತ್ತನ್ನು ಖರೀದಿಸುವಾಗ, ಅದರ ಮಾರುಕಟ್ಟೆಯ ಮೌಲ್ಯ ಹಾಗೂ ನಷ್ಟದ ಪರಿಹಾರಗಳನ್ನು ನಿರ್ಧರಿಸುವಾಗ ಯಾವುದೇ ಭಿನ್ನಾಭಿಪ್ರಾಯ ಬಂದಲ್ಲಿ, ಅಂತಹ ಮಾರುಕಟ್ಟೆಯ ಮೌಲ್ಯ ಹಾಗೂ ನಷ್ಟದ ಪರಿಹಾರಗಳನ್ನು ಸಾಧ್ಯವಾದಷ್ಟು ಭೂ ಅರ್ಜನಾ ಅಧಿನಿಯಮ(ಲ್ಯಾಂಡ್ ಅಕ್ವಿಜಿಷನ್ ಆಕ್ಟ್) ೧೮೯೪ರಲ್ಲಿ ಹೇಳಿದ ನಿಯಮಾನುಸಾರವಾಗಿ ನಿರ್ಧರಿಸುವ ವಿವರಗಳನ್ನು ತಿಳಿಸಲಾಗಿದೆ. ಇದೇ ಕಲಂನ ೨ನೆಯ ಉಪ-ಕಲಂನಂತೆ ಯಾವುದೇ ಪುರಾವಶೇಷವನ್ನು ೨೩ನೆಯ ಕಲಂನ ೩ನೆಯ ಉಪ-ಕಲಂ ಅಥವಾ ೨೬ನೆಯ ಕಲಂನ ೧ನೆಯ ಉಪ-ಕಲಂನಂತೆ ಕಡ್ಡಾಯ ಅರ್ಜನೆಗಾಗಿ ಆದೇಶಮಾಡಿದಾಗ ಆ ಪುರಾವಶೇಷದ ನಷ್ಟ ಪರಿಹಾರವನ್ನು ಆದಷ್ಟು ಮಟ್ಟಿಗೆ ಆಂಟಿಕ್ವಿಟಿಸ್ ಆಂಡ್ ಆರ್ಟ್ ಟ್ರಜರ್ಸ್ ಆಕ್ಟ್, ೧೯೭೨ರ ಕಲಂ ೧೯ರಂತೆ ಅರ್ಜನೆ ಮಾಡಿ ಮತ್ತು ೨೦ ಹಾಗೂ ೨೨ರ ಪ್ರಾವಧಾನಗಳನ್ನು ಅನುಸರಿಸಿ ಪರಿಹಾರ ನಿರ್ಧರಿಸಿದ ರೀತಿಯಲ್ಲಿಯೇ ನೀಡಬೇಕೆಂದು ಹೇಳಿದೆ.

೩೦ನೆಯ ಕಲಂನಲ್ಲಿ ಈ ಅಧಿನಿಯಮನ್ನು ಉಲ್ಲಂಘನೆ ಮಾಡಿದವರಿಗೆ ವಿಧಿಸಬಹುದಾದ ದಂಡ ಹಾಗೂ ಶಿಕ್ಷೆಗಳನ್ನು ಹೇಳಿದೆ. ಈ ೩೦ನೆಯ ಕಲಂನ ೧ನೆಯ ಉಪ-ಕಲಂನಂತೆ (೧) ಯಾರಾದರೂ (ಅ)ಸಂರಕ್ಷಿತ ಸ್ಮಾರಕವನ್ನು ಧಕ್ಕೆ ಮಾಡುವುದು, ತೆಗೆಯುವದು, ಕ್ಷತಿಗೊಳಿಸುವುದು, ವಿರೂಪಗೊಳಿಸುವುದು, ಗಂಡಾಂತರಕ್ಕೀಡುಮಾಡುವುದು, ದುರುಪಯೋಗಮಾಡುವುದು ಅಥವಾ; (ಬ) ಸಂರಕ್ಷಿತ ಸ್ಮಾರಕಗಳ ಒಡೆಯ ಅಥವಾ ಅಧಿಭೋಗದಾರನು ೯ನೆಯ ಕಲಂನ ೧ನೆಯ ಉಪ-ಕಲಂ ಅಥವಾ ೧೦ನೆಯ ಕಲಂನ ೧ನೆಯ ಉಪ-ಕಲಂ ಉಲ್ಲಂಘಿಸಿದಲ್ಲಿ ಅಥವಾ; (ಕ)ಸಂರಕ್ಷಿತ ಸ್ಮಾರಕದಿಂದ ಮೂರ್ತಿ, ಕೆತ್ತನೆ, ಶಿಲಾ-ಫಲಕ, ಶಾಸನ ಅಥವಾ ಇತರ ಅಂತಹ ಯಾವುದೇ ವಸ್ತುವನ್ನು ತೆಗೆದಲ್ಲಿ ಅಥವಾ (ಡ)೧೯ನೆಯ ಕಲಂನ ೧ನೆಯ ಉಪ-ಕಲಂನ್ನು ಉಲ್ಲಂಘಿಸಿದಲ್ಲಿ ಅಂಥಹವರಿಗೆ ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸ ಅಥವಾ ಐದು ಸಾವಿರ ರೂಪಾಯಿವರೆಗಿನ ದಂಡ ಅಥವಾ ಇವೆರಡನ್ನು ವಿಧಿಸಬಹುದು. ಇದೇ ಕಲಂನ ೨ನೆಯ ಉಪ-ಕಲಂನಂತೆ ಯಾರಾದರೂ ಪುರಾವಶೇಷಗಳನ್ನು ೨೫ನೆಯ ಕಲಂನ ೧ನೆಯ ಉಪ-ಕಲಂನ್ನು ಉಲ್ಲಂಘಿಸಿ ಸ್ಥಳಾಂತರಿಸದರೆ ಐದು ಸಾವಿರ ರೂಪಾಯಿವರೆಗಿನ ದಂಡ ವಿಧಿಸಬಹುದು ಮತ್ತು ನ್ಯಾಯಾಲಯವು ಅವುಗಳ ಪುನರ್‌ಸ್ಥಾಪನೆಗೆ ಆದೇಶಿಸಬಹುದು.

ಕೊನೆಯಲ್ಲಿ, ೩೫ನೆಯ ಕಲಂನಡಿ ಯಾವುದೇ ರಾಷ್ಟ್ರೀಯ ಮಹತ್ವದ ಪ್ರಾಚೀನ ಹಾಗೂ ಐತಿಹಾಸಿಕ ಸ್ಮಾರಕ ಮತ್ತು ಪುರಾತತ್ವ ನೆಲೆ ಮತ್ತು ಅವಶೇಷಗಳ

ರಾಷ್ಟ್ರೀಯ ಮಹತ್ವವು ಕೊನೆಗೊಂಡಿದೆಯೆಂದು ಕೇಂದ್ರ ಸರಕಾರವು ಅಭಿಪ್ರಾಯಪಟ್ಟಲ್ಲಿ ಅದು ಸರಕಾರಿ ರಾಜಪತ್ರದ ಅಧಿಸೂಚನೆಯ ಮೂಲಕ ಪ್ರಾಚೀನ ಹಾಗೂ ಐತಿಹಾಸಿಕ ಸ್ಮಾರಕ ಮತ್ತು ಪುರಾತತ್ವ ನೆಲೆ ಮತ್ತು ಅವಶೇಷಗಳು ಈ ಅಧಿನಿಯಮದ ಉದ್ದೇಶಕ್ಕಾಗಿ ರಾಷ್ಟ್ರೀಯ ಮಹತ್ವವುಳ್ಳದ್ದಾಗಿರುವುದು ಕೊನೆಗೊಂಡಿದೆ ಎಂದು ಘೋಷಿಸಬಹುದು.

**ಏನ್ಸಿಯಂಟ್ ಮಾನ್ಯುಮೆಂಟ್ಸ್ ಅಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಅಂಡ್ ರಿಮೆನ್ಸ್ ರೂಲ್ಸ್ ೧೯೫೯:**

ನಿಯಮ ೩-೯ಗಳಲ್ಲಿ ಸ್ಮಾರಕಗಳ ಸಂದರ್ಶಿಸುವ ಸಮಯ, ಪ್ರವೇಶ ಶುಲ್ಕ, ಸ್ಮಾರಕಗಳಲ್ಲಿ ಕೆಲವೊಂದು ನಿಷಿದ್ದ ಸಭೆ-ಸಮಾರಂಭ ಹಾಗೂ ಚಟುವಟಿಕೆ ಮತ್ತು ಈ ನಿಯಮಗಳನ್ನು ಉಲ್ಲಂಘಿಸಿದವರಿಗೆ ವಿಧಿಸುವ ದಂಡಗಳ ಬಗೆಗೆ ವಿವರಿಸಲಾಗಿದೆ. ಕೆಲವೊಂದನ್ನು ಹೊರತುಪಡಿಸಿ, ಸಾಮಾನ್ಯವಾಗಿ ಸೂರ್ಯೋದಯದಿಂದ ಸೂರ್ಯಾಸ್ತದ ವರೆಗೆ ಎಲ್ಲಾ ಸಂರಕ್ಷಿತ ಸ್ಮಾರಕಗಳು ಮುಕ್ತವಾಗಿ ತೆರೆದಿರುತ್ತವೆ. ಈ ಸಮಯದೊಳಗೆ ಕೆಲವೊಂದು ನಿರ್ದಿಷ್ಟ ಷರತ್ತುಗಳೊಂದಿಗೆ ಸ್ಮಾರಕಗಳನ್ನು ವೀಕ್ಷಿಸಬಹುದು. ಆಯ್ದ ಕೆಲವೊಂದು ಸ್ಮಾರಕಗಳಿಗೆ ೫/- ರೂಪಾಯಿ ಹಾಗೂ ವಿಶ್ವ ಪರಂಪರೆಯ ಸ್ಮಾರಕಗಳಿಗೆ ೧೦/-ರೂಪಾಯಿ ಪ್ರವೇಶ ಶುಲ್ಕವಿದೆ.

೭ನೆಯ ನಿಯಮದ ೧ನೆಯ ಉಪ-ನಿಯಮದಂತೆ ಸ್ಮಾರಕಗಳಲ್ಲಿ ಯಾವುದೇ ಸಭೆ, ಸ್ವಾಗತ ಸಮಾರಂಭ, ಸಂತೋಷ ಕೂಟ, ಸಮ್ಮೇಳನಗಳನ್ನು ಕೇಂದ್ರ ಸರಕಾರದ ಅಪ್ಪಣೆಯಿಲ್ಲದೆ ನಡಸುವಂತಿಲ್ಲ. ಆದರೆ ಧಾರ್ಮಿಕ ಸಂಪ್ರದಾಯಗಳ ಅನುಕರಣೆಯ ಸಭೆ, ಸ್ವಾಗತ ಸಮಾರಂಭ, ಸಂತೋಷ ಕೂಟ, ಸಮ್ಮೇಳನಗಳಿಗೆ ಈ ೧ನೆಯ ಉಪ-ನಿಯಮ ಅನ್ವಯವಾಗುವದಿಲ್ಲವೆಂದು ಇದೇ ನಿಯಮದ ೨ನೆಯ ಉಪ-ನಿಯಮದಲ್ಲಿ ಹೇಳಿದೆ.

೮ನೆಯ ನಿಯಮದಂತೆ ಯಾವನೇ ವ್ಯಕ್ತಿ ೧)ಸ್ಮಾರಕ ಅಥವಾ ಅದರ ಯಾವುದೇ ಭಾಗಕ್ಕೆ ಹಾನಿ ಅಥವಾ ಧಕ್ಕೆಮಾಡುವುದು; ೨) ಮದ್ದು-ಗುಂಡು ವಿಸರ್ಜಿಸುವದು; ೩) ಅಡಿಗೆ ಮಾಡುವುದು; ೪) ಪುರಾತತ್ವ ಅಧಿಕಾರಿಯ ಅಪ್ಪಣೆಯಿಲ್ಲದೆ ಯಾವುದೇ ವಸ್ತುಗಳನ್ನು ಮಾರಾಟಕ್ಕಾಗಿ ಹೊತ್ತುಕೊಂಡು ತಿರುಗುವುದು, ವ್ಯಾಪಾರ ಮಾಡುವುದು, ಅವುಗಳ ಪ್ರಚಾರ, ಜಾಹಿರಾತುಗಳ ಪ್ರದರ್ಶನ ಮಾಡುವುದು, ಹಣ-ಕಾಸಿನ ಲಾಭಕ್ಕಾಗಿ ವೀಕ್ಷಕರಿಗೆ ಮಾರ್ಗದರ್ಶನ ಮಾಡುವುದು; ೫) ಭಿಕ್ಷೆ ಬೇಡುವುದು; ೬) ಸ್ಮಾರಕದ ಯಾವುದೇ ಪರಿಪಾಠ, ಸಂಪ್ರದಾಯ, ಅನುಕರಣೆಗಳನ್ನು ಉಲ್ಲಂಘಿಸುವುದು ಮತ್ತು ೭) ಸ್ಮಾರಕದ ನಿರ್ವಹಣೆಯ ಹೊರತಾಗಿ ಯಾವುದೇ ಪ್ರಾಣಿ ಅಥವಾ ವಾಹನಗಳನ್ನು ತರುವುದನ್ನು ನಿರ್ಬಂದಿಸಿದೆ.

ಸಂರಕ್ಷಿತ ಪ್ರದೇಶದಲ್ಲಿ ಕಟ್ಟಡ ನಿರ್ಮಾಣ ಹಾಗೂ ಅಂಥ ಯಾವುದೇ ಕಾರ್ಯಾಚರಣೆ ನಿಯಂತ್ರಿಸುವುದನ್ನು ೧೦-೨೩ನೆಯ ನಿಯಮಗಳಲ್ಲಿ ವಿವರಿಸಲಾಗಿದೆ. ನಿಯಮ ೧೦ರ ೧ನೆಯ ಉಪ-ನಿಯಮದ ಮೇರೆಗೆ ಯಾವನೇ ವ್ಯಕ್ತಿಯು ಕೇಂದ್ರ ಸರಕಾರದ ಅನುಮತಿ ಇಲ್ಲದೆ ಸಂರಕ್ಷಿತ ಪ್ರದೇಶದಲ್ಲಿ ಯಾವುದೇ ಕಟ್ಟಡದ ನಿರ್ಮಾಣ ಹಾಗೂ ಗಣಿಗಾರಿಕೆಗಳನ್ನು ಮಾಡುವಂತಿಲ್ಲ. ಯಾವುದೇ ಕಟ್ಟಡದ ನಿರ್ಮಾಣ ಹಾಗೂ ಗಣಿಗಾರಿಕೆಗಳನ್ನು ಪ್ರಾರಂಭಿಸುವ ಮೂರು ತಿಂಗಳು ಮುಂಚೆ ಅನುಮತಿಯನ್ನು ಪಡೆಯಲು ನಿಗದಿತ ಅರ್ಜಿಯನ್ನು ಕೇಂದ್ರ ಸರಕಾರಕ್ಕೆ ಸಲ್ಲಿಸಬೇಕೆಂದು ಇದೇ ನಿಯಮದ ೨ನೆಯ ಉಪ-ನಿಯಮದಲ್ಲಿ ಹೇಳಿದೆ.

ಸಂರಕ್ಷಿತ ಸ್ಮಾರಕಗಳ ಹತ್ತಿರ ಗಣಿಗಾರಿಕೆ, ಕಟ್ಟಡ ನಿರ್ಮಾಣ ಹಾಗೂ ನಿಷೇಧಿತ ಮತ್ತು ನಿಯಂತ್ರಿತ ಪ್ರದೇಶಗಳ ವಿವರಗಳನ್ನು ನಿಯಮ ೩೧-೩೯ಗಳಲ್ಲಿ ಹೇಳಲಾಗಿದೆ. ನಿಯಮ ೩೧-೩೨ರಲ್ಲಿ ಕೇಂದ್ರ ಸರಕಾರವು ಸಂರಕ್ಷಿತ ಸ್ಮಾರಕದ ಹತ್ತಿರದ ಅಥವಾ ಪಕ್ಕದಲ್ಲಿರುವ ಪ್ರದೇಶವನ್ನು ನಿಷೇಧಿತ ಮತ್ತು ನಿಯಂತ್ರಿತ ಪ್ರದೇಶಗಳೆಂದು ಘೋಷಿಸುವ ಉದ್ದೇಶ ಹಾಗೂ ಅದರ ವಿಧಾನಗಳನ್ನು ಹೇಳಿದೆ[*].

[*] ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂಖ್ಯೆ **ಎಸ್.ಒ. ೧೭೬೪ ದಿನಾಂಕ ೧೬.೦೬.೧೯೯೨ರ** ಮೇರೆಗೆ ಸಂರಕ್ಷಿತ ಪರಿಮಿತಿಗಳಿಂದ ಒಂದು ನೂರು ಮೀಟರಗಳವರೆಗಿನ ಪ್ರದೇಶವನ್ನು ಹಾಗೂ ಅದರಾಚೆ ಎರಡು ನೂರು ಮೀಟರಗಳ ದೂರವಿರುವ ರಕ್ಷಿತ ಸ್ಮಾರಕಗಳ ಸಮೀಪದ ಅಥವಾ ಅವುಗಳ ಅಕ್ಕಪಕ್ಕದ ಪ್ರದೇಶವನ್ನು ಗಣಿಗಾರಿಕೆ ಕಾರ್ಯಾಚರಣೆ ಮತ್ತು ಕಟ್ಟಡ ನಿರ್ಮಾಣ ಇವೆರಡೂ ಉದ್ದೇಶಗಳಿಗಾಗಿ ಕ್ರಮವಾಗಿ ನಿಷೇಧಿತ ಮತ್ತು ನಿಯಂತ್ರಿತ ಪ್ರದೇಶಗಳೆಂದು ಏನ್ಸಿಯಂಟ್ ಮಾನ್ಯುಮೆಂಟ್ಸ್ ಅಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಅಂಡ್ ರಿಮೆನ್ಸ್ ರೂಲ್ಸ್, ೧೯೫೯ರ ನಿಯಮ ೩೨ರ ಮೇರೆಗೆ ಘೋಷಿಸಲಾಗಿದೆ.

ನಿಯಮ ೩೩ರಂತೆ ಪುರಾತತ್ವ ಅಧಿಕಾರಿಯನ್ನು ಹೊರತುಪಡಿಸಿ ಯಾವುನೇ ವ್ಯಕ್ತಿ (ಎ)ನಿಷೇಧಿತ ಅಥವಾ (ಬಿ) ನಿಯಂತ್ರಿತ ಪ್ರದೇಶಗಳಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣದ ಮಹಾ ನಿರ್ದೇಶಕರ ಲೈಸನ್ಸ ಇಲ್ಲದೆ ಯಾವುದೇ ಕಟ್ಟಡ ನಿರ್ಮಾಣ ಹಾಗೂ ಗಣಿಗಾರಿಕೆಯನ್ನು ಮಾಡುವಂತಿಲ್ಲ. ನಿಯಮ ೩೪ರಂತೆ ಯಾವುದೇ ಕಟ್ಟಡ ನಿರ್ಮಾಣ ಹಾಗೂ ಗಣಿಗಾರಿಕೆಯನ್ನು ಪ್ರಾರಂಭಿಸುವ ದಿನಾಂಕದಿಂದ

ಮೂರು ತಿಂಗಳು ಮೊದಲು ಅದನ್ನು ಪ್ರಾರಂಭಿಸಲು ಅನುಮತಿಯನ್ನು ಪಡೆಯಲು ನಿಗದಿತ ಅರ್ಜಿ ಸಲ್ಲಿಸಬೇಕು. ೩೫ನೆಯ ೧ನೆಯ ಉಪ-ನಿಯಮದಲ್ಲಿ ಲೈಸನ್ಸನ್ನು ಕೊಡುವ ಇಲ್ಲವೆ ನಿರಾಕರಿಸುವ ಅಧಿಕಾರವನ್ನು ನೀಡಿದೆ ಹಾಗೂ ೨ನೆಯ ಉಪ-ನಿಯಮದಲ್ಲಿ ಲೈಸನ್ಸನ್ನು ಕೊಡುವಾಗ ವಿಧಿಸುವ ಷರತ್ತುಗಳನ್ನು ವಿವರಿಸಿದೆ. ೩೬ನೆಯ ನಿಯಮದಲ್ಲಿ ಲೈಸನ್ಸಿನಲ್ಲಿ ವಿಧಿಸಿದ ಷರತ್ತುಗಳನ್ನು ಉಲ್ಲಂಘಿಸಿದಾಗ ಅದನ್ನು ರದ್ದುಗೊಳಿಸುವ ಅಧಿಕಾರ ನೀಡಿದೆ.

ನಿಯಮ ೩೮ರ ೧ನೆಯ ಉಪ-ನಿಯಮದಂತೆ ಕೇಂದ್ರ ಸರಕಾರವು, ನಿಷೇಧಿತ ಹಾಗೂ ನಿಯಂತ್ರಿತ ಪ್ರದೇಶಗಳಲ್ಲಿ ೩೫ನೆಯ ನಿಯಮದಡಿ ನೀಡಲಾದ ಲೈಸನ್ಸನಲ್ಲಿರುವ ಯಾವುದೇ ಷರತ್ತುಗಳನ್ನು ಉಲ್ಲಂಘಿಸಿ ನಿರ್ಮಿಸಿದ ಕಟ್ಟಡ ಅಥವಾ ಯಾವುದೇ ಭಾಗವನ್ನು ತೆರವು ಗೊಳಿಸಲು ಆದೇಶಿಸಬಹುದು. ಇದೇ ನಿಯಮದ ೨ನೆಯ ಉಪ-ನಿಯಮದಂತೆ, ಒಡೆಯ ಅಥವಾ ಅನುಭೋಗ ದಾರನು ೧ನೆಯ ಉಪ-ನಿಯಮದಡಿ ಮಾಡಿದ ಆದೇಶ ವನ್ನು ನಿರಾಕರಿಸಿದರೆ ಅಥವಾ ಪಾಲಿಸಲಾಗದಿದ್ದಲ್ಲಿ, ಕೇಂದ್ರ ಸರಕಾರವು ಕಟ್ಟಡ ಅಥವಾ ಅದರ ಭಾಗವನ್ನು ತೆರವು ಗೊಳಿಸಲು ಜಿಲ್ಲಾ ದಂಡಾಧಿಕಾರಿಗೆ ಆದೇಶಿಸಬಹುದು ಹಾಗೂ ಒಡೆಯ ಅಥವಾ ಅನುಭೋಗದಾರನು ಅದರ ವೆಚ್ಚವನ್ನು ಭರಿಸಬೇಕು.

ಸ್ಮಾರಕಗಳ ಪ್ರತಿ (ರೇಖಾ ಚಿತ್ರ, ಛಾಯಾಚಿತ್ರ, ಪಡಿಯಚ್ಚು,) ಮತ್ತು ಚಿತ್ರೀಕರಣಗಳ ಬಗೆಗೆ ನಿಯಮ ೪೦-೪೬ರಲ್ಲಿ ವಿವರಿಸಲಾಗಿದೆ. ೪೦ನೆಯ ನಿಯಮದ ಮೇರೆಗೆ, ಪುರಾತತ್ವ ಅಧಿಕಾರಿ ಅಥವಾ ಅವನಿಂದ ಅಧಿಕೃತಗೊಂಡ ಅಧಿಕಾರಿಯನ್ನು ಹೊರತುಪಡಿಸಿ ಬೇರೆ ಯಾವನೇ ವ್ಯಕ್ತಿ ಭಾರತೀಯ ಪುರಾತತ್ವ ಸರ್ವೇಕ್ಷಣದ ಮಹಾ ನಿರ್ದೇಶಕರು ಪುರಾತತ್ವ ಅಧಿಕಾರಿಯು ನಿಬಂಧನೆ ಹಾಗೂ ಷರತ್ತುಗಳ ಮೇರೆಗೆ ಕೊಡುವ ಅನುಮತಿ ಇಲ್ಲದೆ ಸ್ಮಾರಕ ಅಥವಾ ಅದರ ಯಾವುದೇ ಭಾಗದ ಪ್ರತಿಯನ್ನು ಮಾಡುವಂತಿಲ್ಲವೆಂದು ಆದೇಶಿಸಬಹುದು. ನಿಯಮ ೪೧ರಲ್ಲಿ ಪ್ರತಿ ಮಾಡಲು ಬೇಕಾದ ಅನುಮತಿ ಹಾಗೂ ಅದರ ಷರತ್ತುಗಳನ್ನು ವಿವರಿಸಲಾಗಿದೆ. ಪುರಾತತ್ವ ಅಧಿಕಾರಿಯನ್ನು ಹೊರತುಪಡಿಸಿ, ಯಾವನೇ ವ್ಯಕ್ತಿ ಸ್ಮಾರಕಗಳ ಪ್ರತಿಯನ್ನು ಮಾಡುವಾಗ: (ಎ) ಕ್ಯಾಮರಾ-ಸ್ಟ್ಯಾಂಡ, ಸ್ಟೂಲ್, ಟೇಬಲ್, ದೊಡ್ಡ ಡ್ರಾಯಿಂಗ ಬೋರ್ಡ್, ಈಸಲ್(ಮರದ ಚೌಕಟ್ಟು) ಅಥವಾ ಅಂತಹ ಯಾವುದೇ ಸಾಮಗ್ರಿಗಳನ್ನು ಸ್ಮಾರಕದಲ್ಲಿ ತರುವಂತಿಲ್ಲ ಅಥವಾ ಸ್ಮಾರಕದ ಪರಿಸರದಲ್ಲಿ ಉಪಯೋಗಿಸು ವಂತಿಲ್ಲ (ಬಿ) ಸಾರುವೆಯನ್ನು (ಸ್ಕ್ಯಾಫೋಲ್ಡಿಂಗ) ನಿಲ್ಲಿಸುವಂತಿಲ್ಲ (ಸಿ) ಕ್ಯಾಮರಾದೊಂದಿಗೆ ಅಳವಡಿಸಿದ ಫ್ಲಾಷ್ ಹೊರಸೂಸುವ ಬೆಳಕನ್ನು ಹೊರತುಪಡಿಸಿ ಯಾವುದೇ ರೀತಿಯ ಕೃತಕ ಬೆಳಕನ್ನು ಉಪಯೋಗಿಸು ವಂತಿಲ್ಲ ; (ಡಿ) ನೀರು, ಎಣ್ಣೆ, ಗ್ರೀಸ್, ಅಥವಾ ಅಂತಹ ಪದಾರ್ಥಗಳನ್ನು ಸ್ಮಾರಕ ಅಥವಾ ಅದರ ಯಾವುದೇ ಭಾಗಕ್ಕೆ ಹಚ್ಚುವಂತಿಲ್ಲ; (ಇ) ಸ್ಮಾರಕ ಅಥವಾ ಯಾವುದೇ ಭಾಗದ ನೇರ ಪ್ರತಿ, ಅಚ್ಚು, ಮುದ್ರೆಗಳನ್ನು ಮಾಡುವಂತಿಲ್ಲ.

ಇದೇ ರೀತಿ ನಿಯಮ ೪೨ರ ಮೇರೆಗೆ ಪುರಾತತ್ವ ಅಧಿಕಾರಿ ಅಥವಾ ಅವನಿಂದ ಅಧಿಕೃತಗೊಂಡ ಅಧಿಕಾರಿ ಯನ್ನು ಹೊರತುಪಡಿಸಿ ಬೇರೆ ಯಾವನೇ ವ್ಯಕ್ತಿ ಮಹಾ ನಿರ್ದೇಶಕರ ಲೈಸನ್ಸ್ ಇಲ್ಲದೆ ಸ್ಮಾರಕದಲ್ಲಿ ಚಿತ್ರೀಕರಣ ಮಾಡುವಂತಿಲ್ಲ. ಚಿತ್ರೀಕರಣ ಮಾಡಬಯಸುವ ಪ್ರತಿಯೊಬ್ಬನು ಚಿತ್ರೀಕರಣ ಪ್ರಾರಂಭಿಸುವ ದಿನಾಂಕದ ಮೂರು ತಿಂಗಳು ಮುಂಚೆ ನಿಗದಿತ ಅರ್ಜಿಯನ್ನು ಮಹಾ ನಿರ್ದೇಶಕರಿಗೆ ಸಲ್ಲಿಸಿ ಲೈಸನ್ಸನ್ನು ಪಡೆಯಬೇಕೆಂದು ನಿಯಮ ೪೩ರಲ್ಲಿ ಹೇಳಿದೆ. ನಿಯಮ ೪೪ರ ೧ನೆಯ ಉಪ-ನಿಯಮದ ಮೇರೆಗೆ ಮಹಾ ನಿರ್ದೇಶಕರು ಲೈಸನ್ಸನ್ನು ಕೊಡಬಹುದು ಅಥವಾ ನಿರಾಕರಿಸಬಹುದು. ಆದರೆ ಶಿಕ್ಷಣ ಅಥವಾ ಸ್ಮಾರಕದ ಪ್ರಕಟಣೆಯ ಉದ್ದೇಶವನ್ನು ಹೊರತುಪಡಿಸಿ, ಮಹಾ ನಿರ್ದೇಶಕರು ಸಂರಕ್ಷಿಸಿದ ಸ್ಮಾರಕದ ಒಳಭಾಗದ ಚಿತ್ರೀಕರಣಕ್ಕೆ ಲೈಸನ್ಸನ್ನು ಕೊಡುವುದಿಲ್ಲ. ೨ನೆಯ ಉಪ-ನಿಯಮದಲ್ಲಿ ಲೈಸನ್ಸನ್ನು ಕೊಡುವಾಗ ವಿಧಿಸುವ ಕೆಲವು ಷರತ್ತುಗಳ ವಿವರಗಳಿವೆ. (ಎ) ನೀಡಿದ ಲೈಸನ್ಸನ್ನು ವರ್ಗಾವಣೆ ಮಾಡುವಂತಿಲ್ಲ ಹಾಗೂ ಅದರಲ್ಲಿ ನಿಗದಿಗೊಳಿಸಿದ ಅವಧಿಗೆ ಸೀಮಿತವಾಗಿರುತ್ತದೆ. (ಬಿ) ಲೈಸನ್ಸಧಾರಿ ಅಥವಾ ಅವನ ಗುಂಪಿನ ಯಾವನೇ ಸದಸ್ಯನು ಸ್ಮಾರಕದ ಯಾವುದೇ ಭಾಗ ಅಥವಾ ಅದಕ್ಕೆ ಹೊಂದಿ ಕೊಂಡಿರುವ ಹುಲ್ಲಿನ ಹಾಸುಗೆ ಅಥವಾ ಉದ್ಯಾನಗಳಿಗೆ ಧಕ್ಕೆಯನ್ನು ಮಾಡುವಂತಿಲ್ಲ (ಸಿ) ಚಿತ್ರೀಕರಣದ ಕಾರ್ಯ ವನ್ನು ಲೈಸನ್ಸನಲ್ಲಿ ನಿಗದಿಗಳಿಸಿದ ಸ್ಮಾರಕದ ಭಾಗಕ್ಕಷ್ಟೇ ಸೀಮಿತ ಗೊಳಿಸಬೇಕು (ಡಿ) ನೀರು, ಎಣ್ಣೆ, ಗ್ರೀಸ್, ಅಥವಾ ಅಂತಹ ಪದಾರ್ಥಗಳನ್ನು ಸ್ಮಾರಕದ ಯಾವುದೇ ಭಾಗಕ್ಕೆ ಹಚ್ಚುವಂತಿಲ್ಲ (ಇ) ವಿದ್ಯುತ್ ಉತ್ಪಾದಿಸುವ ಉಪಕರಣ (ಜನರೇಟರ)ವನ್ನು ಸ್ಮಾರಕ ಅಥವಾ ಅದಕ್ಕೆ ಹೊಂದಿ ಕೊಂಡಿರುವ ಹುಲ್ಲಿನ ಹಾಸುಗೆ ಅಥವಾ ಉದ್ಯಾನಗಳಿಂದ ದೂರವಿಡಬೇಕು (ಎಫ್) ಚಿತ್ರೀಕರಣದ ಕಾರ್ಯವು ಸ್ಮಾರಕದ ಪರಿಸಿದಲ್ಲಿ ನ್ಯಾಯ ಸಮ್ಮತವಾಗಿರುವ ವ್ಯಕ್ತಿಗಳ ಚಲನ-ವಲನ ಗಳಿಗೆ ಅಡ್ಡಪಡಿಸು ವಂತಿಲ್ಲ ಅಥವಾ ನಿರ್ಬಂಧಿಸುವಂತಿಲ್ಲ ಹಾಗೂ (ಜಿ) ಮಹಾ ನಿರ್ದೇಶಕರು ಲೈಸನ್ಸಿನಲ್ಲಿ ವಿಧಿಸಬಹುದಾದ ಯಾವುದೇ ಷರತ್ತು.

ಸ್ಮಾರಕಗಳ ಪ್ರತಿ(ರೇಖಾ ಚಿತ್ರ, ಛಾಯಾಚಿತ್ರ, ಪಡಿಯಚ್ಚು,) ತೆಗೆಯುವ ಅನುಮತಿ ಮತ್ತು ಸ್ಮಾರಕಗಳಲ್ಲಿ ಚಿತ್ರೀಕರಣ ಮಾಡುವುದಕ್ಕೆ ಬೇಕಾದ ಲೈಸನ್ಸನ್ನು ಭಾರತೀಯ ಪುರಾತತ್ವ ಸರ್ವೇಕ್ಷಣದ ಪ್ರತಿಯೊಂದು ವಲಯದ ಅಧೀಕ್ಷಕ ಪುರಾತತ್ವವಿದರು ನೀಡುತ್ತಾರೆ

**ಇಂಡಿಯನ್ ಟ್ರಜರ್ ಟ್ರೋವ್ ಆಕ್ಟ್, ೧೮೭೮ :**

ಭಾರತದೇಶಾದ್ಯಾಂತ ಆಗಿಂದಾಗ್ಗೆ ಅನೇಕ ನಿಧಿಗಳು ಆಕಸ್ಮಿಕವಾಗಿ ದೊರೆಯುತ್ತವೆ. ಇವುಗಳಲ್ಲಿ ಹೆಚ್ಚಾಗಿ ನಾಣ್ಯ ಹಾಗೂ ಪದಕ, ತಾಮ್ರ ಶಾಸನ ಫಲಕ, ಆಭರಣ ಮತ್ತು ವಿರಳವಾಗಿ ಮೂರ್ತಿಗಳಿದ್ದು ಅವು ಐತಿಹಾಸಿಕ ಹಾಗೂ ಪುರಾತತ್ವಿಕ ಮಹತ್ವಗಳುಳ್ಳವಾಗಿರುತ್ತವೆ. ಇಂತಹ ನಿಧಿಗಳನ್ನು ಸಂರಕ್ಷಿಸಲು ಈ ಇಂಡಿಯನ್ ಟ್ರಜರ್ ಟ್ರೋವ್ ಆಕ್ಟ್, ೧೮೭೮ ಎಂಬ ಕಾನೂನನ್ನು ಜಾರಿಗೆ ತರಲಾಗಿದೆ.

ಈ ಅಧಿನಿಯಮದ ೩ನೆಯ ಕಲಂನಲ್ಲಿ ನಿಧಿ, ಕಲೆಕ್ಟರ್(ಜಿಲ್ಲಾಧಿಕಾರಿ) ಹಾಗೂ ನಿಧಿ ದೊರೆತ ಭೂಮಿಯ ಒಡೆಯರ ಸ್ವರೂಪಗಳನ್ನು ಹೇಳಲಾಗಿದೆ. ಭೂಮಿಯಲ್ಲಿ ಅಥವಾ ಅದಕ್ಕೆ ಲಗತ್ತಾದ ಯಾವುದೇ ವಸ್ತುವಿನಲ್ಲಿ ಗೌಪ್ಯವಾಗಿಟ್ಟ ಯಾವುದೇ ಮೌಲ್ಯದ ಯಾವುದೇ ವಸ್ತುವನ್ನು ನಿಧಿಯೆಂದು ಪರಿಗಣಿಸಲಾಗಿದೆ.

೪ನೆಯ ಕಲಂನಲ್ಲಿ ನಿಧಿ ಕಂಡವನು ಮಾಡಬೇಕಾದ ಕರ್ತವ್ಯಗಳನ್ನು ಹೇಳಿದೆ. ಈ ೪ನೆಯ ಕಲಂನಂತೆ ಹತ್ತು ರೂಪಾಯಿ ಮೊಬಲಗು ಅಥವಾ ಅದಕ್ಕಿಂತ ಹೆಚ್ಚಿನ ಬೆಲೆ ಯುಳ್ಳ ಯಾವುದೇ ನಿಧಿ ಕಂಡಾಗ, ನಿಧಿ ಕಂಡವನು ಆದಷ್ಟು ಬೇಗ (ಅ) ನಿಧಿಯ ಸ್ವರೂಪ ಹಾಗೂ ಮೊಬಲಗು ಅಥವಾ ಅಂದಾಜು ಬೆಲೆ (ಬಿ) ನಿಧಿ ಸಿಕ್ಕ ಸ್ಥಳ (ಸಿ) ನಿಧಿ ಕಂಡುಬಂದ ದಿನಾಂಕದ ವಿವರಗಳನ್ನು ಲಿಖಿತ ರೂಪದಲ್ಲಿ ಜಿಲ್ಲಾಧಿಕಾರಿಗೆ ತಿಳಿಸಬೇಕೆಂದು ಹಾಗೂ ಆ ನಿಧಿಯನ್ನು ಅತಿ ಸಮೀಪದ ಸರಕಾರಿ ಖಜಾನೆಯಲ್ಲಿ ಇಡಬೇಕೆಂದು ಅಥವಾ ಆ ನಿಧಿಯನ್ನು ಜಿಲ್ಲಾಧಿಕಾರಿಯು ಕಾಲಕಾಲಕ್ಕೆ ಹೇಳಿದ ಸಮಯ ಮತ್ತು ಸ್ಥಳದಲ್ಲಿ ಹಾಜರುಪಡಿಸಲು ಜಿಲ್ಲಾಧಿಕಾರಿಯು ಸೂಕ್ತವೆಂದು ಭಾವಿಸುವ ಭದ್ರತೆಯನ್ನು ಕೊಡಬೇಕು.

ಕಲಂ ೫-೮ರಲ್ಲಿ ಜಿಲ್ಲಾಧಿಕಾರಿಯು ನಿಧಿ ಕಂಡುಬಂದ ಮೇಲೆ ಅದರ ವಿವಿಧ ವಿಷಯಗಳನ್ನು ವಿಚಾರಿಸುವ ಕ್ರಮಗಳನ್ನು ಹೇಳಿದೆ. ಜಿಲ್ಲಾಧಿಕಾರಿಯು ೪ನೆಯ ಕಲಂನ ಮೇರೆಗೆ ಸೂಚನೆಯನ್ನು ಸ್ವೀಕರಿಸಿದ ಮೇಲೆ ನಿಧಿ ಕಂಡುಬಂದ ದಿನಾಂಕ, ನಿಧಿಯ ಸ್ವರೂಪ, ಮೊಬಲಗು ಹಾಗೂ ಅಂದಾಜು ಬೆಲೆ, ಕಂಡುಬಂದ ಸ್ಥಳ ಮತ್ತು ಆ ನಿಧಿಯು ಸಂಪೂರ್ಣ ಅಥವಾ ಭಾಗಶಃ ತಮಗೆ ಸೇರಿದುದೆಂದು ಹಕ್ಕು-ಕೋರುವ(ಕ್ಲೇಮ) ಎಲ್ಲಾ ವ್ಯಕ್ತಿಗಳು ಇಲ್ಲವೆ ಅವರ ಪ್ರತಿನಿಧಿಗಳು ನಿಗದಿ ಪಡಿಸಿದ ದಿನಾಂಕ ಹಾಗೂ ಸ್ಥಳದಲ್ಲಿ ಜಿಲ್ಲಾಧಿಕಾರಿಯ ಮುಂದೆ ಖುದ್ದಾಗಿ ಹಾಜರಾಗಬೇಕೆಂಬ ಅಧಿಸೂಚನೆಯನ್ನು ಜಿಲ್ಲಾಧಿಕಾರಿಯು ಪ್ರಕಟಿಸಬೇಕೆಂದು ೫ನೆಯ ಕಲಂನ (ಅ)ನಲ್ಲಿ ಹೇಳಿದೆ. ಇದೇ ಕಲಂನ (ಬ)ನಲ್ಲಿ ನಿಧಿಯು ಕಂಡುಬಂದ ಸ್ಥಳವು, ಕಂಡುಬಂದ ದಿನಾಂಕದಂದು ಕಂಡುಹಿಡಿದವನಕ್ಕಿಂತ ಮೊದಲು ಬೇರೊಬ್ಬರ ವಶದಲ್ಲಿತ್ತೆಂದು ಜಿಲ್ಲಾಧಿಕಾರಿಗೆ ಕಂಡುಬಂದರೆ, ಅಂಥ ವ್ಯಕ್ತಿ ಸಹ ಹಾಜರ್ ಆಗಬೇಕೆನ್ನುವ ವಿಶೇಷ ಸೂಚನೆಯನ್ನು ಜಾರಿ ಮಾಡಬೇಕೆಂದು ತಿಳಿಸಿದೆ.

ಯಾವನೇ ವ್ಯಕ್ತಿಯು ನಿಧಿಯು ಸಿಕ್ಕಿದ ಸ್ಥಳದ ಒಡೆಯನೆಂದು ಅಥವಾ ಅನ್ಯತಾ ಅಂಥ ನಿಧಿ ಸಂಪೂರ್ಣ ಅಥವಾ ಅದರ ಯಾವುದೇ ಭಾಗಕ್ಕೆ ಯಾವುದೇ ಹಕ್ಕನ್ನು ಹೊಂದಿರುವ ಮತ್ತು ೫ನೆಯ ಕಲಂನ ಮೇರೆಗೆ ಹೊರಡಿಸಿದ ಅಧಿಸೂಚನೆಯಂತೆ ಹಾಜರಾಗದೇ ಇರುವ ಯಾರೇ ವ್ಯಕ್ತಿ ಅಂತಹ ಹಕ್ಕನ್ನು ಕಳೆದುಕೊಳ್ಳುತ್ತಾರೆಂದು ೬ನೆಯ ಕಲಂನಲ್ಲಿ ಹೇಳಿದೆ.

೭ನೆಯ ಕಲಂನಂತೆ ಅಧಿಸೂಚಿಸಿದ ದಿನದಂದು, ಜಿಲ್ಲಾಧಿಕಾರಿಯು ತನ್ನ ಮುಂದೆ ನಿಧಿಯನ್ನು ಹಾಜರಪಡಿಸಿ (ಅ) ಅಂಥ ನಿಧಿಯು ಯಾರಿಂದ, ಯಾವ ಸ್ಥಳದಲ್ಲಿ ಹಾಗೂ ಯಾವ ಸಂದರ್ಭಗಳಲ್ಲಿ ಕಂಡುಬಂದಿದೆ ಹಾಗೂ (ಬ) ಸಾಧ್ಯವಾದಷ್ಟು ಮಟ್ಟಿಗೆ ನಿಧಿಯನ್ನು ಯಾರು ಗುಪ್ತವಾಗಿಟ್ಟಿದ್ದರೋ ಹಾಗೂ ಅದನ್ನು ಯಾವ ಪರಿಸ್ಥಿಯಲ್ಲಿ ಅದನ್ನು ಗುಪ್ತವಾಗಿಡಲಾಗಿತ್ತೋ ಎಂದು ವಿಚಾರಿಸಿ ನಿರ್ಧರಿಸಬೇಕು.

ಕಂಡುಬಂದ ನಿಧಿಯು ಒಡೆಯನಿಲ್ಲದ ನಿಧಿಯೆಂದು ಘೋಷಿಸಿಸುವ ಅಧಿಕಾರವನ್ನು ಕಲಂ ೯ರಲ್ಲಿ ಹೇಳಿದೆ. ಜಿಲ್ಲಾಧಿಕಾರಿಯು ಸಮಂಜಸವಾಗಿ ವಿಚಾರಿಸಿ ನಿಧಿಯುನ್ನು ಹಾಗೆ ಗುಪ್ತವಾಗಿ ಇಡಲಾಗಿದೆಯೆಂದು ನಂಬಲು ಯಾವುದೇ ಕಾರಣವು ಕಂಡುಬರದಿದ್ದರೆ ಅಥವಾ ೮ನೆಯ ಕಲಂನಡಿ ನಿರ್ಧರಿಸಿದ ಸಮಯದೊಳಗಡೆ ಯಾವುದೇ ದಾವೆಯನ್ನು ಹೂಡದಿದ್ದಲ್ಲಿ ಅಥವಾ ನಿರ್ಧರಿಸಿದ ಸಮಯದಲ್ಲಿ ದಾವೆ ಹೂಡಿ ಮತ್ತು ವಾದಿಯ ಹಕ್ಕು-ಕೋರಿಕೆಯನ್ನು ಅಂತಿಮವಾಗಿ ತಿರಸ್ಕರಿಸಿದಾಗ ಜಿಲ್ಲಾಧಿಕಾರಿಯು ಆ ನಿಧಿಯನ್ನು ಒಡೆಯನಿಲ್ಲದ ನಿಧಿಯಂದು ಘೋಷಿಸಬಹುದು ಹಾಗೂ ಈ ಘೋಷಣೆಯಿಂದ ಅಸಂತುಷ್ಟರಾದ ಯಾವನೇ ವ್ಯಕ್ತಿಯು ಎರಡು ತಿಂಗಳೊಳಗಾಗಿ ಇದರ ವಿರುದ್ಧ ಮುಖ್ಯ ನಿಯಂತ್ರಣ ರಾಜಸ್ವಪ್ರಾಧಿಕಾರಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು.

ಕಲಂ ೧೧-೧೫ರಲ್ಲಿ ನಿಧಿಯನ್ನು ಕಂಡುಹಿಡಿದವನಿಗೆ ಹಾಗೂ ಅದು ಕಂಡುಬಂದ ಸ್ಥಳದ ಒಡೆಯನಿಗೆ ನಿಧಿಯನ್ನು ವಿಭಜಿಸುವ ಕ್ರಮಗಳನ್ನು ವಿವರಿಸಿದೆ. ೧೧ನೆಯ ಕಲಂನಂತೆ ೫ನೆಯ ಕಲಂನ ಮೇರೆಗೆ ಪ್ರಕಟಿಸಿದ ಅಧಿಸೂಚನೆಯಂತೆ ಯಾರಾದರೂ ಹಾಜರಿಲ್ಲದೇ ಇರುವಾಗ ಹಾಗೂ ನಿಧಿ ದೊರೆತ ಸ್ಥಳದ ಒಡೆಯನೆಂದು, ತಮಗೂ ನಿಧಿಯ ಭಾಗ ಸೇರಬೇಕೆಂದು ಕೇಳುವವರ್ಯಾರು ಇಲ್ಲದೆ ಇರುವಾಗ, ಜಿಲ್ಲಾಧಿಕಾರಿಯು ಅಂಥ ನಿಧಿಯನ್ನು ಆ ನಿಧಿ ಕಂಡವನಿಗೆ ಕೊಡಬಹುದು.

೧೨ನೆಯ ಕಲಂನಂತೆ ಕೇವಲ ಒಬ್ಬನೇ ಒಬ್ಬ ವ್ಯಕ್ತಿಯು ನಿಧಿ ಕಂಡುಬಂದ ಸ್ಥಳದ ಒಡೆಯನೆಂದು ಹಕ್ಕು-ಕೋರಿದಾಗ ಮತ್ತು ನಿಧಿ ಕಂಡವನು ಅದನ್ನು ಒಪ್ಪಿಕೊಂಡಾಗ ಮತ್ತು ಅವರಿಬ್ಬರ ಮಧ್ಯೆ ಯಾವುದೇ ಒಪ್ಪಂದವು ಇರದಿದ್ದಲ್ಲಿ, ಜಿಲ್ಲಾಧಿಕಾರಿಯು ಆ ನಿಧಿಯ ನಾಲ್ಕನೇ ಮೂರರಷ್ಟು ನಿಧಿ ಕಂಡವನಿಗೆ ಹಾಗೂ ಉಳಿದಿರುವುದನ್ನು ಅಂಥಹ ವ್ಯಕ್ತಿಗೆ ಹಂಚಬಹುದು ಅಥವಾ ನಿಧಿ ಕಂಡವನು ಮತ್ತು ಅಂಥ ವ್ಯಕ್ತಿ ಯಾವುದೇ ಒಪ್ಪಂದವನ್ನು ಮಾಡಿಕೊಂಡಿದ್ದರೆ, ಆ ನಿಧಿಯನ್ನು ಅದಕ್ಕನುಸಾರವಾಗಿ ವಿಲೇವಾರಿ ಮಾಡಬಹುದು.

ಪರಂತು ಜಿಲ್ಲಾಧಿಕಾರಿಗೆ ಸಮಂಜಸವೆನಿಸಿದರೆ ನಿಧಿಯನ್ನು ವಿಭಜಿಸದೆ, (ಎ) ಯಾವನೇ ಪಕ್ಷಗಾರನು, ಇನ್ನೊಬ್ಬ ಪಕ್ಷಗಾರನ ಭಾಗದಷ್ಟು ಹಣದ ಮೊತ್ತವನ್ನು ಅಥವಾ ಹಂಚಿದುದಕ್ಕಿಂತ ಹೆಚ್ಚಿನದಾದ ಇಲ್ಲವೆ ಜಿಲ್ಲಾಧಿಕಾರಿ ನಿರ್ಧರಿಸಿದಷ್ಟು ಬೆಲೆಯನ್ನು ಕೊಡಲೊಪ್ಪಿದಾಗ ಅಂಥವನಿಗೆ ಇಡೀ ನಿಧಿಯನ್ನು ಅಥವಾ ಅವನ ಭಾಗಕ್ಕಿಂತ ಹೆಚ್ಚಿನ ಪ್ರಮಾಣವನ್ನು ಕೊಡಬಹುದು ಮತ್ತು (ಬಿ) ನಿಧಿಯನ್ನು ಅಥವಾ ಅದರ ಯಾವುದೇ ಭಾಗವನ್ನು ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಿ, ಬಂದ ಮೊತ್ತವನ್ನು ನಿಯಮಗಳಿಗೆ ಅನುಸಾರವಾಗಿ ಪಕ್ಷಗಾರರ ನಡುವೆ ಭಾಗ ಮಾಡಬಹುದು.

ಇದು ಅಲ್ಲದೆ, ನಿಧಿ ಕಂಡುಹಿಡಿದವನು ಹಾಗೂ ನಿಧಿಯು ಕಂಡುಬಂದ ಸ್ಥಳದ ಒಡೆಯನೆಂದು ಹಕ್ಕು-ಕೋರುವ ವ್ಯಕ್ತಿಯನ್ನು ಹೊರತುಪಡಿಸಿ, ಇನ್ನು ಯಾವನೇ ವ್ಯಕ್ತಿಯು ಈ ಅಧಿನಿಯಮದ ಮೇರೆಗೆ ಮಾಡಿದ ಯಾವುದೇ ಹಕ್ಕನ್ನು ಜಿಲ್ಲಾಧಿಕಾರಿಯು ೯ನೆಯ ಕಲಂನಡಿ ತಿರಸ್ಕರಿಸಿದಾಗ, ಆ ಹಕ್ಕನ್ನು ತಿರಸ್ಕರಿಸಲಾಯಿತೊ, ಆ ವ್ಯಕ್ತಿಯು ೯ನೆಯ ಕಲಂನ ಮೇರೆಗೆ ಮೇಲ್ಮನವಿ ಸಲ್ಲಿಸದೇ ಇದ್ದರೆ ಅಥವಾ ಮೇಲ್ಮನವಿ ಸಲ್ಲಿಸಲಾಗಿ ಅಂತಹ ಮೇಲ್ಮನವಿಯನ್ನು ವಜಾ ಮಾಡಿದ ತರುವಾಯ, ಎರಡು ತಿಂಗಳ ಮುಕ್ತಾಯವಾಗುವವರೆಗೆ ನಿಧಿಯ ಯಾವುದೇ ವಿಭಜನೆಯನ್ನು ಮಾಡಬಾರದು.

ಜಿಲ್ಲಾಧಿಕಾರಿಯು ಈ ರೀತಿಯಾಗಿ ಭಾಗಗಳನ್ನು ಮಾಡಿದಾಗ, ಅಂತಹ ನಿಧಿಯ ಭಾಗಗಳನ್ನು ಅಥವಾ ಅದರ ಬದಲಾಗಿ ಹಣವನ್ನು ಪಕ್ಷಕಾರರಿಗೆ ಅವರವರ ಹಕ್ಕಿನಾನುಸಾರವಾಗಿ ಕೊಡಬೇಕು.

೧೩ನೆಯ ಕಲಂನಂತೆ ಇಬ್ಬರು ಅಥವಾ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳು ಹಾಜರಾದಾಗ ಹಾಗೂ ಪ್ರತಿಯೊಬ್ಬನು ನಿಧಿ ಕಂಡುಬಂದ ಸ್ಥಳದ ಒಡೆಯನೆಂದು ಹಕ್ಕು-ಕೋರಿದಾಗ ಮತ್ತು ಅಂತಹ ವ್ಯಕ್ತಿಯ ಹಕ್ಕನ್ನು ನಿಧಿ ಕಂಡುಹಿಡಿದವನು ಅಕ್ಷೇಪಿಸಿದಾಗ, ಜಿಲ್ಲಾಧಿಕಾರಿಯು ನಿಧಿಯನ್ನು ಉಳಿಸಿ ಕೊಂಡು ಹಾಗೂ ಆ ವಿಷಯವನ್ನು ಸಿವಿಲ್ ನ್ಯಾಯಾಲಯವು ವಿಚಾರಣೆ ಮಾಡಿ ನಿರ್ಧರಿಸುವ ದೃಷ್ಟಿಯಿಂದ ವಿಚಾರಣೆಯನ್ನು ನಿಲ್ಲಿಸಿ, ಆದೇಶಿಸಬಹುದೆಂದು ತಿಳಿಸಲಾಗಿದೆ.

ಈ ಅಧಿನಿಯಮದ ಅತಿ ಮುಖ್ಯವಾದ ೧೬ನೆಯ ಕಲಂನಲ್ಲಿ ನಿಧಿಯನ್ನು ಸರಕಾರದ ಪರವಾಗಿ ಅರ್ಜಿಸುವ ವಿವರಗಳಿವೆ. ಜಿಲ್ಲಾಧಿಕಾರಿಯು ೯ನೆಯ ಕಲಂನಂತೆ ಘೋಷಣೆ ಮಾಡಿದ ತರುವಾಯ ಹಾಗೂ ಈ ಮೊದಲೆ ಉಪಬಂಧಿಸಿದ ವಿವಿಧ ಕಲಮುಗಳ ಮೇರೆಗೆ ನಿಧಿಯನ್ನು ಕೊಡುವ ಅಥವಾ ಭಾಗ ಮಾಡುವ ಮುನ್ನ, ಆ ನಿಧಿ ಅಥವಾ ಅದರ ನಿರ್ದಿಷ್ಟಪಡಿಸಿದ ಯಾವುದೇ ಭಾಗದ ಸಾಮಗ್ರಿಗಳ ಮೌಲ್ಯಕ್ಕೆ ಸಮನಾದ ಮೊತ್ತವನ್ನು ಮತ್ತು ಅಂಥ ಮೌಲ್ಯದ ಒಂದೈದನೆಯ ಅಂಶದಷ್ಟು ಹಣವನ್ನು ಅದರ ಹಕ್ಕುದಾರರಿಗೆ ಕೊಟ್ಟು, ಜಿಲ್ಲಾಧಿಕಾರಿಯು ನಿಧಿಯನ್ನು ಅಥವಾ ಅದರ ನಿರ್ದಿಷ್ಟವಾದ ಯಾವುದೇ ಭಾಗವನ್ನು ಸರಕಾರದ ಪರವಾಗಿ ಸ್ವಾಧೀನಪಡಿಸಿಕೊಳ್ಳಬಹುದು ಹಾಗೂ ತದನಂತರ ಅಂತಹ ನಿಧಿ ಅಥವಾ ಅದರ ಭಾಗವು ಸರಕಾರದ ಸ್ವತ್ತೆಂದು ಭಾವಿಸತಕ್ಕದ್ದು ಎಂದು ತಿಳಿಸಲಾಗಿದೆ.

ನಿಧಿ ಕಂಡವನಿಗೆ ಹಾಗೂ ಅದು ಕಂಡುಬಂದ ಸ್ಥಳದ ಒಡೆಯನಿಗೆ ನಿಧಿಯ ಮೂಲ ಬೆಲೆ ಜೊತೆಜೊತೆಗೆ ಅದರ ಒಂದೈದನೆಯ ಅಂಶದಷ್ಟು ಸಿಗುವ ಈ ವಿಷಯ ಬಹುತೇಕ ಜನಸಾಮಾನ್ಯರಿಗೆ ಗೊತ್ತಿಲ್ಲದಿರುವದರಿಂದ ನಿಧಿಗಳು ಸಿಕ್ಕಾಗ ಅವುಗಳನ್ನು ಮುಚ್ಚಿಡುವುದು ಇಲ್ಲವೆ ಅವುಗಳನ್ನು ಕರಗಿಸಿ ಮಾರಾಟಮಾಡಲು ಪ್ರಯತ್ನಿಸುತ್ತಾರೆ.

ಕಲಂ ೨೦-೨೧ರಲ್ಲಿ ಈ ಅಧಿನಿಯಮವನ್ನು ಉಲ್ಲಂಘಿಸಿದವರಿಗೆ ನೀಡಬಹುದಾದ ದಂಡನೆ ಹಾಗೂ ಶಿಕ್ಷೆಗಳನ್ನು ಹೇಳಿದೆ. ೨೦ನೆಯ ಕಲಂನಂತೆ, ಯಾವುದೇ ನಿಧಿ ಕಂಡುಹಿಡಿದವನು ೪ನೆಯ ಕಲಂನಂತೆ ಅದರ ವಿವರಗಳನ್ನು ಕೊಡದಿದ್ದಲ್ಲಿ, ಖಜಾನೆಯಲ್ಲಿ ಜಮಾಮಾಡದಿದ್ದಲ್ಲಿ ಅಥವಾ ಭದ್ರತೆಯನ್ನು ಒದಗಿಸದಿದ್ದಲ್ಲಿ ಅಥವಾ ನಿಧಿಯ ಗುರುತನ್ನು ಮರೆಮಾಚಲು ಬದಲಾಯಿಸಿದರೆ ಅಥವಾ

ಬದಲಾಯಿಸಲು ಪ್ರಯತ್ನಿಸಿದರೆ ಅಂಥವನು ನಿಧಿಯ ಪಾಲು ಅಥವಾ ಅದಕ್ಕೆ ಬದಲಾದ ಹಣದ ಹಕ್ಕನ್ನು ಕಳೆದುಕೊಳ್ಳುವನು ಮತ್ತು ಅವನು ತಪ್ಪಿತಸ್ಥನೆಂದು ರುಜುವಾತಾದಲ್ಲಿ ಅಂತಹವನಿಗೆ ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಕಾರಾವಾಸ ಅಥವಾ ದಂಡ ಅಥವಾ ಇವೆರಡನ್ನೂ ವಿಧಿಸಲಾಗುತ್ತದೆ. ೨೧ನೆಯ ಕಲಂನಂತೆ ಯಾವುದೇ ನಿಧಿ ದೊರೆತ ಸ್ಥಳದ ಒಡೆಯನು ೨೦ನೆಯ ಕಲಂನಲ್ಲಿ ಉಲ್ಲೇಖಿಸಿರುವ ಯಾವುದೇ ತಪ್ಪನ್ನೆಸಗಿದಾಗ ಅವನು ನಿಧಿಯ ಪಾಲುದಾರನಾಗುವ ಅಥವಾ ಅದಕ್ಕೆ ಬದಲಾದ ಹಣದ ಹಕ್ಕನ್ನು ಕಳೆದುಕೊಳ್ಳುವನು ಮತ್ತು ತಪ್ಪಿತಸ್ಥನೆಂದು ರುಜುವಾತಾದಲ್ಲಿ ಅವನಿಗೆ ಆರು ತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸ ಅಥವಾ ದಂಡ ಅಥವಾ ಇವೆರಡನ್ನು ವಿಧಿಸಲಾಗುತ್ತದೆ.

**ಆಂಟಿಕ್ವಿಟೀಸ ಆಂಡ್ ಆರ್ಟ್ ಟ್ರಷರ್ಸ್ ಆಕ್ಟ್, ೧೯೭೨:**

ಪುರಾವಶೇಷ, ಹಸ್ತಪ್ರತಿ ಹಾಗೂ ಕಲಾವಸ್ತುಗಳ ಸಂರಕ್ಷಣೆಯ ಉದ್ದೇಶದ ಈ ಅಧಿನಿಯಮವನ್ನು ೦೯.೦೯.೧೯೭೨ರಂದು ವಿಧಿಸಿದ ಹಾಗೂ ಅದರ ಅನುಬಂಧ ಆಂಟಿಕ್ವಿಟೀಸ್ ಅಂಡ್ ಆರ್ಟ್ ಟ್ರಷರ್ಸ್ ರೂಲ್ಸ್, ೧೯೭೩ಗಳು ೫.೪ ೧೯೭೬ನಿಂದ ಜಾರಿಯಲ್ಲಿವೆ. ಪುರಾವಶೇಷ ಹಾಗೂ ಹಸ್ತಪ್ರತಿಗಳ ಕಡ್ಡಾಯವಾದ ನೋಂದಣಿ; ಪುರಾವಶೇಷ ಹಾಗೂ ಕಲಾವಸ್ತುಗಳ ಸಕ್ರಮವಾದ ವ್ಯಾಪಾರ; ನಿಷಿದ್ಧ ವ್ಯಾಪಾರ, ರಫ್ತು ಮತ್ತು ಕಳ್ಳಸಾಗಾಣಿಕೆಯ ನಿಯಂತ್ರಣ ಹಾಗೂ ಅತ್ಯಮೂಲ್ಯವಾದ ಕಲಾತ್ಮಕ ವಸ್ತುಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಸಂರಕ್ಷಿಸಲು ಅವುಗಳ ಸ್ವಾಧೀನಕ್ಕೆ ಈ ಅಧಿನಿಯಮದಲ್ಲಿ ಆದ್ಯತೆ ನೀಡಲಾಗಿದೆ.

ಈ ಅಧಿನಿಯಮದ ೨ನೆಯ ಕಲಂನಲ್ಲಿ ಪುರಾವಶೇಷ, ಹಸ್ತಪ್ರತಿ ಹಾಗೂ ಕಲಾವಸ್ತುಗಳ ಪರಿಭಾಷೆಗಳನ್ನು ನೀಡಲಾಗಿದೆ. ೩ನೆಯ ಕಲಂನ ೧ನೆಯ ಉಪ-ಕಲಂನಂತೆ ಕೇಂದ್ರ ಸರಕಾರ ಅಥವಾ ಕೇಂದ್ರ ಸರಕಾರವು ಅಧಿಕೃತಗೊಳಿಸಿದ ಯಾವುದೇ ಪ್ರಾಧಿಕಾರ ಅಥವಾ ಏಜನ್ಸಿಯನ್ನು ಹೊರತುಪಡಿಸಿ, ಯಾವನೇ ವ್ಯಕ್ತಿಯು ಯಾವುದೇ ಪುರಾವಶೇಷ ಹಾಗೂ ಕಲಾವಸ್ತುಗಳನ್ನು ರಫ್ತು ಮಾಡುವಂತಿಲ್ಲ. ಇದೇ ಕಲಂನ ೨ನೆಯ ಉಪ-ಕಲಂನಂತೆ ಕೇಂದ್ರ ಸರಕಾರ ಅಥವಾ ೧ನೆಯ ಉಪ-ಕಲಂನಲ್ಲಿ ಉಲ್ಲೇಖಿಸಿದ ಯಾವುದೇ ಪ್ರಾಧಿಕಾರ ಅಥವಾ ಏಜನ್ಸಿಯು ಯಾವುದೇ ಪುರಾವಶೇಷ ಮತ್ತು ಕಲಾನಿಧಿಗಳನ್ನು ರಫ್ತು ಮಾಡಲು ಉದ್ದೇಶಿಸಿದಲ್ಲಿ ಅಂಥಹ ರಫ್ತನ್ನು ನಿಯಮಿಸಬಹುದಾದ ಪ್ರಾಧಿಕಾರವು ಈ ಉದ್ದೇಶಕ್ಕಾಗಿ ಕೊಟ್ಟ ಅನುಮತಿ (ಪರ್ಮಿಟ್)ದ ನಿಬಂಧನೆ ಹಾಗೂ ಷರತ್ತುಗಳ ಮೇರೆಗೆ ರಫ್ತು ಮಾಡಬಹುದು.

ಕಲಂ ೫-೧೩ ಪುರಾವಶೇಷಗಳನ್ನು ಅಧಿಕೃತ ಲೈಸನ್ಸ ಪಡೆದು ಮಾರುವ ವಿಧಾನ, ಲೈಸನ್ಸನ್ನು ಕೊಡುವ ರೀತಿ, ಲೈಸನ್ಸಿಂಗ ಅಧಿಕಾರಿಗಳ ವಿವರಗಳನ್ನು ಹೇಳುತ್ತವೆ. ಯಾವನೇ ವ್ಯಕ್ತಿಯು ಸ್ವಯಂ ಅಥವಾ ಅವನ ಪರವಾಗಿ ಯಾವನೇ ಇತರ ವ್ಯಕ್ತಿಯ ಮೂಲಕ ಅಧಿಕೃತ ಲೈಸನ್ಸ ಇಲ್ಲದೇ ಯಾವುದೇ ಪುರಾವಶೇಷವನ್ನು ಮಾರಾಟ ಅಥವಾ ಮಾರಾಟದ ವ್ಯವಹಾರವನ್ನು ಮಾಡುವಂತಿಲ್ಲವೆಂದು ೫ನೆಯ ಕಲಂನಲ್ಲಿ ಹೇಳಲಾಗಿದೆ.

೬ನೆಯ ಕಲಂನ ಮೇರೆಗೆ ಕೇಂದ್ರ ಸರಕಾರವು ಅಧಿಸೂಚಿತ ಆದೇಶದ ಮೂಲಕ ತಾನು ಸೂಕ್ತವೆಂದು ಭಾವಿಸುವ ಸರಕಾರದ ಗೆಜೆಟೆಡ್ ಅಧಿಕಾರಿಗಳಾಗಿರುವಂಥಹ ವ್ಯಕ್ತಿಗಳನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ಲೈಸನ್ಸಿಂಗ್ ಅಧಿಕಾರಿಗಳೆಂದು ನೇಮಕಮಾಡಬಹುದು[*].

[*] ಈ ಅಧಿನಿಯಮದ ಉದ್ದೇಶಕ್ಕಾಗಿ ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂಖ್ಯೆ **ಎಸ್.ಒ. ೧೭೮೯ ದಿನಾಂಕ ೨೩. ೬. ೧೯೯೮ರ** ಮೇರೆಗೆ ಭಾರತೀಯ ಪುರಾತತ್ವ ಸರ್ವೇಕ್ಷಣೆಯ ಈ ಕೆಳಗಿನ ವಲಯಗಳ ಅಧೀಕ್ಷಕ ಪುರಾತತ್ವವಿದರನ್ನು ಲೈಸನ್ಸಿಂಗ್ ಅಧಿಕಾರಿಗಳೆಂದು ಘೋಷಿಸಲಾಗಿದೆ: ೧) ಆಗ್ರಾ ವಲಯ, ಆಗ್ರಾ ; ೨) ಬೆಂಗಳೂರು ವಲಯ, ಬೆಂಗಳೂರು ; ೩) ಭೋಪಾಲ ವಲಯ, ಭೋಪಾಲ ; ೪) ಭುವನೇಶ್ವರ್ ವಲಯ, ಭುವನೇಶ್ವರ್ ; ೫) ಕಲ್ಕತ್ತಾ ವಲಯ, ಕಲ್ಕತ್ತಾ ; ೬) ಚಂದಿಗಢ ವಲಯ, ಚಂದಿಗಢ; ೭) ಚೆನ್ನೈ ವಲಯ, ಚನ್ನೈ; ೮) ಧಾರವಾಡ ವಲಯ, ಧಾರವಾಡ ; ೯) ಗೌಹಾತಿ ವಲಯ, ಗೌಹಾತಿ; ೧೦) ಹೈದರಾಬಾದ ವಲಯ, ಹೈದರಾಬಾದ; ೧೧) ಜೈಪುರ ವಲಯ, ಜೈಪುರ; ೧೨) ಲಕ್ನೊ ವಲಯ, ಲಕ್ನೊ ೧೩) ದೆಹಲಿ ವಲಯ, ದೆಹಲಿ; ೧೪) ಪಾಟ್ನಾ ವಲಯ, ಪಾಟ್ನಾ ; ೧೫) ಶ್ರೀನಗರ ವಲಯ, ಶ್ರೀನಗರ/ ಜಮ್ಮು; ೧೬) ತ್ರಿಶೂರ ವಲಯ, ತ್ರಿಶೂರ; ೧೭) ವಡೋದರಾ ವಲಯ, ವಡೋದರಾ ಹಾಗೂ ೧೮) ಅಧೀಕ್ಷಕ ಪುರಾತತ್ವವಿದ (ಸುಂಕ), ಮುಂಬೈ ಹಾಗೂ ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂಖ್ಯೆ **ಎಸ್.ಒ. ೨೮೬೬ ದಿನಾಂಕ ೪.೧೧. ೨೦೦೪ರ** ಮೇರೆಗೆ ೧) ಡೆಹರಾಡೂನ ವಲಯ, ಡೆಹರಾಡೂನ, ೨) ರಾಂಚಿ ವಲಯ, ರಾಂಚಿ ಹಾಗೂ ೩) ರಾಯಪುರ ವಲಯ, ರಾಯಪುರ.

೭ನೆಯ ಕಲಂನಂತೆ ಪುರಾವಶೇಷಗಳ ವ್ಯಾಪಾರ ಮಾಡಲು ಯಾರಾದರೂ ಸ್ವಯಂ ಅಥವಾ ತನ್ನ ಪರವಾಗಿ ಯಾವನೇ ಇತರ ವ್ಯಕ್ತಿಯ ಮೂಲಕ ನಡೆಸಲು ಇಚ್ಛಿಸುವ ಯಾವನೇ ವ್ಯಕ್ತಿಯು ಲೈಸನ್ಸಿನ ಮಂಜೂರಾತಿಗಾಗಿ ಲೈಸನ್ಸಿಂಗ್ ಅಧಿಕಾರಿಗೆ ನಿಗದಿತ ಅರ್ಜಿಯನ್ನು ಸಲ್ಲಿಸಬಹುದು.

೮ನೆಯ ಕಲಂನಂತೆ ಅರ್ಜಿಯನ್ನು ಸ್ವೀಕರಿಸಿದ ನಂತರ ಲೈಸನ್ಸಿಂಗ್ ಅಧಿಕಾರಿಯು ಅವನಿಗೆ ಸಮಂಜಸವೆನಿಸಿದ ವಿಚಾರಣೆ ಮಾಡಿ ಈ ಸಂಗತಿಗಳಾದ : (ಎ) ಪುರಾವಶೇಷಗಳ ವ್ಯಾಪಾರದಲ್ಲಿ ಆ ಅರ್ಜಿದಾರನ ಅನುಭವ (ಬಿ) ಅರ್ಜಿದಾರನು ವ್ಯವಹಾರವನ್ನು ನೆಡೆಸಲು ಉದ್ದೇಶಿಸಿರುವ ಗ್ರಾಮ, ಪಟ್ಟಣ ಅಥವಾ ನಗರ (ಸಿ) ಅಂತಹ ಸ್ಥಳಗಳಲ್ಲಿರುವ ಪುರಾವಶೇಷಗಳ ವ್ಯವಹಾರದಲ್ಲಿ ಈಗಾಗಲೇ ತೊಡಗಿರುವ ವ್ಯಕ್ತಿಗಳ ಸಂಖ್ಯೆ ಹಾಗೂ ಸಮಂಜಸವೆನಿಸಿದ ಮತ್ತಿತರ ವಿಷಯುಗಳನ್ನು ಗಮನದಲ್ಲಿಟ್ಟುಕೊಂಡು ಅರ್ಜಿದಾರನಿಗೆ ಲೈಸನ್ಸನ್ನು ಕೊಡಬಹುದು. ಅದರೆ, ಅರ್ಜಿದಾರನು ಆಂಟಿಕ್ವಿಟಿಸ್(ಎಕ್ಸಪೋರ್ಟ್ ಕಂಟ್ರೋಲ್) ಆಕ್ಟ್, ೧೯೪೭ರ ಮೇರೆಗೆ ಶಿಕ್ಷಾರ್ಹ ಅಪರಾಧವೆಸಗಿದ್ದು, ಅಪರಾಧಿ ಎಂದು ನಿರ್ಣೀತನಾಗಿದ್ದರೆ, ಆ ಶಿಕ್ಷೆಗೊಳಪಟ್ಟ ದಿನಾಂಕದಿಂದ ಹತ್ತು ವರ್ಷಗಳ ಅವಧಿ ಮುಕ್ತಾಯಗೊಂಡಿರುವ ಹೊರತು ಲೈಸನ್ಸನ್ನು ಕೊಡುವಂತಿಲ್ಲ. ಇದೇ ಕಲಮಿನ ೨ನೆಯ ಉಪ-ಕಲಂನಂತೆ ನಿಗದಿತ ಶುಲ್ಕವನ್ನು ವಿಧಿಸಿ ಲೈಸನ್ಸನ್ನು ಕೊಡಬಹುದು. ೩ನೆಯ ಉಪ-ಕಲಂನಂತೆ ಲೈಸನ್ಸಿಗೆ ನಿರ್ದಿಷ್ಟ ಅವಧಿ ಮತ್ತು ಕೆಲವು ಷರತ್ತುಗಳನ್ನು ವಿಧಿಸಬಹುದು ಮತ್ತು ೪ನೆಯ ಉಪ-ಕಲಂನಂತೆ ಅರ್ಜಿಯನ್ನು ಸಲ್ಲಿಸಿದಾಗ, ಅದನ್ನು ಅರ್ಜಿದಾರನಿಗೆ ಮನವಿಮಾಡಿಕೊಳ್ಳುವ ಅವಕಾಶವನ್ನು ಕೊಡದೆ ನಿರಾಕರಿಸುವಂತಿಲ್ಲವೆಂದು ಹೇಳಲಾಗಿದೆ.

೧೦ನೆಯ ಕಲಂನ ೧ನೆಯ ಉಪ-ಕಲಂನಂತೆ, ಪ್ರತಿಯೊಬ್ಬ ಲೈಸನ್ಸಧಾರಿ ಪುರಾವಶೇಷಗಳ ದಾಖಲೆ, ಛಾಯಾಚಿತ್ರ ಹಾಗೂ ದಾಖಲಾತಿ ಪುಸ್ತಕಗಳನ್ನು ನಿಗದಿತ ರೀತಿಯಲ್ಲಿ ಸುವ್ಯವಸ್ಥಿತವಾಗಿ ಇಟ್ಟಿರತಕ್ಕದ್ದು ಮತ್ತು ೨ನೆಯ ಉಪ-ಕಲಂನಂತೆ ಈ ಪುರಾವಶೇಷಗಳ ದಾಖಲೆ, ಛಾಯಾಚಿತ್ರ ಮತ್ತು ದಾಖಲಾತಿ ಪುಸ್ತಕಗಳನ್ನು ಲೈಸನ್ಸಿಂಗ್ ಅಧಿಕಾರಿ ಅಥವಾ ಸರಕಾರದಿಂದ ಪ್ರಮಾಣೀಕರಿಸಲ್ಪಟ್ಟ ಯಾವನೇ ಅಧಿಕಾರಿಗೆ ಪರಿಶೀಲನೆಯ ಸಮಯದಲ್ಲಿ ತೋರಿಸಬೇಕು.

ಕಲಂ ೧೪-೧೮ ಯಾವ ಯಾವ ಪುರಾವಶೇಷಗಳನ್ನು ಎಲ್ಲಿ ಮತ್ತು ಹೇಗೆ ನೋಂದಾಯಿಸಬೇಕು ಹಾಗೂ ನೋಂದಣಿ ಅಧಿಕಾರಿಗಳ ವಿವರಗಳನ್ನು ನೀಡುತ್ತವೆ. ೧೪ನೆಯ ಕಲಂನ ೧ನೆಯ ಉಪ-ಕಲಂನಂತೆ ಕೇಂದ್ರ ಸರಕಾರವು ಕಾಲಕಾಲಕ್ಕೆ ನೋಂದಾಯಿಸತಕ್ಕಂತಹ ಪುರಾವಶೇಷಗಳನ್ನು ನಿರ್ಧರಿಸಿ ರಾಜಪತ್ರದ ಅಧಿಸೂಚನೆಯ ಮೂಲಕ ಪ್ರಕಟಗೊಳಿಸಬೇಕು. ೨ನೆಯ ಉಪ-ಕಲಂನಂತೆ ಕೇಂದ್ರ ಸರಕಾರವು (ಎ) ಕಲಾತ್ಮ ವಸ್ತುಗಳ ಸಂರಕ್ಷಣೆಯ ಅವಶ್ಯಕತೆ (ಬಿ) ಭಾರತೀಯ ಸಾಂಸ್ಕೃತಿಕ ಪರಂಪರೆಯ ಉತ್ತಮವಾದ ಪರಿಜ್ಞಾನ ಅವುಗಳ ಅವಶ್ಯಕತೆ ಹಾಗೂ (ಸಿ) ಭಾರತೀಯ ಸಾಂಸ್ಕೃತಿ ಪರಂಪರೆಯ ಸುರಕ್ಷತೆಗೆ ಪೂರಕವಾಗುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ಪುರಾವಶೇಷಗಳ ಪಂಜೀಕರಣಕ್ಕೊಳಪಡುತ್ತವೆಂದು ನಿರ್ಧರಿಸಬೇಕು[*].

[*]ಈ ಅಧಿನಿಯಮದ ಉದ್ದೇಶಕ್ಕಾಗಿ ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂಖ್ಯೆ **ಎಸ್.ಒ ೪೪೮(ಇ) ದಿನಾಂಕ ೨.೭.೧೯೭೬ರ** ಮೇರೆಗೆ ಒಂದು ನೂರು ವರ್ಷಗಳಿಗೆ ಕಡಿಮೆ ಇಲ್ಲದಂತೆ ಅಸ್ತಿತ್ವದಲ್ಲಿರುವ- ೧) ಕಲ್ಲು, ಸುಟ್ಟ ಅವೆಮಣ್ಣು, ಲೋಹ, ಪ್ರಾಣಿಗಳ ಕೋರೆ ದಂತ, ಎಲುಬುಗಳಲ್ಲಿ ಮಾಡಿದ ಮೂರ್ತಿಗಳು ೨) ಹಾಳೆ ಮರ, ಬಟ್ಟೆ, ಸಿಲ್ಕ, ಹಾಗೂ ಅಂತಹ ಯಾವುದೇ ಮಾಧ್ಯಮಗಳಲ್ಲಿ ಮಾಡಿದ (ಕಿರುಚಿತ್ರ ಹಾಗೂ ಟಂಕ ಸಹಿತ) ವರ್ಣಚಿತ್ರಗಳು ೩) ವರ್ಣಚಿತ್ರ, ಸಚಿತ್ರ ವಿವರಣೆ ಅಥವಾ ಸುವರ್ಣಾಲಂಕರಣಗಳುಳ್ಳ ಹಸ್ತಪ್ರತಿಗಳನ್ನು ಹಾಗೂ ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂಖ್ಯೆ **ಎಸ್.ಒ ೩೯೭(ಇ) ದಿನಾಂಕ ೧೫.೫.೧೯೮೦ರ** ಮೇರೆಗೆ ಮರದಲ್ಲಿ ಮಾಡಿದ ಮೂರ್ತಿಯ ಆಕೃತಿಗಳನ್ನು ಕಡ್ಡಾಯವಾಗಿ ನೋಂದಾಯಿಸಬೇಕು.

ಇದೇ ೧೪ನೆಯ ಕಲಂನ ೩ನೆಯ ಉಪ-ಕಲಂನಂತೆ ಪುರಾವಶೇಷಗಳ ಒಡೆತನ, ನಿಯಂತ್ರಣ ಅಥವಾ ಸ್ವಾಧೀನವನ್ನು ಹೊಂದಿರುವ ಪ್ರತಿಯೊಬ್ಬ ವ್ಯಕ್ತಿಯು ೧ನೆಯ ಉಪ-ಕಲಂನಡಿ ಪ್ರಕಟಿಸಿದ ಪುರಾವಶೇಷಗಳನ್ನು ಕಡ್ಡಾಯವಾಗಿ ಮೂರು ತಿಂಗಳೊಳಗೆ ಹಾಗೂ ಇತರ ಯಾವನೇ ವ್ಯಕ್ತಿಯು ಪುರಾವಶೇಷಗಳ ಒಡೆತನ, ನಿಯಂತ್ರಣ ಅಥವಾ ಸ್ವಾಧೀನಕ್ಕೆ ಬಂದ ಹದಿನೈದು ದಿನಗಳೊಳಗೆ ನೋಂದಾಯಿಸಬೇಕು ಹಾಗೂ ಅಂಥ ನೋಂದಾಣಿಯ ಪ್ರಮಾಣ ಪತ್ರವನ್ನು ಪಡೆದುಕೊಳ್ಳಬೇಕು.

ಕೇಂದ್ರ ಸರಕಾರವು ಸಮಂಜಸವೆನಿಸಿದವರನ್ನು ನೋಂದಣಿ ಅಧಿಕಾರಿಗಳೆಂದು(ರಜಿಸ್ಟರಿಂಗ ಆಫಿಸರ್) ನೇಮಿಸಿ ಅಧಿಸೂಚನೆಯನ್ನು ಪ್ರಕಟಿಸಬೇಕೆಂದು ಹಾಗೂ ನೋಂದಣಿ ಅಧಿಕಾರಿಯ ಕಾರ್ಯವ್ಯಾಪ್ತಿಯನ್ನು ವ್ಯಾಖ್ಯಾನಿಸಬೇಕೆಂದು ೧೫ನೆಯ ಕಲಂನಲ್ಲಿ ಹೇಳಿದೆ[*].

[*] ಕೇಂದ್ರ ಸರಕಾರದಿಂದ ಅನುಮತಿಯನ್ನು ಪಡೆದು ಪ್ರತಿ ರಾಜ್ಯದ ಪುರಾತತ್ವ ಇಲಾಖೆಯು ಈ ನೋಂದಣಿ ಅಧಿಕಾರಿಗಳನ್ನು ನೇಮಕ ಮಾಡುತ್ತದೆ. ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂಖ್ಯೆ **ಜಿ.ಎಸ.ಆರ್. ೨೮೨ (ಇ) ದಿನಾಂಕ ೫.೪.೧೯೭೬ರ** ಮೇರೆಗೆ ಇಂತಹ ಅನೇಕ ಅಧಿಕಾರಿಗಳು ಭಾರತ ದೇಶಾದ್ಯಂತ ಪ್ರತಿ ರಾಜ್ಯದ ವಿವಿಧ ಜಿಲ್ಲಾ ಕೇಂದ್ರಗಳಲ್ಲಿ ಪುರಾವಷೇಶಗಳ ನೋಂದಣಿಯ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಕಾಲುನುಕ್ರಮದಲ್ಲಿ ಈಗ ಅನೇಕ ಬದಲಾವಣೆಗಳಾಗಿವೆ. ಆದ್ದರಿಂದ ಪ್ರತಿ ರಾಜ್ಯದ ಪುರಾತತ್ವ ಇಲಾಖೆಯ ನಿರ್ದೇಶಕರನ್ನು ಸಂಪರ್ಕಿಸಬೇಕು.

ಇದಲ್ಲದೇ, ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂಖ್ಯೆ **ಜಿ.ಎಸ್.ಆರ್. ೭೩ ದಿನಾಂಕ ೧.೩.೨೦೦೫ರ** ಮೇರೆಗೆ ಭಾರತೀಯ ಪುರಾತತ್ವ ಸರ್ವೇಕ್ಷಣೆಯ ಈ ಕೆಳಗೆ ತಿಳಿಸಿದ ವಲಯಗಳ ಸಹಾಯಕ ಅಧೀಕ್ಷಕ ಪುರಾತತ್ವವಿದ ಅಥವಾ ಉಪ ಅಧೀಕ್ಷಕ ಪುರಾತತ್ವವಿದರನ್ನು ನೋಂದಣಿ ಅಧಿಕಾರಿಗಳೆಂದು ಘೋಷಿಸಲಾಗಿದೆ: ೧) ಡೆಹರಾಡೂನ ವಲಯ, ಡೆಹರಾಡೂನ; ೨) ಗೋವಾ ವಲಯ, ಗೋವಾ; ೩) ಗೌಹಾತಿ ವಲಯ, ಗೌಹಾತಿ; ೪) ಕಲ್ಕತ್ತಾ ವಲಯ, ಕಲ್ಕತ್ತಾ; ೫) ರಾಯಪುರ ವಲಯ, ರಾಯಪುರ; ೬) ರಾಂಚಿ ವಲಯ, ರಾಂಚಿ; ೭) ತ್ರಿಶೂರ ವಲಯ, ತ್ರಿಶೂರ; ೮) ವಡೋದರಾ ವಲಯ, ವಡೋದರಾದ ಸಹಾಯಕ ಅಧೀಕ್ಷಕ ಪುರಾತತ್ವವಿದ ಅಥವಾ ಉಪಅಧೀಕ್ಷಕ ಪುರಾತತ್ವವಿದರನ್ನು ಹಾಗೂ ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂಖ್ಯೆ **ಜಿ.ಎಸ್.ಆರ್. ೩೬೦, ದಿನಾಂಕ ೨೨.೦೯. ೨೦೦೫ರ** ಮೇರೆಗೆ ೧) ಆಗ್ರಾ ವಲಯ, ಆಗ್ರಾ; ೨) ಔರಂಗಾಬಾದ ವಲಯ, ಔರಂಗಾಬಾದ ; ೩) ಬೆಂಗಳೂರು ವಲಯ, ಬೆಂಗಳೂರು; ೪) ಭೋಪಾಲ ವಲಯ, ಭೋಪಾಲ; ೫) ಭುವನೇಶ್ವರ್ ವಲಯ, ಭುವನೇಶ್ವರ್; ೬) ಕಲ್ಕತ್ತಾ ವಲಯ, ಕಲ್ಕತ್ತಾ; ೭) ಚಂದಿಗಢ ವಲಯ, ಚಂದಿಗಢ; ೮) ಚೆನ್ನೈ ವಲಯ, ಚನ್ನೈ; ೯) ಹೈದರಾಬಾದ ವಲಯ, ಹೈದರಾಬಾದ; ೧೦) ಜೈಪುರ ವಲಯ, ಜೈಪುರ; ೧೧) ಲಕ್ನೊ ವಲಯ, ಲಕ್ನೋ; ೧೨) ಪಾಟ್ನಾ ವಲಯ, ಪಾಟ್ನಾ; ೧೩) ಶ್ರೀನಗರ ವಲಯ, ಶ್ರೀನಗರ/ ಜಮ್ಮು; ೧೪) ವಡೊದರಾ ವಲಯ, ವಡೊದರಾಗಳ ಸಹಾಯಕ ಅಧೀಕ್ಷಕ ಪುರಾತತ್ವವಿದರು ೧೫) ಶಿಮ್ಲಾ/ಮುಂಬೈ ವಲಯ, ಶಿಮ್ಲಾ/ ಮುಂಬೈ ೧೬) ಧಾರವಾಡ ವಲಯ, ಧಾರವಾಡ; ೯) ಗೌಹತಿ ವಲಯ, ಗೌಹಾತಿ; ೧೦) ಹೈದರಾಬಾದ ವಲಯ, ಹೈದರಾಬಾದ; ೧೭) ದೆಹಲಿ ವಲಯ, ದೆಹಲಿ; ೧೮) ತ್ರಿಶೂರ ವಲಯ, ತ್ರಿಶೂರ.

೧೬ನೆಯ ಕಲಂನ ೧ನೆಯ ಉಪ-ಕಲಂನಂತೆ ೧೪ನೆಯ ಕಲಂನ ಮೇರೆಗೆ ಪುರಾವಶೇಷಗಳನ್ನು ನೋಂದಾಯಿಸಲು ಪ್ರತಿಯೊಬ್ಬರು ನೋಂದಣಿ ಪ್ರಮಾಣ ಪತ್ರದ ಮಂಜೂರಾತಿಗಾಗಿ ನೋಂದಣಿ ಅಧಿಕಾರಿಗೆ ಅರ್ಜಿಯನ್ನು ಸಲ್ಲಿಸಬೇಕು. ೨ನೆಯ ಉಪ-ಕಲಂನಂತೆ ನಿಗದಿತ ವಿವರಣೆಗಳನ್ನೊಂಡ ಅರ್ಜಿಯ ಜೊತೆಗೆ ಕೇಂದ್ರ ಸರಕಾರವು ನೋಂದಣಿಗೆ ನಿರ್ದಿಷ್ಟಪಡಿಸಿದ ಪರಾವಶೇಷದ ಛಾಯಾಚಿತ್ರವನ್ನು ಲಗತ್ತಿಸಬೇಕು. ೩ನೆಯ ಉಪ-ಕಲಂನಂತೆ ಅರ್ಜಿ ಸ್ವೀಕರಿಸಿದ ಮೇಲೆ ನೋಂದಣಿ ಅಧಿಕಾರಿಯು ತನಗೆ ಸಮಂಜಸವೆನಿಸಿದ ವಿಚಾರಣೆಯನ್ನು ಮಾಡಿ ನೋಂದಣಿ ಪ್ರಮಾಣಪತ್ರವನ್ನು ಕೊಡಬಹುದು ಮತ್ತು ೪ನೆಯ ಉಪ-ಕಲಂನಂತೆ ಯಾವುದೇ ಅರ್ಜಿಯನ್ನು ನಿರಾಕರಿಸುವ ಮೊದಲು ಅರ್ಜಿದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳುವ ಮುಕ್ತ ಅವಕಾಶವನ್ನು ಕೊಡಬೇಕು.

೧೭ನೆಯ ಕಲಂನಂತೆ ಯಾವನೇ ವ್ಯಕ್ತಿಯು ೧೪ನೆಯ ೧ನೆಯ ಉಪ-ಕಲಂನಲ್ಲಿ ಸೂಚಿಸಲಾದ ಪುರಾವಶೇಷಗಳನ್ನು ಬೇರೊಬ್ಬರಿಗೆ ಅವುಗಳ ಒಡೆತನ, ನಿಯಂತ್ರಣ ಅಥವಾ ಸ್ವಾಧೀನವನ್ನು ಹಸ್ತಾಂತರಿಸಿದರೆ ಅಂತಹವರು ನಿರ್ದಿಷ್ಟ ಸಮಯದಲ್ಲಿ ನೋಂದಣಿ ಅಧಿಕಾರಿಯ ಗಮನಕ್ಕೆ ತರಬೇಕು.

೧೮ನೆಯ ಕಲಂನಂತೆ ಯಾವುದೇ ವಸ್ತುಸಂಗ್ರಾಹಲಯ ಅಥವಾ ಕಾರ್ಯಾಲಯ ಅಥವಾ ವಿದ್ಯಾ ಅಥವಾ ಸಾಂಸ್ಕೃತಿಕ ಸಂಸ್ಥೆಗಳ ಒಡೆತನ, ನಿಯಂತ್ರಣ ಅಥವಾ ಸರಕಾರದ ನಿರ್ವಹಣೆಯಲ್ಲಿರುವ ಪುರಾವಶೇಷಗಳಿಗೆ ೧೪ ಅಥವಾ ೧೬ ಅಥವಾ ೧೭ನೆಯ ಕಲಂಗಳು ಅನ್ವಯವಾಗುವದಿಲ್ಲ.

ಕಲಂ ೧೯-೨೦ಗಳು ಪುರಾವಶೇಷ ಹಾಗೂ ಕಲಾವಸ್ತುಗಳ ಅರ್ಜನೆ ಹಾಗೂ ಅವುಗಳ ನಷ್ಟ ಪರಿಹಾರ ಕೊಡುವ ವಿವರಗಳನ್ನು ನೀಡುತ್ತವೆ. ಕೇಂದ್ರ ಸರಕಾರವು ಸಾರ್ವಜನಿಕ ಸ್ಥಳದಲ್ಲಿ ಯಾವುದೇ ಪುರಾವಶೇಷ ಅಥವಾ ಕಲಾವಸ್ತುವನ್ನು ಪರಿರಕ್ಷಿಸುವುದು ಅಪೇಕ್ಷಣೀಯವೆಂದು ಅಭಿಪ್ರಾಯಪಟ್ಟಲ್ಲಿ ಅಂಥಹವುಗಳನ್ನು ಕಡ್ಡಾಯವಾಗಿ ಸ್ವಾಧೀನ ಪಡಿಸಿಕೊಳ್ಳಲು ಆದೇಶಿಸಬಹುದೆಂದು ಹಾಗೂ ಸ್ವಾಧೀನ ಪಡಿಸಿಕೊಳ್ಳುವ ವಿವಿಧ ವಿಧಾನಗಳನ್ನು ೧೯ನೆಯ ಕಲಂ ತಿಳಿಸುತ್ತದೆ. ೨೦ನೆಯ ಕಲಂ ಯಾವುದೇ ಪುರಾವಶೇಷ ಅಥವಾ ಕಲಾವಸ್ತುವನ್ನು ೧೯ನೆಯ ಕಲಂನಡಿ ಕಡ್ಡಾಯವಾಗಿ ಸ್ವಾಧೀನ ಮಾಡಿಕೊಂಡಾಗ ಸೂಕ್ತವಾದ ಪರಿಹಾರವನ್ನು ಹಾಗೂ ಅದರ ಮೊತ್ತವನ್ನು ನಿರ್ಧರಿಸುವ ವಿವರಗಳನ್ನು ಸೂಚಿಸುತ್ತದೆ.

೨೩ನೆಯ ಕಲಂ ಕೇಂದ್ರ ಸರಕಾರವು ಅಧಿಕೃತಗೊಳಿಸಿದ ಸರಕಾರದ ಅಧಿಕಾರಿಯಾಗಿರುವ ಯಾವನೇ ವ್ಯಕ್ತಿಯ ಈ ಅಧಿನಿಯಮದ ಪ್ರಾವಧಾನಗಳ ಪಾಲನೆಯನ್ನು ಮನವರಿಕೆ ಮಾಡಿಕೊಳ್ಳಲು ಅಥವಾ ಪ್ರಾವಧಾನಗಳನ್ನು ಪಾಲಿಸಲಾಗಿದೆಯಾ ಎಂಬುದನ್ನು ಮನದಟ್ಟು ಮಾಡಿಕೊಳ್ಳುವ ದೃಷ್ಟಿಯಿಂದ ಯಾವುದೇ ಸ್ಥಳವನ್ನು ಪ್ರವೇಶಿಸಬಹುದು ಹಾಗೂ ಶೋಧಿಸಬಹುದೆಂದು ಹಾಗೂ ಯಾವುದೇ ಪ್ರಾವಧಾನವನ್ನು ಉಲ್ಲಂಘಿಸಲಾಗಿದೆಯಾ, ಉಲ್ಲಂಘಿಸಲಾಗುತ್ತದೆ ಅಥವಾ ಇನ್ನೇನು ಉಲ್ಲಂಘಿಸಬಹುದು ಎಂದು ಶಂಕಿಸಿದಾಗ ಯಾವುದೇ ಪುರಾವಶೇಷ ಅಥವಾ ಕಲಾವಸ್ತುವನ್ನು ಸ್ವಾಧೀನಪಡಿಸಿಕೊಳ್ಳಬಹುದೆಂದು ಮತ್ತು ಹಾಗೆ ಸ್ವಾಧೀನಪಡಿಸಿಕೊಂಡ ಪುರಾವಶೇಷ ಅಥವಾ ಕಲಾವಸ್ತುವನ್ನು ನ್ಯಾಯಾಲದಲ್ಲಿ ಹಾಜರಪಡಿಸಲು ಹಾಗೂ ಅದರ ಸುರಕ್ಷತೆಗೆ ಅವಶ್ಯಕವಾದ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಹೇಳುತ್ತದೆ.

ಈ ಅಧಿನಿಯಮದ ಅತಿ ಮುಖ್ಯ ಕಲಂ ೨೪ರಲ್ಲಿ ಯಾವುದೇ ವಸ್ತು ಪುರಾವಶೇಷ ಅಥವಾ ಕಲಾವಸ್ತುವೇ ಅಥವಾ ಅಲ್ಲವೇ ಎಂಬುದನ್ನು ನಿರ್ಧರಿಸುವ ಅಧಿಕಾರವಿದೆ. ಈ ೨೪ನೆಯ ಕಲಂನಂತೆ ಯಾವುದೇ ವಸ್ತು, ಪದಾರ್ಥ, ಸಾಮಗ್ರಿ ಅಥವಾ ಹಸ್ತಪ್ರತಿ ಅಥವಾ ದಾಖಲೆ ಅಥವಾ ಇತರೇ ದಸ್ತಾವೇಜು ಪುರಾವಶೇಷವೇ ಅಥವಾ ಅಲ್ಲವೇ ಅಥವಾ ಕಲಾನಿಧಿಯೇ ಅಥವಾ ಅಲ್ಲವೇ ಹೇಗೆ ಎಂಬ ಪ್ರಶ್ನೆ ಉದ್ಭವಿಸಿದರೆ ಅದನ್ನು ಭಾರತೀಯ ಪುರಾತತ್ವ ಸರ್ವೇಕ್ಷಣದ ಮಹಾನಿರ್ದೇಶಕ ಅಥವಾ ಮಹಾ ನಿರ್ದೇಶಕರಿಂದ ಅಧಿಕೃತಗೊಂಡ ಭಾರತೀಯ ಪುರಾತತ್ವ ಸರ್ವೇಕ್ಷಣದ ನಿರ್ದೇಶಕನ ದರ್ಜೆಗೆ ಕಡಿಮೆಯಿಲ್ಲದ ಅಧಿಕಾರಿಯ ಗಮನಕ್ಕೆ ತರಬೇಕೆಂದು ಮತ್ತು ಭಾರತೀಯ ಪುರಾತತ್ವ ಸರ್ವೇಕ್ಷಣದ ಮಹಾನಿರ್ದೇಶಕ ಅಥವಾ ಅಧಿಕೃತಗೊಂಡ ಅಧಿಕಾರಿಯ ನಿರ್ಣಯವೇ ಅಂತಿಮ.

ಈ ಅಧಿನಿಯುಮವನ್ನು ಉಲ್ಲಂಘಿಸಿದವರಿಗೆ ವಿಧಿಸಬಹುದಾದ ದಂಡ ಹಾಗೂ ಶಿಕ್ಷೆಗಳನ್ನು ೨೫ ನೆಯ ಕಲಂ ತಿಳಿಸುತ್ತದೆ. ಈ ೨೫ನೆಯ ಕಲಂನ ೧ನೆಯ ಉಪ-ಕಲಂನಂತೆ ಯಾವನೇ ವ್ಯಕ್ತಿಯು ಸ್ವಯಂ ಅಥವಾ ತನ್ನ ಪರವಾಗಿ ಯಾವನೇ ವ್ಯಕ್ತಿಯ ಮೂಲಕವೇ ಆಗಲಿ ೩ನೆಯ ಕಲಂನ್ನು ಉಲ್ಲಂಘಿಸಿ ಯಾವುದೇ ಪುರಾವಶೇಷ ಅಥವಾ ಕಲಾನಿಧಿಯನ್ನು ರಫ್ತು ಮಾಡಿದರೆ ಅಥವಾ ರಫ್ತು ಮಾಡಲು ಪ್ರಯತ್ನಿಸಿದರೆ ಅವನಿಗೆ ಆರು ತಿಂಗಳುಗಳಿಗೆ ಕಡಿಮೆ ಇಲ್ಲದ ಆದರೆ ಮೂರು ವರ್ಷಗಳ ವರಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸ ಮತ್ತು ದಂಡವನ್ನು ವಿಧಿಸಬಹುದು.

೨ನೆಯ ಉಪ-ಕಲಂನಂತೆ ಯಾವನೇ ವ್ಯಕ್ತಿಯು ಕಲಂ ... ಅಥವಾ ೧೨ ಅಥವಾ ೧೩ನೆಯ ಕಲಂನ ೨ನೆಯ ಉಪ- ಕಲಂ ಅಥವಾ ೩ನೆಯ ಉಪ-ಕಲಂ ಅಥವಾ ... ಅಥವಾ ೧೭ಗಳನ್ನು ಉಲ್ಲಂಘಿಸಿದರೆ ಅವನಿಗೆ ... ತಿಂಗಳುಗಳವರೆಗೆ ವಿಸ್ತರಿಸಬಹುದಾದ ಕಾರಾವಾಸ ಅ... ದಂಡ ಅಥವಾ ಎರಡನ್ನೂ ವಿಧಿಸಬಹುದು ಹಾಗೂ ... ಪುರಾವಶೇಷಕ್ಕೆ ಸಂಬಂಧಿಸಿ ಆ ಅಪರಾಧವ... ಮಾಡಲಾಗಿದೆಯೋ ಆ ಪುರಾವಶೇಷವನ್ನು ಮುಟ್ಟುಗೋ... ಹಾಕಿಕೊಳ್ಳಬಹುದು. ೩ನೆಯ ಉಪ-ಕಲಂನಂತೆ ಯಾವ... ವ್ಯಕ್ತಿಯು ೧೦ನೆಯ ಕಲಂನಡಿ ಇಟ್ಟುಕೊಂಡಿರು... ಪುರಾವಶೇಷಗಳ ದಾಖಲೆ, ಛಾಯಾಚಿತ್ರ ಮತ್ತು ದಾಖಲಾ... ಪುಸ್ತಕಗಳನ್ನು ಲೈಸನ್ಸಿಂಗ್ ಅಧಿಕಾರಿಯು ಪರಿಶೀಲಿಸುವುದನ್ನು ತಡೆಗಟ್ಟಿದರೆ ಅಥವಾ ೨೩ನೆಯ ಕಲಂನ ೧ನೆಯ ಉಪ- ಕಲಂನಡಿ ಕೇಂದ್ರ ಸರಕಾರದಿಂದ ಅಧಿಕೃತಗೊಂಡ ಯಾವುದೇ ಅಧಿಕಾರಿಯು ಯಾವುದೇ ಸ್ಥಳವನ್ನು ಪ್ರವೇಶಿಸಲು ಅಥವಾ ಯಾವುದೇ ಸ್ಥಳವನ್ನು ಶೋಧಿಸಲು ತಡೆಗಟ್ಟಿದರೆ, ಅವನಿ... ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಕಾರಾವಾ... ಅಥವಾ ದಂಡ ಅಥವಾ ಎರಡನ್ನೂ ವಿಧಿಸಬಹುದು.

**ಆಂಟಿಕ್ವಿಟಿಸ್ ಅಂಡ್ ಆರ್ಟ ಟ್ರಜರ್ಸ್ ರೂಲ್ಸ್, ೧೯೭೩**

ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂ... **ಜಿ.ಎಸ.ಆರ್. ೯೦೪(ಇ) ದಿನಾಂಕ ೦೧.೧೨. ೧೯೭೬**... ಮೇರೆಗೆ ೧) ರವಿಂದ್ರನಾಥ ಟ್ಯಾಗೋರ ೨) ಅಮೃತ... ಶೇರಗಿಲ್ ೩) ಜಾಮಿನಿ ರಾಯ್ ೪) ನಂದಲಾಲ್ ಬೋಸ... ಹಾಗೂ ಭಾರತ ಸರಕಾರದ ರಾಜಪತ್ರ ಅಧಿಸೂಚನೆ ಸಂ... **ಜಿ.ಎಸ.ಆರ್. ೪೭೭ (ಇ) ದಿನಾಂಕ ೧೦.೦೮. ೧೯೭೯**... ಮೇರೆಗೆ ೧) ರವಿ ವರ್ಮಾ ೨) ಗಗನೇಂದ್ರನಾಥ ಟ್ಯಾಗೋ... ೩) ಅಬನೀಂದ್ರನಾಥ ಟ್ಯಾಗೋರ ೪) ಸೈಲೋಜ ಮುಖರ್ಜಿ... ಹಾಗೂ ಎನ್. ರೊರಿಕ್‌ರ (ರೇಖಾಕೃತಿ, ರೂಪರೇಖ... ರೇಖಾ ಚಿತ್ರ ಸಹಿತ) ವರ್ಣಚಿತ್ರ ಮತ್ತು ಆಕೃತಿ/ರೂ... ಶಿಲ್ಪಗಳನ್ನು ಕಲಾ ನಿಧಿಗಳೆಂದು ಘೋಷಿಸಲಾಗಿದೆ.

ಇತ್ತೀಚೆಗೆ, ಭಾರತ ಸರಕಾರದ ರಾಜಪತ್ರ ಅಧಿಸೂಚ... ಸಂಖ್ಯೆ **ಜಿ.ಎಸ್.ಆರ್. ೬೬೪ (ಇ) ದಿನಾಂಕ ೦೮. ೧**... **೧೯೮೨ರ** ಮೇರೆಗೆ ಹೈದರಾಬಾದಿನ ಮಹಾಮಹಿಮ... ನಿಜಾಮರ ಆಭರಣಗಳ ಟ್ರಸ್ಟಗೆ ಸಂಬಂಧಿಸಿದ ೦೭ ವಿವಿ... ಆಭರಣಗಳನ್ನು ಹಾಗೂ ಭಾರತ ಸರಕಾರದ ರಾಜಪ... ಅಧಿಸೂಚನೆ ಸಂಖ್ಯೆ **ಜಿ.ಎಸ್.ಆರ್. ೬೭೨ (ಇ) ದಿನಾಂ**... **೨೪.೦೭. ೧೯೮೭ರ** ಮೇರೆಗೆ ಇದೇ ಟ್ರಸ್ಟಗೆ ಸಂಬಂಧಿಸಿ... ಇನ್ನೂ ೧೯ ವಿವಿಧ ಆಭರಣಗಳನ್ನು ಕಲಾ ನಿಧಿಗಳೆಂದು ಘೋಷಿಸಲಾಗಿದೆ.

೩ನೆಯ ನಿಯಮದ ಮೇರೆಗೆ ಯಾವುದೇ ಪ್ರಾಚ್ಯಾವ
ಷ ಹಾಗೂ ಕಲಾ ನಿಧಿಯನ್ನು ರಫ್ತು ಮಾಡಲು ಅವಶ್ಯಕ
ರುವ ಅನುಮತಿಯನ್ನು ಭಾರತೀಯ ಪುರಾತತ್ವ
ರ್ವೇಕ್ಷಣದ ಮಹಾ ನಿರ್ದೇಶಕರು ನೀಡುತ್ತಾರೆ. ನಿಯಮ
ರಲ್ಲಿ ಪುರಾವಶೇಶಗಳ ವ್ಯಾಪಾರ ಮಾಡಲು ಬೇಕಾದ
ಧಿಕೃತ ಲೈಸನ್ಸನ್ನು ಪಡೆಯಲು ನಿಗದಿತ ಅರ್ಜಿಯೊಂದಿಗೆ
ಲ್ಕ (ಈಗ ಎರಡು ಸಾವಿರ ರೂಪಾಯಿ)ವನ್ನು ಸಂದಾಯ
ಾಡಬೇಕೆಂದು; ನಿಯಮ ೧೩ರಲ್ಲಿ ಯಾವನೇ ವ್ಯಕ್ತಿಯು
ರಾವಶೇಷಗಳನ್ನು ಬೇರೊಬ್ಬರಿಗೆ ಅವುಗಳ ಒಡೆತನ,
ಯಂತ್ರಣ ಅಥವಾ ಸ್ವಾಧೀನವನ್ನು ಹಸ್ತಾಂತರಿಸಿದರೆ
ಂತಹವರು ಹದಿನೈದು ದಿನಗಳೊಳಗೆ ನೋಂದಣಿ
ಧಿಕಾರಿಯ ಗಮನಕ್ಕೆ ತರಬೇಕೆಂದು ಸೂಚಿಸಲಾಗಿದೆ.

ಪ್ರತಿಯೊಬ್ಬ ಭಾರತೀಯ ನಾಗರಿಕನು ಈ ನ್ಯಾಯ
ಾಸನಗಳನ್ನು ಗೌರವಿಸಬೇಕು ಹಾಗೂ ಅವುಗಳನ್ನು
ಾಲಿಸಲು ಮನಃಪೂರ್ವಕವಾಗಿ ಪ್ರಯತ್ನಿಸಬೇಕು. ಭಾರತ
ೇಶದ ಸಾಂಸ್ಕೃತಿಕ ಸಂಪತ್ತಿನ ಅಳಿವು-ಉಳಿವಿಗಾಗಿ
ಅವಿರತವಾಗಿ ಶ್ರಮಿಸುತ್ತಿರುವ ಕೇಂದ್ರ ಮತ್ತು ರಾಜ್ಯ ಸರಕಾರ ಹಾಗೂ ಸಂಘ-ಸಂಸ್ಥೆಗಳ ವಿವಿಧ ಯೋಜನೆ ಹಾಗೂ ಪ್ರಯತ್ನಗಳಿಗೆ ನಾಗರಿಕರ ಈ ನ್ಯಾಯಶಾಸನ ಪ್ರಜ್ಞೆ ಇನ್ನೂ ಹೆಚ್ಚಿನ ಸ್ಫೂರ್ತಿಯನ್ನು ನೀಡುತ್ತದೆ.

(ಈ ಲೇಖನವನ್ನು ರೂಪಿಸುವಲ್ಲಿ ಶ್ರೀ ಕೆ.ನ್. ಶ್ರೀವಾಸ್ತವ, ಮಹಾ ನಿರ್ದೇಶಕರು, ಭಾರತೀಯ ಪುರಾತತ್ವ ಸರ್ವೇಕ್ಷಣ, ನವ ದೆಹಲಿ ಅವರ ಪ್ರೋತ್ಸಾಹ ಅವಿಸ್ಮರಣೀಯ. ವಿದ್ವನ್ಮಿತ್ರರಾದ ಶ್ರೀ ಟಿ.ಮ್ ಕೇಶವ, ಉಪ ಅಧೀಕ್ಷಕ ಪುರಾತತ್ವ ವಿದ ಹಾಗೂ ಎಂ.ವಿ. ವಿಶ್ವೇಶ್ವರ, ಸಹಾಯಕ ಅಧೀಕ್ಷಕ ಪುರಾತತ್ವವಿದ ಈ ಲೇಖನದ ಬಗೆಗೆ ಅತೀವ ಆಸಕ್ತಿ ವಹಿಸಿ ಅನೇಕ ಸಲಹೆಗಳನ್ನು ನೀಡಿದ್ದಾರೆ. ಶ್ರೀ ಷೇಕ ಸೈಫುಲ್ಲಾ ಅನೇಕ ಸೂಕ್ತ ಸಂದರ್ಭ ಗ್ರಂಥಗಳನ್ನು ಒದಗಿಸಿ ಕೊಟ್ಟಿದ್ದಾರೆ. ಭಾರತೀಯ ಪುರಾತತ್ವ ಸರ್ವೇಕ್ಷಣ, ಬೆಂಗಳೂರು ವಲಯದ ಮಿತ್ರರು ಅನೇಕ ರೀತಿಯಲ್ಲಿ ನೆರವಾಗಿದ್ದಾರೆ. ಈ ಎಲ್ಲ ಸಹೋದ್ಯೋಗಿ ಮಿತ್ರರಿಗೆ ಅನೇಕ ವಂದನೆಗಳು.)

## ಆಧಾರ ಸೂಚಿ

. ಏನ್ಸಿಯಂಟ್ ಮಾನ್ಯುಮೆಂಟ್ಸ್ ಅಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಅಂಡ್ ರಿಮೆನ್ಸ್ ಆಕ್ಟ್, ೧೯೫೮.
. ಏನ್ಸಿಯಂಟ್ ಮಾನ್ಯುಮೆಂಟ್ಸ್ ಅಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಅಂಡ್ ರಿಮೆನ್ಸ್ ರೂಲ್ಸ್, ೧೯೫೯.
. ಇಂಡಿಯನ್ ಟ್ರಜರ್ ಟ್ರೋವ್ ಆಕ್ಟ್, ೧೮೭೮.
. ಆಂಟಿಕ್ವಿಟಿಸ್ ಅಂಡ್ ಆರ್ಟ್ ಟ್ರಜರ್ಸ್ ಆಕ್ಟ್, ೧೯೭೨.
. ಆಂಟಿಕ್ವಿಟಿಸ್ ಅಂಡ್ ಆರ್ಟ್ ಟ್ರಜರ್ಸ್ ರೂಲ್ಸ್, ೧೯೭೩.

ಡಾ. ಹೆಚ್. ಚಂದ್ರಶೇಖರ*

# ಕಿತ್ತೂರು ರಾಣಿ ವೀರಮ್ಮನ ಕೊನೆಯ ದಿನಗಳು ಮತ್ತು ಸ್ಮಾರಕಗಳು

ಕಿತ್ತೂರಿನ ಇತಿಹಾಸದ ಬಗ್ಗೆ ಸಾಕಷ್ಟು ಅಧ್ಯಯನಗಳಾಗಿವೆ. ಆದರೆ ಕಿತ್ತೂರಿನ ಕೊನೆಯ ರಾಣಿ ವೀರಮ್ಮನ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿಲ್ಲ. ಕ್ಷೇತ್ರಕಾರ್ಯವನ್ನಂತೂ ನನಗೆ ತಿಳಿದ ಮಟ್ಟಿಗೆ ಯಾರೂ ಮಾಡಿಲ್ಲ. ಬಹುಶಃ ಈ ಪ್ರಬಂಧದ ಮೂಲಕ ರಾಣಿ ವೀರಮ್ಮನನ್ನು ಕುರಿತಾಗಿ ಪ್ರಕಟವಾಗಿರುವ ಸಾಹಿತ್ಯವನ್ನು ಮುಂದಿಟ್ಟುಕೊಂಡು ಕ್ಷೇತ್ರ ಕಾರ್ಯದ ಮೂಲಕ ಇನ್ನಷ್ಟು ಹೊಸ ಬೆಳಕನ್ನು ಚೆಲ್ಲುವ ಮೊದಲ ಪ್ರಯತ್ನ.

ಕಿತ್ತೂರಿನ ಮೊದಲ ಕಾಳಗದಲ್ಲಿ (೨೩-೧೦-೧೮೨೪) ಬಲಾಢ್ಯ ಬ್ರಿಟೀಶ ಸೈನ್ಯ ಹೀನಾಯವಾಗಿ ಸೋತಿತು. ಈ ಯುದ್ಧದಲ್ಲಿ ಧಾರವಾಡದ ಆಗಿನ ಕಲೆಕ್ಟರ್ ಥ್ಯಾಕರೆ ಮತ್ತಿತರ ಬ್ರಿಟೀಷ ಅಧಿಕಾರಿಗಳು ಹತರಾದರು. ಈ ಸೋಲು ಬ್ರಿಟೀಷರನ್ನು ರೊಚ್ಚಿಗೆಬ್ಬಿಸಿತು. ಅವರು ಬಹು ದೊಡ್ಡ ಸೈನ್ಯದೊಂದಿಗೆ ಎರಡನೆಯ ಬಾರಿ ಕಿತ್ತೂರಿನ ಮೇಲೆ ಧಾಳಿ ಮಾಡಿದರು. ಕಿತ್ತೂರಿನ ದಬಾರದ ಇಬ್ಬರು ಅಧಿಕಾರಿಗಳು (ತನ್ನೂರು ವೀರಸಂಗಪ್ಪ ಮತ್ತು ಹುರಕಡ್ಲಿ ಮಲ್ಲಪ್ಪ) ಕಿತ್ತೂರಿನ ಸೈನ್ಯಕ್ಕೆ ದ್ರೋಹ ಬಗೆದರು. ಆದ್ದರಿಂದ ಬ್ರಿಟೀಷರು ೫-೧೨-೧೮೨೪ರಂದು ಕಿತ್ತೂರನ್ನು ಸುಲಭವಾಗಿ ವಶಪಡಿಸಿಕೊಂಡು ರಾಣಿಚೆನ್ನಮ್ಮ ಮತ್ತು ಆಕೆಯ ಸೊಸೆಯಂದಿರಾದ ಜಾನಕಿಬಾಯಿ ಮತ್ತು ವೀರಮ್ಮನನ್ನು ಸೆರೆಹಿಡಿದು ಬೈಲಹೊಂಗಲ ಬಂದೀಖಾನೆಯಲ್ಲಿ ಕೈದಿಗಳನ್ನಾಗಿಟ್ಟರು.[೧] ರಾಣಿ ಚೆನ್ನಮ್ಮ ಮತ್ತು ಜಾನಕೀಬಾಯಿ ಅನುಕ್ರಮವಾಗಿ ೨-೨-೧೮೨೯ ಮತ್ತು ೨೦-೭-೧೮೨೯ರಂದು ಬೈಲಹೊಂಗಲ ಜೈಲಿನಲ್ಲಿಯೇ ಲಿಂಗೈಕ್ಯರಾದರು.

## ರಾಣಿ ವೀರಮ್ಮ

ಕಿತ್ತೂರಿನ ಕೊನೆಯ ರಾಣಿ ವೀರಮ್ಮ ಶಿವಲಿಂಗರುದ್ರಸರ್ಜನನ್ನು ಮದುವೆಯಾದಾಗ ಚಿಕ್ಕ ಬಾಲಕಿ (೧೮೨೩). ಶಿವಲಿಂಗರುದ್ರ ಸರ್ಜನು ಅನಾರೋಗ್ಯದಿಂದ ೧೮೨೪ರ ಸೆಪ್ಟಂಬರ್ ತಿಂಗಳಲ್ಲಿ ನಿಧನನಾದನು. ವಿಧವೆಯಾಗಿದ್ದ ರಾಣಿ ವೀರಮ್ಮ ಋತುಮತಿಯಾದುದು ಬೈಲಹೊಂಗಲ ಬಂದೀಖಾನೆಯಲ್ಲಿ (೧೮೨೫ರ ಜನವರಿ-ಫೆಬ್ರುವರಿ) ಹೀಗಾಗಿ ರಾಣಿ ವೀರಮ್ಮ ಸಂಸಾರವನ್ನು ಸುಖವನ್ನಾಗಲಿ ದೇಸಗತಿಯ ರಾಜವೈಭವವನ್ನಾಗಲಿ ಅನುಭವಿಸ ಕೊನೆಯವರೆಗೂ ಬಂದಿಯಾಗಿಯೇ ಲಿಂಗೈಕ್ಯಳಾದಳು ವೀರಮ್ಮನ ಆರೋಗ್ಯ ಸರಿ ಇರಲಿಲ್ಲ. ಆಕೆ ಸಂಗ್ರಾ ರೋಗದಿಂದ ಬಳಲುತ್ತಿದ್ದಳೆಂದು ಜಾನಪದ ಕವಿ ಹೆಬ್ಬ ಬಸವ 'ಕಿತ್ತೂರು ಚೆನ್ನವ್ವನ ಸೊಸಿ' ಎಂಬ (ಪುಟ ೨೬೩) ದೀರ್ಘ ಕಥನ ಕವನದಲ್ಲಿ ಹಾಡಿದ್ದಾನೆ.[೨] ಈ ರೋಗವು ಹೆಣ್ಣುಮಕ್ಕಳಿಗೆ ಎಳೆಯ ವಯಸ್ಸಿನಲ್ಲಿಯೇ ಪ್ರಾಣಾಂತಿಕವಾಗುವ Puberty memorrhagia ಎಂದು ಹಾವನೂರರು ಒಬ್ಬ ತಜ್ಞ ಡಾಕ್ಟರೊಂದಿಗೆ ಚರ್ಚಿ ದಾಖಲಿಸಿದ್ದಾರೆ.[೪] ಹೀಗಿದ್ದರೂ ರಾಣಿ ಚೆನ್ನಮ್ಮಳ ನೆರಳ ಬೆಳೆದ ವೀರಮ್ಮ ಬಂದೀಖಾನೆಯಲ್ಲಿದ್ದುಕೊಂಡೇ ಸಂಗೊ ರಾಯಣ್ಣ ಮತ್ತಿತರರಿಗೆ ಧನಸಹಾಯ ನೀಡಿ ಕಿತ್ತೂರನ್ನು ಪುನಃ ಗೆದ್ದುಕೊಳ್ಳುವ ಪ್ರಯತ್ನದಲ್ಲಿದ್ದಳು. ಇದನ್ನರಿತ ಬ್ರಿಟೀಷ ಅಧಿಕಾರಿ ನಿಸ್ಬತ್ (ಆಗಿನ ಧಾರವಾಡದ ಕಲೆಕ್ಟರ) ವೀರಮ್ಮನನ್ನು ಬೈಲಹೊಂಗಲದಲ್ಲಿಟ್ಟರೆ ಅಪಾಯವೆಂದು ಭಾವಿಸಿ ದೂರದ ಮಾಲೆಗಾಂವ ಅಥವಾ ಅಹ್ಮದನಗರಕ್ಕೆ ಸ್ಥಳಾಂತರಿಸಲು ನಿರ್ಧರಿಸಿದನು. ಇದನ್ನರಿತ ಕಿತ್ತೂರಿನ ನಿಷ್ಠಾವಂತ ಪ್ರಜೆಗಳ ಪ್ರತಿಭಟಿಸಿದರು. ಆದ್ದರಿಂದ ಧಾರವಾಡಕ್ಕೆ ಸ್ಥಳಾಂತರಿಸಿದನು ರಾಯಣ್ಣ ಧಾಳಿ ಮಾಡಿ ವೀರಮ್ಮನನ್ನು ಬಿಡಿಸಿಕೊಳ್ಳಬಹು ದೆಂದು ಬಗೆದು ಒಂದು ಸೈನ್ಯದ ತುಕಡಿಯನ್ನು ರಕ್ಷಣೆಗಾ ಕಳಿಸಿದ್ದನು. ಆದರೂ ಅವನಿಗೆ ಸಮಾಧಾನವಾಗಲಿಲ್ಲ ಆದ್ದರಿಂದ ಕುಸಗಲ್ ಕೋಟೆಯಲ್ಲಿ ಬಂದಿಯಾಗಿಟ್ಟನು.[೫] ಇದಿಷ್ಟು ಇದುವರೆಗೆ ಪ್ರಕಟವಾದ ಸಾಹಿತ್ಯದ ಸಂಗ್ರಹ. ಆದ ಸಂಪ್ರಬಂಧ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಲು ಪ್ರಯತ್ನಿಸಿದೆ.

೧. ಧಾರವಾಡ ಜಿಲ್ಲೆಯಲ್ಲಿ ಎರಡು ಕುಸುಗಲ್‌ಗಳ ಇವೆ. ಒಂದು ನವಲಗುಂದ ತಾಲ್ಲೂಕಿನ ಹಾಳ್ ಕುಸಗಲ (ಅಥವಾ ಹಾಲಕುಸುಗಲ್) ಇನ್ನೊಂದು ಹುಬ್ಬಳ್ಳಿ ಬ ಇರುವ ಕುಸುಗಲ್. ಈ ಎರಡು ಕುಸಗಲ್‌ಗಳಲ್ಲಿ ಯಾ

* 'ಸಂಗಮ' ಕೆ.ಹೆಚ್.ಐ.ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರ ನಗರ, ಬೆಂಗಳೂರು -೫೬೦ ೦೭೯.


PLACES RELATED TO LAST DAYS
OF RANI VEERAMMA
SCALE - 1: 2,50,000
5KM
BIJAPUR
NARGUND
NAVALGUND
DHARWAR
HUBLI
INDEX
THE PLACES
ROADS
RAILWAY LINE



ಕುಸಗಲ್ ಕೋಟೆಯ ಹೆಬ್ಬಾಗಿಲಿನ ಉಳಿದಿರುವ ಭಾಗ – ಕಮಾನು



ಕುಸಗಲ್ ಕೋಟೆಯ ಆಳವಾದ ಕಂದಕದ ಒಂದು ನೋಟ



ಕುಸಗಲ್ ಕೋಟೆಯ ಬುರುಜು ಈಗ ಕಲ್ಮೇಶ್ವರ ಗುಡಿ



ಕುಸಗಲ್ಲಿನ ಅಳಿದುಳಿದಿರುವ ಕೋಟೆಯ ಗೋಡೆ – ಮುಚ್ಚಿಹೋದ
ಕಂದಕದ ಮೇಲಿನಿಂದ ತೆಗೆದ ಚಿತ್ರ



ಕುಸಗಲ್ ಹಳೇ ಜೇಲಿನ ಕೋಟೆ ಈಗ ಉಪ್ಪಾರಗೌಡರ
ಮನೆಯ ಹೊರ ಗೋಡೆ



ಕಲ್ಮೇಶ್ವರ ಲಿಂಗ



ನವಲಗುಂದದಲ್ಲಿರುವ ಶಿರಸಿಂಗ ಲಿಂಗರಾಜರ ವಾಡೆ



ನವಲಗುಂದವಾಡೆಯ ಆವರಣದಲ್ಲಿರುವ ಸಿದ್ಧೇಶ್ವರ ಗುಡಿ



ಧಾರವಾಡ ಡಿ.ಸಿ. ಬಂಗ್ಲೆ – ಥ್ಯಾಕರೆ ಇಲ್ಲಿ ವಾಸವಾಗಿದ್ದ



ಧಾರವಾಡದ ರವಿವಾರಪೇಟೆಯಲ್ಲಿ ಕೊಂಡವಾಡಶೆಟ್ಟರ ಮನೆತನದ ನೀಲಮ್ಮ ಕೋಂ ಚಂದ್ರಶೇಖರ ನಿಂತಿದ್ದಾರೆ



ಉಳವಿ ಚನ್ನಬಸವೇಶ್ವರ – ಗುಡಿಗೇರಿಪುರ



ಧಾರವಾಡ ಡಿ.ಸಿ. ಬಂಗಲೆಯ ಕೋಣೆ. ವೀರಮ್ಮ ಸತ್ತಿದ್ದು ಇಲ್ಲಿಯೇ



ಕೊಂಡವಾಡಶೆಟ್ಟರು ಹಿಂದೆ ಮಾರಿದ ಎಡಭಾಗದ ಅಂಚಿನಲ್ಲಿರುವ ವೀರಮ್ಮನ ಸಮಾಧಿ. ಇದನ್ನು ಅವರು ಕರೆಮ್ಮನ ಕಟ್ಟೆ (ಗುಡಿ) ಎಂದು ಕರೆಯುತ್ತಾರೆ

ಕುಸಗಲ್‌ನಲ್ಲಿ ವೀರಮ್ಮನನ್ನು ಬಂದಿಯಾಗಿಡಲಾಯಿತು (ಚಿತ್ರ ೧, ನಕಾಶೆ).

೨. ಆಕೆಯನ್ನು ಬಂದಿಯಾಗಿಟ್ಟಿದ್ದ ಕುಸಗಲ್‌ನ ಕೋಟೆ ಮತ್ತು ಬಂದೀಖಾನೆಯ ಅವಶೇಷಗಳು ಇವೆಯೆ ?

೩. ಜಾನಪದ ಕವಿಯ ಪ್ರಕಾರ ವೀರಮ್ಮನು ನವಲಗುಂದದ 'ಕಾಡಸಿದ್ಧೇಶ್ವರ ಹಂತೇಲಿ' ಹೋಗಿ ವಿರಕ್ತರಿಗೆ ಕಾಣಿಕೆ ಸಲ್ಲಿಸಿದಳು. ಈ ಪ್ರಯಾಣದ ಹಿಂದೆ ಇರುವ ಉದ್ದೇಶವೇನು ?

೪. ವೀರಮ್ಮ ಧಾರವಾಡದಲ್ಲಿ ಅಸುನೀಗಿದ ಸ್ಥಳ ಯಾವುದು ?

೫. ವೀರಮ್ಮನ ಸಾವು ಸಹಜ ಸಾವೆ ? ಅಥವಾ ಆಕೆಗೆ ನಿಧಾನ ಪರಿಣಾಮ ಬೀರುವ ವಿಷದ ಗುಳಿಗೆಗಳನ್ನು ಕೊಡಲಾಯಿತೆ ?

೬. ವೀರಮ್ಮನ ಸಮಾಧಿ ಎಲ್ಲಿದೆ ? ಮತ್ತು ಆಕೆಯ ತವರು ಮನೆ ಯಾವುದು ?

ಈ ಎಲ್ಲಾ ಪ್ರಶ್ನೆಗಳಿಗೆ ನಾನು ಕೈಗೊಂಡ ಕ್ಷೇತ್ರ ಕಾರ್ಯ ಉತ್ತರಗಳನ್ನು ನೀಡಲಾಗಿದೆ. (ನಕಾಶೆ) ಅವುಗಳನ್ನು ಮುಂದಿನ ಪ್ಯಾರಾಗಳಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಕುಸಗಲ್ ಕೋಟೆ ಮತ್ತು ಬಂದೀಖಾನೆ**

ನವಲಗುಂದ ತಾಲ್ಲೂಕಿನ ಹಾಳ್ ಕುಸುಗಲ್ಲಿನಲ್ಲಿ ಯಾವ ಕೋಟೆಯ ಅವಶೇಷಗಳಿಲ್ಲ. ಆದ್ದರಿಂದ ಹುಬ್ಬಳ್ಳಿಯಿಂದ ಕೇವಲ ೫-೬ ಕಿ.ಮೀ. ಅಂತರದಲ್ಲಿರುವ ಕುಸಗಲ್ ಇರಬಹುದೆಂಬ ಊಹೆಯಿಂದ ಕ್ಷೇತ್ರಕಾರ್ಯವನ್ನು ಮುಂದುವರೆಸಿದೆ. ಈ ಕುಸುಗಲ್ಲಿನಲ್ಲಿ ಹಾಳಾಗಿರುವ ಕೋಟೆ ಇದೆ. ಸುತ್ತಲೂ ಇದ್ದ ಕಂದಕ ಕೆಲವೆಡೆ ಮಾತ್ರ ತೆರೆದುಕೊಂಡಿದೆ. ಬಹುಭಾಗ ಹೂಳಿನಲ್ಲಿ ತುಂಬಿ ಹೋಗಿ ಕೃಷಿ ಭೂಮಿಯಾಗಿ ಮಾರ್ಪಟ್ಟಿದೆ (ಚಿತ್ರ ೨,೩,೪).

ಈಗ ಕೋಟೆಯ ಒಳಭಾಗದಲ್ಲಿರುವ ಉಪ್ಪಾರಗೌಡರ ಮನೆಗೆ ಕಿಟಕಿಗಳಿಲ್ಲದ ಸುಮಾರು ೧೦೦ ಅಡಿ ಉದ್ದವಿರುವ ಗೋಡೆ ಇದೆ. ಈ ಮನೆಯ ಮುಂದೆ ಎರಡು ಸಣ್ಣ ಮನೆಗಳಿದ್ದವು. ಈಗ ಅಳಿದುಹೋಗಿವೆ. ಈ ಎಲ್ಲಾ ಲಕ್ಷಣಗಳನ್ನು ಕಂಡು ಮತ್ತು ಸ್ಥಳೀಯರ ಚರ್ಚೆಯನ್ನಾಧರಿಸಿ ಇದೇ ರಾಣಿ ವೀರಮ್ಮನನ್ನು ಬಂದಿಸಿಡಲಾಗಿದ್ದ ಬಂದೀಖಾನೆ. ಮುಂದೆ ಇದ್ದ ಚಿಕ್ಕ ಮನೆಗಳು ಕಾವಲುಗಾರರ ಕೋಣೆಗಳು ಎಂಬುದು ಸ್ಪಷ್ಟ (ಚಿತ್ರ ೫).

ಈಗ ಇರುವ ಕೋಟೆಗೆ ಸದ್ಯಕ್ಕೆ ಒಂದೇ ಒಂದು ಉಡೇವು ಇದೆ. ಅದರೊಳಗೆ ಒಂದು ಲಿಂಗ ಮತ್ತು ನಂದಿ ಶಿಲ್ಪಗಳಿವೆ. ಇದನ್ನು ಸದ್ಯ ಕಲ್ಮೇಶ್ವರ ಗುಡಿ ಎಂದು ಕರೆಯಲಾಗುತ್ತದೆ. ಬಹುಶಃ ಈ ಉಡೇವನ್ನು ಬ್ರಿಟಿಷರು ವೀರಮ್ಮನ ಪೂಜೆಗಾಗಿ ದೇವಾಲಯವನ್ನಾಗಿ ಮಾರ್ಪಡಿಸಿದರೆಂದೆನಿಸುತ್ತದೆ ಈ ದೇವಾಲಯ ಉಪ್ಪಾರಗೌಡರ ಮನೆಗೆ ಸುಮಾರು ೧೦೦ ಮೀಟರ್ ದೂರದಲ್ಲಿದೆ (ಚಿತ್ರ ೬, ೭).

ಈ ಕೋಟೆ ಮತ್ತು ಉಡೇವನ್ನು ತೀರ ಗಟ್ಟಿಮುಟ್ಟಾದ Banled Hematils Qualzite ಶಿಲೆಯಿಂದ ಕಟ್ಟಲಾಗಿದೆ.

**ನವಲಗುಂದದ ಕಾಡಸಿದ್ಧೇಶ್ವರ**

ಹೆಬ್ಬಳ್ಳಿ ಬಸವನ ಕಥನ ಕವನದಲ್ಲಿ (ಪುಟ ೨೬೩) ವೀರಮ್ಮ ನವಲಗುಂದದ ಕಾಡಸಿದ್ದೇಶ್ವರ ದೇವಸ್ಥಾನಕ್ಕೆ ಹೋಗಿ ಮಿಂದು ಮಡಿಯುಟ್ಟು ಲಿಂಗಪೂಜೆ ಮಾಡಿ ವಿರಕ್ತರಿಗೆ ಕಾಣಿಕೆ ನೀಡಿದಳೆಂದು ಹಾಡಿದ್ದಾನೆ. ಅಲ್ಲಿ ಕೆಲ ಕಾಲ ತಂಗಿರಬಹುದು. ಮೇಲ್ನೋಟಕ್ಕೆ ಇದು ಸಿರಸಂಗಿ ದೇಸಾಯಿರ ವಾಡೆಯ ಆವರಣದಲ್ಲಿರುವ ಕಾಡಸಿದ್ದೇಶ್ವರ ಗುಡಿಗೆ ಪೂಜೆಗಾಗಿ ಹೋಗಿದ್ದಳು ಎಂದೆನಿಸಿದರೂ ಆಕೆಯು ಸಿರಸಂಗಿ ದೇಸಾಯರ ಸಹಾಯ ಕೇಳಲು ಹೋಗಿರಬಹುದು ಎಂದೆನಿಸುತ್ತದೆ. ಈ ವಾಡೆ ಒಂದು ಸಣ್ಣ ಕಟ್ಟಡ. ಕಾಡಸಿದ್ಧೇಶ್ವರ ಗುಡಿಯಂತೂ ಸಣ್ಣ ಕೋಣೆಯಂತಿದೆ. ಒಳಗಿರುವ ಲಿಂಗವು ಪೀಠವಿಲ್ಲದ ಶಂಖುವಿನಾಕಾರದ (ಅಂಟಿಜ ಖುಚಿರಿಜಜ) ಶಿಲ್ಪ (ಚಿತ್ರ ೮, ೯). ಅಂಥ ಯಾವ ಮಹತ್ವ ಮತ್ತು ವೈಶಿಷ್ಟ್ಯ ಇಲ್ಲದ ರಚನೆ. ಆಗ ಸಿರಸಂಗಿ ದೇಸಾಯಿಯಾಗಿದ್ದವರು ಲಿಂಗಪದೇಸಾಯಿ. ಅವರು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿರಬಹುದು. ಅಲ್ಲಿಂದ ವೀರಮ್ಮನನ್ನು ಧಾರವಾಡಕ್ಕೆ ಕರೆತರಲಾಯಿತು.

ಧಾರವಾಡಕ್ಕೆ ಬಂದನಂತರ ಉಳವಿ ಬಸಪ್ಪನಗುಡಿಯ ಶಿಖರ ಹತ್ತಿ ಕಿತ್ತೂರನ್ನು ಕೊನೆಯ ಸಲ ನೋಡಿ ದುಃಖಿತಳಾದಳು. ಆಕೆಗೆ ಆಗಲೇ ನಿರಾಶೆಯಾಗಿತ್ತು (ಚಿತ್ರ ೧೦). ನಂತರ ಆಕೆಯನ್ನು ನಿಷ್ಬತ್ (ಟೇಬರ ?) ತನ್ನ ಬಂಗ್ಲೆಯ ಕೋಣೆಯೊಂದರಲ್ಲಿ ಬಂದಿಯಾಗಿಟ್ಟನು. ಆಕೆಗೆ ಅಂದಿನ ಸಿವಿಲ್ ಸರ್ಜನ್‌ರಿಂದ "ಗುಳಿಗಿ"ಗಳನ್ನು ಹಾಲಿನಲ್ಲಿ ಬೆರಸಿ ತಾನೇ ನಿಂತು ಆರು ತಾಸಿಗೊಮ್ಮೆ ಕುಡಿಸುತ್ತಾನೆ (೨೬೭-೨೬೮)[೩]. ಆ ಗುಳಿಗಿಗಳು ವೀರಮ್ಮನ ರೋಗ ಗುಣವಾಗಲಿ ಎಂದು ಕುಡಿಸಿರಬಹುದು ಎಂದ ಹಾವನೂರು ಹೇಳಿದ್ದಾರೆ[೪] (ಪುಟ ೬೩). ಆದರೆ ಅವು ನಿಜವಾಗಿಯೂ ನಿಧಾನ ವಿಷವೇರುವ ಗುಳಿಗೆಗಳು. ಯಾಕೆಂದರೆ ತನ್ನ ಹಾಡಿನ ಕೊನೆಯಲ್ಲಿ ಹೀಗೆ ನೋವಿನಿಂದ ಹೇಳಿದ್ದಾನೆ.

> **"ಅತ್ತಲಾಗ ಆರು ತಾಸು ಇತ್ತಲಾಗ ಆರು ತಾಸು**
> **ಈರವ್ವ ಜೀವ ಬಿಡತಾಳ ।**

ಬೇಬರ ಸಾಹೇಬ ಈರಾ ಈರಾ ಅಂತ ಕರಿತಾನ ।
ಈರವ್ವ ಯಾಕಪ್ಪ ಅನ್ನು ದನಿಯಿಲ್ಲ
ಬೇಬರ ಸಾಹೇಬ ಕದಗಳ ತಗದ ನಗತಾನ ।
ಬೇಬರ ಸಾಹೇಬ ಸತ್ತಾಳವಳಂದ ನಗತಾನ ।"

ಬೇಬರ ಸಂತೋಷದಿಂದ ನಗಬೇಕಾದರೆ ಅವನು ಹೂಡಿದ ಸಂಚು ಫಲಿಸಿತು ಎಂದರ್ಥ !!

**ವೀರಮ್ಮನ ಸಮಾಧಿ ಮತ್ತು ತವರುಮನೆ**

ವೀರಮ್ಮನು ತೀರಿದ ಕೋಣೆ ಇಂದಿಗೂ ಧಾರವಾಡದ ಡಿ.ಸಿ. ಬಂಗ್ಲೆಯಲ್ಲಿ ಅದೇ ಸ್ಥಿತಿಯಲ್ಲದೆ (ಚಿತ್ರ ೧೧, ೧೨). ಆಕೆಯ ಪಾರ್ಥೀವ ಶರೀರವನ್ನು ವಿಮಾನದಲ್ಲಿ ಕೂಡಿಸಿ ಧಾರವಾಡದ ಪ್ರಮುಖ ಬೀದಿಗಳಲ್ಲಿ ರಾಜಮರ್ಯಾದೆ ಯೊಂದಿಗೆ ದುಃಖಿತ ಜನರು ಒಯುತ್ತಾರೆ ಎಂದು ಹೆಬ್ಬಳ್ಳಿ ಬಸವ ಚಿತ್ರವತ್ತಾಗಿ ಬಣ್ಣಿಸಿದ್ದಾನೆ. ಆದರೆ ಎಲ್ಲ ಸಮಾಧಿ ಮಾಡಿದರೆಂದು ಈ ಕಥನ ಕವನದಲ್ಲಿ ಹೇಳಿಲ್ಲ.

ಆದ್ದರಿಂದ ನಾನು ಧಾರವಾಡದ ಲಿಂಗಾಯತರ ಸಮಾಧಿಗಳಿರುವ ರುದ್ರ ಭೂಮಿಗಳನ್ನು ಶ್ರೀ ಶಂಕರ ಕುಂಬಿಯವರೊಂದಿಗೆ ಹುಡುಕಾಡಿ ನಿರಾಶನಾದೆ. ಆದರೆ ಶಂಕರಕುಂಬಿ ಕಿತ್ತೂರಿನ ತನಗೆ ಪರಿಚಯದ ಹಿರಿಯ ರೊಂದಿಗೆ ಮಾತನಾಡಿ ಧಾರವಾಡದ ರವಿವಾರಪೇಟೆಯ ಕೊಂಡವಾಡ ಶೆಟ್ಟರ ಮನೆ ಮತ್ತು ಯಾಲಕ್ಕಿ ಕೊಂಡವಾಡ ಶೆಟ್ಟರ ಮನೆಯಲ್ಲಿ ವಿಚಾರಿಸಿದರೆ ಗೊತ್ತಾಗಬಹುದೆಂದು ಹೇಳಿದರು. ಕೊನೆಯ ಪ್ರಯತ್ನವೆಂದ ನಾನು, ಕಲಬುರ್ಗಿ ಮತ್ತು ಶಂಕರಕುಂಬಿ ರವಿವಾರ ಪೇಟೆಗೆ ಹೋದೆವು. ಕೊಂಡವಾಡ ಶೆಟ್ಟರ ಮನೆಗೆ ಹೋದೆವು. ನಮ್ಮನ್ನು ಕಂಡು ಒಂದು ಸಣ್ಣ ಕೋಟೆಯಿಂದ ಒಬ್ಬ ಮಧ್ಯ ವಯಸ್ಸಿನ ವಿಧವೆ ಹೊರಬಂದರು (ಚಿತ್ರ ೧೩). ಅವರಿಗೆ ಅಚ್ಚರಿ, ನಮಗೆ ಕುತೂಹಲ. ನಾವೆಲ್ಲಾ ನಮ್ಮ ಪರಿಚಯ ಹೇಳಿಕೊಂಡೆವು. ಆಕೆ ತಾನು ನೀಲಮ್ಮ ಈ ಮನೆಯ ಸೊಸೆಯೆಂದು ಹೇಳಿದಳು. ನಾವು 'ಈ ಮನೆಗೂ ಕಿತ್ತೂರು ದೇಸಗತಿಗೂ ಏನಾದರೂ ಸಂಬಂಧವಿದೆಯೆ ?" ಎಂದು ಕೇಳಿದೆವು. ಆಕೆ ತಕ್ಷಣ "ಕಿತ್ತೂರು ವೀರಮ್ಮನ ತವರುಮನೆ ಇದೆಂದು ನಮ್ಮ ಹಿರಿಯರು ಹಿಂದಿನಿಂದಲೂ ಹೇಳುತ್ತಾ ಬಂದಿದ್ದಾರೆ. ಆದರೆ ಯಾವ ದಾಖಲೆಗಳಿಲ್ಲ" ಎಂದು ಹೇಳಿದರು. ಅಷ್ಟೇ ಸಾಕೆಂದು ಹಿಂತಿರುಗಲು ಕಲಬುರ್ಗಿ ಹೇಳಿದರು. ನಾನು ಕೊಂಚ ತಡೆಯಿರಿ ಎಂದು ಹೇಳಿ ನೀಲಮ್ಮನವರ ಅಪ್ಪಣೆ ಪಡೆದು ಆ ಮನೆಯ ಹಿಂಬದಿ ಮತ್ತು ಬಲ ಬದಿಯ ಬಯಲನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದೆನು. ಆ ಮನೆಯ ಬಲಬದಿಯಲ್ಲಿ ಒಂದು ಹಸಿರು ಬಣ್ಣ ಬಳಿಯಲ್ಪಟ್ಟ ಒಂದು ಕಟ್ಟೆ ನನ್ನ ಗಮನ ಸೆಳೆಯಿತು. (ಚಿತ್ರ ೧೪) ಕಟ್ಟೆ ಕೆಳಗಡೆ ಒಂದು ಹಣತೆ ಉರಿಯುತ್ತಿತ್ತು. ಆಗ ವಿಚಾರಿಸಲಾಗಿ ನೀಲಮ್ಮನವರು ಇದನ್ನು ಕರೆಮ್ಮನ ಕಟ್ಟೆ ಎಂದು ಕರೆಯುತ್ತೇವೆ ಎಂದು ಹೇಳಿದರು. ತನಗೆ ಅದು ಸಮಾಧಿ ಎನ್ನುವುದು ತೋರಿತು. ಎಲ್ಲಾ ಲಕ್ಷಣಗಳಿವೆ (ಚಿತ್ರ ೧೪) ಅದು ವೀರಮ್ಮನ ಸಮಾಧಿ. ಕಾಲಾಂತರದಲ್ಲಿ ಅದು ವೀರಮ್ಮನ ಕಟ್ಟೆಯ ಹೆಸರನ್ನು ಪಡೆಯಿತು. ನಂತರ ಈಗ ಅದನ್ನು ಕರೆಮ್ಮನಕಟ್ಟೆ ಎಂದು ಕರೆಯುತ್ತಾರೆ. ಈ ನಾಮಾಂತರವನ್ನು ಹೀಗೆ ಹೇಳಬಹುದು. ವೀರಮ್ಮನ ಸಮಾಧಿ, ವೀರಮ್ಮನ ಕಟ್ಟೆ, ಕರೆಮ್ಮನ ಕಟ್ಟೆ. ನಾನು ಇದನ್ನು ವಿವರಿಸಿದಾಗ ಗೆಳೆಯ ಕಲಬುರ್ಗಿ ಇದು ಸಾಧ್ಯ ಎಂದು ಒಪ್ಪಿದರು. ಹಿಂದಿನ ಕಾಲದಲ್ಲಿ ಶ್ರೀಮಂತರು ತಮ್ಮ ಸಂಬಂಧಿಕರ ಪಾರ್ಥೀವ ಶರೀರವನ್ನು ತಮ್ಮ ಹೊಲ ಅಥವಾ ಮನೆಯ ಆವರಣದಲ್ಲಿ ಹೂತು ಅದನ್ನು ಸಮಾಧಿ ಕಟ್ಟೆ ಎಂದು ಕರೆದು ಪೂಜಿಸುತ್ತಿದ್ದರು. ನಮ್ಮ ಶೋಧನೆ ಫಲಿಸಿತು ಎಂಬ ಸಂತೋಷ ನಮ್ಮದಾಯಿತು.

(ಕೃತಜ್ಞತೆಗಳು : ನನ್ನ ಕ್ಷೇತ್ರ ಕಾರ್ಯಕ್ಕಾಗಿ ವಾಹನ ಸೌಕರ್ಯವನ್ನು ನೀಡಿದ ಗದಗಿನ ಡಾ॥ ತೋಂಟದ ಶ್ರೀಗಳಿಗೆ ಭಕ್ತಿಪೂರ್ವಕ ನಮನಗಳು. ಕ್ಷೇತ್ರ ಕಾರ್ಯದಲ್ಲಿ ನೆರವಾದ ಕುಸಗಲ್ಲಿನ ಶ್ರೀ ಸೋಮನಗೌಡರಿಗೂ, ನವಲಗುಂದದ ಶ್ರೀ ಎ.ಎಸ್. ಬಾಗಿಯವರಿಗೂ ಕೃತಜ್ಞತೆಗಳು. ಎರಡು ದಿನಗಳ ಕಾಲ ನನ್ನೊಡನೆ ತಮ್ಮ ಕಾರಿನೊಂದಿಗೆ ಸುತ್ತಾಡಿದ ಧಾರವಾಡದ ಸಮಾಜ ಸೇವಾ ಸೇವಕ ನಿಸ್ವಾರ್ಥಿ ಶಂಕರಕುಂಬಿ ಅವರಿಗೆ ನಾನು ಚಿರಋಣಿ. ನನ್ನೊಡನೆ ಒಂದು ದಿನ ಸುತ್ತಾಡಿದ ಗೆಳೆಯ ಪ್ರೊ. ಎಂ.ಎಂ. ಕಲಬುರ್ಗಿಯವರಿಗೆ ಪ್ರೀತಿಯ ನಮನಗಳು.

ಗೆಳೆಯ ಶ್ರೀ ವಿ.ಎಸ್. ಪ್ರಕಾಶ, ಶ್ರೀ ವೆಂಕಟಸ್ವಾಮಿ ಮತ್ತು ಶ್ರೀ ಈಶ್ವರ ಅವರಿಗೆ ವಂದನೆಗಳು.)

## ಆಕರ ಗ್ರಂಥ

೧. ಸದಾಶಿವ ಒಡೆಯರ್., (೧೯೮೯), *Rani Chennamma*, N.B.T. Publications, New Delhi.
೨. ಕಲಬುರ್ಗಿ, ಎಂ.ಎಂ., (೨೦೦೭), 'ಕಿತ್ತೂರು ರಾಣಿ ವೀರಮ್ಮ', ಲಿಂಗಾಯತ ಮಾಸಿಕ, ಸಂ. ೬೭೩, ಸಂಚಿಕೆ ೪, ಪು. ೩–೪, ಲಿಂಗಾಯತ ಸಂಶೋಧನಾ ಕೇಂದ್ರ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.
೩. ಕಲಬುರ್ಗಿ, ಎಂ.ಎಂ. ಪಾವಟೆ ಚೆನ್ನಕ್ಕ (೧೯೯೯), **ಕಿತ್ತೂರು ಸಂಸ್ಥಾನ ಸಾಹಿತ್ಯ**, ಪು. ೨೫೯–೨೬೮ ಲಿಂಗಾಯತರ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ.
೪. ಹಾವನೂರು ಶ್ರೀನಿವಾಸ (೨೦೦೬), **ಮರೆಯಲಾಗದ ಮುಂಬಯಿ ಕರ್ನಾಟಕ**, ಪು. ೫೬–೬೪, ಪ್ರ : ಅವರೇ, ನಂ. ೬೩, ಸೌತ್ ಕ್ರಾಸ್ ರೋಡ್, ಬಸವನಗುಡಿ, ಬೆಂಗಳೂರು.

HIGHLIGHTS

## Presidential Speech

*Dr. Vasundhara Felliozaja*

### Religious Harmony and our water Traditions

Every body must love their home, nativeplace and nation. They must try to develope it and keep it safe for the future generation. Instead of immitating and superstious following Britishers we have to look to our land Karnataka which is flooded with cultural and natural abundance.

We have abundant Swayamboo shiva temples and it is not an exaggeration. As a matter of fact the tradition of construction of temples started at Ihole from about 634-35 A.D. This is inscriptionaly also evident. This rose to fame during Kalyani Chalukya and Hoysala. Since Kalamukhas and Pashupatas were devotees of Shiva, Shaiva temples gain more importance among Hindu temples at the outset. Lakulisha's devotees like Kalamukhas, Pashupatas came to Karnataka during Badami Chalukyas. These Kalamukhas at the time of "Deeksha" used to put black marks on the different parts of the body other than the face. The temples constructed at their instance were three sanctum type, Shiva at the centre, Vishnu and Bhrama in other sanctums. Ganesha, Durga Saptamatrikas, Saraswathi used to be installed on the southern parts. This structure was based on Vatula Shuddhagama. Since they were not distinguishing between shiva and vishnu in their worship and on the basis of Agamas they can be called as "Mishra shaivas". Kamalamukhas and pashupathas use to give prominence to Vedas, Upanishaths, Vyakarana and Yoga and they use to merge in the study of them. The study kannada also given importance and the teachers of that subject add spcial income. The inscriptions engraved and their instance were offen poetic and music oriented. Since the tans also use to be constructed near the temples it use to help to maintain the ecological balance avoiding earthquakes in nutshell. Hence at present times taking lessons of this history the tanks should be rennovated, the slug removed which is also technically important.

## Dr. B.R Gopal Award Special lecture

*by Dr. P.N. Narasihma Murthy*

### My foot steps in the Ephigraphy studies

The path I tred in my research field is innvoled in the study of inscriptions which were already published and the new inscriptions I discorvered. I studed the opinion by fleet on Kadamba thri Parvatha and Dr. Ramesh's study of Thalagunda inscriptions and went to shishila and came to the opinion that shishila alone was Kadamaba Shri Parvata (Thri Parvata). Anyhow more study is required in this regard. I also discoverd Basadies and one new inscriptions here. Shishila which was an place during Kadambas was confirmed by knowing Shri Pruthvi the Kadamba ruled by through this inscription. Similarily Azila and Bhanga Jaina kings families, the history of Dharmastala have also come to my study. Similar discoveries have been made in different parts of south canara through inscriptions. which has given satisfation to me.

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| | | | ಸರ್ವಶ್ರೀ | ಸರ್ವಶ್ರೀ | |
| ೩೦. | ೨೨.೧೦.೦೮ | ಬಸವೇಶ್ವರ ಕಲಾ ಮಹಾವಿದ್ಯಾಲಯ ಬಾಗಲಕೋಟೆ | ಪ್ರೊ. ವಿ.ಕೆ. ಮೊರಬದ (ಪ್ರಾಚಾರ್ಯರು) | ಪ್ರೊ. ಪಿ.ವ್ಹಿ. ಗದ್ದಗಿ ಮಠ (ಸ್ವತಂತ್ರ ಕಲಾ ಹಾಗೂ ವಿಜ್ಞಾನ ಪದವಿ ಪೂರ್ವ ಮಹಾವಿದ್ಯಾಲಯ ವಿದ್ಯಾಗಿರಿ, ಬಾಗಲಕೋಟೆ) | |
| ೩೧. | ೨೩.೧೦.೦೮ | ಬಸವೇಶ್ವರ ಕಲಾ ಮಹಾವಿದ್ಯಾಲಯ ಬಾಗಲಕೋಟೆ | ಪ್ರೊ. ವಿ.ಕೆ. ಮೊರಬದ ಪ್ರಾಚಾರ್ಯರು | ಡಾ. ಶೀಲಾಕಾಂತ ಪತ್ತಾರ | ಕಾರ್ಯಕ್ರಮ ಸಂಯೋಜಕರು ಪ್ರೊ. ಎಸ್.ಎನ್. ರಾಂಪೂರ |
| ೩೨. | ೧೭.೧೧.೦೮ | ವಾಲ್ಮೀಕಿ ಪ್ರೌಢಶಾಲೆ ದಾಗಿನಕಟ್ಟೆ | ಹೆಚ್. ನೀಲಪ್ಪ, ಅಧ್ಯಕ್ಷರು ತಾ॥ ಕ.ಸಾ.ಪ., ಚನ್ನಗಿರಿ | | ಕನ್ನಡ ರಸಪ್ರಶ್ನೆ ಕಾರ್ಯಕ್ರಮವನ್ನು ಸಂತೇಬೆನ್ನೂರು ಸುಮತೀಂದ್ರ ನಾಡಿಗ್ |
| ೩೩. | ೦೬.೧೨.೦೮ | ವಿಜಯ ಯುವಕ ಸಂಘ, ಸಂತೇಬೆನ್ನೂರು ಕಾಲೇಜು, ಉಜಿರೆ | ಕೆ. ಸಿದ್ಧಲಿಂಗಪ್ಪ ಕಾರ್ಯದರ್ಶಿ | | ಯೋಜಿಸುತ್ತಿದ್ದರು. ಕನ್ನಡ ರಸಪ್ರಶ್ನೆ ಸಂತೇಬೆನ್ನೂರು ಸುಮತೀಂದ್ರ ನಾಡಿಗ್ |
| ೩೪. | ೧೨.೧೨.೦೮ | ಸರ್ಕಾರಿ ಪದವಿ ಪೂರ್ವ ಕಾಲೇಜು, ಚಿರಡೋಣಿ | ಹೆಚ್. ನೀಲಪ್ಪ, ಅಧ್ಯಕ್ಷರು (ತಾಲ್ಲೂಕು ಕ.ಸಾ.ಪ., ಚನ್ನಗಿರಿ) | | ಕನ್ನಡ ರಸಪ್ರಶ್ನೆ ಸಂತೇಬೆನ್ನೂರು ಸುಮತೀಂದ್ರ ನಾಡಿಗ್ |
| ೩೫. | ೨೦.೦೨.೦೯ | ಫ.ಚ.ಮ. ಸರಕಾರಿ ಪದವಿಪೂರ್ವ ಕಾಲೇಜು ಗುಡಗೇರಿ, ಧಾರವಾಡ ಜಿ. | ಬಿ. ತ್ರಿಲೋಕೆಕರ ಕೊಟ್ಟೂರೇಶ್ವರ ಪದವಿ ಪೂರ್ವ ಕಾಲೇಜು, ಕೊಟ್ಟೂರು, ಆರ್.ಕೆ. ಅಂಬೊರೆ, ಪ್ರಾಚಾರ್ಯರು ಸಂಘಟಕರು : ಎಂ.ಪಿ. ಕುಂಬಾರ | ಗಂಗಾಧರ ಧರೆಣ್ಣವರ, ತಾ.ಪಂ. ಸದಸ್ಯರು, ಕುಂದಕೋಳ ಎಫ್.ಬಿ. ಸೊರಟೂರ, ಸರಕಾರಿ ಪ.ಪೂ. ಕಾಲೇಜು ಗೋಪನಕೊಪ್ಪ, ಹುಬ್ಬಳ್ಳಿ | |

ವಿ.ಸೂ : ಒಟ್ಟು ೩೫ ಸ್ಥಳಗಳಿಗೂ ಮೀರಿ ನಾನಾ ಕಡೆಗಳಲ್ಲಿ ನಡೆದ ಕಾರ್ಯಕ್ರಮದ ವಿವರಗಳನ್ನು ಇಲ್ಲಿ ಪ್ರಕಟಿಸಿದ್ದು ಇನ್ನೂ ಹಲವಾರು ಊರುಗಳಲ್ಲಿ ಕಾರ್ಯಕ್ರಮ ನಡೆಸಿದ್ದರೂ ವರದಿಗಳು ಬಂದಿರುವುದಿಲ್ಲ.

**ಇಪ್ಪತ್ತೆರಡನೆಯ ವಾರ್ಷಿಕ ಸಮ್ಮೇಳನ**

ಶ್ರೀಕ್ಷೇತ್ರ ಧರ್ಮಸ್ಥಳದ ಶ್ರೀ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಮತ್ತು ಉಜಿರೆಯ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜಿನ ಅಶ್ರಯ ಮತ್ತು ಸಹಯೋಗದಲ್ಲಿ ಶ್ರೀಕ್ಷೇತ್ರ ಧರ್ಮಸ್ಥಳದ ಮಹೋತ್ಸವ ಭವನದಲ್ಲಿ ೨೦೦೮ರ ಸೆಪ್ಟೆಂಬರ್ ೧೮, ೧೯, ೨೦ ಮತ್ತು ೨೧ರಂದು ನಡೆಯಿತು. ಕರ್ನಾಟಕ ಇತಿಹಾಸ ಅಕಾದೆಮಿಯ ಇಪ್ಪತ್ತೆರಡನೆಯ ವಾರ್ಷಿಕ ಸಮ್ಮೇಳನದ ನೇತೃತ್ವವನ್ನು ಶ್ರೀಕ್ಷೇತ್ರ ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಡಾ॥ ವೀರೇಂದ್ರ ಹೆಗ್ಗಡೆಯವರು ವಹಿಸಿದ್ದರು.

ಪ್ರತಿ ವರ್ಷದಂತೆ ಈ ವರ್ಷ ವಾರ್ಷಿಕ ಸಮ್ಮೇಳನವು ಮೂರು ದಿನಗಳ ಬದಲಿಗೆ ನಾಲ್ಕು ದಿನ ನಡೆದುದು ವಿಶೇಷವಾಗಿತ್ತು. ದಿನಾಂಕ ೧೮-೯-೨೦೦೮ರಂದು ಸಂಜೆ ೪.೩೦ಕ್ಕೆ ಶ್ರೀಕ್ಷೇತ್ರ ಧರ್ಮಸ್ಥಳದ ಡಾ॥ ವೀರೇಂದ್ರ ಹೆಗ್ಗಡೆ ಅವರು ಅಕಾದೆಮಿಯ ೨೨ನೆಯ ವಾರ್ಷಿಕ ಸಮ್ಮೇಳನವನ್ನು ಉದ್ಘಾಟಿಸಿದರು. ಸಮ್ಮೇಳನಾಧ್ಯಕ್ಷರಾಗಿ ಖ್ಯಾತ ಇತಿಹಾಸ ತಜ್ಞೆ ಡಾ॥ ವಸುಂಧರಾ ಫಿಲಿಯೋಜಾ ಉಪಸ್ಥಿತರಿದ್ದರು. ಮುಖ್ಯ ಅತಿಥಿಯಾಗಿ ನವದೆಹಲಿಯ ನ್ಯಾಷನಲ್ ಮ್ಯೂಸಿಯಂ ಇನ್ಸ್‌ಟಿಟ್ಯೂಟ್‌ನ ಸಂರಕ್ಷಣಾ ವಿಭಾಗದ ಡೀನ್ ಡಾ॥ ಕೆ.ಕೆ.ಜೈನ್ ಭಾಗವಹಿಸಿದ್ದರು.ಈ ವರ್ಷ ಡಾ॥ ಬಾ.ರಾ.ಗೋಪಾಲ್ ಪ್ರಶಸ್ತಿ ಪಡೆದ ಡಾ॥ ಪಿ.ಎನ್. ನರಸಿಂಹಮೂರ್ತಿ ಅವರೂ ವೇದಿಕೆಯ ಮೇಲಿದ್ದರು.

ಡಾ॥ ಬಾ.ರಾ.ಗೋಪಾಲ್ ಪ್ರಶಸ್ತಿಯನ್ನು ಡಾ॥ ಪಿ.ಎನ್. ನರಸಿಂಹಮೂರ್ತಿ ಅವರಿಗೆ ದ.ಕ.ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಪ್ರದೀಪಕುಮಾರ್ ಕಲ್ಕೂರ ಪ್ರದಾನ ಮಾಡಿದರು. ಸಮ್ಮೇಳನದಲ್ಲಿ ಡಾ. ಎಂ.ಜಿ. ನಾಗರಾಜ್ ಮತ್ತು ಡಾ. ಪಿ.ವಿ. ಕೃಷ್ಣಮೂರ್ತಿ 'ಇತಿಹಾಸ ದರ್ಶನ' ದ ೨೩ನೆಯ ಸಂಚಿಕೆಯನ್ನು ನಿಕಟಪೂರ್ವ ಸಮ್ಮೇಳನಾಧ್ಯಕ್ಷ ಪ್ರೊ॥ ಲಕ್ಷಣ್ ತೆಲಗಾವಿ ಬಿಡುಗಡೆ ಮಾಡಿದರು. ಸಮಾರಂಭದಲ್ಲಿ ಡಾ॥ ಚೂಡಾಮಣಿ ನಂದಗೋಪಾಲ್ ಅವರ 'ಶಿಲೆ ಕಲೆ', ಶ್ರೀಮತಿ ಹನುಮಾಕ್ಷಿ ಗೋಗಿ ಅವರ ಅನುವಾದಿತ ಕೃತಿ 'ಕಾಳಾಮುಖ ಮತ್ತು ಪಾಶುಪತ ದೇವಾಲಯಗಳು' (ಮೂಲ: ಡಾ॥ ವಸುಂಧರಾ ಫಿಲಿಯೋಜಾ), ಮತ್ತು 'ಲಕ್ಕುಂಡಿಯ ಶಾಸನಗಳು' ಮತ್ತು ಶ್ರೀಮತಿ ಹನುಮಾಕ್ಷಿ ಗೋಗಿ ಮತ್ತು ಡಾ॥ ಪಿ.ಕೆ.ರಾಥೋಡ್ ಅವರ 'ಡಂಬಳ – ಒಂದು ಸಾಂಸ್ಕೃತಿಕ ಅಧ್ಯಯನ', ಕೃತಿಗಳನ್ನು ಶ್ರೀಕ್ಷೇತ್ರ ಧರ್ಮಸ್ಥಳದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷರಾದ ಪ್ರೊ॥ ಎಸ್. ಪ್ರಭಾಕರ್ ಬಿಡುಗಡೆ ಮಾಡಿದರು. ಅಕಾದೆಮಿಯ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸುತ್ತಿರುವ ಶ್ರೀ ಪಾ. ಅನಂತರಾಜ ಇಂದ್ರ ಅವರನ್ನು ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಡಿ. ಹರ್ಷೇಂದ್ರ ಕುಮಾರ್ ಸನ್ಮಾನಿಸಿದರು. ಸಮ್ಮೇಳನದ ಸಂದರ್ಭಕ್ಕೆ ವಿಶೇಷವಾಗಿ ಆಯೋಜಿಸಲಾಗಿದ್ದ ಪುಸ್ತಕ ಮತ್ತು ವಸ್ತು ಪ್ರದರ್ಶನವನ್ನು ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಉದ್ಘಾಟಿಸಿದರು. ಉದ್ಘಾಟನಾ ಸಮಾರಂಭದಲ್ಲಿ ಈ ವರ್ಷ ಪಿಎಚ್.ಡಿ., ಪಡೆದ ಆಕಾದೆಮಿಯ ೧೭ ಸದಸ್ಯರನ್ನು ಅಕಾದೆಮಿಯ ಪರವಾಗಿ ಶ್ರೀ ಪ್ರದೀಪ್ ಕುಮಾರ್ ಕಲ್ಕೂರ ಸನ್ಮಾನಿಸಿದರು. ಸನ್ಮಾನಿತರಾದವರ ಪಟ್ಟಿ ಈ ಕೆಳಕಂಡಂತಿದೆ :

| ಕ್ರ. ಸಂ. | ಪಿಎಚ್.ಡಿ./ಡಿ.ಲಿಟ್ ಪದವಿ ಪಡೆದವರ ಹೆಸರು | ಮಾರ್ಗದರ್ಶಕರ ಹೆಸರು | ವಿಷಯ | ವಿಶ್ವವಿದ್ಯಾಲಯ |
|---|---|---|---|---|
| ೧ | ಕುಮಾರಸ್ವಾಮಿ | ಪ್ರೊ. ಜಿ. ರಾಮರತನ್ | ಮೈಸೂರು ಸಂಸ್ಥಾನದ ರಾಷ್ಟ್ರೀಯ ಹೋರಾಟದಲ್ಲಿ ಸ್ಥಳೀಯ ಪತ್ರಿಕೆಗಳ ಪಾತ್ರ | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮೈಸೂರು |
| ೨ | ಎಂ.ಎಸ್. ನರೇಗಲ್ಲ | ಡಾ. ಡಿ.ಪಿ. ಪರಮ ಶಿವಮೂರ್ತಿ | ಉತ್ತರ ಗದಗ ಜಿಲ್ಲೆಯ ಶಾಸನಗಳು: ಒಂದು ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೩ | ಶ್ರೀಮತಿ ಗಿರಿಜಾ | ಡಾ. ಡಿ.ಪಿ. ಪರಮ ಶಿವಮೂರ್ತಿ | ಸಂಡೂರು ತಾಲ್ಲೂಕು : ಒಂದು ಚಾರಿತ್ರಿಕ ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೪ | ಎಸ್.ಜಿ. ರಾಮದಾಸ ರೆಡ್ಡಿ | ಡಾ. ಎನ್.ಎಸ್. ರಂಗರಾಜು | ವೇದಾವತಿ ನದೀ ತೀರದ ಒಂದು ಸಾಂಸ್ಕೃತಿಕ ಅಧ್ಯಯನ | ಮೈಸೂರು ವಿಶ್ವವಿದ್ಯಾನಿಲಯ ಮೈಸೂರು |

| [illegible] | [illegible] | | ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ ಮತ್ತು ಕರ್ನಾಟಕದ ಪತ್ರಿಕೋದ್ಯಮ | [illegible] ಬೆಂಗಳೂರು |
|---|---|---|---|---|
| ೬ | ಶ್ರೀಮತಿ ಸಿದ್ಧಲಿಂಗಮ್ಮ ಬಿ.ಜಿ. | ಡಾ. ರಾಜಾರಾಮಹೆಗ್ಗಡೆ | ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲ ಕರ್ಮಿಗಳು: ಒಂದು ಸಾಮಾಜಿಕ ಮತ್ತು ಚಾರಿತ್ರಿಕ ಅಧ್ಯಯನ | ಕುವೆಂಪು ವಿಶ್ವವಿದ್ಯಾಲಯ ಶಂಕರಘಟ್ಟ |
| ೭ | ಗೋವಿಂದಶೆಟ್ಟಿ | ಡಾ. ಸೋಮಶೇಖರ | ಖಂಭಿಚಟ ಠಿಡಿಂಜಿಟಛಿ ಂಜ ಒಥಿಂಡಿಜ[illegible]ಕಛಿಠಿಜಭಿಣುತಛಿ ಜಿಡಿತಟ [illegible] ಉಟಟಿಚಿಟು,ಂಭಛಜ ಆಣಾಛಿಥು & ಈಡಿಚಿಟಿಛಿ ಃಣಾಛಿಚಿಟಿಚಿಟಿ | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮೈಸೂರು |
| ೮ | ಡಿ.ಎಂ. ನಾಗರಾಜು | ಡಾ. ಎಂ.ಪಿ. ಮಹದೇವಯ್ಯ | ಕಲ್ಯಾಣ ಚಾಲುಕ್ಯ ೬ನೆಯ ವಿಕ್ರಮಾದಿತ್ಯನ ಶಾಸನಗಳ ಸಾಂಸ್ಕೃತಿಕ ಅಧ್ಯಯನ | ಮೈಸೂರು ವಿಶ್ವವಿದ್ಯಾಲಯ ಮೈಸೂರು |
| ೯ | ಎಸ್.ಎಲ್. ಶ್ರೀನಿವಾಸಮೂರ್ತಿ | ಡಾ. ಸಿ.ಯು. ಮಂಜುನಾಥ್ | ಬಿ.ಎಲ್. ರೈಸ್ ಹಾಗೂ ಕನ್ನಡ ಸಂಶೋಧನೆಯ ಕ್ಷೇತ್ರಕ್ಕೆ ಅವರ ಕೊಡುಗೆ: ಒಂದು ಅಧ್ಯಯನ | ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು |
| ೧೦ | ಪಾಟೀಲ ಕರೆಪ್ಪಗೌಡ ಸಿದ್ಧನಗೌಡ | ಡಾ. ಶ್ರೀನಿವಾಸ ಪಾಡಿಗಾರ | ಹೂಲಿ ಮತ್ತು ಲಕ್ಕುಂಡಿ ದೇವಾಲಯಗಳು : ಒಂದು ತೌಲನಿಕ ಅಧ್ಯಯನ | ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ |
| ೧೧ | ರಾಕೇಶ್ ಜಿ.ಸಿ. | ಡಾ. ಎಂ.ವೈ. ಸಾವಂತ್ | ವಿಜಯನಗರ ಕಾಲದ ಇತಿಹಾಸ ಲೇಖನ ಕಲೆ – ತುಳುವ ವಂಶ | ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ |
| ೧೨ | ಸತ್ಯನಾರಾಯಣ್ ಬಿ.ಆರ್. | ಡಾ. ದೇವರಕೊಂಡಾರೆಡ್ಡಿ | ಸರಸ್ವತೀ ದರ್ಶನ (ಸಾಹಿತ್ಯ, ಶಾಸನ, ಜಾನಪದ ಮತ್ತು ಶಿಲ್ಪಗಳ ಹಿನ್ನೆಲೆಯಲ್ಲಿ) | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೩ | ಶ್ರೀಮತಿ ಲಲಿತಾಂಬ ಎಸ್.ಆರ್. | ಡಾ. ಪರಮಶಿವಮೂರ್ತಿ | ಅರಸೀಕೆರೆ ತಾಲ್ಲೂಕಿನ ಶಾಸನಗಳ ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೪ | ನಾ. ಗೀತಾಚಾರ್ಯ | ಡಾ. ಕೆ.ಪಿ. ಭಟ್ | ಕೆಲವು ಕನ್ನಡ ಶಾಸನ ಭಾಷೆ : ಒಂದು ಅಧ್ಯಯನ | ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು |
| ೧೫ | ಶ್ರೀಮತಿ ತಾರಾ ಉಲ್ಲಾಳ್ | ಡಾ. ಮಹದೇವ | ಮೈಸೂರು ಒಡೆಯರ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು (೧೬೧೦–೧೭೬೧) | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮೈಸೂರು |
| ೧೬ | ಜಿ.ಜಿ. ಜಿರಾದಾರ್ | ಡಾ. ಎಫ್.ಟಿ. ಹಳ್ಳಿಕೇರಿ | ಕುರುಬರ ಗುರು ಒಡೆಯರು : ಸಾಂಸ್ಕೃತಿಕ ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೭ | ಅರುಣ್ ಎಚ್.ಟಿ. | ಡಾ. ಅನುರಾಧಾ ಪಟೇಲ್ | ಕೆಳದಿ ನಾಯಕರ ಕಾಲದ ತೆರಿಗೆ ಪದ್ಧತಿ' | ಕುವೆಂಪು ವಿಶ್ವವಿದ್ಯಾಲಯ ಶಂಕರಘಟ್ಟ |

ಸಮ್ಮೇಳನದ ಭಾಗವಾದ ವಿಚಾರಗೋಷ್ಠಿಗಳು ದಿನಾಂಕ ೧೯-೯-೨೦೦೮ರಂದು ಬೆಳಗು ೯ ಗಂಟೆಗೆ ಆರಂಭವಾದುವು. ಮೊದಲ ದಿನ (೧೯-೯-೨೦೦೯) ಆರು., ಎರಡನೆಯ ದಿನ (೨೦-೯-೨೦೦೯) ಐದು ಮತ್ತು ಮೂರನೆಯ ದಿನ (೨೧-೯-೨೦೦೯) ಎರಡು, ಒಟ್ಟು ೧೩ ಗೋಷ್ಠಿಗಳು ವಿವಿಧ ವಿದ್ವಾಂಸರ ಅಧ್ಯಕ್ಷತೆಯಲ್ಲಿ ನಡೆದು ಒಟ್ಟು ೧೧೨ ಸಂಪ್ರಬಂಧಗಳು ಮಂಡನೆ ಆದವು.

**ಸಮಾರೋಪ ಸಮಾರಂಭ**

ದಿನಾಂಕ ೨೧-೯-೨೦೦೭ ರಂದು ಬೆಳಗು ೧೧-೪೫ ಗಂಟೆಗೆ ಶ್ರೀಕ್ಷೇತ್ರ ಧರ್ಮಸ್ಥಳದ ಮಹೋತ್ಸವ ಭವನದಲ್ಲಿ ಸಮ್ಮೇಳನದ ಸಮಾರೋಪ ಸಮಾರಂಭ ನಡೆಯಿತು. ಕರ್ನಾಟಕದ ಪ್ರಸಿದ್ಧ ಪುರಾತತ್ವ ವಿದ್ವಾಂಸರಾದ ಡಾ॥ಅ.ಸುಂದರ ಸಮಾರೋಪ ಭಾಷಣ ಮಾಡಿದರು. ಸಮ್ಮೇಳನಾಧ್ಯಕ್ಷೆ ಡಾ॥ ವಸುಂಧರಾ ಫಿಲಿಯೋಜಾ, ಕರ್ನಾಟಕ ಇತಿಹಾಸ ಅಕಾದೆಮಿಯ ಅಧ್ಯಕ್ಷ ಡಾ॥ ಸೂರ್ಯನಾಥ ಕಾಮತ್ ಉಪಸ್ಥಿತರಿದ್ದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀಕ್ಷೇತ್ರ ಧರ್ಮಸ್ಥಳದ ರಾಜರ್ಷಿ ಡಾ॥ ವೀರೇಂದ್ರ ಹೆಗ್ಗಡೆ ವಹಿಸಿದ್ದರು. ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಿಕೊಟ್ಟುದಕ್ಕಾಗಿ ಅಕಾದೆಮಿಯು ಆಶ್ರಯದಾತರಿಗೆ ಧನ್ಯವಾದಗಳನ್ನು ಸಲ್ಲಿಸಿತು.

**ಸರ್ವಸದಸ್ಯರ ಸಭೆಯ ವರದಿ– ೨೦೦೭**

ದಿನಾಂಕ ೨೦-೯-೨೦೦೮, ಶನಿವಾರ ಸಂಜೆ ೬-೩೦ ಗಂಟೆಗೆ, ಅಕಾದೆಮಿಯ ೨೨ನೆಯ ವಾರ್ಷಿಕ ಸಮ್ಮೇಳನದ ಸಭಾಸ್ಥಾನವಾದ, ಶ್ರೀಕ್ಷೇತ್ರ ಧರ್ಮಸ್ಥಳದ ಸುವರ್ಣ ಮಹೋತ್ಸವ ಭವನದಲ್ಲಿ, ಆ ಮೊದಲೇ ಸರ್ವ ಸದಸ್ಯರಿಗೂ ಪತ್ರಮುಖೇನ ತಿಳಿಸಿದ್ದ ಪ್ರಕಾರ, ಅಕಾದೆಮಿಯ ಅಧ್ಯಕ್ಷರಾದ ಡಾ॥ಸೂರ್ಯನಾಥ ಕಾಮತ್ ಅವರ ಅಧ್ಯಕ್ಷತೆಯಲ್ಲಿ, ನಡೆದ ಸರ್ವ ಸದಸ್ಯರ ಸಭೆಯ ನಡವಳಿಕೆಗಳು ಈ ಕೆಳಕಂಡಂತಿವೆ.

ಸಭೆಯಲ್ಲಿ ೧೪೩ ಸದಸ್ಯರು ಹಾಜರಿದ್ದರು.

ಸರ್ವ ಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ಎಲ್ಲ ಸದಸ್ಯರಿಗೂ ಅಂಚೆಯ ಮೂಲಕ ಮೊದಲೇ ಕಳುಹಿಸಲಾಗಿತ್ತು. ಸಭೆಯ ತಿಳುವಳಿಕೆ ಪತ್ರವನ್ನು ವಾಚಿಸಿ, ಪ್ರಧಾನ ಕಾರ್ಯದರ್ಶಿ ಡಾ॥ ಎಚ್.ಎಸ್.ಗೋಪಾಲ ರಾವ್ ಸಭೆಯನ್ನು ಆರಂಭಿಸಲು ಸದಸ್ಯರ ಅನುಮತಿ ಕೇಳಿದರು. ಹಾಜರಿದ್ದ ಸದಸ್ಯರ ಪರವಾಗಿ ಹುಬ್ಬಳ್ಳಿಯ ಶ್ರೀ ಶಿವಪ್ಪ ನೀರಾವರಿ ಸಭೆಯ ಆರಂಭಕ್ಕೆ ಸೂಚನೆ ನೀಡಿದರು. ಅದನ್ನು ಬೆಂಗಳೂರಿನ ಶ್ರೀ ಎಂ.ಆರ್.ಚಂದ್ರಶೇಖರ್ ಅನುಮೋದಿಸಿದರು. ಹಾಜರಿದ್ದ ಎಲ್ಲ ಸದಸ್ಯರೂ ಸಭೆಯ ಆರಂಭಕ್ಕೆ ಅನುಮತಿ ನೀಡಿದರು.

ಡಾ॥ ಕೂ.ಸ. ಅಪರ್ಣ ಅವರ ಪ್ರಾರ್ಥನೆಯೊಂದಿಗೆ ಸರ್ವ ಸದಸ್ಯರ ಸಭೆಯು ಆರಂಭವಾಯಿತು.

ಸಭೆಯ ಆರಂಭದಲ್ಲಿ, ಕಳೆದ ಸಾಲಿನ ಸರ್ವಸದಸ್ಯರ ಸಭೆಯ ನಂತರ ಈವರೆಗೆ ನಿಧನರಾಗಿರುವ ಅಕಾದೆಮಿಯ ಸದಸ್ಯರು ಮತ್ತು ಸದಸ್ಯೇತರ ಗಣ್ಯರಿಗೆ ಎರಡು ನಿಮಿಷಗಳ ಕಾಲ ಮೌನಾಚರಣೆಯ ಮೂಲಕ ಶ್ರದ್ಧಾಂಜಲಿ ಅರ್ಪಿಸಲಾಯಿತು. ಶ್ರದ್ಧಾಂಜಲಿಗೆ ಪಾತ್ರರಾದವರ ಹೆಸರುಗಳು ಈ ಕೆಳಕಂಡಂತಿವೆ.

ಸದಸ್ಯರು: ೧. ಡಾ॥ ಪ್ರತಿಭಾ ಚಿಣ್ಣಪ್ಪ, ಬೆಂಗಳೂರು ೨. ಶ್ರೀ ಶಾಂತರಸ, ಗುಲಬರ್ಗಾ ೩. ಶ್ರೀ ಅಚ್ಯುತ ದೇವರಾಯ, ಹೊಸಪೇಟೆ, ೪. ಡಾ॥ ಸದ್ಯೋಜಾತ ಶಿವಾಚಾರ್ಯ ಮಹಾಸ್ವಾಮಿಗಳು, ದಾವಣಗೆರೆ, ೫. ಶ್ರೀ ಎಸ್. ಶಿವಣ್ಣ, ಬೆಂಗಳೂರು, ೬. ಶ್ರೀ ಸಿದ್ದಯ್ಯ ಹಿರೇಮಠ, ಶಿವಮೊಗ್ಗ ೭. ಡಾ॥ ಎಸ್.ವಿ. ದೇಶಿಕಾಚಾರ್, ಬೆಂಗಳೂರು.

ಸದಸ್ಯೇತರರು : ೧. ಡಾ॥ಎ.ಎಂ.ರಾಜಶೇಖರಯ್ಯ, ಧಾರವಾಡ.

ಶ್ರದ್ಧಾಂಜಲಿ ಸಲ್ಲಿಕೆಯ ನಂತರ, ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಅವರು ಹಾಜರಿದ್ದ ಸದಸ್ಯರನ್ನು ಸ್ವಾಗತಿಸುತ್ತಾ, ಇನ್ಫೋಸಿಸ್ ಸಂಸ್ಥೆಯ ಶ್ರೀಮತಿ ಸುಧಾಮೂರ್ತಿ ಅವರು ಕೆಲವೇ ದಿನಗಳ ಹಿಂದೆ, ಅಕಾದೆಮಿಗೆ ರೂ.೧,೦೦,೦೦೦ (ಒಂದು ಲಕ್ಷ) ಹಣವನ್ನು ನೆರವಾಗಿ ನೀಡಿರುವ ವಿಷಯವನ್ನು ತಿಳಿಸಿದರು. ಸರ್ವ ಸದಸ್ಯರೂ ಈ ವಿಷಯವನ್ನು ಕರತಾಡನದೊಂದಿಗೆ ಸ್ವಾಗತಿಸಿದರು.

**೨೦೦೭ ನೆಯ ಸಾಲಿನ ವರದಿ :**

ಸಭೆಯ ಆರಂಭದಲ್ಲೇ, ಹಾಜರಿದ್ದ ಎಲ್ಲ ಸದಸ್ಯರಿಗೂ, ೨೦೦೭ನೆಯ ಸಾಲಿನ ವರದಿಯ ಮುದ್ರಿತ ಪ್ರತಿಗಳನ್ನು ವಿತರಿಸಲಾಗಿತ್ತು. ಅದರ ವಾಚನದ ಅವಶ್ಯಕತೆ ಇಲ್ಲವೆಂದ ಬಾಗಲಕೋಟೆಯ ಶ್ರೀ ಮುತಾಲಿಕ ದೇಸಾಯಿ ಮತ್ತು ಬೆಂಗಳೂರಿನ ಶ್ರೀ ಜಿ.ಕೆ. ರಾವ್ ವರದಿಯನ್ನು ಒಪ್ಪಬಹುದೆಂಬ ಸೂಚನೆ ನೀಡಿದರು. ಆ ಸೂಚನೆಯನ್ನು ಬೆಂಗಳೂರಿನ ಶ್ರೀಮತಿ ಇಂದಿರಾಹೆಗ್ಗಡೆ ಅನುಮೋದಿಸಿದರು.

**೨೦೦೭ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳು :**

೨೦೦೭ನೆಯ ಸಾಲಿನ ವರದಿಯ ಜೊತೆಗೇ ೨೦೦೭ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳನ್ನೂ ಸದಸ್ಯರಿಗೆ ವಿತರಿಸಲಾಗಿತ್ತು. ಆ ಬಗ್ಗೆ ಕೋಶಾಧಿಕಾರಿ ಶ್ರೀ ಎಂ.ಬಿ. ಪಾಟೀಲ್ ವಿವರಣೆ ನೀಡಿದರು.

ಈವರೆಗೆ ಕಚೇರಿಯ ನಿರ್ವಾಹಕರಿಗೆ ತಿಂಗಳಿಗೆ ರೂ.೫೦೦(ಐದು ನೂರು)ಗೌರವ ಸಂಭಾವನೆ ನೀಡುತ್ತಿದ್ದು, ಇನ್ನು ಮುಂದೆ ರೂ.೧೦೦೦ (ಒಂದು ಸಾವಿರ) ನೀಡಬೇಕಾಗಬಹುದೆಂಬ ಸೂಚನೆಯನ್ನು ಶ್ರೀ ಎಂ.ಬಿ. ಪಾಟೀಲ್ ನೀಡಿದರು. ಪರಿಶೋಧಿತ ಲೆಕ್ಕ ಪತ್ರದಲ್ಲಿ ಸೂಚಿತವಾಗಿರುವ ರೂ.೧೦,೦೦೦ (ಹತ್ತು ಸಾವಿರ) ಖೋತಾವನ್ನು ಹೇಗೆ ತುಂಬುವಿರಿ ಎಂಬ ಶಿರಸಿಯ ಡಾ॥ ಎ.ಕೆ. ಶಾಸ್ತ್ರಿ ಅವರ ಪ್ರಶ್ನೆಗೆ ಡಾ॥ ಸೂರ್ಯನಾಥ ಕಾಮತ್ ಉತ್ತರಿಸಿ, ಖರ್ಚನ್ನು ಕಡಿಮೆ ಮಾಡಿ, ಖೋತಾವನ್ನು ಸರಿದೂಗಿಸಲಾಗುವುದು ಎಂದರು.

ಅಕಾದೆಮಿಯು ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಲಕ ಪ್ರತಿ ವರ್ಷವೂ ನಿರಂತರ ಅನುದಾನ ಪಡೆಯಬಹುದಲ್ಲವೆ ? ಎಂಬ ಬೆಂಗಳೂರಿನ ಡಾ॥ ಆರ್.ಎಚ್. ಕುಲಕರ್ಣಿ ಅವರ ಪ್ರಶ್ನೆಗೆ ಡಾ॥ ಸೂರ್ಯನಾಥ ಕಾಮತ್ ಉತ್ತರಿಸಿ, ನಾವು ಸರ್ಕಾರವನ್ನು ಬೇಡುವುದು ಮತ್ತು ಅವಲಂಬಿಸುವುದು ಬೇಡ ಎಂದರು. ಅದನ್ನು ಮಂಡ್ಯದ ಡಾ॥ ಪಿ.ಎನ್. ನರಸಿಂಹಮೂರ್ತಿ ಅನುಮೋದಿಸಿದರು. ಶಿರಸಿಯ ಡಾ॥ ಎ.ಕೆ.ಶಾಸ್ತ್ರಿ ಅವರು ಸರ್ಕಾರದ ನೆರವಿಗೆ ಕೈಚಾಚಿದರೆ, ಅದು ಹೇಳಿದಂತೆ ಕೇಳಬೇಕಾಗುತ್ತದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಉಳವಿಯ ಶ್ರೀ ವ.ರಾ. ಕಾರಂತರು ಅಕಾದೆಮಿಗೆ ನೀಡುವ ದೇಣಿಗೆಗೆ ಆದಾಯ ತೆರಿಗೆ ಇಲಾಖೆಯಿಂದ ವಿನಾಯಿತಿ ಪಡೆದರೆ ಅನುಕೂಲ ಆಗಬಹುದು ಎಂಬ ಸೂಚನೆ ನೀಡಿದರು. ಇದನ್ನು ಡಾ॥ಸೂರ್ಯನಾಥ ಕಾಮತ್ ಅವರು ಒಪ್ಪಲಿಲ್ಲ.

ಸುದೀರ್ಘ ಚರ್ಚೆಯ ನಂತರ, ೨೦೦೭ರ ಪರಿಶೋಧಿತ ಲೆಕ್ಕಪತ್ರಗಳನ್ನು ಒಪ್ಪಬಹುದೆಂದು ರೊಟ್ಟಿಗವಾಡದ ಪ್ರೊ॥ ಕೆ.ಸಿ. ಮಲ್ಲಿಗವಾಡ ಸೂಚಿಸಿದರು. ಆ ಸೂಚನೆಯನ್ನು ಶಿವಮೊಗ್ಗದ ಡಾ॥ ಎಸ್.ಜಿ. ಸಾಮಕ್ ಅನುಮೋದಿಸಿದರು.

**೨೦೦೮ನೆಯ ಸಾಲಿನ ಮುಂಗಡ ಲೆಕ್ಕಪತ್ರಗಳು**

೨೦೦೭ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳ ಜೊತೆಗೆ ೨೦೦೮ರ ಮುಂಗಡ ಲೆಕ್ಕಪತ್ರದ ಮುದ್ರಿತ ಪ್ರತಿಯನ್ನೂ ವಿತರಿಸಲಾಗಿತ್ತು. ಆ ಬಗ್ಗೆ ಕೋಶಾಧಿಕಾರಿ ಶ್ರೀ ಎಂ.ಬಿ. ಪಾಟೀಲ್ ಅಂಶವಾರು ವಿವರಣೆ ನೀಡಿ, ಆವರೆಗೆ ಅಕಾದೆಮಿಗೆ ದೇಣಿಗೆ ನೀಡಿದ್ದ ಎಲ್ಲರಿಗೂ ಧನ್ಯವಾದಗಳನ್ನು ಸಲ್ಲಿಸಿದರು.

ಕಳೆದ ವರ್ಷದ ಸರ್ವಸದಸ್ಯರ ಸಭೆಯಲ್ಲಿ ತೀರ್ಮಾನವಾಗಿದ್ದಂತೆ, ೨೦೦೮ರ ಜನವರಿ ೧ರಿಂದ ಅಕಾದೆಮಿಯ ಆಜೀವ ಸದಸ್ಯತ್ವ ಶುಲ್ಕವನ್ನು ರೂ. ೧೦೦೦ (ಒಂದು ಸಾವಿರ) ಮತ್ತು ಸಂಸ್ಥಾ ಸದಸ್ಯತ್ವ ಶುಲ್ಕವನ್ನು ರೂ. ೨೦೦೦ (ಎರಡು ಸಾವಿರ)ಕ್ಕೆ ಹೆಚ್ಚಿಸಲಾಗಿದ್ದು, ಈ ವಿವರಗಳನ್ನು ಹೊಸ ಅರ್ಜಿ ಸಮೂನೆಯಲ್ಲಿ ನಮೂದಿಸಲಾಗಿದೆ. ವಿದ್ಯಾರ್ಥಿಗಳಾಗಿರುವವರು, ರೂ.೫೦೦ (ಐದು ನೂರು) ಪಾವತಿ ಮಾಡಿ, ಸದಸ್ಯತ್ವ ಪಡೆದು, ತಮ್ಮ ವಿದ್ಯಾಭ್ಯಾಸ ಮುಗಿದ ನಂತರ ಉಳಿದ ರೂ. ೫೦೦ (ಐದು ನೂರು)ಗಳನ್ನು ಪಾವತಿಸಿ, ಆಜೀವ ಸದಸ್ಯರಾಗಿ ಮುಂದುವರಿಯಲು ಅವಕಾಶ ಇರುವುದನ್ನು ತಿಳಿಸಿದರು.

ಸುದೀರ್ಘ ಚರ್ಚೆಯ ನಂತರ, ೨೦೦೮ರ ಮುಂಗಡ ಲೆಕ್ಕಪತ್ರಗಳನ್ನು ಒಪ್ಪಬಹುದೆಂಬ ಹುಬ್ಬಳ್ಳಿಯ ಶ್ರೀಮತಿ ಹನುಮಾಕ್ಷಿಗೋಗಿ ಅವರ ಸೂಚನೆಯನ್ನು ಸಂತೇಬೆನ್ನೂರಿನ ಶ್ರೀ ಸುಮತೀಂದ್ರನಾಡಿಗ್ ಅನುಮೋದಿಸಿದರು. ಇದಕ್ಕೆ ಸರ್ವ ಸದಸ್ಯರ ಅನುಮೋದನೆಯೂ ದೊರೆಯಿತು.

**೨೦೦೮ನೆಯ ಸಾಲಿಗೆ ಆಡಿಟರ್ ನೇಮಕ :**

ಈವರೆಗೆ ಅಕಾದೆಮಿಯ ಲೆಕ್ಕಪತ್ರಗಳನ್ನು ಪರಿಶೋಧಿಸಿ ಕೊಟ್ಟಿರುವ ಬೆಂಗಳೂರಿನ ಶ್ರೀ ಆಚಾರ್ಯ (ಆಚಾರ್ಯ ಅಂಡ್ ಕಂಪೆನಿ) ಅವರನ್ನೇ ೨೦೦೮ನೆಯ ಸಾಲಿನ ಲೆಕ್ಕಪತ್ರಗಳ ಪರಿಶೋಧನೆಗೂ ನೇಮಿಸಿಕೊಳ್ಳಬಹುದೆಂಬ, ಬಂಕಾಪುರದ ಶ್ರೀ ಎ.ಕೆ. ಆದವಾನಿ ಮಠ ಅವರ ಸೂಚನೆಯನ್ನು ಗುಡಗೇರಿಯ ಶ್ರೀ ಎಂ.ಪಿ. ಕುಂಬಾರ ಅನುಮೋದಿಸಿದರು. ಅವರಿಗೆ ಈಗಿನಂತೆಯೇ, ಗೌರವ ಸಂಭಾವನೆಯಾಗಿ ರೂ.೫೬೦೦ (ಐದು ಸಾವಿರದ ಆರುನೂರು) ನೀಡಬಹುದೆಂದು ಸಂಕೇಶ್ವರದ ಡಾ॥ ಗುರುಪಾದ ಮರಿಗುದ್ದಿ ಸೂಚಿಸಿದರು. ಅದನ್ನು ಇಂಡಿಯ ಡಾ॥ ಎಸ್.ಕೆ. ಕೊಪ್ಪಾ ಅನುಮೋದಿಸಿದರು.

**ಠರಾವುಗಳ ಮಂಡನೆ :**

**ಠರಾವು : ೧.**

ಕರ್ನಾಟಕದ ಕೋಟೆಗಳ ಅಭಿವೃದ್ಧಿ ಮತ್ತು ರಕ್ಷಣೆಗೆ ಕರ್ನಾಟಕ ಸರ್ಕಾರವು ಒಂದು ಪ್ರತ್ಯೇಕ ಪ್ರಾಧಿಕಾರವನ್ನು ರಚಿಸಬೇಕೆಂದು ಕರ್ನಾಟಕ ಇತಿಹಾಸ ಅಕಾದೆಮಿಯ ಈ ಸರ್ವಸದಸ್ಯರ ಸಭೆಯು ಮನವಿ ಮಾಡುತ್ತದೆ.

ಮಂಡನೆ: ಡಾ॥ ಸೂರ್ಯನಾಥ ಕಾಮತ್ — ಅನುಮೋದನೆ: ಶ್ರೀ ಟಿ.ಎಚ್.ಎಂ. ಬಸವರಾಜು

**ಠರಾವು : ೨**

ಬೆಂಗಳೂರು ನಗರದಲ್ಲಿ ಇಡಿಯಾಗಿ ಕರ್ನಾಟಕ ಸಂಸ್ಕೃತಿಯನ್ನು ಬಿಂಬಿಸುವಂತಹ ಒಂದು ವಸ್ತು ಸಂಗ್ರಹಾಲಯದ ಸ್ಥಾಪನೆಗೆ ಮುಂದಾಗಿರುವ ಕರ್ನಾಟಕ ರಾಜ್ಯ ಸರ್ಕಾರದ ನಿರ್ಧಾರವನ್ನು ಅಭಿನಂದಿಸಿ, ಅದು ನವದೆಹಲಿಯ ರಾಷ್ಟ್ರೀಯ ವಸ್ತು ಸಂಗ್ರಹಾಲಯ ಅಥವಾ ಮುಂಬಯಿಯ ತಾರಾಬಾಯಿ ಮ್ಯೂಸಿಯಂ ಮಾದರಿಯಲ್ಲಿ ಇರಬೇಕೆಂಬ ನಿರೀಕ್ಷೆಯೊಂದಿಗೆ, ಆ ನಿಟ್ಟಿನಲ್ಲಿ ಸರ್ಕಾರಕ್ಕೆ ಕರ್ನಾಟಕ ಇತಿಹಾಸ ಅಕಾದೆಮಿಯು ಸೂಕ್ತವಾಗಿ ಸಹಕರಿಸುವ ಭರವಸೆ ನೀಡಲಾಯಿತು.

ಮಂಡನೆ : ಡಾ॥ ಸೂರ್ಯನಾಥ ಕಾಮತ್ — ಅನುಮೋದನೆ : ಡಾ॥ ಜಿ. ರಾಜಶೇಖರಪ್ಪ

**ಇತರ ವಿಷಯಗಳು**

೧. ಕರ್ನಾಟಕ ಇತಿಹಾಸ ಅಕಾದೆಮಿಗೆ ರೂ.ಒಂದು ಲಕ್ಷ ದೇಣಿಗೆ ನೀಡಿರುವ ಇನ್ಫೋಸಿಸ್ ಸಂಸ್ಥೆಯ ಶ್ರೀಮತಿ ಸುಧಾ ಮೂರ್ತಿ ಅವರಿಗೆ ಧನ್ಯವಾದ ಸಲ್ಲಿಸಲು ಶ್ರೀ ಟಿ.ಎಚ್.ಎಂ. ಬಸವರಾಜು ಮಾಡಿದ ಸೂಚನೆಯನ್ನು ಸರ್ವಸದಸ್ಯರ ಸಭೆಯು ಅಂಗೀಕರಿಸಿತು.

೨. ಇನ್ನು ಮುಂದೆ ಪ್ರಕಟಗೊಳ್ಳುವ ಇತಿಹಾಸ ದರ್ಶನದ ಸಂಚಿಕೆಗಳನ್ನು ಸದಸ್ಯರು ಪ್ರತಿ ಸಂಚಿಕೆಗೆ ರೂ.೧೦೦ (ಒಂದು ನೂರು) ಮತ್ತು ಪ್ರಕಟಿತ ಸಂಪ್ರಬಂಧಗಳ ಲೇಖಕರು ಪ್ರತಿ ಸಂಚಿಕೆಗೆ ರೂ.೫೦ (ಐವತ್ತು) ಪಾವತಿಸಿ ಪಡೆಯಬೇಕೆಂಬ ಶ್ರೀ ಎಂ.ಬಿ. ಪಾಟೀಲ್ ಅವರ ಸೂಚನೆಯನ್ನು ಮೈಸೂರಿನ ಡಾ॥ ಎಂ.ಎಸ್. ಕೃಷ್ಣಮೂರ್ತಿ ಸಮರ್ಥಿಸಿದರು. ಚರ್ಚೆಯಲ್ಲಿ ಹಂಪಿಯ ಡಾ॥ ಎಫ್.ಟಿ. ಹಳ್ಳಿಕೇರಿ ಮತ್ತು ಬೆಂಗಳೂರಿನ ಶ್ರೀ ಸಿ.ಬಿ. ಪಾಟೀಲ್ ಪಾಲ್ಗೊಂಡಿದ್ದರು. ಬಹುತೇಕ ಎಲ್ಲ ಸದಸ್ಯರೂ ಈ ನಿರ್ಣಯವನ್ನು ಅನುಮೋದಿಸಿದರು. ಆದ್ದರಿಂದ ಇನ್ನು ಮುಂದೆ ಸದಸ್ಯರು ಪ್ರತಿ ಸಂಚಿಕೆಗೆ ರೂ.೧೦೦ (ಒಂದು ನೂರು) ಮತ್ತು ಲೇಖಕರು ರೂ.೫೦ (ಐವತ್ತು) ಪಾವತಿಸಿ ಇತಿಹಾಸ ದರ್ಶನ ಸಂಚಿಕೆಗಳನ್ನು ಪಡೆಯಬಹುದೆಂದು ನಿರ್ಣಯಿಸಲಾಯಿತು. ಸಂಸ್ಥೆಗಳಿಗೆ ಮಾರಾಟ ಮಾಡುವಾಗ ಮುಖಬೆಲೆಯ ಮೇಲೆ ಈಗ ಇರುವ ಶೇಕಡ ೧೦ ರಷ್ಟು ರಿಯಾಯಿತಿಯನ್ನು ಮುಂದುವರಿಸಲು ನಿರ್ಧರಿಸಲಾಯಿತು. ಈಗಿರುವಂತೆಯೇ ಸದಸ್ಯ ಸಂಸ್ಥೆಗಳಿಗೆ ಇತಿಹಾಸ ದರ್ಶನದ ಒಂದು ಪ್ರತಿಯನ್ನು ಉಚಿತವಾಗಿ ನೀಡುವುದನ್ನು ಮುಂದುವರಿಸುವ ನಿರ್ಧಾರ ಮಾಡಲಾಯಿತು.

೩. ಇತಿಹಾಸ ದರ್ಶನದಲ್ಲಿ ಪ್ರಕಟಗೊಳ್ಳುವ ಲೇಖನಗಳ ಪುಟ ಮಿತಿಗೆ ಸಂಬಂಧಿಸಿದಂತೆ, ಡಾ॥ ಶ್ರೀನಿವಾಸ ಹಾವನೂರ್ ಮಾಡಿದ್ದ ಸೂಚನೆಗಳ ಬಗ್ಗೆ ಚರ್ಚೆ ನಡೆದು, ಲೇಖಕರೇ ಪುಟ ಮಿತಿಯ ಬಗ್ಗೆ ಗಮನ ಹರಿಸಬೇಕು ಮತ್ತು ಅಕಾದೆಮಿಯ ಕಾರ್ಯ ಚಟುವಟಿಕೆಗಳನ್ನು ವಾರ್ಷಿಕ ವರದಿಯ ಒಂದು ಭಾಗವಾಗಿಯೇ ಪ್ರಕಟಿಸುವುದರಿಂದ, ಅದನ್ನು ಪ್ರತ್ಯೇಕವಾಗಿ ಮುದ್ರಿಸಿ ವಿತರಿಸಬೇಕಾದ ಅವಶ್ಯಕತೆ ಇಲ್ಲ ಎಂದು ನಿರ್ಧರಿಸಲಾಯಿತು.

೪. ವಾರ್ಷಿಕ ಸಮ್ಮೇಳನವನ್ನು ನಾಲ್ಕು ದಿನ ಮಾಡುವ ಬದಲು, ಮೂರು ದಿನಗಳಿಗೆ ಮಿತಿಗೊಳಿಸಿ, ಉಳಿದ ಒಂದು ದಿನವನ್ನು ಸಮೀಪದ ಐತಿಹಾಸಿಕ ಸ್ಥಳಗಳ ವೀಕ್ಷಣೆಗೆ ಮತ್ತು ಅಧ್ಯಯನಕ್ಕೆ ಮುಡಿಪಾಗಿಟ್ಟರೆ, ಅನುಕೂಲ ಎಂಬ ಬಂಕಾಪುರದ ಶ್ರೀ ಎ.ಕೆ. ಆದವಾನಿ ಮಠ ಅವರ ಅಭಿಪ್ರಾಯದ ಬಗ್ಗೆ ಚರ್ಚೆ ನಡೆದು, ಅನಿವಾರ್ಯ ಕಾರಣಗಳಿಂದಾಗಿ ಈ ಸಮ್ಮೇಳನವನ್ನು ನಾಲ್ಕು ದಿನ ಹಮ್ಮಿಕೊಳ್ಳಲಾಗಿದೆ ಎಂದೂ, ಉಳಿದಂತೆ ಮೂರು ದಿನಗಳು ನಡೆಯುವ ಸಮ್ಮೇಳನದಲ್ಲಿ ಅಕಾದೆಮಿಯಾಗಲೀ, ಆಶ್ರಯದಾತರಾಗಲೀ, ಪ್ರತ್ಯೇಕ ಸ್ಥಳ ಸಂದರ್ಶನ ಮತ್ತು ಅಧ್ಯಯನಕ್ಕೆ ಅವಕಾಶ ಕಲ್ಪಿಸಲು ಸಾಧ್ಯವಾಗುವುದಿಲ್ಲ ಎಂದೂ, ಅದನ್ನು ಸದಸ್ಯರು ಸ್ವಂತ ಆಸಕ್ತಿಯಿಂದ ಏರ್ಪಾಡು ಮಾಡಿಕೊಳ್ಳುವುದು ಸೂಕ್ತ ಎಂದು ತೀರ್ಮಾನಿಸಲಾಯಿತು.

**ಅಕಾದೆಮಿಯ ೨೩ನೇ ವಾರ್ಷಿಕ ಸಮ್ಮೇಳನ**

ಆರು ವರ್ಷಗಳ ಹಿಂದೆ ಶೃಂಗೇರಿಯ ಶ್ರೀಮಠದಿಂದ ಸಮ್ಮೇಳನ ನಡೆಸಲು ಆಹ್ವಾನ ಬಂದಿದ್ದು, ನಾಲ್ಕು ವರ್ಷಗಳ ಹಿಂದೆ ಬಾಳೆಹೊನ್ನೂರಿನ ಶ್ರೀಮದ್ರಂಭಾಪುರೀ ಪೀಠದಿದಲೂ ಸಮ್ಮೇಳನ ನಡೆಸಲು ಆಹ್ವಾನ ಬಂದಿದೆ. ಈ ಸಮ್ಮೇಳನದ ಸಂದರ್ಭದಲ್ಲಿ ಮಂಡ್ಯದ ಕರ್ನಾಟಕ ಸಂಘ, ಬೈಲಹೊಂಗಲದ ಮೂರು ಸಾವಿರ ಮಠಗಳಲ್ಲಿ ಅಕಾದೆಮಿಯ ಮುಂದಿನ ವಾರ್ಷಿಕ ಸಮ್ಮೇಳನವನ್ನು ನಡೆಸಲು ಆಹ್ವಾನ ಬಂದಿರುವುದನ್ನು ಸಭೆಯ ಗಮನಕ್ಕೆ ತರುತ್ತಲೇ, ಆ ದಿನ (೨೦-೯-೨೦೦೮) ಬೆಳಿಗ್ಗೆ ೮ ಗಂಟೆಯ ಸುಮಾರಿನಲ್ಲಿ ಅಕಾದೆಮಿಯ ಪ್ರಧಾನ ಕಾರ್ಯದರ್ಶಿಗಳ ಮೊಬೈಲ್‌ಗೆ ನೇರವಾಗಿ ಕರೆ ಮಾಡಿದ ಬಾಳೆಹೊನ್ನೂರಿನ ಶ್ರೀಮದ್ರಂಭಾಪುರೀ ಸ್ವಾಮೀಜಿ ಅವರು ಮುಂದಿನ ಸಮ್ಮೇಳನ ತಮ್ಮಲ್ಲೇ ಆಗಬೇಕೆಂದು ಅಕಾದೆಮಿಯ ಅಧ್ಯಕ್ಷರು ಮತ್ತು ಪ್ರಧಾನ ಕಾರ್ಯದರ್ಶಿ ಅವರಿಗೆ ಆಗ್ರಹಪೂರ್ವಕವಾಗಿ ತಿಳಿಸಿರುವುದನ್ನು ಸಭೆಯ ಗಮನಕ್ಕೆ ತರಲಾಯಿತು.

ಬಸವೇಶ್ವರರನ್ನೇ ಒಪ್ಪದ ಬಾಳೆಹೊನ್ನೂರಿನ ಸ್ವಾಮೀಜಿಯವರು ಮತ್ತು ಅವರ ಶಿಷ್ಯರಲ್ಲಿ ಅಸಾಂಗತ್ಯಗಳಿವೆ ಎಂಬ ಕಾರಣದಿಂದ ಅಲ್ಲಿ ಸಮ್ಮೇಳನ ನಡೆಸುವುದು ಸೂಕ್ತವಲ್ಲ ಎಂಬ ಚಿಕ್ಕಮಗಳೂರಿನ ಶ್ರೀ ಚಂದ್ರೇಗೌಡ ಅವರ ಅಭಿಪ್ರಾಯವನ್ನು ಹೆಚ್ಚಿನ ಸದಸ್ಯರು ಸಮರ್ಥಿಸಲಿಲ್ಲ. ಮಂಡ್ಯದ ಡಾ॥ ಪಿ.ಎನ್. ನರಸಿಂಹಮೂರ್ತಿ ಅವರು, ಬಾಳೇಹೊನ್ನೂರಿನ ಸ್ವಾಮೀಜಿಯವರು ಖುದ್ದಾಗಿ ಆಹ್ವಾನ ನೀಡಿರುವುದರಿಂದ ಅದನ್ನು ಒಪ್ಪಿಕೊಂಡು, ಮುಂದಿನ ಅಂದರೆ, ೨೩ನೆಯ ವಾರ್ಷಿಕ ಸಮ್ಮೇಳನವನ್ನು ಬಾಳೇಹೊನ್ನೂರಿನಲ್ಲೇ ಹಮ್ಮಿಕೊಳ್ಳುವುದು ಸೂಕ್ತ ಎಂದು ತಿಳಿಸಿದರು. ಅದನ್ನು ಸರ್ವಸದಸ್ಯರೂ ಕರತಾಡನದ ಮೂಲಕ ಅನುಮೋದಿಸಿದರು.

**೨೦೦೮-೦೯ ಮತ್ತು ೨೦೦೯-೧೦ನೆಯ ಸಾಲಿಗೆ ಅಕಾದೆಮಿಯ ಕಾರ್ಯಕಾರೀ ಸಮಿತಿಯ ಆಯ್ಕೆ :**

ಅಕಾದೆಮಿಯ ೨೦ನೆಯ ವಾರ್ಷಿಕ ಸಮ್ಮೇಳನದ ಸಂದರ್ಭದಲ್ಲಿ ನಂಜನಗೂಡಿನಲ್ಲಿ ೧೦-೯-೨೦೦೬ರಂದು ನಡೆದಿದ್ದ ಸರ್ವಸದಸ್ಯರ ಸಭೆಯಲ್ಲಿ ಮುಂದಿನ ಎರಡು ವರ್ಷಗಳ ಅವಧಿಗೆ ಆಯ್ಕೆ ಆಗಿದ್ದ ಕಾರ್ಯಕಾರೀ ಸಮಿತಿಯ ಅಧಿಕಾರಾವಧಿಯು ಮುಕ್ತಾಯಗೊಳ್ಳಲಿರುವ ಕಾರಣದಿಂದ, ಮುಂದಿನ ಎರಡು ವರ್ಷಗಳು, ಎಂದರೆ, ೨೦೦೮-೦೯ ಮತ್ತು ೨೦೦೯-೧೦ನೆಯ ಅವಧಿಗೆ ಹೊಸ ಕಾರ್ಯಕಾರೀ ಸಮಿತಿಯ ಆಯ್ಕೆ ಆಗಬೇಕಾಗಿದ್ದು, ಈ ಬಗ್ಗೆ ಸರ್ವಸದಸ್ಯರ ಸಭೆಯ ತಿಳುವಳಿಕೆ ಸುತ್ತೋಲೆಯಲ್ಲಿ ತಿಳಿಸಲಾಗಿತ್ತು. ಹೊಸ ಕಾರ್ಯಕಾರೀ ಸಮಿತಿಯ ಆಯ್ಕೆಯ ಬಗ್ಗೆ ತಿಳಿದಿದ್ದ ಕೆಲವು ಸದಸ್ಯರು ಸೇರಿ ಸಿದ್ಧಪಡಿಸಿದ್ದ ೨೨ಜನರ ಒಂದು ಪಟ್ಟಿಯನ್ನು ಬೆಂಗಳೂರಿನ ಡಾ॥ ಎಸ್.ಎಲ್. ಶ್ರೀನಿವಾಸಮೂರ್ತಿ ಅವರು ಮಂಡಿಸಿದರು. ಆ ಪಟ್ಟಿಯಲ್ಲಿದ್ದ ಸದಸ್ಯರ ಹೆಸರುಗಳು ಈ ಕೆಳಕಂಡಂತಿವೆ.

೧. ಡಾ॥ ಸೂರ್ಯನಾಥ ಕಾಮತ್, ಬೆಂಗಳೂರು
೨. ಡಾ॥ ದೇವರಕೊಂಡಾ ರೆಡ್ಡಿ, ಹಂಪಿ
೩. ಡಾ॥ ಎಚ್.ಎಸ್. ಗೋಪಾಲರಾವ್, ಅರಸಿನಕುಂಟೆ
೪. ಶ್ರೀ ಎಂ.ಬಿ. ಪಾಟೀಲ, ಬೆಂಗಳೂರು
೫. ಡಾ॥ ಹೆಚ್. ಚಂದ್ರಶೇಖರ್, ಬೆಂಗಳೂರು
೬ ಶ್ರೀ ತುಳಸೀರಾಮ ನಾಯಕ್, ಬೆಂಗಳೂರು
೭ ಡಾ॥ ಪಿ.ವಿ. ಕೃಷ್ಣಮೂರ್ತಿ, ಬೆಂಗಳೂರು
೮. ಡಾ॥ ಎಸ್.ಎಂ. ನಾಗಭೂಷಣ, ಧಾರವಾಡ

೯. ಡಾ॥ ಎಸ್.ಕೆ. ಜೋಶಿ, ಧಾರವಾಡ
೧೦. ಶ್ರೀ ಶಿವಪ್ಪ ನೀರಲಗಿ, ಬಾಗಲಕೋಟೆ
೧೧. ಡಾ॥ ಪಿ.ಎನ್. ನರಸಿಂಹಮೂರ್ತಿ, ಮಂಡ್ಯ
೧೨. ಡಾ॥ ವೈ.ಉಮಾನಾಥ ಶೆಣೈ, ಉಜಿರೆ
೧೩. ಡಾ॥ ಎಫ್.ಟಿ. ಹಳ್ಳಿಕೇರಿ, ಹಂಪಿ
೧೪. ಶ್ರೀ ಕುಂ.ಬಾ. ಸದಾಶಿವಪ್ಪ, ಹರಪನಹಳ್ಳಿ
೧೫. ಡಾ॥ ಬಿ. ರಾಜಶೇಖರಪ್ಪ, ಚಿತ್ರದುರ್ಗ
೧೬. ಡಾ॥ ಡಿ.ಎನ್. ಯೋಗೀಶ್ವರಪ್ಪ, ತುಮಕೂರು
೧೭. ಡಾ॥ ಸ್ಮಿತಾ ಸುರೇಬಾನಕರ್, ಬೆಳಗಾವಿ
೧೮. ಡಾ॥ ಹೆಚ್.ಎಸ್. ಉಷಾರಾಣಿ, ಮೈಸೂರು
೧೯. ಡಾ॥ ಶೀಲಾಕಾಂತ ಪತ್ತಾರ, ಬಾದಾಮಿ
೨೦. ಡಾ॥ ಕೆ.ಬಿ. ಸುದರ್ಶನ್, ಬೆಂಗಳೂರು
೨೧. ಶ್ರೀ ಜಯದೇವಪ್ಪ ಜೈನಕೇರಿ, ಶಿವಮೊಗ್ಗ
೨೨. ಡಾ॥ ಬೆಂ.ಶಾ. ಶ್ಯಾಮಲಾರತ್ನಕುಮಾರಿ, ಬೆಂಗಳೂರು

ಪಟ್ಟಿಯ ಪ್ರಕಟಣೆಯಾಗುತ್ತಿದ್ದಂತೆಯೇ, ಹೊಸದಾಗಿ ಸದಸ್ಯರಾಗಿ ಅಕಾದೆಮಿಯ ಸರ್ವಸದಸ್ಯರ ಸಭೆಯಲ್ಲಿ ಭಾಗವಹಿಸಿದ್ದ ಬಂಕಾಪುರದ ಶ್ರೀ ಎ.ಕೆ. ಆದವಾನಿ ಮಠ ಅವರು, ಕಾರ್ಯಕಾರೀ ಸಮಿತಿಯ ಆಯ್ಕೆಯ ವಿಧಾನದ ಬಗ್ಗೆ ಪ್ರಶ್ನಿಸಿದರು. ಪ್ರಶ್ನೆಗೆ ಪ್ರಧಾನ ಕಾರ್ಯದರ್ಶಿಗಳು ಸೂಕ್ತವಾಗಿ ಉತ್ತರಿಸಿ, ಸಭೆಯಲ್ಲಿ ಕಾರ್ಯಕಾರೀ ಸಮಿತಿಯಲ್ಲಿ ಇರಬಹುದಾದ ಸದಸ್ಯರ ಒಂದು ಪಟ್ಟಿಯನ್ನು ಪ್ರಕಟಿಸಲಾಗುವುದೆಂದೂ, ಅದರ ಅನುಮೋದನೆ ಆದ ನಂತರ, ಆ ಸದಸ್ಯರೆಲ್ಲ ಸೇರಿ, ಪದಾಕಾರಿಗಳನ್ನು ಆಯ್ಕೆ ಮಾಡಿಕೊಳ್ಳುವ ವಿಧಾನವು ಈವರೆಗೂ ನಡೆದು ಬಂದಿದೆ ಎಂದು ವಿವರಣೆ ನೀಡಿದರು. ಶ್ರೀ ಆದವಾನಿ ಮಠ ಅವರು ಪ್ರಶ್ನೆಯನ್ನು ಮುಂದುವರಿಸಲಿಲ್ಲ.

ಡಾ॥ ಎಸ್.ಎಲ್. ಶ್ರೀನಿವಾಸಮೂರ್ತಿ ಅವರು ಸೂಚಿಸಿದ್ದ ೨೦೦೮-೦೯, ೨೦೦೯-೧೦ನೆಯ ಸಾಲಿನ ಕಾರ್ಯಕಾರೀ ಸಮಿತಿ ಸದಸ್ಯರ ಪಟ್ಟಿಯನ್ನು ಉಡುವಳ್ಳಿಯ ಶ್ರೀ ಮುತ್ತುರಾಜು ಅನುಮೋದಿಸಿದರು.

ಪಟ್ಟಿಯಲ್ಲಿ ೨೨ಜನರ ಹೆಸರು ಮಾತ್ರ ಇದ್ದು, ಇನ್ನು ಒಬ್ಬ ಸದಸ್ಯರನ್ನು ಕಾರ್ಯಕಾರೀ ಸಮಿತಿಯು ನಾಮಕರಣ ಮಾಡಿಕೊಳ್ಳಲು ಅವಕಾಶ ಇರುವ ವಿಚಾರವನ್ನು ಡಾ॥ ಸೂರ್ಯನಾಥ ಕಾಮತ್ ತಿಳಿಸಿದರು.

**ಸದಸ್ಯರ ಕೆಲವು ಸಲಹೆಗಳು**

೧. ಅಕಾದೆಮಿಯ ಸದಸ್ಯರಿಗೆ ಗುರುತಿನ ಚೀಟಿ (ಐಡೆಂಟಿಟಿ ಕಾರ್ಡ್) ನೀಡಬೇಕೆಂಬ ಹೊನ್ನಾಳಿಯ ಶ್ರೀ ಟಿ.ಎಸ್. ಜಯದೇವ್ ಅವರ ಸೂಚನೆಯ ಬಗ್ಗೆ ಚರ್ಚೆ ನಡೆದು, ಅಂತಹ ಗುರುತಿನ ಚೀಟಿಯ ಅವಶ್ಯಕತೆ ಇಲ್ಲವೆಂದು ನಿರ್ಣಯಿಸಲಾಯಿತು. ಸ್ವಂತ ವ್ಯಕ್ತಿತ್ವವೇ ಗುರುತಿನ ಚೀಟಿ ಆಗಬೇಕೆಂದು ಡಾ॥ ಸೂರ್ಯನಾಥ ಕಾಮತ್ ಸೂಚಿಸಿದರು.

೨. ಕಾರ್ಯಕಾರೀ ಸಮಿತಿಯ ಅವಧಿಯನ್ನು ಈಗಿರುವ ಎರಡು ವರ್ಷದ ಬದಲು ಮೂರು ವರ್ಷಗಳಿಗೆ ಹೆಚ್ಚಿಸಬೇಕೆಂಬ ಬಂಕಾಪುರದ ಶ್ರೀ ಎ.ಕೆ. ಆದವಾನಿ ಮಠ ಅವರ ಸೂಚನೆಯನ್ನು ಯಾರೂ ಒಪ್ಪಲಿಲ್ಲ.

೩. ಮುಂದಿನ ವರ್ಷದಿಂದ ಮಂಡನೆಗೆ ಬರುವ ಸಂಪ್ರಬಂಧಗಳ ಸಾರಾಂಶವನ್ನು ಪರಿಶೀಲಿಸಿ, ಸೂಕ್ತವಲ್ಲದ ಸಂಪ್ರಬಂಧಗಳಿಗೆ ಅವಕಾಶ ನೀಡುವುದಿಲ್ಲ ಮತ್ತು ಅಂತಹ ಸಂಪ್ರಬಂಧಗಳನ್ನು ಹಿಂದಿರುಗಿಸಲಾಗುವುದು ಎಂದು ಡಾ॥ ಸೂರ್ಯನಾಥ ಕಾಮತ್ ತಿಳಿಸಿದರು.

೪. ಅವಧಿ ಮೀರಿ/ವಿಳಂಬವಾಗಿ ಬಂದ ಮತ್ತು ಸಮಂಜಸವಾಗಿಲ್ಲದ ಸಂಪ್ರಬಂಧಗಳ ಮಂಡನೆಗೆ ಅವಕಾಶ ನಿರಾಕರಿಸಲಾಗುವುದು ಎಂದು ಡಾ॥ಸೂರ್ಯನಾಥ ಕಾಮತ್ ಸ್ಪಷ್ಟಪಡಿಸಿದರು.

೫. ಅರವತ್ತು ವರ್ಷ ಮೀರಿದ ವಿದ್ವಾಂಸರಿಗೆ ಸಂಪ್ರಬಂಧ ಮಂಡನೆಗೆ ಅವಕಾಶ ನೀಡದೆ, ಅವರಿಂದ ಯುವ
ಸಂಶೋಧಕರಿಗೆ ಮಾರ್ಗದರ್ಶನ ದೊರಕಿಸಬೇಕು ಎಂಬ ಡಾ॥ ದೇವರಕೊಂಡಾ ರೆಡ್ಡಿ ಮತ್ತು ಡಾ॥ ಕೆ. ಎಂ. ಸುರೇ
ಅವರ ಸೂಚನೆಯನ್ನು ನಿರಾಕರಿಸಲಾಯಿತು.

೬. ಇನ್ನು ಮುಂದೆ ಸಂಪ್ರಬಂಧದ ಶೀರ್ಷಿಕೆಗಳನ್ನು ಮಾತ್ರ ಕಳುಹಿಸಿದರೆ, ಸ್ವೀಕರಿಸಲಾಗುವುದಿಲ್ಲ; ಸಂಪ್ರಬಂಧ
ಸಾರಾಂಶವನ್ನೇ ಕಳುಹಿಸಬೇಕು ಎಂದು ನಿರ್ಣಯ ಮಾಡಲಾಯಿತು. ಸಂಪ್ರಬಂಧಗಳ ಸಾರಾಂಶವನ್ನು ಇ.ಮೇಲ್
ಮೂಲಕವೂ ಕಳುಹಿಸಲು ಡಾ॥ ರೆಡ್ಡಿ ಸೂಚಿಸಿದರು.

೭. ಸಂಪ್ರಬಂಧಗಳ ಸಾರಾಂಶಗಳನ್ನು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣಗಳ
ವಿಂಗಡಿಸುವಂತೆ ಸಂಪಾದಿಸಿ, ವಿಂಗಡಿಸಿ, ಮಂಡನೆ, ಸೂಚನಾ ಫಲಕದಲ್ಲಿ ಪ್ರಕಟಣೆ ಇತ್ಯಾದಿ ಕ್ರಮಗಳ ಮೂಲಕ ಆಯ
ಮಾಡುವುದು ಸೂಕ್ತ ಎಂದು ಮೈಸೂರಿನ ಡಾ॥ ಎಂ.ಎಸ್. ಕೃಷ್ಣಮೂರ್ತಿ ಸೂಚಿಸಿದರು. ಇದರಿಂದ ಅಕಾಡೆಮಿಕ್ ಶಿ
ಬಲಗೊಳ್ಳುತ್ತದೆ ಎಂಬುದು ಅವರ ನಿರೀಕ್ಷೆ.

೮. ಅಕಾದೆಮಿಯಿಂದ ಪತ್ರಗಳು ಸರಿಯಗಿ ಬರುತ್ತಿಲ್ಲ ಎಂದು ಹುನ್ನೂರಿನ ಶ್ರೀ ಕೇಶವ ಉಮರ್ಜಿ ದೂರಿದರು

೯. ಕೇವಲ ಊಹೆಗೆ ಮಿತಿಯಾದ ಸಂಪ್ರಬಂಧಗಳ ಮಂಡನೆ ಹೆಚ್ಚುತ್ತಿರುವ ಕಾರಣ, ಕೆಲವು ಪ್ರಬಂಧಗಳ ಬಗ್ಗೆಯಾದರೂ
ಹಿರಿಯ ವಿದ್ವಾಂಸರಿಂದ ವಿಸ್ತೃತ ಚರ್ಚೆ ಮತ್ತು ಮಾರ್ಗದರ್ಶನ ಅವಶ್ಯಕ ಎಂದು ಕನಕಗಿರಿಯ ಡಾ॥ ಎಂ.ಕೆ. ದುರುಗ
ತಿಳಿಸಿದರು.

೧೦. ಡಾ॥ ಬಾ.ರಾ. ಗೋಪಾಲ್ ಪ್ರಶಸ್ತಿ ಪಡೆದವರ ವಿಶೇಷ ಉಪನ್ಯಾಸವನ್ನು ಏರ್ಪಡಿಸಬೇಕೆಂಬ ಸಂತೇಬೆನ್ನೂರಿ
ಶ್ರೀ ಸುಮತೀಂದ್ರ ನಾಡಿಗ್ ಅವರ ಅಭಿಪ್ರಾಯದ ಬಗ್ಗೆ ಚರ್ಚೆ ನಡೆದು, ೨೦೦೬ಕ್ಕೆ ಮೊದಲು ಅಂತಹ ಅವಕಾ
ಇತ್ತೆಂದೂ, ನಂತರ ಸಮಯದ ಅಭಾವದ ಕಾರಣದಿಂದ ಉಪನ್ಯಾಸಕ್ಕೆ ಅವಕಾಶ ನೀಡುತ್ತಿಲ್ಲವಾದರೂ, ಪ್ರಶಸ್ತಿ ಪಡೆದವ
ಭಾಷಣವನ್ನು **ಇತಿಹಾಸ ದರ್ಶನ**ದಲ್ಲಿ ಮುದ್ರಿಸಲಾಗುತ್ತಿದೆ ಎಂದು ಡಾ॥ ಎಚ್.ಎಸ್. ಗೋಪಾಲರಾವ್ ಸ್ಪಷ್ಟಪಡಿಸಿದರು

೧೧. ಬಂಕಾಪುರದ ಶ್ರೀ ಕೆ.ಆದವಾನಿ ಮಠ ಅವರು ಕರ್ನಾಟಕ ಇತಿಹಾಸ ಅಕಾದೆಮಿಯ ತಾಲ್ಲೂಕು ಘಟಕಗ
ಸ್ಥಾಪನೆಗೆ ವಿನಂತಿ ಮಾಡಿದಾಗ, ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಅವರು ಅಕಾದೆಮಿಯ ನಿಯಮಾವಳಿಗ
ಪ್ರಕಾರ ಸ್ಥಳೀಯ ಸಂಪನ್ಮೂಲಗಳನ್ನು ಆಧರಿಸಿ, ಸ್ಥಳೀಯ ಘಟಕಗಳನ್ನು ರಚಿಸಿಕೊಳ್ಳಲು ಅವಕಾಶ ಇರುವುದನ
ಮನವರಿಕೆ ಮಾಡಿಕೊಟ್ಟರು.

೧೨. ಹೊಸದಾಗಿ ಡಾಕ್ಟೊರೇಟ್ ಪಡೆದವರಿಗೆ ಮಾತ್ರವಲ್ಲದೆ, ಅಕಾದೆಮಿಯಲ್ಲಿ ಡಾಕ್ಟೊರೇಟ್ ಪಡೆದಿರುವ ಅಕಾದೆಮಿ
ಎಲ್ಲ ಸದಸ್ಯರಿಗೂ ಸನ್ಮಾನ ದೊರೆಯಬೇಕೆಂದು ಬೆಂಗಳೂರಿನ ಡಾ॥ ನಳಿನಿ ವೆಂಕಟೇಶ್ ಮನವಿ ಮಾಡಿದರು. ಆ ಬ
ಯಾವ ಪ್ರತಿಕ್ರಿಯೆಯೂ ದೊರೆಯಲಿಲ್ಲ.

**ಅಧ್ಯಕ್ಷರ ಭಾಷಣ**

ಸಭೆಯ ಅಧ್ಯಕ್ಷತೆ ವಹಿಸಿದ್ದ ಡಾ॥ ಸೂರ್ಯನಾಥ ಕಾಮತ್ ಅವರು ಮುಂದಿನ ಎರಡು ವರ್ಷಗಳಿಗೆ ಹೊ
ಕಾರ್ಯಕಾರೀ ಸಮಿತಿಯನ್ನು ಆಯ್ಕೆ ಮಾಡಿದ್ದಕ್ಕಾಗಿ ಮತ್ತು ಎಲ್ಲ ಸದಸ್ಯರೂ ನೀಡುತ್ತಿರುವ ಸಹಕಾರಕ್ಕೆ ಧನ್ಯವಾದಗಳನ
ತಿಳಿಸಿ, ಇನ್ನು ಮುಂದೆಯೂ ಇದೇ ರೀತಿಯ ಪ್ರೋತ್ಸಾಹವನ್ನು ಮುಂದುವರಿಸಬೇಕೆಂದು ಸದಸ್ಯರಲ್ಲಿ ಮನವಿ ಮಾಡಿದರ

**ಕೃತಜ್ಞತೆಗಳು**

ಅಕಾದೆಮಿಯ ೨೨ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿ, ಸಮ್ಮೇಳನವು ಯಶಸ್ವಿಯಾಗುವಂತೆ ಸಹಕರಿಸಿ
ಶ್ರೀಕ್ಷೇತ್ರ ಧರ್ಮಸ್ಥಳದ ರಾಜರ್ಷಿ ಡಾ॥ವೀರೇಂದ್ರ ಹೆಗ್ಗಡೆ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಮ
ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜಿನ ಎಲ್ಲ ಪದಾಧಿಕಾರಿಗಳು, ಬೋಧಕ ಮಿತ್ರರು ಮತ್ತು ಇತರ ಸಿಬ್ಬಂದಿ
ಚಿತ್ರದುರ್ಗದ ಡಾ॥ ಜಿ.ರಾಜಶೇಖರಪ್ಪ ಎಲ್ಲ ಸದಸ್ಯರ ಪರವಾಗಿ ಧನ್ಯವಾದಗಳನ್ನು ಸಲ್ಲಿಸಿದರು.

## ಕಾರ್ಯಕಾರಿ ಸಮಿತಿ ಸಭೆಗಳು

೨೦೦೮ನೆಯ ಸಾಲಿನಲ್ಲಿ ಅಕಾದೆಮಿಯ ಕಾರ್ಯಕಾರೀ ಸಮಿತಿಯು ಒಟ್ಟು ನಾಲ್ಕು ಬಾರಿ (೧೭-೩-೨೦೦೮, ೧೧-೮-೨೦೦೮, ೩೦-೮-೨೦೦೮, ೨೦-೯-೨೦೦೮) ಸಭೆ ಸೇರಿ ಅಕಾದೆಮಿಯ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆಯಲು ಸಹಕರಿಸಿದೆ. ಸದಸ್ಯರು ಖುದ್ದು ಹಾಜರಿದ್ದು ಅಥವಾ ಪತ್ರಮುಖೇನ/ದೂರಾವಾಣಿಯ ಮೂಲಕ ತಮ್ಮ ಅಭಿಪ್ರಾಯಗಳು, ಸಲಹೆ ಮತ್ತು ಸೂಚನೆಗಳನ್ನು ನೀಡುತ್ತಾ ಅಕಾದೆಮಿಯ ಯಶಸ್ಸಿಗೆ ಸಹಕರಿಸುತ್ತಿದ್ದಾರೆ.

## ಸದಸ್ಯಬಲ

ಈ ಸಮ್ಮೇಳನದ ಆರಂಭದ ವೇಳೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ಸದಸ್ಯತ್ವ ಬಲ ಈ ಕೆಳಕಂಡಂತಿದೆ.

| ಆಜೀವ | ಸಾಮಾನ್ಯ | ಸಂಸ್ಥೆ | ಒಟ್ಟು |
|---|---|---|---|
| ೧೩೮೪ | ೧ | ೪೯ | ೧೪೩೪ |

## ಅಕಾದೆಮಿಯ ಇತರ ಕಾರ್ಯಕ್ರಮಗಳು

ಅಕಾದೆಮಿ ಮತ್ತು ಮಿಥಿಕ್ ಸೊಸೈಟಿ ಒಟ್ಟಾಗಿ ಮಿಥಿಕ್ ಸೊಸೈಟಿಯಲ್ಲಿ ೩೦-೩-೨೦೦೮ರಂದು ಕರ್ನಾಟಕ ಏಕೀಕರಣಕ್ಕೆ ದುಡಿದ ಕೆಲವು ಮಹನೀಯರು ಎಂಬ ವಿಚಾರ ಗೋಷ್ಠಿಯನ್ನು ಹಮ್ಮಿಕೊಂಡಿತ್ತು. ನಿವೃತ್ತ ಐ.ಎ.ಎಸ್. ಅಧಿಕಾರಿ ಶ್ರೀ ಜಯಕುಮಾರ ಅನಗೋಳ್ ವಿಚಾರ ಗೋಷ್ಠಿಯನ್ನು ಉದ್ಘಾಟಿಸಿದರು. ಮಿಥಿಕ್ ಸೊಸೈಟಿಯ ಅಧ್ಯಕ್ಷರಾದ ಡಾ॥ ಎಂ.ಕೆ.ಎಲ್.ಎನ್. ಶಾಸ್ತ್ರಿ ಅವರು ಅಧ್ಯಕ್ಷತೆ ವಹಿಸಿದ್ದ ಉದ್ಘಾಟನಾ ಸಮಾರಂಭದಲ್ಲಿ ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಪ್ರಾಸ್ತಾವಿಕ ಭಾಷಣ ಮಾಡಿದರು. ಐವರು ಗಣ್ಯರ ಬಗ್ಗೆ ಐವರು ವಿದ್ವಾಂಸರು ವಿಚಾರ ಮಂಡಿಸಿದ ಮೊದಲ ಗೋಷ್ಠಿಯ ಅಧ್ಯಕ್ಷತೆಯನ್ನು ಪ್ರೊ॥ ಬಿ.ವಿ. ರಾವ್ ವಹಿಸಿದ್ದರು. ಆರು ಜನ ವಿದ್ವಾಂಸರು ಆರು ಗಣ್ಯರ ಬಗ್ಗೆ ವಿಚಾರ ಮಂಡಿಸಿದ ಎರಡನೆಯ ಗೋಷ್ಠಿಯ ಅಧ್ಯಕ್ಷತೆಯನ್ನು ಡಾ॥ ಎಂ.ವಿ. ಶ್ರೀನಿವಾಸ್ ವಹಿಸಿದ್ದರು.

ಅಕಾದೆಮಿಯು ವಿಶ್ವ ಹಿಂದೂ ಪರಿಷತ್‌ನ ಸಹಯೋಗದಲ್ಲಿ ೨೦-೫-೨೦೦೮ರಂದು ಮಿಥಿಕ್ ಸೊಸೈಟಿಯಲ್ಲಿ ಹಮ್ಮಿಕೊಂಡಿದ್ದ ವಿಜಯನಗರದ ರಾಜವಂಶದ ರಾಜಾ ಶ್ರೀ ಅಚ್ಯುತದೇವರಾಯರ ನಿಧನಕ್ಕೆ ಸಂತಾಪ ಸೂಚಕ ಸಭೆಯಲ್ಲಿ ಡಾ॥ ಎಂ. ಚಿದಾನಂದಮೂರ್ತಿ, ಡಾ॥ ಸಿ.ಬಿ. ಪಾಟೀಲ್ ಮತ್ತು ಶ್ರೀ ವೈ.ಕೆ. ರಾಘವೇಂದ್ರರಾವ್ ಸಂತಾಪಸೂಚಕ ಭಾಷಣ ಮಾಡಿದರು. ಡಾ॥ ಸೂರ್ಯನಾಥ ಕಾಮತ್ ಅಧ್ಯಕ್ಷತೆ ವಹಿಸಿದ್ದರು.

## ಅಕಾದೆಮಿಯ ಘಟಕಗಳು

ಡಾ॥ ಜಯಮ್ಮ ಕರಿಯಣ್ಣ ಅವರ ಅಧ್ಯಕ್ಷತೆಯಲ್ಲಿ ಶ್ರೀಮತಿ ಇಂದಿರಾ ಹೆಗ್ಗಡೆ ಮತ್ತಿತರ ಕ್ರಿಯಾಶೀಲ ಸದಸ್ಯರ ಸಹಕಾರದೊಂದಿಗೆ ಬೆಂಗಳೂರು ಘಟಕ ಕಾರ್ಯ ನಿರ್ವಹಿಸುತ್ತಿದೆ. ಅದು ಪ್ರತಿ ವರ್ಷದಂತೆ ಈ ವರ್ಷವೂ ಬೆಂಗಳೂರು ನಗರದ ಪ್ರೌಢಶಾಲೆಗಳು, ಪದವಿ ಪೂರ್ವ ಮತ್ತು ಪದವಿ ಕಾಲೇಜುಗಳ ವಿದ್ಯಾರ್ಥಿಗಳಿಗಾಗಿ ಪ್ರಬಂಧ ಮತ್ತು ಭಾಷಣ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು ನೀಡಿದೆ.

ಈ ಸ್ಪರ್ಧೆಗಳಿಗೆ ಡಾ॥ ಜಿ.ಎಸ್.ದೀಕ್ಷಿತ್, ಡಾ॥ ಸೂರ್ಯನಾಥ ಕಾಮತ್, ಶ್ರೀ ಅಂಗದ್, ಡಾ॥ ಪ್ರತಿಭಾಚಿಣ್ಣಪ್ಪ, ಶ್ರೀಮತಿ ಇಂದಿರಾ ಇವರ ಹೆಸರಿನಲ್ಲಿ ಪರ್ಯಾಯ ಪಾರಿತೋಷಕಗಳನ್ನು ನೀಡಲಾಗುತ್ತಿದೆ. ಶ್ರೀ ಅಂಗದ್ ಹೆಸರಿನ ಪರ್ಯಾಯ ಪಾರಿತೋಷಕವನ್ನು ಶ್ರೀ ದಯಾನಂದ ಸಾಗರ್ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ಶ್ರೀ ಗಾಳಿಸ್ವಾಮಿಯವರು ಪಾರಿತೋಷಕದ ಜೊತೆಗೆ ಎಲ್ಲ ಸ್ಪರ್ಧೆಗಳ ಬಹುಮಾನ ವಿಜೇತರಿಗೆ ನಗದು ಬಹುಮಾನಗಳನ್ನು ಪ್ರಾಯೋಜಿಸುತ್ತಿದ್ದಾರೆ. ಡಾ॥ ಪ್ರತಿಭಾಚಿಣ್ಣಪ್ಪ ಪಾರಿತೋಷಕವನ್ನು ಡಾ॥ ಬೆಂ.ಶಾ. ಶ್ಯಾಮಲರತ್ನಕುಮಾರಿಯವರು ಮತ್ತು ಶ್ರೀಮತಿ ಇಂದಿರಾ ಅವರ ಪಾರಿತೋಷಕವನ್ನು ಡಾ॥ ಬಿ.ಆರ್. ಭಾರತೀಯವರು ಪ್ರಾಯೋಜಿಸಿದ್ದಾರೆ.

ಹೊಸಪೇಟೆ ತಾಲ್ಲೂಕು ಘಟಕವು ಡಾ॥ ಕೆ.ಎಂ.ಸುರೇಶ್, ಡಾ॥ ಎಂ.ಕೊಟ್ರೇಶ್, ಡಾ॥ ಟಿ. ಮಂಜುನಾಥ್, ಡಾ॥ ಕೆ. ರವೀಂದ್ರನಾಥ್ ಮತ್ತು ಇತರ ಸ್ನೇಹಿತರ ಜೊತೆಗೂಡಿ, ಬೇರೆ ಬೇರೆ ಸ್ಥಳಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹಗಳನ್ನು ನಡೆಸುತ್ತಾ ಕ್ರಿಯಾಶೀಲವಾಗಿದೆ.

ಡಾ॥ ಬಿ.ಜಗದೀಶ ಶೆಟ್ಟಿ, ಡಾ॥ ಮಾಲತಿ ಕೆ.ಮೂರ್ತಿ, ಶ್ರೀ ಎಸ್.ಆರ್. ಅರುಣ ಕುಮಾರ್, ಡಾ॥ ಮುರಿಗೇಶಿ ಡಾ॥ ರೂಪಾಕ್ಷ ಮತ್ತು ಸ್ನೇಹಿತರ ನೇತೃತ್ವದಲ್ಲಿ ಉಡುಪಿ ಜಿಲ್ಲಾ ಘಟಕವು ಕಾರ್ಯ ನಿರ್ವಹಿಸುತ್ತಿದೆ. ಹಲವು ಶಾಲಾ ಕಾಲೇಜುಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳನ್ನು ಆಯೋಜಿಸಿ, ಐತಿಹಾಸಿಕ ಪ್ರಜ್ಞೆಯನ್ನು ಜಾಗೃತಗೊಳಿಸುವ ಕೆಲಸವನ್ನು ಘಟಕಗಳು ಮಾಡುತ್ತಿವೆ.

ಶಿವಮೊಗ್ಗದ ಬೆಕ್ಕಿನಕಲ್ಮಠದ ಪೂಜ್ಯ ಸ್ವಾಮೀಜಿಯವರ ಪೋಷಣೆಯಲ್ಲಿ, ಮಾಜಿ ಶಾಸಕರಾದ ಶ್ರೀ ಹೆಚ್.ಎಂ ಚಂದ್ರಶೇಖರಪ್ಪ ಅವರ ಅಧ್ಯಕ್ಷತೆ, ಶ್ರೀ ಜಯದೇವಪ್ಪ ಜೈನಕೇರಿ ಅವರ ಪ್ರಧಾನ ಕಾರ್ಯದರ್ಶಿತ್ವ ಹಾಗೂ ಡಾ॥ ಎಸ್.ಜಿ. ಸಾಮಕ್, ಡಾ॥ ಬಿ.ಜಗದೀಶ, ಡಾ॥ ಜಿ.ವಿ.ಕಲ್ಲಾಪುರ ಡಾ॥ ಕೆ.ಜಿ. ವೆಂಕಟೇಶ ಜೋಯಿಸ್ ಮತ್ತು ಕೆಳದಿ ಗುಂಡಾಜೋಯಿಸ್ ಅವರ ಸಹಭಾಗಿತ್ವದಲ್ಲಿ ಶಿವಮೊಗ್ಗ ಘಟಕವು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳ ಜೊತೆಗೆ ಇನ್ನೂ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ.

ಮೈಸೂರು ಘಟಕವು ಮಂಡ್ಯ ಜಿಲ್ಲೆಯನ್ನೂ ಒಳಗೊಂಡು ಕಾರ್ಯಾರಂಭ ಮಾಡಿದೆ. ಪ್ರೊ॥ ಚಂದ್ರರಾಜೇ ಅರಸ ಅವರ ಗೌರವಾಧ್ಯಕ್ಷತೆಯಲ್ಲಿ, ಡಾ॥ ಹೆಚ್.ಎಸ್. ಉಷಾರಾಣಿ ಅಧ್ಯಕ್ಷರಾಗಿ, ಶ್ರೀ ತೈಲೂರು ವೆಂಕಟಕೃಷ್ಣ, ಡಾ॥ ಬಿ.ಪಿ.ಇಂದಿರ ಡಾ॥ ಎಸ್. ಸದಾಶಿವ ಉಪಾಧ್ಯಕ್ಷರಾಗಿ, ಡಾ॥ ಬಿ.ವಿ. ಸುಧಾಮಣಿ ಕಾರ್ಯದರ್ಶಿಯಾಗಿ, . ಶ್ರೀ ಎಚ್.ಡಿ. ಹರೀಶ್ ಪ್ರೊ॥ ನಯೀಂ ಉರ್ ರೆಹಮಾನ್ ಸಹ ಕಾರ್ಯದರ್ಶಿಗಳಾಗಿ ಮತ್ತು ಡಾ॥ ಬಿ.ಎಸ್. ಸುಭದ್ರ ಖಜಾಂಚಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**ಕೃತಜ್ಞತೆಗಳು**

ಕರ್ನಾಟಕ ಇತಿಹಾಸ ಅಕಾದೆಮಿಯನ್ನು ತನ್ನದೇ ಸಂಸ್ಥೆ ಎಂಬಂತೆ ಪರಿಗಣಿಸಿ ಸಹಕರಿಸುತ್ತಿರುವ ಕರ್ನಾಟಕ ರಾಜ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರು, ಅಧಿಕಾರಿಗಳು ಹಾಗೂ ಸಿಬ್ಬಂದಿ, ಬೆಂಗಳೂರಿ ಮಿಥಿಕ್ ಸೊಸೈಟಿ ಮತ್ತು ಬಿ.ಎಂ.ಶ್ರೀ ಪ್ರತಿಷ್ಠಾನ, ಶ್ರೀ ಬಿ.ಆರ್.ಆರ್. ಫ್ಯಾಮಿಲಿ ಟ್ರಸ್ಟ್ ಮತ್ತು ಲಕ್ಷ್ಮೀ ಮುದ್ರಣಾಲಯದ ಶ್ರೀ ಅಶೋಕ್ ಕುಮಾರ್, ವಾಗ್ದೇವಿ ಮುದ್ರಣಾಲಯ, ಶ್ರೀ ದಯಾನಂದ ಸಾಗರ್ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ಶ್ರೀ ಗಾಳಿ ಸ್ವಾಮಿ, ಡಾ॥ ಬಾ.ರಾ. ಗೋಪಾಲ್ ಪ್ರಶಸ್ತಿಗೆ ದತ್ತಿ ನೀಡಿರುವ ಡಾ॥ ಬಾ.ರಾ. ಗೋಪಾಲ್ ಕುಟುಂಬ ವರ್ಗ ಸಮ್ಮೇಳನಾಧ್ಯಕ್ಷರ ಗೌರವಕ್ಕೆ ಪ್ರಾಯೋಜನೆ ಮಾಡಿರುವ ಶ್ರೀ ಕೆ. ಅಭಿಶಂಕರ್ ಕುಟುಂಬ ವರ್ಗ, **ಇತಿಹಾಸ ದರ್ಶನ** ಮುದ್ರಣಕ್ಕೆ ಆಶೀರ್ವಾದಪೂರ್ವಕವಾಗಿ ರೂ.೨೫,೦೦೦ (ಇಪ್ಪತ್ತೈದು ಸಾವಿರ) ನೆರವು ನೀಡುತ್ತಿರುವ ಬಾಳೆ ಹೊನ್ನೂರಿ ಶ್ರೀಮದ್ರಂಭಾಪುರೀ ಮಹಾಸಂಸ್ಥಾನದ ಜ॥ ಶ್ರೀ ಶ್ರೀ ಪ್ರಸನ್ನ ರೇಣುಕ ವೀರಸೋಮೇಶ್ವರರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮೀಜಿ, ಅಕಾದೆಮಿಯ ೨೨ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿ ಸಮ್ಮೇಳನದ ಯಶಸ್ಸಿಗೆ ಕಾರಣರಾದ ಶ್ರೀಕ್ಷೇತ್ರ ಧರ್ಮಸ್ಥಳದ ರಾಜರ್ಷಿ ಡಾ॥ ವೀರೇಂದ್ರ ಹೆಗ್ಗಡೆ ಆವರು, ಶ್ರೀ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ ಶ್ರೀ ಮಂಜುನಾಥೇಶ್ವರ ಕಾಲೇಜು ಮತ್ತು ಧರ್ಮಸ್ಥಳದಲ್ಲಿ ಅಕಾದೆಮಿಯ ಪ್ರತಿನಿಧಿಯಂತೆ ಸಹಕರಿಸುತ್ತಿರುವ ಡಾ॥ ಉಮಾನಾಥ ಶೆಣೈ ಹಾಗೂ ಉಜಿರೆಯ ಎಸ್.ಡಿ.ಜೆ.ಎಂ.ಸಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಯಶೋವರ್ಮ ಮತ್ತು ಇತರ ಸ್ನೇಹಿತರಿಗೆ ಅಕಾದೆಮಿ ಆಭಾರಿಯಾಗಿದೆ.

ಕಾರ್ಯಕಾರಿ ಸಮಿತಿಯ ಅನುಮತಿ ಮೇರೆ

**ಡಾ. ಸೂರ್ಯನಾಥ ಕಾಮತ್**
ಅಧ್ಯಕ್ಷರು

**ಡಾ ದೇವರಕೊಂಡಾರೆಡ್ಡಿ**
**ಡಾ. ಬಿ. ರಾಜಶೇಖರಪ್ಪ**
ಉಪಾಧ್ಯಕ್ಷರು

**ಡಾ. ಎಚ್.ಎಸ್. ಗೋಪಾಲರಾವ್**
ಪ್ರಧಾನ ಕಾರ್ಯದರ್ಶಿ

**ಎಂ.ಬಿ. ಪಾಟೀಲ್**
ಕೋಶಾಧಿಕಾರಿ

**ಡಾ. ಕೆ.ಬಿ. ಸುದರ್ಶನ್, ಡಾ. ಪಿ.ವಿ. ಕೃಷ್ಣಮೂರ್ತಿ**
ಕಾರ್ಯದಶಿಗಳು









# ಐತಿಹಾಸಿಕ ಪರಂಪರೆ ಉಳಿಸಿ



ಕರ್ನಾಟಕ ಇತಿಹಾಸ ಅಕಾದೆಮಿ



## ಸಪ್ತಾಹ





ಪ್ರಾಚೀನ ಇಗರ್ಜಿ ಮಸೀದಿ ಗುಡಿ
ನಮ್ಮ ಪರಂಪರೆಯ ಭವ್ಯ ಮುಡಿ



೨೦೦೮-೦೯

ನೆರವು: ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ









